

# ಅಮೃತ ಕ್ಷಣ

ಬೇಸಗೆಯ ರಜವನ್ನು ಸಹ್ಯಾದ್ರಿಯ ಗುಡ್ಡಬೆಟ್ಟಕಾಡುಗಳಲ್ಲಿ–ಹತ್ತಿ ಇಳಿದು
ದು ಬೇಟೆಯಾಡಿ ತಿರುಗಾಡಿ ಕಾಯಿಲೆ ಬಿದ್ದು ಮತ್ತೆ ಹುಷಾರಾಗಿ–ಕಳೆದು,
ತಾನೆ ಮೈಸೂರಿಗೆ ಬಂದಿದ್ದೆ. ಸ್ವಾಮಿ ಸಿದ್ಧೇಶ್ವರಾನಂದರ ಪವಿತ್ರ ಸ್ನೇಹ
ಮ ಸಾನ್ನಿಧ್ಯದ ಶ್ರೀ ರಾಮಕೃಷ್ಣಾಶ್ರಮದಲ್ಲಿ–ಆಗ ಅದು ಮರಿಮಲ್ಲಪ್ಪ
ಸ್ಕೂಲಿನ ಎಡಪಕ್ಕದ ಬೀದಿಯಲ್ಲಿತ್ತು, ಕಾಲೇಜಿಗೆ ತುಂಬ ಹತ್ತಿರವಾಗಿ–ನನ್ನ
ಸ. ನಾನು ಬಿ.ಎ. ತರಗತಿಯಲ್ಲಿ ಉತ್ತಮವಾಗಿಯೆ (ಅಂದರೆ ಎರಡು ಭಾಗ
ಲ್ಲಿಯೂ ದ್ವಿತೀಯ ಶ್ರೇಣಿಯಲ್ಲಿ!) ತೇರ್ಗಡೆಯಾಗಿದ್ದೆ. [ದ್ವಿತೀಯ ಶ್ರೇಣಿ
ಲ್ಲಿ ತೇರ್ಗಡೆಯಾಗುವುದನ್ನು 'ಉತ್ತಮ' ಎಂದು ವರ್ಣಿಸಿದುದಕ್ಕೆ ಈಗ
...ರೂ ನಗಬಹುದು. ಆದರೆ ನನ್ನ ಅಧ್ಯಯನದ ರೀತಿಯಲ್ಲಿ, ವಸ್ತುವಿನಲ್ಲಿ
...ದ್ದೇಶದಲ್ಲಿ ಪರೀಕ್ಷೆಯ ಫಲಿತಾಂಶ ಎಂದೂ 'ಗಮ್ಯ'ವಾಗಿರಲಿಲ್ಲ
...ನ್ನ ಭಾವಿಸಿದರೆ ಸೆಕೆಂಡ್‌ಕ್ಲಾಸಿನಲ್ಲಿ ಪಾಸಾಗಿದ್ದನ್ನು ಉತ್ತಮ ಎಂದೇ
ಸಬೇಕು.] 'ಉತ್ತಮ'ವಾಗಿಯೆ ತೇರ್ಗಡೆಯಾದುದರಿಂದ ಎಂ.ಎ.ಗೆ
ು ಸಿಗುವುದರಲ್ಲಿ ಅಷ್ಟೇನೂ ಕಷ್ಟವಾಗುವುದಿಲ್ಲ ಎಂಬ ಧೈರ್ಯವಿತ್ತು. ಯಾವ
ಎ.ಗೆ ಸೇರಿಕೊಳ್ಳುವುದು ಎಂಬ ವಿಚಾರದಲ್ಲಿಯೂ ನನ್ನಲ್ಲಿ ಹೆಚ್ಚು ಜಿಜ್ಞಾಸೆಗೆ
ಕಾಶವಿರಲಿಲ್ಲ. ನನ್ನ ಆಸಕ್ತಿಯೆಲ್ಲ ತತ್ತ್ವ, ಅಧ್ಯಾತ್ಮ, ಆಶ್ರಮ, ಶ್ರೀರಾಮ
–ವಿವೇಕಾನಂದ ಇತ್ಯಾದಿ 'ಅಲೋಕ' ವಿಷಯ ವಲಯಗಳಲ್ಲಿ ಕೇಂದ್ರಿಕೃತ
ತ್ತಿದ್ದರಿಂದಲೂ, ನನ್ನ ಚೇತನದ ಅಭೀಪ್ಸೆ ಯೋಗಾಭಿಮುಖವಾಗಿದ್ದುದ
ೂ, ನಾನು ಮೂರನೆಯ ವರ್ಷದ ಬಿ.ಎ.ಗೆ ತೆಗೆದುಕೊಂಡಿದ್ದ ಐಚ್ಛಿಕ
ಗಳಲ್ಲಿ–ಫಿಲಾಸಫಿ, ಪಾಲಿಟಿಕ್ಸ್, ಸಾಮಾನ್ಯ ಸೈಕಾಲಜಿ–ತತ್ವಶಾಸ್ತ್ರವೆ
...ನಶ್ಶಾಸ್ತ್ರ ಪ್ರತ್ಯೇಕವಾಗಿರದೆ ತತ್ತ್ವಶಾಸ್ತ್ರದ ಒಂದು ಉಪಾಂಗವಾಗಿತ್ತು!
...ಸ್ತ್ರವಂತೂ ಭ್ರೂಣಾವಸ್ಥೆಗೂ ಅತೀತವಾಗಿ ಅಂತರ್ಗತವಾಗಿತ್ತು!)
ದಾನೆ ಚಿಯ ಮುಖ್ಯವಸ್ತುವಾಗಿತ್ತು. ಸ್ವಾಮಿಜಿಯ ಅನುಮೋದನೆಯೂ
ಅಂತ್ರೆವಿತ್ತಿತ್ತು.

ಜೊತೆಗೆ, ತತ್ತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಪ್ರೊಫೆಸರ್ ಎ. ಆರ್. ವಾಡಿಯಾ ಅವರು ಆಶ್ರಮಕ್ಕೆ ಬಂದು ಹೋಗಿ ಮಾಡುತ್ತಿದ್ದು, ಶ್ರೀರಾಮಕೃಷ್ಣ ಮಿಶನ್ನಿನ ಸ್ವಾಮಿಗಳೊಡನೆ ಸಸ್ನೇಹ ಸಂಪರ್ಕ ಹೊಂದಿದ್ದು, ನನ್ನನ್ನು ಆಶ್ರಮದ ವಿದ್ಯಾರ್ಥಿ ಎಂದು ಸುವಿಶೇಷ ವಿಶ್ವಾಸದಿಂದ ಕಾಣುತ್ತಿದ್ದುದೂ ಒಂದು ಸುಸೂಕ್ಷ್ಮ ಲೌಕಿಕ ಪ್ರಯೋಜನದ ಕಾರಣವಾಗಿತ್ತು ಎನ್ನಬಹುದು. ಪ್ರೊ. ವಾಡಿಯಾರವರ ವಿದ್ಯಾರ್ಥಿಗಳಾಗಿದ್ದ ನಮಗೆ ಅವರಲ್ಲಿ ವಿಶೇಷ ಗೌರವವಿತ್ತು. ಅವರ ವರ್ಣ, ಆಕಾರ, ವೇಷ ಭೂಷಣ, ನಡೆ ನುಡಿ, ಭಾಷಣದ ವೈಖರಿ, ಮೀಸೆ, ಕ್ರಾಪು, ಅವರದೇ ಆಗಿರುತ್ತಿದ್ದ ಒಂದು ಆತ್ಮವಿಶ್ವಾಸದ ಭಂಗಿ, ಮತ್ತು ವಿಶ್ವವಿದ್ಯಾನಿಲಯದ ಮಹೋನ್ನತ ಪ್ರಾಧ್ಯಾಪಕರಾಗಿ ಪಾರ್ಸಿಗಳಾಗಿ ಅಹಿಂದುಗಳಾಗಿದ್ದರೂ ಆಗ ನಡೆಯುತ್ತಿದ್ದ ಬ್ರಾಹ್ಮಣ ಬ್ರಾಹ್ಮಣೇತರ ಚಳವಳಿಯಲ್ಲಿ ಹಿಂದುಳಿದ ಪಂಗಡಗಳ ಪರವಾಗಿ ಅವರು ತೋರುತ್ತಿದ್ದ ವೀರಾಭಿಮಾನ–ಇವುಗಳಿಗೆ ಮಾತ್ರವಾಗಿ ಅಲ್ಲದೆ ಅವರ ವೈಯಕ್ತಿಕ ಜೀವನದ 'ಶುಭ್ರತೆ, ಸ್ವಚ್ಛತೆ, ನೀತಿನಿಷ್ಠೆ'ಗಳಿಗಾಗಿಯೂ ಅವರಲ್ಲಿ ನಮಗೆ ವಿಶೇಷವಾದ ಆಕರ್ಷಣೆ ಇತ್ತು. ಸರಿ; ಫಿಲಾಸಫಿಯನ್ನೆ ಎಂ.ಎ.ಗೆ ಆರಿಸುವುದೆಂದು ನಿರ್ಧರಿಸಿ, ದಾರಿಯಲ್ಲಿ ಕೂಡಿಕೊಂಡ ಅನೇಕ ಮಿತ್ರಸಂಗಿಗಳೊಡನೆ ವಾದಿಸುತ್ತಾ ಹರಟುತ್ತಾ ಉಲ್ಲಾಸ ಉತ್ಸಾಹ ತಾರುಣ್ಯಗಳ ತ್ರಿವೇಣೀ ಸ್ರೋತದಲ್ಲಿ ತೇಲಿ ಕಾಲೇಜಿಗೆ ಹೋದೆ.

ಕನ್ನಡಮ್ಮ ಅಗೋಚರೆಯಾಗಿ ಮಂದಸ್ಮಿತೆಯಾಗಿ ತನ್ನ ಕಂದನ ಮಸ್ತಕದ ಮೇಲೆ ಆಶೀರ್ವಾದ ಮುದ್ರೆಯ ತನ್ನ ಕಾವ್ಯಕೋಮಲ ಮಾತೃಹಸ್ತವನ್ನಿಟ್ಟು ಹಿಂಬಾಲಿಸಿ ಬಂದಳೆಂದು ತೋರುತ್ತದೆ ಮಹಾರಾಜಾ ಕಾಲೇಜಿಗೆ!

ಕಾಲೇಜು ತುಮುಲ ಶಬ್ದಮಯವಾಗಿತ್ತು; ಎಂಟ್ರೆನ್ಸ್ ಪಾಸು ಮಾಡಿ ಹೊಸದಾಗಿ ಕಾಲೇಜು ಮೆಟ್ಟಲು ಹತ್ತುತ್ತಿದ್ದ ಕೊಲಿಜಿಯೇಟ್ ಹೈಸ್ಕೂಲುಗಳ ಹುಡುಗರು, ಎರಡನೆಯ ವರ್ಷಕ್ಕೆ ಮತ್ತು ಮೂರನೆಯ ವರ್ಷಕ್ಕೆ ಸೇರಲು ಬಂದಿದ್ದ 'ಹಳೆಯರು', ಮತ್ತು ಎಂ.ಎ. ತರಗತಿಗಳಿಗೆ ಅರ್ಜಿ ಹಾಕಲು ನೆರೆದಿದ್ದ ಸ್ನಾತಕೋತ್ತರ ವಿದ್ಯಾರ್ಥಿಗಳು–ವರಾಂಡಗಳಲ್ಲಿ ಕಾರಿಡಾರುಗಳಲ್ಲಿ ಉಪ್ಪರಿಗೆಯಲ್ಲಿ, ಕೆಳಗೆ ಮೇಲೆ ಅಲ್ಲಿ ಇಲ್ಲಿ ನೆರೆದಿದ್ದರು. ಇಬ್ಬಿಬ್ಬರು, ಮೂವರು ನಾಲ್ವರು, ಸಣ್ಣ ಸಣ್ಣ ಗುಂಪುಗಳು ನಾನಾರೀತಿಯ ಸಂಭಾಷಣೆಗಳಲ್ಲಿ ತೊಡಗಿದ್ದರೂ ಹೊಸ ಮುಖಗಳನ್ನು ಕುತೂಹಲದಿಂದ ನೋಡುವುದನ್ನಾಗಲಿ, ಹಳೆಯವುಗಳನ್ನು ಗುರುತಿಸಿ ನಗುಮೊಗರಾಗಿ ಸ್ವಾಗತಿಸುವುದನ್ನಾಗಲಿ ಮರೆಯುತ್ತಿರಲಿಲ್ಲ. [illegible]ಗೆ ಕಾಯಿಲೆಯಾಗಿತ್ತಂತೆ? ಈಗ ಹೇಗಿದ್ದೀಯಾ?" "ನೀನು ಯಾವ ಸಬ್[illegible] ಆರಿಸಿಕೊಳ್ತೀಯಪ್ಪಾ?" "ಥ್ಯಾ! ಅದು ಬೇಡಪ್ಪಾ. ಆ ಪ್ರೊಫೆಸರ್ . [illegible] "ಅವರು ತುಂಬ ಚೆನ್ನಾಗಿ ಲೆಕ್ಚರ್ ಕೊಡ್ತಾರೆ'..." "ನೋಡಲ್ಲಿ ಹೋಗ್ತಿ[illegible] ಫಸ್ಟ್‌ಕ್ಲಾಸ್ ಬಂದುಬಿಟ್ಟಿದೆ ಅಂತಾ ಏನು ಜಂಭ ಅಂತೀಯಾ?" [illegible]ಹ

ಸಂಭಾಷಣೆಯ ತುಣುಕುಗಳು ಗದ್ದಲದ ಹೊಳೆಯಿಂದೇಳುವ ಬುದ್ಬುದಗಳಂತೆ ಕೇಳಿಬರುತ್ತಿದ್ದುವು.

ನಡುನಡುವೆ, ಈ ಹುಡುಗರ ಹಿಂಡಿನ ಮಧ್ಯೆ, ಆಗಾಗ ಅಧ್ಯಾಪಕರು ಕಾಣಿಸಿಕೊಂಡಾಗ ನಮಸ್ಕಾರಾದಿಗಳೂ ಸಾಗುತ್ತಿದ್ದುವು. ಪ್ರಾಧ್ಯಾಪಕರು ತಮ್ಮ ತಮ್ಮ ಮೀಸಲು ಕೊಠಡಿಗಳಿಗೆ ಠೀವಿಯಿಂದ ಹೋಗುತ್ತಿದ್ದರೆ, ಉಪ ಪ್ರಾಧ್ಯಾಪಕರು ಮತ್ತು ಲೆಕ್ಚರರು ತಮ್ಮೆಲ್ಲರಿಗಾಗಿ ಒಟ್ಟಿಗೆ ಮೀಸಲಾಗಿದ್ದ ದೊಡ್ಡ ದೊಡ್ಡಿಕೊಠಡಿಯೊಂದಕ್ಕೆ ಹೋಗುತ್ತಿದ್ದರು. ಅಧ್ಯಾಪಕ ಮಾತ್ರರಾಗಿದ್ದ ಶ್ರೀಯುತ ಎ. ಆರ್. ಕೃಷ್ಣಶಾಸ್ತ್ರಿಗಳು ಹೋಗುತ್ತಿದ್ದುದನ್ನು ಕಂಡು ನಾನಿದ್ದ ನಮ್ಮ ಗುಂಪು ಒಟ್ಟಿಗೆ ಸಶಬ್ದವಾಗಿ ನಮಸ್ಕಾರ ಮಾಡಿತು. ಅವರ ಬೆಳ್ಳನೆಯ ಕಚ್ಚೆಪಂಚೆ, ಉತ್ತರೀಯ, ಕರಿಯ ಕ್ಲೋಸ್‌ಕಾಲರ್ ಕೋಟು, ನೀಟಾಗಿ ಕಟ್ಟಿದ ಜರಿಯ ಪೇಟ–ಅವರನ್ನು ಯಾವ ಗುಂಪಿನಲ್ಲಿಯೂ ಎದ್ದು ಕಾಣುವಂತೆ ಮಾಡುತ್ತಿದ್ದುವು.

ತುಸು ಹೊತ್ತಾಗುವುದರೊಳಗೆ ಮಿತ್ರರೊಬ್ಬರು ಬಂದು "ಕೃಷ್ಣಶಾಸ್ತ್ರಿಗಳು ನಿಮ್ಮನ್ನು ಕರೆಯುತ್ತಿದ್ದಾರೆ." ಎಂದರು.

"ಯಾಕೆ?"

"ಯಾಕೊ ಗೊತ್ತಿಲ್ಲ. ಲೇಖನಗೀಕನ ಪದ್ಯಗಿದ್ಯದ ವಿಚಾರಕ್ಕಾಗಿರ ಬಹುದು."

ಟೀಚರ್ಸ್ ರೂಮಿಗೆ ಹೋದೆ, ಸಕಾತರ ಕುತೂಹಲದಿಂದಲೆ.

ತಮ್ಮ ಮೇಜಿನ ಹಿಂದೆ ಕುರ್ಚಿಯ ಮೇಲೆ ಕುಳಿತಿದ್ದವರು ನಗುಮೊಗರಾಗಿ ವಿಶ್ವಾಸದಿಂದ ಸ್ವಾಗತಿಸಿದರು. "ಈಗ ಹೇಗಿದ್ದೀರಿ, ಪುಟ್ಟಪ್ಪಾ? ಮೈ ಸರಿಯಾ ಗಿರಲಿಲ್ಲವೆಂದು ಕೇಳಿದೆ."

"ಹೌದು, ಸಾರ್. ಊರಿಗೆ ಹೋದಾಗ ಡಬ್ಬಲ್ ನ್ಯೂಮೋನಿಯಾ ಆಗಿ ಸ್ವಲ್ಪ ಕಷ್ಟವಾಗಿತ್ತು."

"ಎಂ.ಎ.ಗೆ ಅಪ್ಲಿಕೇಶನ್ ಹಾಕಿದಿರಾ?"

"ಹೌದು, ಹಾಕಿದ್ದೇನೆ."

"ಯಾವುದಕ್ಕೆ?"

"ಫಿಲಾಸಫಿಗೆ"

"ಈ ವರ್ಷದಿಂದ ಕನ್ನಡ ಎಂ.ಎ. ತೆರೆಯುತ್ತದೆ ಯೂನಿವರ್ಸಿಟಿ. ಸಾಕಷ್ಟು ವಿದ್ಯಾರ್ಥಿಗಳು ಬೇಕು ಅದಕ್ಕೆ. ನೀವು ಯಾಕೆ ಕನ್ನಡ ಎಂ.ಎ.ಗೆ ಬರಬಾರದು?"

"ಫಿಲಾಸಫಿಗೆ ಹಾಕಿದ್ದೇನೆ. ನಮ್ಮ ಪ್ರೊಫೆಸರ್ ಸೀಟು ಕೊಟ್ಟೂ ಆಗಿದೆಯಂತೆ . . ."

"ಫಿಲಾಸಫಿ ಏನಪ್ಪಾ? ನೀವೆ ಓದಿಕೊಳ್ಳುವ ಸಾಮರ್ಥ್ಯ ಪಡೆದಿದ್ದೀರಿ.

ಹೇಗಿದ್ದರೂ ಆಶ್ರಮದಲ್ಲಿದ್ದೀರಿ. ಅಲ್ಲೇನು ಮೂರು ಹೊತ್ತು ಅದರ ಅಧ್ಯಯನ ತಾನೆ? ನೀವು ಎಂತಿದ್ದರೂ ಕವಿಗಳು. ಕನ್ನಡ ಸಾಹಿತ್ಯಕ್ಕೆ ಹೆಚ್ಚಿನ ಸೇವೆ ಸಲ್ಲಿಸಬಹುದು, ಫಿಲಾಸಫಿಗಿಂತಲೂ ಕನ್ನಡಕ್ಕೆ ನಿಮ್ಮ ಆವಶ್ಯಕತೆ ಹೆಚ್ಚು."

ಸ್ವಲ್ಪ ಹಿಂದು ಮುಂದು ನೋಡಿ ಹೇಳಿದೆ "ಆಲೋಚಿಸಿ ಆಮೇಲೆ ಹೇಳ್ತೀನಿ, ಸಾರ್."

"ನೋಡಿಯಪ್ಪಾ, ತುಂಬ ಪ್ರಯತ್ನದ ಪರಿಣಾಮವಾಗಿ ಕನ್ನಡ ಎಂ.ಎ. ಪ್ರಾರಂಭಿಸುತ್ತಿದ್ದೇವೆ. ನಮಗೀಗ ನಿಮ್ಮಂಥ ವಿದ್ಯಾರ್ಥಿಗಳೆ ಬೇಕಾಗಿದ್ದಾರೆ."

ಆಕರ್ಷಣೀಯ ಆಹ್ವಾನದಂತಿದ್ದ ಅವರ ಮುಗುಳುನಗೆಯ ದಾಕ್ಷಿಣ್ಯಕ್ಕೆ ವಶವಾಗುತ್ತಿದ್ದ ನಾನು ನಮಸ್ಕಾರ ಹೇಳಿ ಹೊರಗೆ ಬಂದೆ.

ವಿಷಯ ಏನು ಎಂಬುದನ್ನು ಕೇಳಿ ತಿಳಿದ ಮಿತ್ರರು ನಕ್ಕುಬಿಟ್ಟರು: ಫಿಲಾಸಫಿಯಂತಹ ಅಖಿಲಭಾರತೀಯವೂ ಅಂತರರಾಷ್ಟ್ರೀಯವೂ ಆಗಿರುವ ಸಬ್ಜೆಕ್ಟನ್ನು ಬಿಟ್ಟು, ಪ್ರೊ. ವಾಡಿಯಾ ಅವರಂತಹ ಸುಪ್ರಸಿದ್ಧ ಪ್ರಾಧ್ಯಾಪಕರ ಕೈಕೆಳಗೆ ಅಧ್ಯಯನ ಮಾಡುವ ಗೌರವಕರವಾದ ಸುಯೋಗವನ್ನು ತ್ಯಜಿಸಿ, ಆಪ್ಷನಲ್ ಸಬ್ಜೆಕ್ಟಿನ ಮಟ್ಟಕ್ಕೂ ಏರದೆ ಬರಿಯ ಸೆಕೆಂಡ್ ಲ್ಯಾಂಗ್ವೇಜ್ ಆಗಿರುವ ಕನ್ನಡದ—ಅದರಲ್ಲಿಯೂ ಹೊಸದಾಗಿ ಪ್ರಾರಂಭಿಸಲಿರುವ—ಎಂ.ಎ.ಗೆ ಸೇರುವುದೇ? ನಿನ್ನಂಥ ಪ್ರತಿಭಾಶಾಲಿ? ಇಂಗ್ಲಿಷಿನಲ್ಲಿ ಆಗಲೆ ಕವನಗಳನ್ನು ಅಚ್ಚುಹಾಕಿಸಿರುವ, ಮುಂದೆ ಜಗತ್‌ಪ್ರಸಿದ್ಧನಾಗಲಿರುವ ಕವಿ? [ಆಗಿನ್ನೂ ವಿದ್ಯಾರ್ಥಿಗಳಿಗೆ ಸೈನ್ಸ್, ಮೆಡಿಸನ್, ಎಂಜಿನೀರಿಂಗ್ ವಿಷಯಗಳು ಅಷ್ಟು ಗೌರವಭಾಜನವಾಗಿರಲಿಲ್ಲ!] ಮಿತ್ರರ ಮೂದಲಿಕೆ ನನ್ನ ಹೃದಯಕ್ಕೂ ಚುಚ್ಚಿತು. ಆದರೆ ಶ್ರೀ ಕೃಷ್ಣಶಾಸ್ತ್ರಿಗಳು ಅದಾವ ಅಮೃತ ಕ್ಷಣದಲ್ಲಿ ನನಗೆ ಶ್ರೇಯಸ್ಕರ ಸೂಚನೆ ನೀಡುವಂತೆ ಮಾಡಿತ್ತೋ ಏನೋ ವಿಧಿ? ಈ ವರ್ಷ ಕನ್ನಡ ಎಂ.ಎ.ಗೆ ಸೇರಿ, ಮುಂದಿನ ವರ್ಷ ಫಿಲಾಸಫಿ ಎಂ.ಎ.ಗೆ ಸೇರಿ, ಒಟ್ಟು ಮೂರು ವರ್ಷಗಳಲ್ಲಿ (ಆಗ ಅವಕಾಶವಿತ್ತು.) ಎರಡೂ ಎಂ.ಎ.ಗಳನ್ನು ಪಾಸುಮಾಡಲು ನಿರ್ಧರಿಸಿದೆ!

ಎರಡು ಮೂರು ದಶಕಗಳ ತರುವಾಯ, ಮೊನ್ನೆ ಮೊನ್ನೆ, ಅವರು ದಿವಂಗತರಾಗುವ ಪೂರ್ವದಲ್ಲಿ ಈ ಸಂಗತಿಯನ್ನು ಅವರಿಗೆ ತಿಳಿಸಿ, "ಜೆ. ಎಚ್. ಕಸಿನ್ಸ್‌ರವರು ನಾನು ಇಂಗ್ಲಿಷಿನಲ್ಲಿ ಬರೆಯುವುದನ್ನು ಬಿಟ್ಟು ಕನ್ನಡದಲ್ಲಿ ಬರೆಯುವುದಕ್ಕೆ ಹೇಗೆ ನಿಮಿತ್ತರಾದರೊ, ತಾವೂ ಹಾಗೆಯೆ ನಾನು ಕನ್ನಡ ಎಂ. ಎ. ತೆಗೆದುಕೊಳ್ಳುವುದಕ್ಕೆ ನಿಮಿತ್ತರಾದಿರಿ" ಎಂದು ತಿಳಿಸಿದಾಗ, ಶಾಸ್ತ್ರಿಗಳು ಆಶ್ಚರ್ಯಪಟ್ಟು "ಹೌದೆ? ನನಗೆ ನೆನಪೇ ಬರುವುದಿಲ್ಲವಲ್ಲಾ!" ಎಂದರು. ಶ್ರೀ ಕೃಷ್ಣಶಾಸ್ತ್ರಿಗಳು ನನ್ನಂತಹ ಎಷ್ಟು ವಿದ್ಯಾರ್ಥಿಗಳಿಗೆ ಯಾವಯಾವ ರೀತಿಯಲ್ಲಿ ನೆರವಾಗಿ ಕನ್ನಡ ನವೋದಯದ ಹೊಂಬೆಳಗನ್ನು ಹೊತ್ತಿಸಿ ಉಜ್ವಲಗೊಳಿಸಿದರೋ ಅದನ್ನು ಅವರಾದರೂ ಲೆಕ್ಕವಿಟ್ಟುಕೊಳ್ಳಲಾಗಲಿ ನೆನಪಿಟ್ಟುಕೊಳ್ಳಲಾಗಲಿ ಸಾಧ್ಯವೇ?

ಅವರು ಅದನ್ನೆಲ್ಲ ಒಂದು ವಿಶೇಷಕಾರ್ಯ ಎಂಬಂತೆ ಎಸಗಿರಲಿಲ್ಲ; ಉಸಿರಾಡುವಂತೆ, ಒಂದು ಅಪ್ರಯತ್ನ ಪೂರ್ವಕವಾದ ಸಹಜತೆಯಿಂದ ಮಾಡಿದ್ದರು.

ನಾನು ಕನ್ನಡ ಎಂ. ಎ. ತೆಗೆದುಕೊಳ್ಳುವಂತೆ ಮಾಡಿದ್ದು ಅವರಿಗೆ ನೆನಪಿಟ್ಟುಕೊಳ್ಳಲಾರದಂತಹ ಒಂದು ಅತ್ಯಂತ ಸಾಧಾರಣ ವಿಷಯವಾಗಿದ್ದರೂ ನನಗೆ ಅದು ಒಂದು ದೈವೀಸಂಕಲ್ಪವಾಗಿಯೆ ಭಾಸವಾಗುತ್ತಿದೆ. ಏಕೆಂದರೆ, ನಾನು ಕನ್ನಡವನ್ನು ಸ್ನಾತಕೋತ್ತರ ವಿಷಯವಾಗಿ ಆಳವಾಗಿ ಅಭ್ಯಾಸ ಮಾಡದಿದ್ದರೆ, ಪಂಪ ರನ್ನ ಜನ್ನ ನಾಗವರ್ಮ ರಾಘವಾಂಕ ಕುಮಾರವ್ಯಾಸ ಲಕ್ಷ್ಮೀಶಾದಿ ಮಹಾಕವಿ ವರಕವಿಗಳ ಕೃತಿಗಳನ್ನು ಅಧ್ಯಯನ ಮಾಡದಿದ್ದರೆ, ಕೊನೆಗೆ ಕನ್ನಡ ಅಧ್ಯಾಪಕನಾಗಿ ಪಾಠ ಹೇಳದೆ ಇದ್ದಿದ್ದರೂ, ವಿಷಯ ವಸ್ತು ಭಾವಾದಿ ಸಂಪತ್ತಿಯಲ್ಲಿ ಕೊರತೆಯಿರದಿರುವ ಉತ್ತುಂಗ ಪ್ರಜ್ಞಾಸ್ಥಿತಿಗೆ ಏರಬಹುದಾಗಿದ್ದರೂ, 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಂತಹ ಮೇರುಕೃತಿಗೆ ಬೇಕಾಗುವ ಪದಸಂಪತ್ತಿಯನ್ನೂ ಮಹಾಶೈಲಿಯನ್ನೂ ಖಂಡಿತವಾಗಿಯೂ ಪಡೆಯಲಾಗುತ್ತಿರಲಿಲ್ಲ. ಬಹುಶಃ ನನ್ನ ಕಾವ್ಯಕನ್ನಿಕೆ ಬಡಕಲು ಕನ್ನಡದ ಪಂಗುಶೈಲಿಯಲ್ಲಿ ಇಂಗ್ಲಿಷಿನ ಎರವಲು ಸರಕನ್ನು ತಲೆಹೊರೆಯಲ್ಲಿ ಹೊತ್ತು ಮಾರುವ ಬೀದಿಯ ಬೇಹಾರಿಯಾಗಿರುತ್ತಿತ್ತೋ ಏನೋ? ಪತ್ರಿಕಾಲೋಕ ಪ್ರಸಿದ್ಧವಾಗಿ!

ದ. ರಾ. ಬೇಂದ್ರೆ

# ನೆನಪು

ದಿವಂಗತ ಕೃಷ್ಣಶಾಸ್ತ್ರಿಗಳ ನೆನಪಾದೊಡನೆ ತಳಕಿನ ವೆಂಕಣ್ಣಯ್ಯನವರ ನೆನಪಾಗದೇ ಹೋಗುವುದಿಲ್ಲ. ೧೯೧೮ರ ಧಾರವಾಡ ಅಖಿಲಕರ್ಣಾಟಕ ನಾಲ್ಕನೆಯ ಸಾಹಿತ್ಯ ಸಮ್ಮೇಳನದಲ್ಲಿ ವೆಂಕಣ್ಣಯ್ಯನವರನ್ನು ನಾನು ಕಂಡೆ. ಆ ಕಾಲಕ್ಕೆ ಕೃಷ್ಣಶಾಸ್ತ್ರಿಗಳು ಬಂದಿದ್ದರೆ, ಅವರನ್ನೂ ಕಂಡಿರಬೇಕು. ಹೆಚ್ಚು ಪರಿಚಯವಾದದ್ದು ದಾವಣಗೇರಿ ಸಾಹಿತ್ಯ ಸಮ್ಮೇಳನದಲ್ಲಿ. ಪರಿಚಯ ಪಕ್ವ ವಾದದ್ದು ಮೈಸೂರ ಸಾಹಿತ್ಯ ಸಮ್ಮೇಳನದಿಂದ. ಮೈಸೂರಿನಲ್ಲಿ ವೆಂಕಣ್ಣಯ್ಯನವರ ಆದರಾತಿಥ್ಯ, ಬೆಂಗಳೂರಲ್ಲಿ ಪ್ರಬುದ್ಧ ಕರ್ಣಾಟಕದ ಪರವಾಗಿ ಕೃಷ್ಣಶಾಸ್ತ್ರಿಗಳು ಏರ್ಪಡಿಸಿದ್ದ ಭರ್ಜರಿಯಾದ ಆತಿಥ್ಯ—ಅವುಗಳಿಂದ ನಾನು ಬೆರಗಾದೆ, ಬೆಪ್ಪಾದೆ. ಸಾಹಿತಿಗಳಿಗೆ ಹೀಗೆ ಸನ್ಮಾನವಿರಬಹುದು ಏರ್ಪಡಿಸಲಾಗಬಹುದು ಎಂದು ಆಗ ನನಗೆ ತೋಚಿರಲಿಲ್ಲ. ದಿ. ಸೋಸಲೆ ಶಾಸ್ತ್ರಿಗಳೂ ಈ ಗುಂಪಿಗೆ ಸೇರಿಕೊಂಡಿದ್ದರು. ನಾನು ಎಂದರೆ ನನ್ನ ಗೆಳೆಯರ ಗುಂಪೇ ಕಟ್ಟಿಕೊಂಡು ಹೊರಟಿದ್ದೆ. ಗೆಳೆಯ ಮುಗಳಿ, ಜಿ. ಬಿ. ಜೋಶಿ, ಕೊಪ್ಪಳದ ನಾ. ಭಾ. ಮತ್ತು ಶಿ. ಭಾ. ಶಾಸ್ತ್ರಿ ಬಂಧುಗಳು. ಈ ಆದರಾತಿಥ್ಯಕ್ಕೆ ನನ್ನಿಂದ ಪ್ರತಿದಾನವೆಂದರೆ ಕವಿತಾವಾಚನ, ಚುರುಕು ಮಾತು. ಶಾಸ್ತ್ರಿಗಳೂ ಆಗ ಚುರುಕಾಗಿ ಉತ್ತರ ಕೊಟ್ಟರು ಎಂಬುದನ್ನು ನಾನು ಮರೆಯುವಂತಿಲ್ಲ.

ಪ್ರಬುದ್ಧ ಕರ್ಣಾಟಕಕ್ಕೆ ಕೃಷ್ಣಶಾಸ್ತ್ರಿಗಳು ತಂದೆ, ವೆಂಕಣ್ಣಯ್ಯನವರು ತಾಯಿ. ಪುಸ್ತಕ ವಿಮರ್ಶೆ, ಕವನ, ಲೇಖನ ಇವುಗಳನ್ನು ಅವರ ಪ್ರೇಮದ ಒತ್ತಾಯಕ್ಕಾಗಿ ನಾನು ಹಲವು ಸಲ ಕಳಿಸಿದೆ. 'ಮಹಾರಾಷ್ಟ್ರದ ಮೂಲ' ಎಂಬ ಗ್ರಂಥದ ವಿಮರ್ಶೆಯನ್ನು ನನ್ನಿಂದ ಮಾಡಿಸಿದವರು ಕೃಷ್ಣಶಾಸ್ತ್ರಿಗಳೇ. ಶಾಸ್ತ್ರಿಗಳವರ ಶ್ರೀಪತಿಯ ಕಥೆಗಳನ್ನು ನಾನು ಪಾಠ ಹೇಳಿದ್ದೇನೆ. ಅದರ ಬಿರುಸು ಅನುಭವಿಸಿದ್ದೇನೆ. ತರುಣ ಕಥೆಗಾರರಿಗೆ ಶಾಸ್ತ್ರಿಗಳವರ ಪ್ರಬುದ್ಧ ಕರ್ಣಾಟಕ ಎಂದರೆ ವಸಂತದ ಗಾಳಿ ಬೀಸಿದಂತೆ. ರಾಷ್ಟ್ರಕವಿ ಕುವೆಂಪು ಅವರ ಪ್ರೇರಕ ಶಕ್ತಿಗಳಲ್ಲಿ ದಿ. ಶ್ರೀಕಂಠಯ್ಯನವರು, ದಿ. ವೆಂಕಣ್ಣಯ್ಯನವರು ಎಷ್ಟು

ಗಣ್ಯರೋ ಅಷ್ಟೇ ಕೃಷ್ಣಶಾಸ್ತ್ರಿಗಳೂ ಅಹುದು. ಶಾಸ್ತ್ರಿಗಳಿಗೆ ಪ್ರಾಚೀನ ಕಥೆಗಳೂ ಪೂಜ್ಯಸ್ಥಾನಗಳೇ. ಅಂತೆಯೇ ಅವರ ಮಹಾಭಾರತ ಬಂದಿತು. ಮಹಾಭಾರತ ಇನ್ನೊಬ್ಬರದು ಎನ್ನಬಹುದು. ಆದರೆ ಅದರ ಪ್ರಸ್ತಾವನೆ ಶಾಸ್ತ್ರಿಗಳದು. ವ್ಯಾಸರ ಕರ್ಮವಿವೇಕ ಒಂದು ಬಗೆಯದಾದರೆ, ಶಾಸ್ತ್ರಿಗಳ ಕರ್ಮವಿವೇಕ 'ಶ್ರೀಪತಿ'ಯ ಪರಂಪರೆಗೆ ಸೇರಿದ್ದು. ಆದರ ಕರ್ಮಠ ನಿಷ್ಠುರದಷ್ಟೇ ಪೂಜ್ಯತೆಗೆ ತಲೆಬಾಗುವ ಗುಣ ಅನುಕರಣೀಯ ಎಂದು ತೋರುತ್ತದೆ.

ಶಾಸ್ತ್ರಿಗಳು, ವೆಂಕಣ್ಣಯ್ಯನವರು, ಈ ಅಶ್ವಿನಿಕುಮಾರರು ನನ್ನನ್ನು ರೋಗ ಚಿಕಿತ್ಸೆಗಾಗಿ ಮುಂದೊಡ್ಡಿದರು. ಮೈಸೂರು ಸ್ಥಳೀಯ ಕರ್ಣಾಟಕ ಸಂಘಕ್ಕೆ ಬೆಳೆಯುವ ಹಂಬಲ, ಶ್ರದ್ಧೆ ಸಾಲದು ಎಂದು ಇವರ ಶಂಕೆ. ಹಿತ್ತಲ ಗಿಡ ಮದ್ದಲ್ಲ. ನಾನು ಕುಂಟುಗಾಲಿನ ವೈದ್ಯ ಹೊರಗಿನಿಂದ ಬಂದವನು. ನನ್ನಿಂದ ಎರಡು ಮಾತುಗಳನ್ನು ಆಡಿಸಿದರು ಎನ್ನುವುದಕ್ಕಿಂತ ನನಗೂ ಆಡಬೇಕು ಎಂದು ತೋರಿತು. ಆದರ ಪರಿಣಾಮವೇನಾಯ್ತೊ? ಇಂದಿಗೂ ನನಗೆ ಗೊತ್ತಿಲ್ಲ. ಇಂತಹ ಪ್ರಸಂಗಗಳಲ್ಲಿ ನಾನು ಆಗಾಗ ನಾರದನ ಪಾತ್ರವನ್ನು ವಹಿಸಿದ್ದೇನೆ. ದಿ. ಶ್ರೀಕಂಠಯ್ಯನವರು ನನಗೆ ಮೈಸೂರಿನ ಮಿತ್ರರಿಂದ ನೂರಾಮೂವತ್ತೈದು ರೂಪಾಯಿಗಳ ಒಂದು ದಕ್ಷಿಣೆಯನ್ನು ಪ್ರಿಯಮಿತ್ರ ಕಸ್ತೂರಿಯವರಿಂದ ಕೊಡಿಸಿದರು. ಆಗಿನ ಕಾವ್ಯವಾಚನ, ಮಂತ್ರಪುಷ್ಪಾದಿಗಳಿಗೆ ಈ ಮಿತ್ರದ್ವಯರೂ ಸೇರಿಕೊಂಡವರೆ. ಏನೆಂದರೂ ಅವರು ನನಗೆ ವಯಸ್ಸಿನಿಂದ ಹಿರಿಯರು. ಶ್ರೀ ಡಿ. ಎಲ್. ಎನ್., ದಿ. ಟಿ. ಎನ್. ಎಸ್., ಶಿವರಾಮಶಾಸ್ತ್ರಿ, ಕಸ್ತೂರಿ ಇವರು ನನಗಿಂತ ಕೊಂಚ ಕಿರಿಯರಾದರೂ ಅವರ ಗುಂಪಿಗೇ ನಾನು ಸೇರಿಕೊಂಡದ್ದು.

ವೆಂಕಣ್ಣಯ್ಯನವರ ದೈವಭಕ್ತಿ, ಸಾಧುಸತ್ಪುರುಷರ ವಿಷಯವಾಗಿ ಗೌರವ, ಇವು ನನ್ನಮೇಲೆ ಹೇಗೆ ಪ್ರಭಾವವನ್ನು ಬೀರಿದವೋ ಹಾಗೆಯೇ ಶಾಸ್ತ್ರಿಗಳ ತರ್ಕ ನಿಷ್ಠುರ ವಿವೇಕ ನನಗೆ ಮೆಚ್ಚಿಗೆಯದೆ ಆಗಿತ್ತು. ಬೆಂಗಳೂರಿಗೆ ಹೋದಾಗ ಆಗೀಗ ಅವರನ್ನು ಕಂಡು ಅವರ ಸ್ನೇಹವಚನ ಸ್ವೀಕಾರಮಾಡಿ ಬರುತ್ತಿದ್ದೆ. ವೆಂಕಣ್ಣಯ್ಯನವರ ಬಂಧುಗಳ ಸಂಬಂಧ ನನಗೆ ಅಷ್ಟಿಷ್ಟು ಇದೆ. ಆದರೆ ಕೃಷ್ಣಶಾಸ್ತ್ರಿಗಳ ಬಂಧು ಬಳಗದ ಪರಿಚಯ ಅಷ್ಟು ಬೆಳೆಯಲಿಲ್ಲ. ದಿ. ಗೋಪಾಲಕೃಷ್ಣರಾಯರು ಅನೇಕ ಸಲ ನನ್ನೊಡನೆ ಶಾಸ್ತ್ರಿಗಳ ಕಡೆಗೆ ಬರುತ್ತಿದ್ದರು. ಇಂತಹ ಒಂದು ಕಾಲಕ್ಕೆ ಅವರು ಮಕ್ಕಳಿಗಾಗಿ ಬರೆದ ಮಹಾಭಾರತದ ಒಂದು ಚಿಕ್ಕ ಕಥಾ ಸಂಪುಟವನ್ನು ನನ್ನ ಮಗಳು ಚಿ. ಸೌ. ಮಂಗಳಾಗೆ ಆಶೀರ್ವಾದಪೂರ್ವಕವಾಗಿ ಕೊಟ್ಟದ್ದು ನನ್ನ ಮನೆಯ ಸ್ವತ್ತಾಗಿ ಇದೆ. ಆಧುನಿಕ ಕನ್ನಡ ಸಾಹಿತ್ಯ ತನ್ನ ಪ್ರಬುದ್ಧತೆಗೆ ಶಾಸ್ತ್ರಿಗಳವರ ನಿಷ್ಠೆಗೆ ಋಣಿ. ಪ್ರಬುದ್ಧ ಕರ್ಣಾಟಕದ ಕೆಚ್ಚು ಅವರದು; ಶಾಖೆಗಳಿಗೆ ಹಲವರು ಕಾರಣರಾಗಬಹುದು. ಶಾಸ್ತ್ರಿಗಳವರ ನಗೆ—ಅವರ ಕಣ್ಣು ಮಿಂಚಿನೊಡನೆ ಹೊಳೆದಾಗ ಯಾತರ ಬೆಳಕಿನಲ್ಲಿ ಏನು ಅರ್ಥ

ಮಾಡಿಕೊಳ್ಳಬೇಕೋ ಎಂಬ ದಿಗಿಲು ಒಮ್ಮೊಮ್ಮೆಯಾಗುತ್ತಿತ್ತು. ಆದರೆ ಆದರಲ್ಲಿ ಭಯವಿರಲಿಲ್ಲ. ಅದೊಂದು ಅಂತರಾಳದ ಚಿಕಿತ್ಸೆ, ಜಿಜ್ಞಾಸೆ.

ಡಿ. ವಿ. ಜಿ., ಬಿ. ಎಂ. ಎಸ್., ಮಾಸ್ತಿ–ಒಬ್ಬೊಬ್ಬರ ಗದ್ಯದ ಒಲವೂ ಆ ವ್ಯಕ್ತಿಯಷ್ಟೇ ಭಿನ್ನ. ರವೀಂದ್ರರ ವಿಮರ್ಶೆಯ ಭಾಷಾಂತರದಲ್ಲಾಗಲಿ, ಬಂಕಿಂ ಚಂದ್ರರನ್ನು ಸವಿಮರ್ಶವಾಗಿ ಅವರು ವಿವೇಚಿಸಿದ್ದೇ ಆಗಲಿ ಒಂದೆರಡು ಓದಿಗೆ ಬಿಚ್ಚುವಗಂಟಲ್ಲ. ಗದ್ಯಕ್ಕೆ ಗುರುಸ್ಥಾನದಲ್ಲಿ ಶಾಸ್ತ್ರಿಗಳವರೂ ಇದ್ದಾರೆ—ಹೆಚ್ಚಾಗಿ ನಿಶಿತವಾದ ವಿವೇಕಕ್ಕೆ.

ಎನ್. ಅನಂತರಂಗಾಚಾರ್

# ಪ್ರಾತಃಸ್ಮರಣೀಯರಾದ ಆಚಾರ್ಯ ಅಂಬಳೆ ಕೃಷ್ಣಶಾಸ್ತ್ರಿಗಳು

> ಸಿದ್ಧಂ ಸತ್ಸಂಪ್ರದಾಯೇ ಸ್ಥಿರಧಿಯಮನಘಂ ಶ್ರೋತ್ರಿಯಂ ಬ್ರಹ್ಮನಿಷ್ಠಂ
> ಸತ್ತ್ವಸ್ಥಂ ಸತ್ಯವಾಚಂ ಸಮಯನಿಯತಯಾ ಸಾಧುವೃತ್ತ್ಯಾಸಮೇತಮ್ ।
> ಡಂಭಾಸೂಯಾದಿ ಮುಕ್ತಂ ಜಿತವಿಷಯಗಣಂ ದೀರ್ಘಬಂಧುಂ ದಯಾಳುಂ
> ಸ್ಖಾಲಿತ್ಯೇ ಶಾಸಿತಾರಂ ಸ್ವಪರಹಿತಪರಂ ದೇಶಿಕಂ ಭೂಷ್ಣುರೀಪ್ಸೇತ್ ॥

'ಸತ್ಸಂಪ್ರದಾಯದಲ್ಲಿ ಸಿದ್ಧನೂ ದೃಢಬುದ್ಧಿಯುಳ್ಳವನೂ ವಾದರಹಿತನೂ ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಸತ್ತ್ವಶಾಲಿಯೂ ಸತ್ಯವಾಚನೂ ಎಲ್ಲ ಕಾಲದಲ್ಲಿಯೂ ಸಾಧುವೃತ್ತಿಯಿಂದ ಕೂಡಿದವನೂ ಡಂಭಾಸೂಯಾದಿಗಳಿಂದ ಬಿಡಲ್ಪಟ್ಟವನೂ ಜೀತೇಂದ್ರಿಯನೂ ದೀರ್ಘಬಂಧುವೂ ದಯಾಳುವೂ ತಪ್ಪಿದಾಗ ತಿದ್ದುವವನೂ (ಶಿಷ್ಯವಾತ್ಸಲ್ಯವುಳ್ಳವನೂ) ತನ್ನ ಮತ್ತು ಇತರರ ಹಿತದಲ್ಲಿಯೇ ಆಸಕ್ತಿಯುಳ್ಳವನೂ ಆದವನು ಆಚಾರ್ಯನೆಂದು ಸೂಚಿಸುವ ಮೇಲಿನ ಶ್ಲೋಕವನ್ನು ೬೦೦ ವರ್ಷಗಳ ಹಿಂದೆ ಕವಿತಾರ್ಕಿಕಸಿಂಹರೂ ಸರ್ವತಂತ್ರ ಸ್ವತಂತ್ರರೂ ಆದ ವೇಂಕಟನಾಥರು ಅಪ್ಪಣೆಕೊಡಿಸಿದುದು ಆಚಾರ್ಯ ಕೃಷ್ಣಶಾಸ್ತ್ರಿಗಳಂತಹವರನ್ನು ಮನಸ್ಸಿನಲ್ಲಿಟ್ಟುಕೊಂಡು ಎಂದು ಕಾಣುತ್ತದೆ. ಶಾಸ್ತ್ರಿಗಳು ಮೇಲೆ ಸೂಚಿಸಿರುವ ಆಚಾರ್ಯ ಲಕ್ಷಣಗಳಿಗೆ ಪ್ರತ್ಯಕ್ಷ ಪ್ರತೀಕವಾಗಿ ತಮ್ಮ ಆಚಾರ್ಯತ್ವವನ್ನು ಅಕ್ಷರಶಃ ಸಾರ್ಥಕಪಡಿಸಿಕೊಂಡಿದ್ದಾರೆ. ಅವರ ಜೀವನಸ್ಮರಣೆಯೂ ಕಾರ್ಯಾನುಸಂಧಾನವೂ ಮುಂದಿನ ಪ್ರಜಾಕೋಟಿಗೆ ಮಾರ್ಗದರ್ಶಕವಾಗಿರುವುದರಿಂದ ಅವರು ಪ್ರಾತಃಸ್ಮರಣೀಯರು.

ಶಾಸ್ತ್ರಿಗಳು ವಿರೋಧಿಸಂವತ್ಸರದ ಮಾಘ ಬಹುಳ ಸಪ್ತಮೀ ಬುಧವಾರ ಜನ್ಮವೆತ್ತಿದರು. ಮೈಸೂರು ಮಹಾರಾಜರವರ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಪ್ರಾಧ್ಯಾಪಕರಾಗಿದ್ದ ವ್ಯಾಕರಣ ಮಹಾವಿದ್ವಾನ್ ಅಂಬಳೆ ರಾಮಕೃಷ್ಣಶಾಸ್ತ್ರಿಗಳು ಇವರ ತಂದೆ. ಕೃಷ್ಣನೆಂಬುದು ತಂದೆಯವರಿಟ್ಟ ಹೆಸರು. ಅದು ಹೇಗೋ ಬಾಲ್ಯದಿಂದ ಅವರು ಮದ್ರಾಸ್ ವಿಶ್ವವಿದ್ಯಾನಿಲಯದ ಬಿ.ಎ. ಪರೀಕ್ಷೆಗೆ ಕುಳಿತು

ಕೊಳ್ಳುವವರೆಗೆ ರಾಮಕೃಷ್ಣಶಾಸ್ತ್ರಿಯೆಂದೇ ಬಳಕೆಯಲ್ಲಿ ಬಂದಿತು. ಆ ಕಾಲದಲ್ಲಿ ಅವರು ವಿಶ್ವವಿದ್ಯಾನಿಲಯಕ್ಕೆ ಸೂಕ್ತ ಹಣವನ್ನು ಕೊಟ್ಟು ತಮ್ಮ ಹೆಸರನ್ನು ಎ. ಆರ್. ಕೃಷ್ಣಶಾಸ್ತ್ರಿಗಳೆಂದು ಬದಲಾಯಿಸಿಕೊಂಡರಂತೆ. ಇದು ಪ್ರಕೃತಿಯಿಂದಲೇ ಪೂರ್ವನಿರ್ದಿಷ್ಟವೆಂಬುದು ೧೯೪೪ರಲ್ಲಿ ಅವರು ಕೌಶಿಕನಾಡಿ ಗ್ರಂಥದಲ್ಲಿ ತಮ್ಮ ಜಾತಕವನ್ನು ಪರಿಶೀಲಿಸಿದಾಗ ತಿಳಿದುಬಂದಿತು. ಅದರಲ್ಲಿ ಅವರ ಹೆಸರು ಏಳೆಂಟನೆಯ ಅವತಾರಗಳ ಹೆಸರಾಗಿದ್ದು (ರಾಮ+ಕೃಷ್ಣ) ಕಾಲಾನುಕಾಲದಲ್ಲಿ ಏಳನೆಯ ಅವತಾರದ ಹೆಸರು ಮಾಯವಾಗಿ ಎಂಟನೆಯ ಅವತಾರದ ಹೆಸರು ಮಾತ್ರ ಉಳಿದುಕೊಂಡಿವೆ ಎಂಬ ಸ್ಪಷ್ಟೋಕ್ತಿಯಿತ್ತು. ಇತರರಾರಿಗೂ ತಿಳಿಯದೆ ತಮಗೆ ಮಾತ್ರ ಗೊತ್ತಿದ್ದ ಈ ವಿಷಯವನ್ನು ಶಾಸ್ತ್ರಿಗಳು ಕೇಳಿ ಬಹಳ ಆಶ್ಚರ್ಯಪಟ್ಟು ಅದು ನಿಜವೆಂಬ ಸಂಗತಿಯನ್ನು ಮೇಲಣ ವಿವರಗಳಿಂದ ಶ್ರುತಪಡಿಸಿದರು. ಬಹುಶಃ ರಾಮನ ಕರ್ತವ್ಯನಿಷ್ಠೆಯೂ ಕೃಷ್ಣನ ಸಮಯಸ್ಫೂರ್ತಿಯೂ ಶಾಸ್ತ್ರಿಗಳಲ್ಲಿ ಕೇಂದ್ರೀಕೃತವಾಗಬೇಕೆಂಬ ಉದ್ದೇಶದಿಂದ ಪ್ರಕೃತಿಯೇ ಹೀಗೆ ಮಾಡಿತೋ ಏನೋ!

ಶಾಸ್ತ್ರಿಗಳಿಗೆ ಸಂಸ್ಕೃತ ಭಾಷಾಭ್ಯಾಸವು ಪಾಠಶಾಲೆಯಲ್ಲಿಯೂ ತಂದೆಯವರಲ್ಲಿಯೂ ನಡೆಯಿತು. ಅವರ ತಂದೆಯವರು ಅವರಿಗೆ ಬಾಲ್ಯದಲ್ಲಿಯೇ ಪಾಣಿನಿಯ ಸೂತ್ರಗಳನ್ನೆಲ್ಲ ಬಾಯಿಪಾಠಮಾಡಿಸಿದ್ದರು. ಸಾಂಪ್ರದಾಯಿಕ ಮಾರ್ಗದಲ್ಲಿ ನಡೆದ ಪಾಠಶಾಲೆಯ ವ್ಯಾಸಂಗವು ಮುಂದಿನ ಅವರ ಆಳವಾದ ಶಾಸ್ತ್ರೀಯ ಪಾಂಡಿತ್ಯಕ್ಕೆ ಸಹಾಯವಾಯಿತು. ಅವರ ಲೌಕಿಕ ವಿದ್ಯಾಭ್ಯಾಸವು ರಾಯಲ್ ಸ್ಕೂಲ್, ವೆಸ್ಲಿಯನ್ ಮಿಷನ್ ಹೈಸ್ಕೂಲ್ ಮತ್ತು ಮಹಾರಾಜರವರ ಕಾಲೇಜುಗಳಲ್ಲಿ ನಡೆಯಿತು. ಅವರು ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ವಿಜ್ಞಾನ ಮತ್ತು ಗಣಿತಗಳನ್ನೇ ಐಚ್ಛಿಕ ವಿಷಯವಾಗಿ ತೆಗೆದುಕೊಂಡಿದ್ದರೂ ಬೆಂಗಳೂರಿಗೆ ಹೋಗಿ ವ್ಯಾಸಂಗಮಾಡಲು ಸೌಕರ್ಯವಿಲ್ಲದಿದ್ದುದರಿಂದ ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ಇತಿಹಾಸ ಮತ್ತು ಭಾಷೆಗಳ ವ್ಯಾಸಂಗದಿಂದ ಬಿ.ಎ. ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಉತ್ತೀರ್ಣರಾದರು. ಮುಂದೆ ಕನ್ನಡ ಮತ್ತು ಸಂಸ್ಕೃತಗಳನ್ನೂ ಮುಖ್ಯ ವಿಷಯವನ್ನಾಗಿ ಆರಿಸಿಕೊಂಡು ಮದ್ರಾಸ್ ವಿಶ್ವವಿದ್ಯಾನಿಲಯದ ಎಂ.ಎ. ಪದವೀಧರರಾದರು. ಕನ್ನಡದ ಭಾಗ್ಯದಿಂದಲೋ ಏನೋ ಅವರು ಎಂ.ಸಿ.ಎಸ್. ಪರೀಕ್ಷೆಗೆ ಕುಳಿತಾಗ ಅವರಿಗೆ ಸೂಕ್ತಸ್ಥಾನ ದೊರೆಯಲಿಲ್ಲ.

ಬಾಲ್ಯದಲ್ಲಿಯೇ ಶಾಸ್ತ್ರಿಗಳಿಗೆ ಮಾತೃವಿಯೋಗವಾದುದರಿಂದ ತಂದೆಯವರ ವಾತ್ಸಲ್ಯಾತಿಶಯಗಳಿಗೆ ನೇರಪಾತ್ರರಾದರೂ ಶುದ್ಧ ವೈದಿಕ ಮನೆತನಕ್ಕೆ ಸೇರಿದ ಅವರಿಗೆ ಸ್ವಾವಲಂಬನೆಯ ಅಭ್ಯಾಸವು ಅನಿವಾರ್ಯವಾಯಿತು. ಬಾಲ್ಯದಲ್ಲಿ ಅವರ ಆಕಾರ ಅಷ್ಟು ಪುಷ್ಟವಾಗಿರಲಿಲ್ಲ. ಬಣ್ಣ ಕಪ್ಪೆಂದೇ ಹೇಳಬೇಕು. (ಇದನ್ನೇ ಪಂಪನು 'ಕದಳೀ ಗರ್ಭಶ್ಯಾಮಂ' ಎಂದು ಕರೆದುಕೊಂಡಿರಬೇಕು.) ತಮ್ಮ

ಶರೀರದ ಬೆಳವಣಿಗೆಯ ವಿಷಯದಲ್ಲಿ ಶಾಸ್ತ್ರಿಗಳು ಬಹಳ ಎಚ್ಚರಿಕೆಯನ್ನು ತೆಗೆದು ಕೊಳ್ಳುತ್ತಿದ್ದರು ಬಂಡೀಕೇರಿ ಗರಡಿಯಲ್ಲಿ ಸಾಧನೆಮಾಡುವುದು, ಚಾಮುಂಡಿ ಬೆಟ್ಟದ ಏಳನೂರನೆಯ ಮೆಟ್ಟಿಲಿನವರೆಗೆ ಹತ್ತಿಬರುವುದು. ಅವರ ಪ್ರತಿನಿತ್ಯದ ಅಭ್ಯಾಸವಾಗಿತ್ತು. ಕುಸ್ತಿ ವಿದ್ಯೆಯಲ್ಲಿ ಸಾಕಷ್ಟು ಪರಿಶ್ರಮವನ್ನು ಪಡೆದಿದ್ದರು. ಪಾಕವಿದ್ಯಾಭ್ಯಾಸವೂ ಅನಿವಾರ್ಯವಾಗಿಯೇ ಬೆಳೆದುಬಂದಿತು. ನಿತ್ಯಾಹ್ನಿಕ ಮತ್ತು ದೈವ ಪೂಜಾದಿಗಳು ಪರಂಪರಾಗತವಾಗಿ ರಕ್ತಗತವಾಗಿ ಬೆಳೆಯಿತು. ಇದರ ಫಲವಾಗಿ ನಿಷ್ಕೃಷ್ಟವಾದ ಜೀವನಕ್ರಮ, ದೇವಭಕ್ತಿ, ವಾಕ್ಸಂಯಮ, ನಿರಹಂಕಾರ, ಏಕಾಂತವಾಸ, ನಿಷ್ಕಾಮಕರ್ಮ, ಆಧ್ಯಾತ್ಮಿಕ ಮನೋಭಾವಗಳು ಕ್ರಮಕ್ರಮವಾಗಿ ರೂಪಗೊಂಡವು. ಅರಮನೆಯ ಪರಿಸರದಲ್ಲಿಯೇ ಬೆಳೆದವ ರಾದುದರಿಂದ ಸಂಗೀತ, ಚಿತ್ರ, ನಾಟ್ಯಕಲೆಗಳಲ್ಲಿ ಒಲವುಂಟಾಯಿತು. ಶೇಷಣ್ಣ ನವರ ವೀಣೆ, ಕೃಷ್ಣಪ್ಪನವರ ದೇವರನಾಮಗಳು ಅವರ ಆ ಒಲವನ್ನು ಅಭಿವೃದ್ಧಿ ಪಡಿಸಿದುವು. ಚಿತ್ರಕಲಾಕುಶಲಿಗಳಾದ ರವಿವರ್ಮ ಮತ್ತು ವೆಂಕಟಪ್ಪನವರು ಅವರಿಗೆ ವಿಶೇಷ ಪರಿಚಿತರು. ರತ್ನಾವಳಿ ಮತ್ತು ಶಾಕುಂತಲ ನಾಟಕ ಕಂಪನಿಗಳ ನಾಟಕಗಳಿಗೆ ಸಾಮಾನ್ಯವಾಗಿ ಅವರು ತಪ್ಪಿಸಿಕೊಳ್ಳುತ್ತಿರಲಿಲ್ಲ. ಇಷ್ಟಾದರೂ ಅವರ ನಡೆನುಡಿ ಆಚಾರವ್ಯವಹಾರ ಉಡುಪು ಮೊದಲಾದುವುಗಳೆಲ್ಲ ಬಹಳ ಸರಳ. ಆದರೆ ಮುಂದೆ ತಾವು ಆಕ್ರಮಿಸಿದ ಸ್ಥಾನಮಾನಗಳಿಗೆ ಕುಂದುಬರದೇ ಇರುವುದಕ್ಕಾಗಿ ಅಂಚಿನ ರೇಷ್ಮೆಪಂಚೆ, ಟ್ವೀಡ್‌ಕೋಟ್ ಮತ್ತು ದೊಡ್ಡಂಚಿನ ಜರತಾರಿ ಮೈಸೂರು ರುಮಾಲನ್ನು ಧರಿಸಿ 'ಲಲಿತಸುಂದರವೇಷ'ರಾಗಿಯೇ ಪ್ರಕಾಶಿಸುತ್ತಿದ್ದರು.

ಕಾಲೇಜಿನಲ್ಲಿ ವ್ಯಾಸಂಗಮಾಡುತ್ತಿದ್ದಾಗ ಶಾಸ್ತ್ರಿಗಳು ಶ್ರೀಯುತರುಗಳಾದ ಬಿ. ಎಂ. ಶ್ರೀಕಂಠಯ್ಯ, ಎಂ. ಹಿರಿಯಣ್ಣ, ಪಂಡಿತ ಕಾನಕಾನಹಳ್ಳಿ ವರದಾಚಾರ್ಯ ಇವರುಗಳಿಂದ ವಿಶೇಷವಾಗಿ ಪ್ರಭಾವಿತರಾದರು. ಈ ಮೂವರು ಮಹಾಶಯ ರಲ್ಲಿದ್ದ ಪ್ರಧಾನಗುಣಗಳು ಜ್ಞಾನದಾಹ, ವಿಚಾರಪರತೆ, ರಸಿಕವಿಮರ್ಶೆ, ಕರ್ತವ್ಯ ನಿಷ್ಠೆ, ಶ್ರದ್ಧೆ ಮತ್ತು ದೃಷ್ಟಿವೈಶಾಲ್ಯ—ಈ ಎಲ್ಲ ಗುಣಗಳೂ ಶಾಸ್ತ್ರಿಗಳಲ್ಲಿ ಪೂರ್ಣವಾಗಿ ಪ್ರತಿಬಿಂಬಿತವಾದುವು. ಬಿ. ಎಂ. ಶ್ರೀಯವರ ಶಿಷ್ಯರಾಗಿ ಶಾಸ್ತ್ರಿಗಳು ಇಂಗ್ಲಿಷ್ ಸಾಹಿತ್ಯದ ಶಕ್ತಿ, ಸೌಂದರ್ಯ, ಶೈಲಿಯ ವೈಖರಿ, ಶಬ್ದಭಂಡಾರದ ವಿಸ್ತಾರ, ಆತ್ಮೀಯತೆ, ಮಾನವೀಯತೆ, ವಿಮರ್ಶೆಯ ಧೋರಣೆ, ನಿಷ್ಪಕ್ಷಪಾತ ಮನೋಭಾವಗಳನ್ನು ಅರಿತರು. ನಿರ್ಜೀವವಾದ ಮೃತಭಾಷೆಯೆಂದು ಪರಿಗಣಿತ ವಾಗಿದ್ದ ಸಂಸ್ಕೃತ ಸಾಹಿತ್ಯವು ಹಿರಿಯಣ್ಣನವರ ಅಮೃತವಾಣಿಯಲ್ಲಿ ಸಾಹಿತ್ಯ, ನಾಟಕ, ಶಾಸ್ತ್ರ, ವೇದಾಂತಾದಿ ಬಹುಮುಖವಾಗಿ ಪ್ರವಹಿಸಿದ್ದ ರಸವಾಹಿನಿಯಾಗಿ ಕಂಡಿತು. ಬಿ. ಎಂ. ಶ್ರೀ. ಮತ್ತು ವರದಾಚಾರ್ಯರ ಪ್ರಭಾವವು ಕನ್ನಡ ಸಾಹಿತ್ಯದ ಇತಿಮಿತಿಗಳನ್ನು, ನಿಷ್ಪಕ್ಷಪಾತವಾದ ಜೀವಂತ ವಿಮರ್ಶೆಯ ಸ್ವರೂಪ

ವನ್ನು, ಪರಿಚಯಮಾಡಿಸಿತು. ಇದೇ ಕಾಲದಲ್ಲಿ ನಡೆದ ಮಹಾತ್ಮಾ ಗಾಂಧಿ ಮತ್ತು ಲೋಕಮಾನ್ಯತಿಲಕರ ಸ್ವದೇಶೀ ಪ್ರಚಾರ ಶಾಸ್ತ್ರಿಗಳ ನಾಡನುಡಿಯ ಅಭಿಮಾನವನ್ನು ಪರಿಪುಷ್ಟಿಗೊಳಿಸಿತು.

ಕನ್ನಡ ಅಧ್ಯಾಪಕವೃತ್ತಿ ಶಾಸ್ತ್ರಿಗಳ ಜೀವನದ ಗುರಿಯಲ್ಲವಾಗಿದ್ದರೂ ಎಂ. ಸಿ. ಎಸ್. ಪರೀಕ್ಷೆಯಲ್ಲಿ ಸರಿಯಾದ ಸ್ಥಾನ ಸಿಕ್ಕದುದರಿಂದ ಅವರು ೧೯೧೫ರ ಸುಮಾರಿಗೆ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕನ್ನಡ ಅಧ್ಯಾಪಕರಾಗಿ ಸೇರಬೇಕಾಯಿತು. ಆದರೆ ಅಧ್ಯಾಪಕವೃತ್ತಿಗೆ ಬೇಕಾದ ಸಂಸ್ಕೃತ ಇಂಗ್ಲಿಷ್ ಕನ್ನಡ ಸಾಹಿತ್ಯಗಳ ಆಳವಾದ ಪಾಂಡಿತ್ಯ ಆ ಕೆಲಸಕ್ಕೆ ಅವರಿಗೆ ಪೂರ್ವಸಿದ್ಧತೆ ಯನ್ನುಂಟುಮಾಡಿತ್ತು. ಆ ಕೆಲಸವನ್ನು ಅಂಗೀಕಾರ ಮಾಡಿದ ತಕ್ಷಣವೇ ಅದರ ಜವಾಬ್ದಾರಿಯನ್ನು ಪೂರ್ಣವಾಗಿ ಅರಿತು ಪಾಠಗಳ ಬೋಧನೆಗೆ ಬೇಕಾದ ಸಲಕರಣಗಳನ್ನು ಹತ್ತಾರು ಕಡೆಗಳಿಂದ ಶೇಖರಿಸಿ ಕನ್ನಡದಲ್ಲಿ ವಿದ್ಯಾರ್ಥಿಗಳಿಗೆ ಪೂರ್ಣ ಆಸಕ್ತಿಯನ್ನುಂಟುಮಾಡುವ ಕಾರ್ಯದಲ್ಲಿ ದೀಕ್ಷಾಬದ್ಧರಾದರು. ಕನ್ನಡ ದಲ್ಲಿ ಮಾತನಾಡುವುದೂ ಅಗೌರವವೆಂದು ಭಾವಿಸಿದ್ದ ಆ ಕಾಲದಲ್ಲಿ, ಬಿ. ಎಂ. ಶ್ರೀಯವರಂತಹವರೂ ಕನ್ನಡವಿಷಯವಾಗಿ ಇಂಗ್ಲಿಷಿನಲ್ಲಿ ವ್ಯವಹರಿಸುತ್ತಿದ್ದ ಸಂದರ್ಭದಲ್ಲಿ, ಕನ್ನಡದ ಉಪಾಧ್ಯಾಯರಿಗೆ ಮುನಷಿಗಳೆಂಬ ನಾಮಧೇಯದಿಂದ ಸರಿಯಾದ ಸ್ಥಾನಮಾನವಿಲ್ಲದ ಪರಿಸರದಲ್ಲಿ, ಟ್ಯೂಟರಾಗಿಹೋದ ಕೃಷ್ಣಶಾಸ್ತ್ರಿಗಳು ಕನ್ನಡ ಭಾಷಾಸಾಹಿತ್ಯಗಳೂ ಇತರ ಭಾಷಾಸಾಹಿತ್ಯಗಳ ಮಾರ್ಗದಲ್ಲಿ ತಲೆಯೆತ್ತಿ ನಿಲ್ಲಲು ಅರ್ಹವೆಂದೂ ಕನ್ನಡಬೋಧನೆಯೂ ಇತರ ವಿಷಯಗಳ ಬೋಧನೆ ಯಂತೆಯೇ ಆಕರ್ಷಕವೆಂದೂ ತಮ್ಮ ಸ್ವಂತ ಪ್ರಯೋಗ ಪ್ರತಿಭೆ ಪ್ರಚಾರಗಳಿಂದ ಶ್ರುತಪಡಿಸಿದರು. ತರಗತಿಯ ಪಾಠಪ್ರವಚನಗಳಿಗಾಗಿ ವಿಶೇಷ ವ್ಯಾಸಂಗ ಮಾಡಿದರು. ತರಗತಿಗಳಲ್ಲಿ ತಮ್ಮದೇ ಆದ ವ್ಯಕ್ತಿತ್ವದಿಂದ, ಗಂಭೀರವಾದ ಮುಖ ಮುದ್ರೆಯಿಂದ ಪೂರ್ಣ ಪಾಂಡಿತ್ಯದಿಂದ ವಿವಿಧ ದೃಷ್ಟಿಕೋಣಗಳ ವಿಮರ್ಶೆಯಿಂದ ಮಧ್ಯೆ ಮಧ್ಯೆ ಕಥೆ ಉಪಕಥೆಗಳ ಮೇಳನದಿಂದ, ಪರಿಚಿತ ಉಪಮಾನಗಳಿಂದ ಕಿರುಹಾಸ್ಯದಿಂದ ವಿದ್ಯಾರ್ಥಿಗಳನ್ನು ಮುಗ್ಧರನ್ನಾಗಿಸಿದರು. ಕನ್ನಡಿಗರಾಗಿ, ಕನ್ನಡ ಅಧ್ಯಾಪಕರಾಗಿ ಕನ್ನಡಸೇವೆ ಮಾಡದೆ ತಮ್ಮ ಋಣತೀರದು, ಈ ಕೆಲಸ ರಾಜಕೀಯದಷ್ಟೆ ಮಹತ್ವವುಳ್ಳದ್ದು ಎಂಬುದು ಅವರ ತೀರ್ಮಾನ. ಹೊಸಶೈಲಿ ಯಲ್ಲಿ ಹೊಸಸಾಧನಗಳಿಂದ ಹೊಸಪ್ರಕಾರಗಳಲ್ಲಿ ವಿದ್ಯಾರ್ಥಿಗಳನ್ನೂ ಪ್ರಭಾವಿತ ರನ್ನಾಗಿ ಮಾಡಿದರು.

ಶಾಸ್ತ್ರಿಗಳಿಗೆ ವಿದ್ಯಾರ್ಥಿಗಳಲ್ಲಿದ್ದ ವಾತ್ಸಲ್ಯ ಅವರ್ಣನೀಯವಾದುದು. ಅವರು ಎಂದಿಗೂ ತಮ್ಮ ಪ್ರತಿಭೆ ಪಾಂಡಿತ್ಯಗಳಿಂದ ಅವರನ್ನು ಮರೆಮಾಚುವ ಕೆಲಸದಲ್ಲಿ ತೊಡಗಲಿಲ್ಲ. ವಿದ್ಯಾಭ್ಯಾಸವೆಂದರೆ ವಿದ್ಯಾರ್ಥಿಯಲ್ಲಿ ಸುಪ್ತವಾಗಿದ್ದ ಶಕ್ತಿಯನ್ನು ಹೊರಕ್ಕೆಳೆದು ಪ್ರಕಾಶಿಸುವುದು ಎಂಬದಾಗಿ ಶಿಕ್ಷಣತಜ್ಞರು ನಿರೂಪಿಸುವ

ಸೂತ್ರವನ್ನು ಇವರು ಪ್ರತ್ಯಕ್ಷವಾಗಿ ಮಾಡಿತೋರಿಸಿದ್ದಾರೆ. ಯಾವನಾದರೂ ವಿದ್ಯಾರ್ಥಿಯಲ್ಲಿ ಅಲ್ಪಸ್ವಲ್ಪ ಶಕ್ತಿಯಿದೆಯೆಂದು ತಿಳಿದಾಗಲೇ ಅವನಿಗೆ ಬೇಕಾದ ಎಲ್ಲ ಸೌಲಭ್ಯಗಳನ್ನೂ ಕಲ್ಪಿಸಿ ಅವನುಮಾಡಿದ ಕೆಲಸವನ್ನು ಪರಿಷ್ಕರಿಸಿ ತಮ್ಮ ಸಹಾಯವನ್ನು ಸ್ವಲ್ಪವೂ ಬಹಿರಂಗಪಡಿಸಿಕೊಳ್ಳದೆ ಅವನ ಹೆಸರಿನಲ್ಲಿಯೇ ಪ್ರಕಟಿಸಿರುವ ಸನ್ನಿವೇಶಗಳು ಹತ್ತಾರಿವೆ. ತಮ್ಮ ಮೆಚ್ಚಿಗೆಯ ಗ್ರಂಥವಾದ ಆನಂದವರ್ಧನನ 'ಧ್ವನ್ಯಾಲೋಕ'ವನ್ನು ಕನ್ನಡಿಸಬೇಕೆಂದು ಯೋಚಿಸುತ್ತಿದ್ದಾಗ ಶ್ರೀ ಕೆ. ಕೃಷ್ಣಮೂರ್ತಿಯವರು ಆ ದಿಕ್ಕಿನಲ್ಲಿ ಕೆಲಸಮಾಡುತ್ತಿದ್ದುದನ್ನು ಕಂಡು ಆ ಕೆಲಸಕ್ಕೆ ಅವರನ್ನೇ ಪ್ರೋತ್ಸಾಹಿಸಿ ಸೂಕ್ತಸಲಹೆಗಳನ್ನಿತ್ತು, ಕರಡು ಪ್ರತಿಗಳನ್ನೂ ತಿದ್ದಿ ಬಹುಪ್ರೋತ್ಸಾಹಕರವಾದ, ಹಾಗೆಯೆ ವಾಸ್ತವವಾದ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಅವರ ಶಿಷ್ಯರನೇಕರು ಅವರಿಂದ ಪಡೆದಿರುವ ಬಹುಮುಖವಾದ ಸಹಾಯವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಶಿಷ್ಯನೊಬ್ಬನು ಪರೀಕ್ಷೆಗಾಗಿ ಅವರಿಂದ ತೆಗೆದುಕೊಂಡಿದ್ದ ದ್ರವ್ಯವನ್ನೂ ಹಿಂತಿರುಗಿಸಲು ಹೋದಾಗ ಅದನ್ನು ತೆಗೆದುಕೊಳ್ಳದೆ ಅದನ್ನು ಮತ್ತೊಬ್ಬ ಆವಶ್ಯಕವಿರುವ ವಿದ್ಯಾರ್ಥಿಗೆ ಕೊಡುವುದರ ಮೂಲಕ ಈ ಸಾಲವನ್ನು ತೀರಿಸಬಹುದೆಂದು ಹೇಳಿದುದು ಬಹು ಶ್ಲಾಘ್ಯವಾಗಿದೆ. ಮತ್ತೊಂದು ಸಲ ಆರ್ಥಿಕ ಉಪಪತ್ತಿ ಇದ್ದ ಅವರ ಶಿಷ್ಯರಲ್ಲೊಬ್ಬರಿಗೆ ಪತ್ನೀವಿಯೋಗವಾದ ವಿಷಯ ತಿಳಿದ ತಕ್ಷಣವೇ ಅನಾಹೂತರಾಗಿ ಅಯಾಚಿತವಾಗಿ ಎರಡುನೂರು ರೂಪಾಯಿಗಳನ್ನು ತಂದುಕೊಟ್ಟು ಅವರು ಎಷ್ಟು ಬೇಡವೆಂದರೂ ಸಮಯಕ್ಕಿರಲೆಂದು ಒತ್ತಾಯ ಪಡಿಸಿಕೊಟ್ಟು ಕೆಲಸವೆಲ್ಲ ಮುಗಿದ ಮೇಲೆ ಹಿಂದಕ್ಕೆ ಕೊಟ್ಟಾಗ ಬಹಳ ಸಂತೋಷಪಟ್ಟಿದ್ದಾರೆ.

ಶಿಷ್ಯರಾದ ಪುಟ್ಟಪ್ಪನವರನ್ನು ಅಷ್ಟು ಚಿಕ್ಕವಯಸ್ಸಿನಲ್ಲಿಯೇ 'ವರಕವಿ' ಯೆಂದು ಹೊಗಳಿ ಆಗಿನ ಅನೇಕ ಹಿರಿಯ ಸಾಹಿತಿಗಳ ಆಗ್ರಹಕ್ಕೂ ಪಾತ್ರರಾಗಿದ್ದಾರೆ ಅದನ್ನೂ ಲಕ್ಷಿಸದೆ ವಿದ್ಯಾರ್ಥಿ ಕವಿಸಮ್ಮೇಳನವನ್ನೇರ್ಪಡಿಸಿ ಪುಟ್ಟಪ್ಪನವರನ್ನೇ ಅಧ್ಯಕ್ಷರನ್ನಾಗಿಮಾಡಿ ಅವರ ಕೀರ್ತಿಪ್ರಸಾರಣೆಯಿಂದ ಸಂತೋಷಗೊಂಡಿದ್ದಾರೆ. 'ಮೈಸೂರಿಗೆಹೋಗಿ ಪುಟ್ಟಪ್ಪನವರನ್ನು ನೋಡದಿದ್ದರೆ ದೇವಸ್ಥಾನಕ್ಕೆ ಹೋಗಿ ದೇವರನ್ನು ನೋಡದೆ ಬಂದಂತೆ' ಎಂದು ಹೇಳಿರುವುದೂ ಉಂಟು. ಆಪ್ತ ಶಿಷ್ಯರನ್ನು ಕಂಡಾಗ ಗಂಟೆಗಂಟೆಗಳಕಾಲ ಅವರೊಡನೆ ಮಾತನಾಡಿದರೂ ಅವರಿಗೆ ತೃಪ್ತಿಯಿಲ್ಲ. ಆದರೆ ಅದು ಎಂದಿಗೂ ಕಾಡಹರಟೆಯಾಗುತ್ತಿರಲಿಲ್ಲ. ಯಾವುದಾದರೂ ಬಹು ಉಪಯುಕ್ತ ವಿಷಯಕವಾದ ರಸಕವಳವಾಗುತ್ತಿತ್ತು.

ಶಿಷ್ಯ ವಾತ್ಸಲ್ಯದಂತೆಯೇ ಅವರ ಗುರುಭಕ್ತಿಯೂ ಅನನುಕರಣೀಯ. ಅವರ ಗುರುಗಳಾದ ಬಿ. ಎಂ. ಶ್ರೀ. ಮತ್ತು ಹಿರಿಯಣ್ಣನವರಲ್ಲಿ ಅವರಿಗೆ ಅತ್ಯತಿಶಯವಾದ ಗೌರವ. ಶ್ರೀಯವರಿರುವವರೆಗೆ ಅವರು ಯಾವ ಕನ್ನಡದ ಮುಖ್ಯ ಉತ್ಸವಗಳಲ್ಲಿಯೂ ಅಧ್ಯಕ್ಷತೆಯನ್ನು ವಹಿಸುತ್ತಿರಲಿಲ್ಲ. ಅಭಿಪ್ರಾಯಗಳನ್ನು

ಕೊಡಬೇಕಾದರೂ ಅವರನ್ನು ಕೇಳದೆ ಮುಂದುವರಿಯುತ್ತಿರಲಿಲ್ಲ. ಅವರ ವಿಷಯ ದಲ್ಲಿ ಗುರುಗಳ ಶಿಷ್ಯವಾತ್ಸಲ್ಯವೂ ಅದೇರೀತಿಯದಾಗಿತ್ತು.

೧೯೧೯ರಲ್ಲಿ ದಿ. ಟಿ. ಎಸ್. ವೆಂಕಣ್ಣಯ್ಯನವರು ಕೃಷ್ಣಶಾಸ್ತ್ರಿಗಳ ಸ್ಥಾನಕ್ಕೆ ಬಂದಿದ್ದರಿಂದ ಅವರು ಮೈಸೂರು ಪ್ರಾಚ್ಯಕೋಶಾಗಾರಕ್ಕೆ ವರ್ಗಾಯಿಸಲ್ಪಟ್ಟರು. ಅಲ್ಲಿಯೂ ಅವರು ಆಸ್ಥೆ ಶ್ರದ್ಧೆಯಿಂದ ಗ್ರಂಥ ಸಂಶೋಧನೆಯಲ್ಲಿ ತೊಡಗಿ ಲಿಂಗಣ್ಣ ಕವಿಯ 'ಕೆಳದಿ ನೃಪವಿಜಯ'ವನ್ನೂ ನಯಸೇನನ 'ಧರ್ಮಾಮೃತ'ವನ್ನೂ ಸಂಶೋಧಿಸಿ ಪ್ರಕಟಿಸಿದರು. ೧೯೨೭ರಲ್ಲಿ ವೆಂಕಣ್ಣಯ್ಯನವರು ಪ್ರೊಫೆಸರಾಗಿ ಮೈಸೂರಿಗೆ ವರ್ಗವಾದಾಗ ಪುನಃ ಸೆಂಟ್ರಲ್‌ಕಾಲೇಜಿಗೆ ಹೋಗಿ ಅಧ್ಯಾಪಕ ರಾಗಿದ್ದು ೨೪-೨-೧೯೩೯ರಲ್ಲಿ ವೆಂಕಣ್ಣಯ್ಯನವರು ಅನಿರೀಕ್ಷಿತವಾಗಿ ಸ್ವರ್ಗಸ್ಥ ರಾಗಲು ಮೈಸೂರು ಮಹಾರಾಜರವರ ಕಾಲೇಜಿನ ಕನ್ನಡ ಪ್ರೊಫೆಸರ ಸ್ಥಾನವ ನ್ನಲಂಕರಿಸಿ ೧೯೪೫ರವರೆಗೂ ಅಲ್ಲಿ ಕೆಲಸಮಾಡಿ ವಿವಿಧಕ್ಷೇತ್ರಗಳಲ್ಲಿ ದುಡಿದು ನಿವೃತ್ತರಾದರು. ಆಮೇಲೆಯೂ ಗ್ರಂಥರಚನೆಯಲ್ಲಿಯೇ ನಿರತರಾಗಿದ್ದು 'ವಚನ ಭಾರತ', 'ಕಥಾಮೃತ' ಮತ್ತು 'ಬಂಕಿಂಚಂದ್ರ' ಮೊದಲಾದ ಶ್ರೇಷ್ಠ ಕೃತಿಗಳನ್ನು ರಚಿಸಿ ೧-೨-೧೯೬೮ನೆಯ ರಾತ್ರಿ ತಮ್ಮ ಪಾರ್ಥಿವ ಶರೀರವನ್ನು ವಿಸರ್ಜಿಸಿದರು.

ಶಾಸ್ತ್ರಿಗಳ ಆರ್ಥಿಕ ಔದಾರ್ಯ ಬಹು ಪ್ರಶಂಸನೀಯ. ಅನೇಕರಿಗೆ ತಮ್ಮ ಮನೆಗಳ ಶುಭ ಶೋಭನಾದಿಗಳ ಸಂದರ್ಭದಲ್ಲಿ ತಮಗೆ ಇತರರಿಂದ ಬಂದ ಉಡುಗೊರೆಯ ಸಂಪಾದನೆಯಲ್ಲಿಯೇ ದೃಷ್ಟಿ. ಶಾಸ್ತ್ರಿಗಳಂತೆ ತಮ್ಮ ಮಗಳ ಮದುವೆಯಲ್ಲಿ ಉಡುಗೊರೆಯನ್ನು ಓದಿಸಿದವರಿಗೆಲ್ಲ ಪ್ರತ್ಯುಡುಗೊರೆಯನ್ನು ಕೊಟ್ಟವರು ಇಲ್ಲವೆಂದೇ ಹೇಳಬಹುದು. ತಮ್ಮ ಕನ್ನಡದ ಅಭಿಮಾನಸೂಚಕ ವಾಗಿ ಕರ್ಣಾಟಕ ಸಾಹಿತ್ಯಪರಿಷತ್ತಿಗೆ ಪ್ರತಿವರ್ಷವೂ ದೇವರನಾಮಗಳನ್ನು ಹಾಡಿಸುವ ಸ್ಪರ್ಧೆಯನ್ನು ನಡಸಲು ದತ್ತಿಯನ್ನು ಬಿಟ್ಟಿದ್ದಾರೆ. ತಮ್ಮ ಪೂಜ್ಯ ಪಿತೃವರ್ಯರ ನಾಮಾಂಕಿತವಾಗಿ ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿಬಂದ ಕನ್ನಡ ವಿದ್ಯಾರ್ಥಿಗೆ ಸುವರ್ಣಪದಕವನ್ನು ದಾನಮಾಡಲು ಸೂಕ್ತನಿಧಿ ಮೌಲ್ಯವನ್ನೂ ವಿಶ್ವವಿದ್ಯಾನಿಲಯಕ್ಕೆ ಅರ್ಪಿಸಿದ್ದಾರೆ. ಇವೆಲ್ಲಕ್ಕಿಂತಲೂ ಅವರ ಔದಾರ್ಯವು ಚಿರಸ್ಥಾಯಿಯಾಗಿ ಗೋಚರವಾಗುವುದು, ಮಹಾರಾಜರವರ ಕಾಲೇಜಿನ ಕನ್ನಡ ಪ್ರಾಧ್ಯಾಪಕರ ಕೊಠಡಿಯಲ್ಲಿ ಅವರು ರಚಿಸಿರುವ ವಸ್ತುಸಂಗ್ರಹಾಲಯದಲ್ಲಿ ಕನ್ನಡ ಲಿಪಿಯ ಬೆಳವಣಿಗೆಯನ್ನು ಪ್ರದರ್ಶಿಸುವ ಪಟ, ಶಾಸನಗಳ ಪ್ರಗತಿಯ ನಕ್ಷೆ, ಕನ್ನಡಕ್ಕಾಗಿ ದುಡಿದ ದೇಶೀಯ ಮತ್ತು ವಿದೇಶಿಯ ಪಂಡಿತ ಪ್ರಕಾಂಡರ ಅಪೂರ್ವ ವಾದ ಭಾವಚಿತ್ರಗಳು, ಪ್ರಾಚೀನ ಪತ್ರಿಕೆಯ ಪ್ರತಿಕೃತಿ, ಆಗಾಗ ನಡೆದ ನಾಟಕಾಭಿನಯಗಳಲ್ಲಿ ಭಾಗವಹಿಸಿದ ಉತ್ತಮ ನಟವರ್ಗದ ಛಾಯಾಚಿತ್ರಗಳು ಮೊದಲಾದುವುಗಳನ್ನು ಸಹಸ್ರಾರು ರೂಪಾಯಿಗಳ ಸ್ವಂತವೆಚ್ಚದಿಂದ ಸಿದ್ಧಪಡಿಸಿ ಅದಕ್ಕೆ ತಮ್ಮ ಸಂಬಂಧದ ಕುರುಹನ್ನೂ ನಮೂದಿಸದೆ ತಾವು ವಿಶ್ರಾಂತಿಯನ್ನು

ಹೊಂದಿದಾಗ ಎಲ್ಲವನ್ನು ಮಹಾರಾಜರ ಕಾಲೇಜಿಗೆ ಕೊಡುಗೆಯಾಗಿ ಕೊಟ್ಟು ಹೋಗಿರುವುದರಲ್ಲಿ. ಇದು ಬಹು ಶ್ಲಾಘನೀಯವಾದ ಸಂಗತಿ. ಅದು ಅವರ ಕೊಡುಗೆ ಎಂಬುದು ಯಾರಿಗೂ ತಿಳಿಯದೇ ಅಜ್ಞಾತವಾಗಿರುವುದರಿಂದ ಮುಂದಿನ ಪೀಳಿಗೆಯವರ ತಿಳುವಳಿಕೆಗಾಗಿಯೂ ಅವುಗಳ ಭಾವೀರಕ್ಷಣೆಗಾಗಿಯೂ ಕಾಲೇಜಿನ ಅಥವಾ ವಿಶ್ವವಿದ್ಯಾನಿಲಯದ ಅಧಿಕಾರಿಗಳು ಅದನ್ನು ಸ್ಪಷ್ಟಪಡಿಸಿ ತಮ್ಮ ಲೆಕ್ಕ ಪತ್ರಗಳಲ್ಲಿ ಅದಕ್ಕೆ ಸೂಕ್ತಸ್ಥಾನವನ್ನು ಕಲ್ಪಿಸುವುದು ಆವಶ್ಯಕವೆಂದು ತಿಳಿಸಲು ಬಯಸುತ್ತೇವೆ.

ಕಳೆದ ಅರ್ಧಶತಮಾನಗಳಲ್ಲಿ ಕೃಷ್ಣಶಾಸ್ತ್ರಿಗಳು ಸಾಧಿಸಿದ ಕಾರ್ಯ ಆಶ್ಚರ್ಯಾವಹವಾಗಿದೆ. ಅವರ ಕಾರ್ಯಕ್ಷೇತ್ರ ಬಹುಮುಖವಾದುದು. ಅವರು ಸಾಹಿತಿಗಳು, ಕತೆಗಾರರು, ಪತ್ರಿಕಾಕರ್ತರು, ಪ್ರಬಂಧಕಾರರು, ವಾಗ್ಮಿಗಳು ಮತ್ತು ವೀರಕನ್ನಡ ಅಭಿಮಾನಿಗಳು. ಈ ಎಲ್ಲ ಕ್ಷೇತ್ರದಲ್ಲಿಯೂ ಸಮಾನವಾಗಿ ಎದ್ದು ಕಾಣುವುದು ಅವರ ಹಿತಮಿತ ಮೃದುಮಧುರ ವಚನಶೈಲಿ, ಆತ್ಮಪ್ರತ್ಯಯ, ತಡೆಯಿಲ್ಲದ ಉತ್ಸಾಹ, ಅಸಾಧಾರಣವಾದ ಕಾರ್ಯಶ್ರದ್ಧೆ, ಆತ್ಮಸಂಯಮ, ನಿಷ್ಪಕ್ಷಪಾತವಾದ ಮನೋಭಾವ, ಯಾವ ಅತಿರೇಕಕ್ಕೂ ಹೋಗದ ಋಜುವಾದ ಸರಳವಾದ ಆದರೆ ಅಷ್ಟೇ ನಿಷ್ಕೃಷ್ಟವಾದ ಚಾರಿತ್ರ್ಯ ಮತ್ತು ನಿಷ್ಕಾಮಕರ್ಮ. ಬಂಧುಗಳಾಗಿಯೋ ಸ್ನೇಹಿತರಾಗಿಯೋ ಶಿಷ್ಯರಾಗಿಯೋ ಅವರೊಡನೆ ವ್ಯವಹರಿಸಿದ ಯಾರಿಗಾದರೂ ಅವರ ಜೀವನ ಒಂದು ಸಾಧನೆ—ಒಂದು ತಪಸ್ಸು ಎಂಬುದೂ ಅವರು ಕರ್ಮಯೋಗಿಗಳೆಂಬುದೂ ಅರಿವಾಗದಿರದು. ಅವರ ಕಾರ್ಯಕ್ಷೇತ್ರಗಳಲ್ಲೆಲ್ಲಾ ಒಂದು ನೇರವಾದ ಗುರಿ, ನಿಷ್ಕೃಷ್ಟವಾದ ಸಾಧನಕ್ರಮ, ಸಂಶಯರಹಿತವಾದ ಫಲಸಿದ್ಧಿ ಇವು ಗೋಚರವಾಗುತ್ತವೆ. 'ನೀರೊಳಗಿರ್ದುಂ ನೀರಂ ನೀರೇಜಂ ಪೊರ್ದದು' ಎಂಬಂತೆ ಅವರು ಲೌಕಿಕ ಪ್ರಪಂಚದ ಮಧ್ಯೆ ಅನವರತ ದುಡಿಯುತ್ತಿದ್ದರೂ ಅದರ ಪ್ರಭಾವಕ್ಕೆ ಒಳಗಾಗಲೆ ತಮ್ಮ ಏಕಮಾತ್ರ ಗುರಿಯಾದ 'ನೈಷ್ಕರ್ಮಸಿದ್ಧಿ'ಯ ಸಾಧನೆಯಲ್ಲಿ ನಿರತರಾಗಿರುತ್ತಾರೆ.

ಈ ಸಾಮಾನ್ಯ ಗುಣ ನಮಗೆ ಸ್ಪಷ್ಟವಾಗಿ ಕಾಣಬಹುದು ಅವರ ಪತ್ರಿಕಾ ಸಂಪಾದನ ಕ್ಷೇತ್ರದಲ್ಲಿ.[1] ಅವರ ಸಂಪಾದಕತ್ವ ಮಹಿಮೆ ಇಂದಿನವರಿಗೆ ಅರ್ಥವಾಗುವುದು ಕಷ್ಟ. ಈಗ ಕನ್ನಡಭಾಷೆಗೆ ಸ್ವಲ್ಪ ಸ್ಥಾನಮಾನಗಳು ದೊರೆತಿವೆ. ಸ್ವಲ್ಪಮಟ್ಟಿಗಾದರೂ ಜನರಲ್ಲಿ ಆದರಾಭಿಮಾನಿಗಳು ತಲೆದೋರುತ್ತಿದೆ. ಅದಕ್ಕಾಗಿ ದುಡಿಯುವುದು ಲಾಭದಾಯಕವೂ ಶ್ರೇಯಸ್ಕರವೂ ಅಹುದೆಂಬ ಅರಿವು ಮೂಡಿದೆ.

---

[1] ಈ ಭಾಗದಲ್ಲಿ 'ಜೀವನ' ಪತ್ರಿಕೆಯ ೧೩ನೆಯ ಸಂಪುಟದ ೫ನೆಯ ಸಂಚಿಕೆಯಲ್ಲಿ ಪ್ರಕಟವಾದ ನನ್ನ ಲೇಖನದ ಅನೇಕ ಭಾಗಗಳನ್ನು ಸಮಗ್ರದೃಷ್ಟಿಗಾಗಿ ಇಲ್ಲಿ ಉಪಯೋಗಿಸಿಕೊಂಡಿದ್ದೇನೆ.

ಲೇಖಕವರ್ಗ ಬೆಳೆದಿದೆ. ವಾಚಕವೃಂದವೂ ಯಥೋಚಿತವಾಗಿ ವಿಸ್ತೃತವಾಗಿದೆ. ಕನ್ನಡಕ್ಕಾಗಿ ದುಡಿಯುವ ಸಂಸ್ಥೆಗಳು ಕೆಲವಾದರೂ ಮುಂದೆ ಬರುತ್ತಿವೆ. ಸರ್ಕಾರವೂ ಸಾವಧಾನವಾಗಿ ಸಹಾನುಭೂತಿಯನ್ನು ನೀಡಲು ಮನಸ್ಸು ಮಾಡುತ್ತಿದೆ. ಆದರೆ ಈಗ ಸುಮಾರು ೫೦ ವರ್ಷಗಳ ಹಿಂದೆ ಕೃಷ್ಣಶಾಸ್ತ್ರಿಗಳು ಕನ್ನಡ ಪತ್ರಿಕೆಯೊಂದರ ಸಂಪಾದಕತ್ವವನ್ನು ವಹಿಸಿಕೊಂಡಾಗ ಸನ್ನಿವೇಶವು ತೀರ ವ್ಯತ್ಯಾಸವಾಗಿತ್ತು. ಕನ್ನಡಿಗರಿಗೇ ಕನ್ನಡದಲ್ಲಿ ಅಭಿಮಾನವಿರಲಿಲ್ಲ. ಭಿನ್ನ ಸರ್ಕಾರಗಳ ಆಡಳಿತಕ್ಕೆ ಒಳಗಾಗಿ ತಮ್ಮ ಅಸ್ತಿತ್ವವನ್ನೇ ಮರೆತಿದ್ದರೆಂದು ಹೇಳಬಹುದು. ಕನ್ನಡಭಾಷೆಯೂ ಭಿನ್ನಭಿನ್ನ ರೂಪಗಳನ್ನು ತಾಳಿ ಏಕರೂಪತೆ ಯನ್ನೂ ಕಳೆದುಕೊಂಡಿತ್ತು. ಅನ್ಯಭಾಷಾ ಸಂಸ್ಕೃತಿಗಳಿಗೆ ಬಲಿಯಾಗಿದ್ದ ಕನ್ನಡಿಗರಿಗೆ ಕನ್ನಡದಲ್ಲಿ ಮಾತನಾಡುವುದೂ ಅವಮಾನಕರವೆಂಬ ಭಾವನೆಯಿದ್ದ ಕಾಲವದು. ಅಂದಮೇಲೆ ಕನ್ನಡ ಬರಹಗಾರರ ಬಳಗವಾಗಲೀ ಓದುವವರ ತಂಡವಾಗಲಿ ವಿಶೇಷವಾಗಿರಲಿಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಕನ್ನಡ ಭಾಷಾಸಂಸ್ಕೃತಿಗಳ ಉದ್ಧಾರಕ್ಕೋಸ್ಕರ ಹೊರಟ ಸಂಘಸಂಸ್ಥೆಗಳಿಗೂ ವೃತ್ತ ಪತ್ರಿಕೆಗಳಿಗೂ ಜನರ ಬೆಂಬಲವಿರಲಿಲ್ಲ. ಅಂತೆಯೇ ಧನಸಹಾಯವಿರಲಿಲ್ಲವೆಂಬುದೂ ಸ್ಪಷ್ಟ. ನಾಡನುಡಿಯ ಸೇವೆಯನ್ನೇ ಗುರಿಯಾಗಿಟ್ಟುಕೊಂಡು ಹೊರಟ ಹಿರಿಯ ಸಾಹಿತ್ಯ ಸಂಸ್ಥೆಯಾದ 'ಕರ್ಣಾಟಕ ಸಾಹಿತ್ಯ ಪರಿಷತ್ತು' ಸ್ಥಾಪಿತವಾಗಿ ಒಂದೆರಡು ವರ್ಷಗಳು ಮಾತ್ರವಾಗಿತ್ತು. ಅದರ ಚರಮೂರ್ತಿಯಾದ 'ಸಾಹಿತ್ಯ ಪರಿಷತ್ಪತ್ರಿಕೆ'ಯ ಭವಿಷ್ಯ ಇನ್ನೂ ಅನಿರ್ದಿಷ್ಟವಾಗಿಯೇ ಇತ್ತು. ಕರ್ಣಾಟಕದಲ್ಲಿ ದೇಶಭಾಷೆಗಳಿಗಾಗಿ ದುಡಿಯುತ್ತಿದ್ದ 'ಹಿತಬೋಧಿನಿ' 'ಕರ್ಣಾಟಕ ಕಾವ್ಯಕಲಾ ನಿಧಿ', 'ಕರ್ಣಾಟಕ ಗ್ರಂಥಮಾಲೆ', 'ಮಧುರವಾಣಿ', 'ವಾಗ್ಭೂಷಣ', 'ಕೃಷ್ಣಸೂಕ್ತಿ' ಮೊದಲಾದ ಪತ್ರಿಕೆಗಳು ಸೂಕ್ತಾಹಾರವಿಲ್ಲದೆ ಕೃಶವಾಗುತ್ತಿದ್ದುವು. ಹೊಸರೀತಿಯಲ್ಲಿ ಕನ್ನಡಿಗರ ಮನಸ್ಸನ್ನು ಸಂಸ್ಕರಿಸಬೇಕೆಂದು ಹೊರಟ ಕಾರ್ಯ ಕುಶಲರೂ ಕರ್ತವ್ಯನಿಷ್ಠರೂ ಆದ ಬೆಳ್ಳಾವೆ ವೆಂಕಟನಾರಾಯಣಪ್ಪನವರೂ ಡಿ. ವಿ. ಗುಂಡಪ್ಪನವರೂ ಪತ್ರಿಕಾಪ್ರಪಂಚದಲ್ಲಿ ಆಗತಾನೆ ಕೈಸುಟ್ಟುಕೊಂಡಿದ್ದರು. ಉನ್ನತಾಧಿಕಾರದಲ್ಲಿದ್ದ ದಕ್ಷರಾದ ಕನ್ನಡಿಗರೂ ಇಂತಹ ಪ್ರಯತ್ನಗಳನ್ನು ಪ್ರೋತ್ಸಾಹಿಸುವುದಕ್ಕಿಂತ ಭಯೋತ್ಪಾದವನ್ನೇ ಉಂಟುಮಾಡುತ್ತಿದ್ದರು. ಇದನ್ನೆಲ್ಲ ಪೂರ್ಣವಾಗಿ ತಿಳಿದಿದ್ದರೂ ಪ್ರೌಢಶಾಲೆಯ ಸಾಮಾನ್ಯದರ್ಜೆಯ ಕನ್ನಡ ಉಪಾಧ್ಯಾಯರಾದ ಕೃಷ್ಣಶಾಸ್ತ್ರಿಗಳು ತಮ್ಮ ಆತ್ಮಶಕ್ತಿಯ ಮತ್ತು ತಮ್ಮ ವಿದ್ಯಾರ್ಥಿಗಳ ಶಕ್ತ್ಯುತ್ಸಾಹಗಳ ಅವಲಂಬನದಿಂದ ಮಾತ್ರವೇ 'ಪ್ರಬುದ್ಧ ಕರ್ಣಾಟಕ' ವೆಂಬ ವಿದ್ಯಾರ್ಥಿಗಳ ಪತ್ರಿಕೆಯೊಂದನ್ನು ಪ್ರಾರಂಭಿಸಿ ಅದನ್ನು ವಿಶ್ವಕರ್ಣಾಟಕ ವ್ಯಾಪ್ತಿಯಾಗುವಂತೆ ೨೫ ವರ್ಷಗಳ ಕಾಲ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಬೆಳಸಿ ಅದರ ರಜತೋತ್ಸವದಲ್ಲಿ ಭಾಗವಹಿಸಿ ಸುವರ್ಣ

ಮಹೋತ್ಸವವನ್ನೂ ನಿರೀಕ್ಷಿಸುತ್ತಿದ್ದು ಮುಂದಿನ ಸಂಪಾದಕರಿಗೆ ಆದರ್ಶರಾಗಿ ಪ್ರೇರಕರಾಗಿ, ಮೂಲ ಶಕ್ತಿಯಾಗಿ ಸೇವೆಸಲ್ಲಿಸಿದುದು ಕನ್ನಡ ಪತ್ರಿಕಾಪ್ರಪಂಚದ ಇತಿಹಾಸದಲ್ಲಿ ಚಿರಸ್ಮರಣೀಯವಾಗಿದೆ.

ಕೃಷ್ಣಶಾಸ್ತ್ರಿಗಳ ಜಯಸಿದ್ಧಿಯ ರಹಸ್ಯ ಅವರ ಆತ್ಮಪ್ರತ್ಯಯ ಮತ್ತು ಆಲಸ್ಯರಹಿತವಾದ ನಿಷ್ಕಾಮಕರ್ಮ. ೧೯೧೭ರಲ್ಲಿ 'ಪ್ರಬುದ್ಧ ಕರ್ಣಾಟಕ'ವು ಆರಂಭವಾದಂದಿನಿಂದ ಬಹುಕಾಲದವರೆಗೆ ಶಾಸ್ತ್ರಿಗಳಿಗೆ ಸಂಯಮಶೀಲರೂ ಕಠೋರ ನಿಯಮಪಾಲಕರೂ ಆದ ಬೆಳ್ಳಾವೆ ವೆಂಕಟನಾರಾಯಣಪ್ಪನವರ ನೈತಿಕ ಬಲ, ಆದರ್ಶ, ಆಶೀರ್ವಾದಗಳೂ, ಸೌಮ್ಯ, ಸೌಜನ್ಯ, ಸೌಕುಮಾರ್ಯಗುಣಗಳಿಂದ ಕೂಡಿದ ಅವರ ಪರಮಾಪ್ತಮಿತ್ರರಾದ ತಳಕಿನ ವೆಂಕಣ್ಣಯ್ಯನವರ ಸ್ನೇಹ ಮತ್ತು ಕಾರ್ಯಸಾಧನಶಕ್ತಿಗಳು ನೆರವಾಗಿದ್ದರೂ ಅವರು ಸವ್ಯಸಾಚಿಗಳಾಗಿ ಕಾರ್ಯರಂಗದಲ್ಲಿ ಮುನ್ನುಗ್ಗಲು ಹಿಂಜರಿಯಲಿಲ್ಲ. ಎಂದೂ ಆಲಸತೆಯನ್ನು ತೋರಿಸಿಲ್ಲ. ಗುರಿ ಸರಿಯಾಗಿದ್ದರೆ, ಸಾಧನೆ ಸುಷ್ಠುವಾಗಿದ್ದರೆ ಸಿದ್ಧಿಯಾಗಿಯೇ ಆಗುವುದೆಂಬುದು ಅವರ ಸಿದ್ಧಾಂತ. ಅದರಂತೆಯೇ ಅವರು ತಮ್ಮ ಈ ಅಭಿಪ್ರಾಯವನ್ನು 'ಪ್ರಬುದ್ಧ ಕರ್ಣಾಟಕ'ದ ತಮ್ಮ ಮೊದಲನೆಯ ಲೇಖನದ ಕೊನೆಯಲ್ಲಿ ಮುಂದಿನ ವಾಕ್ಯಗಳಿಂದ ಸೂಚಿಸಿದರು : "ನಮ್ಮಲ್ಲಿ ಬೆಳ್ಳಿಯಿಲ್ಲ ಭಂಗಾರವಿಲ್ಲ. ಯಾವುದು ಇದೆಯೋ ಅದನ್ನು ನಿರ್ವಂಚನೆಯಾಗಿ ಕೊಡುತ್ತೇವೆ. ನಾವು ಮಾಡತಕ್ಕ ಕೆಲಸವನ್ನು ದೃಢದಿಂದಲೂ ನಿರ್ವಂಚನೆಯಿಂದಲೂ ಮಾಡಿದರೆ ಸರಸ್ವತಿಯೂ ಲಕ್ಷ್ಮಿಯೂ ತಾವಾಗಿ ಸಹಾಯಕ್ಕೆ ಬಂದು ನಿಲ್ಲುವರೆಂದು ನಮಗೆ ಧೈರ್ಯವಿದೆ." ಈ ಮಾತು ಅಕ್ಷರಶಃ ಸತ್ಯವಾಯಿತು. ಪತ್ರಿಕೆಗೆ ಯಾವ ವಿಶೇಷ ಧನಬಲವಿಲ್ಲದಿದ್ದರೂ ಅದು ಬಹುಮುಖವಾಗಿ ಬೆಳೆಯಿತು. ಯಾವ ಪ್ರತಿಫಲವಿಲ್ಲದಿದ್ದರೂ ಅನೇಕ ಉತ್ತಮೋತ್ತಮ ಸಾಹಿತಿಗಳು ಅಭಿಮಾನದಿಂದ ತಮ್ಮ ಲೇಖನಗಳನ್ನು ಒದಗಿಸಿದರು. ಜನ ಅದನ್ನು ನಾನಾ ದೃಷ್ಟಿಯಿಂದ ಓದಿ ನಲಿದು ಶ್ಲಾಘಿಸಿತು. ಅಲ್ಲದೆ ತಮ್ಮ ಲೇಖನಗಳನ್ನು ಆ ಪತ್ರಿಕೆಯಲ್ಲಿ ಪ್ರಕಟಿಸುವುದು ಒಂದು ಗೌರವವೆಂಬ ಭಾವನೆಯು ಕೂಡ ಮೂಡಿತು.

ವಿದ್ಯಾರ್ಥಿಗಳಲ್ಲಿ ಹೊಸ ಚೈತನ್ಯವನ್ನೂ ಹೊಸ ಜೀವನೋತ್ಸಾಹವನ್ನೂ ಹುಟ್ಟಿಸಿ ಅವರಿಂದ ಉತ್ತಮ ಸಾಹಿತ್ಯಸೇವೆಯನ್ನು ಮಾಡಿಸಿ ಆ ಮೂಲಕ ಕನ್ನಡ ಜನ, ಸ್ವದೇಶ, ಸ್ವಭಾಷೆ, ಸ್ವಸಾಹಿತ್ಯ, ಸ್ವಸಂಸ್ಕೃತಿ, ಸ್ವೇತಿಹಾಸ, ಸ್ವಶಕ್ತಿಗಳ ಅರಿವನ್ನೂ ಉಂಟುಮಾಡಿಕೊಳ್ಳುವಂತೆ ಮಾಡಬೇಕೆಂಬುದೇ ಶ್ರೀ ಶಾಸ್ತ್ರಿಗಳು 'ಪ್ರಬುದ್ಧ ಕರ್ಣಾಟಕ'ವನ್ನು ಪ್ರಾರಂಭಿಸಲು ಮುಖ್ಯಕಾರಣ. (ಅತ್ಯಲ್ಪ ಕಾಲದಲ್ಲಿ ಅದು ವಿದ್ಯಾರ್ಥಿಗಳದಾಗಿಯೇ ಉಳಿಯದೆ ವಿದ್ವಾಂಸರ ಪತ್ರಿಕೆಯೇ ಆಯಿತು.) ಇದಕ್ಕೆ ಉತ್ತಮವಾದುದನ್ನು ಸುಲಭ ಬೆಲೆಗೆ ಎಲ್ಲರಿಗೂ ಹಂಚುವುದೇ ಮುಖ್ಯವಾದ ಸಾಧನವೆಂದು ಅವರು ಮನಗಂಡರು. ಅದಕ್ಕನುಗುಣ

ವಾಗಿಯೇ ಪತ್ರಿಕೆಯು ಎಲ್ಲ ವಿಧದಲ್ಲಿಯೂ ಆದರ್ಶವಾಗುವುದಕ್ಕೂ ಎಲ್ಲರಿಗೂ ಲಭ್ಯವಾಗುವಷ್ಟು ಅಗ್ಗವಾಗುವುದಕ್ಕೂ ಪ್ರಯತ್ನಪಟ್ಟರು. ಅಂತಸ್ಸತ್ವದಷ್ಟೇ ಬಾಹ್ಯಸೌಂದರ್ಯಕ್ಕೂ ಗಮನವಿತ್ತರು. ಪತ್ರಿಕೆಗೆ ಸಂಬಂಧಪಟ್ಟಂತೆ ಹೆಸರಿನ ಔಚಿತ್ಯ, ಪುಸ್ತಕದ ಆಕಾರ, ಮುಖಚಿತ್ರದ ಮಾಧುರ್ಯ, ಅಕ್ಷರಗಳ ಮಾಟ, ವೈವಿಧ್ಯ. ಕಾಗದದ ನುಣುಪು, ತೂಕ; ರಟ್ಟಿನ ಚಂದ, ಚಮತ್ಕಾರ; ಚಿತ್ರಗಳ ಸೌಂದರ್ಯ ಮತ್ತು ಸಮನ್ವಯ, ಕರಡು ಪ್ರತಿಗಳ ಶೋಧನೆ ಮೊದಲಾದ ಸಣ್ಣ ವಿವರಗಳಿಗೆ ಅವರು ಸಲ್ಲಿಸುತ್ತಿದ್ದ ಪೂರ್ವಾಲೋಚನೆ ಯಾಜ್ಞಿಕ ಕಠೋರ ನಿಯಮಗಳನ್ನು ಜ್ಞಾಪಕಕ್ಕೆ ತರುತ್ತವೆ.

ಶಾಸ್ತ್ರಿಗಳ ಶಿಸ್ತನ್ನು ಆರ್ಜಿಸುವುದಕ್ಕೆ ಆಶಿಸುವುದು ಸಾಧ್ಯವೇ ವಿನಾ ಅನುಷ್ಠಾನಕ್ಕೆ ತರುವುದು ಅಸಾಧ್ಯ. ಕಾಲ ನಿಯಮವನ್ನು ಪಾಲಿಸಲು, ಪತ್ರಿಕೆಗಳನ್ನು ನಿಷ್ಕೃಷ್ಟವಾದ ದಿನ ಪ್ರಕಟಿಸಲು ತಾವು ಹೋದೆಡೆಗೆಲ್ಲಾ ಅದನ್ನು ಕೊಂಡೊಯ್ದಿದ್ದಾರೆ. ಎಷ್ಟೋ ಸಲ ಇಗ್ಗಾಲಿಯ ಮೇಲೆ ಅಲೆದಿದ್ದಾರೆ. ಬೇರೆ ಬೇರೆಯ ಮುದ್ರಣಾಲಯದಲ್ಲಿ ಅಚ್ಚು ಹಾಕಿಸಿದ್ದಾರೆ. ಕರಡುಪ್ರತಿಗಳನ್ನು ತಿದ್ದಲು ರಾತ್ರಿಯೆಲ್ಲ ಮುದ್ರಣಾಲಯದಲ್ಲಿಯೇ ಉಳಿದುದೂ ಉಂಟು.

ಇಷ್ಟಾದರೂ ಅವರು ಎಂದೂ ಯೋಗ್ಯತೆಗೆ ಕುಂದನ್ನು ತಂದಿಲ್ಲ. ತಮ್ಮ ಪತ್ರಿಕೆಯು ಆದರ್ಶ ಪತ್ರಿಕೆಯಾಗಬೇಕೆಂಬುದು ಅವರ ಹೆಗ್ಗುರಿ. ಆದುದರಿಂದ ಅವರು ಎಲ್ಲಿಯೂ ಪಕ್ಷಪಾತಕ್ಕೆ ಈಡಾಗಿಲ್ಲ. 'ಪ್ರಬುದ್ಧ ಕರ್ಣಾಟಕ'ಕ್ಕೆ ಪ್ರಕಟಣೆಗಾಗಿ ಬಂದ ಲೇಖನಗಳ ವಿಷಯವಾದ ಪರಿಷ್ಕರಣ ಕಾರ್ಯದಲ್ಲಿ ವಸ್ತು, ಭಾಷೆ, ರೀತಿಗಳಲ್ಲಿ ತಮಗೆ ಸರಿಯೆಂದು ತೋರದಿದ್ದುದನ್ನು ಅವರು ಪ್ರಕಾಶಿಸುತ್ತಿರಲಿಲ್ಲ. ಕೆಲವು ಹಿರಿಯರೂ ಕೂಡ 'ಪ್ರಬುದ್ಧ ಕರ್ಣಾಟಕ' ಅತಿ ಮಡಿಯಾಗಿ ಹೋಗಿದೆ ಎಂದು ಹಾಸ್ಯಮಾಡಿದುದೂ ಉಂಟು. ಅದಕ್ಕೆ ಶಾಸ್ತ್ರಿಗಳು ಆ ಒಂದು ಪತ್ರಿಕೆ ಹಾಗೆಯೇ ಇರಲಿ, ಅವರಿಗೆ ಒಪ್ಪಿಗೆಯಿಲ್ಲದಿದ್ದರೆ ಬೇರೆ ಪತ್ರಿಕೆಗಳಿಗೆ ಹೋಗಲಿ ಎಂದು ಉತ್ತರವಿತ್ತಿದ್ದಾರೆ. ಲೇಖನಗಳಿಗೆ ಸಂಭಾವನೆಯನ್ನು ಕೊಡಬೇಕೆಂಬ ಪ್ರಶ್ನೆಬಂದಾಗ ಹಾಗೆ ಮಾಡಿದರೆ ಪತ್ರಿಕೆ ಬೀದಿಗೆ ಬರಬೇಕಾಗುತ್ತದೆ. ಧನದಾಸೆ ಇರುವವರಿಗೆ ಈ ಪತ್ರಿಕೆಯ ಸಂಪರ್ಕ ಬೇಕಿಲ್ಲ. ಪ್ರೀತಿ ವಿಶ್ವಾಸಗಳಿಂದ ಆದಷ್ಟು ಕಾಲ ಈ ಪತ್ರಿಕೆಯು ಹಾಗೆಯೇ ನಡೆದುಕೊಂಡು ಹೋಗಲಿ ಎಂದು ಉತ್ತರ ಕೊಟ್ಟಿದ್ದಾರೆ. ಅವರಿಗೆ ಎಲ್ಲಿಯೂ ಸ್ವಜನ್ಯವೆಂಬ ದಾಕ್ಷಿಣ್ಯವಿಲ್ಲ; ಪರಜನರೆಂಬ ದ್ವೇಷವಿಲ್ಲ. ಪ್ರಾಚೀನವೆಂದು ಪುರಸ್ಕಾರವಿಲ್ಲ ಅರ್ವಾಚೀನವೆಂದು ಅವಹೇಳನವಿಲ್ಲ. ಯೋಗ್ಯತೆಯೊಂದೇ ಅಳತೆಯಕೋಲು. ಕಿರಿಯರ ಪ್ರಬಂಧಕ್ಕೆ ಕರ್ತರಿಯ ಪ್ರಯೋಗವನ್ನು ಮಾಡುವಂತೆಯೇ ಹಿರಿಯರ ಲೇಖನಕ್ಕೂ ಉಳಿಯ ಪೆಟ್ಟನ್ನು ಕೊಟ್ಟಿದ್ದಾರೆ. ಇದರಿಂದ ಮಿತ್ರರನ್ನು ಶತ್ರುಗಳನ್ನಾಗಿಸಿಕೊಂಡಿದ್ದಾರೆ. ಜನರಿಗೆ ದುರ್ಜನರಾಗಿದ್ದಾರೆ. ಕಾಲಾನುಕಾಲದಲ್ಲಿ ಇವರೂ ವ್ಯಥೆಪಟ್ಟಿಲ್ಲ, ಅವರೂ ಪ್ರಶಂಸಿದ್ದಾರೆ.

ಆ ಪ್ರಶಂಸೆಮಾತ್ರ ಎಂದೂ ಅವರ ಧ್ಯೇಯವಾಗಿರಲಿಲ್ಲ. ಪ್ರಾರಂಭದ ೧೩ ವರ್ಷಗಳೂ ಕೊನೆಯಲ್ಲಿ ನಾಲ್ಕು ವರ್ಷಗಳೂ ಪತ್ರಿಕೆಯ ಸಂಪಾದಕರಾಗಿಯೂ ಮಧ್ಯೆ ೬-೭ ವರ್ಷಗಳ ಕಾಲ ಸಹ ಸಂಪಾದಕರಾಗಿಯೂ ಆ ಅವಧಿಯಲ್ಲಿಯೇ ಕೆಲಕಾಲ 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಯ ಸಂಪಾದಕರಾಗಿಯೂ ಅವರು ಕೆಲಸಮಾಡಿದ್ದಾರೆ. ಆ ಕಾಲಗಳಲ್ಲಿ ಅವರು ಎಂದೂ ಖ್ಯಾತಿಗೆ ಮನಸೋತಿಲ್ಲ. ಮೊದಲು ೧೩ ವರ್ಷಗಳ ಕಾಲ ತಾವು ಸಂಪಾದಕರೆಂದು ಕೂಡ ಎಲ್ಲಿಯೂ ಪ್ರಕಟಿಸಿ ಕೊಂಡಿಲ್ಲ. ಜವಾಬ್ದಾರಿ ವಹಿಸಿಕೊಳ್ಳಬೇಕಾದಾಗ ಹಿಂಜರಿದೂ ಇಲ್ಲ. ಲಾಭ ವಂತೂ ಕನಸಿನಲ್ಲಿಯೂ ಇಲ್ಲ. ಪತ್ರಿಕೆಯು 'ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ'ದಿಂದ ಹೊರಡುತ್ತಿದ್ದವರೆಗೆ ಮುದ್ರಣ ಕಾರ್ಯವೇ ಅಲ್ಲದೆ ಲೇಖನಗಳ ಸಂಶೋಧನೆ, ಪತ್ರವ್ಯವಹಾರ, ಪ್ರತಿಮಾಡುವಿಕೆ, ಪತ್ರಿಕೆಯ ಹಂಚಿಕೆ ಮೊದ ಲಾದುವನ್ನೆಲ್ಲಾ ಒಬ್ಬ ಗುಮಾಸ್ತನ ಸಹಾಯವೂ ಇಲ್ಲದೆ ಕೇವಲ ನಾಲ್ಕು ರೂಪಾಯಿ ಸಂಬಳದ ಅಷ್ಟೇನೂ ಬುದ್ಧಿವಂತನಲ್ಲದ ಮತ್ತು ಒಪ್ಪತ್ತು ಕೆಲಸ ಮಾಡುವ ಒಬ್ಬ ಸೇವಕನ ಸಹಾಯದಿಂದಲೇ ನಡೆಸಿದ್ದಾರೆ.

ಈಗ ೩೦-೪೦ ವರ್ಷಗಳಿಂದ ಕನ್ನಡಿಗರಲ್ಲಿ ಅಭಿಮಾನ ಬೆಳೆಯುತ್ತಿದೆ. ಕನ್ನಡದ ಸಾಹಿತ್ಯದ ಮಟ್ಟ ಏರಿ ಬಹುಮುಖವಾಗಿ ಬೆಳೆದು ವಿವಿಧಾಕಾರವನ್ನು ತಾಳುತ್ತಿದೆ. ಶಾಸ್ತ್ರಗ್ರಂಥಗಳ ಅಭ್ಯಾಸ ಜನಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ. ಜನರ ಅಭಿರುಚಿ ಸುಸಂಸ್ಕೃತವಾಗುತ್ತಿದೆ. ಪ್ರಾಚೀನ ಗ್ರಂಥ ಗಳ ಸಂಸ್ಕರಣ, ನವೀನ ಗ್ರಂಥ ರಚನೆ, ವಿವಿಧ ವಿಷಯಗಳ ಸಂಶೋಧನೆ ನಿಷ್ಪಕ್ಷಪಾತವಾದ ವಿಮರ್ಶನ ಪದ್ಧತಿ ಇವು ಬೆಳೆಯುತ್ತಿವೆ. ಪುಸ್ತಕಗಳ ಮುದ್ರಣ, ಕಟ್ಟನ ಹೊರಬೆಡಗು ಆಕರ್ಷಕವಾಗುತ್ತಿವೆ. ಅನೇಕ ಕನ್ನಡ ವಿದ್ವಾಂಸರು ತಮ್ಮಲ್ಲಿ ಸುಪ್ತವಾಗಿದ್ದ ಶಕ್ತಿಯನ್ನು ಅರಿತುಕೊಂಡು ಉತ್ತಮ ಕವಿಗಳೆಂದೂ ಕತೆಗಾರರೆಂದೂ ಸಾಹಿತಿಗಳೆಂದೂ ವಿಮರ್ಶಕರೆಂದೂ ಪ್ರಸಿದ್ಧರಾಗಿದ್ದಾರೆ. ಇವುಗಳಲ್ಲಿ ಅನೇಕವುಗಳಿಗೆ ಶಾಸ್ತ್ರಿಗಳ ಪತ್ರಿಕಾಸಂಪಾದತ್ವ ಬಹುಮಟ್ಟಿಗೆ ಕಾರಣ. ಅವರ ದೃಷ್ಟಿ ವಿದ್ಯುದ್ವೇಗವುಳ್ಳದ್ದು. ಎಲ್ಲಿ ಹೊಸದನ್ನು ಕಂಡರೂ, ಎಲ್ಲಿ ಉತ್ತಮವಾದುದನ್ನು ಕಂಡರೂ, ಅದನ್ನು ಹಿಡಿದು ಪ್ರಬುದ್ಧ ಕರ್ಣಾಟಕದಲ್ಲಿ ಹಾಕಿದ್ದಾರೆ. ಹಸು ತಿಂದ ಹಿಂಡಿ ಹುಲ್ಲು ಇವೆಲ್ಲ ಹಾಲಾಗುವಂತೆ ಹತ್ತು ಕೈಗಳ ದುಡಿತವೆಲ್ಲ ಒಂದು ಸಂಸಾರದ ಉದ್ಧಾರಕ್ಕೆ ಬಂದೊದಗುವಂತೆ ಕನ್ನಡಿಗರು ಕಲಿತ ವಿದ್ಯೆಯಲ್ಲಿ ಅದು ಯಾವ ಭಾಷೆಯ ಮೂಲಕವಾಗಲಿ ಕನ್ನಡವಾಗಿ ಕನ್ನಡಿಗರ ಉದ್ಧಾರಕ್ಕೆ ಮೀಸಲಾಗಬೇಕೆಂಬುದು ಅವರ ದೃಢ ನಿರ್ಧಾರ. ಇದರ ಸತ್ಯಾಂಶ ತಿಳಿಯಬೇಕಾದರೆ ಅವರ ಸಂಪಾದಕತ್ವದಲ್ಲಿ ಕನ್ನಡದ ಸೇವೆಯನ್ನು ಮಾಡಿದ ಮಹನೀಯರ ಸಂಖ್ಯೆಯನ್ನು, ರಚಿತವಾದ ಸಾಹಿತ್ಯ ರಾಶಿಯ ಪ್ರಮಾಣ ವೈವಿಧ್ಯ ಮತ್ತು ಬೃಹದಾಕಾರಗಳನ್ನು ಅರಿಯ

ಬೇಕು. ಶಾಸ್ತ್ರಿಗಳು ಪತ್ರಿಕೆಗೆ ಪ್ರತ್ಯಕ್ಷವಾಗಿಯೂ (ವೆಂಕಣ್ಣಯ್ಯನವರೊಡನೆ ಸಹ ಸಂಪಾದಕರಾಗಿ) ಪರೋಕ್ಷವಾಗಿಯೂ ಸಂಪಾದಕರಾಗಿದ್ದ ಕಾಲದಲ್ಲಿ ಅಖಿಲ ಕರ್ಣಾಟಕದ ಸುಮಾರು ೨೫೦ ವಿದ್ಯಾರ್ಥಿಗಳೂ ವಿದ್ವಾಂಸರೂ ಅವರೊಡನೆ ಸಹಕರಿಸಿ ಅವರ ಪ್ರಭಾವಕ್ಕೆ ಒಳಗಾಗಿದ್ದಾರೆ. ಅವರ ನೇತೃತ್ವದಲ್ಲಿ ೨೦೦ ನವೀನ ಪ್ರಾಚೀನ ಕವಿತೆಗಳು ಪ್ರಕಾಶಿತವಾಗಿವೆ. ಸಾಹಿತ್ಯ ಸಂಶೋಧನೆಗೆ ಸಂಬಂಧಪಟ್ಟ ೧೪೫ ಲೇಖನಗಳು ಪ್ರಚುರವಾಗಿವೆ. ೧೨೫ ಸಣ್ಣಕತೆ, ಪ್ರಬಂಧ, ಗದ್ಯಚಿತ್ರ ಮೊದಲಾದುವು ರಚಿತವಾಗಿವೆ. ವಿವಿಧ ಜಾತಿಗೆ ಸೇರಿದ ೨೨ ನಾಟಕಗಳು ಹೊರಬಿದ್ದಿವೆ. ಭೌತಶಾಸ್ತ್ರ, ರಸಾಯನಶಾಸ್ತ್ರ, ಸಮಾಜಶಾಸ್ತ್ರ, ಜೀವಶಾಸ್ತ್ರ, ಶಬ್ಧಶಾಸ್ತ್ರ, ಖಗೋಳಶಾಸ್ತ್ರ, ರಾಜ್ಯಶಾಸ್ತ್ರ, ಮನಶ್ಶಾಸ್ತ್ರ, ಲಿಪಿಶಾಸ್ತ್ರ, ಅರ್ಥಶಾಸ್ತ್ರ, ಗಣಿತ, ಮತ, ಧರ್ಮ, ಆಧುನಿಕ ವಿಜ್ಞಾನ, ಭೂಶೋಧನೆ, ಚಿತ್ರಕಲೆ, ವಾಸ್ತುಶಿಲ್ಪ, ಸಂಗೀತ, ಶಿಕ್ಷಣ, ಆಕಾಶವಾಣಿ, ಆಹಾರವಿಜ್ಞಾನ, ಪುಸ್ತಕಭಂಡಾರ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟ ಉಚ್ಚ ತರಗತಿಯ ೭೫ ಸಂಶೋಧನಾತ್ಮಕ ಲೇಖನಗಳು ಪ್ರಕಟವಾಗಿವೆ. ೨೦ ಐತಿಹಾಸಿಕ ಪ್ರಬಂಧಗಳು ಬೆಳಕನ್ನು ಕಂಡಿವೆ. ೪೦೦ ಗ್ರಂಥಗಳು ವಿಮರ್ಶಿತವಾಗಿವೆ. ೧೨೧೧೦ ಡೆಮ್ಮಿ ಆಕಾರದ ಪುಟಗಳ ಸಾಹಿತ್ಯ ಅಚ್ಚಾಗಿ ಕನ್ನಡಿಗರ ಕೈಸೇರಿದೆ. ಇಲ್ಲಿ ಪ್ರಕಟವಾದ ಲೇಖನಗಳ ಆಧಾರದ ಮೇಲೆ ಕಾಲಾನುಕ್ರಮದಲ್ಲಿ ೪೭ ಸ್ವತಂತ್ರ ಪುಸ್ತಕಗಳಾಗಿವೆ. ಪತ್ರಿಕೆಗೆ ಅನುಬಂಧವಾಗಿ ನಾಲ್ಕು ಗ್ರಂಥಗಳನ್ನು ಮುದ್ರಿಸಿ ಹಂಚಲಾಗಿದೆ.

ಶಾಸ್ತ್ರಿಗಳ ನಿಜವಾದ ಶಕ್ತಿಯ ಅರಿವು ನಮಗುಂಟಾಗುವುದು ಇತರರ ಬರವಣಿಗೆಯನ್ನು ಸಂಪಾದನೆ ಮಾಡಿರುವುದರಿಂದಲ್ಲ. ಸ್ವಂತ ಲೇಖನಗಳಿಂದ. ಅವರು ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಪ್ರವೀಣರು. ಪಾಶ್ಚಾತ್ಯ ವಿದ್ಯೆಯಲ್ಲಿ ಪಮರ್ಿಧರರು. ದೈವದತ್ತವಾದ ಪ್ರತಿಭಾಯುತರು. ವಿಸ್ತಾರವಾದ ಲೋಕಾನುಭವವುಳ್ಳವರು. ಬಹು ಅಪೂರ್ವವಾದ ಈ 'ಪಂಚಲಿಂಗ ದರ್ಶನ'ದ ಪುಣ್ಯಫಲವನ್ನು ಅವರು ಅಖಿಲ ಕರ್ಣಾಟಕಕ್ಕೆ ತಮ್ಮ ಲೇಖನಿಯ ಮೂಲಕ ಬೀರಿದ್ದಾರೆ. ಇವರ ಬರವಣಿಗೆಯಲ್ಲಿ ಕೆಲವು ಸಣ್ಣಕತೆಗಳು (ಇವು ಶ್ರೀಪತಿ ಎಂಬ ಸಂಕೇತನಾಮದಲ್ಲಿ ಪ್ರಕಟವಾಗಿವೆ.) ಮತ್ತೆ ಕೆಲವು ಸಂಶೋಧನಾತ್ಮಕ ಪ್ರಬಂಧಗಳು ಅಥವಾ ಉಪನ್ಯಾಸಗಳು. ಅನೇಕವು ಸಂಪಾದಕೀಯ ಲೇಖನಗಳು. ವಸ್ತುಕೋಶ ಮತ್ತು ಕಾವ್ಯಾವಲೋಕನಗಳೂ ಸೇರಿವೆ. ಒಂದೊಂದರಲ್ಲಿಯೂ ನವೀನತೆಯೂ ರಸಿಕತೆಯೂ ಪಾಂಡಿತ್ಯ ಪ್ರತಿಭೆಗಳೂ ತುಂಬಿ ತುಳುಕಾಡುತ್ತಿವೆ. ಒಂದೊಂದೂ ಅನುಭವರಸಾಯನ, ಆತ್ಮಸಂಜೀವನ. 'ಅಗ್ಗದ ಮದುವೆ', 'ಜ್ಯೋತಿಷಕ್ಕೆ ಬಹುಮಾನ', 'ದೂರದ ಆಸೆ', 'ನನ್ನ ಸ್ನೇಹಿತ', 'ನಾಗರಪಂಚಮಿ', 'ಬಂಗಲಿಯ ವಾಸ', 'ಶ್ಯಾನುಭೋಗನ ಪುಣ್ಯ', 'ಹುಚ್ಚ್ಯೋ ಅಲ್ಲವೋ', ಮೊದಲಾದುವು ಇವರ ಸಣ್ಣಕತೆಗಳು. ಇವು ಸಂಖ್ಯೆಯಲ್ಲಿ ಮಿತವಾದರೂ

ಗುಣದಲ್ಲಿ ಅಮಿತವಾಗಿವೆ. ಇದರಲ್ಲಿ ಕಂಡುಬರುವ ಬಳಸಿಲ್ಲದ ಭಾಷೆ, ರಸಸ್ಪಂದಿಯಾದ ಮಾತು, ಪರಿಚಿತವಾದ ಸಾಂಸಾರಿಕ ಚಿತ್ರ, ದೈನಂದಿನ ಹಿನ್ನೆಲೆ, ನಿಷ್ಕಲ್ಮಷ ಹೃದಯ, ಮಧ್ಯೆ ಮಧ್ಯೆ ಬುಗ್ಗೆಯಂತೆ ಎದ್ದು ಕಾಣುವ ಲಘುಹಾಸ್ಯ, ಕಾಣಿಸಿಕೊಳ್ಳದೆಯೇ ಕಾರ್ಯಸಾಧನೆಮಾಡುವ ಲೋಕನೀತಿ, ವ್ಯಾವಹಾರಿಕ ಸತ್ಯ, ಅನುಭವಾಮೃತ, ಜೀವನಸಿದ್ಧಾಂತ ಮೊದಲಾದುವು ಗಾದೆ, ಲೋಕೋಕ್ತಿ, ಸಾಮತಿ, ದೃಷ್ಟಾಂತ, ರೂಪಕ, ಉಪಮಾನ, ಸೂಕ್ತಿಮಾಲೆಗಳ ಮೂಲಕ ವಾಚಕರನ್ನು ಮುಗ್ಧರನ್ನಾಗಿ ಮಾಡಿವೆ.

'ಅಲಂಕಾರಶಾಸ್ತ್ರದ ಚರಿತ್ರೆ', 'ಕನ್ನಡ ಐತಿಹಾಸಿಕ ಕಾದಂಬರಿಗಳು', 'ಪರಭಣಿಯ ತಾಮ್ರಶಾಸನ ಮತ್ತು ಪಂಪಭಾರತ', 'ಮೈಸೂರು ಚರಿತ್ರೆಯ ಮೇಲೆ ಕಾದಂಬರಿಗಳನ್ನು ಬರೆಯುದಕ್ಕೆ ಇರುವ ಸಾಮಗ್ರಿಗಳು', 'ಭಾಸಕವಿ', 'ಪಾಂಚರಾತ್ರ', 'ಪ್ರತಿಮಾನಾಟಕ', 'ಸ್ವಪ್ನವಾಸದತ್ತ' ಇವು ಅವರ ಸಂಶೋಧನಾತ್ಮಕ ಲೇಖನಗಳು. ಇಲ್ಲಿ ತೋರಿಬರುವ ಖಚಿತವಾದ ಪಾಂಡಿತ್ಯ, ಋಜುವಾದ ಪ್ರತಿಪಾದನಮಾರ್ಗ, ವಿಪುಲವಾದ ಪ್ರಮಾಣಸಾಹಿತ್ಯ ಸಂಚಯ—ಇವು ಮುಂದಿನ ಸಾಹಿತ್ಯಸಂಶೋಧಕರಿಗೆ ಮಾರ್ಗದರ್ಶಕವಾಗಿವೆ. ದಿವಂಗತ ಟಿ. ಎಸ್. ವೆಂಕಣ್ಣಯ್ಯನವರು, ಬಿ. ಎಂ. ಶ್ರೀಕಂಠಯ್ಯನವರು, ಲೂಯಿ, ರೈಸ್, ನಾಲ್ವಡಿ ಕೃಷ್ಣರಾಜಪ್ರಭುಗಳು ಮತ್ತು ರವೀಂದ್ರನಾಥ ಠಾಕೂರ್ ಇವರುಗಳ ವಿಷಯಕವಾಗಿ ಬರೆದಿರುವ ಜೀವನಚಿತ್ರಗಳು ಸಂಗ್ರಹವಾಗಿದ್ದರೂ ಆಯಾ ಮಹನೀಯರ ವ್ಯಕ್ತಿತ್ವವನ್ನು ಸ್ಪಷ್ಟವಾಗಿ ಚಿತ್ರಿಸುವುವು.

ಕನ್ನಡ ಸಾಹಿತ್ಯಕ್ಕೆ ಶಾಸ್ತ್ರಿಗಳಿಂದ ವಿಶೇಷ ಸೇವೆ ಸಂದಿರುವುದು ವಿಮರ್ಶಾ ಕ್ಷೇತ್ರದಲ್ಲಿ. ಸಾಮಾನ್ಯವಾಗಿ 'ವಿಮರ್ಶಕನ ಕೆಲಸವು ಬಹುಮಟ್ಟಿಗೆ ಕ್ಲೋರೋಫಾರಂ ಕೊಟ್ಟು ಚರ್ಮವನ್ನು ಸುಲಿದು ತೊಟ್ಟು ರಕ್ತ ಬರದಂತೆ ಶರೀರವನ್ನೆಲ್ಲ ಭೇದಿಸಿ ಅಂಗಪ್ರತ್ಯಂಗಗಳನ್ನೆಲ್ಲ ತೋರಿಸಿ ತನ್ನ ಪಾಂಡಿತ್ಯವನ್ನೂ ಕೌಶಲ್ಯವನ್ನೂ ಶ್ಲಾಘಿಸಿಕೊಳ್ಳತಕ್ಕ ಶಸ್ತ್ರಚಿಕಿತ್ಸಕನ ಕೆಲಸದಂತೆ. ಶಸ್ತ್ರಚಿಕಿತ್ಸಕನು ಹೇಗೆ ಪ್ರಾಣಿಯ ಜೀವನವನ್ನು ತೋರಿಸಲಾರನೋ ಹಾಗೆಯೇ ವಿಮರ್ಶಕನೂ ಕಾವ್ಯದ ಜೀವವನ್ನು ತೋರಿಸಲಾರ'. ಆದರೆ ವಿಮರ್ಶಕ ಶಾಸ್ತ್ರಿಗಳು ಪರಕಾಯಪ್ರವೇಶ ಮಾಡಿ ಶಾರದೆಯನ್ನು ಜಯಿಸುವ ಸಿದ್ಧಿಯನ್ನು ಗಳಿಸಿದ್ದಾರೆ. ಶ್ರೇಷ್ಠವರ್ಗದ ರಸವೈದ್ಯನಂತೆ ರೋಗಿಗೆ ಸಿಹಿಯ ಭ್ರಾಂತಿಯನ್ನುಂಟುಮಾಡಿ ಅವನಿಗೆ ತಿಳಿಯದೆಯೇ ಔಷಧಿಯ ಕೆಲಸವನ್ನು ಮಾಡಿಸಬಲ್ಲ ಚತುರರಾಗಿದ್ದಾರೆ. ಆದರೆ ಶಸ್ತ್ರಚಿಕಿತ್ಸೆಯೇ ಆವಶ್ಯಕವೆಂದು ತೋರಿದಾಗ ನೇರವಾಗಿ ನಿರ್ಭಯವಾಗಿ ಹಾಗೆಯೇ ಮಾಡಿ ಕೆಲವು ಸಲ ತಮ್ಮ ಅರಿವೆಯನ್ನು ರಕ್ತದಿಂದ ತೊಯ್ಸಿಕೊಂಡಿರುವುದೂ ಉಂಟು. ಇಲ್ಲಿ ಅವರದು ಅಸಾಧಾರಣವ್ರತ, ಯಾವ ಕಡೆಗೂ ಪಕ್ಷಪಾತವಿಲ್ಲ; ದೋಷೋದ್ಘಾಟನೆಯೂ ಇಲ್ಲ, ಹೊಗಳುಭಂಟಿಕೆಯೂ ಇಲ್ಲ. ಗುಣೈಕ

ಪಕ್ಷಪಾತವೂ ಇಲ್ಲ, ಛಿದ್ರಾನ್ವೇಷಣವೂ ಇಲ್ಲ. ಸಮತೂಕವಾದ ಮಾನಕಲ್ಪನೆ. ಈ ದೃಷ್ಟಿಯಿಂದ ಅವರು ಲಲಿತ ಗದ್ಯಶೈಲಿಯಲ್ಲಿ ಮಾಧುರ್ಯದಿಂದ ಕೂಡಿದ ಮಿತಪದಗಳಿಂದ ಅರ್ಥವ್ಯಕ್ತಿಗೆ ಸ್ವಲ್ಪವೂ ಲೋಪಬರದಂತೆ ವಿವಿಧ ರೀತಿಯ ಗ್ರಂಥಗಳನ್ನು ವಿಮರ್ಶಿಸಿದ್ದಾರೆ. ಉತ್ತಮ ಸಾಂಸಾರಿಕ ಕಾದಂಬರಿಯಾದ ಬಂಕಿಂಚಂದ್ರರ 'ವಿಷವೃಕ್ಷ' ಮತ್ತು ಅದರ ಅನುಬಂಧದಂತಿರುವ 'ಕೃಷ್ಣಕಾಂತನ ಉಯಿಲು', ಸಾಮಾನ್ಯದರ್ಜೆಯ ನೈತಿಕಕಾದಂಬರಿಯಾದ 'ಪೂರ್ಣಕಲಾ' ಸಾಂಪ್ರದಾಯಿಕ ನಾಟಕೆಯಾದ 'ಮಿತ್ರವಿಂದಾ ಗೋವಿಂದ', ಹೊಸಮಾದರಿಯ ಕೃತಿವರ್ಗಕ್ಕೆ ಸೇರಿದ 'ಕೆಲವು ಸಣ್ಣಕತೆಗಳು' ಆಧುನಿಕ ಭಾರತ ಮಹಾಪುರುಷರ ಜೀವನ ವಿಷಯಕಕವಿತಾಸಂಗ್ರಹವಾದ 'ವಸಂತಕುಸುಮಾಂಜಲಿ', ಸಮ ಸಾಮಯಿಕ ಸಾಮಾಜಿಕ ಪ್ರಹಸನವಾದ 'ಟೊಳ್ಳುಗಟ್ಟಿ', ಪ್ರಣಯ ಕಾದಂಬರಿ ಯಾದ 'ಚಂಚಲ ಕುಮಾರಿ', ಕಾವ್ಯಮೀಮಾಂಸಾತ್ಮಕವಾದ 'ಸಾಹಿತ್ಯ'ವೆಂಬ ಉಪನ್ಯಾಸ ಸಂಗ್ರಹ, ಔಪಚಾರಿಕ ನಾಟಕವಾದ 'ವಿದ್ಯಾರಣ್ಯ ವಿಜಯ', ಐತಿಹ್ಯಪ್ರಧಾನವಾದ 'ಸಮರ್ಥ ರಾಮದಾಸ ಸ್ವಾಮಿಗಳ ಜೀವನಚರಿತ್ರೆ', ಪ್ರೌಢಶಾಲೆಯ ಹೊಸಪತ್ರಿಕೆಗಳಾದ 'ಅರುಣ–ಕಮಲ' ಇವೇ ಮುಂತಾದುವು ಇವರ ಮಾನದಂಡದಿಂದ ಅಳತೆಯಾದುವು. ಹುಲಿಗೆ ತನ್ನ ಕಾಡೂ ಒಂದೆ, ಪರರ ಕಾಡೂ ಒಂದೇ. ಬಂಕಿಂಚಂದ್ರರ ಕಲಾಕೌಶಲವನ್ನು ಕೀರ್ತಿಸುವುದ ಕ್ಕಾಗಲಿ 'ಪೂರ್ಣಕಲಾ'ಕರ್ತೃವಿನ ಕೃತಕತೆಯನ್ನು ತೆಗಳುವುದಕ್ಕಾಗಲಿ ಕೃಪಣತೆಯನ್ನು ತೋರಿಲ್ಲ. 'ಸಣ್ಣಕತೆಗಳು ಬೆಣ್ಣೆಯಿಂದ ಮಾಡಿದ ಸಿಂಹ', 'ಸಾಹಿತ್ಯ ಕಲ್ಲುಸಕ್ಕರೆಯ ತುಂಡು' ಎಂದ ಬಾಯೇ ಸಾಹಿತ್ಯದ ಪ್ರತಿಪಾದನ ಕ್ರಮವನ್ನು ಕುರಿತು 'ಇದು ಸಣ್ಣಕತೆಗಳನ್ನು ಬರೆದವರೇ ಬರದದ್ದೇ ಎಂಬ ಪ್ರಬಲವಾದ ಸಂದೇಹವನ್ನುಂಟುಮಾಡುವುದಾಗಿದೆ' ಎಂದಿದೆ. 'ವಸಂತ ಕುಸುಮಾಂಜಲಿಯ' ಕವಿಗಳು ತಮ್ಮ ಗ್ರಂಥವನ್ನು ಬಡಹುಲ್ಲೆಂದು ಕರೆದು ಕೊಂಡಿದ್ದರೂ 'ಆ ಹುಲ್ಲನ್ನು ತಿಂದು ಕನ್ನಡ ನಾಡಿನ ದನಕರುಗಳು ಅಮೃತ ವನ್ನು ಕರೆಯುವಂತಾದರೆ ಸಾಕು' ಎಂದು ಆಶಿಸಿದವರೇ 'ವಿದ್ಯಾರಣ್ಯ ವಿಜಯ'ದ ಭಾಷೆಯ ಅಸ್ವಾಭಾವಿಕತೆಯನ್ನು ಮುದ್ರಣಸ್ಖಾಲಿತ್ಯವನ್ನೂ ಶಬ್ದಗಳ ಅಪ ಪ್ರಯೋಗವನ್ನು ಮಾತಿನ ಕಠಿಣತೆಯನ್ನು ಎತ್ತಿ ತೋರಿಸಿದ್ದಾರೆ. 'ಟೊಳ್ಳು ಗಟ್ಟಿ'ಯ ನವತ್ವವನ್ನು ಸದುದ್ದೇಶವನ್ನೂ ಸ್ತೋತ್ರಮಾಡಿದ ಹಾಗೆಯೇ ಅದರ ಭಾಷೆಯ ಅಸಹಜತೆಯನ್ನು ಅಲ್ಲಗಳೆದಿದ್ದಾರೆ. ಎಲ್ಲೆಡೆಯಲ್ಲಿಯೂ ಬೆಂಕಿಯನ್ನು ಬೆಂಕಿಯೆಂದೂ ಇದ್ದಿಲನ್ನು ಇದ್ದಿಲೆಂದೂ ನಿಸ್ಸಂಕೋಚವಾಗಿ ನುಡಿದಿದ್ದಾರೆ.

ಶಾಸ್ತ್ರಿಗಳ ಸಂಪಾದಕೀಯಗಳು ಮಧುಮಾಸದ ನಂದನವನದಂತೆ. ಅಲ್ಲಿಯ ಮಂದಾರಪುಷ್ಪವು ಕಣ್ಣನ್ನು ತಣಿಸುವಂತೆ ಸುಗಂಧವನ್ನೂ ಬೀರುವುದು. ಮಂದ ಮಾರುತವು ಘ್ರಾಣೇಂದ್ರಿಯವನ್ನು ತೃಪ್ತಿಪಡಿಸುವಂತೆ ಶರೀರಕ್ಕೆ ಆಪ್ಯಾಯ

ಮಾನವಾಗಿಯೂ ಇದೆ. ಗಗನಚುಂಬಿಯಾದ ಕಲ್ಪವೃಕ್ಷವು ರಸನೇಂದ್ರಿಯಕ್ಕೆ ತುಷ್ಟಿಯನ್ನುಂಟುಮಾಡುವಂತೆಯೇ ಇಷ್ಟಾರ್ಥ ಸಿದ್ಧಿಯನ್ನು ದೊರಕಿಸುತ್ತದೆ. ಮಲ್ಲಿಕಾಲತೆಯು ವಿಹಾರಸ್ಥಾನವನ್ನೊದಗಿಸುವಂತೆಯೇ ಮನೋಹಾರಿಯೂ ಆಗಿರುತ್ತದೆ. ಅಲ್ಲಿಯ ವೈವಿಧ್ಯ ಅವರ್ಣನೀಯ. ಆದರೂ ಒಂದೊಂದೂ ಬಹು ಫಲದಾಯಕವಾದುದು. ಹಾಗೆಯೇ ಶಾಸ್ತ್ರಿಗಳ ಸಂಪಾದಕೀಯ ನಾನಾ ವಿಷಯಕ ವಾದುವು. ನಾಡು–ನುಡಿ, ಸಂಗೀತ–ಸಾಹಿತ್ಯ, ಚಿತ್ರ–ಶಿಲ್ಪ, ಆಸೆ–ಆತಂಕ, ಸಮಸ್ಯೆ–ಸಮಸ್ಯಾಪರಿಹಾರ, ಅಭಿನಂದನ–ಕಂಬನಿ, ರಜತೋತ್ಸವ–ರೋದನ, –ಎಷ್ಟು ತೆರನಾದುವು ! ಎಲ್ಲಿಯೂ ಸಾಮರಸ್ಯವಿಲ್ಲದೇ ಇಲ್ಲ, ಭಾವಪೂರ್ಣವಾದ ಅಭಿಪ್ರಾಯಗಳು. ಕಡೆದ ಬುಗುರಿಯಂತಿರುವ ಹಿತಮಿತವಾದ ಮಾತುಗಳು. ಸುರಭಿಯುತ ಸುವರ್ಣ ಸುಮದಂತಿರುವ ಅಡಕವಾದ ವರ್ಣನೆಗಳು. 'ವೀಣೆಯ ಶೇಷಣ್ಣನವರ ನಿಧನ, ಸರಸ್ವತಿಯ ಮನೆಯಲ್ಲಿ ಕಳುವು'. 'ಭಕ್ತಿಯಿಲ್ಲದ ಕೀರ್ತನ ಮತಾಭಿಮಾನವಿಲ್ಲದ ಮಣಿಮಂಜರಿಯ ಪಠನ.' 'ಬಿಡಾರಂದ ಕೃಷ್ಣಪ್ಪನವರ ಸಂಗೀತ ತಳಿರು ಎಸಳು, ಹೂವು ಹಣ್ಣುಗಳಿಂದಕೂಡಿದ ದೊಡ್ಡ ಕಲ್ಪವೃಕ್ಷ' ಅವರ ಗಾನವೈಭವದಲ್ಲಿ ಸರ್ವಾನ್ವಯವ ಸಾಮಂಜಸ್ಯ ಮಾಧುರ್ಯಗಳುಳ್ಳ ಅಗಾಧವಾದ ಉನ್ನತಮೂರ್ತಿಯೂ ಅದರಲ್ಲಿ ರೆಪ್ಪೆಯ ಕೂದಲನ್ನು ಬಿಡಿಸುವ ಸೂಕ್ಷ್ಮ ಕೆಲಸಗಳೂ ಏಕಕಾಲದಲ್ಲಿ ಗೋಚರಿಸುತ್ತವೆ. 'ದಾಸರ ಕೀರ್ತನಗಳನ್ನೂ ಘನವಾಗಿ ವಿಸ್ತಾರವಾಗಿ ಹಾಡುವುದೆಂದರೆ ಎಲೆ ಅಡಿಕೆಯ ಚೀಲದಲ್ಲಿ ಸವರನ್ನು ತುಂಬಿ ಅದನ್ನು ದೊಡ್ಡ ಭಂಗಾರದ ಥೈಲಿಯಾಗಿ ಮಾಡುವಂತಹ ಕೆಲಸ,' 'ಲೋಕಾನುಭವವಿಲ್ಲದೆ ಸಮಾಜಸುಧಾರಣೆಗೆ ಹೊರಡುವುದರ ಪರಿಣಾಮ ಸಂಸಾರಸಂಹಾರ – ಸಮಾಜ ಸಂಸ್ಕಾರವಲ್ಲ' 'ಪಠ್ಯಪುಸ್ತಕಗಳ ದೃಷ್ಟಿಯಿಂದ ಶೃಂಗಾರ ಪ್ರಧಾನವಾದ ಗ್ರಂಥಗಳು ಕೆಂಡಸಂಪಿಗೆಯ ಹೂವಿನಂತೆ. ಅದರ ವಾಸನೆಯು ಬಹು ತೀಕ್ಷ್ಣವಾಗಿ ಆರಡಿಯ ತುಂಬಿಗಳಿಗೆ ತಲೆನೋವು ಬರುವುದಿರಲಿ ಈರಡಿಯದುಂಬಿಗಳಿಗೂ ಅದರ ಸೇವನೆಯು ಅನಾರೋಗ್ಯವನ್ನುಂಟುಮಾಡುವುದು ಮೂಸಿನೋಡಿದರೆ ಮೂಗಿನಲ್ಲಿ ಹುಳುಸೇರಿಕೊಳ್ಳುವುದು.' 'ಪರಿಶುದ್ಧ ಬಿಳಿಯದಾದ ವಸ್ತ್ರಕ್ಕೆ ಯಾವ ಬಣ್ಣವನ್ನೂ ಹಾಕಿದರೂ ಒಪ್ಪುವುದು, ಹಾಗೆಯೇ ಬಿಟ್ಟರೂ ಅದು ರಮಣೀಯವೇ.' (ಉತ್ತಮ ಕಾವ್ಯಕ್ಕೆ ರಾಗದ ಕಟ್ಟಿಲ್ಲ ಎಂಬರ್ಥದಲ್ಲಿ) 'ಠಾಕೂರರು ಭಾರತೀಯರಿಗೆ ಪ್ರಾಶಸ್ತ್ಯವನ್ನೂ ಪ್ರಶಸ್ತಿಯನ್ನೂ ತಂದವರು. ರವಿಯ ದೃಷ್ಟಿಯು ಹೇಗೋ ರವೀಂದ್ರರ ದೃಷ್ಟಿಯೂ ಹಾಗೆಯೇ ವಿಶ್ವವ್ಯಾಪಿ ಯಾದದ್ದು....ಅವರ ಜೀವನದ, ಭಾವದ, ಭಾವನೆಯ ಪ್ರತಿಯೊಂದು ವಿವರ ದಲ್ಲಿಯೂ ವಿಶೇಷತೆಯಿತ್ತು'–ಈ ಮಾತುಗಳಲ್ಲಿ, ವರ್ಣನೆಗಳಲ್ಲಿ ಏನು ಗಾರುಡಿನ ಶಕ್ತಿಯಿದೆ !

ಪತ್ರಿಕಾ ಸಂಪಾದನೆಯ ಕಾರ್ಯದಲ್ಲಿ ಶಾಸ್ತ್ರಿಗಳ ವೈಶಿಷ್ಟ್ಯ ಪ್ರಧಾನವಾಗಿ

ಎದ್ದು ಕಾಣುವುದು ಅವರು ಆರ್ಥಿಕವ್ಯಾಮೋಹದಿಂದ ಅದರ ಬಾಹ್ಯಾಭ್ಯಂತರ ಸೌಂದರ್ಯವನ್ನು ಕೆಡಿಸದಿರುವುದು. ಎಷ್ಟೇ ಕಷ್ಟಗಳು ಬಂದರೂ ಪ್ರಕಟಣೆಗಳಿಂದ ಬರಬಹುದಾದ ಲಾಭದ ಲೋಭಕ್ಕೆ ಒಳಗಾಗದೆ (ಒಂದು ಸಲ ವಿನಾ) ಪತ್ರಿಕೆಯನ್ನೂ ಆದಷ್ಟೂ ಆಕರ್ಷಕವಾಗಿ ಮಾಡುವುದಕ್ಕೆ ಪ್ರಯತ್ನಪಟ್ಟು ತಮ್ಮ ಸಂಪಾದಕಾವಧಿಯಲ್ಲಿ ೩೦೦ ಉತ್ತಮ ಚಿತ್ರಗಳನ್ನು (ಇವುಗಳಲ್ಲಿ ಕೆಲವು ವರ್ಣ ಚಿತ್ರಗಳೂ ಸೇರಿವೆ) ಸೇರಿಸಿ ಅಂತಸ್ಸತ್ವವನ್ನು ಬೆಳಗಿದಂತೆಯೇ ಬಾಹ್ಯಸೌಂದರ್ಯವನ್ನೂ ಹೆಚ್ಚಿಸಿದ್ದಾರೆ. ಶಾಸ್ತ್ರಿಗಳು ಪ್ರಬುದ್ಧ ಕರ್ಣಾಟಕವೇ ತಾವು, ತಾವೇ ಪ್ರಬುದ್ಧ ಕರ್ಣಾಟಕ ಎಂಬ ಆತ್ಮೀಯತೆಯಿಂದ ತಾವು ನೆಟ್ಟ ಕಲ್ಪವೃಕ್ಷದ ಸಸಿಯನ್ನೂ ಸುದೃಢವಾಗಿ ಬೆಳಸಿ ಅದರ ಅಮೃತಫಲಗಳಿಂದ ಕೃಶವಾಗಿದ್ದ ಕನ್ನಡ ಶಿಶುವನ್ನು ಪೋಷಿಸಿ ಸರ್ವಾಂಗಸುಂದರವಾದ ರಾಜಮಾನ್ಯನಾದ ಶ್ರೀಮಂತ ವ್ಯಕ್ತಿಯನ್ನಾಗಿ ಮಾಡಿದರು. ಹಾಗೆಯೇ 'ಪ್ರಬುದ್ಧ ಕರ್ಣಾಟಕ'ವು ಕವಿಗಳಿಗೆ ಕಾಮಧೇನುವಾಗಿ, ಲೇಖಕರಿಗೆ ಕಲ್ಪವೃಕ್ಷವಾಗಿ, ಸಹೃದಯರಿಗೆ ಪ್ರಿಯವಾಗಿ ಸರ್ವಾಂಗಸುಂದರವಾಗಿ ಇಂದಿಗೂ ಸಾಹಿತ್ಯಾಭಿರುಚಿಯನ್ನು ತಿದ್ದುವುದರಲ್ಲಿ ಮೇಲ್ಪಂಕ್ತಿಯಾಗಿದೆ.

ಶಾಸ್ತ್ರಿಗಳ ಸಂಪೂರ್ಣ ಸ್ವತಂತ್ರ ಕೃತಿಗಳು ಕನ್ನಡಸಾಹಿತ್ಯಪ್ರಪಂಚದಲ್ಲಿ ಆಚಂದ್ರಾರ್ಕವಾಗಿ ನಿಲ್ಲಬಲ್ಲ ಸತ್ವಶಾಲಿಗಳಾಗಿವೆ. ಅವುಗಳ ಸಂಖ್ಯೆ ವಿಶೇಷವಿಲ್ಲ. ಆದರೂ ಒಂದೊಂದೂ ಆಣಿಮುತ್ತುಗಳು. ಅನ್ವರ್ಥವಾದ ನವಮಣಿಗಳು. ವೃತ್ತಿಯ ಆದಿಕಾಲಕ್ಕೆ ಸೇರಿದ 'ಶ್ರೀರಾಮಕೃಷ್ಣಪರಮಹಂಸರ ಚರಿತ್ರೆ' 'ಸ್ವಾಮಿಶಿಷ್ಯ ಸಂವಾದ' 'ನಾಗಮಹಾಶಯ' ಇವು ಮೂರೂ ಬೆಂಗಳೂರಿನ ರಾಮಕೃಷ್ಣ ಆಶ್ರಮಕ್ಕಾಗಿ ಬರೆದ ಜೀವನಚರಿತ್ರೆಗಳು. ಸರಳವಾದ ಜೀವಂತ ಶೈಲಿಯಿಂದ ಕೂಡಿ ನಾಯಕರ ಸ್ಪಷ್ಟಚಿತ್ರವನ್ನೂ ಕೊಡತಕ್ಕವಾಗಿವೆ. ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಿರುವ ಕನ್ನಡ ಕೈಪಿಡಿಯ ಮೊದಲನೆಯ ಭಾಗದಲ್ಲಿರುವ ಕಾವ್ಯಲಕ್ಷಣ ವಿಭಾಗ, ಭಾರತೀಯ ಅಲಂಕಾರಶಾಸ್ತ್ರದ ಚರಿತ್ರೆಯನ್ನು ಕುರಿತುದು. ಇದರಲ್ಲಿ ಶಾಸ್ತ್ರಿಗಳ ಬಹುಶ್ರುತತ್ವವನ್ನೂ ಶಾಸ್ತ್ರೀಯ ಪ್ರತಿಪಾದನರೀತಿಯನ್ನೂ ಸ್ಪಷ್ಟವಾಗಿ ಕಾಣಬಹುದು. ಇದು ಸಂಸ್ಕೃತ ಅಲಂಕಾರಶಾಸ್ತ್ರದ ೧೫೦೦ ವರ್ಷದ ಅನುಸ್ಯೂತವಾದ ಚರಿತ್ರೆ. ವಿವಿಧ ಪಂಥಗಳ ಸಾರವತ್ತಾದ ಭಾಗಗಳನ್ನೊಳಗೊಂಡು ಸುಖಬೋಧವಾಗಿದೆ. ಶಾಸ್ತ್ರಿಗಳು ಈ ಭಾಗವನ್ನು ಬರೆಯುವಾಗ ಈ ತೆರನಾದ ಐತಿಹಾಸಿಕವಿಮರ್ಶೆ ಇಂಗ್ಲಿಷಿನಲ್ಲಾಗಲಿ ಇತರ ಭಾರತೀಯ ಭಾಷೆಗಳಲ್ಲಾಗಲಿ ಇರಲಿಲ್ಲ. ಶಾಸ್ತ್ರಿಗಳ ಸ್ವಂತ ಪರಿಶ್ರಮದಿಂದಲೇ ಇದು ರಚಿತವಾಯಿತೆಂಬುದನ್ನು ತಿಳಿದರೆ ಅದಕ್ಕಾಗಿ ಅವರು ಪಟ್ಟ ಶ್ರಮದ ಪ್ರಮಾಣವು ಅರ್ಥವಾಗುತ್ತದೆ.

'ಭಾಸಕವಿ' ಮತ್ತು 'ಸಂಸ್ಕೃತ ನಾಟಕ'ಗಳು ಅವರ ವಿಮರ್ಶಾರತ್ನಗಳು.

ಇವುಗಳಲ್ಲಿ ಪಾಂಡಿತ್ಯದೊಡನೆ ಪ್ರತಿಭೆಯೂ, ಸಹೃದಯತೆಯೊಡನೆ ಸರಳ ಭಾಷಾ ಶೈಲಿಯೂ ಪ್ರತಿಪಾದನೆಯೊಡನೆ ಫಲಸಿದ್ಧಿಯೂ ಮಿಳಿತವಾಗಿ ವಾಚಕರಿಗೆ ಬಹು ಆಕರ್ಷಕವಾಗಿವೆ. 'ಸಂಸ್ಕೃತನಾಟಕ'ವು ಒಂದು ದಶಕದ ಅಖಂಡವ್ಯಾಸಂಗದ ಫಲ. ಇದನ್ನು ಕುರಿತು ಶ್ರೀಯವರು ಮಾಡಿರುವ ಪ್ರಶಂಸೆ ಇದು: "ಈ ವಿಷಯಕ್ಕೆ ಸಂಬಂಧಪಟ್ಟ ಅನೇಕ ಗ್ರಂಥಗಳನ್ನೂ ವಿದ್ವತ್ ಪತ್ರಿಕೆಗಳಲ್ಲಿ ಚೆದರಿರತಕ್ಕ ಅಸಂಖ್ಯಾತ ಲೇಖನಗಳನ್ನೂ ಪರಿಶೀಲಿಸಿ ಸಂಸ್ಕೃತ ನಾಟಕಗಳನ್ನೆಲ್ಲಾ ಪರಾಮರ್ಶಿಸಿದ ತಮ್ಮ ಸ್ವಂತ ಅನುಭವವನ್ನು ಸೇರಿಸಿ ಈ ಸಣ್ಣ ಪುಸ್ತಕದದಿಂದ ಕನ್ನಡದಲ್ಲಿ ಮೊದಲನೆಯ ಸಾರಿ ಭಾರತೀಯ ಸಾಹಿತ್ಯ ನಾಯಕದಂತಿರುವ ಒಂದು ಭಾಗದ ವಿಚಾರವಾಗಿ ಜ್ಞಾನಪ್ರಸಾರಣೆಗೆ ಸಹಾಯಮಾಡಿದ್ದಾರೆ." ಹಾಗೆಯೇ ಪ್ರೊ. ಹಿರಿಯಣ್ಣನವರು ಈ ಗ್ರಂಥವನ್ನು ಅವಲೋಕಿಸಿ "ಇದು ಬಹು ಉಪಯುಕ್ತವಾದ ಪ್ರಕಟಣೆ. ಭಾರತೀಯ ಭಾಷೆಗಳಲ್ಲಿರಲಿ, ಇಂಗ್ಲಿಷ್ ಭಾಷೆಯಲ್ಲಿಯೂ ಇಷ್ಟು ಸಂಗ್ರಹವಾದ ಪರಿಮಿತಿಯಲ್ಲಿ ಇಷ್ಟು ವಿಸ್ತಾರವಾದ ವಿಷಯಗಳನ್ನೊಳಗೊಂಡು ನೇರವೂ ಸ್ಪಷ್ಟವೂ ಆದ ಆಧುನಿಕ ಸಂಶೋಧನಾತತ್ವಗಳಿಗನುಗುಣವಾಗಿ ಪ್ರಮಾಣೀಭೂತವಾದ ವಿಮರ್ಶೆಗಳಿಂದ ಕೂಡಿದ ಇಂತಹ ಮತ್ತೊಂದು ಗ್ರಂಥವನ್ನು ನೋಡಿಲ್ಲ" ಎಂದು ಹೇಳಿದ್ದಾರೆ. ಗ್ರಂಥಾಂತ್ಯದಲ್ಲಿ ಕೊಟ್ಟಿರುವ ಪ್ರಮಾಣಗ್ರಂಥಗಳ ಪರಿವಿಡಿಯನ್ನು ಪರಿಶೀಲಿಸಿದರೆ ಇದರ ವ್ಯಾಪ್ತಿ ಅರ್ಥವಾಗುತ್ತದೆ.

'ಸರ್ವಜ್ಞ ಕವಿ' ಪ್ರಚಾರೋಪನ್ಯಾಸಮಾಲೆಯ ಒಂದು 'ಕಿರು ಕುಸುಮ'. ಇದರಲ್ಲಿ ಸರ್ವಜ್ಞನ ವ್ಯಕ್ತಿತ್ವ ಬಹು ಸ್ಫುಟವಾಗಿ ಪ್ರತಿಪಾದಿತವಾಗಿದೆ. 'ಕವಿಜಿಹ್ವಾಬಂಧನ' ಅವರು ಸಂಪಾದಿಸಿದ ಛಂದೋಗ್ರಂಥ. ಕನ್ನಡಸಾಹಿತ್ಯ ಪರಿಷತ್ಪತ್ರಿಕೆಯ ಮೂಲಕ ಪ್ರಕಟವಾಗಿದೆ. 'ಹರಿಶ್ಚಂದ್ರ ಕಾವ್ಯಸಂಗ್ರಹ' ಅವರು ಕನ್ನಡ ಗ್ರಂಥಮಾಲೆಯಲ್ಲಿ ಸಂಪಾದಿಸಿ ಪ್ರಕಟಿಸಿದ ಮೊತ್ತಮೊದಲನೆಯ ಸಂಗ್ರಹ. ಸೂಕ್ತ ಮುನ್ನುಡಿ ಮತ್ತು ಕೋಶಗಳಿಂದ ಕೂಡಿದೆ. ವೃತ್ತಿಯಿಂದ ನಿವೃತ್ತರಾದ ಮೇಲೆ ಶಾಸ್ತ್ರಿಗಳ ಮನಸ್ಸು ಮತ್ತಷ್ಟು ಆಧ್ಯಾತ್ಮಿಕದ ಕಡೆ ತಿರುಗಿತು. ಅವರು ಪರಮಾತ್ಮ ತೃಪ್ತಿಗಾಗಿ ರಚಿಸಿದ ಗ್ರಂಥ ಅವರ 'ವಚನಭಾರತ'. ಆ ಗ್ರಂಥವನ್ನು ರಚಿಸುವಾಗ ಅವರು ಅನುಸರಿಸಿದ ನಿಷ್ಠೆ ಬಹು ಸ್ತುತ್ಯವಾದುದು. ವೀರನಾರಾಯಣ ನೆದುರಿಗೆ ಕುಳಿತು ನಾರಣಪ್ಪನು ಭಾರತವನ್ನು ರಚಿಸಿದಂತೆ ಶಾಸ್ತ್ರಿಗಳು ಪ್ರತಿನಿತ್ಯವೂ ಪ್ರಾತಃಕಾಲ ೧೧ ಘಂಟೆಗೆ ಕುಳಿತು ಸಾಯಂಕಾಲ ಐದು ಗಂಟೆಯವರೆಗೆ ಬರೆಯುತ್ತಿದ್ದರು. ಲಕ್ಷಶ್ಲೋಕ ಸಂಖ್ಯೆಯುಳ್ಳ ವ್ಯಾಸಭಾರತವನ್ನು ದಕ್ಷಿಣೋತ್ತರ ಪಾಠಗಳೊಡನೆಯೂ ಕ್ಷೇಮೇಂದ್ರನ 'ಭಾರತ ಮಂಜರಿ' ಕನ್ನಡ ಭಾರತಗಳೊಡನೆಯೂ ತೋಲನಮಾಡಿ ಆವಶ್ಯಕವಾದಷ್ಟನ್ನು ಮಾತ್ರ ಸಂಗ್ರಹಿಸಿ ಲೋಕಕಾರುಣ್ಯ ದೃಷ್ಟಿಯಿಂದ ಭಾರತದ ೧೮ ಪರ್ವಗಳ ಕಥೆಯನ್ನು ಸುಲಭವೂ

ಸರಳವೂ ಆದ ಕನ್ನಡ ಭಾಷೆಯಲ್ಲಿ ಆರೇ ತಿಂಗಳಲ್ಲಿ (ಪ್ರಾರಂಭ ೨೪-೧೨-೪೮, ಸಮಾಪನ ೨೫-೬-೪೯) ಛಟ್ಟೆಇಳಿಸಿ ಮಹದುಪಕಾರಮಾಡಿದ್ದಾರೆ. ಅಲ್ಲದೆ ಸಂಸ್ಕೃತ ಭಾರತದ ಸ್ವರೂಪ, ಬೆಳವಣಿಗೆ, ದರ್ಶನ, ಸಂದೇಶ, ಕಾವ್ಯಗುಣ ಮೊದಲಾದ ವಿಷಯಗಳನ್ನೊಳಗೊಂಡ ವಿದ್ವತ್ಪೂರ್ಣವಾದ ಮುನ್ನುಡಿಯಿಂದ ಅಲಂಕರಿಸಿದ್ದಾರೆ. ಅದರ ಮುದ್ರಿತವಾದ ಬಹು ಸುಂದರವಾದ ಪ್ರತಿಗಳನ್ನು ತಮ್ಮ ಷಷ್ಟಿಪೂರ್ತಿಶಾಂತಿಯ ದಿನ ವೈದಿಕ ಕರ್ಮದ ಅಂಗವಾಗಿಯೇ ಬಿಡುಗಡೆ ಮಾಡಿ ತಮ್ಮ ಮನೆದೇವರಾದ ಸೋಮೇಶ್ವರ, ಪೂಜ್ಯಗುರುಗಳಾದ ಎಂ. ಹಿರಿಯಣ್ಣ, ಆಪ್ತಮಿತ್ರರು ವಿದ್ಯಾರ್ಥಿಗಳು ಮೊದಲಾದವರಿಗೆ ವಿನಿಯೋಗಮಾಡಿ ತಮ್ಮ ದೀಕ್ಷಾಕಾರ್ಯದ ಅವಭೃತವನ್ನು ಸಾಂಗಗೊಳಿಸಿದ್ದಾರೆ. ಈ ಗ್ರಂಥವು ಈಗಾಗಲೇ ೫-೬ ಮುದ್ರಣಾವೃತ್ತಿಗಳನ್ನು ಹೊಂದಿರುವುದು ಈ ಗ್ರಂಥದ ಆಕರ್ಷಣೆಗೆ ಪ್ರತ್ಯಕ್ಷಸಾಕ್ಷಿ. ಅದರ ಕಥನ ರೀತಿ, ಮಧುರಶೈಲಿ, ಸರಳಭಾಷೆ ಇವುಗಳಿಂದ ಅದು ಕನ್ನಡ ಗದ್ಯಪ್ರಪಂಚದಲ್ಲಿ ಎಂದೆಂದಿಗೂ ಬಹು ಉನ್ನತ ಸ್ಥಾನವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಇದಕ್ಕೆ ಅನುಬಂಧವಾಗಿಯೇ ಕರ್ಣಾಟಕದ ಮಕ್ಕಳುಗಳ ನಿತ್ಯಾನುಸಂಧಾನಕ್ಕೆ ಸಹಾಯಕವಾಗಿರುವ ಸಚಿತ್ರವಾದ 'ನಿರ್ಮಲ ಭಾರತಿ'ಯು ಶಿಶುಲೋಕವನ್ನು ಅನವರತ ಸಂತುಷ್ಟಗೊಳಿಸತಕ್ಕುದಾಗಿದೆ.

ಇದಾದಮೇಲೆ ಅವರಿಂದ ರಚಿತವಾದ ಬೃಹದ್ಗ್ರಂಥ ಕಥಾಮೃತ. ಪೈಶಾಚಿ ಭಾಷೆಯಲ್ಲಿ ರಚಿತವಾದ ಗುಣಾಢ್ಯನ 'ಬೃಹತ್ಕಥೆ'ಯ ಆಧಾರದ ಮೇಲೆ ರಚಿತವಾದ ಸೋಮದೇವನ ಸಂಸ್ಕೃತಭಾಷೆಯ 'ಕಥಾಸರಿತ್ಸಾಗರದ' ಅನುವಾದ ಶಾಸ್ತ್ರಿಗಳ 'ಕಥಾಮೃತ'. ಇದರಲ್ಲಿ ಸಾಮಾನ್ಯ ಜನರ ನಿತ್ಯ ಜೀವನವನ್ನೂ ಆಶೆ ಆತಂಕಗಳನ್ನೂ ವಿಸ್ತಾರವಾಗಿ ವಿವರಿಸುವ ಅನೇಕ ಕಥೆಗಳಿವೆ. ಕಥಾಸಾಹಿತ್ಯದ ವಿವಿಧ ರೀತಿಗಳಿಗೆ ಸಂಬಂಧಪಟ್ಟ ಸಾವಿರಾರು ಸಣ್ಣ ದೊಡ್ಡ ಕತೆಗಳ ಸಾಗರವೇ ಅದು. ರಾಮಾಯಣ ಮಹಾಭಾರತಗಳಷ್ಟೇ ಪುರಾತನವೂ ಜನಪ್ರಿಯವೂ ಆದ ಗ್ರಂಥ. ಇದರಲ್ಲಿ ಆಬಾಲವೃದ್ಧರಿಗೂ, ಪಂಡಿತ ಪಾಮರರಿಗೂ, ಸಂಸಾರಿಸಂನ್ಯಾಸಿಗಳಿಗೂ ಸ್ತ್ರೀಪುರುಷರಿಗೂ ಆಕರ್ಷಕವಾಗಿರುವ ಅದ್ಭುತ ಕತೆಗಳೂ ನೀತಿಕಥೆಗಳೂ ಉಪಾಖ್ಯಾನಗಳೂ ಐತಿಹ್ಯಗಳೂ ಇವೆ. 'ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನ'ವಾಗಿದೆ. ಶಾಸ್ತ್ರಿಗಳು ಈ ಕೋಶವನ್ನು ಕಥೆಯ ಸ್ವಾರಸ್ಯ ಕೆಡದಂತೆ, ವರ್ಣನೆಯು ಅತಿಯಾಗದಂತೆ, ಕನ್ನಡದ ಭಾಷಾಮರ್ಯಾದೆ ಭಂಗವಾಗದಂತೆ, ರಸಿಕತೆ ಮಾಯವಾಗದಂತೆ ಉತ್ತಮ ಗದ್ಯಶೈಲಿಯಲ್ಲಿ ಬಹು ಆಕರ್ಷವಾಗಿ ಅನುವಾದಮಾಡಿದ್ದಾರೆ. ಹಾಗೆಯೇ ಅದಕ್ಕೆ ಮುನ್ನುಡಿಯಾಗಿ ಗುಣಾಢ್ಯನ ಬೃಹತ್ಕಥೆ, ಅದರ ರೂಪಾಂತರಗಳು, ಕಥೆಗಳ ವೈಶಿಷ್ಟ್ಯ, ಅವುಗಳ ಸ್ವಾರಸ್ಯ ಮತ್ತು ಸಂದೇಶ ಮೊದಲಾದುವುಗಳನ್ನೊಳಗೊಂಡ ಪೀಠಿಕೆಯನ್ನು ಸಿದ್ಧವಾದ ಸಂಶೋಧನೆಯ ವಿಷಯಗಳಿಗೆ ವಿರೋಧವಿಲ್ಲದಂತೆ ಪ್ರಕಟಪಡಿಸಿದ್ದಾರೆ.

ಶಾಸ್ತ್ರಿಗಳ ಕೊನೆಯ ವಿದ್ವತ್ಪೂರ್ಣವಾದ ನಾಯಕ ಕೃತಿ 'ಬಂಕಿಂಚಂದ್ರ'. ಇದು ಬಂಗಾಳಿ ಭಾಷೆಯ ಸುಪ್ರಸಿದ್ಧ ಕಾದಂಬರೀಕಾರನಾದ ಬಂಕಿಂಚಂದ್ರ ಚಟ್ಟೋಪಾಧ್ಯಾಯನ ಜೀವನ ಮತ್ತು ಕೃತಿಗಳ ಶಾಸ್ತ್ರೀಯ ವಿಮರ್ಶೆ. ಇದರ ರಚನೆಯ ಸಂದರ್ಭದಲ್ಲಿ ಶಾಸ್ತ್ರಿಗಳು ವಂಗಭಾಷೆಯಲ್ಲಿರುವ ಬಂಕಿಮನ ಎಲ್ಲ ಮೂಲಕೃತಿಗಳನ್ನೂ ಅವನ ವಿಷಯಕವಾದ ಎಲ್ಲ ಕೃತಿಗಳನ್ನೂ ಲೇಖನಗಳನ್ನೂ ಸಂಪೂರ್ಣವಾಗಿ ವ್ಯಾಸಂಗಮಾಡಿ ಆತನ ಮತ್ತು ಆತನ ಕೃತಿಗಳ ಸಂಪೂರ್ಣ ಪರಿಚಯಮಾಡಿಕೊಟ್ಟಿದ್ದಾರೆ. ಪ್ರಾರಂಭದಲ್ಲಿ ಬಂಗಾಳೀ ಸಾಹಿತ್ಯದ ಸಂಕ್ಷಿಪ್ತ ಇತಿಹಾಸವನ್ನು ಅದರಲ್ಲಿ ಬಂಕಿಮನ ಸ್ಥಾನ ನಿರ್ದೇಶವನ್ನೂ ಕುರಿತ ಸಣ್ಣ ಟಿಪ್ಪಣಿಯನ್ನೂ ಕೊಟ್ಟಿದ್ದಾರೆ. ಇಲ್ಲಿ ರಚಿತವಾಗಿರುವ ಜೀವನಚರಿತ್ರೆ ಮತ್ತು ಕೃತಿಗಳಿಗೆ ಮೂಲಗಳು ಆಧಾರವಾದರೂ ಅವುಗಳ ವಿಷಯಕವಾದ ವಿಮರ್ಶೆಯು ಮಾತ್ರ ಶಾಸ್ತ್ರಿಗಳವರದೆ. ಈ ವಿಮರ್ಶೆಯಲ್ಲಿಯೂ ಹಿಂದೆ ತಿಳಿಸಿರುವ ಅವರ ವಿಮರ್ಶಾತತ್ತ್ವಗಳೇ ಪ್ರಧಾನ ಸಾಧನ. ಇದನ್ನು ಕುವೆಂಪು ಅವರು 'ಆದರ್ಶ ವಿಮರ್ಶಕ ಗ್ರಂಥ'ವೆಂದು ಮುನ್ನುಡಿಯಲ್ಲಿ ಮೆಚ್ಚಿಕೊಂಡಿದ್ದಾರೆ. ಇದಕ್ಕೆ ಭಾರತ ಸಾಹಿತ್ಯ ಅಕಾಡೆಮಿಯ ಪಾರಿತೋಷಕ ದೊರೆತಿರುವುದು ಕುವೆಂಪು ಅವರ ಮೆಚ್ಚಿಗೆಯನ್ನು ಸಾರ್ಥಕಗೊಳಿಸಿದೆ.

ಶಾಸ್ತ್ರಿಗಳವರ ಜೀವನಾಲೋಕವನ್ನು ಮುಗಿಸುವ ಮೊದಲು ಅವರ ಜೀವನದ ಪ್ರಧಾನಗುಣವಾದ ಕನ್ನಡದ ಭಾಷಾಭಿಮಾನವನ್ನು ಕುರಿತು ಎರಡು ಮಾತು ಗಳನ್ನು ತಿಳಿಸುವುದು ಪರಮಾವಶ್ಯಕ. ಹಿಂದೆಯೇ ತಿಳಿಸಿದಂತೆ ಅವರ ಜೀವನದ ಪ್ರಾರಂಭದಲ್ಲಿ ಅವರಿಗೆ ಕನ್ನಡವು ಪ್ರಧಾನ ವಿಷಯವಾಗಿರಲಿಲ್ಲ. ತಾವು ಕಲಿತ ಸಂಸ್ಕೃತ, ಇಂಗ್ಲಿಷ್, ಬಂಗಾಳಿ ಭಾಷೆಗಳಂತೆ ಕನ್ನಡವೂ ಒಂದು ವ್ಯಾಸಂಗದ ವಿಷಯ ಮಾತ್ರವಾಗಿತ್ತು. ೧೯೧೫ರಲ್ಲಿ ಹೇಗೋ ಕಾಲಕರ್ಮ ಸಂಯೋಗದಿಂದ ಕನ್ನಡದ ಅಧ್ಯಾಪಕರಾದ ಮೇಲೆ ತಮ್ಮ ಜೀವನದ ಆದರ್ಶವನ್ನು ಸ್ಪಷ್ಟಪಡಿಸಿ ಕೊಂಡು ಅದರ ಉದ್ಧಾರಕ್ಕೆ ದೀಕ್ಷಾಬದ್ಧರಾದರು. ಅಂದಿನಿಂದ ಆ ಸಾಧನೆಯ ಕಾರ್ಯದಲ್ಲಿ ಎಂದೂ ಆಲಸರಾಗಲಿಲ್ಲ. ಬೆಳಕು ಬಂದ ಕಡೆಗಳಲ್ಲೆಲ್ಲ ಕಣ್ಣನ್ನರಳಿಸಿ ಸಾರವತ್ತಾದ ಭಾಗಗಳನ್ನೆಲ್ಲ ಶೇಖರಿಸಿ ಕನ್ನಡ ಭಾಷೆಯನ್ನು ಪರಿಪುಷ್ಟಗೊಳಿ ಸಿದರು. ಸಂಸ್ಕೃತ ಇಂಗ್ಲಿಷ್ ಭಾಷೆಗಳಲ್ಲಿ ಮತ್ತಾರಿಗೂ ಕಡಿಮೆಯಿಲ್ಲದ ಪಾಂಡಿತ್ಯವೂ ಅಭಿಮಾನವೂ ಇದ್ದರೂ ಅವರು ಅನೇಕರ ಕಟುಟೀಕೆಗಳಿಗೆ ಪಾತ್ರ ರಾಗಬೇಕಾಯಿತು. ಆದರೂ ಯಾರಿಗೂ ಜಗ್ಗಲಿಲ್ಲ ಕುಗ್ಗಲಿಲ್ಲ. ತಮ್ಮ ನಿಲುವನ್ನು ನಿರ್ಧಾರಗೊಳಿಸಿ ಅವರ ಬಾಯನ್ನು ಮುಚ್ಚಿಸಿದರು. ಅಲ್ಲದೆ ಆಯಾ ಭಾಷೆಗಳ ಸ್ಥಾನಮಾನವನ್ನು ಬಹು ಸ್ಪಷ್ಟವಾಗಿ ಘೋಷಿಸಿದರು. ಅವರ ಪ್ರಕಾರ ನಮ್ಮ ಶಿಕ್ಷಣದಲ್ಲಿ ಇಂಗ್ಲಿಷಿಗೆ ಸೂಕ್ತಸ್ಥಾನವಿರಬೇಕು. 'ನಮ್ಮನ್ನು ನಾವು ತಿಳಿದು ಕೊಳ್ಳುವುದಕ್ಕೆ ಸಹಾಯಮಾಡಿದುದು ಇಂಗ್ಲಿಷು, ಇಂಗ್ಲಿಷಿನಿಂದ ಅಪಕಾರ

ವಾಗಿಲ್ಲ; ಉಪಕಾರವೇ ಆಗಿದೆ. ಆದರಿಂದ ಆಗಬೇಕಾದ ಉಪಯೋಗ ಇನ್ನೂ ಬಹಳವಿದೆ. ನಮ್ಮಲ್ಲಿ ನವ ಚೈತನ್ಯವನ್ನುಂಟುಮಾಡಿದ್ದು ಇಂಗ್ಲಿಷು, ಸ್ವಹಸ್ತಪರ ಹಸ್ತಗಳಿಂದ ನಮ್ಮ ಕಣಜವನ್ನು ತುಂಬುವ ಸಂಪತ್ತುಳ್ಳದ್ದು ಇಂಗ್ಲಿಷ್. ನಮಗೆ ಅದರ ಜ್ಞಾನವಾವಶ್ಯಕ. ಆದರೆ ಅದು ಮಾಧ್ಯಮಮಾತ್ರವಾಗಬಾರದು. ಏಕೆಂದರೆ ಮಾತೃಭಾಷೆಯ ಮೂಲಕ ಕಲಿತದ್ದೇ ಮೈಹತ್ತುವುದು. ಮಾತೃಭಾಷೆಯಲ್ಲಿ ಬರೆದದ್ದೇ ನಿಲ್ಲುವುದು. ಹಾಗೆಯೇ ಸಂಸ್ಕೃತವೂ ಕನ್ನಡಕ್ಕೆ ಆವಶ್ಯವಾಗಿರುವಷ್ಟು ಮಾತ್ರಬೇಕು. ಅದರಲ್ಲಿ ಅಮೂಲ್ಯವಾದ ವಿಷಯಗಳಿವೆ ನಿಜ. ಆ ವಿದ್ವತ್ತು ಬೇಕಾದವರು ಅದನ್ನು ಕಲಿಯಲಿ, ಅದರಲ್ಲಿ ಪಂಡಿತರಾಗಲಿ. ಜನಸಾಮಾನ್ಯರಿಗೆ ಆ ವಿದ್ವತ್ತು ಆವಶ್ಯಕವಾಗಿ ಬೇಕಾಗಿಲ್ಲ. ಅದಿಲ್ಲದಿದ್ದರೆ ಅವರು ಬಾಳುವುಕ್ಕಾಗು ವುದಿಲ್ಲವೆಂಬುದು ಸತ್ಯವಲ್ಲ. ಸಂಸ್ಕೃತ ಉಳಿದಿದ್ದರೆ, ಬೆಳೆದಿದ್ದರೆ ಅದಕ್ಕೆ ಬಹು ಪಾಲು ಕಾರಣ ನಾವಲ್ಲ, ವಿದೇಶೀಯರು, ತನ್ನ ತಾಯಿಭೂಮಿಯಲ್ಲಿ ದೊರಕದ ಗೌರವಸೌಲಭ್ಯಗಳನ್ನು ಸಂಸ್ಕೃತ ಹೊರದೇಶಗಳಲ್ಲಿ ಗಳಿಸಿದೆ. ಕನ್ನಡಕ್ಕೆ ಆ ಸೌಲಭ್ಯವಿಲ್ಲ. ಅದು ಬದುಕಬೇಕಾದರೆ ತನ್ನ ನಾಡಿನಲ್ಲಿ ತನ್ನವರಿಂದಲೇ ಬದುಕ ಬೇಕು.' ಅದಕ್ಕಾಗಿಯೇ ಅವರು ತಮ್ಮ ಕಳಕಳಿಯನ್ನು ಮುಂದಿನ ಮಾತಿನಲ್ಲಿ ತಿಳಿಯಪಡಿಸಿದ್ದಾರೆ. 'ಕನ್ನಡಿಗರೇ ನಿಮ್ಮ ಕನ್ನಡವನ್ನು ಇಂಡಿಯಾ ದೇಶದ ದಕ್ಷಿಣ ಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ಅದನ್ನು ನೀವು ಅಲಕ್ಷ್ಯಮಾಡಿದರೆ ಮಿಕ್ಕ ಯಾವ ದೇಶದ ಯಾವ ಜನರೂ ಅದನ್ನು ಎತ್ತಿ ಹಿಡಿಯಲಾರರು. ಅದು ಹೋದರೆ ಹೋಗಲಿ ಎನ್ನುವ ಹಾಗಿದ್ದರೆ ಈ ಕಡೆ ಬಂಗಾಳಾ ಕೊಲ್ಲಿಯಿದೆ; ಆ ಕಡೆ ಅರಬ್ಬೀ ಸಮುದ್ರವಿದೆ. ಗುಡಿಸಿಹಾಕಿ ಬಿಡಿ, ಇತರ ಭಾಷೆಗಳು ಆಕ್ರಮಿಸಿಕೊಂಡು ಬರಲಿ' ಹೀಗೆ ಕನ್ನಡದ ವಿಚಾರದಲ್ಲಿ ಶಾಸ್ತ್ರಿಗಳು ಅತೀವ ಮಮತೆಯನ್ನು ಬೆಳಸಿಕೊಂಡು ಕನ್ನಡಿಗರಿಗೆ ಕನ್ನಡದಿಂದಲೇ ಭುಕ್ತಿಮುಕ್ತಿಗಳೆಂದು ಸಾರಿದ್ದಾರೆ. ಆದರೆ ಇತ್ತೀಚೆಗೆ ಔತ್ತರೇಯರು ತಮ್ಮ ಅಧಿಕಾರ ಮತ್ತು ಧನಬಲಗಳಿಂದ ಹಿಂದೀ ಭಾಷೆಯ ಭಾರವನ್ನು ದಾಕ್ಷಿಣಾತ್ಯರ ಹೆಗಲಮೇಲೆ ಹೊರಸಲು ಯತ್ನಿಸಿದಾಗ ಶಾಸ್ತ್ರಿಗಳು ತಮ್ಮ ವೀರವಾಣಿಯಿಂದ ಹೀಗೆ ಮೊಳಗಿದರು; ಗುಡುಗಿದರು: 'ಕನ್ನಡಿಗರೇ ನೀವು ಮಾತ್ರ ನಿಮ್ಮ ಕನ್ನಡದ ಅಭಿಮಾನವನ್ನು ಕಾಪಾಡಿಕೊಳ್ಳಿ. ಮೋಹಕ್ಕೆ ಸಿಲುಕಬೇಡಿ; ವಿಚಾರಮಾಡಿ; ನಿಮ್ಮ ಕನ್ನಡದ ಅಭಿಮಾನವೆಂಬ ಕಾಮಧೇನು ಎಚ್ಚರವಾಗಿದ್ದರೆ, ಬ್ರಹ್ಮದಂಡ ಮುಂದೆ ಇದ್ದರೆ ನಮ್ಮನ್ನು ಯಾವ ವಿಶ್ವಾಮಿತ್ರ ಹಿಂದೀ ಪಡೆಯೂ ಏನೂ ಮಾಡ ಲಾರದು. ಕನ್ನಡಿಗರ ಅಭ್ಯುದಯ ದೃಷ್ಟಿಯಿಂದ ಕನ್ನಡಕ್ಕೆ ಪ್ರಥಮಸ್ಥಾನ ಬೇಕೆಂದು ಕೇಳಿದರೆ ಅದು ಹಿಂದಿಯ ದ್ವೇಷವೂ ಆಗುವುದಿಲ್ಲ. ಸಂಸ್ಕೃತದ ವೈರವೂ ಆಗದು. ಇಂಗ್ಲಿಷಿನ ಸೇಡೂ ಆಗದು.'

ಅಲ್ಲದೆ ಆ ಭಾಷೆಗಳ ಸ್ಥಾನಮಾನವನ್ನು ಕುರಿತು ಸ್ಪಷ್ಟಪಡಿಸಿದ್ದಾರೆ.

"ನಾವು ಮನುಷ್ಯರು, ಮನುಷ್ಯತ್ವವನ್ನು ಉಳಿಸಿಕೊಳ್ಳೋಣ. ಉತ್ತಮಪಡಿಸಿಕೊಳ್ಳೋಣ–ಎಂದರೆ ಮಿಕ್ಕ ಪ್ರಾಣಿಗಳ ಮೇಲೆ ದ್ವೇಷವೆಂದಲ್ಲ. ಹಸುಗಳನ್ನು ಸಾಕಿಕೊಳ್ಳೋಣ; ಹಾಲು ಕರೆದುಕೊಳ್ಳೋಣ. ಕುರಿಗಳನ್ನು ಸಾಕೋಣ; ಕಂಬಳಿಗಳನ್ನು ಮಾಡಿಕೊಳ್ಳೋಣ; ನಮ್ಮ ಕೆಲಸಕ್ಕೆ ಬೇಕಾದರೆ ಬೆಕ್ಕು ಮೊದಲಾದ ಇತರ ಪ್ರಾಣಿಗಳನ್ನು ಸಾಕಿಕೊಳ್ಳೋಣ. ಆದರೆ ಅವು ಎಲ್ಲಿರಬೇಕೋ ಅಲ್ಲಿರಲಿ. ಅವುಗಳನ್ನು ಊಟದ ಮನೆಗೆ ಬಿಟ್ಟರೆ ನಾವು ತಿನ್ನುವ ಅನ್ನವು ನಮ್ಮ ಮಕ್ಕಳು ಕುಡಿಯುವ ಹಾಲೂ ಅವುಗಳ ಪಾಲಾಗುತ್ತದೆ" ಈ ವೀರ ಸಾಧನೆಗಾಗಿಯೇ ಶಾಸ್ತ್ರಿಗಳು ತಾವು 'ಪ್ರಬುದ್ಧ ಕರ್ಣಾಟಕ'ವನ್ನು ಪ್ರಾರಂಭ ಮಾಡಿದಂದಿನಿಂದ ಇದಕ್ಕೆ ಸಂಬಂಧಪಟ್ಟ ಹಾಗೆ 'ದೇಶಭಾಷೆಯಲ್ಲಿ ಪಾಠಪ್ರವಚನಗಳು' 'ನಮ್ಮ ದೇಶದಲ್ಲಿ ಸಂಸ್ಕೃತದ ಸ್ಥಿತಿ ಮತ್ತು ಕನ್ನಡದ ಸ್ಥಿತಿ', ಕನ್ನಡದ ಪುಣ್ಯ', 'ಮೈಸೂರು ಮತ್ತು ಕನ್ನಡ', 'ಕನ್ನಡದ ಮಾತು ಒಂದಾಗಬೇಕು, ಶುದ್ಧವಾಗಿರಬೇಕು', 'ಕನ್ನಡದ ಮನೆಯಲ್ಲಿ ಕನ್ನಡಕ್ಕೆ ಸ್ಥಾನ', 'ಕನ್ನಡದ ಕೆಲಸಗಳಿಗೆ ಜನ, ಧನ, ಅಭಿಮಾನ', 'ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಮಾಧ್ಯಮ' ಎಂಬ ಶೀರ್ಷಿಕೆಗಳಲ್ಲಿ ಸಂಪಾದಕೀಯ ಲೇಖನಗಳನ್ನು ಬರೆದು ನಾಡಿನ ಜನರನ್ನು ಎಚ್ಚರಗೊಳಿಸಿ ಅದಕ್ಕೆ ಇಂದಿನ ಮಾನ್ಯಸ್ಥಾನಕ್ಕೆ ಬಹುಮಟ್ಟಿಗೆ ಕಾರಣರಾಗಿದ್ದಾರೆ.

ಶಾಸ್ತ್ರಿಗಳು ತಮ್ಮ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾದ ಮೇಲೆ ಮತ್ತಾರಿಗೂ ಸಾಧ್ಯವಿಲ್ಲದ ಏಕಾಂತಜೀವನವನ್ನೂ ನಡೆಸಿ ಶ್ರೇಷ್ಠ ಕೃತಿಗಳನ್ನು ನಿರ್ಮಿಸಿ ಕನ್ನಡ ಜನತೆಗೆ ತಮ್ಮ ಕಾಣಿಕೆಯನ್ನೂ ಇತ್ತರು. ಆದರೆ ಜನತೆಯಾಗಲಿ ಸರ್ಕಾರವಾಗಲಿ, ವಿಶ್ವವಿದ್ಯಾನಿಲಯವಾಗಲಿ ಅವರ ಪರಿಣತ ಪ್ರಜ್ಞೆಯನ್ನಾಗಲಿ ವಿಸ್ತಾರವಾದ ಲೋಕಾನುಭವವನ್ನಾಗಲಿ ಸೂಕ್ತರೀತಿಯಲ್ಲಿ ಉಪಯೋಗಿಸಿಕೊಳ್ಳದುದು ವಿಷಾದಕರ. ಅವರ ಜೀವಂತಕಾಲದಲ್ಲಿ ಅವರಿಗೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಮತ್ತು ಗೌರವ ಡಾಕ್ಟರೇಟ್ ಪದವಿ ಅಕಾಡೆಮಿ ಪ್ರಶಸ್ತಿ ಇವು ವಿನಾ ಮತ್ಯಾವ ಸೂಕ್ತಸನ್ಮಾನಗಳೂ ಸ್ಥಾನಮಾನಗಳೂ ಸಲ್ಲಲಿಲ್ಲ. ಆದರೂ ಶಾಸ್ತ್ರಿಗಳು ಅದೃಷ್ಟಶಾಲಿಗಳು. ಚೊಕ್ಕ ಜೀವನವನ್ನು ಬಾಳಿದರು. ನುಡಿದಂತೆ ನಡೆದರು. ತಮ್ಮ ಆದರ್ಶವನ್ನು ಸಾಧಿಸಿ ಬಹುಮಟಿಗೆ ಕೃತಕೃತ್ಯರಾದರು. ಆದರ್ಶ ಬಂಧು ವರ್ಗವನ್ನೂ ಬೆಳಸಿಕೊಂಡರು. ಬಿ.ಎಂ. ಶ್ರೀಕಂಠಯ್ಯ, ಎಂ. ಹಿರಿಯಣ್ಣನವರಂತಹ ಗುರುಗಳು; ಟಿ. ಎಸ್. ವೆಂಕಣ್ಣಯ್ಯ, ಡಿ. ವಿ. ಗುಂಡಪ್ಪ, ಮಾಸ್ತಿ, ಎಂ. ಆರ್. ಶ್ರೀ ಎಸ್. ಜಿ. ಶಾಸ್ತ್ರಿಗಳಂತಹ ಮಿತ್ರವರ್ಗ; ಎಸ್. ವಿ. ರಂಗಣ್ಣ. ಸಿ. ಕೆ. ವೆಂಕಟ ರಾಮಯ್ಯ, ಬಿ.ಎಸ್. ಮಾಧವರಾವ್, ಕುವೆಂಪು, ತೀ. ನಂ. ಶ್ರೀಯವರಂತಹ ಶಿಷ್ಯಪರಂಪರೆ; ಪ್ರಬುದ್ಧ ಕರ್ಣಾಟಕ ದಂತಹ ಪತ್ರಿಕೆ; 'ಸಂಸ್ಕೃತ ನಾಟಕ,' 'ವಚನಭಾರತ' ಮತ್ತು 'ಕಥಾಮೃತ'ದಂತಹ ಉದ್ಗ್ರಕೃತಿಗಳು– ಈ ಮಧ್ಯೆ

ವಿರಾಜಮಾನರಾದ ಶಾಸ್ತ್ರಿಗಳು ಪಾರ್ಥಿವ ಶರೀರವನ್ನು ವಿಸರ್ಜನೆ ಮಾಡಿದರೆ ತಾನೆ ಏನು? ಅವರದಿವ್ಯಜ್ಯೋತಿ ಕನ್ನಡದ ನಭೋಮಂಡಲದಲ್ಲಿ ಆಚಂದ್ರಾರ್ಕವಾಗಿ ಬೆಳಗುತ್ತ ಅವರ ಶಿಷ್ಯ ಮಿತ್ರ ಬಂಧುವರ್ಗಕ್ಕೆ ಕೈದೀವಿಗೆಯಾಗಿರುವುದರಲ್ಲಿ ಸಂದೇಹವಿಲ್ಲ.

**ಡಾ. ಎಚ್. ತಿಪ್ಪೇರುದ್ರಸ್ವಾಮಿ**

# ಹರಿಶ್ಚಂದ್ರ ಕಾವ್ಯಸಂಗ್ರಹ

ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರ ಸಾಹಿತ್ಯಸೇವೆ ಬಹುಮುಖವಾದುದು ; ಬಹುಕಾಲ ಉಳಿಯುವಂತಹುದು. ಯಾವ ಕೆಲಸವನ್ನು ಮಾಡಿದರೂ ಶ್ರದ್ಧೆಯಿಂದ ಮತ್ತು ಅಚ್ಚುಕಟ್ಟಾಗಿ ಮಾಡುವುದು ಅವರ ಜಾಯಮಾನ. ಅದನ್ನು ಅವರ ಒಂದೊಂದು ಕೃತಿಯೂ ಎತ್ತಿತೋರಿಸುತ್ತಿವೆ. ‘ವಚನಭಾರತ’, ‘ಬಂಕಿಮಚಂದ್ರ’ಗಳಂತಹ ಉದ್ಗ್ರಂಥಗಳಲ್ಲಿ ಅದು ವ್ಯಕ್ತವಾಗಿರುವಂತೆ, “ಹರಿಶ್ಚಂದ್ರ ಕಾವ್ಯಸಂಗ್ರಹ”ದಂತಹ ಸಂಪಾದಿತ ಕೃತಿಯಲ್ಲಿಯೂ ಸುಗೋಚರವಾಗಿದೆ.

೧೯೩೧ರಷ್ಟು ಹಿಂದೆಯೇ ಶ್ರೀ ಟಿ. ಎಸ್. ವೆಂಕಣ್ಣಯ್ಯನವರು ಮತ್ತು ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಸೇರಿ ರಾಘವಾಂಕನ ಹರಿಶ್ಚಂದ್ರಕಾವ್ಯದ ಸಂಗ್ರಹವನ್ನು ಸಿದ್ಧಗೊಳಿಸಿದರು. ಸಂಗ್ರಹಕಾರ್ಯವನ್ನು ಇವರಿಬ್ಬರೂ ಸೇರಿ ನಿರ್ವಹಿಸಿದ್ದರೂ ಇದಕ್ಕೆ ದೀರ್ಘವಾದ ಪೀಠಿಕೆ ಬರೆದಿರುವವರು ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರು. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಲು ತೊಡಗಿದ್ದ ಕನ್ನಡ ಗ್ರಂಥಮಾಲೆಯ ಮೊದಲನೆಯ ಪ್ರಕಟನೆಯಾಗಿ ಇದು ಹೊರಬಂದಿತು. “ಒಂದು ಕಾವ್ಯದ ಸೊಗಸನ್ನು, ಒಬ್ಬ ಕವಿಯ ಕವಿತಾಶಕ್ತಿಯನ್ನು ತಿಳಿಯಬೇಕಾದರೆ ಕಾವ್ಯವನ್ನು ಸಂಪೂರ್ಣವಾಗಿ ಓದಬೇಕು ; ಇಲ್ಲ, ಉತ್ತಮ ಭಾಗಗಳನ್ನೆಲ್ಲವಾದರೂ ನೋಡಬೇಕು. ಈ ಸಮಷ್ಟಿದೃಷ್ಟಿ ಸಾಧ್ಯವಾಗುವಂತೆ, ಪಾಠಕ್ಕೆ ಪ್ರಮಾಣ ಅತಿ ಮೀರದಂತೆ ಕಾವ್ಯಗಳನ್ನು ಅದರದರ ಸ್ವಭಾವಕ್ಕೆ ಉಚಿತವಾಗಿ ಸಂಗ್ರಹಿಸಿದರೆ ವಿದ್ಯಾರ್ಥಿಗಳಿಗೂ ಸಾಮಾನ್ಯಜನಕ್ಕೂ ಹಿತಕರವೂ ಪ್ರಯೋಜನಕರವೂ ಆಗಬಹುದೆಂಬ ನಂಬಿಕೆಯಿಂದ ಈ ಸಂಗ್ರಹಗಳನ್ನು ಮಾಡುತ್ತದೆ.”— ಎಂದು ಪ್ರಕಟನ ಸಮಿತಿಯ ಅಧ್ಯಕ್ಷರೂ ಮತ್ತು ಮಾಲೆಯ ಪ್ರಧಾನ ಸಂಪಾದಕರೂ ಆದ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಇಂತಹ ಸಂಗ್ರಹಗಳ ಉದ್ದೇಶವನ್ನು ಕುರಿತು ತಮ್ಮ ಮುನ್ನುಡಿಯಲ್ಲಿ ಸೂಚಿಸಿದ್ದಾರೆ. ಈ ಬಗೆಯ ಕೃತಿಗಳಲ್ಲಿ ಇದು ಮೊಟ್ಟಮೊದಲನೆಯದಾಗಿ ಮೂಡಿಬಂದು ಮುಂದೆ ಬಂದ ಸಂಗ್ರಹ ಕೃತಿಗಳಿಗೆಲ್ಲಾ ಮಾದರಿಯಾಗಿ ಪರಿಣಮಿಸಿತೆನ್ನಬಹುದು.

ಗ್ರಂಥಸಂಪಾದನೆ ಮತ್ತು ಸಂಗ್ರಹಕಾರ್ಯ ಸುಲಭವಲ್ಲ. ಐದು ಪ್ರತಿಗಳ ಸಹಾಯದಿಂದ (ನಾಲ್ಕು ಓಲೆಗರಿ ಪ್ರತಿಗಳು, ಒಂದು ಶ್ರೀ ರಾಮಾನುಜ ಅಯ್ಯಂಗಾರ್ ಅವರು ಅಚ್ಚುಹಾಕಿಸಿದುದು) ಇಲ್ಲಿನ ಗ್ರಂಥಪಾಠಗಳನ್ನು ಪರಿಷ್ಕಾರಗೊಳಿಸಿದ್ದಾರೆ. ಸಂಗ್ರಹಕಾರರ ಹೊಣೆಯನ್ನಂತೂ ಬಹಳ ಸಮರ್ಥವಾಗಿ ನಿರ್ವಹಿಸಿದ್ದಾರೆ. ಬಿ. ಎಂ. ಶ್ರೀ. ಹೇಳುವಂತೆ: "ಇದರಲ್ಲಿ ಮುಖ್ಯಗಮನ—ಕಥಾಸರಣಿ ಕೆಡಬಾರದು; ಒಟ್ಟು ಕಥೆಯ ಸ್ವಾರಸ್ಯಕ್ಕೆ ಪಾತ್ರನಿರೂಪಣಕ್ಕೆ ಭಂಗ ಬರಬಾರದು; ಅವಶ್ಯವಾದ ವರ್ಣನೆಯು ಮತ್ತು ವಿವರಣೆಯು ಸಾರ ಬಿಟ್ಟು ಹೋಗಬಾರದು; ಎಲ್ಲಕ್ಕಿಂತ ಪ್ರಾಧಾನ್ಯವಾದದ್ದು, ಕವಿಯ ವ್ಯಕ್ತಿತ್ವಕ್ಕೆ, ಆತನ ವಿಶೇಷಪ್ರತಿಭೆಗೆ ಲೋಪಬರಕೂಡದು. ಇಷ್ಟನ್ನು ಸಾಧಿಸುವುದು ಸಂಗ್ರಹಕಾರನ ಕರ್ತವ್ಯ." ಇದು ಬಹಳ ಕಷ್ಟಕರವಾದ ಕೆಲಸ. ಅದರಲ್ಲಿಯೂ ಕವಿ ಹೆಚ್ಚು ಶಕ್ತನಾದಷ್ಟೂ ಸಂಗ್ರಹಕಾರ್ಯ ಇನ್ನೂ ಹೆಚ್ಚು ಕಠಿಣವಾಗುತ್ತದೆ. ನೀರಸವಾದ ಭಾಗಗಳನ್ನು ಯಾವ ಯೋಚನೆಯೂ ಇಲ್ಲದೆ ಕೈಬಿಡಬಹುದು. ಆದರೆ ಅನೇಕ ವೇಳೆ ಯಾವುದನ್ನು ಬಿಡಬೇಕು, ಯಾವುದನ್ನು ಆರಿಸಿಕೊಳ್ಳಬೇಕೆಂಬ ವಿಚಾರದಲ್ಲಿ ಆತ ಧರ್ಮಸಂಕಟಕ್ಕೆ ಒಳಗಾಗಬೇಕಾಗುತ್ತದೆ. ಕೆಲವು ವರ್ಣನೆಗಳು ಎಷ್ಟೇ ಸುಂದರವಾಗಿದ್ದರೂ ಕಥಾದೃಷ್ಟಿಯೇ ಪ್ರಧಾನವಾಗಿರುವಾಗ ಅವುಗಳನ್ನು ಬಿಡುವುದು ಅನಿವಾರ್ಯವಾಗುತ್ತದೆ. ಹೀಗೆ ಕೈಬಿಡುವಾಗ ಮತ್ತು ಆರಿಸುವಾಗ ಸಂಗ್ರಹಕಾರನ ಸಹೃದಯತೆ ಅಭಿರುಚಿಗಳು ವ್ಯಕ್ತವಾಗುವುದಲ್ಲದೆ, ಆತನ ಔಚಿತ್ಯ ದೃಷ್ಟಿಗೂ ಅದು ಮಾನದಂಡವಾಗುತ್ತದೆ. ಕವಿಯ ಆಶಯಕ್ಕೆ ಭಂಗಬಾರದಂತೆ, ಕಾವ್ಯದ ಮಹತ್ವ ಉಜ್ವಲವಾಗಿ ಎದ್ದುತೋರುವಂತೆ ಮಾಡುವುದರಲ್ಲಿ ಸಂಗ್ರಹ ಕಾರ್ಯದ ಸಾರ್ಥಕತೆಯಿದೆ—ಎಂದು ಹೇಳಬಹುದು. ಈ ಒರೆಗಲ್ಲಿನ ಮೇಲೆ ಉಜ್ಜಿ ನೋಡಿದರೆ ಹರಿಶ್ಚಂದ್ರ ಕಾವ್ಯಸಂಗ್ರಹದ ಸಾರ್ಥಕತೆ ಮನದಟ್ಟಾಗುತ್ತದೆ. ವಜ್ರವನ್ನು ಉಜ್ಜಿ ಅದಕ್ಕೆ ಹೊಳಪನ್ನು ಕೊಡುವಂತೆ ರಾಘವಾಂಕನ ಈ ಕೃತಿಯನ್ನು ಪಂಡಿತವರೇಣ್ಯರಾದ ಈ ಸಹೃದಯರಿಬ್ಬರು ಬಹಳ ಸಮರ್ಪಕವಾದ ರೀತಿಯಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ.

ಹರಿಶ್ಚಂದ್ರಕಾವ್ಯ, ಮೂಲದಲ್ಲಿ ೧೪ ಸ್ಥಲಗಳಿಂದಲೂ ಮತ್ತು ಸು. ೭೫೦ ಪದ್ಯಗಳಿಂದಲೂ ಕೂಡಿದ ಕೃತಿ. ಇದನ್ನು ಸಂಗ್ರಹಕಾರರು ೩೨೨ ಪದ್ಯಗಳಿಗೆ ಇಳಿಸಿದ್ದಾರೆ. ಮೂಲದ ಸ್ಥಲವಿಭಾಗವನ್ನು ಕೈಬಿಟ್ಟು, ವಿಷಯಾನುಗುಣವಾಗಿ ಒಂಬತ್ತು ಆಶ್ವಾಸಗಳಾಗಿ ವಿಭಾಗಿಸಿ ಅವುಗಳನ್ನು ಕ್ರಮವಾಗಿ ಹೀಗೆ ಹೆಸರಿಸಿದ್ದಾರೆ: ಕಥಾರಂಭ, ವಸಿಷ್ಠ ವಿಶ್ವಾಮಿತ್ರರ ವಿವಾದ, ಮೃಗಯಾಪ್ರಸಂಗ, ವಿಶ್ವಾಮಿತ್ರಾಶ್ರಮ ಪ್ರವೇಶ, ರಾಜ್ಯಸರ್ವಸ್ವ ದಾನ, ರಾಜ್ಯಸಮರ್ಪಣ, ಪತ್ನೀಪುತ್ರವಿಕ್ರಯ ಆತ್ಮವಿಕ್ರಯ, ರೋಹಿತಾಶ್ವನ ಮರಣ ಚಂದ್ರಮತಿಯ ದುಃಖ, ವಿಶ್ವೇಶ್ವರ ಸಾಕ್ಷಾತ್ಕಾರ.

ಸಂಗ್ರಹಕಾರ್ಯದಲ್ಲಿ ಅವರು ತೋರಿಸಿರುವ ಕುಶಲತೆ ಮೆಚ್ಚತಕ್ಕದ್ದು. ಕಾವ್ಯ ಸ್ವಾರಸ್ಯವನ್ನು ಕುಗ್ಗಿಸುವ, ಇಲ್ಲವೇ ಅದರ ಘನತೆಗೆ ಕುಂದನ್ನುಂಟುಮಾಡುವ ರೀತಿಯಲ್ಲಿ ಕತ್ತರಿಪ್ರಯೋಗವನ್ನು ಅವರು ಮಾಡಿಲ್ಲ. ಅದಕ್ಕೆ ಬದಲಾಗಿ ಅನಾವಶ್ಯಕವಾದ ವರ್ಣನೆಗಳನ್ನು ಔಚಿತ್ಯ ಮೀರದಂತೆ ತೆಗೆದುಹಾಕಿದ್ದಾರೆ. ರಾಘವಾಂಕನ ಶಕ್ತಿಗೆ ಸಾಣೆಯನ್ನು ಹಿಡಿದಂತಾಗಿದೆ ಇವರ ಸಂಗ್ರಹ. ಸಿದ್ಧರಾಮ ಚಾರಿತ್ರದಲ್ಲಿ ತೋರಿಸಿರುವಂತಹ ದಿಟ್ಟತನವನ್ನು ರಾಘವಾಂಕ ಈ ಕಾವ್ಯದ ನಡೆಯಲ್ಲಿ ತೋರಿಸಿಲ್ಲ. ಬಹುಶಃ ಇದು ಆತನ ಮೊದಲ ಕೃತಿಯಾಗಿದ್ದಿರಬೇಕು. ಚಂಪೂ ಶೈಲಿಯನ್ನು ಬಿಟ್ಟು ಷಟ್ಪದಿಯಲ್ಲಿಯೇ ಮಹಾಕಾವ್ಯವನ್ನು ರಚಿಸುವ ಹೊಸಮಾರ್ಗದಲ್ಲಿ ನಡೆಯುವ ಧೈರ್ಯಮಾಡಿದ್ದಾನೆ. ಅದರ ಜೊತೆಗೆ ಅಷ್ಟಾದಶ ವರ್ಣನೆಗಳನ್ನೂ ಬಿಟ್ಟರೆ ಕಾವ್ಯಕ್ಕೆ ಮಾನ್ಯತೆ ಲಭಿಸಲಾರದೆಂಬ ಅಳುಕು ಆತನಿಗಿರುವಂತಿದೆ. ಆದುದರಿಂದಲೇ ಚಂದ್ರಿಕಾವರ್ಣನೆ, ಜಲಕೇಳಿ, ವನವಿಹಾರ, ಸೂಳೆಗೇರಿ ಮೊದಲಾದ ವರ್ಣನೆಗಳು ದೀರ್ಘವಾಗಿಯೇ ಬರುತ್ತವೆ. ಅವುಗಳನ್ನು ಸುಲಭವಾಗಿಯೇ ಸಂಗ್ರಹಕಾರರು ಕೈಬಿಟ್ಟಿದ್ದಾರೆ. ಆ ವರ್ಣನೆಗಳಲ್ಲಿ ಸೊಗಸಿಲ್ಲ ವೆಂದಲ್ಲ. ಅಲ್ಲಲ್ಲಿ ರಾಘವಾಂಕನ ಪ್ರತಿಭೆ ಮಿಂಚುತ್ತದೆ. ಉದಾಹರಣೆಗೆ ಚೆಂದೆಂಗನ್ನು ವರ್ಣಿಸುವ ಈ ಪದ್ಯವನ್ನು ನೋಡಬಹುದು :

" ಹಂಗ ಮಗುಚುವೆನೆಂದು ಭೂಮಿ ಕೈನೀಡಿ ಮೇ
ಘಂಗಳಿಗೆ ಕುಡುವಮೃತಕಲಶ ಸಂಕುಳವೊ ಗಗ
ನಾಂಗಣದೊಳುಱೆ ಸುೞಿವ ವಿದ್ಯಾಧರಾವಳಿಗೆ ವಸಂತನಿಟ್ಟರವಟಿಗೆಯೋ |
ಇಂಗಡಲ ಬಿಡೆ ಕಡೆವಂದು ಹುಟ್ಟಿದ ಪದಾ
ರ್ಥಂಗಳಂ ತಮತಮಗೆ ಕೊಂಡೊಯ್ಯುತಿರೆ ಭೂಲ
ತಾಂಗಿ ತೆಗೆದೆತ್ತಿಟ್ಟ ರಸಕಳಶವೋ ಎನಿಸಿ ಪಣ್ತ ಚೆಂದೆಂಗೆಸೆದುವು ‖ " (೩-೩೧)

ಮೇಘಗಳಿಂದ ಉಪಕೃತವಾಗಿ ಬೆಳೆದ ತೆಂಗಿನ ಮರಗಳು, ಅವುಗಳ ಹಂಗನ್ನು ಇಟ್ಟುಕೊಳ್ಳದೆ ತಿರುಗಿ ಕೊಡುತ್ತಿರುವ ಅಮೃತಕಲಶಗಳೋ ಎಂಬಂತೆ ತೆಂಗಿನ ಕಾಯಿಗಳು ಮರದಲ್ಲಿ ಕಾಣಿಸಿದುವು ಎಂಬ ಕಲ್ಪನೆ ಪರಿಭಾವಿಸತಕ್ಕದ್ದು. ಅಂತೆಯೇ ' ಹಂಗ ಮಗುಚು ' ಎಂಬ ಪ್ರಯೋಗವೂ ಗಮನಾರ್ಹ. ಹಂಗನ್ನು ತಿರುಗಿಸಿಕೊಡು ಎಂಬರ್ಥದಲ್ಲಿ ' ಮಗುಚು ' ಎಂಬ ಅಚ್ಚಗನ್ನಡ ಶಬ್ದದ ಬಳಕೆ ಇಲ್ಲಿ ಬಂದಿದೆ. ರಾಘವಾಂಕ ಇಂತಹ ದೇಶ್ಯಶಬ್ದಗಳನ್ನು ಬಳಸುವುದರಲ್ಲಿ ಪರಿಣತ. ಇಂತಹ ಕೆಲವು ವರ್ಣನೆಗಳು ಸಂಗ್ರಹದಲ್ಲಿ ಬಿಟ್ಟುಹೋಗಿವೆ. ಇಡಿಯಾಗಿ ಆ ವರ್ಣನೆಯ ಭಾಗಗಳನ್ನೇ ಕೈಬಿಟ್ಟಿರುವುದರಿಂದ ಇಂತಹ ಪದ್ಯಗಳೂ ಬಿಟ್ಟುಹೋಗುವುದು ಅನಿವಾರ್ಯ. ದೀರ್ಘವಾದ ಬೇಟೆಯ ವರ್ಣನೆಯಲ್ಲಿ ಕೇವಲ ಕೆಲವು ಪದ್ಯಗಳನ್ನು ಮಾತ್ರ ಉಳಿಸಿಕೊಳ್ಳಲಾಗಿದೆ; ಕಥೆಯೊಡನೆ ಅದು ನೇರವಾಗಿ ಸಂಬಂಧಿಸಿರುವುದರಿಂದ ಅದನ್ನು ಸಂಪೂರ್ಣವಾಗಿ ಕೈಬಿಡಲು ಆಗುವಂತಿಲ್ಲ.

ಕೆಲವು ಒಳ್ಳೆಯ ಪದ್ಯಗಳನ್ನು ಆರಿಸಿದ್ದಾರೆ. ಅವುಗಳು ಸಂಗ್ರಹಕಾರರ ಔಚಿತ್ಯ ದೃಷ್ಟಿ ಮತ್ತು ಸಹೃದಯತೆಗಳಿಗೆ ಸಾಕ್ಷಿಯಾಗಿವೆ.

ಪ್ರಾರಂಭದಲ್ಲಿ ಬರುವ ದೀರ್ಘವಾದ ವರ್ಣನೆಗಳನ್ನು ಬಿಟ್ಟರೆ ಕಥೆ ಮುಂದುವರಿದಂತೆಲ್ಲಾ ರಾಘವಾಂಕನ ಶಕ್ತಿ, ಸಾಂದ್ರವಾಗುತ್ತಾ ಹೋಗುತ್ತದೆ. ಸನ್ನಿವೇಶ ನಿರ್ಮಾಣ, ಪಾತ್ರರಚನೆ ರಸಪ್ರತಿಪಾದನೆಗಳು ಮುಖ್ಯವಾಗಿ ಪರಿಣಮಿಸಿ ಆ ಭಾಗಗಳಲ್ಲಿ ಪದ್ಯಗಳನ್ನು ಬಿಡುವುದೇ ಅಸಾಧ್ಯವೆಂಬಂತಾಗುತ್ತದೆ. ಉದಾಹರಣೆಗೆ ಹೊಲತಿಯರ ಸಂವಾದ, ಪತ್ನೀಪುತ್ರ ವಿಕ್ರಯ, ಆತ್ಮವಿಕ್ರಯ ಮೊದಲಾದ ಸನ್ನಿವೇಶಗಳನ್ನು ಹೇಳಬಹುದು. ಇಲ್ಲಿ ಬಿಟ್ಟಿರುವ ಪದ್ಯಗಳ ಸಂಖ್ಯೆಯೇ ಕಡಮೆ; ಕಥೆಗೂ ಪಾತ್ರಗಳಿಗೂ ಯಾವ ಕುಂದೂ ಆಗದಂತೆ ಸಂಗ್ರಹಕಾರರು ಇಲ್ಲಿ ಎಚ್ಚರಿಕೆವಹಿಸಿದ್ದಾರೆ. ಆದರೆ ಒಂದು ಸನ್ನಿವೇಶದಲ್ಲಿ ಮಾತ್ರ ಇನ್ನೊಂದೆರಡು ಪದ್ಯಗಳನ್ನು ಉಳಿಸಿಕೊಳ್ಳುವುದು, ಅಗತ್ಯವಾಗಿತ್ತೆನ್ನಿಸುತ್ತದೆ. ಅದೆಂದರೆ ಹೊಲತಿಯರನ್ನು ಮದುವೆಯಾಗೆಂದು ಹಟಹಿಡಿದ ವಿಶ್ವಾಮಿತ್ರನಿಗೆ ಹರಿಶ್ಚಂದ್ರ, ರಾಜ್ಯವನ್ನೇ ದಾನವಾಗಿ ಕೊಡಬೇಕಾಗಿ ಬಂದ ಪ್ರಸಂಗ. ಸಂಗ್ರಹದಲ್ಲಿ ಆ ಸನ್ನಿವೇಶ ಈ ಎರಡು ಪದ್ಯಗಳಲ್ಲಿ ಮುಗಿಯುತ್ತದೆ:

> "ಎಡವಿಡದೆ ಬೇಡಿ ಕಾಡುವಿರಾದಡಿನ್ನು ಕೇಳ್
> ಕಡೆಗೆನ್ನ ಸರ್ವರಾಜ್ಯವನಾದಡಂ ನಿಮಗೆ
> ಕೊಡ ಹಡೆವೆನ್ನೈಸಲ್ಲದೀಯೊಂದು ತೇಜಮಂ ಕೊಡೆನೆಂದು ಭೂಪಾಲನು ।
> ನುಡಿಯಲು ತಥಾಸ್ತು ಹಡೆದೆಂ ಹಡೆದೆನವನೀಶ
> ರೊಡೆಯ ದಾನಿಲಲಾಮ ಸತ್ಯಾವತಂಸ ಎಂ
> ದೆಡೆವಿಡದೆ ಹೊಗಳಿ ಬಿಡದಾಘೋಷಿಸಿದನು ಸಂಗಡದ ಮುನಿವರರು ಸಹಿತ ॥"

> "ಇಂತೆನ್ನ ಕಾಟಕ್ಕೆ ಬೇಸತ್ತು ನೀನೊಬ್ಬ
> ನೆಂತಕ್ಕೆ ಕೊಟ್ಟನೆಂದಡೆ ಬಿಡೆನು ನೃಪ ನಿನ್ನ
> ಕಾಂತೆ ಸುತ ಮಂತ್ರಿಗಳ ಮತ ಬೇಹುದವರುಗಳ ನೊಡಬಡಿಸು ಬೇಗವೆನಲು ।
> ಭ್ರಾಂತ ಮುನಿ ನಾನೊಬ್ಬ ಸಾಲದೇ ಸ್ತ್ರೀಬಾಲ
> ರೆಂತಾದಡಂ ನುಡಿವರವರಿಚ್ಛೆಯೇ ಎನ್ನ
> ಸಂತಸದಿ ಕೋಯೆಂದಡದಱ ಮಾತಂ ಬಿಟ್ಟು ಧಾರೆಯಂ ತಾ ಎಂದನು"

—ಹೀಗೆ ಈ ಎರಡು ಪದ್ಯಗಳಲ್ಲಿ ರಾಜ್ಯಸರ್ವಸ್ವ ದಾನದ ವಾಗ್ದಾನ ಮುಗಿದು ಹೋಗಿದೆ. ಆದರೆ ಮೂಲದಲ್ಲಿ ಇಷ್ಟು ಸುಲಭವಾಗಿ ಇದು ಮುಗಿಯುವುದಿಲ್ಲ. ಈ ಎರಡು ಪದ್ಯಗಳಿಗೂ ಮಧ್ಯೆ ೧೧ ಪದ್ಯಗಳಷ್ಟು ದೀರ್ಘವಾದ ಸಂಭಾಷಣೆ ಅವರಿಬ್ಬರಲ್ಲಿ ನಡೆಯುತ್ತದೆ: "ಕಡೆಗೆ ರಾಜ್ಯವನ್ನಾದರೂ ಕೊಟ್ಟೇನೇ ಹೊರತು ನನ್ನ ತೇಜವನ್ನು ಕೊಡೆನು" ಎಂಬ ಹರಿಶ್ಚಂದ್ರನ ಮಾತಿನಿಂದ ದಾನದ ವಾಗ್ದಾನವನ್ನೇ ಪಡೆದವನಂತೆ "ದಾನಿಗಳರಸ" ಎಂದು ಅವನನ್ನು ಹೊಗಳಿ: "ತನಗುಳ್ಳ

ಸರ್ವರಾಜ್ಯವನು, ವಿಶ್ವಾಮಿತ್ರಮುನಿಗೆ ಧಾರೆಯನೆಱೆದನವನೀಶನೆಂದು ಮೇದಿನಿಯೊಳೆಲ್ಲ ಸಾಱಿ" ಎಂದು ಚಾರರನ್ನು ಕಳುಹಿಸುತ್ತಾನೆ. ಆದನ್ನು ಕಂಡ ಹರಿಶ್ಚಂದ್ರನಿಗೆ ಆಶ್ಚರ್ಯ: "ಸುತ್ತಿ ಜಗದೊಳು ಹರಿದು ಸಾಱುವಂತಾಗಿ ನಾನಿತ್ತುದೇನಯ್ಯ" ಎಂದು ಕೇಳುತ್ತಾನೆ ಆತ. "ನಿನಗುಳ್ಳುದೆಲ್ಲವಂ ವಿತ್ತವಂಚನೆಯಿಲ್ಲದಿತ್ತೆ" ಎನ್ನುತ್ತಾನೆ ವಿಶ್ವಾಮಿತ್ರ. ಅದಕ್ಕೆ ಹರಿಶ್ಚಂದ್ರ ಒಪ್ಪದೆ: "ಮೊದಲು ತೊಡಗಿ ನಾನಿತ್ತುದೇ ಇಲ್ಲ . . . ಕಡೆಗೆನ್ನ ಸರ್ವರಾಜ್ಯವನಾದೊಡಂ ನಿಮಗೆ ಕುಡಹಡೆವೆನ್ನೆಸಲ್ಲದೀ ಕೆಟ್ಟತೇಜಮಂ ಕುಡೆನೆನುತ್ತಾಕ್ಷೇಪದಿಂ ನಗುತ ಕೊಟ್ಟೆನಲ್ಲದೆ ಕೊಟ್ಟುದಿಲ್ಲ" ಎಂದು ಸ್ಪಷ್ಟಪಡಿಸುತ್ತಾನೆ. ಅದಕ್ಕೆ ಕುಗ್ಗದೆ ವಿಶ್ವಾಮಿತ್ರ: "ನೀಂ ನಗುತ ಕೊಟ್ಟಡೆ ನಗುತ ಕೊಂಡೆವು." ಇವನ ಚಮತ್ಕಾರಕ್ಕೆ ಹರಿಶ್ಚಂದ್ರ ಮಣಿಯದೆ "ಕೊಂಬುದರಿದಲ್ಲ, ಕೊಡೆನ್" ಎನ್ನುತ್ತಾನೆ. "ಬಲತ್ಕಾರದಿಂದೆನ್ನ ಭೂಮಂಡಲವ ಕೊಂಬುದುಚಿತವೇ?" ಎಂದು ನಾನಾ ರೀತಿಯಲ್ಲಿ ಹೇಳಿದರೂ ವಿಶ್ವಾಮಿತ್ರನದು ಒಂದೇ ಹಟವಾಗುತ್ತದೆ. ಮತ್ತು ಕೊನೆಯಲ್ಲಿ: "ಇಂದೆನಗೆ ಕೊಟ್ಟದಾನದ ಭೂಮಿಗಳುಪುವುದು ಕುಂದಲ್ಲ. ನಿನ್ನ ಮಾತಂ ನಂಬಿದೆನ್ನದೇ ಕುಂದು. ತಿರಿವರಿಗೇಕೆ ರಾಜ್ಯ, ನಿನ್ನನುವ ನೋಡಿದೆವೈಸೆ" ಎಂದು ವ್ಯಂಗ್ಯವಾಗಿ ಹೀಯಾಳಿಸುತ್ತಾನೆ. ಆಗ ಹರಿಶ್ಚಂದ್ರ ಮನಸ್ಸಿನಲ್ಲಿಯೇ ನಿರ್ಧರಿಸಿ: "ನಿನಗೆ ರಾಜ್ಯದ ಮೇಲೆ ಮನವಿನಿತು ಘನವಾದೊಡೆ ಇದೆಕೋ ಮನಃಪೂರ್ವಕಂ ಕೊಟ್ಟೆನ್" ಎನ್ನುತ್ತಾನೆ. ಆಗ "ಇಂದೆನ್ನ ಕಾಟಕ್ಕೆ ಬೇಸತ್ತು" ಎಂಬ ಪದ್ಯ ಬರುತ್ತದೆ. ಹೀಗೆ ಹುಡುಗಾಟಕ್ಕಾಗಿ ಹೇಳಿದ ಮಾತು ರಾಜ್ಯದಾನದಲ್ಲಿಯೇ ಪರ್ಯವಸಾನವಾಗಬೇಕಾಗಿ ಬಂದ ಸನ್ನಿವೇಶವನ್ನು ರಾಘವಾಂಕ ಬಹಳ ಚೆನ್ನಾಗಿ ಚಿತ್ರಿಸಿದ್ದಾನೆ. ಮೂಲದಲ್ಲಿರುವ ಈ ಭಾಗ ಸಂಗ್ರಹದಲ್ಲಿ ಬಿಟ್ಟುಹೋಗಿರುವುದು ಹರಿಶ್ಚಂದ್ರನ ಪಾತ್ರಚಿತ್ರಣದ ದೃಷ್ಟಿಯಿಂದ ಸೂಕ್ತವೆಂದು ತೋರುವುದಿಲ್ಲ. ಇಲ್ಲಿನ ಇನ್ನೂ ಕೆಲವು ಪದ್ಯಗಳನ್ನು ಸಂಗ್ರಹದಲ್ಲಿ ಉಳಿಸಿಕೊಂಡಿದ್ದರೆ ರಾಘವಾಂಕನ ಆಶಯ ಹೆಚ್ಚು ಸ್ಪಷ್ಟವಾಗಲು ಸಹಾಯಕವಾಗುತ್ತಿತ್ತೆನ್ನಬಹುದು. ಇದೊಂದನ್ನು ಬಿಟ್ಟರೆ ಸಂಗ್ರಹಕಾರ್ಯ ತುಂಬಾ ಅಚ್ಚುಕಟ್ಟಾಗಿದೆ. ರಾಘವಾಂಕನ ಪ್ರತಿಭೆಯ ಪ್ರಕಾಶನಕ್ಕೆ ಸಹಕಾರಿಯಾಗುವಂತೆ ನಿರ್ವಹಿಸಿರುವ ಸಂಗ್ರಹಕಾರ್ಯ ಸ್ತುತ್ಯವಾದುದು.

ಇನ್ನು ಈ ಸಂಗ್ರಹದ ಪೀಠಿಕೆ. ಇಂತಹ ಸಂಗ್ರಹ ಗ್ರಂಥಗಳು "ಮೂಲ ಪ್ರತಿಗಳನ್ನು ಪರಿಶೋಧಿಸಿದ ಶುದ್ಧ ಪಾಠಗಳನ್ನು ಒಳಗೊಂಡು ಪೀಠಿಕೆ, ಶಬ್ದಕೋಶ, ಆವಶ್ಯಕವಾದ ಟಿಪ್ಪಣಿಗಳೊಡನೆ ಕೂಡಿರಬೇಕು" ಎಂದು ಬಿ.ಎಂ.ಶ್ರೀ. ಅವರು ಇವುಗಳ ಸ್ವರೂಪವನ್ನು ಮುನ್ನುಡಿಯಲ್ಲಿ ಮೊದಲೇ ನಿರ್ದೇಶಿಸಿದ್ದಾರೆ. ಆ ಎಲ್ಲ ಅಂಶಗಳನ್ನೂ ಒಳಗೊಂಡು ಈ ಗ್ರಂಥ ರೂಪಿತವಾಗಿದೆ. ಇದಕ್ಕೆ ದೀರ್ಘವಾದ ಮತ್ತು ವಿದ್ವತ್ಪೂರ್ಣವಾದ ಪೀಠಿಕೆಯನ್ನು ಶ್ರೀ ಎ. ಆರ್.

ಕೃಷ್ಣಶಾಸ್ತ್ರಿಗಳೇ ಬರೆದಿದ್ದಾರೆ. ಅವರ ಈ ಮುನ್ನುಡಿ ಪ್ರಾಚೀನ ಕಾವ್ಯಗಳ ಅಧ್ಯಯನಕ್ಕೆ ಒಂದು ದಿಕ್ಸೂಚಿಯಾಯಿತು; ವಿಮರ್ಶೆಗೆ ಪ್ರಚೋದನೆಯಾಯಿತು. ಇದೇ ಮಾರ್ಗದಲ್ಲಿ ನಡೆದ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳವರ ಪ್ರಭುಲಿಂಗಲೀಲೆಯ ಸಂಗ್ರಹ, ಶ್ರೀ ಡಿ. ಎಲ್. ನರಸಿಂಹಾಚಾರ್ಯರ ಪಂಪ ರಾಮಾಯಣ ಸಂಗ್ರಹ, ಶ್ರೀ ಕೆ. ವಿ. ರಾಘವಾಚಾರ್ಯರ ಯಶೋಧರ ಚರಿತ್ರೆಯ ಸಂಗ್ರಹ–ಈ ಮೊದಲಾದ ಸಂಗ್ರಹ ಗ್ರಂಥಗಳನ್ನೂ ಅವುಗಳ ವಿದ್ವತ್‌ಪೂರ್ಣ ವಾದ ಮುನ್ನುಡಿಯನ್ನೂ ಇಲ್ಲಿ ಸ್ಮರಿಸಿಕೊಳ್ಳಬಹುದು.

ಪೀಠಿಕೆಯ ಪ್ರಾರಂಭದಲ್ಲಿಯೇ ಕವಿ ಮತ್ತು ಕಾಲ ಇವುಗಳನ್ನು ಕುರಿತ ವಿವೇಚನೆ ಬರುತ್ತದೆ. ರಾಘವಾಂಕನ ಕಾಲದ ವಿಚಾರದಲ್ಲಿ ಶ್ರೀಗಳಾದ ರಾ. ನರಸಿಂಹಾಚಾರ್ಯ, ವೆಂಕಟಸುಬ್ಬಯ್ಯ, ಕಿಟ್ಟೆಲ್–ಮೊದಲಾದವರು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಹೇಳಿ ಅಷ್ಟರಿಂದ ತೃಪ್ತರಾಗದೆ ವಿವಿಧ ಮೂಲಗಳಿಂದ ಆತನ ಕಾಲವನ್ನು ನಿರ್ಧರಿಸುವ ಪ್ರಯತ್ನವನ್ನು ಕೈಕೊಂಡಿದ್ದಾರೆ. ರಾಘವಾಂಕನ ಕೃತಿಗಳಲ್ಲಿಯೇ ಸೂಚಿತವಾಗಿರುವ ಅಂಶಗಳು ಮತ್ತು ರಾಘವಾಂಕ ಚಾರಿತ್ರ, ಚೆನ್ನಬಸವ ಪುರಾಣ, ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ, ಗುರುರಾಜ ಚಾರಿತ್ರ–ಮೊದಲಾದ ಗ್ರಂಥಗಳಿಂದಲೂ ಈ ವಿಷಯವನ್ನು ಚರ್ಚಿಸಿ, ವಿವಿಧ ಅಭಿಪ್ರಾಯಗಳನ್ನು ವಿಮರ್ಶಿಸಿ ಕ್ರಿ. ಶ. ೧೨೮೦ರಲ್ಲಿ ಈ ಕವಿ ಇದ್ದಿರಬೇಕೆಂಬ ಸ್ಥೂಲವಾದ ಅಭಿಪ್ರಾಯಕ್ಕೆ ಬಂದಿದ್ದಾರೆ.

ಅನಂತರ ಕವಿಯ ಮತ ಮತ್ತು ಕೃತಿಗಳನ್ನು ಪ್ರಸ್ತಾಪಿಸಲಾಗಿದೆ. ಸಿದ್ಧರಾಮ ಚಾರಿತ್ರ, ಸೋಮನಾಥ ಚರಿತ್ರೆ, ಹರಿಶ್ಚಂದ್ರಕಾವ್ಯಗಳು ರಾಘವಾಂಕನ ಪ್ರಕಟಿತ ಕೃತಿಗಳು. ವೀರೇಶ ಚರಿತೆ ಆ ಕಾಲಕ್ಕೆ ಇನ್ನು ಪ್ರಕಟವಾಗಿರಲಿಲ್ಲ. ಈಚೆಗೆ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಅದನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಆತನ ಇನ್ನು ಎರಡು ಕೃತಿಗಳು, ಹರಿಹರ ಮಹತ್ವ, ಶರಭ ಚಾರಿತ್ರಗಳು, ಇನ್ನು ಅಲಭ್ಯವಾಗಿವೆ. ಇಲ್ಲಿ ಎ. ಆರ್. ಕೃ. ಅವರು ಸಿದ್ಧನಂಜೇಶನ ರಾಘವಾಂಕ ಚರಿತ್ರೆಯ ನೆರವಿನಿಂದ ಅಪ್ರಕಟಿತ ಕೃತಿಗಳ ಸ್ವರೂಪವನ್ನು ಒಂದೆರಡು ಮಾತುಗಳಲ್ಲಿ ಹೇಳಿ, ಅನಂತರ ಪ್ರಕಟಿತ ಕೃತಿಗಳ ಸಾರವನ್ನು ಸಂಗ್ರಹಿಸಿ ಕೊಟ್ಟಿದ್ದಾರೆ.

ಮೊದಲು ಸಿದ್ಧರಾಮ ಪುರಾಣದ ಸಂಗ್ರಹ ಬರುತ್ತದೆ. ಅನಂತರ ಸೋಮನಾಥ ಚರಿತ್ರೆಯ ಕಥೆಯನ್ನು ಸಂಕ್ಷೇಪವಾಗಿ ಹೇಳಿ ಸಿದ್ಧರಾಮ ಆದಯ್ಯರ ವ್ಯಕ್ತಿತ್ವ ಚಿತ್ರಣವನ್ನು ಹೋಲಿಸಿ ನೋಡಿದ್ದಾರೆ. ಇದಾದ ಮೇಲೆ ಬರುವ ಭಾಗ ಬಹಳ ಮುಖ್ಯವಾದುದು. ಹರಿಶ್ಚಂದ್ರಕಾವ್ಯದ ಕಥೆಯನ್ನು ಸಂಗ್ರಹಿಸಿರುವ ಭಾಗ ಅದು. ಅಲ್ಲಲ್ಲಿ ಕವಿಯ ಮಾತುಗಳನ್ನೇ ಉದಾಹರಿಸುತ್ತಾ, ವಿಮರ್ಶಾತ್ಮಕವಾಗಿ ವಿವೇಚಿಸುತ್ತಾ ಮುನ್ನಡೆದಿರುವ ಈ ಪರಿಚಯ ತಕ್ಕಮಟ್ಟಿಗೆ ದೀರ್ಘವಾಗಿಯೇ ಇದೆ. ಪ್ರಮುಖವಾದ ಭಾಗಗಳಲ್ಲಿ ಕಾವ್ಯಪಾತ್ರಗಳ ಸಂಭಾಷಣೆ

ಯನ್ನೇ ಉದಾಹರಿಸಿ, ರಾಘವಾಂಕನ ನಾಟ್ಯಪ್ರತಿಭೆ ಎದ್ದುಕಾಣುವಂತೆ ಮಾಡಿದ್ದಾರೆ. ಒಟ್ಟಿನಲ್ಲಿ ಕಥಾನಿರೂಪಣೆಯ ಸೊಗಸಿಗೆ ಭಂಗ ಬಾರದಂತೆ, ಕಾವ್ಯ ರಚನೆಯ ಸ್ವರೂಪ ಮನದಟ್ಟಾಗುವಂತೆ ನಿರ್ವಹಿಸಿರುವ ಈ ಕಥಾ ಸಾರಸಂಗ್ರಹ ಸ್ವಾರಸ್ಯವಾಗಿದೆ.

ಮುಂದಿನ ಭಾಗ ಹರಿಶ್ಚಂದ್ರೋಪಾಖ್ಯಾನದ ಇತಿಹಾಸ. ಇದು ತೌಲನಿಕವಾಗಿ ಅಧ್ಯಯನಮಾಡಲು ಅಗತ್ಯವಾದ ಹಿನ್ನೆಲೆಯನ್ನು ಒದಗಿಸುತ್ತದೆ. ಹರಿಶ್ಚಂದ್ರನ ವೃತ್ತಾಂತ ಬರುವ ವೈದಿಕಗ್ರಂಥಗಳಾದ ಐತರೇಯ ಬ್ರಾಹ್ಮಣ, ಸಾಂಖ್ಯಾಯನ ಶ್ರೌತಸೂತ್ರ, ವೇದಾರ್ಥ ದೀಪಿಕಾ ಮೊದಲಾದ ಗ್ರಂಥಗಳು ಮತ್ತು ವಿವಿಧ ಪುರಾಣಗಳಲ್ಲಿ ಉಕ್ತವಾದ ಹರಿಶ್ಚಂದ್ರನ ಕಥೆಯನ್ನು ಇಲ್ಲಿ ಕೊಟ್ಟಿದ್ದಾರೆ. ಇಲ್ಲಿ ಬರುವ ಹರಿಶ್ಚಂದ್ರನ ಕಥೆಯ ಬೇರೆ ಬೇರೆ ರೂಪಗಳೇನು? ಮತ್ತು ಆ ಕಥೆ ಹೇಗೆ ವಿಕಾಸಗೊಂಡಿದೆ?—ಎಂಬ ಅಂಶಗಳನ್ನು ಅವರು ವಿವರಿಸಿರುವ ರೀತಿ ಪಾಂಡಿತ್ಯಪೂರ್ಣವಾಗಿದೆ. ಕೊನೆಯಲ್ಲಿ ಹರಿಶ್ಚಂದ್ರನ ಕಥೆಯಲ್ಲಿ ಅಡಗಿರಬಹುದಾದ ಚಾರಿತ್ರಿಕ ಸತ್ಯವನ್ನು ಕಂಡುಕೊಳ್ಳುವ ಪ್ರಯತ್ನವನ್ನೂ ಮಾಡಿದ್ದಾರೆ. ಇದೆಲ್ಲದರ ಹಿನ್ನೆಲೆಯಲ್ಲಿ ರಾಘವಾಂಕನ ಹರಿಶ್ಚಂದ್ರಕಾವ್ಯವನ್ನು ನೋಡಿದಾಗ ಆತನ ಪಾತ್ರಚಿತ್ರಣಕೌಶಲ ಮನದಟ್ಟಾಗುತ್ತದೆ. ಈ ದೃಷ್ಟಿಯಿಂದ ಅಗತ್ಯವಾದ ಅಂಶಗಳನ್ನೆಲ್ಲಾ ಸಂಗ್ರಹಿಸಿಕೊಟ್ಟಿರುವ ಈ ವಿವೇಚನೆ ತುಂಬಾ ಉಪಯುಕ್ತವಾಗಿದೆ.

ಮುಂದಿನ ಭಾಗ ರಾಘವಾಂಕನ 'ವರ್ಣನೆ'ಗಳನ್ನು ಕುರಿತದ್ದು. ಅವನ ವರ್ಣನಾಶಕ್ತಿಯ ಅನೇಕ ಮುಖಗಳನ್ನು ಪರಿಚಯಮಾಡಿಕೊಡುವ ವಿಸ್ತಾರವಾದ ವ್ಯಾಪ್ತಿಗೆ ಇದು ಹೋಗಿಲ್ಲ. ವಸಿಷ್ಠರ ಆಶ್ರಮ, ಬೆಂಕಿಗೆ ಸಿಕ್ಕಿ ಸಾಯುವವರು, ಗಂಗಾನದಿ, ವೀರಬಾಹುಕ, ಈ ಕೆಲವು ಚಿತ್ರಗಳನ್ನು ಉದಾಹರಿಸುವಷ್ಟಕ್ಕೆ ಮಾತ್ರ ಇದನ್ನು ಸೀಮಿತಗೊಳಿಸಿಕೊಂಡಿದ್ದಾರೆ. ಇದರ ಪ್ರಾರಂಭದಲ್ಲಿ ಒಟ್ಟು ಕಾವ್ಯವನ್ನು ಕುರಿತು ಹೇಳಿರುವ ಈ ಕೆಳಗಿನ ಮಾತುಗಳು ಮನನೀಯವಾಗಿವೆ: "ರಾಘವಾಂಕನು ತತ್ತ್ವವಿವೇಚನೆಮಾಡಿ ಚರಿತ್ರೆ ಬರೆಯಲು ಹೊರಟವನಲ್ಲ; ತನ್ನ ಕಾಲದಲ್ಲಿದ್ದ ಪೌರಾಣಿಕ ಕಥೆಯನ್ನು ತೆಗೆದುಕೊಂಡು ಅದನ್ನು ಕಾವ್ಯವಾಗಿ ಬರೆದವನು. ಆದ್ದರಿಂದ ಅವನ ಗ್ರಂಥದಲ್ಲಿ ಪೌರಾಣಿಕ ಕಥಾಂಶಗಳ ಪರಿಪಾಕವೂ ಅದಕ್ಕೆ ಕಾವ್ಯದ ಮೆರುಗೂ ಕಂಡುಬರುತ್ತವೆ. ರಸವತ್ತಾದ ಕಥನಕ್ರಮ, ಸ್ಫುಟವಾದ ಪಾತ್ರದರ್ಶನ, ನೈಸರ್ಗಿಕವಾದ ಸಂಭಾಷಣೆಗಳು, ಭಾವಪ್ರಪಂಚ ಬಾಹ್ಯಪ್ರಪಂಚಗಳ ಖಚಿತವಾದ ವರ್ಣನೆಗಳು, ಜೀವನ ವಿಮರ್ಶೆ, ಭಾಷೆ ಶೈಲಿ ಇವುಗಳಲ್ಲಿ ಒಂದು ಅತಿಶಯವೂ ವ್ಯಕ್ತಿತ್ವವೂ ಕಂಡುಬರುತ್ತವೆ" ಎಂದಿದ್ದಾರೆ. ಈ ವ್ಯಕ್ತಿತ್ವ ಇತರ ಕವಿಗಳ ಮೇಲೆ ಬೀರಿರುವ ಪ್ರಭಾವವನ್ನು ಸೂಚಿಸಿದ್ದಾರೆ.

ಇದಾದಮೇಲೆ ಎತ್ತಿಕೊಂಡಿರುವ ಇನ್ನೊಂದು, ಮುಖ್ಯವಾದ ಅಂಶವೆಂದರೆ

ಕವಿಯ ಕಾವ್ಯೋದ್ದೇಶ. 'ನೀತಿ' ಎಂಬ ಈ ವಿಭಾಗದಲ್ಲಿ ವಿಸ್ತಾರವಾಗಿ ಅದನ್ನು ಪ್ರತಿಪಾದಿಸಿದ್ದಾರೆ. ಪೂರ್ವಕವಿಗಳ ಪರಂಪರೆಗೆ ಅನುಗುಣವಾಗಿ ರಾಘವಾಂಕ "ಜನಬದುಕಬೇಕೆಂದು" ಕಾವ್ಯ ಬರೆದವನು. "ಪ್ರಾಚೀನ ಕವಿಗಳು ಸಾಮಾನ್ಯ ವಾಗಿ ಕಾವ್ಯ ರಮಣೀಯತೆಯೊಂದನ್ನೇ, ನೀತಿ ವಿರಹಿತವಾದ ರಸಪುಷ್ಟಿ ಯೊಂದನ್ನೇ, ತಮ್ಮ ದೃಷ್ಟಿಯಲ್ಲಿಟ್ಟುಕೊಂಡು ಕಾವ್ಯ ಬರೆಯಲು ಹೊರಡುವವರಲ್ಲ; ಜೀವನದಲ್ಲಿ ಹೇಗೋ ಕಾವ್ಯದಲ್ಲಿಯೂ ಹಾಗೇ ಶ್ರೇಯಃಕಾಂಕ್ಷಿಗಳು"- ಎಂಬ ಅವರ ಮಾತು ರಾಘವಾಂಕನಿಗೂ ಅನ್ವಯಿಸುತ್ತದೆ. "ಆದರೂ 'ತುದಿ ಮೊದಲ್ತನಕ ಹೇಳಿದ ಕಾವ್ಯರಸ ಫಲಂಗಳನು ಸವಿಸುವುದು' ಆತನ ಮುಖ್ಯ ಉದ್ದೇಶವೇ ಹೊರತು ಧರ್ಮೋಪದೇಶಗಳನ್ನು ಕೊಡುವುದಲ್ಲ. ಆದ್ದರಿಂದಲೇ ಗ್ರಂಥದ ಮಧ್ಯೆ, ಅವಕಾಶವಿರುವ ಕಡೆಯಲ್ಲಿಯೂ ಕೂಡ, ಎಲ್ಲಿಯೂ ಪುರಾಣ ಕಾವ್ಯಗಳಲ್ಲಿ ಕಂಡುಬರುವಂತೆ ವಿಸ್ತಾರವಾದ ಧರ್ಮೋಪನ್ಯಾಸಗಳಿಲ್ಲ. ಅವೆಲ್ಲದರ ಸಾರವಾಗಿ ಸತ್ಯದ ಮಹಿಮೆಯನ್ನು ಎತ್ತಿಹಿಡಿದಿದ್ದಾನೆ" ಎಂಬ ಮಾತನ್ನು ಮುಖ್ಯವಾಗಿ ಗಮನಿಸಬೇಕು. ಜೀವನದ ಉದಾತ್ತದರ್ಶನವನ್ನು ಕಾವ್ಯರೂಪ ದಲ್ಲಿ ಸಾರಿದ ಆತನ ಹಿರಿಮೆಯನ್ನು ಶ್ರೀ ಎ. ಆರ್. ಕೃ. ಅವರು ಗುರುತಿಸಿರುವು ದಕ್ಕೆ ಇದು ಸಾಕ್ಷಿಯಾಗಿದೆ. ಸ್ವತಂತ್ರ ವಿಚಾರಶಕ್ತಿಯಿಂದ ಪರಿಸ್ಫುಟವಾದ ಸಾರ್ವಕಾಲಿಕ ಸತ್ಯ, ಕಾವ್ಯದ ತುಂಬಾ ವೋತಪ್ರೋತವಾಗಿ ವ್ಯಾಪಿಸಿದೆ; ಉಪದೇಶದ ರೂಪದಲ್ಲಿಲ್ಲ; ಪ್ರತಿಮಾರೂಪದಲ್ಲಿ ಎಂಬುದನ್ನು ಗಮನಿಸಿದ್ದಾರೆ. "ಅತಿಹುಸಿವ ಯತಿಹೊಲೆಯ; ಹುಸಿಯದಿಹ ಹೊಲೆಯನುನ್ನತ ಯತಿವರನು. ಹುಸಿದುಮಾಡುವ ಮಹಾಯಜ್ಞಶತವೈದೆ ಪಂಚಪಾತಕ, ಸತ್ಯವೆರಸಿದ ನ್ಯಾಯ ವದು ಲಿಂಗಾರ್ಚನೆ." "ಘನಸತ್ಯವೇ ಜೀವವೆಂದಿರ್ದ ಹೊಲೆಯನ ಸೇವೆ ಗುರು ಸೇವೆ, ಹೊಲೆವೇಷ ಪಾವನ ಪುಣ್ಯವೇಷ"– ಈ ಮೊದಲಾದ ಮಾತುಗಳನ್ನು ಉದಾಹರಿಸಿ ಕೊನೆಯಲ್ಲಿ ಹೇಳುವ: "ಅವನು (ರಾಘವಾಂಕ) ವಿಚಾರಪರಿಪ್ಲುತ ವಾಗಿದ್ದ, ಸತ್ಯಧರ್ಮಗಳ ತಿರುಳನ್ನು ಕಾಣಬೇಕೆಂದಿದ್ದ ಸಿದ್ಧರಾಮ, ಅಲ್ಲಮ ಬಸವೇಶ್ವರ ಮುಂತಾದ ಧರ್ಮಜ್ಯೋತಿಗಳ ಕಾಲದಲ್ಲಿ, ಜಾತಿ ಕುಲಗಳನ್ನು ಆತ್ಮ ಗುಣಗಳ ದೃಷ್ಟಿಯಿಂದ ತೀರ್ಮಾನಮಾಡಬೇಕೆಂಬ ಆ ಕಾಲದ ಉದಾರ ವಾತಾ ವರಣದಲ್ಲಿ ಇದ್ದನೆಂದು ಹೇಳಬಹುದು" ಎಂಬ ಮಾತು ಮನೋಜ್ಞವಾಗಿದೆ. ಕವಿಯ ವ್ಯಕ್ತಿತ್ವವನ್ನು ಕಂಡುಕೊಂಡಿರುವುದಲ್ಲದೆ, ಆತನ ಆಶಯವನ್ನು ಗುರುತಿಸಿ ನಿರೂಪಿಸುವುದರಲ್ಲಿಯೂ ಎ. ಆರ್. ಕೃ. ಅವರು ಯಶಸ್ವಿಗಳಾಗಿದ್ದಾರೆ.

ಮುಂದೆ ಆತನ ಶೈಲಿಯ ವಿವೇಚನೆ ಬರುತ್ತದೆ. ತನ್ನ ಗ್ರಂಥಗಳನ್ನೆಲ್ಲಾ ಷಟ್ಪದಿಯಲ್ಲಿ ಬರೆದು ಷಟ್ಪದಿಜನಕನೆಂದು ಪ್ರಸಿದ್ಧನಾಗಿದ್ದರೂ, ಆತ ಷಟ್ಪದಿ ಗಳನ್ನು ಮೊಟ್ಟಮೊದಲು ನಿರ್ಮಿಸಿದವನಲ್ಲವೆಂಬುದನ್ನು ಸಾಧಾರವಾಗಿ ಸಮರ್ಥಿಸಿ ದ್ದಾರೆ. ಆದರೆ ರಾಘವಾಂಕನ ಹಿರಿಮೆ ಇರುವುದು ಆದ್ಯಂತವಾಗಿ ಈ ಅಚ್ಚ

ಕನ್ನಡದ ವೃತ್ತಗಳನ್ನೇ ಉಪಯೋಗಿಸಿ ಪ್ರೌಢ ಕಾವ್ಯಗಳನ್ನು ಬರೆದುದರಲ್ಲಿ ಎಂದು ಸರಿಯಾಗಿ ಗುರುತಿಸಿದ್ದಾರೆ. ದೇಶಿಯ ಛಂದಸ್ಸನ್ನು ಬಳಸಿರುವಂತೆಯೇ ದೇಶೀಯ ಶಬ್ದಗಳ ಪ್ರಯೋಗದಲ್ಲಿಯೂ ಆತನದೇ ಒಂದು ವೈಶಿಷ್ಟ್ಯ. "ರಾಘವಾಂಕನು 'ಉಭಯಕವಿಕಮಲ ರವಿ'ಯಾದ ಪಂಡಿತನಾಗಿದ್ದರೂ, ಸಂಸ್ಕೃತ ಶಬ್ದಸಂಪತ್ತಿನಲ್ಲಿ ಹರೀಶ್ವರನಿಗೇನೂ ಕಡಮೆಯಲ್ಲದವನಾಗಿದ್ದರೂ ತನ್ನ ಗ್ರಂಥಗಳನ್ನೆಲ್ಲಾ ಷಟ್ಪದಿಯಲ್ಲಿ 'ವರ್ಣಕ' ಕಾವ್ಯವಾಗಿ ಬರೆದಿರುವಂತೆ ತೋರುತ್ತದೆ. ಅವನು ಕನ್ನಡಿಗರಲ್ಲಿ ಬಳಕೆಯಾಗಿರುವ ಮಾತುಕತೆ, ಸಾಮತಿ, ಸಾದೃಶ್ಯಗಳನ್ನು ವಿಶೇಷವಾಗಿ ಉಪಯೋಗಿಸುತ್ತಾನೆ. ಆದರೂ ಅವನಲ್ಲಿ ಚಂಪೂಕಾರರ ಮಾತಿನ ಬಿಗಿಯೂ, ಸೌಷ್ಠವ ನಿಷ್ಕೃಷ್ಟತೆಗಳೂ ಕಂಡುಬರುತ್ತವೆಯೇ ಹೊರತು ಷಟ್ಪದಿಕಾರರ ಶೈಲಿಯಲ್ಲಿ ಪರಿಚಿತವಾದ ವಿಶೃಂಖಲತೆಯೂ ಸ್ವಾಚ್ಛಂದ್ಯವೂ ಕಂಡುಬರುವುದಿಲ್ಲ." ಈ ಮಾತುಗಳು ರಾಘವಾಂಕನ ಶೈಲಿಯನ್ನು ಸಂಗ್ರಹವಾಗಿಯೂ ಪರಿಣಾಮಕಾರಿಯಾಗಿಯೂ ಪರಿಚಯಮಾಡಿಕೊಡುತ್ತವೆ. ಇದನ್ನು ಉದಾಹರಣೆಗಳಿಂದ ತೋರಿಸುವ ವಿವರವಾದ ವಿವೇಚನೆಗೆ ಎ. ಆರ್. ಕೃ. ಅವರು ಇಲ್ಲಿ ತೊಡಗಿಲ್ಲ. ಷಟ್ಪದಿಸಾಹಿತ್ಯದಲ್ಲಿ ಈತನದು ಹೇಗೆ ಅದ್ವಿತೀಯಸ್ಥಾನವೆಂಬುದನ್ನು ಸೂಚ್ಯವಾಗಿ ನಿರೂಪಿಸಿ ಉಪಸಂಹಾರದ ನಾಲ್ಕು ಮಾತುಗಳೊಡನೆ ಪೀಠಿಕೆಯನ್ನು ಮುಕ್ತಾಯಗೊಳಿಸಿದ್ದಾರೆ.

ಪೀಠಿಕೆಯಾದ ಮೇಲೆ ಕೊಟ್ಟಿರುವ ಅನುಬಂಧಗಳು ಉಪಯುಕ್ತವಾಗಿವೆ. ಪುರಾಣಗಳಲ್ಲಿ ಬರುವ ಸತ್ಯವ್ರತ ತ್ರಿಶಂಕುವಿನ ಕಥೆ, ಐತರೇಯ ಬ್ರಾಹ್ಮಣದಲ್ಲಿ ಬರುವ ಶುನಶ್ಶೇಪನ ಕಥೆಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಅವನ್ನು ಸಂಸ್ಕೃತ ಮೂಲದಲ್ಲಿ ಕೊಟ್ಟಿರುವುದರ ಜೊತೆಗೆ ಅವುಗಳ ಕನ್ನಡ ಅನುವಾದವೂ ಇದ್ದಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತೆನ್ನಿಸುತ್ತದೆ. ಸಂಗ್ರಹದ ಕೊನೆಯಲ್ಲಿರುವ ಅರ್ಥಕೋಶ ತುಂಬಾ ಉಪಯುಕ್ತವಾಗಿದೆ. ಒಟ್ಟಿನಲ್ಲಿ ಅತ್ಯಂತ ಪರಿಷ್ಕೃತವಾದ ರೀತಿಯಲ್ಲಿ ಸಂಗ್ರಹಿಸಿ, ಉಪಯುಕ್ತವಾದ ಪೀಠಿಕೆ ಅರ್ಥಕೋಶಗಳನ್ನು ಅದಕ್ಕೆ ಸೇರಿಸಿ ರಾಘವಾಂಕನ ಮಹಾಕೃತಿಯೊಂದರ ನಿಕಟಪರಿಚಯಕ್ಕೆ ಕಾರಣವಾಗುವಂತಹ ರೀತಿಯಲ್ಲಿ ಈ ಕೃತಿಯನ್ನು ಕೊಟ್ಟ ಶ್ರೀಗಳಾದ ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳಿಬ್ಬರೂ ಅಭಿನಂದನೀಯರಾಗಿದ್ದಾರೆ. ಈ ಬಗೆಯ ಸಂಗ್ರಹಗ್ರಂಥಗಳಲ್ಲಿ ಇದು ಆದ್ಯವೂ ಆಚಾರ್ಯಕೃತಿಯೂ ಆಗಿ ಪರಿಣಮಿಸಿದೆ.

# ಶಾಸ್ತ್ರಿಗಳ ಸೂಕ್ತಿಗಳು

**ಸರಸ್ವತಿ :**

ಸರಸ್ವತಿಗೆ ಮುಪ್ಪಿಲ್ಲ ; ಆಕೆ ಚಿರಯೌವನೆ.

(ಭಾಷಣಗಳು–ಲೇಖನಗಳು, ಪು. vi)

*   *   *

**ಮಹಾಭಾರತ :**

ಮಹಾಭಾರತವು ಕಥೆಗಳ ಗಣಿ....ಆದರೂ (ಅದು) ಉಲ್ಲಾಸದಿಂದ ಮನಸ್ಸನು ಉಬ್ಬಿಸುವ ಅಥವಾ ಕುಣಿಸುವ ಗ್ರಂಥವಲ್ಲ; ಅದರ ಹಿನ್ನೆಲೆ ದುಃಖ.

(ವಚನಭಾರತ, ಪೀಠಿಕೆ, ಪು. ೪೧)

*   *   *

**ಕಥೆ–ನೀತಿ :**

ನೀತಿ ಹೆಚ್ಚಾದರೆ ಕಥೆ ಒಣಕಲಾಗುತ್ತದೆ.

(ಕಥಾಮೃತ, ಪೀಠಿಕೆ, ಪು. ೪೯)

*   *   *

**ಸಾರ್ಥಕಜೀವನ :**

ಅಚ್ಚ ಕಸ್ತೂರಿಯೂ ಪಚ್ಚಕರ್ಪೂರವೂ ಕರಗಿಹೋದರೆ ಅದೃಶ್ಯವಾಗುವುದೇ ಹೊರತು ನಷ್ಟವಾಗಿಹೋದಂತಾಯಿತೆ ?

(ಭಾಷಣಗಳು–ಲೇಖನಗಳು, ಪು. ೪೨೦)

*   *   *

**ಜಾತಿಸಮಸ್ಯೆ :**

ಈಗಿರುವ ಸಮಸ್ಯೆ ಜನ್ಮಜಾತಿಸಮಸ್ಯೆಯಲ್ಲ, ಬಡವ ಭಾಗ್ಯವಂತ ಎಂಬ ಆರ್ಥಿಕ ಜಾತಿಸಮಸ್ಯೆ. ಪ್ರಬಲವಾಗಿರುವುದು ಅವೆರಡೇ ಜಾತಿ.

(ವಚನಭಾರತ, ಪೀಠಿಕೆ, ಪು. ೩೬)

*   *   *

**ಅಹಿಂಸೆ :**

ಅಹಿಂಸೆಯೆಂಬುದು ಅಪರಂಜಿಯ ಹಾಗೆ. ಶುದ್ಧ ಅಪರಂಜಿ ನಾಣ್ಯವಾಗುವುದಿಲ್ಲ; ವ್ಯವಹಾರಕ್ಕೆ ಸಲ್ಲುವುದಿಲ್ಲ; ಅದಕ್ಕೆ ಸ್ವಲ್ಪವಾದರೂ ಪೆಡಸಾದ, ಕೆಚ್ಚನೆಯ ತಾಮ್ರ ಬೆರೆಯಬೇಕು.

*   *   *

ಅಹಿಂಸೆಯೆಂದರೆ ಕ್ರೌರ್ಯವಿಲ್ಲದಿರುವುದು ; ನಿಸ್ತೇಜತೆಯಲ್ಲ; ತಮೋಗುಣವಲ್ಲ; ಎಷ್ಟಾದರೂ ತಗ್ಗಿ ಬಗ್ಗಿ ನಡೆಯುವುದಲ್ಲ. ತಗ್ಗುತ್ತ ಹೋದರೆ ನೆಲದೊಳಗೆ ಐಕ್ಯವಾಗುವುದೇ ಗತಿ.

(ವಚನಭಾರತ, ಪೀಠಿಕೆ, ಪು. ೫೯)

ಸಿ. ಪಿ. ಕೆ.

# ‘ಭಾಸಕವಿ’

೧

ವ್ಯಕ್ತಿಜೀವನ ಹೇಗೊ ಹಾಗೆ ಭಾಷೆ ಮತ್ತು ಸಾಹಿತ್ಯ ಕೂಡ : ಅವು ನಾನಾ ರೀತಿಯ ಬಾಹ್ಯಶಕ್ತಿಗಳ ಪ್ರೇರಣೆ ಪ್ರಭಾವಗಳ ಪರಿಣಾಮ. ಯಾವುದೇ ಭಾಷೆಯಾಗಲಿ ಸಾಹಿತ್ಯವಾಗಲಿ ಅನ್ಯಭಾಷಾ ಸಾಹಿತ್ಯಗಳ ಪರಿಚಯ ಸಂಸರ್ಗ ಪ್ರಭಾವಗಳಿಲ್ಲದೆ ಸರ್ವಾಂಗಸಂಪುಷ್ಟವಾಗಿ ವೀರ್ಯಶಾಲಿಯಾಗಿ ತೇಜಸ್ವಿಯಾಗಿ ವಿಕಸಿಸಲಾರದು. ಒಂದು ಸಾಹಿತ್ಯಕ್ಕೂ ಮತ್ತೊಂದಕ್ಕೂ ನಡುವೆ ಸೇತುವೆ ಕಲ್ಪಿಸುವ, ಬಾಂಧವ್ಯ ಕುದುರಿಸುವ ವಿಧಾನಗಳು ಎರಡಿವೆ : ಒಂದು ವಿಮರ್ಶೆ, ಮತ್ತೊಂದು ಅನುವಾದ. ಆಯಾ ಸಾಹಿತ್ಯದಲ್ಲಿ ರಚಿತವಾದ ಕೃತಿಗಳನ್ನು ಕುರಿತು ವಿಮರ್ಶೆ ಹುಟ್ಟುವುದರ ಜೊತೆಗೆ ಪರಭಾಷಾಸಾಹಿತ್ಯಗಳ ಶ್ರೇಷ್ಠ ಕವಿಕೃತಿಗಳನ್ನು ಕುರಿತ ವಿಮರ್ಶೆ ಕೂಡ ಅವಶ್ಯವಾಗಿ ಬರಬೇಕು. ಅಂತೆಯೆ ಅನ್ಯಭಾಷೆಗಳ ಮಹಾಕೃತಿಗಳು ನಮ್ಮ ಭಾಷೆಗೆ ಅನುವಾದಗೊಳ್ಳಬೇಕು ; ಈ ಅನುವಾದ ನೇರವಾದ ಭಾಷಾಂತರವಾಗಿರಬಹುದು, ಭಾವಾನುವಾದವಾಗಿರಬಹುದು ಅಥವಾ ಸಂಗ್ರಹಾನುವಾದವಾಗಿರಬಹುದು. ಈ ಯಾವುದಾದರೊಂದು ಪ್ರವಹಣಮಾರ್ಗದಿಂದ ಅನ್ಯಸಾಹಿತ್ಯಸಂಪತ್ತಿನ ಸಂಪರ್ಕ ನಮ್ಮ ಸಾಹಿತ್ಯಕ್ಕುಂಟಾದಾಗ ಮಹತ್ತರವಾದ ಪ್ರಯೋಜನಗಳು ಸಿದ್ಧಿಸುತ್ತವೆ. ಇತರ ಸಾಹಿತ್ಯಗಳಲ್ಲಿರುವ ಉತ್ತಮಕೃತಿಗಳ ಅರಿವು ಆಸ್ವಾದನೆ ಸುಲಭ್ಯವಾಗುವುದು ಮಾತ್ರವಲ್ಲದೆ, ಅವುಗಳ ಪ್ರಭಾವದಿಂದ ನಮ್ಮ ಭಾಷೆ ಸಾಹಿತ್ಯಗಳು ಮತ್ತೂ ಪ್ರವರ್ಧಿಸುತ್ತವೆ, ಶ್ರೀಮಂತವಾಗುತ್ತವೆ.

ಈ ಎರಡು ದಿಶೆಗಳಲ್ಲೂ ಅದ್ಭುತವಾದ ಕೆಲಸಮಾಡಿ ಕನ್ನಡಕ್ಕೆ ಪರಮೋಪಕಾರವೆಸಗಿದವರು ದಿವಂಗತ ಎ ಆರ್. ಕೃಷ್ಣಶಾಸ್ತ್ರಿಗಳು ; ಈ ಪಂಕ್ತಿಯ ಸಾಧಕರಲ್ಲಿ ಅವರು ಅಗ್ರಗಣ್ಯರೂ ಅಪ್ರತಿಮರೂ ಆಗಿದ್ದಾರೆ. ಸಂಸ್ಕೃತ ಸಾಹಿತ್ಯದ ಹೃದಯವನ್ನೆ ಅವರು ಕನ್ನಡಕ್ಕೆ ಒದಗಿಸಿಕೊಟ್ಟಿದ್ದಾರೆ, ತಮ್ಮ ವಿಮರ್ಶೆ ಹಾಗೂ ಅನುವಾದಗಳ ಮೂಲಕ. ಅವರ ‘ವಚನಭಾರತ’, ‘ಕಥಾಮೃತ’, ‘ಸಂಸ್ಕೃತ

ನಾಟಕ', 'ಭಾಸಕವಿ'–ಈ ಕೃತಿಗಳಲ್ಲಿ ಸಂಸ್ಕೃತಸಾಹಿತ್ಯದ ಬಹುಪಾಲು ಸಾರವೆಲ್ಲ ಭಟ್ಟಿಯಿಳಿದಿದೆಯೆಂದರೆ ಉತ್ಪ್ರೇಕ್ಷೆಯಲ್ಲ. ವ್ಯಾಸಪ್ರಣೀತ ಮಹಾಭಾರತವೊಂದು ರುಂದ್ರವಚನಾಮೃತವಾರ್ಧಿ; ಭಾರತೀಯ ಜನಜೀವನದ ವಿಶ್ವಕೋಶ; ಸಂಸ್ಕೃತದ ಮತ್ತು ದೇಶಭಾಷೆಗಳ ಕವಿಗಳ ಪಾಲಿಗೆ ಮೇರುಸದೃಶವಾದ ಅಕ್ಷಯ ಬೃಹದಾಕರ. ಅಂತಹುದೆ ಮತ್ತೊಂದು ಆಕರವಾಗಿದ್ದ ಗುಣಾಢ್ಯನ ಪೈಶಾಚೀ 'ಬೃಹತ್ಕಥೆ'ಯ ಸಂಸ್ಕೃತರೂಪ ಸೋಮದೇವಕೃತ 'ಕಥಾಸರಿತ್ಸಾಗರ'. ಈಗ 'ಬೃಹತ್ಕಥೆ' ಲುಪ್ತವಾಗಿರುವುದರಿಂದ, ಅದನ್ನು ಪ್ರತಿನಿಧಿಸುವ "ಕಥಾಸರಿತ್ಸಾಗರ' ಅತ್ಯಂತ ಮಹತ್ಪೂರ್ಣವಾದ ಕಥಾಕೋಶವಾಗಿದೆ. ಈ ಮಹಾಭಾರತ, ಕಥಾಸರಿತ್ಸಾಗರಗಳ ಅನುವಾದ 'ವಚನಭಾರತ', 'ಕಥಾಮೃತ'ಗಳಲ್ಲಿ ಅನನ್ಯವಾದ ರೀತಿಯಲ್ಲಿ ವ್ಯೈವೆತ್ತಿದೆ.[1] ಭಾಸ ಕಾಳಿದಾಸ ಭವಭೂತಿ ಹರ್ಷಾದಿ ವರಕವಿಗಳೆಲ್ಲ 'ಸಂಸ್ಕೃತನಾಟಕ'ದಲ್ಲಿ ಸಮಾವೇಶಗೊಂಡು ವಿಮರ್ಶಿತರಾಗಿದ್ದಾರೆ. ಭಾಸನೊಬ್ಬನನ್ನೆ ವಿಸ್ತಾರವಾಗಿ ವಿವೇಚಿಸಲಾಗಿದೆ 'ಭಾಸಕವಿ'ಯಲ್ಲಿ. ಇಷ್ಟನ್ನು ಬಿಟ್ಟರೆ ಇನ್ನು ಸಂಸ್ಕೃತ ಸಾಹಿತ್ಯದಲ್ಲಿ ಉಳಿದದ್ದು ಹೆಚ್ಚೇನಿಲ್ಲ.[2] ಆದ್ದರಿಂದ, ಸಂಸ್ಕೃತದ ದೇವಗಂಗೆಯನ್ನು ಕನ್ನಡದ ನೆಲಕ್ಕೆ ಹರಿಸಿ ತಂದ ಅಭಿನವಭಗೀರಥ ಶಕ್ತಿಯಾಗಿ ಕೃಷ್ಣಶಾಸ್ತ್ರಿಗಳು ಸಂಪೂಜ್ಯರಾಗಿದ್ದಾರೆ. ಅವರು 'ಬಂಕಿಮಚಂದ್ರ', 'ನಿಬಂಧಮಾಲಾ'ಗಳ ಮೂಲಕ ವಂಗಸಾಹಿತ್ಯದ ದರ್ಶನ ಮಾಡಿಸಿರುವುದೂ ಅವಿಸ್ಮರಣೀಯವಾದ ಗೆಯ್ಮೆ.

ಪ್ರಾಚೀನಕಾಲದಲ್ಲಿ ಸಂಸ್ಕೃತ ಪ್ರಾಕೃತಗಳು, ಅರ್ವಾಚೀನಕಾಲದಲ್ಲಿ ಇಂಗ್ಲಿಷ್–ಇವು ಕನ್ನಡಭಾಷೆಯ ಮತ್ತು ಸಾಹಿತ್ಯದ ಬದುಕು ಬೆಳೆವಣಿಗೆಗಳಿಗೆ ಪೋಷಕ ಚೋದಕ ಶಕ್ತಿಗಳು. ಇವುಗಳಲ್ಲಿ ಸಂಸ್ಕೃತ ಮತ್ತಾವುದೇ ಭಾಷೆಗಿಂತ ಮಿಗಿಲಾಗಿ ಕನ್ನಡದ ರಕ್ತದಲ್ಲಿ ಬೆರೆತು ಅದನ್ನು ಬೆಳೆಸಿದೆ, ಬೆಳಗಿದೆ. ಸಂಸ್ಕೃತ ಸಾಹಿತ್ಯದಿಂದ ವಸ್ತುವನ್ನು ಸ್ವೀಕರಿಸದ, ಸಂಸ್ಕೃತದ ಕಾವ್ಯಮಾರ್ಗವನ್ನು ಅನುಸರಿಸದ, ಒಂದಲ್ಲ ಒಂದು ಬಗೆಯಲ್ಲಿ ಸಂಸ್ಕೃತಕ್ಕೆ ಶರಣುಹೋಗದ ಕವಿಗಳು ಹಿಂದಿನ ಕನ್ನಡಸಾಹಿತ್ಯದಲ್ಲಿ ಇಲ್ಲವೇ ಇಲ್ಲವೆನ್ನಬಹುದು. ಹೀಗೆ ಕನ್ನಡ ಸಾಹಿತ್ಯದ ಮೇಲೆ ಬಹಳ ಆಳವಾದ ಲಾಭದಾಯಕವಾದ ಅವಿನಾಶಿಯಾದ

---

[1] 'ಕಥಾಸರಿತ್ಸಾಗರ'ವನ್ನು ಭಾಷಾಂತರಿಸುವಲ್ಲಿ ಕೃಷ್ಣಶಾಸ್ತ್ರಿಗಳು 'ಬೃಹತ್ಕಥೆ'ಯ ಸ್ವರೂಪವನ್ನು ತಿಳಿಸಿಕೊಟ್ಟು ಪ್ರಾಕೃತ ಸಾಹಿತ್ಯದ ಒಂದು ಪ್ರಮುಖ ಶಾಖೆಯನ್ನು ಕನ್ನಡಕ್ಕೆ ತಂದಿದ್ದಾರೆನ್ನಬಹುದು.

[2] ವಾಲ್ಮೀಕಿ ರಾಮಾಯಣವನ್ನೂ ಕನ್ನಡಿಸಿದ್ದರೆ ಅವರ ಕಾರ್ಯ ತುಂಬಿಕೊಳ್ಳುತ್ತಿತ್ತು. ಆದರೆ, ಪ್ರಧಾನವಾಗಿ ಕಾವ್ಯವಾದ ರಾಮಾಯಣವನ್ನು ವಚನರೂಪದಲ್ಲಿ ಹಿಡಿದಿಡುವುದು ಹೇಗೆ ಎಂಬುದು ಅವರ ಸಮಸ್ಯೆಯಾಗಿದ್ದಂತೆ ತೋರುತ್ತದೆ; ಹಾಗೆಂದು ಅವರೊಮ್ಮೆ ಹೇಳಿದರಂತೆ.

ಪ್ರಭಾವ ಬೀರಿದ ಸಂಸ್ಕೃತ ಸಾಹಿತ್ಯ ಭಾಂಡಾಗಾರದ ನೇರ ಪರಿಚಯ ಕನ್ನಡಿಗರಿಗೆ ಅತ್ಯಂತ ಅಪೇಕ್ಷಣೀಯವಾದುದು. ಅದನ್ನು ತುಂಬ ಸಂತೃಪ್ತಿಕರವಾಗಿ ಸುಂದರವಾಗಿ ಸುಷ್ಠುವಾಗಿ ಒದಗಿಸಿಕೊಟ್ಟು ಕನ್ನಡಿಗರನ್ನು ಚಿರಋಣಬದ್ಧರನ್ನಾಗಿ ಮಾಡಿ ಶ್ರೇಯೋಭಾಗಿಗಳಾದವರು ಕೃಷ್ಣಶಾಸ್ತ್ರಿಗಳು. ಅವರ ಒಂದೊಂದು ಕೃತಿಯೂ ಹೊಸಗನ್ನಡ ಸಾಹಿತ್ಯಕ್ಕೆ ಸಂದ ಘನವಾದ ಕೊಡುಗೆ.

‘ ಭಾಸಕವಿ ’ ಎಂಬ ಗ್ರಂಥದ ಸ್ಥೂಲಪರಾಮರ್ಶೆ ಪ್ರಸ್ತುತಲೇಖನದ ಆಶಯ.

೨

ಭಾಸ ಸಂಸ್ಕೃತದ ಅತ್ಯಂತ ಪ್ರಾಚೀನ ಕವಿಗಳಲ್ಲೊಬ್ಬ; ಕಾಲದ ದೃಷ್ಟಿಯಿಂದ ಮಾತ್ರವಲ್ಲದೆ ಉದಾತ್ತ ಕವಿತಾರೀತಿಯಿಂದಲೂ ಅವನು ವ್ಯಾಸ ವಾಲ್ಮೀಕಿಗಳ ಮಂಡಲಕ್ಕೆ ಸೇರುವ ಕವಿ. ‘ ಭಾಸಮುನಿ ’ ಯೆಂದು ಅವನನ್ನು ಜನ ಗೌರವಿಸುತ್ತಿದ್ದಂತೆ ತೋರುತ್ತದೆ. ಮೃದುಸಾತ್ತ್ವಿಕ ಮನೋಧರ್ಮ, ಆದರ್ಶನಿಷ್ಠವಾದ ಪಾತ್ರಗಳ ಕಂಡರಣೆ, ಸಂಕ್ಷಿಪ್ತವಾದ ಧ್ವನಿಪೂರ್ಣ ನಿರೂಪಣೆ, ಸಂವಿಧಾನ ಕೌಶಲ, ಸನ್ನಿವೇಶ ನಿರ್ಮಾಣ ಚಾತುರ್ಯ, ಸರಳ ಸಹಜವಾದ ವರ್ಣನೆಗಳು, ವಿಶಿಷ್ಟ ರಂಗತಂತ್ರಗಳ ಬಳಕೆ–ಇವೆಲ್ಲ ಭಾಸನಿಗೆ ಸಂಸ್ಕೃತಸಾಹಿತ್ಯದಲ್ಲಿ ಅನ್ಯಕವಿ ದುರ್ಲಭವಾದ ಸ್ಥಾನವನ್ನು ಸಂಪಾದಿಸಿಕೊಟ್ಟಿವೆ. ಅವನ ‘ ಸ್ವಪ್ನವಾಸವದತ್ತ ’ ಮತ್ತು ‘ ಪ್ರತಿಮಾನಾಟಕ ’ ಅತ್ಯಂತ ಪ್ರತಿಭಾಪೂರ್ಣವಾದ ವಿರಚನೆಗಳು. ರಾಮಾಯಣ ಮಹಾಭಾರತ ಬೃಹತ್ಕಥೆಗಳನ್ನು ಈ ಕವಿ ವಸ್ತುವಿಗಾಗಿ ಆಶ್ರಯಿಸಿದ್ದರೂ ಸ್ವಕಪೋಲಕಲ್ಪನೆಯಿಂದ ಮೂಲವನ್ನು ಪರಿವರ್ತಿಸಿ, ಪಾತ್ರಸನ್ನಿವೇಶಗಳಿಗೆ ತನ್ನದೇ ಆದ ಮೆರುಗನ್ನೂ ತಿರುವನ್ನೂ ಬಣ್ಣವನ್ನೂ ಕೊಟ್ಟು ‘ ಅಘಟಿತಘಟನಾ ನೂತನಬ್ರಹ್ಮ ’ನೆಂಬ ಅಭಿಧಾನಕ್ಕೆ ಪಾತ್ರನಾಗುತ್ತಾನೆ. ಮುಂದೆ ಬಂದ ಕಾಳಿದಾಸ ಹರ್ಷ ಮುಂತಾದ ಕವಿಗಳಮೇಲೆ ಆತನ ಪ್ರಭಾವಮುದ್ರೆ ವಿಶೇಷವಾಗಿ ಬಿದ್ದಿದೆ. ಸಂಸ್ಕೃತ ವಾಙ್ಮಯದ ಶ್ರೇಷ್ಠ ಕವಿಗಳಲ್ಲೊಬ್ಬನಾದ ಈ ಭಾಸನ ನಾಟಕಶ್ರೇಣಿಯ ಬಗೆಗೆ ಕೃಷ್ಣಶಾಸ್ತ್ರಿಗಳ ಬಹಳ ಸರಸವೂ ಸಪ್ರಮಾಣವೂ ಸಾರ್ಥಕವೂ ಆದ ವಿಮರ್ಶೆಯನ್ನು ಕೊಟ್ಟಿದ್ದಾರೆ ‘ ಭಾಸಕವಿ ’ಯಲ್ಲಿ.

ಈ ಗ್ರಂಥದಲ್ಲಿ ಪೀಠಿಕೆಯೂ ಸೇರಿ ಆರು ಪರಿಚ್ಛೇದಗಳಿವೆ. ಪೀಠಿಕೆಯಲ್ಲಿ ಭಾಸಸಮಸ್ಯೆಯನ್ನು ಕುರಿತ ವಿದ್ವತ್ ಸಮೀಚೀನವಾದ ಬರೆವಣಿಗೆ ಹರಡಿಕೊಂಡಿದೆ. ‘ ಸ್ವಪ್ನವಾಸವದತ್ತ ’, ‘ ಪ್ರತಿಮಾನಾಟಕ ’, ‘ ಪಂಚರಾತ್ರ ’ ಈ ಮೂರು ರೂಪಕಗಳನ್ನು ಮೂರು ಪ್ರತ್ಯೇಕ ಪರಿಚ್ಛೇದಗಳಲ್ಲಿ ವಿಮರ್ಶಿಸಲಾಗಿದೆ. ‘ ಏಕಾಂಕ ನಾಟಕಗಳು ’ ಎಂಬ ಐದನೆಯ ಪರಿಚ್ಛೇದದಲ್ಲಿ ಮಧ್ಯಮವ್ಯಾಯೋಗ, ದೂತವಾಕ್ಯ, ದೂತ ಘಟೋತ್ಕಚ, ಕರ್ಣಭಾರ, ಊರುಭಂಗ–ಇವುಗಳ ಪರಿಶೀಲನ

ವಿದೆ. 'ಇತರ ನಾಟಕಗಳು' ಎಂಬ ಕೊನೆಯ ಅಧ್ಯಾಯದಲ್ಲಿ ಅವಿಮಾರಕ, ಬಾಲಚರಿತ, ಚಾರುದತ್ತ, ಪ್ರತಿಜ್ಞಾಯೌಗಂಧರಾಯಣ, ಅಭಿಷೇಕನಾಟಕಗಳು ಅವಲೋಕನಗೊಂಡಿವೆ.

ಸಂಸ್ಕೃತಸಾಹಿತ್ಯದಲ್ಲಿ ಭಾಸಸಮಸ್ಯೆಯೊಂದು ಅಪರಿಹಾರ್ಯವಾದ ಕಗ್ಗಂಟು. ಭಾಸನ ಕೃತಿಗಳು, ಕಾಲ, ದೇಶ ಮುಂತಾದ ವಿಷಯಗಳೆಲ್ಲ ಅತ್ಯಂತ ವಿವಾದಾಸ್ಪದ ವಾಗಿವೆ. ವಿದ್ವತ್ ಪ್ರಪಂಚದಲ್ಲಿ ಈ ಬಗೆಗೆ ಬ್ರಹ್ಮಾಂಡಚರ್ಚೆ ನಡೆದಿದೆ; ದೇಶೀಯ ವಿದೇಶೀಯ ಪಂಡಿತವರೇಣ್ಯರೆಲ್ಲ ಇದರಲ್ಲಿ ಪಾಲ್ಗೊಂಡಿದ್ದಾರೆ.[3] ಇಷ್ಟಾದರೂ ಇದು ಒಂದು ನಿಲುಗಡೆಗೆ ಬಂದಿಲ್ಲ ಈಗ ಭಾಸನವೆಂದು ಪ್ರಕಟ ವಾಗಿರುವ ನಾಟಕಚಕ್ರ ಅವನದೇ ಹೌದೆಂಬುದು ಒಂದುಪಕ್ಷ; ಈ ನಾಟಕಗಳು ಭಾಸಕರ್ತೃಕವಲ್ಲ ಎಂಬುದು ತದ್ವಿರುದ್ಧವಾದ ಮತ್ತೊಂದು ಪಕ್ಷ; ಉಳಿದ ನಾಟಕಗಳು ಹೋಗಲಿ, 'ಸ್ವಪ್ನವಾಸವದತ್ತ'ವಾದರೂ ನಿಸ್ಸಂದೇಹವಾಗಿ ಭಾಸನದು ಎಂದು ಭಾವಿಸುವವರು ಕೆಲವರು; ಈಗ ಸಿಕ್ಕಿರತಕ್ಕವು ಭಾಸನ ನಾಟಕಗಳ ಸಂಕ್ಷಿಪ್ತರೂಪಗಳು ಎಂದು ಬಗೆಯುವವರು ಇನ್ನು ಕೆಲವರು. ಈ ಅಪಾರ ವಿದಗ್ಧ ಚರ್ಚೆಯನ್ನೆಲ್ಲ ಕೃಷ್ಣಶಾಸ್ತ್ರಿಗಳು ತಮ್ಮ ನಲವತ್ತೇಳು ಪುಟಗಳ ಪೀಠಿಕೆಯಲ್ಲಿ ಕೌಶಲದಿಂದ ಸಂಗ್ರಹಿಸಿ, ತಮ್ಮ ಉಪಯುಕ್ತ ಅಭಿಪ್ರಾಯಗಳನ್ನೂ ನಿರ್ಣಯವನ್ನೂ ಪ್ರತಿಪಾದಿಸಿದ್ದಾರೆ. ಪಕ್ಷಪ್ರತಿಪಕ್ಷಗಳ ವಾದವಿವಾದಗಳನ್ನು ಅವರು ಮೊದಲು ಕ್ರೋಢೀಕರಿಸುತ್ತಾರೆ; ಆಮೇಲೆ ಪ್ರತಿಪಕ್ಷವನ್ನು ಖಂಡಿಸಿ, ಚರ್ಚೆಯ ಫಲಿತಾಂಶವನ್ನು ಕಡೆಯಲ್ಲಿ ಮಂಡಿಸುತ್ತಾರೆ. ಅವರ ಸಿದ್ಧಾಂತವಿಷ್ಟು: "ಇಷ್ಟು ವಿಚಾರಮಾಡಿದರೂ ಸಂಭವವಾಗಿರಬಹುದಾದ ಒಂದೆರಡು ಸಂಗತಿಗಳನ್ನು ಊಹಿಸಬಹುದೇ ಹೊರತು ಯಾವುದನ್ನೂ ನಿರ್ಧಾರಮಾಡುವ ಹಾಗಾಗಲಿಲ್ಲ. ಕಾಳಿದಾಸನಿಗಿಂತ ಹಿಂದೆ ಭಾಸನೆಂಬ ನಾಟಕಕರ್ತನಿದ್ದ ಸಂಗತಿಯೂ ಅವನು ಸ್ವಪ್ನವಾಸವದತ್ತವೆಂಬ ನಾಟಕವನ್ನು ಬರೆದಿದ್ದನೆಂಬ ಸಂಗತಿಯೂ ಗಟ್ಟಿ....ಈ ಗ್ರಂಥವು (ಸ್ವಪ್ನವಾಸವದತ್ತ) ಭಾಸನದಿರಬಹುದೆಂದು ತಕ್ಕಮಟ್ಟಿನ ಧೈರ್ಯದಿಂದ ಹೇಳಬಹುದು. ಆಂತರ ವಾಕ್ಯಸಾಮ್ಯಗಳನ್ನು ಬಿಟ್ಟರೂ ಆದಿಶ್ಲೋಕಗಳ ಮುದ್ರಾಲಂಕಾರವೂ ಭರತವಾಕ್ಯವೂ ಏಕಕರ್ತೃ ಸೂಚಕವೆಂದು ಎಣಿಸಬಹು ದಾದ್ದರಿಂದ ಈ ಹದಿಮೂರು ನಾಟಕಗಳು ಏಕಕರ್ತೃಕವೆಂದು ಹೇಳಬಹುದು.... ಏನೇ ಆಗಲಿ, ಸ್ವಪ್ನವಾಸವದತ್ತ ಒಂದರಲ್ಲಿಯಾದರೂ ಬಹುಮಟ್ಟಿಗೆ ಭಾಸನ ಕೃತಿಯು ಕಂಡುಬರುತ್ತದೆ ಎಂದು ಒಪ್ಪಿಕೊಂಡಹಾಗಾಯಿತು. ಇದೂ

---

[3] ಎ. ಡಿ. ಪುಸಲ್ಕರ್ ಅವರು ೧೯೪೦ರಲ್ಲಿ ಪ್ರಕಟವಾದ ತಮ್ಮ 'Bhasa–A Study' ಎಂಬ ಗ್ರಂಥದಲ್ಲಿ ಭಾಸಸಮಸ್ಯೆಗೆ ಸಂಬಂಧಿಸಿದ ಪುಸ್ತಕ, ಲೇಖನಗಳ ಒಂದು ಪಟ್ಟಿಯನ್ನು ಅನುಬಂಧವಾಗಿ ಕೊಟ್ಟಿದ್ದಾರೆ; ಅವುಗಳ ಸಂಖ್ಯೆ ನೂರಕ್ಕೂ ಮೇಲ್ಪಟ್ಟಿದೆ !

ಅನುಮಾನಪ್ರಕರಣವಾಯಿತೇ ಹೊರತು ಪ್ರತ್ಯಕ್ಷ ಪರಿಚ್ಛೇದವಾಗಲಿಲ್ಲ. ಏಕೆಂದರೆ ಈ ನಾಟಕಗಳೊಂದರಲ್ಲಿಯೂ ಕವಿಯ ಹೆಸರಿಲ್ಲ." ಸದ್ಯಃಸ್ಥಿತಿಯಲ್ಲಿ ಅಂತಿಮವಾಗಿ ಹೇಳಬಹುದಾದುದು ಇಷ್ಟೇ.

ಅಂತೂ ಭಾಸ ಸಮಸ್ಯೆಯನ್ನು ನಿಶ್ಶೇಷವಾಗಿ, ಕಡ್ಡಿ ಮುರಿದಂತೆ ಬಗೆಹರಿಸಲಾಗದಿದ್ದರೂ, ಈ ವಿಷಯಕವಾದ ನೂರಾರು ಬರಹಗಳ ಸಾರವನ್ನು ಒಂದೆಡೆ ಕೊಟ್ಟು ಸಮಸ್ಯೆಯ ಜಟಿಲತೆಯನ್ನು ಚೆನ್ನಾಗಿ ಪರಿಚಯ ಮಾಡಿಕೊಟ್ಟಿದ್ದಾರೆ ಕೃಷ್ಣಶಾಸ್ತ್ರಿಗಳು.

ಭಾಸನಾಟಕಚಕ್ರವನ್ನು ಕುರಿತ ಕೃಷ್ಣಶಾಸ್ತ್ರಿಗಳ ವಿಮರ್ಶೆ ವಿಶಿಷ್ಟವಾದುದು; ಅದು ಪ್ರಧಾನವಾಗಿ ವರ್ಣನಾತ್ಮಕ ವೆನ್ನಬಹುದು. ಕಥೆ, ಸನ್ನಿವೇಶ, ರಸಾವಿಷ್ಕಾರ ಇತ್ಯಾದಿಯಾಗಿ ಆಯಾ ನಾಟಕವನ್ನು ಯಾಂತ್ರಿಕವಾಗಿ ವಿಶ್ಲೇಷಿಸುವ ಕೆಲಸವನ್ನು ಕೃಷ್ಣಶಾಸ್ತ್ರಿಗಳು ಮಾಡುವುದಿಲ್ಲ. ಅವರು ಒಂದೊಂದು ನಾಟಕವನ್ನೂ ಉಂಡೆಯಾಗಿ ತೆಗೆದುಕೊಂಡು, ಅದರ ಕತೆಯನ್ನು ಅಂಕಾನುಸಾರವಾಗಿ ನಿರೂಪಿಸುತ್ತ ಹೋಗುತ್ತಾರೆ; ಹಾಗೆ ಕತೆ ಹೇಳಹೇಳುತ್ತಲೆ ಭಾಸನ ಕಲೆಯನ್ನು ಎತ್ತಿ ತೋರುತ್ತಾರೆ; ಪಾತ್ರದ ಸೊಗಸು, ಸನ್ನಿವೇಶದ ಜಾಣ್ಮೆ, ವರ್ಣನೆಯ ಔಚಿತ್ಯ ಮುಂತಾದ ಅಂಶಗಳನ್ನು ನಿರ್ದೇಶಿಸುತ್ತಾರೆ; ರಸಸ್ಥಾನಗಳನ್ನು ಉದ್ಧರಿಸುತ್ತಾರೆ. ಕವಿಯ ಆಖ್ಯಾನ, ವಿಮರ್ಶಕನ ವ್ಯಾಖ್ಯಾನ ಎರಡಕ್ಕೂ ಇಲ್ಲಿ ಸತತ ಸಾಹಚರ್ಯ, ಕಡೆಯಲ್ಲಿ ಒಟ್ಟಿನಮೇಲೆ ಬರುವ ಕೆಲವು ವಿಮರ್ಶೋಕ್ತಿಗಳ ವಿನಾ. ಈ ಕಾರಣ ದಿಂದ ಶಾಸ್ತ್ರಿಗಳ ವಿಮರ್ಶೆ ಶುಷ್ಕ ಪೃಥಕ್ಕರಣವಾಗದೆ, ಜೀವಂತವಾಗಿ ಆರ್ದ್ರವಾಗಿ ಕಳಕಳಿಸುತ್ತದೆ.

ತೌಲನಿಕ ಮತ್ತು ನಿರ್ಣಾಯಕ ವಿಮರ್ಶಪ್ರಕಾರಗಳ ಬಗೆಗೆ ಕೃಷ್ಣಶಾಸ್ತ್ರಿಗಳಿಗೆ ಒಲವರವಿಲ್ಲವೆಂಬುದು ನಿಸ್ಸಂದೇಹ. ಅವರಲ್ಲಿ ತಕ್ಕಡಿ ಇಂಚುಪಟ್ಟಿ ಗಜಗಡ್ಡಿ ಮುಂತಾದ ಅಳತೆತೂಕಗಳ ಪರಿಕರಗಳಿಲ್ಲವೇ ಇಲ್ಲ. ತಾವು ವಿಮರ್ಶಿಸುತ್ತಿರುವ ಕವಿಯನ್ನು ಮತ್ತೊಬ್ಬ ಕವಿಯೊಡನೆ ಹೋಲಿಸಿ ನೋಡುವುದಾಗಲಿ, ಆ ಕವಿಯ ಮತ್ತು ಅವನ ಕಾವ್ಯಗಳ ಸ್ಥಾನಮಾನ ಯೋಗ್ಯತೆಗಳನ್ನು ಇದಮಿತ್ಥಂ ಎಂದು ನ್ಯಾಯಾಧೀಶನಂತೆ ತೀರ್ಮಾನಿಸುವುದಾಗಲಿ ಶಾಸ್ತ್ರಿಗಳ ಜಾಯಮಾನಕ್ಕೆ ಒಗ್ಗದ ವಿಷಯ. ತಾವು ಉದ್ದೇಶಿಸಿರುವ ಕೃತಿಯ ಸ್ವಾರಸ್ಯವೇನು, ಚೆಲುವೇನು, ಗುಣದೋಷಗಳೇನು ಎಂಬುದನ್ನು ಸಹೃದಯನ ನಿಲುವಿನಿಂದ ವಿವರಿಸುವುದಷ್ಟೆ ಅವರು ಮಾಡುವ ಕೆಲಸ; ತೀರ್ಪನ್ನು ರೂಪಿಸಿಕೊಳ್ಳುವ ಜವಾಬ್ದಾರಿಯನ್ನು ಅವರು ವಾಚಕರ ಪಾಲಿಗೇ ಬಿಡುತ್ತಾರೆ. ಭಾಸನನ್ನು ಕುರಿತು ಅವರೆಲ್ಲಿಯೂ ಮಹಾಕವಿ, ವರಕವಿ ಮುಂತಾದ ವಿಶೇಷಣಗಳನ್ನೆ ಪ್ರಯೋಗಿಸಿಲ್ಲ; ಅವನ ನಾಟಕಗಳನ್ನು ಕುರಿತು ಎಲ್ಲಿಯೂ ಶ್ರೇಷ್ಠ, ಭವ್ಯ, ಮಹೋನ್ನತ ಎಂದೆಲ್ಲ ಕೈವಾರಿಸಿಲ್ಲ. ಆದರೂ ಅವರ ಸಹೃದಯವಿಮರ್ಶೆಯನ್ನೋದಿದವರಿಗೆ ಸುಸ್ಪಷ್ಟ

ವಾಗಿ ಗೊತ್ತಾಗುತ್ತದೆ ಭಾಸಕವಿಯ ಹಿರಿಮೆ ಮತ್ತು ಅವನ ಕೃತಿಗಳ ವೈಶಿಷ್ಟ್ಯ. ಕೃಷ್ಣಶಾಸ್ತ್ರಿಗಳ ಈ ಉದ್ರೇಕದೂರವಾದ ಸಂಯಮಪೂರ್ಣ ವಿಮರ್ಶೆ ಅನುಕರಣಾರ್ಹವಾದುದಾದರೂ ಅನುಕರಿಸಲಾಗದ್ದು !

ಶಾಸ್ತ್ರಿಗಳ ವಿಮರ್ಶೆಯ ಮತ್ತೊಂದು ಲಕ್ಷಣವೆಂದರೆ, ಅವರು ಏನನ್ನು ಹೇಳಬೇಕಾದರೂ ಬಹುಮಟ್ಟಿಗೆ ಸಾಧಾರಣೀಕರಣ (generalisation) ವಿಲ್ಲದೆ ಹೇಳುವುದು. ಒಂದು ನಿರ್ದಿಷ್ಟ ಕೃತಿಯನ್ನೂ ಸಂದರ್ಭವನ್ನೂ ಪಾತ್ರವನ್ನೂ ಆಧರಿಸಿಯೆ, ಅದಕ್ಕೆ ಸಂಬಂಧಿಸಿದಂತೆಯೆ ಅವರು ವಿಮರ್ಶೋಕ್ತಿಗಳನ್ನಾಡುತ್ತಾರೆ. ಆ ಮಾತು ಕವಿಯ ಎಲ್ಲ ಕೃತಿಗಳಿಗೂ ಅನ್ವಯಿಸಬಹುದು; ಕೃಷ್ಣಶಾಸ್ತ್ರಿಗಳು ಹಾಗೆ ಅನ್ವಯಿಸುವಂತೆ ಹೇಳುವುದಿಲ್ಲ, ಅಷ್ಟೆ. ಈ ಪ್ರವೃತ್ತಿಯ ಪ್ರಯೋಜನವೇನೆಂದರೆ, ವಿಮರ್ಶಕ ಏನನ್ನಾಡಿದರೂ ಅದು ಹೊಣೆಗೇಡಿಯಾದ ಉಡಾಫೆಯ ಮಾತಾಗಿ ತೋರದೆ ಅಧಿಕೃತವಾಣಿಯಾಗಿ ನಿಲ್ಲುತ್ತದೆ; ಸಾಧಾರಣೀಕರಣದ ಕೆಲವು ಅಪಾಯಗಳೂ ತಪ್ಪುತ್ತವೆ.

ಈಗ ಭಾಸ ನಾಟಕಚಕ್ರದಲ್ಲಿ ಒಂದೊಂದನ್ನೂ ತೆಗೆದುಕೊಂಡು, ಅದನ್ನು ಕುರಿತ ಕೃಷ್ಣಶಾಸ್ತ್ರಿಗಳ ವಿಮರ್ಶೆಯನ್ನು ನೋಡಬಹುದು.

'ಪಂಚರಾತ್ರ'ವನ್ನು ವಿಮರ್ಶಿಸುತ್ತ ಅವರು ಭಾಸಸೃಷ್ಟಿಯ ಸ್ವರೂಪವನ್ನು ಬಯಲುಮಾಡುವಂಥ ಕೆಲವು ಸೂತ್ರಪ್ರಾಯವಾದ ನುಡಿಗಳನ್ನಾಡಿದ್ದಾರೆ. "ಅವನ ಸಾತ್ತ್ವಿಕಪ್ರತಿಭೆಯಲ್ಲಿ ಭಾವಿತರಾಗಿ ಬಂದ ಕ್ರೂರಿಗಳು ತಮ್ಮ ನೈಸರ್ಗಿಕವಾದ ಕ್ರೌರ್ಯವನ್ನು ತಗ್ಗಿಸಿಕೊಳ್ಳುವರು, ದುರ್ಜನರು ಸಜ್ಜನರಾಗುವರು; ಸಜ್ಜನರು ಸತ್ತಮರಾಗುವರು; ಕತ್ತಲೆಯು ಬೆಳಕಾಗುವುದು" ಎಂದು ಒಂದು ಕಡೆ, "ಎಲ್ಲಿ ನೋಡಿದರೂ ಒಂದು ವಿಧವಾದ ಉದಾತ್ತತೆ, ಘನತೆ, ಗಾಂಭೀರ್ಯ ........ಶಾಂತವೂ ಘನವೂ ಆದ ವೀರ್ಯ, ಶೌರ್ಯ, ಔದಾರ್ಯ. ನಿರ್ಮಲವೂ ಪವಿತ್ರವೂ ಆದ ಆದರ್ಶ ಧಾರ್ಮಿಕ ವಾತಾವರಣ. ಈ ಶೋಧಿಸಿದ ಮಧುರ ಪಾಕದಲ್ಲಿ ಸರ್ಪಧ್ವಜನಾದ ದುರ್ಯೋಧನನೂ ಅಮೃತಮಯನಾಗುವನು" ಎಂದು ಮತ್ತೊಂದು ಕಡೆ ಹೇಳಿದ್ದಾರೆ. ಇದು ಭಾಸನ ಎಲ್ಲ ನಾಟಕಗಳಿಗೂ ಒಪ್ಪುವ ಸುಸಮರ್ಪಕವಾದ ವಿಮರ್ಶೆ. ಭಾಸಜಗತ್ತಿನಲ್ಲಿ ನಾವು ಬದುಕಿನ ದುರ್ಮುಖವನ್ನು ಕಾಣುವುದಿಲ್ಲ; ಶಿವಮುಖವನ್ನಷ್ಟೆ ನೋಡುತ್ತೇವೆ. ಅವನು ಕೆಡುಕನ್ನು ಒಳಿತನ್ನಾಗಿ ಮಾಡಿ ತೋರಿಸುತ್ತಾನೆ. ಈ ಪರಿವರ್ತನೆಗೆ ಕಾರಣ ಭಾಸನ ವಿಶಿಷ್ಟ ಚಿತ್ತವೃತ್ತಿ ಮತ್ತು ಶುಭವನ್ನು, ಆದರ್ಶವನ್ನು ಮಾತ್ರ ಕಾವ್ಯ ಪ್ರತಿಪಾದಿಸಬೇಕೆಂಬ ಅವನ ನಿಲುವು. 'ಪ್ರತಿಮಾನಾಟಕ'ದ ಪಾತ್ರವರ್ಗವನ್ನು ಪರಿಗಣಿಸುತ್ತ ಶಾಸ್ತ್ರಿಗಳು "....ಇದನ್ನು ಭಾವಿಸಿದ ಕವಿಯ ಮನೋಧರ್ಮವು ಅತ್ಯಂತ ಮಧುರನಾದದ್ದು" ಎಂದಿರುವುದು ಒಟ್ಟಿನಲ್ಲಿ ಕೂಡ ದಿಟ. 'ಸಾತ್ತ್ವಿಕಪ್ರತಿಭೆ'ಯೆಂಬ ಒಂದು ನುಡಿಯಲ್ಲಿ ಭಾಸರೂಪಕಗಳನ್ನು ಕುರಿತು ಮಾಡಬಹುದಾದ ವ್ಯಾಖ್ಯಾನ ಸಮಸ್ತವೆಲ್ಲ ಅಡಗಿದೆ.

೩

'ಸ್ವಪ್ನವಾಸವದತ್ತ'ವನ್ನು ವಿಮರ್ಶಿಸುವ ಮುನ್ನ ಕೃಷ್ಣಶಾಸ್ತ್ರಿಗಳು 'ಕಥಾಸರಿತ್ಸಾಗರ'ದಲ್ಲಿ ಬರುವ ಉದಯನನ ಕಥೆಯನ್ನು ನಿರೂಪಿಸಿದ್ದಾರೆ. ಇದರಿಂದ ಭಾಸ ಮಾಡಿಕೊಂಡಿರುವ ಮಾರ್ಪಾಡುಗಳನ್ನೂ ಸಾಧಿಸಿರುವ ಕಲಾಚಿತ್ಯವನ್ನೂ ಅರಿಯಲು ಸಹಾಯವಾಗುತ್ತದೆ. ಮೂಲಕಥೆಗೂ ನಾಟಕದ ಕಥೆಗೂ ಇರುವ ಸಂಬಂಧವನ್ನು ಕುರಿತು ಶಾಸ್ತ್ರಿಗಳು "ನಾಟಕವು ಬಹು ಚಿಕ್ಕದಾದರೂ ಇದರಲ್ಲಿ ಮೂಲಕಥೆಯ ಅಂಶಗಳೆಲ್ಲವೂ ಬಂದಿವೆ–ಆದರೆ ಕೆಲವು ಸ್ವಲ್ಪ ಬದಲಾಗಿವೆ; ಮತ್ತೆ ಕೆಲವು ವಿಸ್ತಾರವಾಗಿಯೊ ಸಂಗ್ರಹವಾಗಿಯೊ ಇವೆ; ಇನ್ನು ಕೆಲವು ಸೂಚಿತವಾಗಿವೆ" ಎಂದು ಹೇಳುತ್ತಾರೆ; "ಗುಲಾಬಿಗಿಡವು ಕುಳ್ಳಾಗಿದ್ದರೂ ಅದನ್ನು ಕತ್ತರಿಸಿ ಕಸಿಮಾಡಿ ಮೈತುಂಬ ಹೂ ಬಿಡಿಸುವ ಸಮರ್ಥನಾದ ತೋಟಗಾರನಂತೆ ನಾಟಕವು ಚಿಕ್ಕದಾಗಿದ್ದರೂ ಕವಿಯು ಅದರಲ್ಲಿ ಅನೇಕ ರಸಸ್ಥಾನಗಳನ್ನು ಕಲ್ಪಿಸಿ ಆನಂದಗೊಳಿಸಿದ್ದಾನೆ. ರಸಪೋಷಕವಲ್ಲದ ಘಟನೆಗಳನ್ನಾಗಲಿ ಪಾತ್ರಗಳನ್ನಾಗಲಿ ತಂದು ತುರುಕಿಲ್ಲ" ಎಂಬ ಮಾತಿನಲ್ಲಿ ಭಾಸನ ಪ್ರತಿಭೆಯನ್ನು ಕೊಂಡಾಡುತ್ತಾರೆ.

ನಾಟಕದ 'ಸ್ಥಾಪನೆ'ಯನ್ನು ಕುರಿತು "ಇದಕ್ಕಿಂತ ಸಂಗ್ರಹವಾದ ಸ್ಥಾಪನೆಯಿಲ್ಲ....ಉದ್ದುದ್ದವಾದ ಕವಿಚರಿತ್ರೆಗಳನ್ನೂ ಅಕಾಲ ಋತುವರ್ಣನೆಯನ್ನೂ ಕೇಳಿಕೇಳಿ ಬೇಜಾರಾಗಿ ಗದ್ದಲಮಾಡುತ್ತ ನಾಟಕದ ಆರಂಭವನ್ನು ಎದುರುನೋಡುವ ಸಭಿಕರಿಗೆ ಈ ಸಂಕೋಚವು ಬಹು ಸಂತೋಷವನ್ನುಂಟುಮಾಡುತ್ತದೆ" ಎಂದಿರುವ ವಿಮರ್ಶೆ ಭಾಸನ ವೈಶಿಷ್ಟ್ಯಗಳಲ್ಲೊಂದಾದ ಮಿತವಚನವನ್ನು ಸೊಗಸಾಗಿ ಸೂಚಿಸುತ್ತದೆ.

'ಸ್ವಪ್ನವಾಸವದತ್ತ'ದ ಪ್ರಥಮಾಂಕ ಪ್ರಾರಂಭವಾಗುವುದು ತಪೋವನದಲ್ಲಿ. ಇದು ಬಹಳ ಧ್ವನಿಪೂರ್ಣವಾಗಿದೆ–ಇಡೀ ನಾಟಕದ ತುಂಬ ವ್ಯಾಪಿಸಿರುವ ಉದಾತ್ತತೆಗೆ, ಗಾಂಭೀರ್ಯಕ್ಕೆ ತೋರ್‌ಬೆರಳಾಗಿದೆ. ಈ ಅಂಶವನ್ನು ಕೃಷ್ಣಶಾಸ್ತ್ರಿಗಳು ಎತ್ತಿ ಹೇಳಿದ್ದಾರೆ: "ಈ ಹೆಣ್ಣು ಒಪ್ಪಿಸುವ ಕೆಲಸ ನಡೆಯುವುದು ಅಧಿಕಾರದರ್ಪವುಳ್ಳ ಅರಮನೆಯ ಹತ್ತಿರದಲ್ಲಲ್ಲ, ಶಾಂತವಾದ ತಪೋವನದಲ್ಲಿ... 'ಉದಾರಶೀಲೆ'ಯಾದ ರಾಜಕುಮಾರಿಯ ಸಾನ್ನಿಧ್ಯದಲ್ಲಿ....ಈ ಸನ್ನಿವೇಶ ಕಲ್ಪನೆಯಿಂದ, ಇನ್ನೂ ಮದುವೆಯೆ ಆಗದೆ ತಾನೇ ಪರಾಧೀನಳಾಗಿರುವ ಪದ್ಮಾವತಿಯಂಥ 'ಕನ್ಯೆ' ಅಪರಿಚಿತಳಾದ ಹೆಂಗಸನ್ನು ತನ್ನ ಹತ್ತಿರ ಇಟ್ಟುಕೊಳ್ಳಲು ಒಪ್ಪಿದ್ದು ಹೇಗೆ, ಅವಳನ್ನು ಯೌಗಂಧರಾಯಣನು ಒಡಂಬಡಿಸಿದ್ದು ಹೇಗೆ ಎಂದು ಮುಂತಾದ ಪ್ರಶ್ನೆಗಳು ಬರುವುದಕ್ಕೆ ಅವಕಾಶವಿಲ್ಲದಂತಾಗಿದೆ". ಮೂಲಕಥೆಯಲ್ಲಿ ವಾಸವದತ್ತೆಯನ್ನೊಪ್ಪಿಸಿದ್ದು ಉದ್ಯಾನವನದಲ್ಲಿ ಎಂದಿದೆ; ಇದರಿಂದ ಹಲವು ಸಂದೇಹಗಳು ಹುಟ್ಟುತ್ತವೆ. ಅವು ಪರಿಹೃತವಾಗುವಂತೆ, ಪವಿತ್ರ ಸೌಸವವೊಂದು

ನಾಟಕವನ್ನೆಲ್ಲ ತುಂಬಿ ನಿಲ್ಲುವಂತೆ ಭಾಸ ಆರಂಭದಲ್ಲೇ ತಪೋವನವನ್ನು ತಂದಿದ್ದಾನೆ. ಶಾಸ್ತ್ರಿಗಳ ವಿಮರ್ಶೆ ಇಲ್ಲಿ ವರ್ಣನಾತ್ಮಕ ಸ್ತರವನ್ನು ಮೀರಿ, ದರ್ಶನಾತ್ಮಕ ಸ್ತರವನ್ನು ಪ್ರವೇಶಿಸಿದೆ.

ಈ ನಾಟಕದ ಜೀವಾಳವೆನಿಸಿಕೊಂಡಿರುವ ಪಂಚಮಾಂಕವನ್ನು ಕುರಿತು ಕೃಷ್ಣಶಾಸ್ತ್ರಿಗಳ ವಿಮರ್ಶೆಯಿದು: "ಈ ಅಂಕದಲ್ಲಿಯೂ ಕವಿಯ ಸಂವಿಧಾನ ಕೌಶಲ್ಯವೂ ಸನ್ನಿವೇಶ ಕಲ್ಪನಾಚಾತುರ್ಯವೂ ಚೆನ್ನಾಗಿ ಗೊತ್ತಾಗುತ್ತದೆ". ಸ್ವಪ್ನ ಸನ್ನಿವೇಶದ ಬಗೆಗೆ ಅವರು "ಸಣ್ಣಪಾತ್ರಗಳನ್ನು ಓಡಿಸಿ ರಾಜರಾಣಿಯರನ್ನು ಏಕಾಂತದಲ್ಲಿ ಸೇರಿಸುವುದಕ್ಕೆ ಕವಿಯು ಕಲ್ಪಿಸಿರುವ ನೆಪಗಳು ಅವನ ರಚನಾ ನೈಪುಣ್ಯವನ್ನು ತೋರಿಸತಕ್ಕವಾಗಿವೆ. ಸಾಮಾನ್ಯ ನಾಟಕಕರ್ತರಿಗೆ ಇಂಥ ಕಡೆಗಳಲ್ಲಿ ಬುದ್ಧಿ ಓಡುವುದು ಕಷ್ಟ" ಎಂದು ಅಭಿಪ್ರಾಯಪಡುತ್ತಾರೆ.

ಕವಿ ಈ ನಾಟಕಕ್ಕೆ ವತ್ಸರಾಜನ ಅಥವಾ ಪದ್ಮಾವತಿಯ ಹೆಸರನ್ನಿಡದೆ ವಾಸವದತ್ತೆಯ ಹೆಸರನ್ನಿಟ್ಟುದಕ್ಕೆ ಕಾರಣವೇನೆಂಬುದನ್ನು ವಿವೇಚಿಸುತ್ತ, ಪದ್ಮಾವತಿ ವತ್ಸರಾಜರ ಪಾತ್ರಗಳು ನಾಟಕದಲ್ಲಿ ಅಪ್ರಧಾನವೆಂದು ಕೃಷ್ಣ ಶಾಸ್ತ್ರಿಗಳು ಸಿದ್ಧಾಂತಿಸುವ ಪರಿ ಮನಮುಟ್ಟುವಂತಿದೆ: "ಪದ್ಮಾವತಿ ಇನ್ನೂ ಮದುವೆಯಾಗಿಲ್ಲದ, ಕೃತ್ರಿಮವನ್ನು ಕಾಣದ ಹುಡುಗಿ. ಅವಳಲ್ಲಿ ಜೋರಿಲ್ಲ, ಜಬರುದಸ್ತಿಲ್ಲ, ಮುಂದಾಳುತನವಿಲ್ಲ....ವತ್ಸರಾಜನು ವಾಸವದತ್ತೆ ಪದ್ಮಾವತಿಯರ ಗುಣಾತಿಶಯಗಳನ್ನು ಚಿತ್ರಿಸುವುದಕ್ಕೆ ಇರುವ ಗೋಡೆ ಮಾತ್ರ." ಚತುರ್ಥಾಂಕದ ಒಂದು ಸಂದರ್ಭವನ್ನು ಕುರಿತು, "ಪದ್ಮಾವತಿಯು ಮಂಟಪದ ಒಳಗೆ ಇರದೆ ತನ್ನ ಹತ್ತಿರವೇ ಇದ್ದರೂ ಅವನು ಅದೇ ಮಾತನಾಡುತ್ತಿದ್ದನೆಂದು ತೋರುತ್ತದೆ" ಎಂದು ಊಹಿಸುವಲ್ಲಿ ಶಾಸ್ತ್ರಿಗಳು ಉದಯನನ ಪಾತ್ರದ ಜೀವನಾಡಿಯನ್ನು ಸರಿಯಾಗಿ ಹಿಡಿದಿದ್ದಾರೆ.

ನಾಟಕದಲ್ಲಿ ಬರುವ ವರ್ಣನೆಗಳನ್ನೂ ಅಲಂಕಾರಗಳನ್ನೂ ಉದ್ದೇಶಿಸಿ, "ಈ ನಾಟಕದಲ್ಲಿ ಇರುವುದೆಲ್ಲಾ ೫೭ ಪದ್ಯಗಳು. ಇಷ್ಟು ಸಂಗ್ರಹವಾಗಿ ರಸೈಕ ದೃಷ್ಟಿಯಿಂದ ನಾಟಕವನ್ನು ಗ್ರಥಿಸಿರುವುದರಿಂದ ಚಂಪೂ ಕಾವ್ಯ ಮುಂತಾದ ಗ್ರಂಥಗಳಲ್ಲಿ ಕಂಡುಬರಬಹುದಾದ ವರ್ಣನಾವೈಖರಿಗಳಿಗೂ ಅಲಂಕಾರವೈಚಿತ್ರ್ಯ ಗಳಿಗೂ ಘನೋಪದೇಶಗಳಿಗೂ ಇದರಲ್ಲಿ ಅವಕಾಶವಿಲ್ಲ" ಎಂದಿದ್ದಾರೆ. ಆದರೂ "ಅವು ಶುದ್ಧಾಂಗವಾಗಿ ಇಲ್ಲದಿಲ್ಲ" ಎಂದು ಅಭಿಪ್ರಾಯಪಟ್ಟು, ಕೆಲವು ಒಳ್ಳೆಯ ವರ್ಣನೆಗಳನ್ನೂ ಉಪಮಾನಗಳನ್ನೂ ಹೆಸರಿಸಿದ್ದಾರೆ.

'ಸ್ವಪ್ನವಾಸವದತ್ತ'ದಲ್ಲಿ ಚಿತ್ರಿತವಾಗಿರುವುದು ಶೃಂಗಾರರಸವೇ; ಆದರೆ ಅದರ ಎತ್ತರ ಅನ್ಯತ್ರ ದುರ್ಲಭವಾದುದು. "ಈ ನಾಟಕದಲ್ಲಿರುವುದು ಶೃಂಗಾರ ರಸ. ಆದರೆ ನಾಟಕದಲ್ಲಿ ಇಂಥ ಶೃಂಗಾರರಸವು ಅಪರೂಪ....ಭಾಸನ ಕಾವ್ಯದಲ್ಲಿ ಕಂಡುಬರುವ ಈ ಮೃದುಮಧುರವಾದ ಪರಿಶುದ್ಧವಾದ ಶೃಂಗಾರರಸವು

ಕಾಳಿದಾಸ ಶ್ರೀಹರ್ಷರ ಕಾಲಕ್ಕೆ ಕ್ರಮೇಣ ಹುಳಿ ಹಿಡಿದು, ನೊರೆ ಬಂದು ವಾಸನೆಯಿಟ್ಟುಕೊಳ್ಳುತ್ತದೆ” ಎಂಬ ಶಾಸ್ತ್ರಿಗಳ ನುಡಿ ಸತ್ಯಸ್ಯ ಸತ್ಯ.

ಈ ನಾಟಕದ ವಿದೂಷಕನನ್ನು ಕುರಿತು, “ಇವನು ಭಾಸನ ಕಾಲಕ್ಕೆ ಆಗಲೇ ಸಂಸ್ಕೃತ ನಾಟಕದಲ್ಲಿ ಮನೆ ಮಾಡಿಕೊಂಡು ಬೇರೂರಿ ಹಳಬನಾಗಿದ್ದಂತೆ ತೋರುತ್ತದೆ” ಎಂದು ಶಾಸ್ತ್ರಿಗಳು ಊಹಿಸುತ್ತಾರೆ; ಇದು ಸಂಸ್ಕೃತ ನಾಟಕದ ಪ್ರಾಚೀನತೆಯ ಮೇಲೆ ಹೊಸ ಬೆಳಕು ಚೆಲ್ಲುವ ವಿಚಾರವಾಗಿದೆ.

‘ಸ್ವಪ್ನವಾಸವದತ್ತ’ದಲ್ಲಿ ಭಾಸ ಏನು ಕೊಟ್ಟಿದ್ದಾನೆ ಎಂಬುದನ್ನು ಕೃಷ್ಣಶಾಸ್ತ್ರಿಗಳು ಸಂಗ್ರಹವಾಗಿ ಒಂದು ಮಾತಿನಲ್ಲಿ ತಿಳಿಸುತ್ತಾರೆ. “ಈ ನಾಟಕದಲ್ಲಿಯೂ, ಪ್ರತಿಮಾನಾಟಕದಲ್ಲಿರುವಂತೆ, ಅವನು ಒಂದು ಪ್ರೇಮಸಂಸಾರವನ್ನು ಚಿತ್ರಿಸಿದ್ದಾನೆ.”

ಕಡೆಯಲ್ಲಿ ಅವರು ಹೇಳುವ ಈ ಮಾತುಗಳಲ್ಲಿ ಒಟ್ಟು ನಾಟಕದ ಅತ್ಯಂತ ಸಮಂಜಸವಾದ, ಹೃದ್ಯವಾದ ವಿಮರ್ಶೆಯಿದೆ: “ಈ ನಾಟಕದ ಕಥೆಯಾಗಲಿ ರಸವಾಗಲಿ ಅಸಂಭಾವ್ಯವಾದ ಘಟನೆಗಳಿಂದಲೂ ಆರ್ಭಟದ ವೃತ್ತಾಂತಗಳಿಂದಲೂ ಪೋಷಿತವಾಗಿ ಕಾಮನಹಬ್ಬದ ಕಿಚ್ಚಿನಂತೆ ಬೊಬ್ಬೆಯನ್ನೆಬ್ಬಿಸುವಂತಿಲ್ಲ. ಇರುವುದೆಲ್ಲಾ ಲಲಿತವಾದ ಮೃದುವಾದ ಸನ್ನಿವೇಶಗಳು; ಏನೆಂದರೆ ಯಾರಿಗೆ ಮನಸ್ಸು ನೊಂದೀತೋ ಎಂಬಂಥ ಸಾಧುಪ್ರಾಣಿಗಳು! ‘ಸಾಯಂಕಾಲೇವನಾಂತೇ ಕುಸುಮಿತ ಸಮಯೇ ಸೈಕತೇ ಚಂದ್ರಿಕಾಯಾಂ’ ಸುಳಿದಾಡುವುದಕ್ಕೆ ಅರ್ಹವಾದವುಗಳು.” ಇದಕ್ಕಿಂತ ಸೊಗಸಾಗಿ ಭಾಸನ ಸೃಷ್ಟಿಯನ್ನು ಬಣ್ಣಿಸುವುದು ಶಕ್ಯವಿಲ್ಲ. ಕೃಷ್ಣಶಾಸ್ತ್ರಿಗಳ ಈ ಮಾತುಗಳಲ್ಲಿ ಯಾವುದನ್ನೂ ತೆಗೆಯುವಂತಿಲ್ಲ; ಮತ್ತೆ ಏನನ್ನೂ ಸೇರಿಸಬೇಕಾಗಿಲ್ಲ.

೪

‘ಸ್ವಪ್ನವಾಸವದತ್ತ’ವನ್ನು ಬಿಟ್ಟರೆ ಭಾಸಕೃತಿಗಳಲ್ಲಿ ‘ಪ್ರತಿಮಾನಾಟಕ’ಕ್ಕೆ ದ್ವಿತೀಯಸ್ಥಾನ. ‘ಪ್ರತಿಮಾನಾಟಕ’ ಹಾಗೂ ‘ಅಭಿಷೇಕನಾಟಕ’ಗಳ ವಸ್ತು ಒಂದೇ; ಆದರೆ ಸತ್ತ್ವದಲ್ಲಿ ಇವು ವಿಭಿನ್ನ. ಈ ಎರಡು ನಾಟಕಗಳನ್ನು ಹೋಲಿಸಿ ನೋಡಿ, ‘ಪ್ರತಿಮಾನಾಟಕ’ ನಿಸ್ಸಂದೇಹವಾಗಿ ಉತ್ಕೃಷ್ಟ ನಿರ್ಮಿತಿಯೆಂಬುದನ್ನು ಮನಗಾಣಿಸುತ್ತಾರೆ ಕೃಷ್ಣಶಾಸ್ತ್ರಿಗಳು: “ಪ್ರತಿಮಾ ನಾಟಕದಲ್ಲಿ ಕವಿಯು ತನ್ನ ಪ್ರತಿಭಾಪ್ರವಾಹನ್ನೆಲ್ಲಿ ಹರಿಸಿಬಿಟ್ಟಿದ್ದಾನೆ; ಅಭಿಷೇಕನಾಟಕಕ್ಕೆ ಬರುವಹೊತ್ತಿಗೆ ಆದು ಬರುದೊರೆಯಾಗುತ್ತದೆ; ಪ್ರತಿಮಾನಾಟಕವು ವಸ್ತುಪಾತ್ರ ರಸಾದಿಗಳಲ್ಲಿ ರಾಮಾಯಣಕ್ಕಿಂತ ತೀರ ಭಿನ್ನವಾಗಿ ನೂತನ ಸೃಷ್ಟಿಯಾಗಿದೆ. ಅಭಿಷೇಕನಾಟಕವು ಬಹುಭಾಗದಲ್ಲಿ ಅದರ ಶುಷ್ಕಸಂಗ್ರಹ ಮಾತ್ರ. ಒಂದನ್ನು ಓದಿ ಮತ್ತೊಂದನ್ನು ತೆಗೆದುಕೊಂಡರೆ ಸಕ್ಕರೆ ತಿಂದ ಬಾಯಿಯಲ್ಲಿ ನೀರು ಕುಡಿದಂತೆ ಸಪ್ಪೆಯಾಗಿ ಕಾಣುತ್ತದೆ.”

'ಪ್ರತಿಮಾನಾಟಕ'ಕ್ಕೆ ವಾಲ್ಮೀಕಿ ರಾಮಾಯಣವೆ ಆಕರ; ಆದರೆ ಭಾಸಪ್ರತಿಭೆ ಇಲ್ಲಿ ಕೇವಲ ಮೂಲಾನುಸಾರಿಯಾಗದೆ ತನ್ನದೆ ಆದ ಹೊಸ ಜಗತ್ತೊಂದನ್ನು ಕಟ್ಟಿದೆ; ನೂತನ ಸಂದೇಶವೊಂದನ್ನು ನೀಡಿದೆ. ಈ ಅಪೂರ್ವತೆಯನ್ನು ಕುರಿತು ಶಾಸ್ತ್ರಿಗಳು "ಪ್ರತಿಮಾನಾಟಕದ ಕಥಾಭಾಗವು ರಾಮಾಯಣದ್ದೇ ಆದರೂ ಅದರ ವಸ್ತುಕಲ್ಪನೆ, ಸಂವಿಧಾನ ರಚನೆ, ಪಾತ್ರಪ್ರದರ್ಶನ, ರಸಪರಿಪೋಷಣಗಳೆಲ್ಲವೂ ಬೇರೆಯಾಗಿವೆ. ಇವೆಲ್ಲದರ ಫಲವಾಗಿ ಪ್ರತಿಮಾನಾಟಕವು ಕರುಣರಸಪ್ಲಾವಿತವಾದರೂ ತನ್ನೊಳಗೇ ಒಂದು ಅಪೂರ್ವ ಪ್ರೇಮಸಂಸಾರವನ್ನು ಚಿತ್ರಿಸಿದೆ. ಅಳುವ ಕಣ್ಣಿನಲ್ಲಿ ಬೆಳಗುವ ಹೃದಯವು ಪ್ರತಿಫಲಿಸಿದೆ" ಎಂದು ಬಂಧುರವಾಗಿ ವ್ಯಾಖ್ಯಾನಿಸಿದ್ದಾರೆ.

ಈ ನಾಟಕದ ಪ್ರಥಮಾಂಕದಲ್ಲಿ, ರಾಮ ಕಾಡಿಗೆ ಹೊರಟಾಗ ದಶರಥ ಅದನ್ನು ಕೇಳಿ ತತ್ತರಿಸಿಕೊಂಡು ಬರುತ್ತಾನೆ; ಆದರೂ ರಾಮ ನಿಲ್ಲದೆ ಹೊರಟು ಹೋಗುತ್ತಾನೆ. ರಾಮನ ಈ ಅಲಕ್ಷ್ಯದಿಂದ ಅಂಕವನ್ನು ಮುಗಿಸಿರುವುದೊಂದು ದೋಷವಾಗಿ ಕಾಣಬಹುದು ಕೆಲವರಿಗೆ. ಆದರೆ ಕವಿ ಹಾಗೆ ಮಾಡಿದ್ದು ಉಚಿತವೆಂದು ಸಮರ್ಥಿಸುತ್ತಾರೆ ಶಾಸ್ತ್ರಿಗಳು: "ಇದು ದಶರಥನ ಶೋಕವು ತೀವ್ರವಾಗುವುದಕ್ಕೆ ದಾರಿ. ಹಾಗಲ್ಲದೆ, ಮಕ್ಕಳು ಮರಿಗಳೆಲ್ಲರೂ ಬಂದು ಹತ್ತಿರವಿದ್ದು ಅವನು ಅತ್ತು ಅತ್ತು ಹಂಬಲಿಕೆಯು ಹಳದಾಗಿ, ಆಮೇಲೆ ಹಲವು ದಿನಗಳಮೇಲೆ ಸೀತಾ ರಾಮರು ನೆಂಟರ ಮನೆಗೆ ಹೋಗಿಬರುವರಂತೆ ಹೊರಡುವುದರಲ್ಲಿ ಕರುಣರಸ ಪರಿಪುಷ್ಟಿ ಇರುವುದಿಲ್ಲ...."

ನಾಟಕದ ಎರಡನೆಯ ಅಂಕದಲ್ಲಿ ವ್ಯಕ್ತವಾಗಿರುವ ಕವಿಸಾಮರ್ಥ್ಯವೇನೆಂಬುದನ್ನು ಶಾಸ್ತ್ರಿಗಳು ಹೀಗೆ ನಿರ್ದೇಶಿಸಿದ್ದಾರೆ: "ಎರಡನೆಯಂಕವೆಲ್ಲವೂ ಶೋಕಮಯ. ಬರಿಯ ಅಳುವನ್ನು ಒಂದು ಅಂಕದ ತುಂಬ ತುಂಬುವುದು ಅಸಾಧ್ಯವಾದ ಕೆಲಸ. ಭಾಸನು ಈ ಅಸಾಧ್ಯವನ್ನು ಸಾಧಿಸಿದ್ದಾನೆ."

ದ್ವಿತೀಯಾಂಕದಲ್ಲಿ ರಾಮಾದಿಗಳ ಅನುಕ್ತಸಂದೇಶವೊಂದು ಬರುತ್ತದೆ; ಅವರು "ಬಹಳ ಹೊತ್ತು ಯೋಚಿಸಿ ಯೋಚಿಸಿ ಏನನ್ನೋ ಹೇಳಬೇಕೆಂದು ಪ್ರಯತ್ನ ಮಾಡಿದರು; ತುಟಿಗಳು ಅಲುಗಿದುವು. ಕಣ್ಣೀರು ಬಂದು ಕೊರಲ ಸೆರೆ ಬಿಗಿಯಿತು. ಮಾತೇ ಹೊರಡಲಿಲ್ಲ; ಆದ್ದರಿಂದ ಏನನ್ನೂ ಹೇಳದೆಯೆ ಮುಂದಕ್ಕೆ ಹೊರಟುಹೋದರು" ಎಂದು ಸುಮಂತ್ರ ದಶರಥನಿಗೆ ಹೇಳುತ್ತಾನೆ. ಇಲ್ಲಿನ ಅನುಕ್ತಿ ಅತ್ಯಂತ ಧ್ವನಿಪೂರ್ಣವಾಗಿದೆ. "ಇತರ ಕವಿಗಳು ಲೆಕ್ಕಾಚಾರಮಾಡಿ, ವಕ್ತೃಶ್ರೋತೃಗಳಿಗೆ ಒಬ್ಬೊಬ್ಬರಿಗೆ ಇಷ್ಟಿಷ್ಟೆಂದು ಅಳತೆ ತೂಕಮಾಡಿ ಶ್ಲೋಕಗಳನ್ನು ಹಂಚಿ ಹೇಳಿಸಿಬಿಡುವಾಗ, ಭಾಸನು ಬರಿಯ ಕೈಯಲ್ಲಿ ಜಣ್ಣ ಕಟ್ಟಿಬಿಟ್ಟಿದ್ದಾನೆ. ಶ್ರಾವ್ಯವಾಗಿರಬೇಕಾದ ಸಂದೇಶಕ್ಕೆ ಬದಲಾಗಿ ಅದಕ್ಕಿಂತ, ಕಾವ್ಯದೃಷ್ಟಿಯಲ್ಲಿ, ಅಭಿರಾಮತರವಾದ ಅಶ್ರುತ ಸಂದೇಶವನ್ನು ತಂದಿಟ್ಟು ತನ್ನ ಕೌಶಲವನ್ನು

ವ್ಯಕ್ತಗೊಳಿಸಿದ್ದಾನೆ" ಎಂದು ಶಾಸ್ತ್ರಿಗಳು ಭಾಸನ ಧ್ವನಿಗಭೀರತೆಯನ್ನು ಕುರಿತು ಮೆಚ್ಚುಕೆ ವ್ಯಕ್ತಪಡಿಸಿರುವುದು ಸಮುಚಿತ.

ತೃತೀಯಾಂಕವೆ ಪ್ರತಿಮಾನಾಟಕದ ಶಿಖರವೆಂದು ಕೃಷ್ಣಶಾಸ್ತ್ರಿಗಳ ಅಭಿಮತ. "ಪ್ರತಿಮಾನಾಟಕವು ಮೂರನೆಯ ಅಂಕದಲ್ಲಿ ಮುಗಿಲು ಮುಟ್ಟಿ ಇಲ್ಲಿಂದ ಇಳಿಯಲು ಆರಂಭವಾಗಿದೆ ಎಂದು ಹೇಳಬಹುದು. ಮೊದಲನೆಯ ಅಂಕದಲ್ಲಿ ಪ್ರತಿಮಾಸ್ಥಾಪನೆಗೆ ಏರ್ಪಾಡು; ಎರಡನೆಯ ಅಂಕದಲ್ಲಿ ದಶರಥನು ಸತ್ತು 'ಪ್ರತಿಮೆ'ಯ ಸ್ಥಾಪನೆ; ಮೂರನೆಯ ಅಂಕದಲ್ಲಿ ಆ ಪ್ರತಿಮಾ ಸಂದರ್ಶನದಿಂದ ಶೋಕರಸಪ್ರವಾಹವು ಹುಚ್ಚುಹುಚ್ಚಾಗಿ ಹರಿದು ಅಯೋಧ್ಯೆಯನ್ನು ತೇಲಿಸಿಬಿಡುವುದು. ಇಲ್ಲಿಂದ ಮುಂದೆ ಆ ನೆರೆಯ ಹಾವಳಿಯಿಂದ ಚೇತರಿಸಿಕೊಂಡು ಎಲ್ಲವೂ ಸಮಾಧಾನಸ್ಥಿತಿಗೆ ಬರುವುದು ಮಾತ್ರ"ಎಂದು ಅವರ ವಿವರಣೆ. ಆದರೆ ಭರತ ಸೀತೆ ಕೈಕೆಯರ—'ಇವರು ಶ್ರೀಮದ್ರಾಮಾಯಣದ ಭರತಾದಿಗಳಲ್ಲ'—ಗುಣ ಪರಿಚಯವಾಗಬೇಕಾದರೆ ಮುಂದಿನ ಅಂಕಗಳು ಅವಶ್ಯವೆಂದು ಹೇಳುತ್ತಾರೆ.

ಪಂಚಮಾಂಕದ ಮುಖ್ಯ ಸಂಗತಿ ಸೀತಾಪಹರಣ; ಆದರೆ ಅದು ಕವಿಕಾವ್ಯ ದೃಷ್ಟಿಯಿಂದ 'ಸೀತಾ-ಉದ್ಧರಣ'ವೆಂಬುದು ಕೃಷ್ಣಶಾಸ್ತ್ರಿಗಳ ನಿಲುವು. ರಾಮಾಯಣದಲ್ಲಿ ಬರುವ ಸುವರ್ಣಮೃಗವೃತ್ತಾಂತವನ್ನು ಭಾಸ ತನ್ನದೇ ಆದ ರೀತಿಯಲ್ಲಿ ಮಾರ್ಪಡಿಸಿದ್ದಾನೆ; ಇಲ್ಲಿ ಬರುವ ಸೀತೆಯ ಸ್ವಭಾವ ವಾಲ್ಮೀಕಿಯ ಸೀತೆಯದಕ್ಕಿಂತ ಸುಸಂಸ್ಕೃತವಾದುದೆಂದು ಅವರ ಇಂಗಿತ. ರಾಮಾಯಣದ ಸೀತೆಯನ್ನು ಅವರು ಟೀಕಿಸುವ ವೈಖರಿಯಿದು: "(ಅವಳು) ಜಿಂಕೆಯ ವಿಚಾರವಾಗಿ ಅದಮ್ಯವಾದ ಚಾಪಲ್ಯವನ್ನೂ, ರಾಮನ ಮಾತಿನಲ್ಲಿ ಅಲಕ್ಷ್ಯವೊಂಡಾಟಗಳನ್ನೂ, ಲಕ್ಷ್ಮಣನ ನಡತೆಯಲ್ಲಿ ಅಸಹ್ಯವಾದ ನಿಷ್ಠುರತೆಯನ್ನೂ ವ್ಯಕ್ತಪಡಿಸುತ್ತಾಳೆ. ಹೇಳಿದ ಮಾತು ಕೇಳದೆ, ಸ್ವಂತ ಬುದ್ಧಿಯಿಲ್ಲದೆ, ಅಲ್ಪಸ್ವಲ್ಪ ವಿಷಯಗಳಿಗೆಲ್ಲಾ ಮುರಿತುಕೊಂಡು 'ಹೊಳೆ ಬೀಳುತೀನಿ, ವಿಷ ತಗೋತೀನಿ' ಎಂದು ಮನೆಯವರನ್ನು ಬೆದರಿಸುತ್ತ, ಚಾಪಲ್ಯ ಚಂಡಿತನಗಳಿಂದ ಸಂಸಾರವನ್ನು ನರಕವಾಗಿ ಮಾಡುವ ಅವಿವೇಕಿ ಹೆಂಗಸಿನಂತೆ ವ್ಯವಹರಿಸುತ್ತಾಳೆ." ಭಾಸನ ಸೀತಾಪಾತ್ರದ ಬಗ್ಗೆ ಕೃಷ್ಣಶಾಸ್ತ್ರಿಗಳ ಭಾಷ್ಯ ಸಾಧುವಾಗಿದೆ: "ಸೀತೆಗೆ ಭರತನಲ್ಲಿ, ಬಹುದಿನದ ಮೇಲೆ ಊರಿಗೆ ಬಂದ ಮಗನ ಮೇಲೆ ಹೇಗೊ ಹಾಗೆ, ತಾಯ್ತನದ ಅಂತಃಕರಣ."

"ಪ್ರತಿಮಾನಾಟಕದಲ್ಲಿ ಅಲಂಕಾರಗಳು, ವರ್ಣನೆಗಳು ವಿಶೇಷವಾಗಿಲ್ಲ; ಆದರೆ ಇರುವುವು ಶ್ರೇಷ್ಠ" ಎಂದು ಹೇಳಿ ಎರಡು ಉದಾಹರಣೆಗಳನ್ನು ಕೊಡುತ್ತಾರೆ ಶಾಸ್ತ್ರಿಗಳು: ಭರತ ರಾಮಾಶ್ರಮದ ಬಾಗಿಲಿಗೆ ಬಂದು ಕೂಗಿದಾಗ ಅವನ ಧ್ವನಿಯನ್ನು ಲಕ್ಷ್ಮಣ 'ಘನಧೀರಂ' ಮುಂತಾಗಿ ವರ್ಣಿಸುತ್ತಾನೆ. ಇದನ್ನು ಕುರಿತು, "ಒಬ್ಬ ಮನುಷ್ಯನ ಧ್ವನಿಯಲ್ಲಿ ಅಡಗಿರುವ ನಾನಾ ಗುಣ

ಗಳನ್ನು ಹೀಗೆ ವಿಭಜನೆಮಾಡಿ, ಆ ಒಂದೊಂದನ್ನೂ ಪ್ರತಿಯೊಂದು ಸ್ಥಿತಿಯಲ್ಲಿಯೂ ಇಷ್ಟು ಸ್ಫುಟವಾಗಿ ವಿವರಿಸಿ ವ್ಯಕ್ತಪಡಿಸಿ ಒಂದು ದೊಡ್ಡ ವೃತ್ತದ ತುಂಬ ವರ್ಣಿಸಿರುವುದು ಪ್ರಾಯಶಃ ಮತ್ತಾವ ಕವಿಯಲ್ಲಿಯೂ ಕಂಡುಬರಲಾರದು" ಎಂದು ಅಭಿಪ್ರಾಯಪಡಲಾಗಿದೆ. ಮತ್ತೊಂದು ವರ್ಣನೆ, ರಾಮ ಸೀತೆಯನ್ನರಸುತ್ತಿದ್ದಾಗ ನೋಡಿದ ನಾಲ್ಕು ಪಾತೆಗಳದು. ಒಂದೊಂದು ಪಾತೆಗೂ ನೀರೆರೆದಿರುವುದರಲ್ಲಿ ಪೌರ್ವಾಪರ್ಯ, ಕಾಲಾನುಕ್ರಮ ಹೇಗೆ ಕಾಣುತ್ತವೆ ಎಂದು ಶಾಸ್ತ್ರಿಗಳು ವಿಸ್ಮಯಗೊಂಡು, ಆ ವೃತ್ತವನ್ನು[4] ವಿಶ್ಲೇಷಿಸುತ್ತಾರೆ: "ಇದರ ನಾಲ್ಕು ಪಾದಗಳಲ್ಲಿ ನಾಲ್ಕು ಪಾತೆಗಳ ವರ್ಣನೆಯಿದೆ. ಮೊದಲನೆಯದರಲ್ಲಿ ಇನ್ನೂ ಆಗತಾನೆ ನೀರು ಹಾಕಿದೆ; ಆದ್ದರಿಂದ ನೀರು ಇನ್ನೂ ನಿಂತಿಲ್ಲ; ಸುತ್ತುತ್ತಿದೆ; ನೊರೆ ಆರಿಲ್ಲ. ಎರಡನೆಯದರಲ್ಲಿ, ನೀರುಹಾಕಿ ಅದಕ್ಕಿಂತ ಸ್ವಲ್ಪ ಹೊತ್ತಾಗಿದೆ; ಆದ್ದರಿಂದ ನೀರು ನಿಂತಿದೆ; ನೀರು ತಿಳಿಯಾಗಿದೆ; ನೊರೆಯಿಲ್ಲ; ಆದ್ದರಿಂದ ಹಕ್ಕಿಯು ಬಂದು ಅಲ್ಲಿ ಕುಳಿತು ಅನಾಯಾಸವಾಗಿ ನೀರು ಕುಡಿಯುತ್ತಿದೆ. (ಮೊದಲನೆಯ ಪಾತೆಯ ಹಾಗೆ ನೀರು ಇನ್ನೂ ಬೊಗ್ಗಡವಾಗಿ ಗರಗರನೆ ಸುತ್ತುತ್ತಿದ್ದರೆ ಹಕ್ಕಿಯು ಶಾಂತವಾಗಿ ಅಲ್ಲಿ ನೀರು ಕುಡಿಯುವುದಕ್ಕೆ ಕೂರುತ್ತಿರಲಿಲ್ಲ). ಮೂರನೆಯದರಲ್ಲಿ, ಇನ್ನೂ ಸ್ವಲ್ಪ ಹೊತ್ತಾಗಿದೆ; ಆದ್ದರಿಂದ ನೀರೆಲ್ಲಾ ಇಂಗಿ ಹೋಗಿ, ಗಿಡದ ಸುತ್ತ ಗೂಡುಮಾಡಿಕೊಂಡಿದ್ದ ಇರುವೆ ಗೊದ್ದ ಮುಂತಾದುವುಗಳ ಗೂಡಿಗೆ ನುಗ್ಗಿ ಅವನ್ನು ಹೊರಡಿಸಿದೆ; ನಾಲ್ಕನೆಯದರಲ್ಲಿ ಎಲ್ಲಕ್ಕಿಂತ ಮುಂಚೆ ಹಾಕಿದ್ದು; ಆದ್ದರಿಂದ ಅದರಲ್ಲಿ ನೀರು ಸ್ವಲ್ಪವೂ ಇಲ್ಲ. ಗಿಡದ ಸುತ್ತ, ನೀರು ಎಷ್ಟು ಮಟ್ಟಕ್ಕೆ ಬಂದಿತ್ತು ಎಂದು ಸೂಚಿಸುವ ಗುರುತು ಮಾತ್ರ ಇದೆ." ಕವಿಹೃದಯವನ್ನು ಹಿಡಿದು ವಿವರಿಸುವ ವಿಮರ್ಶಕಶಕ್ತಿಗೆ ಮಾದರಿಯಂತಿದೆ ಈ ವಿಮರ್ಶೆಯ ಕ್ರಮ.

ಇಂತಹ ವರ್ಣನೆಗಳನ್ನು ಕುರಿತು "ಇವುಗಳಲ್ಲಿ ಸ್ವಲ್ಪವೂ ಕೃತಕತ್ವವಿಲ್ಲ. ಈ ಕಾವ್ಯವನ್ನು ಬರೆದಾಗ ಸಂಸ್ಕೃತ ಕವಿಗೆ ಇನ್ನೂ ಸ್ವಾತಂತ್ರ್ಯವಿತ್ತು; ಅವನ ಕೃತಿಯಲ್ಲಿ ಜೀವವಿತ್ತು; ಪ್ರತಿಭಾಸರಸ್ಸಿನಲ್ಲಿ ಕವಿಸಮಯವೂ ಚಮತ್ಕಾರಪ್ರೀತಿಯೂ ಅಂತರಗಂಗೆಯ ಗಿಡದಂತೆ ಬೆಳೆದು ರಸವನ್ನು ಮುಚ್ಚಿಬಿಟ್ಟಿರಲಿಲ್ಲ" ಎಂದು ಹೇಳುವಲ್ಲಿ ಭಾಸನ ಕಾವ್ಯಗುಣ, ಕಾಲಗುಣ ಎರಡನ್ನೂ ಚೆನ್ನಾಗಿ ಗ್ರಹಿಸಿದ್ದಾರೆ ಶಾಸ್ತ್ರಿಗಳು.

---

[4] ಅವನಿರುಹಾಲವಾಲದೆ ಜಲಂ ನೊರೆಗೂಡಿ ಸಮಂತು ಸುತ್ತುಗುಂ
ಸವನಿಸೆ ತೃಷ್ಣೆ ಸಾರ್ದು ವಿಹಗಂ ಜಲಮಂ ಶ್ರಮಮಿಲ್ಲದೀಂಟುಗುಂ
ವಿವರದೆ ತೀವೆ ಸೀರ್ ನನೆದ ಕೀಟಕುಲಂ ಸ್ಥಳಕೈದುಗುಂ ದ್ರುಮಂ
ನವವಲಯಂಗಳಂ ತಳೆದುವಿಂತಡಿಯೊಳ್ ಜಳನಾಶರೇಖೆಯಿಂ

(ವೇ॥ ಸೀತಾರಾಮಶಾಸ್ತ್ರಿಗಳ ಭಾಷಾಂತರ)

'ಪಂಚರಾತ್ರ'ದ ಕತೆ ಕವಿಕಲ್ಪತವೆಂದೂ, ಇದು "ನಾಟಕದೊಳಗೆ ಅವನು ಪ್ರದರ್ಶಿಸುವ ಸ್ವೋಪಜ್ಞತೆಗೂ ಕಲ್ಪನಾಶಕ್ತಿಗೂ ಮಾದರಿಯಾಗಿ ಕೊಟ್ಟಿರುವ ಮುಂಗಡ"ವೆಂದೂ ಕೃಷ್ಣಶಾಸ್ತ್ರಿಗಳು ಸೂಚಿಸುತ್ತಾರೆ. "ನಾಟಕದಲ್ಲಿ ಉದ್ದಕ್ಕೂ ಎಲ್ಲಿ ನೋಡಿದರೂ ಒಂದು ವಿಧವಾದ ಉದಾತ್ತತೆ, ಘನತೆ, ಗಾಂಭೀರ್ಯ" ಸುಳಿಯುತ್ತಿರುವುದನ್ನು ಕಾಣಿಸಿದ್ದಾರೆ.

೫

ಇನ್ನು ಭಾಸನ ಏಕಾಂಕ ನಾಟಕಗಳು: ಮಧ್ಯಮವ್ಯಾಯೋಗ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ, ಊರುಭಂಗ. ಈ ಐದು ನಾಟಕಗಳೂ ಒಂದು ದೊಡ್ಡ ನಾಟಕದ ಐದು ಅಂಕಗಳಾಗಿದ್ದಿರಬಹುದೆಂದು ಒಂದು ಊಹೆ. ಆದರೆ ಕೃಷ್ಣಶಾಸ್ತ್ರಿಗಳಿಗೆ ಅದು ಸಮ್ಮತವಲ್ಲ; ಅವರ ವಾದ ಯುಕ್ತಿಯುಕ್ತವಾಗಿಯೂ ಇದೆ, ಸರಸವಾಗಿಯೂ ಇದೆ: "ಈಗಿನ ರೂಪದಲ್ಲಿ ಇವು ಒಂದೊಂದೂ ಸ್ವತಂತ್ರವಾಗಿವೆ—ಪರಸ್ಪರ ಸಾಪೇಕ್ಷವಾಗಿಲ್ಲ; ತೊಟ್ಟು ತುದಿಗಳನ್ನು ಕಳೆದು ಜೋಡಿಸಿದರೆ ಹೊಂದುವಂತಿಲ್ಲ. ಐದು ಸಣ್ಣ ಸಣ್ಣ ಹಣ್ಣುಗಳಂತಿವೆಯೇ ಹೊರತು, ಒಂದು ಹಣ್ಣನ್ನು ಕುಯ್ದು ಮಾಡಿದ ಐದು ಹೋಳುಗಳಂತಿಲ್ಲ—ದ್ರಾಕ್ಷೆಯ ಹಣ್ಣುಗಳಂತಿವೆಯೇ ಹೊರತು ಕಿತ್ತಳೆಯ ತೊಳೆಗಳಂತಿಲ್ಲ."

'ಮಧ್ಯಮವ್ಯಾಯೋಗ'ದ ವಸ್ತು ಕವಿಕಲ್ಪಿತವೆಂದು ಹೇಳಿ, "ಇದು ಕ್ಷಣ ಕ್ಷಣಕ್ಕೂ ಕುತೂಹಲವನ್ನುಂಟುಮಾಡುವ ಒಂದು ವಿಚಿತ್ರ ಸಾಂಸಾರಿಕ ಕತೆ. ಇದರಲ್ಲಿ ತಾಯಿತಂದೆಗಳ ಪ್ರೇಮವೂ ತಂದೆಮಕ್ಕಳ ಚಿತ್ರವೂ ಬಹು ಚೆನ್ನಾಗಿ ಚಿತ್ರಿಸಲ್ಪಟ್ಟಿವೆ" ಎಂದಿದ್ದಾರೆ ಶಾಸ್ತ್ರಿಗಳು. ಇದರ ಪಾತ್ರಗಳನ್ನು ಕುರಿತು, "(ಹಿಡಿಂಬೆ ಭೀಮ ಘಟೋತ್ಕಚರು) ಇಲ್ಲಿ ರಾಕ್ಷಸಪ್ರಾಯರಲ್ಲ; ಕುರುಕ್ಷೇತ್ರದಲ್ಲಿ ಘೋರವಾಗಿ ಕಾದುವ ಶೂರರಲ್ಲ; ಶಾಂತಸಂಸಾರದಲ್ಲಿ ಸಂತೋಷದಿಂದಿರುವ ಪ್ರಚಂಡರಾದ ತಂದೆಮಕ್ಕಳು" ಎಂದು ವ್ಯಾಖ್ಯಾನಿಸುತ್ತಾರೆ.

'ದೂತವಾಕ್ಯ'ದಲ್ಲಿ ಬಹು ಮುಖ್ಯವಾದುದು ಕೃಷ್ಣಸಂಧಾನಪ್ರಸಂಗ. ಈ ಸಂದರ್ಭದಲ್ಲಿ "ಕೃಷ್ಣದುರ್ಯೋಧನರ ವಾಗ್ಯುದ್ಧ ಬಹು ಚೆನ್ನಾಗಿ ಚಿತ್ರಿತವಾಗಿದೆ"ಯೆಂದು ಅವರ ವಿಮರ್ಶೆ.

'ದೂತಘಟೋತ್ಕಚ'ದ ವಸ್ತುವೂ ಕವಿಕಲ್ಪಿತವೆಂದು ಹೇಳಿ, ಇದರಲ್ಲಿ ಬರುವ ಕರ್ಣಪಾತ್ರವನ್ನು ಕೃಷ್ಣಶಾಸ್ತ್ರಿಗಳು ಹೀಗೆ ವರ್ಣಿಸುತ್ತಾರೆ: "ಅವನು ಅರ್ಧರಥ; ಅಲ್ಲದೆ ಕವಚವನ್ನು ಇಂದ್ರನಿಗೆ ಕೊಟ್ಟು ಅಸ್ತ್ರಗಳನ್ನು ವಿಫಲ ಮಾಡಿಕೊಂಡು ಪೊಳ್ಳಾಗಿ ಕುಳಿತಿರುವವನು." 'ಪೊಳ್ಳಾಗಿ' ಎಂಬ ಮಾತು ಎಷ್ಟು ಸೊಗಸಾಗಿದೆ, ಶಕ್ತಿವತ್ತಾಗಿದೆ!

'ಕರ್ಣಭಾರ'ದಲ್ಲಿ ಚಿತ್ರಿತವಾಗಿರುವುವು ಕರ್ಣನ ಶೌರ್ಯ, ಔದಾರ್ಯಗಳು.

"ಈ ಎರಡು ಗುಣಗಳ ಗಟ್ಟಿಯನ್ನು ಕವಿಯು ಕರಾಳ ಕುರುಕ್ಷೇತ್ರದ ಕಾಲ ಮುಖವೆಂಬ ಒರೆಗಲ್ಲಿನಮೇಲೆ ಉಜ್ಜಿ ಒಂದೆರಡು ಗೆರೆಯನ್ನು ಮಾತ್ರ ತೋರಿಸಿದ್ದಾನೆ. ಅದರ ಬಣ್ಣದಿಂದ ಗಟ್ಟಿಯ ಬಣ್ಣವನ್ನು ಊಹಿಸಿಕೊಳ್ಳಬೇಕು" ಎನ್ನುತ್ತಾರೆ ಶಾಸ್ತ್ರಿಗಳು.

'ಊರುಭಂಗ'ದಲ್ಲಿ ಕವಿ ಕರುಣರಸವನ್ನು ಮಗುವಿನ ಮೂಲಕ ಪರಿಣಾಮಕಾರಿಯಾಗಿ ಆವಿಷ್ಕರಿಸಿದ್ದಾನೆ. ಈ ದೃಷ್ಟಿಯಿಂದ ಸಂಸ್ಕೃತದಲ್ಲಿ ಇದೊಂದು ಅಪೂರ್ವ ನಾಟಕ. "ಕರುಣರಸವನ್ನು ಇಷ್ಟು ತೀವ್ರಗೊಳಿಸುವುದಕ್ಕೆ ಮಗುವನ್ನು ಉಪಯೋಗಿಸಿಕೊಂಡಿರುವುದು ಸಂಸ್ಕೃತನಾಟಕಗಳಲ್ಲಿ ಇದೊಂದೇ ಎಂದು ತೋರುತ್ತದೆ" ಎಂಬ ವಿಮರ್ಶೆಯಲ್ಲಿ ತಥ್ಯವಿದೆ.

೬

ಪುಸ್ತಕದ ಕಡೆಯಲ್ಲಿ ಭಾಸನ ಇತರ ನಾಟಕಗಳ ಪರಾಮರ್ಶೆಯಿದೆ. ಅವಿಮಾರಕ, ಬಾಲಚರಿತ, ಚಾರುದತ್ತ, ಪ್ರತಿಜ್ಞಾಯೌಗಂಧರಾಯಣ, ಅಭಿಷೇಕನಾಟಕ—ಇವುಗಳನ್ನು 'ಇತರ' ಪಂಕ್ತಿಯಲ್ಲಿ ಕೂಡಿಸಿದ್ದೇಕೆ ಎಂಬುದಕ್ಕೆ ಶಾಸ್ತ್ರಿಗಳು ಹೇಳುವ ಸಮಾಧಾನವಿದು: "ಇವು ಯಾವುವೂ ಸ್ವಪ್ನವಾಸವದತ್ತ ಪ್ರತಿಮಾನಾಟಕ ಪಂಚರಾತ್ರಗಳ ರೇಖೆಗೆ ಬರದೆ ಇರುವುದರಿಂದಲೂ, ಚಾರುದತ್ತವು ಅಸಮಗ್ರವಾಗಿರುವುದರಿಂದಲೂ ಇವುಗಳನ್ನು 'ಇತರ' ಪಂಕ್ತಿಯಲ್ಲಿ ಒಟ್ಟಿಗೆ ತಂದು ಸೇರಿಸಿದೆ."

ಕೃಷ್ಣಶಾಸ್ತ್ರಿಗಳು ಭಾಸಸಾಹಿತ್ಯವನ್ನೆಲ್ಲ ಏಕಪ್ರಕಾರವಾಗಿ ಕಣ್ಮುಚ್ಚಿಕೊಂಡು ಹೊಗಳುತ್ತಾರೆಂದು ನಿರೀಕ್ಷಿಸುವವರಿಗೆ ಈ ನಾಟಕಗಳ ವಿಮರ್ಶೆಯಿಂದ ನಿರಾಶೆಯಾದೀತು. 'ಅವಿಮಾರಕ'ವನ್ನು ಅವರು ಕಟುವಾಗಿಯೆ ಟೀಕಿಸುತ್ತಾರೆ. ಇದು ಭಾಸನ ಆರಂಭ ರಚನೆಯಾಗಿರಬಹುದಾದ್ದರಿಂದ, "ಭಾಸನ ಪ್ರತಿಭಾಪರ್ವತ ಶ್ರೇಣಿಯಲ್ಲಿ ಉನ್ನತವಾದ ಶಿಖರವೇನೂ ಅಲ್ಲ." ಎಂದು ಅವರ ಯುಕ್ತವಾದ ನಿರ್ಧಾರ. "ನಾಟಕದ ಕತೆಯು ತೊಡಕು ತೊಡಕಾಗಿದೆಯೆ ಹೊರತು, ಅದರ ವಸ್ತುವಿನಲ್ಲಿ ಸಂವಿಧಾನಕೌಶಲವಿಲ್ಲ, ರಸವತ್ತಾದ ಸನ್ನಿವೇಶಗಳಿಲ್ಲ. ಅಶ್ರದ್ಧೇಯ ಆಕಸ್ಮಿಕ ಅಮಾನುಷ ಅಸಾಮಾನ್ಯ ಸಾಧನಗಳಿಂದ ಕಥೆಯ ಚಮತ್ಕಾರವು ಹೆಚ್ಚುವಂತೆ ಮಾಡಿದ ಒಂದು ಕೃತಕಪ್ರಯತ್ನವು ಸ್ಪಷ್ಟವಾಗಿ ಕಂಡುಬರುತ್ತದೆ" ಎಂದು ಆಕ್ಷೇಪಿಸಿ, "ಇದು ಪ್ರೌಢ ಚಂಪೂ ಕಾವ್ಯದಲ್ಲಿಯೂ ಅಕ್ಷಮ್ಯವಾದೀತು" ಎಂದು ಕವಿಯ ವರ್ಣನಾವ್ಯಾಮೋಹವನ್ನು ಖಂಡಿಸಿದ್ದಾರೆ.

'ಬಾಲಚರಿತ'ವೂ ಉತ್ತಮ ನಾಟಕವೇನಲ್ಲ. ಅದಕ್ಕೆ ಮೂಲ ಭಾಗವತ; ಆದರೆ "ಮೊದಲೆರಡು ಅಂಕಗಳಲ್ಲಿ ಹೊರತು ಮುಂದೆ ಯಾವುದರಲ್ಲಿಯೂ ಭಾಗವತ ಕಥೆಗಿಂತ ಅತಿಶಯವೇನೂ ಕಾಣುವುದಿಲ್ಲ" ಪ್ರತಿಭೆಯಿಲ್ಲದಿದ್ದರೂ

ಚಮತ್ಕಾರದಿಂದ ಜನರಂಜನೆ ಮಾಡುವ ಉದ್ದೇಶವಿದು. “ಒಟ್ಟಿನಮೇಲೆ, ಈ ನಾಟಕದಲ್ಲಿ ಕವಿಯ ಸಂವಿಧಾನಕೌಶಲಕ್ಕಿಂತಲೂ, ವ್ಯಕ್ತಿವಿಶೇಷಗಳು ಅವುಗಳ ಚಿತ್ರವಿಚಿತ್ರವಾದ ವೇಷಭೂಷಗಳು ರಂಗದೃಶ್ಯಾದಿಸಲಕರಣೆಗಳು—ಇವುಗಳಿಂದ ರಂಜನೆಮಾಡಲು ಪ್ರಯತ್ನಪಟ್ಟಂತಿದೆ” ಎಂಬುದು ಕೃಷ್ಣಶಾಸ್ತ್ರಿಗಳ ಸ್ಪಷ್ಟೋಕ್ತಿ.

ಇವುಗಳ ಸಾಲಿನಲ್ಲಿ ‘ಚಾರುದತ್ತ’ ಬಹು ಗಮನಾರ್ಹವಾದ ರೂಪಕ. “ಅವಿಮಾರಕ’ ಬಾಲಚರಿತಗಳಿಗಿಂತ ಕಲಾದೃಷ್ಟಿಯಲ್ಲಿ ಎಷ್ಟೋ ಮೇಲೆಂದು ಧಾರಾಳವಾಗಿ ಹೇಳಬಹುದು”, ಎಂದಿದ್ದಾರೆ ಶಾಸ್ತ್ರಿಗಳು. “ಇದರ ವಸ್ತುವು ಪುರಾಣೇತಿಹಾಸದಿಂದ ತೆಗೆದುಕೊಂಡ ಪ್ರಸಿದ್ಧ ಇತಿವೃತ್ತವಲ್ಲ; ಸಾಮಾನ್ಯ ಸಾಮಾಜಿಕ ವೃತ್ತಾಂತ” ಎಂದು ನಿರ್ಧರಿಸಿದ್ದಾರೆ. ‘ಚಾರುದತ್ತ’ದ ನಾವೀನ್ಯದ ಕಾರಣ ಇಲ್ಲಿದೆ.

‘ಅಭಿಷೇಕನಾಟಕ’ಕ್ಕೂ ‘ಪ್ರತಿಮಾನಾಟಕ’ಕ್ಕೂ ‘ಅಜಗಜಾಂತರ’ವೆಂದು ಶಾಸ್ತ್ರಿಗಳು ಟೀಕಿಸಿದರೂ, ‘ಅಭಿಷೇಕನಾಟಕ’ದ ಪರವಾಗಿ ಅವರು ಆಡಬೇಕಾದ ಮಾತುಗಳೂ ಇವೆ: “ಇದೊಂದನ್ನೆ ಓದಿದವರಿಗೆ ಭಾಸನಿಗೆ ಕಲ್ಪನಾಶಕ್ತಿಯೇ ಇಲ್ಲವೇನೊ ಎನಿಸುತ್ತದೆ. ಆದರೆ ಕಣ್ಣುಬಿಟ್ಟು ನೋಡಿದರೆ, ಇದರಲ್ಲಿಯೂ ಸನ್ನಿವೇಶಕಲ್ಪನೆ ಪಾತ್ರರಚನೆ ಮುಂತಾದುವುಗಳಲ್ಲಿ ಕೌಶಲವು ಕಂಡುಬರುತ್ತದೆ.”

‘ಪ್ರತಿಜ್ಞಾಯೌಗಂಧರಾಯಣ’ದ ವಿವೇಚನೆ ಸಾಲದೆನಿಸುತ್ತದೆ. ಇದನ್ನು ‘ಇತರ’ ನಾಟಕಗಳ ಹಂತಿಗೆ ದೂಡಿದ್ದು ಸ್ವಲ್ಪ ಅನುಚಿತವೇ; ಇದು ಸ್ವಪ್ನನಾಟಕ, ಪ್ರತಿಮಾನಾಟಕಗಳ ಗುಂಪಿನಲ್ಲಿ ಇರಬೇಕಾದುದು.[5] ಈ ನಾಟಕದಲ್ಲೆಲ್ಲ ಎರಡನೆಯ ಅಂಕವೆ ಅತ್ಯಂತ ಸ್ವಾರಸ್ಯಪೂರ್ಣವಾದುದೆಂಬ ಹೇಳಿಕೆ ಸಮರ್ಪಕ.

ಅಂತೂ, ಕೃಷ್ಣಶಾಸ್ತ್ರಿಗಳು ಸಮತೋಲನ ಕಳೆದುಕೊಳ್ಳದೆ, ಗುಣಾವಗುಣಗಳನ್ನು ನಿಷ್ಪಕ್ಷಪಾತ ನಿರ್ದಾಕ್ಷಿಣ್ಯಗಳಿಂದ ಪರಿಶೀಲಿಸಬಲ್ಲವರು ಎಂಬುದಕ್ಕೆ ಸ್ಪಷ್ಟಸಾಕ್ಷಿಯಾಗಿದೆ ಈ ‘ಇತರನಾಟಕಗಳು’ ಎಂಬ ಅಧಿಕರಣ.

೭

ಕೃಷ್ಣಶಾಸ್ತ್ರಿಗಳದು ಬರಿಯ ಪಂಡಿತವಿಮರ್ಶೆಯಲ್ಲ; ಅವರ ಕವಿಮನೋಧರ್ಮ ‘ಭಾಸಕವಿ’ಯ ಉದ್ದಕ್ಕೂ ಸ್ಪಷ್ಟವಾಗಿ ಗೋಚರಿಸುತ್ತದೆ. ಇದರಿಂದ ಅವರ ಬರೆವಣಿಗೆ ಎಷ್ಟೋ ವೇಳೆ ಕಾವ್ಯಾತ್ಮಕವಾಗಿ ಪರಿಣಮಿಸಿದೆ. ಹೇಳ

---

[5] ವಸ್ತುತಃ ‘ಪ್ರತಿಜ್ಞಾಯೌಗಂಧರಾಯಣ’ ನಾಟಕ ‘ಸ್ವಪ್ನವಾಸವದತ್ತ’ದ ಪೂರ್ವಭಾಗವಾಗಿದ್ದು, ಆಮೇಲೆ ರಂಗಸೌಕರ್ಯಕ್ಕಾಗಿ ಎರಡೂ ಬೇರ್ಪಟ್ಟರಬೇಕೆಂದು ಊಹಿಸಲು ಸಾಕಷ್ಟು ಅವಕಾಶವಿದೆ. ಆದ್ದರಿಂದ, ಪ್ರತಿಜ್ಞಾನಾಟಕ ಸ್ವಪ್ನನಾಟಕಕ್ಕೆ ಪೂರಕವಾಗಿ, ಅದರೊಡನೆಯೆ ವಿವೇಚನೆಗೊಳ್ಳಬೇಕು.

ಬೇಕಾದುದನ್ನು ಅವರು ಉಚಿತವಾದ, ಅನಾಯಾಸವಾಗಿ ನೆರೆಹೊರೆಯಿಂದೆತ್ತಿಕೊಂಡ ಉಪಮಾನಗಳ ಮುಖಾಂತರ ಹೃದಯಂಗಮವಾಗಿ ಹೇಳುತ್ತಾರೆ. ಇದಕ್ಕೆ ನಿದರ್ಶನಗಳೆಷ್ಟೊ ಹಿಂದೆಯೆ ಬಂದಿವೆ; ಇಲ್ಲಿ ಮತ್ತೂ ಕೆಲವನ್ನು ನೋಡಬಹುದು.

ನಾಟಕದಲ್ಲಿ ಕತೆಯ ಬೆಳವಣಿಗೆಯಷ್ಟೆ ಮುಖ್ಯವಲ್ಲ; ಒಳ್ಳೆಯ ಸನ್ನಿವೇಶಗಳ ಮೂಲಕ ರಸಾಭಿವ್ಯಕ್ತಿ, ಪಾತ್ರಪ್ರಕಾಶನ ಆಗುವಂತಿರಬೇಕು–ಎಂಬ ಮೂಲಭೂತ ತತ್ತ್ವವನ್ನು ಬಿತ್ತರಿಸುವಲ್ಲಿ ಅವರು ಹೀಗೆ ಹೋಲಿಕೆ ಕೊಡುತ್ತಾರೆ: "ಹಸುವನ್ನು ಉಪಚರಿಸಿ ಆದರಿಸಿ ಹುಲ್ಲು ಹಿಂಡಿಗಳನ್ನು ತಿನ್ನಿಸುವುದೆಲ್ಲಾ ಅದರ ಮೊಲೆಗಳಿಂದ ಹಾಲನ್ನು ಎಳೆದುಕೊಳ್ಳುವುದಕ್ಕೆ; ನಾಟಕದಲ್ಲಿ ರಸವತ್ತಾದ ಸನ್ನಿವೇಶಗಳು ಬರದೆ ಇದ್ದರೆ ಅದು ಗಾಡಿ ಎಳೆಯುವುದಕ್ಕೆ ಹಾಕುವ ಗೊಡ್ಡು ಹಸುವಿನಂತೆ ಆಗುತ್ತದೆ".

'ಸ್ವಪ್ನವಾಸವದತ್ತ'ದಲ್ಲಿ ಘೋಷವತೀವೀಣೆ ಸಿಕ್ಕಿದ ಮೇಲೆ, "ಶೋಕ ಹಿಮಾಲಯವು ಕರಗಿ ಆನಂದಸಾಗರವಾಗಿ ಪರಿಣಮಿಸಲು ಮೊದಲಾಗುವುದು" ಎನ್ನುವಲ್ಲಿ ಶಾಸ್ತ್ರಿಗಳ ರೂಪಕಶಕ್ತಿ ಸ್ತುತ್ಯವಾದುದು. ಉದಯನನಿಗೆ ಕೈತಪ್ಪಿದ್ದ ರಾಜ್ಯವೂ ಸಿಕ್ಕಿ, ಕಳೆದುಹೋಗಿದ್ದ ಹೆಂಡತಿಯೂ ಕೈಸೇರುವ ಭಾಗ್ಯವನ್ನು ಕುರಿತು ಶಾಸ್ತ್ರಿಗಳು ವ್ಯಾಖ್ಯಾನಿಸುವ ರೀತಿ ಎಷ್ಟು ಸೊಗಸಾಗಿದೆ: "ಕೆಲವು ವೇಳೆ, ಪರೀಕ್ಷೆಗೆ ಹೋಗಿದ್ದ ಯುವಕರಿಗೆ ಇತ್ತ ಮದುವೆಯೋ ಪುತ್ರೋತ್ಸವವೋ ಆಗುವುದು, ಅತ್ತಕಡೆ ಪರೀಕ್ಷೆಯಲ್ಲಿ ತೇರ್ಗಡೆಯಾಯಿತೆಂಬ ವರ್ತಮಾನವೂ ಬರುವುದು. ಹಾಗೇ ವತ್ಸರಾಜನಿಗೂ...."

ಈ ನಾಟಕದ ಐದನೆಯ ಅಂಕದ ಸ್ವಾರಸ್ಯವನ್ನು ಕೃಷ್ಣಶಾಸ್ತ್ರಿಗಳು ಗೃಹಿಣಿಯ ಪಾಕವಿಧಾನಕ್ಕೆ ಉಪಮಿಸಿದ್ದಾರೆ: "ಮನೆಯಲ್ಲಿ ಇರುವ ಒಂದೆರಡು ಸಾಮಗ್ರಿಗಳಿಂದಲೇ, ಮೂರು ನಾಲ್ಕು ಪಾತ್ರೆಗಳಲ್ಲಿಯೇ, ಹತ್ತಾರು ರುಚಿರುಚಿಯಾದ ಅಡಿಗೆ ಮಾಡಬಲ್ಲ ನಿಪುಣೆಯಾದ ಗೃಹಿಣಿಯಂತೆ, ಕವಿಯು ಹಳೆಯ ಕಥಾಸಾಮಗ್ರಿಗಳಿಂದಲೇ, ಸುಂದರವಾಗಿ ಕಂಗೊಳಿಸುವ ಮನೋಹರವಾದ ರಸಪದಾರ್ಥಗಳನ್ನು ಸೃಷ್ಟಿಸಿದ್ದಾನೆ."

'ಕರ್ಣಭಾರ'ದ ಕರ್ಣನನ್ನು ಬಣ್ಣಿಸುವಲ್ಲಿ ಶಾಸ್ತ್ರಿಗಳ ಭಾವಪೂರ್ಣತೆ, ಕಲ್ಪಕತೆ ಕಂಡುಬರುತ್ತದೆ: "ಅವನು ಅಂಧಕಾರಮಯವಾದ ಘೋರರಾತ್ರಿಯಲ್ಲಿ, ಆಕಾಶದ ತುಂಬ ಸಣ್ಣಪುಟ್ಟ ನಕ್ಷತ್ರಗಳು ನಿಶ್ಚಲವಾಗಿ ನಿಂತುನೋಡುತ್ತಿರಲು, ರಭಸದಿಂದ ನುಗ್ಗುವ ಉಜ್ವಲವಾದ ಮಹಾ ಉಲ್ಕದಂತೆ ಯುದ್ಧರಂಗವನ್ನೆಲ್ಲಾ ಬೆಳಗುತ್ತ ಅರ್ಜುನನ ಕಡೆಗೆ ನುಗ್ಗುತ್ತಿರುವುದು ಮಾತ್ರ ಕಂಡುಬರುತ್ತದೆ. ಉಲ್ಕೆಯು ತೇಜೋಹೀನವಾಗಿ ಭೂಗತವಾಗುವುದು ಕಾಣದು...."

ಕೃಷ್ಣಶಾಸ್ತ್ರಿಗಳ ಶೈಲಿ ಮೃದುವಾದುದು, ಸರಳವಾದುದು, ಸುಸಂಸ್ಕೃತರ ಆಡುಮಾತಿನ ಧಾಟಿಯಲ್ಲಿ ಆತ್ಮೀಯವಾದುದು. ಅದರಲ್ಲಿ ಪಾಂಡಿತ್ಯದ ಡಂಬರವಿಲ್ಲ,

ಕ್ಲೇಶವಿಲ್ಲ. ದೀರ್ಘಸಮಾಸಗಳಿಗೆ ಶಾಸ್ತ್ರಿಗಳ ಬರೆವಣಿಗೆ ಎಡೆಕೊಡದು; ಬಿಡಿಬಿಡಿಯಾದ ಮಾತುಗಳು, ಸಣ್ಣಸಣ್ಣ ವಾಕ್ಯಗಳು ಅದರ ವೈಶಿಷ್ಟ್ಯ. ಜೋರು, ಜಬರುದಸ್ತು, ಪುಣ್ಯಾತ್ಮಗಿತ್ತಿ ಮುಂತಾದ ಜನಬಳಕೆಯ ಪ್ರಯೋಗಗಳು ಶಾಸ್ತ್ರಿಗಳಲ್ಲಿ ಧಾರಾಳವಾಗಿ ಸಿಕ್ಕುತ್ತವೆ. "ಮದುವೆಗೆ ಬಂದ ಹುಡುಗಿ ಎದುರಿಗೆ ಇದ್ದರೆ ಅವಳ ಮದುವೆಯ ಪ್ರಸ್ತಾಪ ಬರದೆ ಇರುತ್ತದೆಯೆ", "ಮದುವೆಗಳು ಇಷ್ಟು ಚಿಟಿಕೆ ಚಪ್ಪರವಾಗಿಬಿಟ್ಟರೆ ಹೆಣ್ಣು ಹೆತ್ತವರು ಬದುಕಿಕೊಂಡಾರು", "ತಲೆ ಕುಯಿದು ಇಟ್ಟರೂ ಇದು ಸೋರೆಕಾಯಿ ಎನ್ನುವಂಥ ಮನುಷ್ಯ'', "ಶಲ್ಯನು ಹದಿನೆಂಟನೆಯ ದಿನ ಹಾಳೂರಿಗೆ ಉಳಿದವನೇ ಗೌಡನೆಂಬಂತೆ ಸೇನಾಧಿಪತ್ಯವನ್ನು ವಹಿಸಿಕೊಂಡು ಸೇನೆಯನ್ನು ನಡೆಸಿದನು" ಮೊದಲಾದ ವಾಕ್ಯಗಳಲ್ಲಿ ಭಾಷೆಯಾಗಲಿ ಭಂಗಿಯಾಗಲಿ ಜನಜೀವನಕ್ಕೆ ಹೇಗೆ ನಿಕಟವಾಗಿದೆಯೆಂಬುದನ್ನು ಗಮನಿಸಬಹುದು. ಎಲ್ಲಿಯೂ ಕೃತಕತೆಯ, ನಿರ್ಜೀವತೆಯ ಸೋಂಕಿಲ್ಲ. ಕೃಷ್ಣಶಾಸ್ತ್ರಿಗಳ ಶೈಲಿಯನ್ನು ಟೆರಿಲೀನ್ ವಸ್ತ್ರಕ್ಕೆ ಹೋಲಿಸಬಹುದು: ಅದರಲ್ಲಿ ನಯಮಾರ್ದವಗಳಿವೆ, ಹೊಳಪು ಹಗುರತನಗಳಿವೆ; ಆದರೆ ಅಷ್ಟೆ ಪ್ರಮಾಣದಲ್ಲಿ ಕಸುವು, ಗಟ್ಟಿತನ ಮನೆಮಾಡಿವೆ.

ಅಚ್ಚಗನ್ನಡ ಸಂಸ್ಕೃತಗಳ ಹದವಾದ ಹವಣಾದ ಮಿಶ್ರಣ ಶಾಸ್ತ್ರಿಗಳ ಲೆಕ್ಕಣಿಗೆ ಸಿದ್ಧಿಸಿದೆ. ಈ ಭಾಗವನ್ನು ನೋಡಬಹುದು: "ಸೌಪ್ತಿಕ ಪರ್ವದಲ್ಲಿ ಕಗ್ಗೊಲೆ; ಬಾಣಬಿರುಸುಗಳ ಹಾರಾಟ. ಆಮೇಲೆ ಗೋಳಾಟ, ಪುರಾಣಗಳ ಕೇಳಾಟ. 'ಪಶ್ಚಿಮ ಕಾಲಸೂರ್ಯ'ನಾದ ದುರ್ಯೋಧನನು ಅಸ್ತಮಿಸಲು, ಆ ಭೀಕರ ಸಂಧ್ಯಾರಾಗರಂಜಿತವಾದ ಕುರುಕ್ಷೇತ್ರದಲ್ಲಿ, ಹದಿನೆಂಟು ದಿನ ಹತ್ತಿ ಉರಿದ ವೀರದಾವಾನಲವು ತನ್ನ ಜ್ವಾಲೆಯನ್ನು ಸಂಹರಿಸಿಕೊಳ್ಳುತ್ತ, ಕ್ರಮವಾಗಿ ಆರಿ ತಣ್ಣಗಾಗುವುದು; ಕಲಿಯುಗವು ಕಾಲಿಡುವುದು."

ಕೃಷ್ಣಶಾಸ್ತ್ರಿಗಳು ಆಯಾ ನಾಟಕವನ್ನು ವಿಮರ್ಶಿಸುವಾಗ ರಸಸ್ಯಂದಿಯಾದ ಮೂಲಭಾಗಗಳನ್ನು ತಾವೆ ಕನ್ನಡಕ್ಕೆ ಅನನ್ಯಸಾಧ್ಯವಾದ ರೀತಿಯಲ್ಲಿ ಅನುವಾದಿಸಿದ್ದಾರೆ; ಅಷ್ಟು ಮನೋಜ್ಞವಾಗಿ ಕನ್ನಡವನ್ನು ಬಳಸಿದವರು ಕಡಮೆ. 'ಊರುಭಂಗ'ದ ಒಂದು ಹೃದಯಸ್ಪರ್ಶಿ ಪ್ರಸಂಗವನ್ನು ಅವರು ಕರುಳುಮಿಡಿಯುವಂತೆ ಅನುವಾದಿಸಿರುವ ಬಗೆ ನೋಡುವಂಥದು:

**ಧೃತರಾಷ್ಟ್ರ**—ಇದು ಯಾರು ನನ್ನ ಸೆರಗನ್ನು ಹಿಡಿದು ದಾರಿತೋರಿಸುತ್ತಿರುವವರು?

**ದುರ್ಜಯ**—ತಾತ, ನಾನು ದುರ್ಜಯ.

**ಧೃತರಾಷ್ಟ್ರ**—ಮಗು ಅಪ್ಪನನ್ನು ಹುಡುಕು.

**ದುರ್ಜಯ**—ನನಗೆ ಕಾಲು ನೋಯುತ್ತೆ ತಾತ!

ಧೃತರಾಷ್ಟ್ರ—ನಡೆಯಪ್ಪ, ನಿಮ್ಮ ತಂದೆಯು ತೊಡೆಯ ಮೇಲೆ ಕೂತುಕೊಳ್ಳುವೆ ಯಂತೆ.

ದುರ್ಜಯ—ಆಗಲಿ, ಹೋಗುತ್ತೇನೆ (ಮುಂದೆ ಹೋಗಿ) ಅಪ್ಪಾ, ಎಲ್ಲಿದ್ದೀಯಪ್ಪಾ?

ರಾಜ—ಅಯ್ಯೋ, ಇವನೂ ಬಂದನೇ? ಇವನು ದುಃಖವೆಂಬುದನ್ನೇ ಕಾಣ: ತೊಡೆಯ ಮೇಲೆ ಮಲಗುವ ಕೂಸು; ನಾನು ಸೋತು ಬಿದ್ದಿರುವು ದನ್ನು ನೋಡಿ ಏನೆಂದುಕೊಳ್ಳುತ್ತಾನೋ!

ದುರ್ಜಯ—ಇಗೋ ಇಲ್ಲಿ ಮಹಾರಾಜನು ನೆಲದ ಮೇಲೆ ಕೂತುಕೊಂಡಿದ್ದಾನೆ!

ರಾಜ—ಯಾಕೆ ಬಂದೆ ಮಗು?

ದುರ್ಜಯ—ನೀನು ತಡಮಾಡಿದೆ; ಅದಕ್ಕೆ.

ರಾಜ—ಅಯ್ಯೋ! ಇಂಥ ಅವಸ್ಥೆಯಲ್ಲಿರುವುದರಿಂದ, ಪುತ್ರಸ್ನೇಹವು ಹೊಟ್ಟೆಯಲ್ಲಿ ಉರಿ ಎಬ್ಬಿಸುತ್ತಿದೆ!

ದುರ್ಜಯ—ನಾನು ತೋಡೇಮೇಲೆ ಕೂತುಕೋಬೇಕು! (ತೊಡೆಯ ಮೇಲೆ ಕುಳಿತುಕೊಳ್ಳುವನು)

ರಾಜ—(ತಡೆದು) ಅಯ್ಯೋ ದುರ್ಜಯ, ದುರ್ಜಯ, ಬೇಡ! ಆಹಾ; ಕಾಲ ವಿಪರ್ಯಾಸದಿಂದ ಚಂದ್ರನು ಅಗ್ನಿಯಾದನಲ್ಲ!

ದುರ್ಜಯ—ಯಾಕೆ ತೊಡೆಮೇಲೆ ಕೂತುಕೋಬೇಡ ಅಂತೀಯ ಅಪ್ಪ?

ರಾಜ—ಇನ್ನು ಮೇಲೆ ನೀನು ಇನ್ನೆಲ್ಲಿಯಾದರೂ ಕೂತುಕೋ ಬೇಕಪ್ಪ! ಇವೊತ್ತಿ ನಿಂದ ನಿನಗೆ ಈ ಆಸನವಿಲ್ಲ.

ದುರ್ಜಯ—ಹಾಗಾದರೆ ನೀನು ಎಲ್ಲಿಗೆ ಹೋಗುತ್ತೀ?

ರಾಜ—ನನ್ನ ನೂರು ಜನ ತಮ್ಮಂದಿರ ಹಿಂದೆ!

ದುರ್ಜಯ—ನನ್ನನ್ನೂ ಕರೆದುಕೊಂಡು ಹೋಗಪ್ಪ!

ರಾಜ—ವೃಕೋದರನಿಗೆ ಹಾಗೆಂದು ಹೇಳು ಹೋಗು ಮಗು!

'ಸ್ವಪ್ನವಾಸವದತ್ತ'ವನ್ನು ಕುರಿತು ಕೃಷ್ಣಶಾಸ್ತ್ರಿಗಳು "ಈ ನಾಟಕದ ಕಥೆಯಾಗಲಿ ರಸವಾಗಲಿ.... ಕಾಮನ ಹಬ್ಬದ ಕಿಚ್ಚಿನಂತೆ ಬೊಬ್ಬೆಯನ್ನೆಬ್ಬಿಸು ವಂತಿಲ್ಲ" ಎಂದಿರುವ ಮಾತು ಅವರ ಶೈಲಿಗೂ ಅನ್ವಯಿಸುವಂಥದು. ಭಾಸನ ಸ್ವಭಾವಕ್ಕೆ ತಕ್ಕ ವಿಮರ್ಶೆಯ ರೀತಿ ಅವರದು.

೮

ಕೃಷ್ಣಶಾಸ್ತ್ರಿಗಳ ವಿಮರ್ಶೆಗೆ ಐತಿಹಾಸಿಕ ದೃಷ್ಟಿಯಿಂದ ಕೂಡ ಬಹಳ

ಮಹತ್ತ್ವವುಂಟು. ಅವರು ' ಭಾಸಕವಿ 'ಯನ್ನು ಮೊದಲು ಪ್ರಕಟಿಸಿದ್ದು ೧೯೩೩ರಲ್ಲಿ. ಆಗ ಕನ್ನಡದಲ್ಲಿ ವಿಮರ್ಶೆ ಎಲ್ಲಿತ್ತು, ಎಷ್ಟಿತ್ತು? ಇದ್ದರೂ, ಅದರ ಸ್ವರೂಪವೇನು? ' ಭಾಸಕವಿ 'ಯ ಮುನ್ನುಡಿಯಲ್ಲಿ ಶಾಸ್ತ್ರಿಗಳು ಹೇಳಿರುವ ಮಾತು ಗಮನಾರ್ಹವಾಗಿದೆ: "ನಾಟಕವಿಮರ್ಶೆಯೆಂಬುದು, ಬಹಳಮಟ್ಟಿಗೆ, ದಶರೂಪ ಕಾದಿಗಳಲ್ಲಿ ಉಕ್ತವಾದ ಲಕ್ಷಣವನ್ನು ಅನುವಾದಮಾಡಿ ಅನ್ವಯಿಸುವುದರಲ್ಲಿ ಮುಗಿದುಹೋಗುತ್ತಿದೆ. ಇವುಗಳ ಉಪಯೋಗವೇನೇ ಇರಲಿ, ಲಕ್ಷಣವನ್ನು ಸಂಕೋಲೆಯಾಗಿ ಮಾಡಿಕೊಳ್ಳದೆ ಬೇರೆ ರೀತಿಯಿಂದ ಇತರ ಸಾಹಿತ್ಯಗಳನ್ನೂ ವ್ಯಾಸಂಗಮಾಡಿರುವವರು ಇವುಗಳನ್ನು ಏಕೆ ಮೆಚ್ಚುವರು, ಯಾವ ದೃಷ್ಟಿಯಿಂದ ಪರಿಶೀಲಿಸಬಹುದು–ಎಂಬುದನ್ನು ಈ ಗ್ರಂಥದಲ್ಲಿ ಸ್ವಲ್ಪಮಟ್ಟಿಗೆ ನೋಡ ಬಹುದಾಗಿದೆ." ಅಂಥ ಪರಿಸ್ಥಿತಿಯಿದ್ದ ಕಾಲದಲ್ಲಿ ರಸಧ್ವನಿಗಳ ದೃಷ್ಟಿಯಿಂದ ಕೃಷ್ಣಶಾಸ್ತ್ರಿಗಳು ವಿಮರ್ಶೆಗೆ ತೊಡಗಿದುದು ಒಂದು ಕ್ರಾಂತಿಯೇ ಎನ್ನಬೇಕು. ಒಟ್ಟಿನ ಮೇಲೆ, ಕನ್ನಡದಲ್ಲಿ ವಿಮರ್ಶೆಯ ಬೆಳೆವಣಿಗೆಗೆ ದೃಢವಾದ ತಳಪಾಯವನ್ನು ಹಾಕಿದ ಆಚಾರ್ಯರಲ್ಲಿ ಅವರೊಬ್ಬರು ಎಂಬುದು ನಿಶ್ಚಯ.

ಭಾಸಕವಿಯನ್ನು ಕುರಿತ ಕೃಷ್ಣಶಾಸ್ತ್ರಿಗಳ ವಿಮರ್ಶೆಗೆ ಯಾವ ದೃಷ್ಟಿಯಿಂದ ನೋಡಿದರೂ ಕನ್ನಡದಲ್ಲಿ ಒಂದು ಗಣ್ಯಸ್ಥಾನವಿದೆ. ಪೀಠಿಕೆಯನ್ನು ಬಿಟ್ಟರೆ, ಕೇವಲ ನೂರಿಪ್ಪತ್ತು ಪುಟಗಳ ಹರಹಿನಲ್ಲಿ ಅವರು ಭಾಸಪ್ರಪಂಚದ ಅಂತರಂಗ ವನ್ನೆಲ್ಲ ಸೆರೆಹಿಡಿದಿರುವುದು ಆಶ್ಚರ್ಯಕರ. ಇಷ್ಟು ಸಂಗ್ರಹವಾಗಿ ಸುಂದರವಾಗಿ ನಿಷ್ಕೃಷ್ಟವಾಗಿ ಭಾಸನನ್ನು ವಿಮರ್ಶಿಸುವ ಪುಸ್ತಕ ಇಂಗ್ಲಿಷಿನಲ್ಲಾಗಲಿ ಮತ್ತಾವುದೇ ಭಾಷೆಯಲ್ಲಾಗಲಿ ಹೊರಬಂದಿರುವುದು ಅಸಂಭವ. ಹಿತಮಿತವಾದ ಈ ವರ್ಗದ ವಿಮರ್ಶೆ ನಮ್ಮಲ್ಲಿ ಕೂಡ ಕಡಮೆಯೇ.[6]

[6] ಶ್ರೀಮಾನ್ ಶ್ರೀನಿವಾಸರ ವಿಮರ್ಶೆ ತಕ್ಕಮಟ್ಟಿಗೆ ಈ ರೀತಿಯದು ಎನ್ನಬಹುದು.

# ಶಾಸ್ತ್ರಿಗಳ ಸೂಕ್ತಿಗಳು

**ದೇಶದ ಸಂಪತ್ತು :**

ವ್ಯಕ್ತಿಸಂಪತ್ತೇ ದೇಶಸಂಪತ್ತು.

(ವಚನಭಾರತ, ಪೀಠಿಕೆ, ಪು. ೨೯)

*　　　*　　　*

**ಇಂದಿನ ಧರ್ಮ :**

ಸಾಮಾನ್ಯ ಧರ್ಮವು ಇಂದು ಮಾನವಧರ್ಮವೆಂದು ರೂಢಿಯಾಗಿದೆ.

(ವಚನಭಾರತ, ಪೀಠಿಕೆ, ಪು. ೨೫)

*　　　*　　　*

**ಮಾತೃಭಾಷೆ :**

ಮಾತೃಭಾಷೆಯ ಮೂಲಕ ಕಲಿತದ್ದೇ ಮೈ ಹತ್ತುವುದು ; ಮಾತೃಭಾಷೆಯಲ್ಲಿ ಬರೆದದ್ದೇ ನಿಲ್ಲುವುದು.

(ಭಾಷಣಗಳು–ಲೇಖನಗಳು, ಪು. ೮ )

*　　　*　　　*

**ಕನ್ನಡ :**

ಕನ್ನಡಿಗರಿಗೆ ಕನ್ನಡ ದೇಶದಲ್ಲಿ ಹಿರಿಯ ಆಸ್ತಿಯಾಗಿ ಉಳಿದಿರುವುದು ಅವರ ಕನ್ನಡ ಭಾಷೆ.

(ಭಾಷಣಗಳು–ಲೇಖನಗಳು, ಪು. ೨೬)

*　　　*　　　*

**ಕನ್ನಡ ಅಭಿಮಾನ :**

ಕನ್ನಡದ ಅಭಿಮಾನವೆಂಬ ಕಾಮಧೇನು ಎಚ್ಚರವಾಗಿದ್ದರೆ, ಬ್ರಹ್ಮದಂಡ ಮುಂದೆ ಇದ್ದರೆ, ನಮ್ಮನ್ನು ಯಾವ ವಿಶ್ವಾಮಿತ್ರರ ಹಿಂದೀ ಪಡೆಯೂ ಏನೂ ಮಾಡಲಾರದು.

(ಭಾಷಣಗಳು–ಲೇಖನಗಳು, ಪು. ೧೭)

*　　　*　　　*

**ಸಪ್ಪೆ ಕನ್ನಡಿಗರು :**

ಕನ್ನಡಿಗರಲ್ಲಿ ಕಾವು ಏರದು ; ಅವರು ಕದಳೀ ಗರ್ಭ ಶ್ಯಾಮರೂ ಹೌದು, ಶೀತರೂ ಹೌದು.

(ಭಾಷಣಗಳು–ಲೇಖನಗಳು, ಪು. ೫)

*　　　*　　　*

ಕನ್ನಡಿಗರಲ್ಲಿ ಕಾವು ಸಾಲದು ; ಕಾವಿನಿಂದ ಕಾವ್ಯ, ಕಾವಿನಿಂದ ಕಾರ್ಯ.

(ಅದೇ, ಪು. ೨೬)

ಮಿರ್ಜಿ ಅಣ್ಣಾರಾಯ

# ಕನ್ನಡಕ್ಕೆ ಕೃಷ್ಣಶಾಸ್ತ್ರಿಗಳ ಕೊಡುಗೆ

೧

ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳ ಹೆಸರನ್ನು ನೆನೆದೊಡನೆಯೇ ಅವರ ಬೃಹತ್ತಾದ ಗ್ರಂಥಗಳ ಪಂಕ್ತಿಯೇ ನಮ್ಮ ಬಗೆಗಣ್ಣಿನೆದುರು ಬಂದುನಿಲ್ಲುತ್ತದೆ. ಎಲ್ಲೋರದ ಕೈಲಾಸಮಂದಿರದ ಮಧ್ಯದಲ್ಲಿ ನಿಂತು, ಸುತ್ತಲೂ ನೋಡಿ ದಿಗ್ಭ್ರಾಂತರಾದ ಅನುಭವವು ಉಂಟಾಗುತ್ತದೆ. ಬೆಟ್ಟದ ಬೃಹತ್ ಶಿಲೆಯನ್ನು ಕೊರೆದು, ನಿರ್ಮಿಸಿದ ಕಲೆಯ ಬಲೆಯಲ್ಲಿ ಸಿಲುಕಿದ ಆತ್ಮವಿಹಂಗಮದ ಸ್ಥಿತಿಯು ನಮ್ಮದಾಗುತ್ತದೆ. ಆರಂಭದಲ್ಲಿ ದಿಙ್ಮೂಢರೇ ಆಗಿ ನಿಲ್ಲುತ್ತೇವೆ. ಯಾವ ಕಡೆಯಿಂದ ನೋಡಲು ಆರಂಭಿಸೋಣ ; ಏನೆಲ್ಲ ನೋಡುವುದಿದೆ; ಎಂಥ ಅದ್ಭುತ ರಮ್ಯವನ್ನು ಮೆರೆದಿದ್ದಾರಿಲ್ಲಿ! 'ಸಂಸ್ಕೃತ ನಾಟಕ', 'ವಚನಭಾರತ', 'ಕಥಾಮೃತ', 'ಬಂಕಿಮಚಂದ್ರ' 'ಶ್ರೀಪತಿಯ ಕಥೆಗಳು' ಹೀಗೆ ಒಂದೇ, ಎರಡೇ! ಹಲವಾರು ಹಿರಿಯಕೃತಿಗಳು. ಒಂದೊಂದು ಕೃತಿಯ ಹಿಂದೆಯೂ ದೀರ್ಘವಾದ ತಪಸ್ಸು; ಆಳವಾದ ಅಧ್ಯಯನ; ಶಾಸ್ತ್ರಶುದ್ಧವಾದ ರೀತಿ. ಇದನ್ನೆಲ್ಲ ನೆನೆದೇ ರಾಷ್ಟ್ರಕವಿಗಳಾದ ಶ್ರೀ ಕುವೆಂಪು ಅವರು "ನಿವೃತ್ತಿಯ ತರುವಾಯದ ಬಾಳನ್ನು ಇಷ್ಟು ಸಾರ್ಥಕವಾಗಿ ಸಮರ್ಪಕವಾಗಿ ಬಳಸಿಕೊಂಡವರು ಬಹಳ ಅಪೂರ್ವ" ಎಂದು ತಮ್ಮ ಒಲವರವನ್ನು ಶ್ರೀ ಕೃಷ್ಣಶಾಸ್ತ್ರಿಗಳ ವಿಷಯದಲ್ಲಿ ಮೆರೆದಿದ್ದಾರೆ. ನಿಜವಾಗಿಯೂ ಕನ್ನಡಕ್ಕೆ ಕೃಷ್ಣಶಾಸ್ತ್ರಿಗಳಿಂದ ಅಂಥ ಕಾಣಿಕೆ ಸಂದಿದೆ. ಕೃಷ್ಣಶಾಸ್ತ್ರಿಗಳ ಮನೆತನವೇ ಸಂಸ್ಕೃತಭಾಷೆಯ ಪಾಂಡಿತ್ಯಕ್ಕೆ ಹೆಸರಾದುದು. ಅವರಿಗೆ ವಂಶಪರಂಪರೆಯಿಂದಲೇ ಸಂಸ್ಕೃತದ ಮೇಲೆ ಪ್ರಭುತ್ವವು ಒದಗಿತ್ತು. ಆಂಗ್ಲ ಭಾಷೆಯ ಅಭ್ಯಾಸದಿಂದಾಗಿ ಆಧುನಿಕ ವಿಮರ್ಶಾದೃಷ್ಟಿಯೂ ಅವರ ಜೀವನಕ್ಕೆ ಅಳವಟ್ಟಿತು. ಅದರಿಂದ ಸುವರ್ಣಕ್ಕೆ ಸುಗಂಧ ಸೇರಿದಂತಾಯಿತು. ಅದರಲ್ಲೂ ಶಾಸ್ತ್ರಿಗಳ ಮನಸ್ಸು ವಿಚಾರಶೀಲವಾದುದು, ಚೇತನಪರವಾದುದು. ಎದುರಿಗೆ ಬಂದ ಯಾವುದೇ ಸಂಗತಿಯನ್ನೂ ಸಹ ಅವಲೋಕಿಸಿದೆ ಬಿಡುವವರಲ್ಲ. ಉಳಿದವರು ಸೃಷ್ಟಿಯನ್ನು, ಕಾಣುತ್ತದೆಂದು ಕಂಡರೆ ಇವರು ಕಾಣಬೇಕೆಂದು ಕಾಣುವವರು. ಒಮ್ಮೆ ಶಾಸ್ತ್ರಿಗಳು ಶೃಂಗೇರಿಗೆ ಹೋಗಿದ್ದರು. ಆಗ ಅವರು ಆ ಊರಲ್ಲಿ

ಒಂದು ದಿಬ್ಬದ ಮೇಲೆ ಇರುವ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಹೋಗಿ ಬರುತ್ತಿದ್ದರು. ಹೀಗೆ ಗುಡಿಯಿಂದ ತಿರುಗಿ ಬರುವಾಗ ಅವರ ಸ್ನೇಹಿತರೊಬ್ಬರು ಕೇಳಿದರಂತೆ—

'ಏನು, ಬೆಟ್ಟಕ್ಕೆ ಹೋಗಿದ್ದಿರಾ?'

'ಇಲ್ಲ' ಎಂದರು ಶಾಸ್ತ್ರಿಗಳು.

'ನಿಮ್ಮ ಬಿಡಾರಕ್ಕೆ ಆಗಲೇ ಬಂದಿದ್ದೆ; ನೀವು ಬೆಟ್ಟಕ್ಕೆ ಹೋದಿರೆಂದು ಹೇಳಿದರಲ್ಲಾ ಮತ್ತೇ' ಎಂದರು ಅವರು.

ಪರಿಚಿತರ ಇಷ್ಟೇ ಮಾತು ಸಾಕಾಯಿತು, ಅವರ ಸಂಶೋಧನಾ ಪ್ರವೃತ್ತಿಗೆ ಚಾಲನೆಯುಂಟಾಗಲು. ಮಲ್ಲಿಕಾರ್ಜುನ ದೇವಸ್ಥಾನವಿರುವ ಈ ದಿಬ್ಬಕ್ಕೂ ಇಲ್ಲಿಯ ಜನರು 'ಬೆಟ್ಟ'ವೆನ್ನುವರೆ? ಏಕೆ? ಇದರ ಮೂಲ ಏನಿರಬೇಕು? ಶಾಸ್ತ್ರಿಗಳ ಮೆದುಳಿನಲ್ಲಿ ವಿಚಾರಚಕ್ರವು ಮುಂದುರುಳತೊಡಗಿತು. ಶ್ರೀ ಶಂಕರಾಚಾರ್ಯರು ಕಾಂಚಿ, ಬದರಿ, ಕಾಶಿ, ಜಗನ್ನಾಥಗಳಿಗೆ ಸಮಾನವೆಂದು ಶೃಂಗೇರಿಯನ್ನು ಛಾವಿಸಬೇಕಾದರೆ ಇಲ್ಲಿಯ "ಮಲ್ಲಿಕಾರ್ಜುನ ಲಿಂಗ"ವೇ ಕಾರಣವೆಂದು ಶಾಸ್ತ್ರಿಗಳು ನಿರ್ಣಯಕ್ಕೆ ಬಂದರು. ಆ ಲಿಂಗದಲ್ಲಿ ವಿಭಾಂಡಕ ಋಷಿಯ ಐಕ್ಯ, ಅಲ್ಲಿ ಅವರ ಆಶ್ರಮವಿದ್ದ ಸ್ಥಳಪುರಾಣ; ಆ ಬೆಟ್ಟದ ಮೇಲೆಯೇ ಋಷ್ಯಶೃಂಗರು ಹುಟ್ಟಿದರೆಂಬ ಕಥೆ; ಅವರಿಂದ ಮಲ್ಲಿಕಾರ್ಜುನ ಬೆಟ್ಟಕ್ಕೆ ಶೃಂಗಗಿರಿ ಎಂದು ಹೆಸರಾದುದು; ಆ ಹೆಸರೇ ಶೃಂಗೇರಿ ಎಂಬ ಹೆಸರಿಗೆ ಮೂಲಕಾರಣವಾದ ಸಂಗತಿಗಳನ್ನೆಲ್ಲ ಕಲೆಹಾಕಿದರು. ಶೃಂಗೇರಿಯು ಪ್ರಾಚೀನಕಾಲದಿಂದಲೂ ಶೈವ ಕ್ಷೇತ್ರವಾಗಿರಬೇಕೆಂದು ನಿರ್ಣಯಿಸಿದರು.

ಇಷ್ಟಕ್ಕೆ ಶಾಸ್ತ್ರಿಗಳವರ ಕುತೂಹಲ ನಿಲ್ಲಲಿಲ್ಲ. ಯಾವ ವಿಷಯವನ್ನು ಎತ್ತಿಕೊಂಡರೂ ಅದರ ಮೂಲಕ್ಕೇನೇ ಹೋಗಿ ತಲುಪುವ ಪ್ರವೃತ್ತಿ ಅವರದು. ಶೃಂಗೇರಿಯ ಮಲ್ಲಿಕಾರ್ಜುನನಿಂದ ಶ್ರೀಶೈಲದ ಮಲ್ಲಿಕಾರ್ಜುನನೆಡೆಗೆ ಅವರ ದೃಷ್ಟಿ ಹೊರಳಿತು. ಆ ಕ್ಷೇತ್ರಕ್ಕೆ ಸಂಬಂಧಪಟ್ಟ ಐತಿಹ್ಯಗಳನ್ನೆಲ್ಲ ಶೋಧಿಸಿತು. ಶ್ರೀಶೈಲ, ಮಲ್ಲಿಕಾರ್ಜುನ ಎಂಬ ಹೆಸರುಗಳು ಸಂಸ್ಕೃತ ಭಾಷೆಯವೆಂದು ಕಂಡರೂ ಅವುಗಳ ಮೂಲವು ದ್ರಾವಿಡ ಎಂಬುದನ್ನು ಶೋಧಿಸಿದರು. ತೆಲುಗು, ತಮಿಳು ಭಾಷೆಗಳಲ್ಲಿ ಮೂಲವನ್ನರಸಿ "ಶ್ರೀಶೈಲವು ಭಾಷಾಂತರೀಕರಣವಾದರೆ, 'ಮಲ್ಲಿಕಾರ್ಜುನ'ವು ಭಾಷಾಂತರಾನುಕರಣವಾಗಿ ಕಾಣುತ್ತದೆ.—ಎಂದರೆ ಮಲೈ ಅಯ್ಯನ್ ಎಂಬುದು ಅದರ ಮೂಲವಾಗಿ ಕಾಣುತ್ತದೆ" ಎಂದು ಊಹಿಸಿದರು. ಇಷ್ಟೇ ಅಲ್ಲ, ತಮಿಳಿನಲ್ಲಿ 'ತಲ್' ಎಂಬ ಶಬ್ದಕ್ಕೆ ಬೆಟ್ಟವೆಂಬ ಮೂಲ ಅರ್ಥವಿದೆ. ಅದರಿಂದ ಕಲ್ಲಯ್ಯ, ಕಲ್ಲಿನಾಥಗಳೆಂಬುವೆಲ್ಲ ಮಲ್ಲಯ್ಯ ಎಂಬರ್ಥದ ಪದಗಳೇ. ಆದ್ದರಿಂದ ಶ್ರೀಮಾನ್ ಶಂ. ಬಾ. ಜೋಶಿಯವರು ಊಹಿಸುವಂತೆ ಕಲ್ಲೇಶ್ವರನು

ಕಳ್ಳೀಶ್ವರನೇನು ಆಗಬೇಕಾಗಿಲ್ಲ" ಎಂಬ ನಿರ್ಣಯಕ್ಕೆ ಬಂದು ಕೃಷ್ಣಶಾಸ್ತ್ರಿಗಳವರು ಈ "ಮಲ್ಲಿಕಾರ್ಜುನ--ಒಂದು ಊಹೆ"[1] ಎಂಬ ಪ್ರಬಂಧವನ್ನು ಮುಗಿಸಿದರು.

ಕೃಷ್ಣಶಾಸ್ತ್ರಿಗಳ ಈ ಪ್ರಬಂಧವನ್ನು ಇಲ್ಲಿ ಉದಹರಿಸುವ ಉದ್ದೇಶವಿಷ್ಟೆ. ಇದು ಪ್ರೌಢ ವಿಚಾರಗಳ ಸಂಶೋಧನಾತ್ಮಕ ಬರೆಹವಾಗಿದ್ದರೂ ಅದರ ಆರಂಭ ಲಲಿತಸಾಹಿತ್ಯದ ಸ್ವರೂಪದ್ದು. "ಕಳೆದ ಎಪ್ರಿಲ್ ತಿಂಗಳು ಶೃಂಗೇರಿಗೆ ಹೋಗಿದ್ದು, ಆ ಊರಿನ ಪೇಟೆಯಿಂದ ದೇವಸ್ಥಾನದ ಕಡೆಗೆ ಬರುತ್ತಿದ್ದೆ. ನನ್ನ ಗುರುತಿನವರೊಬ್ಬರು ಎದುರಿಗೆ ಸಿಕ್ಕಿ 'ಏನು, ಬೆಟ್ಟಕ್ಕೆ ಹೋಗಿದ್ದಿರಾ?' ಎಂದು ಕೇಳಿದರು" ಎಂಬ ವಾಕ್ಯಗಳಿಂದ ಆರಂಭವಾಗುತ್ತದೆ. ಸ್ವಾಭಾವಿಕವಾಗಿ ತಮ್ಮ ಜೀವನದೊಳಗಿನ ಒಂದು ಸಂದರ್ಭವನ್ನು ವರ್ಣಿಸುವ ರೀತಿಯಲ್ಲಿ—ಆತ್ಮೀಯ ರೀತಿಯಲ್ಲಿ ಸಂಶೋಧನೆಯ ವಿಚಾರಗಳನ್ನು ಮಂಡಿಸುತ್ತಾರೆ. ಇಲ್ಲಿ ಕೊನೆಗೆ ಒಂದು ನಿಶ್ಚಿತ ನಿರ್ಣಯವನ್ನು ಹೇಳುವ ವಾಕ್ಯದಿಂದ ಪ್ರಬಂಧವನ್ನು ಮುಗಿಸಿದ್ದಾರೆ. ಹೀಗೆ ಶಾಸ್ತ್ರೀಯ ಬರವಣಿಗೆಗಳಲ್ಲಿ ಒಂದು ವೈಶಿಷ್ಟ್ಯವಿದೆ.

ಶಾಸ್ತ್ರಿಗಳ ಪ್ರಬಂಧಗಳಲ್ಲಿ ಆದಿ–ಅಂತ್ಯಗಳಲ್ಲಷ್ಟೇ ಈ ಸೊಗಸು ಸ್ಪಷ್ಟತೆಗಳು ವ್ಯಕ್ತವಾಗಿವೆಯೆಂದಿಷ್ಟೇ ತಿಳಿಯಬೇಕಿಲ್ಲ. ವಿವರಗಳು ಕೂಡ ವಾಕ್ಯವೃಂದದಿಂದ ವಾಕ್ಯವೃಂದಕ್ಕೆ ಉಗಿಬಂಡಿಯ ಡಬ್ಬಿಗಳಂತೆ ಸ್ವಯಂಪೂರ್ಣವಾಗಿದ್ದೂ ಒಟ್ಟು ವಿಷಯಕ್ಕೆ ಪೋಷಕವಾಗುತ್ತ ಹೋಗುವ ಕ್ರಮದಲ್ಲಿವೆ. ಅದರ ಜೊತೆಗೇನೇ ಸಂಸ್ಕೃತಿ, ಸಾಹಿತ್ಯಗಳ ಬಗ್ಗೆ ಸೂಕ್ಷ್ಮ ವೈಚಾರಿಕ ಹಿನ್ನೆಲೆಯನ್ನೂ ಕೂಡ ಪ್ರಸ್ತುತ ವಿಷಯಕ್ಕೆ ಒದಗಿಸುವಂತಿರುತ್ತವೆ. ಸಂಸ್ಕೃತ ಜನರು ದಕ್ಷಿಣಕ್ಕೆ ಬರುವ ಪೂರ್ವದಲ್ಲಿ ಶ್ರೀಶೈಲಕ್ಕೆ ಜನರು ಏನೆಂದು ಕರೆಯುತ್ತಿದ್ದರು? ಅಲ್ಲಿ ದೇವರನ್ನು ಪೂಜಿಸುತ್ತಿದ್ದರೇ ಇಲ್ಲವೆ? ಇತ್ಯಾದಿ ಪ್ರಶ್ನೆಗಳನ್ನು ಶಾಸ್ತ್ರಿಗಳು ಹಾಕಿಕೊಂಡು, ಅವುಗಳಿಗೆ ಉತ್ತರ ಕೊಡುವ ಸಂದರ್ಭವನ್ನು ನಾವು ಗಮನಿಸಬೇಕು. ಇಲ್ಲಿ ಅಮೌಲ್ಯವಾದ ಮೂರು ನಾಲ್ಕು ವಿಚಾರಗಳು ಸ್ಫುರಿಸಿವೆ.

> "ಭವ್ಯವಾದ ಪರ್ವತ, ಸುಂದರವಾದ ನದಿ, ರಮ್ಯವಾದ ವನ—ಇವುಗಳಲ್ಲಿ ದೇವರನ್ನು ಕಂಡು ಪೂಜಿಸುವುದು ಇಂದಿನ ಪದ್ಧತಿಯೇನಲ್ಲ, ನಮ್ಮ ಜನರೊಬ್ಬರ ಸಂಪ್ರದಾಯವೊಂದೇ ಅಲ್ಲ. ಅದು ಮನುಷ್ಯಜಾತಿಗೇ ಬಂದ ಪ್ರವೃತ್ತಿಯಾಗಿ ಕಾಣುತ್ತದೆ . . . . ದೇಶಾಂತರಗಳಲ್ಲಿಯೂ ಹಿಂದಿನ ಸಂಸ್ಕೃತಿಯಲ್ಲಿ ಗಿರಿ ನದಿ ಗಹ್ವರಗಳಿಗೆ ಒಂದಲ್ಲ ಒಂದು ವಿಧವಾದ ಪೂಜ್ಯತೆಯಿದೆ. ಈ ವಿಧವಾದ ಪ್ರಕೃತಿಪೂಜೆಗೆ ನಮ್ಮ ದೇಶ ಎತ್ತಿದ ಕೈ. ಇದನ್ನು ಆರ್ಯರು ಕಲ್ಪಿಸಿಕೊಟ್ಟರೆಂದು ಭಾವಿಸಬೇಕಾಗಿಲ್ಲ. ಬಹುಶಃ ಯಾಜ್ಞಿಕವಲ್ಲದ, ಭಕ್ತಿಪ್ರಧಾನವಾದ, ಸೌಮ್ಯ ಪೂಜಾವಿಧಾನವೂ

[1] ಸಂಭಾವನೆ–ಪು. ೧೯೨–೧೯೮. ೧೯೪೧

ದ್ರಾವಿಡರದು: ಶಿವಪೂಜೆ—ಲಿಂಗಪೂಜೆಯಂತೂ ಅವರದೇ ಆಗಿ ಕಾಣುತ್ತದೆ."

"ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತಜನ್ಯವಾದ, ಪ್ರಾಕೃತಜನ್ಯವಾದ, ಸಾಹಿತ್ಯ ಸ್ವಲ್ಪಕಾಲ ನಡೆದುಬಂದಮೇಲೆ, ಹನ್ನೆರಡನೆಯ ಶತಮಾನದಲ್ಲಿ ದ್ರಾವಿಡಸಾಹಿತ್ಯದ ಮೂಲಲಕ್ಷಣಗಳು ಕಾಣುವುದರ ಜೊತೆಗೆ ಶಿವ ಭಕ್ತಿಯೂ ಹೊರಹೊಮ್ಮಿತು—ಇಷ್ಟಲಿಂಗಕ್ಕೆ ಪ್ರಾಧಾನ್ಯ ಬಂತು."

"ಇದು ಹಿಂದಿನಿಂದಲೂ ಆರ್ಯ ಸಂಸ್ಕೃತಿಗೆ ನಡೆದುಬಂದದ್ದೇ—ತನಗಿಂತ ಭಿನ್ನವಾದದ್ದನ್ನು ಒಪ್ಪಿಕೊಂಡು ಅದೂ ತನ್ನದೆಂದು ಹೇಳಿ ತನ್ನೊಳಗೆ ಸೇರಿಸಿಕೊಳ್ಳುವುದು: ತಾನೂ ಉಳಿದು ಇತರರನ್ನು ಉಳಿಸಿ ಕೊಳ್ಳುವುದು, ಬಲಿತುಕೊಳ್ಳುವುದು; ಕಂಡದ್ದನ್ನು ಗೆದ್ದು ಧ್ವಂಸಮಾಡಿ, ನಿರ್ನಾಮಮಾಡಿ, ತಾನೂ ನಿರ್ನಾಮವಾಗುವುದಲ್ಲ."

ಮಲ್ಲಿಕಾರ್ಜುನ ಎಂಬ ಹೆಸರು ಹೇಗೆ ಬಂದಿರಬೇಕೆಂಬ ವಿಷಯದಲ್ಲಿ ಒಂದು ಊಹೆಯನ್ನು ನಡೆಯಿಸುತ್ತ ಇಂಥ ಹಲವಾರು ಅಮೂಲ್ಯ ವಿಚಾರಗಳನ್ನು ಶಾಸ್ತ್ರಿಗಳು ಸಂಸ್ಕೃತಿ, ಸಾಹಿತ್ಯಗಳ ವಿಷಯದಲ್ಲಿ ಪ್ರಕಟಿಸಿದ್ದಾರೆ. ಅವು ಒಂದೊಂದೂ ಒಂದೊಂದು ಬೃಹತ್ ಗ್ರಂಥಗಳಾಗುವಂಥ ವಿಷಯಗಳು. ಲಿಂಗ ಪೂಜೆಗೆ ಸಲ್ಲುವ ಹೂವು, ಎಲೆಗಳು, ಶಿವಭಕ್ತಿ, ಪ್ರಕೃತಿ ಪೂಜೆಗಳಂಥ ವಿಷಯದಲ್ಲಿ ಎಂಥ ಸಮರ್ಪಕವಾದ ಸಂಶೋಧನಾತ್ಮಕವಾದ, ನಿರ್ಣಯಾತ್ಮಕವಾದ ನುಡಿ ಗಳನ್ನು ನುಡಿದಿದ್ದಾರಿಲ್ಲಿ! ನಡುಗನ್ನಡ ಸಾಹಿತ್ಯದಲ್ಲಿಯೇ ಷಟ್ಪದಿ, ತ್ರಿಪದಿ, ಸಾಂಗತ್ಯಗಳೆಲ್ಲ ತಲೆಯೆತ್ತಿದುದರ ಕಾರಣ ವಿಮರ್ಶೆಯನ್ನು ಎಷ್ಟು ಸ್ವಲ್ಪ ಮಾತು ಗಳಲ್ಲಿ ಸೂಚಿಸಿದ್ದಾರೆ. ಕನ್ನಡ ಛಂದೋವಿಕಾಸವನ್ನು ಅವಲೋಕಿಸಬೇಕೆನ್ನು ವವರಿಗೆ ಬೀಜಮಂತ್ರವನ್ನೇ ನೀಡಿದ್ದಾರೆ. ಮುಂದೆ ಭಾರತೀಯ ಸಂಸ್ಕೃತಿಯ ಸಮನ್ವಯ ಸೂತ್ರವನ್ನು ಅಭ್ಯಾಸಿಗಳ ಕೈಗೆ ಇತ್ತಿದ್ದಾರೆ. ಇವುಗಳನ್ನು ಆಧರಿಸಿ ಅಭ್ಯಾಸಿಗಳು ವಿಶಾಲವಾದ ಜ್ಞಾನ-ವ್ಯೋಮದಲ್ಲಿ ತಮ್ಮ ಗಾಳಿಪಟವನ್ನು ಹಾರಿಸ ಬಹುದಾಗಿದೆ. ಆ ಕ್ಷೇತ್ರಕ್ಕೆ ಆದಿ-ಅಂತಗಳೆಂಬುವೇ ಇಲ್ಲವಷ್ಟೆ. ಹೀಗೆ ಆಳವಾದ ಅಭ್ಯಾಸ, ಘನೀಭೂತವಾದ ನಿರೂಪಣೆ, ಸಮಗ್ರದೃಷ್ಟಿ, ಆತ್ಮೀಯರೀತಿ ಶೈಲಿಗಳು ಅವರ ಚಿಕ್ಕ (ಗಾತ್ರದಲ್ಲಿ ಮಾತ್ರ) ಪ್ರಬಂಧಗಳ ಲಕ್ಷಣಗಳಾಗಿವೆ. ಸಂಬಂಧಪಟ್ಟ ವಿವಿಧ ಭಾಷೆಗಳ, ವಿಷಯಗಳ ಸಾಂಗೋಪಾಂಗ ಅಭ್ಯಾಸ, ಮೂಲಗಾಮಿ ದೃಷ್ಟಿಕೋಣಗಳಂತೂ ಅನನ್ಯ ಸಾಧಾರಣವಾಗಿವೆ, ಅನುಪಮವಾಗಿವೆ.

೨

ಇನ್ನು ಕೃಷ್ಣಶಾಸ್ತ್ರಿಗಳ ವಿಮರ್ಶಾ ಗ್ರಂಥಗಳಲ್ಲಿ 'ಸಂಸ್ಕೃತನಾಟಕ', 'ಬಂಕಿಮಚಂದ್ರ'ಗಳನ್ನೂ ಇಲ್ಲಿ ಅವಲೋಕಿಸಬಹುದು. ಒಂದು ಸಂಸ್ಕೃತ

ಭಾಷೆಯ ಸಮಗ್ರ ನಾಟ್ಯಕೃತಿಗಳ ವಿಮರ್ಶಾತ್ಮಕ ಸಾಹಿತ್ಯಚರಿತ್ರೆಯು; ಇನ್ನೊಂದು ಶ್ರೇಷ್ಠ ಬಂಗಾಳಿ ಲೇಖಕನೊಬ್ಬನ ಸಮಗ್ರಸಾಹಿತ್ಯದ ಅವಲೋಕನವಾಗಿದೆ. ಒಂದನ್ನು ಇಂದಿಗೆ ಮೂವತ್ತು ವರ್ಷಗಳ ಹಿಂದೆ ಶಾಸ್ತ್ರಿಗಳು ಕನ್ನಡಕ್ಕೆ ನೀಡಿದರು. ಇನ್ನೊಂದನ್ನು ಇಂದಿಗೆ ಏಳೆಂಟು ವರ್ಷಗಳ ಹಿಂದೆ ಸಲ್ಲಿಸಿದರು. ಎರಡು ಕೃತಿರಚನೆಯ ಮಧ್ಯದಲ್ಲಿ ಕಾಲು ಶತಮಾನವೇ ಸಂದಿದೆ. 'ಸಂಸ್ಕೃತ ನಾಟಕ'ವನ್ನು ಬರೆದಾಗ ಅವರು ಬೆಂಗಳೂರಿನಲ್ಲಿ ಪ್ರಾಧ್ಯಾಪಕರಾಗಿದ್ದರು. 'ಬಂಕಿಮಚಂದ್ರ'ವನ್ನು ರೂಪಿಸಿದಾಗ ಮೈಸೂರಿನಲ್ಲಿ ನಿವೃತ್ತಿ ಜೀವನವನ್ನು ಕೈಕೊಂಡಿದ್ದರು. ಆದರೂ ಕವೀಂದ್ರ ಕುವೆಂಪು ಅವರು ನುಡಿದಂತೆ "ಶ್ರೀ ಶಾಸ್ತ್ರಿಗಳ ಶಕ್ತಿ ಅಂತಹ ಮುಪ್ಪಿನ ಸ್ಥಿತಿಗೆ ಇಳಿದಿಲ್ಲ ಎನ್ನುವುದಕ್ಕೆ ಅವರ ಈ ವಿಮರ್ಶ ಮಹಾಕೃತಿಯೆ (ಬಂಕಿಮಚಂದ್ರ) ಸಾಕ್ಷಿಯಾಗಿದೆ." ಕವಿವರರ ಈ ನುಡಿಗಳನ್ನು ಸಾರ್ಥಕಗೊಳಿಸಿದ್ದಾರೆ, ಶಾಸ್ತ್ರಿಗಳು ಈ ಬೃಹತ್ ಗ್ರಂಥಗಳಲ್ಲಿ.

ಶಾಸ್ತ್ರಿಗಳ ಬುದ್ಧಿ, ಮನಸ್ಸು, ಭಾವಗಳಲ್ಲೆಲ್ಲ ತುಂಬ ಪ್ರಾಮಾಣಿಕತೆಯಿದೆ. ತನಗೆ ಒಪ್ಪಿಗೆಯಾಗದುದನ್ನು, ಸರಿಕಾಣದುದನ್ನು, ಎಂಥ ದೊಡ್ಡವರೇ ? ಹೇಳಿದ್ದರೂ ಸ್ವೀಕರಿಸುವವರಲ್ಲ ಶಾಸ್ತ್ರಿಗಳು. 'ಸಂಸ್ಕೃತನಾಟಕ'ದ 'ಅರಿಕೆ' ಯಲ್ಲಿ ಅವರೇ ನುಡಿದಂತೆ, ತಮ್ಮ ಗ್ರಂಥರಚನೆಗೆ ಬೇಕಾಗುವ ಸಾಮಗ್ರಿಯನ್ನು ಸಂಗ್ರಹಿಸಲಿಕ್ಕೆ ಅವರು ಹಲವು ಗ್ರಂಥಗಳನ್ನು ಅಭ್ಯಸಿಸುತ್ತಾರೆ ಅನೇಕ ಲೇಖನಗಳನ್ನು ಅವಲೋಕಿಸುತ್ತಾರೆ. ಆದರೆ ಅಷ್ಟೇ ಧೈರ್ಯವಾಗಿಯೂ ಸ್ಪಷ್ಟವಾಗಿಯೂ "ಯಾರೊಬ್ಬರ ಮತವನ್ನೂ ಸಿದ್ಧಾಂತವಾಗಿ ಅಂಗೀಕರಿಸಿ ಅನುಸರಿಸಿಲ್ಲ; ಎಲ್ಲರ ಹೇಳಿಕೆಯನ್ನು ತಿಳಿದು, ತೂಗಿ, ನನಗೆ ಸಪ್ರಮಾಣವೆಂದು ತೋರಿದ್ದನ್ನು ಬರೆದಿದ್ದೇನೆ. ಇನ್ನು ವಿಮರ್ಶೆ ವಿಭಾಗ: ಇದು ಪೂರ್ತಿಯಾಗಿ ನನ್ನದೇ. ಯಾವ ನಾಟಕವನ್ನು ನಾನೇ ಚೆನ್ನಾಗಿ ವ್ಯಾಸಂಗಮಾಡದೆ, ಒಪ್ಪಿಗೆಯಾಗದೆ, ಎಲ್ಲಿಯೂ ಅಭಿಪ್ರಾಯವನ್ನು ಕೊಟ್ಟಿಲ್ಲ; ಆದ್ದರಿಂದ ಇದರಲ್ಲಿರಬಹುದಾದ ಗುಣಾವಗುಣಗಳೆಲ್ಲಾ ನನ್ನವೇ. ಹೀಗೆ ವಿಮರ್ಶಿಸುವಾಗ ನಾನು ಲಕ್ಷಣಕಾರರು ಹೇಳಿರುವ ನಾಟಕದ ನಿಯಮಗಳನ್ನು ಲಕ್ಷ್ಯಕ್ಕೆ ಅನ್ವಯಿಸುವುದರಲ್ಲಿಯೇ ತೃಪ್ತನಾಗದೆ ವಸ್ತು, ಪಾತ್ರ, ರಸ, ಶೈಲಿ, ವರ್ಣನೆ, ನೀತಿ ಮುಂತಾದವುಗಳನ್ನು ಸಾಹಿತಿಯ ಒಂದು ವಿಸ್ತಾರ ದೃಷ್ಟಿಯಿಂದ ಪರಿಶೀಲಿಸಿ ಸಂಗ್ರಹವಾಗಿ ಬರೆಯಲು ಪ್ರಯತ್ನಪಟ್ಟಿದ್ದೇನೆ." ಮೂವತ್ತು ವರ್ಷಗಳ ಪೂರ್ವದಲ್ಲಿ ಬರೆದ ಇವೇ ಮಾತುಗಳು ಇತ್ತೀಚಿನ ಅವರ 'ಬಂಕಿಮಚಂದ್ರ'ವೆಂಬ ವಿಮರ್ಶಾ ಗ್ರಂಥಕ್ಕೂ ಕೂಡ ಅನ್ವಯಿಸುತ್ತವೆ. ಎರಡರಲ್ಲಿಯ ವಿಮರ್ಶಾ ಪದ್ಧತಿಯೂ ಸಹ ಒಂದೇ ರೀತಿಯಾಗಿದೆ. ಅಲ್ಲದೆ ಇಂಥ ನಿಶ್ಚಿತ ಅಭಿಪ್ರಾಯ, ಸ್ವತಂತ್ರ ವಿಮರ್ಶಾದೃಷ್ಟಿ, ಸಂಪೂರ್ಣ ಅಧ್ಯಯನಮಾಡಿ, ತಿಳಿದು ಹೇಳುವ ಸತ್ವಗಳನ್ನು ನಾವು ತೀರ ಕಡಿಮೆ ಜನರಲ್ಲಿ ಕಾಣುತ್ತೇವೆ.

ಸಂಸ್ಕೃತನಾಟಕ ಸಾಹಿತ್ಯದ ಚರಿತ್ರೆ ಸುಮಾರು ಒಂದುಸಾವಿರ ವರ್ಷ ನಡೆದುಬಂದಿದೆ. ಈ ದೀರ್ಘಕಾಲಾವಧಿಯಲ್ಲಿ ಉಚ್ಛ್ರಾಯಕಾಲ, ಮಧ್ಯಕಾಲ ಮತ್ತು ಕ್ಷೀಣಕಾಲವೆಂದು ಮೂರು ವಿಭಾಗವಾಗಿ ವಿಂಗಡಿಸಿಕೊಂಡು ಶಾಸ್ತ್ರಿಗಳು ವಿಷಯವನ್ನು ವಿವೇಚಿಸಿದ್ದಾರೆ. ಈ ವಿವೇಚನೆಗೆ ಪೀಠಿಕೆಯಂತೆ 'ಸಂಸ್ಕೃತ ನಾಟಕದ ಸ್ವರೂಪ ಮತ್ತು ಉತ್ಪತ್ತಿ' ಎಂಬ ಭಾಗವಿದೆ. ಈ ಭಾಗದಲ್ಲೆಲ್ಲ ಶಾಸ್ತ್ರಿಗಳ ಸಂಸ್ಕೃತ ಸಾಹಿತ್ಯದ ವಿಶಾಲವಾದ ಅಭ್ಯಾಸ; ನಾಟ್ಯಶಾಸ್ತ್ರ, ಲಕ್ಷಣ ಗ್ರಂಥಗಳ ಆಳವಾದ ಅಧ್ಯಯನಗಳು ವ್ಯಕ್ತಗೊಂಡಿವೆ. ಮುಂದಿನ ಭಾಗಗಳಲ್ಲಿ ಪ್ರತಿಯೊಬ್ಬ ಕವಿಯ ಚರಿತ್ರೆಯನ್ನು ಕೊಟ್ಟು, ಅವನ ಒಂದೊಂದು ಗ್ರಂಥಗಳನ್ನು —ನಾಟಕಗಳನ್ನು—ವಿಮರ್ಶೆಗೆ ಎತ್ತಿಗೊಂಡಿದ್ದಾರೆ. ನಾಟಕವನ್ನು ವಿಮರ್ಶಿಸುವ ಪೂರ್ವದಲ್ಲಿ ಆಯಾ ನಾಟಕಗಳ ಕಥಾವಸ್ತುವನ್ನು ಸಂಗ್ರಹಿಸಿಕೊಡುವ ಕ್ರಮವನ್ನು ಅನುಸರಿಸಿದ್ದಾರೆ. ಆಮೇಲೆ ವಿಮರ್ಶೆಗೆ ತೊಡಗುತ್ತಾರೆ. ನಾಟಕಗಳ ವಸ್ತುವನ್ನು ವಿಮರ್ಶಿಸುವಾಗ ಅವುಗಳ ಮೂಲ ಆಕರಗಳೊಡನೆ ತುಲನೆಮಾಡಿದುದೊಂದು ವಿಶೇಷ ಕ್ರಮವಿಲ್ಲಿದೆ. ಆಮೇಲೆ ಪಾತ್ರಸೃಷ್ಟಿ, ಸಂವಿಧಾನ ಸಂಯೋಜನೆ, ನಾಟಕೀಯ ಗುಣಗಳನ್ನೆಲ್ಲ ಸ್ವತಂತ್ರ ದೃಷ್ಟಿಯಿಂದ ವಿಮರ್ಶಿಸಿದ್ದಾರೆ. ಆಯಾ ವಿಮರ್ಶೆಗೆ ಕೃತಿಕಾರನ ಕಾಲದ ಸಾಹಿತ್ಯದ ಲಕ್ಷಣಗಳನ್ನು ಗಮನದಲ್ಲಿಟ್ಟುಕೊಂಡುದೊಂದು ಔಚಿತ್ಯವಿದೆ. ಈ ಗುಣಗಳನ್ನೆಲ್ಲ ನೆನೆದೇ ಕನ್ನಡದ ಕಣ್ವರೆನಿಸಿದ ಶ್ರೀ ಬಿ. ಎಂ. ಶ್ರೀಕಂಠಯ್ಯನವರು "ಶ್ರೀಮಾನ್ ಕೃಷ್ಣಶಾಸ್ತ್ರಿಗಳವರ ಸಂಸ್ಕೃತ ನಾಟಕದ ಚರಿತ್ರೆಯನ್ನು ಮಹಾಜನರು ಆದರದಿಂದ ಬರಮಾಡಿಕೊಳ್ಳುವರೆಂದು ನಾನು ನಂಬಿದ್ದೇನೆ. ಈ ವಿಷಯಕ್ಕೆ ಸಂಬಂಧಪಟ್ಟ ಅನೇಕ ಗ್ರಂಥಗಳನ್ನೂ ವಿದ್ವತ್ ಪತ್ರಿಕೆಗಳಲ್ಲಿ ಚೆದರಿರತಕ್ಕ ಅಸಂಖ್ಯಾತ ಲೇಖನಗಳನ್ನೂ ಪರಿಶೀಲಿಸಿ, ಸಂಸ್ಕೃತ ನಾಟಕಗಳನ್ನೆಲ್ಲಾ ಪರಾಮರ್ಶಿಸಿದ ತಮ್ಮ ಸ್ವಂತ ಅನುಭವವನ್ನು ಸೇರಿಸಿ, ಈ ಸಣ್ಣಪುಸ್ತಕದಿಂದ (ಶ್ರೀಯವರ ದೃಷ್ಟಿಯಲ್ಲಿ ಮಾತ್ರ ಸಣ್ಣ ಪುಸ್ತಕವಿದು) ಕನ್ನಡದಲ್ಲಿ ಮೊದಲನೆಯ ಸಾರಿ, ಭಾರತೀಯ ಸಾಹಿತ್ಯದ ನಾಯಕರತ್ನದಂತಿರುವ ಒಂದು ಭಾಗದ ವಿಚಾರವಾಗಿ ಜ್ಞಾನಪ್ರಸಾರಣೆಗೆ ಅನುಕೂಲಮಾಡಿದ್ದಾರೆ. ಅವರ ಶ್ರಮವೂ ಪರ್ಯಾಲೋಚನೆಯೂ ಕೃತಜ್ಞತೆಗೆ ಅರ್ಹವಾದುವು" ಎಂದು ಮನದುಂಬಿ ನುಡಿದಿದ್ದಾರೆ. ಗ್ರೀಕ್, ಇಂಗ್ಲಿಷ್ ನಾಟಕಪ್ರಪಂಚವನ್ನೆಲ್ಲ ಅಭ್ಯಸಿಸಿದ ಶ್ರೀಯವರಿಂದ ಇಂಥ ಸಾರ್ಥಕ ನುಡಿಗಳನ್ನು ಹೊಂದಿದ ಕೃತಿಯೇನು ಸಾಮಾನ್ಯವಲ್ಲ. ಲೇಖಕರಂತೂ ಹಿರಿಯರೇ ಸೈ.

'ಏನೋ, ಒಂದು ವಾರದಲ್ಲಿ ಪುಸ್ತಕ ಬರೆದುಮುಗಿಸಿದೆ' ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ಲೇಖಕರೂ ನಮ್ಮಲ್ಲಿದ್ದಾರೆ. ಆದರೆ ಅಂಥ ಬರಹಗಾರರ ಸಾಲಿಗೆ ಶ್ರೀ ಶಾಸ್ತ್ರಿಗಳು ಸೇರತಕ್ಕವರಲ್ಲ, 'ಬಂಕಿಮಚಂದ್ರ' ಗ್ರಂಥಕ್ಕೆ ಅಭ್ಯಾಸ ಶಾಸ್ತ್ರಿಗಳು ಅರಿತೋ ಅರಿಯದೆಯೋ ದೈವಪ್ರೇರಣೆಯಿಂದ

ಎನ್ನುವಂತೆ, ಆ ಗ್ರಂಥವು ರೂಪುಗೊಳ್ಳುವ ಪೂರ್ವದಲ್ಲಿ ಅರವತ್ತು ವರ್ಷಗಳಿಂದ ಆರಂಭವಾಯಿತು. ಐದು ವರ್ಷಗಳಕಾಲ ಬಂಕಿಮಚಂದ್ರನು ಕೃಷ್ಣಶಾಸ್ತ್ರಿಗಳ ಆರಾಧ್ಯಮೂರ್ತಿಯಾಗಿ, ಅವರ ಮನವನ್ನು ಪರಿಪಕ್ವಗೊಳಿಸಿದನು. ಆಮೇಲೆ ಕೃಷ್ಣಶಾಸ್ತ್ರಿಗಳು ಕಂಡರಿಸಿದ ಮೂರ್ತಿ 'ಬಂಕಿಮಚಂದ್ರ'; ಕಲಾತಪಸ್ವಿಯು, ಕಲೋಪಾಸಕನ ಅನುಪಮ ಕಲಾಕೃತಿ. ರಾಷ್ಟ್ರಗೌರವವನ್ನು ಪಡೆದ ಶ್ರೇಷ್ಠ ವಿಮರ್ಶಾಗ್ರಂಥವು; ಮಹಾಕೃತಿಯು.

'ಸ್ಫೂರ್ತಿಬಂತು. ಟೀ ಕುಡಿದು ಕುಳಿತೆ. ಬರೆದು ಮುಗಿಸಿಯೇ ಎದ್ದೆ.'– ಎಂದು ಅಭಿಮಾನದಿಂದ ಹೇಳಿಕೊಳ್ಳುವಂಥವರ ಕೃತಿಗಳಲ್ಲ ಕೃಷ್ಣಶಾಸ್ತ್ರಿಗಳ ಬರಹಗಳು. ಒಂದೊಂದು ಗ್ರಂಥಕ್ಕೂ ಹತ್ತಾರು ವರ್ಷಗಳ ಅಭ್ಯಾಸ, ಚಿಂತನ. ಇವೇನು ಮೌಲಿಕ ಕೃತಿಗಳಲ್ಲ, ವಿಮರ್ಶೆ; ಸಂಗ್ರಹ ಗ್ರಂಥಗಳು ಎನ್ನುವಂತಿಲ್ಲ. ಸಾಹಿತ್ಯವು ಜೀವನದ ವಿಮರ್ಶೆಯಾದರೆ ಆ ವಿಮರ್ಶೆಯ, ವಿಮರ್ಶೆಗಳು ಕೃಷ್ಣಶಾಸ್ತ್ರಿಗಳ ಗ್ರಂಥಗಳು. ಅಂಥ ಸ್ಫೂರ್ತಿಯುತ ಮೌಲಿಕತೆಯನ್ನು ಅವರ ಸಮಾಲೋಕನದಲ್ಲಿ ಕಾಣುತ್ತೇವೆ. 'ಬಂಕಿಮಚಂದ್ರ'ವು ಕವೀಂದ್ರ ರವೀಂದ್ರರ 'ಕವಿಕಾಣಿಕೆ' ಎಂಬ ಲೇಖನದಿಂದ ಆರಂಭವಾಗುತ್ತದೆ. ಅದರಲ್ಲಿ ಬಂಕಿಮ ಚಂದ್ರನ ಚರಿತ್ರೆಯು ಅಡಕವಾಗಿದೆ; ಅದು ಕೇವಲ ಜೀವನಚರಿತ್ರೆಯಲ್ಲ; ಮಹಾಕವಿಯ ಸುತ್ತಲಿನ ಸನ್ನಿವೇಶವನ್ನು ಕಂಡರಿಸಿದ ಇನ್ನೊಬ್ಬ ಮಹಾಕವಿಯ ದರ್ಶನವಾಗಿದೆ. ಆ ಮೇಲೆ ಬರುವುದು 'ಬಂಗಾಳಿ ಸಾಹಿತ್ಯದ ಸಂಕ್ಷಿಪ್ತ ಚರಿತ್ರೆ', ಬಂಕಿಮಚಂದ್ರನ ಸಂಕ್ಷಿಪ್ತ ಜೀವನಚರಿತ್ರೆ; ತರುವಾಯ ಕವಿತೆ, ಕಾದಂಬರಿಗಳು, ಇತರ ಗ್ರಂಥ, ಲೇಖನಗಳ ಪರಿಚಯ ವಿಮರ್ಶೆಗಳು ಒಂದೊಂದಾಗಿ ವಿಕಾಸಗೊಂಡು ನಿಲ್ಲುತ್ತವೆ. ಇಲ್ಲಿಯೂ 'ಸಂಸ್ಕೃತನಾಟಕ' ದೊಳಗಿನ ದೃಷ್ಟಿಯೇ ವ್ಯಕ್ತವಾಗಿದೆ. ಬಂಕಿಮಚಂದ್ರನ ಯಾವುದೇ ಕೃತಿಯನ್ನೂ ವಿಮರ್ಶೆಗೆ ಎತ್ತಿಕೊಂಡರೂ ಮೊದಲು ಆ ಕೃತಿಯ ಹುಟ್ಟು, ಪ್ರಕಾಶನ ವಿಷಯದಲ್ಲಿ ಕೆಲವು ಸಂಗತಿಗಳನ್ನು ಹೇಳುವುದು, ಆಮೇಲೆ ಅದರ ಸಾರಸಂಗ್ರಹ-ತರುವಾಯ ವಿಮರ್ಶೆ. ವಿಮರ್ಶೆಯಲ್ಲಿಯೂ ನಡುನಡುವೆ ಮೂಲಕೃತಿಯ ಭಾಗಗಳನ್ನೂ ಅನುವಾದಿಸಿ ತಮ್ಮ ಮಾತಿಗೆ ಪ್ರಮಾಣವೆಂದೋ, ಮೂಲದ ಸೊಗಸು ಸೌಂದರ್ಯಗಳನ್ನು ಓದುಗರೂ ಅನುಭವಿಸಲೆಂದೋ ಕೊಡುವ ಪರಿಪಾಠವಿದೆ. ಅದು ಕೃತಿಗೆ ಇನ್ನಷ್ಟು ಜೀವಕಳೆಯನ್ನು ತರುತ್ತದೆ.

ವಿಮರ್ಶೆಯನ್ನು ಸ್ವತಂತ್ರ ಕೃತಿಯ ಮಟ್ಟಕ್ಕೆ ಒಯ್ದು ಇಟ್ಟ ಸೌಭಾಗ್ಯ ಶಾಸ್ತ್ರಿಗಳದ್ದಾಗಿದೆ. ಇವರು ಬಂಕಿಮಚಂದ್ರನ 'ರಾಜಸಿಂಹ' ಕಾದಂಬರಿಯನ್ನು ವಿಮರ್ಶಿಸುವಲ್ಲಿ ಈ ಚಿತ್ರವನ್ನು ಕೊಡುತ್ತಾರೆ. 'ಬಂಕಿಮನ ಸಣ್ಣಪಾತ್ರಗಳು ಎಲ್ಲೋ ಒಂದೆರಡು ಕ್ಷಣ ಬಂದುಹೋದರೂ ಖಚಿತವಾಗಿರುತ್ತವೆ, ಸ್ವಾರಸ್ಯ ವಾಗಿರುತ್ತವೆ' ಎಂದು ಆರಂಭಿಸಿ ಮಾಣಿಕಬಾಲನ 'ಸೋದರತ್ತೆಯ ನಾದಿನಿಯ

ಸೊಸೆಯ ಚಿಕ್ಕತಾತನ ಮಗಳ' ಪಾತ್ರದ ವಿಷಯಕ್ಕೆ ಹೇಳುತ್ತಾರೆ. ಅವಳು ಬಡವಳು, ವಿಧವೆ, ಮಗುವಿಗೆ ಒಂದು ತಿಂಗಳು ಅನ್ನ ಹಾಕಿದರೆ ಎಷ್ಟು ವೆಚ್ಚ ಬಂದೀತು-ಎನ್ನುವ ಲೆಕ್ಕಾಚಾರದವಳು, ಆದರೂ ಅಂತಃಕರಣವುಳ್ಳವಳು. ಅಂತಲೇ ರಾಜಸಿಂಹನ ಮಗುವನ್ನೂ ಸಾಕಲು ಒಪ್ಪಿದಳು ಎಂಬ ಸಂಗತಿಯನ್ನೂ ಸೂಚಿಸಿ ಶಾಸ್ತ್ರಿಗಳು 'ಹೊಟ್ಟೆಗಾಗಿ ಬಡತನ ಬಾಯಿಬಿಡಿಸುತ್ತದೆ, ದೈನ್ಯ ತರುತ್ತದೆ-ಹೊಟ್ಟೆಬಟ್ಟೆಗಳಿಲ್ಲದ ಬಡವರು ಪಡುವ ದುಡ್ಡಿನ ಆಸೆಯನ್ನು ಲೋಭವೆನ್ನಬಹುದೆ? ಐಶ್ವರ್ಯವಂತರ ಹಣದ ಮೇಲಿನಧೂಳು ಅವರಿಗೆ ಅಪಾರ ಧನ.... ಈ ಪಾಷಾಣ ಪ್ರಪಂಚದಲ್ಲಿ ದುಡ್ಡು ದೊರೆಯಬಹುದು, ಅಂತಃಕರಣ ದೊರೆಯುವುದು ಸುಲಭ ವಲ್ಲ' ಎಂಬ ಮಾತುಗಳನ್ನು ಹೇಳುತ್ತಾರೆ. ಸಮಾಜದ ಎಂಥ ಕಟುವಿಮರ್ಶೆಯಿದೆ ಇಲ್ಲಿ! ಅದರಿಂದ ಆ ಚಿಕ್ಕ ಪಾತ್ರದಮೇಲೆ ಬೀರುವ ಬೆಳಕೂ ಕೂಡ ಎಷ್ಟು ಅಪಾರವಾಗಿದೆ.

'ರಾಜಸಿಂಹ' ಕಾದಂಬರಿಯ ಒಂದು ಸಂದರ್ಭದ ವಿಷಯಕ್ಕೆ ಬರೆಯುತ್ತ ಶಾಸ್ತ್ರಿಗಳು ಹೀಗೆ ವಿವರಿಸುತ್ತಾರೆ: 'ಮಾಣಿಕಲಾಲ ಮಹಮ್ಮದ್ ಖಾನ್ ಎಲೆಯಡಿಕೆ ಮಾರುವ ಹೆಂಗಸು ಇವರ ವೃತ್ತಾಂತ ತುಂಬ ವಿನೋದಕರವಾಗಿದೆ. ಅದಷ್ಟೇ ಒಂದು ತುಂಬ ರಸವತ್ತಾದ, ಅಚ್ಚುಕಟ್ಟಾದ, ಸಣ್ಣಕಥೆ. ಮಾಣಿಕ ಲಾಲನು ರೂಪನಗರದ ಅಂಗಡಿಬೀದಿಗೆ ಹೋಗಿ, ಹೊಟ್ಟೆಗೆ ವಂಚನೆಮಾಡಿಕೊಳ್ಳದೆ ಐದಾರು ಸೇರು ಮಿಠಾಯಿ ತಿಂದು, ಸೇರೂವರೆ ಹಾಲು ಕುಡಿದು, ತಾಂಬೂಲಮಾರುವ ಅಂಗಡಿಗೆ ಬರುತ್ತಾನೆ. ಅಂಗಡಿಯ ಯಜಮಾನಿಯು ಬಹಳ ರಸಿಕಳು; ವರ್ಣದಲ್ಲಿ ಕೆಂಪು, ಜಿಂಕೆಯ ಕಣ್ಣುಗಳು; ದೃಷ್ಟಿಚಂಚಲ; ಸುಂದರವಾಗಿ ನಗುವಳು. ಅನಿಂದ್ಯವಾದ ದಂತಪಂಕ್ತಿ; ಆಭರಣಭೂಷಿತಳು; ವಯಸ್ಸು ಸುಮಾರು ಮೂವತ್ತು....ಮನೋಹರವಾಗಿ ನಗುತ್ತ ದುಡ್ಡು ತೆಗೆದುಕೊಳ್ಳುತ್ತಿದ್ದಳು; ರಸಿಕರು ಸಿಕ್ಕರೆ ಚಕ್ಕಂದವಾಡುವಳು.'[1] ಇಲ್ಲಿ ಕೊಡುವ ಯಜಮಾನಿಯ ಚಿತ್ರ ಎಷ್ಟು ಮನೋಹರ! ಕುಶಲಚಿತ್ರಗಾರನೊಬ್ಬನು ಒಂದೆರಡು ರೇಖೆಗಳಿಂದ ಸುಂದರ ಚಿತ್ರ ವನ್ನು ಬಿಡಿಸಿದಂಥ ಕಲೆಯಿದು. ಜಿಂಕೆಗಣ್ಣು, ದೃಷ್ಟಿಚಂಚಲ; ಸುಂದರವಾದ ನಗೆ, ಅನಿಂದ್ಯ ದಂತಪಂಕ್ತಿ; ಮನೋಹರವಾದ ನಗೆ, ರಸಿಕರೊಡನೆ ಚಕ್ಕಂದ-ಇವು ಅದೆಂಥ ಕ್ರಮಬದ್ಧತೆಯನ್ನು ಹೊಂದಿವೆ? ಎಂಥ ಅಪೂರ್ವ ಚಿತ್ರವನ್ನು ತೆರೆದು ತೋರಿಸುತ್ತವೆ. ಮಾಣಿಕಲಾಲನ ತಿನ್ನುವಿಕೆ ಕುಡಿಯುವಿಕೆಗಳಲ್ಲಿ ಹಾಸ್ಯವೂ ಇದೆ. ಇಂಥ ಅನುಪಮ ವರ್ಣನೆ, ವಿವರಗಳಿಂದ ವಿಮರ್ಶೆಯೂ ಒಂದು ರಸವತ್ತಾದ ಕೃತಿಯಾಗಿ ಪರಿಣಮಿಸಿದೆ, ಕೃಷ್ಣಶಾಸ್ತ್ರಿಗಳ ಕೈಯಲ್ಲಿ. ಹೀಗೆ 'ಬಂಕಿಮಚಂದ್ರ'ದ ಉದ್ದಕ್ಕೂ ಪುಟಪುಟಗಳಲ್ಲಿಯೂ ವಿಚಾರ, ವಿಮರ್ಶೆ,

---

[1] 'ಬಂಕಿಮಚಂದ್ರ' (ಪ್ರಥಮ ಮುದ್ರಣ) ಪು. ೨೫೫.

ಲಾಲಿತ್ಯಗಳು ವೈವೆತ್ತಿನಿಂತಿವೆ; ಶೈಲಿಯ ಸೊಬಗಿನಿಂದ ಓದುಗರ ವೈಮರೆಯಿಸುತ್ತವೆ.

೩

ಕೃಷ್ಣಶಾಸ್ತ್ರಿಗಳು 'ವಚನಭಾರತ,' 'ಕಥಾಮೃತ'ಗಳನ್ನು ಒಂದೆರಡು ವರ್ಷಗಳ ಅಂತರದಲ್ಲಿಯೇ ಸಂಗ್ರಹಿಸಿ ಕನ್ನಡಿಗರ ಕೈಗಿತ್ತರು. ಕ್ರಿ. ಶ. ೧೯೫೦ರಲ್ಲಿ 'ವಚನಭಾರತ'ವು ಪ್ರಕಟವಾಗಿದ್ದರೆ ೧೯೫೨ರಲ್ಲಿ 'ಕಥಾಮೃತ'ವು ಬೆಳಕಿಗೆ ಬಂತು. ಇವು ಬರೇ ಸಂಗ್ರಹಿಸಿ, ಪ್ರಕಟಿಸಿದ ಗ್ರಂಥಗಳಲ್ಲ. ವಿಸ್ತೃತವೂ ವಿದ್ವತ್ ಪೂರ್ಣವೂ ಆದ 'ಪೀಠಿಕೆ' ಅನುಬಂಧಾದಿಗಳಿಂದ ಕೂಡಿದವುಗಳಾಗಿವೆ. 'ಸುಂದರವಾದ ವಸ್ತು ಅಡಕವಾಗಿದ್ದರೆ ಅದರಿಂದ ಎಂದೂ ಬೇಸರವಾಗುವುದಿಲ್ಲ' ಎಂಬುದು ಶಾಸ್ತ್ರಿಗಳ ಅನುಭವಕ್ಕೆ ಬಂದ ಸಂಗತಿಯಾಗಿದೆ. ಅದರಿಂದ ಒಂದು ಲಕ್ಷ ಶ್ಲೋಕಗಳಿಗಿಂತ ಹೆಚ್ಚಾಗಿರುವ 'ಮಹಾಭಾರತ'ವನ್ನು ಸಂಗ್ರಹಿಸಿ, ಕನ್ನಡಿಸಿ ಜನತೆಯ ಕೈಗಿತ್ತರು. ಸ್ವತಂತ್ರ ಕನ್ನಡ ಗದ್ಯಗ್ರಂಥವೋ ಎನ್ನುವಂತೆ 'ವಚನಭಾರತ'ವನ್ನು ರೂಪಿಸಿದರು. 'ಕಥಾಮೃತ'ದಲ್ಲಿಯೂ ಕೂಡ ಶಾಸ್ತ್ರಿಗಳ ಇದೇ ದೃಷ್ಟಿಯು ಕಾರ್ಯಗತವಾಗಿದೆ.

ಮಹಾಭಾರತವು ನಿಬಿಡಾರಣ್ಯವಿದ್ದಂತೆ. ಅದರಲ್ಲಿ ಅನೇಕ ಕಥೆ, ಉಪಕಥೆ, ಮೃಗ–ಪಕ್ಷಿ–ಹಾವುಗಳ ಕಥೆ, ರಾಕ್ಷಸರು, ದೇವತೆಗಳ ಕಥೆ, ವೀರರ ಕಥೆ, ಋಷಿಗಳ ಕಥೆ, ನೀತಿಕಥೆ, ಪುರಾಣಕಥೆ ಹೀಗೆ ಹಲವಾರು ವಿಧದ ಕಥೆಗಳು ಬರುತ್ತವೆ. ಅವುಗಳನ್ನೆಲ್ಲ ಕೌರವ–ಪಾಂಡವರ ಕಥೆಯು ಸೂತ್ರರೂಪದಲ್ಲಿ ಪವಣಿಸಿಕೊಂಡು ನಿಂತಿದೆ. ಅದರಲ್ಲೂ ಯುದ್ಧದ ಕಥೆಯೇ ಗ್ರಂಥದ ಪ್ರಧಾನ ವಸ್ತುವಾಗಿದೆ. ಧರ್ಮ ನೀತಿಗಳೂ ಹಾಸುಹೊಕ್ಕಾಗಿ ಸೇರಿವೆ. ವಿವಿಧ ಮಾದರಿಯ ವರ್ಣನೆಗಳೂ ವ್ಯಕ್ತಿಚಿತ್ರಗಳೂ ಪ್ರಸಂಗಕಥನಗಳೂ ಕೂಡ ವಿಪುಲವಾಗಿ ಬಂದಿರುವ ಬೃಹತ್ ಕಾವ್ಯವಿದು. ಸಾವಿರಾರು ವರ್ಷಗಳವರೆಗೆ ಬೆಳೆದುನಿಂತ ಭಾರತೀಯ ವಾಙ್ಮಯದೊಳಗಿನ ವಟವೃಕ್ಷವೆಂದರೆ ಮಹಾಭಾರತ. ಇಂಥ ವಿಸ್ತಾರವಾದ ಸಂಸ್ಕೃತ ಗ್ರಂಥವನ್ನು ಸಮರ್ಪಕವಾಗಿ ಸಂಗ್ರಹಿಸಿ ಕೊಡುವುದೇನೂ ಸುಲಭಕಾರ್ಯವಲ್ಲ. ಅದನ್ನು ಯಶಸ್ವಿಯಾಗಿ ನೀಗಿಸಿದ್ದಾರೆಂದರೆ ಅವರ ಧೀಶಕ್ತಿಯ ಕಲ್ಪನೆಯು ಯಾರಿಗೂ ಆಗದೆ ಹೋಗುವುದಿಲ್ಲ.

'ಈ ಗ್ರಂಥದ ರಚನೆಯಲ್ಲಿ ನನ್ನ ದೃಷ್ಟಿಯು ಮುಖ್ಯವಾಗಿ ಕಾವ್ಯದೃಷ್ಟಿ ಸಾಹಿತಿಯ ದೃಷ್ಟಿ'–ಎಂದು ಶಾಸ್ತ್ರಿಗಳು 'ವಚನಭಾರತ'ದ ಪೀಠಿಕೆಯಲ್ಲಿ ಹೇಳಿಕೊಂಡಿದ್ದಾರೆ. ಈ ಮಾತನ್ನು ಗ್ರಂಥದುದ್ದಕ್ಕೂ ನಡೆಯಿಸಿದ್ದಾರೆನ್ನಲಿಕ್ಕೆ ಅಡ್ಡಿಯಿಲ್ಲ. ಅದರಿಂದ ಮಹಾಭಾರತದ ಕಥೆಯೆಲ್ಲ ರಸವತ್ತಾಗಿ ಈ ಗ್ರಂಥದಲ್ಲಿ ಅವತರಿಸಿದೆ. ಧರ್ಮ, ನೀತಿಗಳೆಲ್ಲವೂ ಉಚಿತ ಪ್ರಮಾಣದಲ್ಲಿ ಅಳವಟ್ಟಿವೆ. ಉಪಕಥೆಗಳನ್ನೆಲ್ಲ ಸಾರವಳಿಯದಂತೆ ಅಲ್ಲಲ್ಲಿ ಸಂಗ್ರಹಿಸಿ ಹೇಳಿ ಮುಂದರಿದಿದ್ದಾರೆ.

ಕನ್ನಡದ ಆಧುನಿಕ ಗದ್ಯಶೈಲಿಗೆ ಉತ್ತಮ ನಿದರ್ಶನವಾಗಿ, ಈ 'ವಚನಭಾರತ.' ಭಾಷೆಯುಬಿಗಿಯಾಗಿದ್ದು ಸರಳವಾಗಿದೆ, ಸ್ಪಷ್ಟವಾಗಿದೆ.

ಮಹಾಭಾರತವನ್ನು ನಾಲ್ಕುನೂರು ಪುಟಗಳಲ್ಲಿ ಹೀಗೆ ಸಂಗ್ರಹಿಸಿ ಕೊಡುವುದೇನೂ ಸುಲಭವಲ್ಲ. ಅದರ ಜೊತೆಗೆ ಮಹಾಭಾರತವನ್ನು ಕುರಿತು ವಿದ್ವತ್ ಪ್ರಪಂಚವು ಮೆಚ್ಚುವಂತಹ ಪೀಠಿಕೆಯನ್ನು ಬರೆದಿತ್ತಿದ್ದಾರೆ. ಅದರಲ್ಲಿ 'ಸಂಸ್ಕೃತ ಕನ್ನಡ ಭಾರತಗಳು' ಎಂಬ ಭಾಗವು 'ವಚನಭಾರತ'ವು ಅನುಸರಿಸಿದ ಮಾರ್ಗವನ್ನು ಸೂಚಿಸುತ್ತದೆ. ಹೀಗೆ ಗದ್ಯದಲ್ಲಿ ಭಾರತ ಕಥೆಯನ್ನು ಸಂಗ್ರಹಿಸುವಾಗ ಸಂಸ್ಕೃತ ಭಾರತದ ಯಾವ ಪಾಠವನ್ನು ಅನುಸರಿಸಬೇಕು? ಏಕೆ? ಇತ್ಯಾದಿ ಪ್ರಶ್ನೆಗಳನ್ನು ವಿವೇಚಿಸಿ, ಶಾಸ್ತ್ರಿಗಳು ಸಮರ್ಪಕವಾದ ಉತ್ತರವನ್ನು ಕಂಡುಕೊಂಡಿದ್ದಾರೆ. ಮುಂದೆ ಅದನ್ನೇ ಅನುಸರಿಸಿದ್ದಾರೆ. ತರುವಾಯ 'ಮಹಾಭಾರತದ ಹುಟ್ಟು ಮತ್ತು ಬೆಳವಣಿಗೆ'ಯನ್ನು ಅದರ ಕಾಲ, ಕರ್ತೃಗಳ ವಿಷಯಗಳನ್ನು ವಿವರಿಸಿದ್ದಾರೆ. ಮಹಾಭಾರತದ ಧರ್ಮ, ನೀತಿಗಳನ್ನು ಸಾರವತ್ತಾಗಿ ಸಂಗ್ರಹಿಸಿ ಕೊಟ್ಟಿದ್ದಾರೆ. ಮಹಾಭಾರತದ ಕಾವ್ಯಗುಣವನ್ನು ವಿವರಿಸಿದಂತೆ ಅದರ ದರ್ಶನ ವಿಭಾಗದ ಪರಿಚಯವನ್ನು ನೀಡಿದ್ದಾರೆ. ಮೇಲಾಗಿ ಭಾರತೀಯ ಸಂಸ್ಕೃತಿಯ ಮೇಲಿನ ಅಂಶಗಳಮೇಲೆ ಭಾರತವು ಬೀರುವ ಬೆಳಕನ್ನು ಎತ್ತಿ ತೋರಿಸಿದ್ದಾರೆ. ಈ ಎಲ್ಲಗುಣಗಳಿಂದ 'ವಚನಭಾರತ'ದ ಉಪಯುಕ್ತತೆಯ ತೂಕವು ಅಭ್ಯಾಸಿಗಳ ದೃಷ್ಟಿಯಲ್ಲಿ ಹೆಚ್ಚಿದೆ. ಆಧುನಿಕ ಕನ್ನಡದ ಶ್ರೇಷ್ಠ ಗ್ರಂಥಗಳಲ್ಲಿ ಒಂದೆನಿಸಿದೆ.

ಮಹಾಭಾರತದ ಈ ನವ ಸೃಷ್ಟಿಯನ್ನು ಅವಲೋಕಿಸಿ 'ಕಥಾಮೃತ'ದ ಕಡೆಗೆ ಹೊರಳಿದಾಗ 'ಆಹಾ! ಇದೂ ಒಂದು ನೂತನ ಕೃತಿ; ಕೃಷ್ಣಶಾಸ್ತ್ರಿಗಳು ಕನ್ನಡಕ್ಕಿತ್ತ ಕಾಣಿಕೆ'.—ಎಂಬ ಉದ್ಗಾರವು ತನ್ನಿಂದ ತಾನೇ ನಮ್ಮಿಂದ ಹೊರಹೊಮ್ಮುವುದು. ಸಂಸ್ಕೃತ ಭಾಷೆಯಲ್ಲಿರುವ 'ಕಥಾಸರಿತ್ಸಾಗರ'ವೆಂಬ ಪದ್ಯಕಾವ್ಯವನ್ನು ಸಂಗ್ರಹಿಸಿ ಕನ್ನಡ ವಾಗ್ದೇವಿಯ ಸಿರಿಮುಡಿಗೆ ಮುಡಿಸಿದ್ದಾರೆ. ಸೋಮಕವಿ ವಿರಚಿತ ಸುಮಾರು ಇಪ್ಪತ್ತೆರಡು ಸಾವಿರ ಶ್ಲೋಕ ಪ್ರಮಾಣದಲ್ಲಿರುವ ಬೃಹದ್ ಗ್ರಂಥವಿದು. ವಿವಿಧ ಕಥೆಗಳ ಸಾಗರವೇ ಇದಾಗಿದೆ. ವಿವಿಧ 'ತರಂಗ'ಗಳಲ್ಲಿ ವಿಭಾಗಗೊಂಡಿದೆ. ಭಾರತೀಯ ಸಾಹಿತ್ಯಕ್ಕೆ ಮೂಲ ವಸ್ತುಗಳನ್ನು ಒದಗಿಸುವ 'ಬೃಹತ್ ಕಥಾಮಂಜರಿ', 'ಕಥಾ ಸರಿತ್‌ಸಾಗರ'ಗಳ ಅಮೃತ ಕಲಶವನ್ನೇ ತುಂಬಿ ಶಾಸ್ತ್ರಿಗಳು ನಮ್ಮ ಕೈಗಿತ್ತಿದ್ದಾರೆ. ವಿಶಾಲ ದೃಷ್ಟಿಯಿಂದಲೂ ತಲಸ್ಪರ್ಶಿಯಾಗಿಯೂ ಕನ್ನಡ ವಾಙ್ಮಯವನ್ನು ಅಭ್ಯಾಸಮಾಡಲಿಕ್ಕೆ ಒಂದು ಹೊಸ ಕ್ಷೇತ್ರವನ್ನು ನಿರ್ಮಿಸಿ ಕೊಟ್ಟಿದ್ದಾರೆ.

ಒಂದು ಲಕ್ಷ ಶ್ಲೋಕ ಗಾತ್ರದ 'ಮಹಾಭಾರತ'ವನ್ನು ಸುಮಾರು ನಾಲ್ಕುನೂರು ಪುಟಗಳಲ್ಲಿ ಸಂಗ್ರಹಿಸಿದ ಶಾಸ್ತ್ರಿಗಳು ಇಪ್ಪತ್ತೆರಡು ಸಾವಿರ ಶ್ಲೋಕಗಳುಳ್ಳ 'ಕಥಾಸರಿತ್ಸಾಗರ'ವನ್ನು ಐದು ನೂರು ಪುಟಗಳಷ್ಟು ಗಾತ್ರದಲ್ಲಿ ಅಳವಡಿಸಿದ್ದಾರೆ.

ಅದರಿಂದ 'ಕಥಾಮೃತ'ವು ಮೂಲಗ್ರಂಥದಲ್ಲಿ ಹೆಚ್ಚು ಭಾಗವನ್ನು ಒಳಗೊಂಡಿರಲು ಸಾಕು. ಇದಕ್ಕೆ ಕಾರಣವೂ ಇಲ್ಲದಿಲ್ಲ. ಮಹಾಭಾರತದ ಕಥೆಯು—ವಿವಿಧ ಉಪಕಥೆಗಳಿದ್ದರೂ—ಒಂದು ಅಖಂಡ ಕಥೆಯಾಗಿದೆ. 'ಕಥಾಸರಿತ್ಸಾಗರ'ವು ವಿವಿಧ ಕಥೆಗಳ ಸಂಗ್ರಹವು. ಇದನ್ನು ಪ್ರಮಾಣ ಮೀರಿ ಸಂಗ್ರಹಿಸಲು ಯತ್ನಿಸಿದರೆ ಆಯಾ ಕಥೆಗಳ ಅಂದವೇ ಕೆಟ್ಟುಹೋಗುತ್ತದೆ. ಅದರಿಂದ ಸ್ವಾರಸ್ಯವನ್ನು ಉಳಿಸಿಕೊಂಡು, ಅಭ್ಯಾಸದ ವಸ್ತುವು, ಯಾವುದೂ ಕೈಬಿಡದಂತೆ ಸಂಗ್ರಹಿಸುವ ಚಾತುರ್ಯವನ್ನು ಇಲ್ಲಿ ಕೃಷ್ಣಶಾಸ್ತ್ರಿಗಳು ತೋರಿಸಿದ್ದಾರೆ. ಇದು ಇನ್ನೊಂದು ತರದ ನಿಕಷವೆಂದರೂ ಅಡ್ಡಿಯಿಲ್ಲ. ಅದನ್ನೂ ಕೂಡ ಯಶಸ್ವಿಯಾಗಿ ನೀಗಿಸಿದ್ದಾರೆ, ಶಾಸ್ತ್ರಿಗಳು. ಇಲ್ಲಿ ಸಂಗ್ರಹಿಸುವ ಕಾರ್ಯಕ್ಕಿಂತ ಕಲೆಯ ಕಳೆಗೆಡದಂತೆ ಎಚ್ಚರ ವಹಿಸುವಿಕೆಯೇ ಲೇಖಕರ ಹೆಚ್ಚಿನ ಗಮನದಲ್ಲಿರಬೇಕಾದ ಸಂಗತಿಯಾಗಿದೆ. 'ಶ್ರೀಪತಿಯ ಕಥೆ'ಗಳಂತಹ ಲಲಿತ ಸಾಹಿತ್ಯ ನಿರ್ಮಾಪಕರಾದ ಕೃಷ್ಣಶಾಸ್ತ್ರಿಗಳು ಇದನ್ನು ಸುಲಭವಾಗಿ ಸಾಧಿಸಿ ತೋರಿಸಿದ್ದಾರೆ. ಕನ್ನಡಕ್ಕೆ ಕೀರ್ತಿ ಕಲಶವನ್ನಿಟ್ಟಿದ್ದಾರೆ.

ಈ ಗ್ರಂಥಗಳಿಗೆ ಶಾಸ್ತ್ರಿಗಳು ಅಭ್ಯಾಸಪೂರ್ಣವಾಗಿ ಬರೆದ ವಿಸ್ತೃತ ಪೀಠಿಕೆಗಳ ವಿಷಯದಲ್ಲಾಗಲಿ, ಇತರ ಸಂಗತಿಗಳ ಬಗ್ಗೆಯಾಗಲಿ ವಿವರವಾಗಿ ಬರೆಯಲು ಇಲ್ಲಿ ಅವಕಾಶವಿಲ್ಲ. ಕನ್ನಡಸಾಹಿತ್ಯದ ಆಕರ ಗ್ರಂಥಗಳೆನಿಸುವ 'ಮಹಾಭಾರತ,' 'ಕಥಾಸರಿತ್ಸಾಗರ'ಗಳನ್ನ ಕನ್ನಡಕ್ಕಿತ್ತ ಶ್ರೇಯಸ್ಸು ಶಾಸ್ತ್ರಿಗಳಿಗೆ ಸಲುತ್ತದೆಂದು ಹೇಳಿ ಮುಗಿಸಬಹುದಾಗಿದೆ.

೪

ಕೃಷ್ಣಶಾಸ್ತ್ರಿಗಳು ಸಂಶೋಧಕರು, ವಿಮರ್ಶಕರು, ಸಂಗ್ರಾಹಕರು, ಸಂಪಾದಕರು ಆಗಿದ್ದಂತೆ ಒಳ್ಳೆಯ–ಶುದ್ಧರುಚಿಯ–ಲಲಿತಸಾಹಿತ್ಯ ಲೇಖಕರೂ ಆಗಿದ್ದರು. ಈ ಮಾತಿಗೆ ಅವರ 'ಶ್ರೀ ಪತಿಯ ಕಥೆಗಳು', ಎಂಬ ಕಥಾ ಸಂಗ್ರಹವೇ ಸಾಕ್ಷಿಯಾಗಿದೆ. ಲಲಿತ ಸಾಹಿತ್ಯ ನಿರ್ಮಾಪಕರಲ್ಲಿ ಸುತ್ತಲಿನ ಜನರ ವಿಷಯದಲ್ಲಿ–ಪಶುಪಕ್ಷಿ, ಗಿಡ–ಮರಗಳ ವಿಷಯಲ್ಲಿ ಸಹ, ಅನುಕಂಪವಿರಬೇಕಾಗುತ್ತದೆ. ಆ ಹೃದಯಾನುಕಂಪನದಿಂದಲೇ ನೇರವಾದ ಸೂಕ್ಷ್ಮನೋಟ, ಸತ್ಯದ ಅರಿವು, ಅನುಭವಗಳೂ ಉಂಟಾಗುತ್ತವೆ. ಅವು ಲಲಿತ ಸಾಹಿತ್ಯ ನಿರ್ಮಿತಿಗೆ ಮನೋಭೂಮಿಕೆಯನ್ನುಂಟುಮಾಡುತ್ತವೆ. ಹೆಸರಿಗೆ (ಅಭ್ಯಾಸದಿಂದ ನಿಜವಾಗಿಯೂ) ಶಾಸ್ತ್ರಿಗಳಾಗಿದ್ದರೂ ಅವರ ಮನೋವೃತ್ತಿಯು ಶಾಸ್ತ್ರಜಡವಾಗಿರಲಿಲ್ಲ. ತುಂಬ ಕರುಣೆ, ದಯೆಗಳಿಂದ ಕೂಡಿದ ಸ್ವಭಾವ ಅವರದು. 'ಅವರವರ ಕರ್ಮ ನಮಗೇನು ಮಾಡಲಿಕ್ಕೆ ಆಗುತ್ತದೆ?' ಎಂದು ಶಾಸ್ತ್ರನುಡಿದು ನಿಷ್ಕ್ರಿಯವಾಗಿ ಬದುಕುವ ಜೀವವಲ್ಲ. ಅವರ ಕ್ರಿಯಾಶೀಲತೆಯೇ ಅವರ ಶ್ರೀಪತಿಯ ಕಥೆಗಳಿಗೆ ಮೂಲ ಪ್ರೇರಕ ಶಕ್ತಿಯಾಗಿದೆ.

ಲಲಿತಕಥೆಯು ರಂಗಕ್ಕೇರಿದರೂ ಕೂಡ ಶಾಸ್ತ್ರಿಗಳು ಶಾಸ್ತ್ರೀಯ ದೃಷ್ಟಿಯಿಂದ ದೂರವಾಗಿಲ್ಲ. ಹೀಗೆ ಹೇಳಿದೊಡನೆಯೇ ಶಾಸ್ತ್ರಿಗಳ ಸಣ್ಣಕಥೆಗಳ ವಿಷಯದಲ್ಲಿ ತಪ್ಪು ತಿಳಿದುಕೊಳ್ಳಬೇಕಾಗಿಲ್ಲ. ಆದರೆ ಲಲಿತಕಲೆಗಳ ಹಿನ್ನೆಲೆಯಲ್ಲಿಯೂ ಕೂಡ ಒಂದು ತಂತ್ರದ–ಸಾಹಿತ್ಯ ಶಾಸ್ತ್ರದ–ಕೈವಾಡವಿರುತ್ತದೆಂಬುದನ್ನು ಅರಿತು ಕೊಳ್ಳಬೇಕು. ಅವರು ಕಥೆ ಬರೆಯುವವರಿಗೆ ಸೂಚಿಸುವ ಮಾತುಗಳಲ್ಲಿ ಕಥನ ಕಲೆಯ ಈ ಸೂತ್ರಗಳನ್ನು ಮಂಡಿಸಿದ್ದಾರೆ: ೧) ಕಥಾವಸ್ತುವಿನಲ್ಲಿ ಆಸ್ಥೆಯಿರಲಿ, ೨) ಅನುಭವಿಸಿದುದನ್ನು ಬರೆ, ೩) ಬರೆಯುವುದನ್ನು ಯೋಚಿಸು, ೪) ಪ್ರತಿಭೆ ಯುಳ್ಳ ಕವಿಪರ್ಯನಾಗು. ಕೃಷ್ಣಶಾಸ್ತ್ರಿಗಳ ಈ ನಾಲ್ಕು ಸೂತ್ರಗಳು ಯಾವ ಕಲಾಕೃತಿಗೂ ಅನ್ವಯಿಸುವಂತಿವೆ. ಎಲ್ಲ ಕಲಾಕೃತಿಗಳಲ್ಲಿ ಕೃತಿಗೆ ಮೂಲಾಧಾರ ವಾದ ವಸ್ತು ಒಂದು ಪಾಲು, ಆ ವಸ್ತುವಿನ ಬಗ್ಗೆ ಇರುವ ಅನುಭವ (ಲೋಕಾನು ಭವ) ಒಂದುಪಾಲು, ವಸ್ತುವಿನ ಚಿಂತನೆಯಿಂದ ರೂಪುಗೊಳ್ಳುವ ತಲೆಯೊಂದು ಪಾಲು, ಪ್ರತಿಭಾಶಕ್ತಿಯು ಇನ್ನೊಂದು ಪಾಲು. ಕಲೆಯ ಈ ನಾಲ್ಕಂಶಗಳಲ್ಲಿ ಕೃಷ್ಣಶಾಸ್ತ್ರಿಗಳ ಕಥನ ಸೃಷ್ಟಿಯು ತನ್ನ ಸಫಲತೆಯನ್ನು ಸಾಧಿಸಿದೆ.

ವಸ್ತುವಿನೊಡನೆ ತನ್ಮಯವಾಗುವ ಸಹೃದಯತೆಯು ಕೃಷ್ಣಶಾಸ್ತ್ರಿಗಳಲ್ಲಿ ತುಂಬಿ ತುಳುಕುತ್ತಿದೆ. ಇಷ್ಟೇ ಅಲ್ಲ, ಅವರು ಶ್ರೀಪತಿಯಾಗಿ ಬಹುತರ ಪ್ರತಿ ಯೊಂದು ಕತೆಯಲ್ಲಿಯೂ ಒಂದು ಪಾತ್ರವಾಗಿ ನಮ್ಮ ಮುಂದೆ ನಿಲ್ಲುತ್ತಾರೆ. ಈ ನಿಲುವೆಯನ್ನು ನೆನೆದರೆ ಶಾಸ್ತ್ರಿಗಳ ಸಾಹಿತ್ಯ ವಸ್ತುವಿಗೂ ಅವರಿಗೂ ಇರುವ ನಿಕಟಸಂಬಂಧದ ಕಲ್ಪನೆಯು ಉಂಟಾಗುತ್ತದೆ. ಕೆಲವೊಂದು ಕಥೆಗಳಲ್ಲಿ ಅವರು ಮುಖ್ಯಪಾತ್ರದ ಸ್ನೇಹಿತನೆಂತಲೋ ಅಣ್ಣನೆಂತಲೋ ಜೊತೆಯ ಪ್ರಾಮಾಣಿಕ ನೆಂತಲೋ ಪ್ರವೇಶಿಸುತ್ತಾರೆ. ಇನ್ನು ಕೆಲವೆಡೆಗಳಲ್ಲಿ ಕತೆಗಾರನ ಸ್ನೇಹಿತನಾಗಿ, ಕತೆ ಕೇಳುವುದಕ್ಕೆ ಕುಳಿತು, ಆಗಾಗ ಸಹೃದಯತೆಯ ಉಸಿರನ್ನು ಸೂಸಿ, ರಸಪುಷ್ಟಿಯನ್ನುಂಟುಮಾಡುತ್ತಾರೆ. ಹೀಗೆ ಒಂದಿಲ್ಲೊಂದು ರೀತಿಯಲ್ಲಿ ಕೃಷ್ಣ ಶಾಸ್ತ್ರಿಗಳಲ್ಲಿ ಕಥಾವಸ್ತುವು ಅವರ ಸುತ್ತಲೇ ಹೆಣೆದುಕೊಂಡಿರುತ್ತದೆ. ಹೀಗೆಂದಾಗ, ಶಾಸ್ತ್ರಿಗಳ ಲಲಿತಸಾಹಿತ್ಯವೆಲ್ಲ ಅವರ ಜೀವನವನ್ನೇ ಚಿತ್ರಿಸುತ್ತದೆ ಎನ್ನುವ ಅರ್ಥವಲ್ಲ. ಆದರೆ ಅವರು ಪರರ ಕಷ್ಟಸುಖಗಳನ್ನು ತಮ್ಮ ಜೀವನದಲ್ಲಿ ಒದಗಿದ ಕಷ್ಟಸುಖಗಳಂತೆ ಅನುಭವಿಸಿ, ಸಾಹಿತ್ಯವನ್ನು ನಿರ್ಮಿಸಿದ್ದಾರೆಂಬುದನ್ನು ಅರಿತು ಕೊಳ್ಳಬೇಕು. ಅವರ 'ನಾಗಪಂಚಮಿ' ಕಥೆಯಲ್ಲಿ 'ನನ್ನ ತಂಗಿಯು ಅದೃಷ್ಟ ವಂತೆಯಲ್ಲ........' ಎಂದು ಕಥೆಯನ್ನು ಹೇಳಲು ಆರಂಭಿಸಿದ್ದಲ್ಲಿ ಭ್ರಾತೃಭಾವನೆ ಯನ್ನು ತಮ್ಮ ಸುತ್ತಲಿನ ಪ್ರಪಂಚದಲ್ಲಿ ಅವರು ಹೇಗೆ ಬೆಳೆಯಿಸಿಕೊಂಡು ಬಂದಿದ್ದಾರೆಂಬುದನ್ನು ನಾವು ಗುರುತಿಸುತ್ತೇವೆ. ವಿಧವೆಯ ಹೃದಯದ ನೋವು ನಲ್ಮೆಗಳನ್ನು ಅವರು ಅಷ್ಟೇ ಅನುಭವಿಸಿ ಚಿತ್ರಿಸಿದ ಬಗೆಯನ್ನೂ ಕಂಡು ಮುಗ್ಧ ರಾಗುತ್ತೇವೆ.

ಹೀಗೆ ಅನುಭವಿಸದೆ, ಎಲ್ಲೆಲ್ಲಿಯೋ ಕಲ್ಪನೆಯ ಕುದುರೆಯನ್ನೇರಿ ಗಾಳಿಗೋಪುರವನ್ನು ಸುತ್ತಿ ಬರುವ ಸಾಹಿತಿಗಳಲ್ಲ ಕೃಷ್ಣಶಾಸ್ತ್ರಿಗಳು. 'ಜ್ಯೋತಿಷಕ್ಕೆ ಬಹುಮಾನ'ವನ್ನೇ ಕೊಡಿಸಲಿ, 'ಗುರುಗಳ ಮಹಿಮೆ'ಯನ್ನೇ ಚಿತ್ರಿಸಲಿ, 'ಶಾನುಭೋಗನ ಪುಣ್ಯ'ದ ಕಥೆಯನ್ನೇ ಹೇಳಲಿ, 'ದೇವರು ಇದ್ದಾನೆ' ಎನ್ನಲಿ, 'ಬಂಗ್ಲೆಯ ವಾಸ'ದಲ್ಲಿ ಭೂತವನ್ನೇ ಕಾಣಲಿ, ಅದೆಲ್ಲ ಜೀವನದ ಅನುಭವ ಮುಕುರದಲ್ಲಿಯೇ ಮೂಡಿನಿಲ್ಲುವುದು. ಅವರ ಕತೆಗಳಲ್ಲಿ ಅದ್ಭುತಸಂಗತಿಯಾಗಲಿ, ಕಣ್ಣುಮುಚ್ಚಾಲೆಯ ಆಟವಾಗಲಿ ಇಲ್ಲ. ಕತೆಯು ಕತೆಯಾಗಿಯೇ—ಜೀವನದ ಕತೆಯಾಗಿಯೇ—ರೂಪತಾಳಿ ನಿಲ್ಲುವುದು. ಒಂದಿಲ್ಲೊಂದು ರೀತಿಯಲ್ಲಿ ಮನೋಜ್ಞವಾಗಿ ಕಂಗೊಳಿಸುವುದು.

ಕೃಷ್ಣಶಾಸ್ತ್ರಿಗಳು ಸಾಮಾನ್ಯಜೀವನವನ್ನೇ ತಮ್ಮ ಊಹಾಶಕ್ತಿಯಿಂದಲೂ ಪ್ರತಿಭೆಯಿಂದಲೂ, ಕಥಾವಸ್ತುವನ್ನಾಗಿ ಮಾರ್ಪಡಿಸಿಕೊಂಡು ಕಲೆಯ ಕುಂಚದಿಂದ ತಾಳ್ಮೆಯಿಂದ, ಸುಂದರಕತೆಗಳನ್ನು ಕಟ್ಟಿ ಹೇಳಿದ್ದಾರೆ. ಅದರಲ್ಲಿ ಮಾನವ ಹಿತದ ಸಂದೇಶವನ್ನೂ ದೈವನಿಷ್ಠೆಯನ್ನೂ ಬಿತ್ತರಿಸಿದ್ದಾರೆ. ಈ ಜೀವನ ನಿಷ್ಠೆ, ದೈವಿಕಶಕ್ತಿಯ ಕಡೆಗಿನ ಒಲವು, ಅವರ ಜೀವನಕ್ಕೊಂದು ಹದವನ್ನುಂಟು ಮಾಡಿವೆ. ಆ ಹದವು ಅವರೆಲ್ಲ ಸಾಹಿತ್ಯದಲ್ಲಿಳಿದಿದೆ, ಅದನ್ನು ಉನ್ನತಗೊಳಿಸಿದೆ.

೫

ಕೃಷ್ಣಶಾಸ್ತ್ರಿಗಳು ಕನ್ನಡಕ್ಕಿತ್ತ ಕೃತಿಗಳು ಇನ್ನೂ ಹಲವಾರು ಇವೆ. ಅವರ 'ಭಾಷಣಗಳು ಮತ್ತು ಲೇಖನಗಳು' ಎಂಬ ಸಂಗ್ರಹವು—ಕನ್ನಡ ವಿಚಾರ ಸಾಹಿತ್ಯದ ಒಂದು ಉತ್ತಮಗ್ರಂಥವಾಗಿದೆ. 'ಭಾಸಕವಿ', 'ಸರ್ವಜ್ಞಕವಿ' ಗಳನ್ನು ಕುರಿತ ಬರವಣಿಗೆಗಳು ಅವರ ಶ್ರೇಷ್ಠ ವಿಮರ್ಶೆಗಳಿಗೆ ನಿದರ್ಶನಗಳಾಗಿವೆ. 'ಹರಿಶ್ಚಂದ್ರಕಾವ್ಯ ಸಂಗ್ರಹ'ವಾಗಲಿ, 'ಕವಿಜಿಹ್ವಾಬಂಧನ'ವಾಗಲಿ ಅವರ ಗ್ರಂಥಸಂಪಾದನಕಲೆಗೆ ಎತ್ತಿದ ಕೈಯೆನಿಸಿವೆ. ಕನ್ನಡ ಕೈಪಿಡಿಯ ಅಲಂಕಾರ ಭಾಗವನ್ನು ಮೆಚ್ಚದವರಿಲ್ಲ. 'ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆ' ಎಂಬುದು ಅವರು ರಚಿಸಿದ ಚರಿತ್ರ ಗ್ರಂಥವಾಗಿದೆ. 'ನಿರ್ಮಲ ಭಾರತೀ' ಎಂಬ ಹೆಸರಿನಿಂದ ಮಕ್ಕಳ ಮಹಾಭಾರತವನ್ನೂ ಸಹ ಅವರು ಬರೆದಿದ್ದಾರೆ. 'ಸ್ವಾಮಿ ಶಿಷ್ಯಸಂವಾದ' 'ನಾಗಮಹಾಶಯ'ಗಳೆಂಬ ಗ್ರಂಥಗಳನ್ನು ಇಲ್ಲಿ ಹೆಸರಿಸಬಹುದಾಗಿದೆ. ಹೀಗೆ ಕೃಷ್ಣಶಾಸ್ತ್ರಿಗಳ ಗ್ರಂಥಗಳ ಹೆಸರುಗಳನ್ನು ಎತ್ತಿ ಹೇಳಿದ ಮಾತ್ರಕ್ಕೆ ಅವರ ಸಾಹಿತ್ಯದ ಮಹತಿಯನ್ನು ಬಿತ್ತರಿಸಿದಂತೆ ಆಗಲಿಲ್ಲ. ಆದರೆ ಅವರ ಲೇಖನ ವಿಷಯಗಳ ವ್ಯಾಪ್ತಿ, ವೈವಿಧ್ಯಗಳ ಕಲ್ಪನೆಯು ಮಾತ್ರ ಸ್ಥೂಲವಾಗಿ ಆದೀತು.

ಇವೆಲ್ಲ ಗ್ರಂಥರಚನೆಗಿಂತಲೂ ಮಿಗಿಲಾದ ಸೇವೆಯೊಂದು ಕೃಷ್ಣಶಾಸ್ತ್ರಿಗಳಿಂದ

ಸಂದಿವೆ. ಅದು 'ಪ್ರಬುದ್ಧಕರ್ಣಾಟಕ'ದ ಸ್ಥಾಪನೆ. ಆ ಪತ್ರಿಕೆಯ ಮೂಲಕ ಕನ್ನಡದ ನವೋದಯದ ಕಾರಣಪುರುಷರಾದರು, ಶಾಸ್ತ್ರಿಗಳು. ಇಂಥ ಪ್ರೌಢ ಪತ್ರಿಕೆಯ ಮುಖಾಂತರ ಹಾಗೂ ತಮ್ಮ ಗ್ರಂಥಗಳ ಮೂಲಕ ಆಧುನಿಕ ಕನ್ನಡ ಗದ್ಯಶೈಲಿಯೊಂದನ್ನು ರೂಪಿಸಿದ ಶ್ರೇಯಸ್ಸು ಕೃಷ್ಣಶಾಸ್ತ್ರಿಗಳಿಗೆ ಸಲ್ಲುತ್ತದೆ. ಅವರ ಕನ್ನಡ ಗದ್ಯಶೈಲಿಯನ್ನೂ ಕುರಿತೇ ಒಂದು ಪ್ರಬಂಧವನ್ನು ಬರೆಯಬಹು ದಾಗಿದೆ. ಒಂದೇ ಎರಡೇ ಅವರ ಗ್ರಂಥನಿರ್ಮಾಣ ಕಲೆಯ ಎದುರಿಗೆ ನಿಂತಾಗ ಎಲ್ಲೋರದ ಕೈಲಾಸದೇವಾಲಯದಲ್ಲಿ ನಿಂತ ಬಗೆಯೇ ಮನವನ್ನು ಮುತ್ತಿ ನಿಲ್ಲುತ್ತವೆ. ಅಂತಃಕರಣವನ್ನು ಯಾವುದೋ ಲೋಕಕ್ಕೆ ಒಯ್ದು ಬಿಡುತ್ತದೆ. ಅಂಥ ಚೇತನ, ಅಂಥ ಸತ್ವ ಕನ್ನಡದ ಕಣಕಣಗಳಲ್ಲಿಯೂ ಮೂಡಿ ಬರಲಿ! ಕೃಷ್ಣಶಾಸ್ತ್ರಿಗಳ ಕೊಡುಗೆ ಸಲ್ಲಲಿ!! ಅವರ ದಿವ್ಯಾತ್ಮಕ್ಕೆ ಶಾಂತಿ ತುಷ್ಟಿ ಗಳೊದಗಲಿ'!!

ಬಿ. ಎಚ್. ಶ್ರೀಧರ

# ಕಥಾಮೃತ

ರಾಮಾಯಣ, ಮಹಾಭಾರತ ಮತ್ತು ಬೃಹತ್ಕಥೆಗಳು ಭಾರತೀಯ ಸಾಹಿತ್ಯದ ಸ್ವರ್ಗ, ಮರ್ತ್ಯ, ಪಾತಾಳಗಳು; ಬ್ರಹ್ಮ, ವಿಷ್ಣು, ಮಹೇಶ್ವರರಂಥವು. ಈ ಸುಮೇರು, ಮೇರು, ಮಂದರ ಕೃತಿಗಳ ಕರ್ತರಿದ್ದದ್ದು ಭಾರತದ ವೀರಯುಗದಲ್ಲಿ (Heroic Age); ಕ್ರಿಸ್ತಪೂರ್ವ ೪ನೆಯ ಶತಮಾನದಿಂದ ಕ್ರಿಸ್ತಶಕ ೨ನೆಯ ಶತಮಾನದವರೆಗಿನ ಜೀವನವು ಅಭಿಜಾತ ಶೃಂಗಾರ, ವೀರ, ಸಾಹಸ, ಕ್ರೋಧ, ಕರುಣಗಳ ಮಹಾನದಿಗಳಿಂದಾದ ಹೆಗ್ಗಡಲು. ಆ ವಾರ್ಧಿಯ ರಂಗತ್ತರಂಗಗಳು ಇಂದಿಗೂ ನಮ್ಮ ಜ್ಞಾತಾಜ್ಞಾತಾ (The Conscious and the Unconscious) ಪ್ರಜ್ಞಾಸ್ತರಗಳಲ್ಲಿ ಮಾರ್ದನಿಗೊಡುತ್ತಿವೆ. ಆ ಸಮುದ್ರದ ಮಥನದಿಂದ ಉತ್ತಮ ಮೂರು ಅಮೃತ ಕೃತಿಗಳು ಹುಟ್ಟಿದವು; ಅವುಗಳಲ್ಲಿ ೨ ಸಂಸ್ಕೃತ, ೧ ಪ್ರಾಕೃತ

"ಪಾಶ್ಚಾತ್ಯ ಸಾಹಿತ್ಯವನ್ನು ಓದುವವರಿಗೆ ಅದರಲ್ಲಿ ಪಕ್ಷಪಾತ ಉಂಟಾಗುವುದು ಆಶ್ಚರ್ಯವಲ್ಲ" ಎಂಬ ಮಾತನ್ನು ಮೇಲೆ ಹೇಳಿದ ಮೂರು ಕೃತಿಗಳನ್ನು ಓದಿ ಅರಗಿಸಿಕೊಂಡವರಾರೂ ಹೇಳಲಾರರು.[1] ಏಕೆಂದರೆ ಷೇಕ್ಸ್‌ಪಿಯರನ "ಟ್ರಾಜೆಡಿ"ಗಳೆಲ್ಲವುಗಳಲ್ಲಿ ಕಂಡುಬರುವ "ಮಾನುಷ್ಯದ ಸಾಹಸದ ಚಿತ್ರ"ಗಳಿಗೆ ಸದೃಶವಾದವುಗಳಲ್ಲದೆ, ಮೀರಿಸಿದವುಗಳೂ ಮೇಲಿನ ಬ್ರಹ್ಮಕಾವ್ಯಗಳಲ್ಲಿವೆ. ಮಾನವನು ತನಗಿಂತ ಪ್ರಬಲವಾದ ಶಕ್ತಿಗೆ ಮುರಿದುಬೀಳುವ ಸಂಗತಿಗೆ ಅನೇಕ ಸಾಂಪ್ರದಾಯಿಕ ಭಾರತೀಯರು ಭಕ್ತಿಯನ್ನೂ ಪ್ರೀತಿಯನ್ನೂ ತೋರರು ಮತ್ತು ಹಾಗೆ ತೋರದಿರಲಾರದಿರುವಿಕೆಯೊಂದು ನ್ಯೂನತೆ — ಎಂಬ ವಾದವನ್ನು ಕನ್ನಡ **ನಾಡೋಜ ಕೃಷ್ಣಶಾಸ್ತ್ರಿ**ಗಳೆಲ್ಲಿಯೂ ಎತ್ತಿ ಹಿಡಿದಿಲ್ಲ. "ಒಟ್ಟಿನ ಮೇಲೆ ಪ್ರಾಚ್ಯ ಲಾಕ್ಷಣಿಕ ದೃಷ್ಟಿಯಿಂದ ನೋಡಲಿ, ಪಾಶ್ಚಾತ್ಯ ಲಾಕ್ಷಣಿಕ ದೃಷ್ಟಿಯಿಂದ ನೋಡಲಿ, ರಸೈಕ ದೃಷ್ಟಿಗಳಿಗೆ ಈ (ಭಾಸನ) ನಾಟಕಗಳು ಬಹು ಶ್ಲಾಘ್ಯವಾಗಿವೆ

---

[1] "ಸಾಹಿತ್ಯ: ಸಂಪ್ರದಾಯ ಮತ್ತು ಹೊಸಮಾರ್ಗ"—ಪುಟ ೧೪೨

ಎನಿಸುವುದರಲ್ಲಿ ಸಂದೇಹವಿಲ್ಲ[2]"; ಆದುದರಿಂದ ಸಾಹಿತ್ಯದ ದೇಶಕಾಲಾತೀತ ದೃಷ್ಟಿ ಎಂದರೆ ರಸಸೃಷ್ಟಿಯೊಂದೇ ಎಂಬುದು ಶಾಸ್ತ್ರಿಗಳಂತಹ ವಿಶಿಷ್ಟ ಸಾಹಿತ್ಯ ದೃಷ್ಟಿ ಸಂಪನ್ನರಾದ ಭಾರತೀಯರ ಮತ. ಪುರಾಣ ಕಥೆಗಳ ಅಳತೆಯಿಂದ ಭಾರತೀಯ ಸಾಹಿತ್ಯಕೃತಿಗಳೆಲ್ಲವನ್ನೂ ಆಳೆದು ತೂಗಿ ಬೀಸಾಡುವ "ದುಂಡಾಪರ್ತಿ" ಅವರಿಗೆ ಹಿಡಿಸದು[3] Tragedy, Tragical, Pathos ಎಂಬುದರಲ್ಲಷ್ಟೇ ಅಲ್ಲ, "ಕಾಲಾಯಾಸದ ಕಂಠಿಕೆ—ಕಾಂಚನ ಮಾಲೆ"ಗಳಲ್ಲಿಯೂ ವ್ಯತ್ಯಾಸವಿದೆ. ಟ್ರಾಜಿಡಿಗಳಿಗಿಂತ ಉಳಿದ ಸಾಹಿತ್ಯರೂಪಗಳೆಲ್ಲವೂ ಕೀಳು, ಕಡಿಮೆ ರಸಾವಹ—ಎಂಬುದು ಶಾಸ್ತ್ರೀಯ ಅಭಿಪ್ರಾಯವೆನ್ನಿಸದೆಂದು ತೋರುತ್ತದೆ. ಸಾರ್ವಕಾಲಿಕ, ಸರ್ವಸಾಧಾರಣ ಎಂಬ ಬೆಲೆಗಳು ನಿರ್ಣಯಿಸಲ್ಪಡಲು ರತ್ನದ ಅಸಲುತನ ಮತ್ತು ಮೆಚ್ಚುವವನ ಸುಪರೀಕ್ಷಕತ್ವಗಳು ಸಿದ್ಧವಾಗಬೇಕು—ಎಂದು ಪ್ರೊ. ವಿ.ಸೀ. ಅವರೆಂದಿರುವುದು ಸಾರ್ವಕಾಲಿಕ ಸೂತ್ರ. ಆದರೆ ಅದನ್ನು ಅನ್ವಯಿಸಿ ಅಂಥ ಬೆಲೆಗಳನ್ನು ನಿರ್ಣಯಿಸುವುದರಲ್ಲಿ ಇಂಗ್ಲಿಷು, ಕನ್ನಡ, ಸಂಸ್ಕೃತ, ಬಂಗಾಲಿ ಸಾಹಿತ್ಯಗಳಲ್ಲಿ ಆಳವಾದ ಪಾಂಡಿತ್ಯವನ್ನುಳ್ಳ ರಸಜ್ಞರಾದ ಶಾಸ್ತ್ರಿಗಳಂಥವರಷ್ಟೇ ಜಯಶೀಲರಾಗಿದ್ದಾರೆ, ಆಗಬಲ್ಲರು—ಎನ್ನಬಹುದು.

"ಬೃಹತ್ಕಥೆ" ಈಗ ಇಲ್ಲ; ಆದರೆ ಅದರ ಸ್ವರೂಪವನ್ನು ಅದರ ಆಧಾರದ ಮೇಲೆ ಹುಟ್ಟಿದ "ಕಥಾಸರಿತ್ಸಾಗರ"ದಿಂದ ತಿಳಿಯಬಹುದು. ಇದರಲ್ಲಿ ಉಪಕಥೆಗಳನ್ನು ಬಿಟ್ಟರೆ ಉಳಿಯುವುದು ಉದಯನನ ಮತ್ತು ಅವನ ಮಗ ನರವಾಹನದತ್ತನ ಚರಿತ್ರೆ. ಈ ಉದಯನನ ಕಥೆ ಹಿಂದೆ "ರಾಮಾಯಣ", "ಭಾರತ", ಭಾಗವತಗಳಂತೆಯೇ ಪ್ರಸಿದ್ಧವೂ ರಂಜಕವೂ ಆಗಿದ್ದಂತೆ ತೋರುತ್ತದೆ. ಆದ್ದರಿಂದಲೇ ಇದು "ವಿನಯಘಟಕ" ಮುಂತಾದ ಬೌದ್ಧ ಗ್ರಂಥಗಳು, ಹೇಮಚಂದ್ರನ "ತ್ರಿಷಷ್ಟಿಶಲಾಕ ಪುರುಷಚರಿತ" ಮುತಾದ ಜೈನ ಗ್ರಂಥಗಳು, ಕ್ಷೇಮೇಂದ್ರನ "ಬೃಹತ್ಕಥಾ ಮಂಜರಿ" ಮುಂತಾದ ಬ್ರಾಹ್ಮಣ ಗ್ರಂಥಗಳು ಇವುಗಳಲ್ಲೆಲ್ಲಾ ದೊರೆಯುತ್ತದೆ. ಭಾಸನು ದಕ್ಷಿಣ ದೇಶದವನಾಗಿದ್ದಿರಬಹುದಾದ್ದರಿಂದ ಅವನು ತಮಿಳಿನ "ಪೆರುಂಗತೈ"ಯನ್ನು ನೋಡಿದ್ದಿರಬಹುದು—ಎಂದಿದ್ದಾರೆ ಡಾಕ್ಟರ್ ಕೃಷ್ಣಶಾಸ್ತ್ರಿಗಳು.

"ಆ ವೀರಶೃಂಗಾರ ಸಸ್ಮಿತ ವಿಸ್ಮಿತ" ಎಂದಿದಾರ್ರೆ ಶ್ರೀ ದ. ರಾ. ಬೇಂದ್ರೆಯವರು. ಇದು **ಯುವಕ** ಮನಃಸ್ಥಿತಿಗೆ ಸರ್ವತ್ರ ರಂಜಕ, ಸರ್ವ ಐತಿಹಾಸಿಕ

---

[2] "ಸಂಸ್ಕೃತ ನಾಟಕ"—ಪು. ೯೪

[3] "Valmiki wrote what really was the very first tragedy in the world"—"A hand book of Classical Sanskrit Literature" by Professor U. Venkatakrishna Rao—page 38.

ಕಾಲದಲ್ಲೂ ರಂಜಕ; ಆದರೆ ಅದರ ಅಭಿವ್ಯಂಜನದ ಕಲಾಮಾಧ್ಯಮದ ಪ್ರಕಾರ ಅಥವಾ ಸ್ವರೂಪ (Pattern) ಪ್ರತ್ಯೇಕವಾದೀತು. ಮ್ಯಾಕ್ಸ್‌ಮುಲ್ಲರ್ ಮಹಾಶಯನು ಪ್ರಾಚೀನ ಭಾರತವು ತತ್ವಜ್ಞಾನಿಗಳ ನಾಡಾಗಿತ್ತು ಎಂದು ಹೇಳಿದನು. ಹಾಗೇ ಅಥವಾ ಅದಕ್ಕೂ ಹೆಚ್ಚಾಗಿ ಕತೆಗಾರರ ನಾಡು[1] ಎಂದರೆ ಒಪ್ಪುತ್ತದೆ. ಕತೆಗಳ ಚರಿತ್ರೆ ಋಗ್ವೇದದ ಕಾಲದಿಂದ ಆರಂಭವಾಗುತ್ತದೆ ಮತ್ತು ಅವು ಇಂದಿನ ಸಣ್ಣ, ನವ್ಯ ಮುಂತಾದ ಕಥಾಸ್ವರೂಪಗಳವರೆಗೆ ವಿಕಾಸಹೊಂದುತ್ತ ಬಂದಿವೆ. ಆದರೆ ಅವು ಯಾವ ಸ್ವರೂಪದಲ್ಲೇ ಇರಲಿ. ನಿತ್ಯರಸ್ಯಮಾನತೆ ಅವುಗಳಲ್ಲಿ ಇರುವುದು ವಸ್ತು-ಪಾತ್ರ-ರಸಗಳ ವಿವೇಕವನ್ನು ಆಧರಿಸಿ ರಚಿತವಾದ ಸಂವಿಧಾನ ಪ್ರಕಾರವನ್ನು ಹೊಂದಿದ್ದರೆ ಮಾತ್ರ. ಕೇವಲ ಶಬ್ದ-ಅರ್ಥ-ಸನ್ನಿವೇಶ ರಚನಾತಂತ್ರಗಳಷ್ಟರಿಂದ ನಿತ್ಯಾಸ್ವಾದ್ಯತೆ ಅವುಗಳಿಗೆ ಬರಲಾರದು; ಕೇವಲ ಬುದ್ಧಿರಂಜಕ ಚಮತ್ಕಾರಗಳಿಂದ ಕಾವ್ಯತ್ವ ಯಾವುದಕ್ಕಾದರೂ ಬಂದೀತೇ? ಹೃದಯ ಪ್ರೀತಿಜನಕತೆ ಅಥವಾ Aesthetic appeal ರಸೋದ್ಬೋಧಕತೆ ಕಾವ್ಯತ್ವದ (ಸಾಹಿತ್ಯಕೃತಿ ಧರ್ಮದ) ನಿಕಷವಾಗಿರುವಾಗ ಕಥಾರೂಪ ಅದನ್ನು ಬಿಟ್ಟು ಹೇಗೆ ಸಫಲವಾದೀತು? ಈ ಸಾಫಲ್ಯಸೂತ್ರವನ್ನು ಮನ್ನಿಸಿಯೇ ಪ್ರಾಚೀನ ಮಹಾಕೃತಿಗಳ ವರ್ತಮಾನಕಾಲೀನ ಆಸ್ವಾದ್ಯತೆ ಅರ್ಥಪೂರ್ಣವಾಗಿದೆ. ನಿಜ ವಿಮರ್ಶಕನು ತನ್ನ ಆವರಣದ ಒಂದು ಮಹಾ ಸಾಂಸ್ಕೃತಿಕ ಗುಂಪಿನ ವಕೀಲನಾದಲ್ಲದೆ, ಆ ಗುಂಪಿನೊಳಗಿನ ಮಾನ್ಯ-ಸಾಮಾನ್ಯ, ರಾಜ-ರಂಗ, ಆಂಗ್ಲಜ್ಞ-ಅನಾಂಗ್ಲಜ್ಞ, ಧನಿಕ-ನಿರ್ಧನ, ಗ್ರಾಮೀಣ-ಪಟ್ಟಣಿಗ ಮುಂತಾದ ಒಳಭೇದಗಳಲ್ಲಿ ಯಾವುದಾದರೂ ಒಂದರ ಪ್ರತಿನಿಧಿಯಾಗಿ ನಿಂತು, ಆ ಒಂದೇ ಒಂದು ದೃಷ್ಟಿಕೋನವನ್ನಿಟ್ಟುಕೊಂಡು ಸರ್ವ ಪ್ರಕಾರಗಳ ಮತ್ತು ಸರ್ವಕಾಲ—ದೇಶಾವಧಿಗಳ ಸಾಹಿತ್ಯ ಕೃತಿಗಳ ತಾರತಮ್ಯ ಮೌಲ್ಯವನ್ನು ನಿರ್ಧರಿಸಲು ಮುಂದಾಗಲಾರನು. ಈ ನಿಜವಿಮರ್ಶಕತ್ವವನ್ನು ಕಥಾಮೃತಕಾರರಾದ ಡಾಕ್ಟರ್ ಕೃಷ್ಣಶಾಸ್ತ್ರಿಗಳಲ್ಲಿ ನಾವು ಕಾಣಬಹುದಾಗಿದೆ.

ಪ್ರೊಫೆಸರ್ ಯು. ವೆಂಕಟಕೃಷ್ಣರಾಯರ ಪ್ರಕಾರ ಗುಣಾಢ್ಯ ಬರೆದ "ಬೃಹತ್ಕಥೆ"ಯ ಕಾಲ ಸುಮಾರು ಕ್ರಿ. ಪೂ. ೩ನೆಯ ಶತಮಾನ. ಗುಣಾಢ್ಯನ ಕೃತಿಯ ಗುಣವತ್ತೆಯನ್ನು ಪೆರುಂಗತೈಕಾರ, ಕ್ಷೇಮೇಂದ್ರ, ಸೋಮದೇವ ಮತ್ತು ಬುಧಸ್ವಾಮಿಗಳಲ್ಲದೆ ಭಾರತೀಯ ನಾಟಕಕಾರರ ಆದ್ಯ ಆಚಾರ್ಯನಾದ ಭಾಸ (೧೮೦ ಕ್ರಿ. ಪೂ.) ಈ ಹಿಂದೆ ಮೆಚ್ಚಿಕೊಂಡವರಲ್ಲಿ ಅಗ್ರಗಣ್ಯರೆನ್ನಬಹುದು.

---

[1] "Historically, the short narrative in verse or prose, is one of the oldest and most videspread of literary forms"

M. H. ABRAMS

ಇಂದಿನ ಶತಮಾನದಲ್ಲಿ ಆ ಸಾಲಿಗೆ ಸೇರಬಲ್ಲ ಕನ್ನಡ ಆಚಾರ್ಯರೆಂದರೆ ಶಾಸ್ತ್ರಿಗಳೇ ಸರಿ.

(೧) ಅತಿಯಾಗಿ ವಿಸ್ತರಿಸದೆ ಸರಳವಾಗಿ ಘಟನೆಯೊಂದನ್ನು ಹೇಳುವುದು, (೨) ಪಾತ್ರಗಳನ್ನೂ ಅವುಗಳ ಅಭಿಪ್ರಾಯಗಳನ್ನೂ ಕಾರ್ಯಗಳನ್ನೂ ಪರಸ್ಪರ ಕ್ರಿಯೆ-ಪ್ರತಿಕ್ರಿಯೆಗಳನ್ನೂ, ಸಂವಿಧಾನಿಸುವುದು, (೩) ಅಂಥ ಸಂವಿಧಾನಕ್ಕೆ ಆದಿ, ಮಧ್ಯ, ಅಂತಗಳಿರುವುದು, (೪) ಉಪಾಂತದಲ್ಲಿ ಪ್ರತಿಪಾದಿತ ವಿಷಯದ ಗೌಪ್ಯ ಬಯಲಾಗುವುದು ಮತ್ತು ಅಂತದಲ್ಲಿ ಒಂದು ರಸಸ್ಥಾನಕ್ಕೆ ಮುಟ್ಟುವುದು, (೫) ನಡುವೆ ಓದುಗರಲ್ಲಿ ನಿರೀಕ್ಷೆ, ನಿರೀಕ್ಷಾ ಪ್ರತಿಬಂಧ, ಆಶ್ಚರ್ಯ ಮುಂತಾದ ಭಾವನೆಗಳನ್ನು ಎಬ್ಬಿಸುವುದು–ಸಾಮಾನ್ಯವಾದ ಕಥಾಲಕ್ಷಣ. ಕಥಾ ವಿಷಯದ ಸಂವಿಧಾನವು ನವರಸಗಳಲ್ಲಿ ಯಾವುದಾದರೂ ಒಂದನ್ನು ಅಂತ್ಯದಲ್ಲಿ ಉದ್ಬೋಧಿಸುವಂತಿರಬಹುದು. ಅದು ಕಲ್ಪನಾ ಪ್ರೌಢಿಯಿಂದ ಕೂಡಿದ ಶೃಂಗಾರ ಸಾಹಸದ ರಂಜಕವಸ್ತುವನ್ನು, ನಡೆದ ಘಟನೆಯನ್ನು (ಅಥವಾ ಘಟನಾವಳಿಯನ್ನು) ಇಲ್ಲವೆ ಸ್ವಾಭಾವಿಕವೆನ್ನಿಸುವ ಸಂಗತಿಯನ್ನು ಮಂಡಿಸಬಹುದು. ಅದರಲ್ಲಿ ಸಂಗತಿಗಳ ಕ್ರಮಣ, ಪಾತ್ರಸ್ವರೂಪದ ಪ್ರದರ್ಶನ, ಪಾತ್ರಗಳು ಮಾಡುವ ಕಾರ್ಯ–ಇವುಗಳಲ್ಲಿ ಯಾವುದಾದರೂ ಒಂದು ಹೆಚ್ಚು ಸ್ವಾರಸ್ಯವನ್ನು ಉಂಟು ಮಾಡುವಂತಿರಬಹುದು ಅಥವಾ ಎಲ್ಲವೂ ಸಮಪ್ರಾಧಾನ್ಯದಿಂದ ಸಂಯುಕ್ತವಾಗಿ ಓದುಗನ ಮನಸ್ಸನ್ನು ಆಕರ್ಷಿಸುವಂತಿರಬಹುದು.

ಮೂಲ ಬೃಹತ್ಕಥೆ ಗದ್ಯ-ಪದ್ಯ ರೂಪದಲ್ಲಿ ಇದ್ದಿತೆಂಬುದು ಡಾಕ್ಟರ್ ಕೀತರ ಊಹೆ. ಸೋಮದೇವನ "ಕಥಾಸರಿತ್‌ಸಾಗರ" ಮೂಲ ಬೃಹತ್ಕಥೆಗೆ ಹೆಚ್ಚು ಸಮೀಪವರ್ತಿಯಾಗಿದೆ ಎಂದು ನಂಬಲಾಗಿದೆ. ಲಂಭಕಗಳೆಂಬ ೧೮ ಅಧ್ಯಾಯಗಳಲ್ಲಿ ಅದು ವಿಭಕ್ತವಾಗಿದೆ. (೧) ಗುಣಾಢ್ಯನ ಚರಿತ್ರೆ, (೨) ಉದಯನನ ಪೂರ್ವಚರಿತ್ರೆ, (೩) ಉದಯನನು ಪದ್ಮಾವತಿಯನ್ನು ಪಡೆಯುವುದು, (೪) ಕಥಾನಾಯಕ ನರವಾಹನದತ್ತನ ಜನನ, (೫) ಶಕ್ತಿವೇಗನೆಂಬ ವಿದ್ಯಾಧರನ ವೃತ್ತಾಂತ, (೬) ನರವಾಹನದತ್ತನ ಸ್ವಸಾಹಸ ಕಥನ, (೭) ವಿದ್ಯಾಧರರಾಜನ ಮಗಳೊಡನೆ ನರವಾಹನದತ್ತನ ಮದುವೆ ಮತ್ತು ಕರ್ಪೂರಿಕೆಯೊಡನೆ ವಿವಿಧ ಅದ್ಭುತ ಅನುಭವಗಳಿಗೆ ಕಾರಣವಾದ ವಿಹಾರ, (೮) ಸೂರ್ಯಪ್ರಭ ಶಾಕಲನೆಂಬ ವಿದ್ಯಾಧರನು ತನ್ನ ಪ್ರತಿದ್ವಂದ್ವಿಯಾದ ಶ್ರುತಶರ್ಮನನ್ನು ಸೋಲಿಸಿ ವಿದ್ಯಾಧರರ ಚಕ್ರವರ್ತಿಯಾದುದು, (೯) ನರವಾಹನದತ್ತನ ಅಲಂಕಾರವತೀ ಲಾಭ ಮತ್ತು ಶ್ವೇತದ್ವೀಪಸಂದರ್ಶನ, (೧೦) ನರವಾಹನದತ್ತ ಶಕ್ತಿಯಶಸ್ಸೆಂಬ ಇನ್ನೊಬ್ಬಳನ್ನು ಮದುವೆಯಾಗುವುದು, (೧೧) ಮತ್ತೊ ಒಬ್ಬಳನ್ನು ವಿವಾಹ ಮಾಡಿಕೊಳ್ಳುವುದು, (೧೨) ಶಶಾಂಕವತಿ ಲಲಿತಲೋಚನನ್ನು ಮದುವೆಯಾದುದನ್ನೂ ಆವಸಿಗೆ ಅವಳು ಮೃಗಾಂಕದತ್ತನ ಕಥೆಯನ್ನು ಹೇಳುವುದನ್ನೂ ವೇತಾಲಪಂಚವಿಂಶತಿಕೆಯನ್ನೂ

ಒಳಗೊಂಡಿರುವುದು. (೧೩) ಪ್ರಿಯಾ ಪುನರ್ಮಿಲನ, (೧೪) ಮಾನಸವೇಗನು ಮದನಮಂಚುಕೆಯನ್ನು ಕದ್ದೊಯ್ಯುವುದು ಮತ್ತು ಅವಳನ್ನು ಶೋಧಿಸಲು ಕಥಾನಾಯಕನು ಸಾಹಸಕೃತ್ಯಗಳನ್ನು ಮಾಡುವುದು ಮತ್ತು ಮಾನಸವೇಗನ ಸೋದರಿಯ ನೆರವಿನಿಂದ ಪ್ರಿಯೆಯನ್ನು ಹುಡುಕಿ ಪಡೆದು ಮತ್ತೆ ೫ ಜನ ವಿದ್ಯಾಧರೆಯರನ್ನು ಮದುವೆಯಾಗುವುದು ಹಾಗೂ ಮಂದರದೇವನೆಂಬ ತನ್ನ ಕೊನೆಯ ಪ್ರತಿಸ್ಪರ್ಧಿಯನ್ನು ಗೆಲ್ಲಲು ಕಥಾನಾಯಕನು ಸಿದ್ಧತೆಯನ್ನು ಮಾಡುವುದು, (೧೫) ಮಂದರದೇವನನ್ನು ಜಯಿಸಿ ಪಟ್ಟಾಭಿಷಿಕ್ತನಾಗುವುದು, (೧೬) ಉದಯನನ ಮರಣ, ಅವನ ಹೆಂಡತಿಯರ ಸಹಗಮನ ಮತ್ತು ಸ್ವರ್ಗಾರೋಹಣ, ಸುರತಮಂಜರಿ ಎಂಬ ವಿದ್ಯಾಧರೆಯ ಕತೆ, (೧೭) ಮತ್ತು (೧೮)ರಲ್ಲಿ ಮುಕ್ತಾಫಲ ಕೇತುವೆಂಬ ಹೆಸರಿನ ವಿದ್ಯಾಧರ ಚಕ್ರವರ್ತಿಯ ಹೆಂಡತಿ ಪದ್ಮಾವತಿಯ ಕತೆ, ವಿಷಯಶೀಲನ ಕತೆ–ಈ ಕತೆಗಳನ್ನಿಲ್ಲಿ ಕಥಾನಾಯಕನು ಪ್ರಿಯತಮೆಯ ಶೋಧನೆಯಲ್ಲಿದ್ದಾಗ ಅವನ ಬೇಸರವನ್ನು ಪರಿಹರಿಸಲೆಂದು ಹೇಳಲಾಗಿದೆ.

ರಾಜಪ್ರಭುತ್ವದ ಬಗ್ಗೆ ದ್ವೇಷವನ್ನು ಬೆಳೆಯಿಸಿಕೊಂಡವರ ದೃಷ್ಟಿಯಲ್ಲಿ ನರವಾಹನದತ್ತನ ಕಥೆ ರಸ್ಯಮಾನವೆನ್ನಿಸದು. ಸಂಸ್ಕೃತನಿಂದೆ ಪ್ರಾಚೀನ ಜೀವನ ಪದ್ಧತಿಯಲ್ಲಿ ನೀಚತಾರೋಪ, ಸರ್ವತ್ರ ಬಹುಪತ್ನೀತ್ವದ ದ್ವೇಷ, ಅತಿಮಾನುಷ ಜೀವಿಗಳ ಅಸ್ತಿತ್ವದ ಕಲ್ಪನೆಯ ತಾತ್ಸಾರ ಮತ್ತು ಅಸಂಭಾವ್ಯಸಂಗತಿಗಳ ಬಳಕೆಯ ಕಲಾತ್ಮಕ ಸಮರ್ಥನೀಯತೆಯ ಔಚಿತ್ಯ ಪರಿಜ್ಞಾನ ಇಲ್ಲದಿರುವುದು ಹಾಗೂ ಪ್ರಾಚೀನ ಯುಗ ಸಹಜವಾದ ಸಹಗಮನ–ಪಾತಿವ್ರತ್ಯಾದಿ ಸಾಮಾಜಿಕ ರೂಢಿಗಳ ಬಗ್ಗೆ ತಿರಸ್ಕಾರ ತೀಕ್ಷ್ಣತೆ–ಇವು ಕೂಡ ಬೃಹತ್ಕಥೆಯು ಅನಾಸ್ವಾದ್ಯವಾಗುವಂತೆ ಮಾಡಬಲ್ಲವು. ಕೊಳೆತ ಪ್ರಜಾಪ್ರಭುತ್ವ ಮತ್ತು ಅಸಂಸ್ಕೃತ (ಅಶುದ್ಧ) ಭಾಷಾಪ್ರಯೋಗಗಳ ಮೇಲೆ ಅಭಿಮಾನ, ಸ್ವಕಲ್ಪಿತ ಅರ್ವಾಚೀನ ಜೀವನ ಪದ್ಧತಿಯ (ಪ್ರೀತಿಯಲ್ಲ) ವ್ಯಾಮೋಹ, ಏಕಪತ್ನೀತ್ವದ ಕಪಟ ಸತೀವ್ರತ, ಮನುಷ್ಯರ ಅಸ್ವಾಭಾವಿಕ ಆಶೆ-ಆಲೋಚನೆಗಳ ಕಲ್ಪನೆಗಳಲ್ಲಿ ಅತ್ಯಾಸಕ್ತಿ, ಸಂಭಾವ್ಯ ಸಂಗತಿಗಳ ಅಕಲಾತ್ಮಕ ಸಂಯೋಜನೆಯ ಮೆಚ್ಚುಗೆ ಅಸಹವರ್ತನೆ–ಅಪತಿಪ್ರೇಮಗಳಿಗೆ ಆಭಾಸಿಕ ಸಮರ್ಥನೆಗಳನ್ನು ಹುಡುಕಿಕೊಟ್ಟಿರುವುದರ ಬಗ್ಗೆ ಪುರಸ್ಕಾರ ಮುಂತಾದುವುಗಳೂ ಹಾಗೇ ಬೃಹತ್ಕಥೆಯ ರಸೋದ್ಬೋಧಕ ಶಕ್ತಿಯು ಪರಿಣಾಮಕರವಾಗದಂತೆ ಮಾಡಬಲ್ಲವು. ದ್ವೇಷ-ವ್ಯಾಮೋಹಗಳಿಂದ ಲಿಪ್ತವಾದ ಮನಸ್ಸು ತೆರೆದ ಮನಸ್ಸಲ್ಲ; ಹಳೆಯವುಗಳಂತೆಯೇ ಹೊಸ ಪೂರ್ವಗ್ರಹಗಳೂ ಕೃತಿಯ ಆಸ್ವಾದಕ್ಕೂ ಮೌಲ್ಯನಿರ್ಧಾರಕ್ಕೂ ವಿಘ್ನಕಾರಿಗಳು. ಅದೇ ಪ್ರಕಾರ ಆಧಿ-ವ್ಯಾಧಿಗಳಿಂದ ಮನಸ್ಸು ಕದಡಿದ್ದಾಗ ಓದತೊಡಗುವುದೂ ಉದ್ದಿಷ್ಟ ಪರಿಣಾಮವನ್ನು ಉಂಟುಮಾಡದು, ಶೈಲಿಗುಣಗಳ ಸಾಂದರ್ಭಿಕ ಔಚಿತ್ಯ

ಓದುಗನಿಗೆ ಅರಿಯದೆ ಹೋದಾಗಲೂ[1] ಕೃತಿಮಂಡನವು ಕೋಣನ ಮುಂದೆ ಕಿಂದರಿ ಬಾರಿಸಿದಂತಾಗುವುದು.

ಮೂಲ "ಕಥಾ ಸರಿತ್ಸಾಗರ"ದ ಭಾಷೆ ಲಲಿತ, ಬಂಧ ಬಿಗಿಯಾದದ್ದು; ಶಾಸ್ತ್ರಿಗಳ ಅನುವಾದ ಕನ್ನಡದ ಲಾಲಿತ್ಯವನ್ನೂ, ಬಂಧಶ್ಲಿಷ್ಟತೆಯನ್ನೂ ಚೆನ್ನಾಗಿ ಬಿಂಬಿಸುತ್ತದೆ. ಅದಕ್ಕೆ ಉದಾಹರಣೆಯನ್ನಾಗಿ ಇಲ್ಲಿ "ಧೂರ್ತನು ಮಹಾ ಮಂತ್ರಿಯಾದ ಕಥೆ"ಯನ್ನು ತೆಗೆದುಕೊಳ್ಳೋಣ:

ದಕ್ಷಿಣಾಪಥದ ಒಂದು ಊರಿನಲ್ಲಿ ಒಬ್ಬ ಧೂರ್ತನಿದ್ದನು. ಪರವಂಚನೆಯೇ ಅವನ ಉದ್ಯೋಗ; ಆದರೆ ಹಿರಿಯಾಸೆಯವನಾದ್ದರಿಂದ ಅವನು ಹೀಗೆ ಸುಮ್ಮನೆ ಹೊಟ್ಟೆಹೊರೆದುಕೊಂಡು ತೃಪ್ತನಾಗದೆ ತುಂಬ ಸಂಪಾದನೆ ಮಾಡಬೇಕೆಂದು ದೊಡ್ಡವರ್ತಕನ ವೇಷಹಾಕಿಕೊಂಡು ಅರಮನೆಗೆ ಹೋದನು. ಅವನ ವೇಷದಿಂದ ಮೋಸಹೋಗಿ ದೊರೆಯು ಬರಮಾಡಿಕೊಂಡನು. ಅವನು ರಾಜನೊಡನೆ "ಪ್ರಭು! ಪ್ರತಿನಿತ್ಯವೂ ತುಂಬಿದ ಸಭೆಯಲ್ಲಿ ಎಲ್ಲರ ಮುಂದೂ ಒಂದು ಕ್ಷಣ ನನ್ನೊಡನೆ ಏಕಾಂತದಿಂದ ಮಾತನಾಡು; ನಾನು ಐನೂರು ದೀನಾರಗಳನ್ನು ಕಾಣಿಕೆಯಾಗಿ ಅರ್ಪಿಸುತ್ತೇನೆ!" ಎಂದನು. ರಾಜನು ಏಕಾಗಬಾರದೆಂದು ಒಪ್ಪಿಕೊಂಡನು. ಲೋಕವು ಅವನು ಮಹಾಮಂತ್ರಿಯಾದನೆಂದು ಭಾವಿಸಿತು. ಒಂದು ದಿನ ಆ ದೂರ್ತನು ಒಬ್ಬ ನಿಯೋಗಿಯ ಮುಖವನ್ನು ಮತ್ತೆ ಮತ್ತೆ ನೋಡಿ ದೊರೆಯೊಡನೆ ಮಾತನಾಡಿದನು. ಹೊರಗೆ ಬಂದ ಮೇಲೆ ಆ ನಿಯೋಗಿಯು ಹಾಗೆ ನೋಡಿದ್ದಕ್ಕೆ ಕಾರಣವನ್ನು ಕೇಳಿದನು. ಧೂರ್ತನು "ನನ್ನ ದೇಶವನ್ನು ಇವನು ಅಪಹರಿಸಿಬಿಟ್ಟಿದ್ದಾನೆ!' ಎಂದು ರಾಜನು ಹೇಳಿದನು. ಆದ್ದರಿಂದ ನಾನು ನಿನ್ನ ಮುಖನೋಡಿದೆ; ಅವನನ್ನು ಸಮಾಧಾನ ಮಾಡುತ್ತೇನೆ" ಎಂದನು. ನಿಯೋಗಿಯು ಅಷ್ಟಕ್ಕೇ ಹೆದರಿಕೊಂಡು ಅವನ ಮನೆಗೆ ಬಂದು ಒಂದು ಸಾವಿರ ಹೊನ್ನನ್ನು ಕೊಟ್ಟನು. ಮತ್ತೊಂದು ದಿನ ಹಾಗೆಯೇ ರಾಜನೊಡನೆ ಮಾತನಾಡಿ ಅವನು "ಎಲ್ಲವನ್ನೂ ಸರಿಮಾಡಿದೆ; ಧೈರ್ಯವಾಗಿರು" ಎಂದು ನಿಯೋಗಿಗೆ ಹೇಳಿದನು. ಹೀಗೆ ಅವನು ಕ್ರಮವಾಗಿ ಎಲ್ಲಾ ನಿಯೋಗಿಗಳಿಂದಲೂ ರಾಜರಿಂದಲೂ ರಾಜಪುತ್ರರಿಂದಲೂ ಸೇವಕರಿಂದಲೂ ಸಂಪಾದನೆ ಮಾಡಿದನು. ಒಂದು ದಿನ ರಾಜನನ್ನು ಕಂಡು "ಪ್ರಭು, ನಿತ್ಯವೂ ನಿನಗೆ ಐನೂರು ದೀನಾರಗಳನ್ನು ಕೊಟ್ಟೂ ನಿನ್ನ ದಯೆಯಿಂದ ಐದು ಕೋಟಿ ಹೊನ್ನನ್ನು ಸಂಪಾದಿಸಿದೆ; ಇದನ್ನು ಒಪ್ಪಿಸಿಕೊಳ್ಳಬೇಕು; ಇಲ್ಲಿ ನನ್ನದೇನಿದೆ?" ಎಂದನು. ರಾಜನು ಬಲವಂತವಾಗಿ

---

[1] "The values are valued only as they are contemplated by readers who meet the requisite conditions."

—Austin Warren

ಅದರಲ್ಲಿ ಅರ್ಥವನ್ನು ತೆಗೆದುಕೊಂಡು ಸಂತೋಷಪಟ್ಟು ಅವನನ್ನು ಮಹಾ ಮಂತ್ರಿಯಾಗಿ ಮಾಡಿದನು. ಆ ಮೇಲೆ ಅವನು ಯಥೇಚ್ಛವಾಗಿ ಇತರರಿಗೆ ಕೊಟ್ಟು ತಾನೂ ಸುಖಪಟ್ಟನು. ಹೀಗೆ ಬುದ್ಧಿವಂತರು ಹೆಚ್ಚುಪಾಪಕ್ಕೆ ಹೋಗದೆ ಸಂಪಾದನೆ ಮಾಡುತ್ತಾರೆ. ಬಾವಿತೋಡುವವನು ಬಾವಿಯಲ್ಲಿ ಮೈಗೆಮೆತ್ತಿದ ಮಣ್ಣನ್ನು ಬಾವಿಯ ನೀರಿನಿಂದಲೇ ತೊಳೆದುಕೊಂಡು ಬಿಡುವಂತೆ, ದೋಷವನ್ನು ಫಲದಿಂದ ನಿವಾರಿಸಿಕೊಳ್ಳುತ್ತಾರೆ.

ಈ ಶೈಲಿಯ ಸರಳತೆ ಮತ್ತು ಬಂಧಶ್ಲಿಷ್ಟತೆಗಳು ಅನುಕರಣೀಯವಾಗಿವೆ. ಇದು ತನ್ನ ಸಾದಾತನ (ಸದಾತನತೆ!)ದಲ್ಲಿ ಅಚ್ಚುಕಟ್ಟುತನವನ್ನು ಅಳವಡಿಸಿ ಕೊಂಡಿದೆ. ಹೇಳಬೇಕಾದ್ದಕ್ಕಿಂತ ಹೆಚ್ಚನ್ನೋ ಅಥವಾ ಕಡಿಮೆಯನ್ನೋ, ಪದ ದಲ್ಲಾಗಲಿ, ಅರ್ಥದಲ್ಲಾಗಲಿ, ಹೇಳದೆ, ಆವಶ್ಯಕವೆನ್ನಿಸಿದ್ದಷ್ಟನ್ನೇ ಹೇಳುವ ಸಂಯಮ ಇಲ್ಲಿ ಒಡೆದು ಕಾಣುತ್ತದೆ. ಇದೊಂದು ಸರಳ ವಾಕ್ಯಗಳ ಸರಮಾಲೆ; ಕಾರ್ಯಕಾರಣ ನ್ಯಾಯವನ್ನು ಪಾಲಿಸಿಕೊಂಡೇ ಹೋಗಿದೆ. ಅತಿಸಮರ್ಥನೆ, ಅಸಮರ್ಥನೆ, ಅಪಸಮರ್ಥನೆಗಳಿಲ್ಲ. ಎಲ್ಲವೂ ಋಜುಮಾರ್ಗದ ಗಮನ. ಸುಸಂಸ್ಕೃತನ ಬಾಯಿಂದ ಬರಬಹುದಾದ ಶಬ್ದಗಳೇ ಬಂದಿವೆ; ಆದರೆ ಯಾವ ವಾಕ್ಯವೂ ಪೆಡಸಾಗಿಲ್ಲ. ಈ ಗದ್ಯಗತಿಯಲ್ಲಿ ಆನೆಯ ಗಾಂಭೀರ್ಯದ ಜೊತೆಗೆ ತನ್ನ ಮರಿಯ ಎದುರು ಅದು ತೋರ್ಪಡಿಸುವ ಮಾತೃಮಾರ್ದವವೂ ಕೂಡ ಬಂದಿದೆ. ಇದು ಶಾಸ್ತ್ರಿಗಳ ವ್ಯಕ್ತಿತ್ವದ ಧರ್ಮಸೂಕ್ಷ್ಮವನ್ನು ಸೂಚಿಸುತ್ತದೆ. "ದಕ್ಷಿಣಾ ಪಥ"ದಂಥ ಪದಗಳ ಬಳಕೆಯನ್ನೆತ್ತಿ ತೋರಿಸಿ ಶೈಲಿಯು ಸಂಸ್ಕೃತ ಭೂಯಿಷ್ಠ ವಾಗಿದೆ ಎಂಬುದು ಅಪವಿಮರ್ಶೆ. ಅವರ ಔಚಿತ್ಯವಿರುವುದು ಕಥೆ ನಡೆದಿರಬಹುದಾದ ಪ್ರಾಚೀನ ಕಾಲದ ಆವರಣವನ್ನು ಸೂಚಿಸುವುದರಲ್ಲಿ, ಹಿರಿಯಾಸೆಯನ್ನು 'ಹೆಬ್ಬಾಸೆ' ಎಂದು ಬರೆಯದಿರುವುದು ಅವರ ವಿದ್ವತ್ತಿಗೆ ಸಾಕ್ಷಿ. 'ದೊರೆ' ಎಂಬ ಪದ ಗೊತ್ತಿದ್ದರೂ 'ರಾಜ' ಪದವನ್ನು ಬಳಸಿದ್ದು ಅವರಲ್ಲಿ ಮಡಿವಂತಿಕೆ ಇಲ್ಲ ವೆಂಬುದಕ್ಕೆ ಪ್ರಮಾಣ. ಈ ಸಮದೃಷ್ಟಿಯ ಆರೋಗ್ಯಕರ ಗುಣವು ಅನುಸರಣೀಯ. "ಸಂಸ್ಕೃತ ನಾಟಕ"ದಲ್ಲಿ ಹೇಗೋ ಹಾಗೇ ಇಲ್ಲಿಯೂ ಇಂದಿನ ಕನ್ನಡ ಗದ್ಯ ಹೇಗಿರಬೇಕೆಂಬುದಕ್ಕೆ ಮಾದರಿಯಾಗುವಂತಹ ಆಚಾರ್ಯಸಹಜ ಔಚಿತ್ಯಜ್ಞತೆ ಯನ್ನು ಪದಪ್ರಯೋಗ ಮತ್ತು ವಾಕ್ಯರಚನೆಗಳಲ್ಲಿ ಕಾಣಬಹುದೆಂದರೆ ಅತಿ ಶಯೋಕ್ತಿಯಾಗಲಾರದು. ಕಥನ, ವರ್ಣನ, ವಿವರಣ, ವಿವೇಚನಗಳ ಪದ ಭಂಡಾರ (Vocabulary) ಭಿನ್ನವಾಗುವುದು ಸಹಜವೆಂಬುದಕ್ಕೂ ಶಾಸ್ತ್ರಿಗಳು ಗ್ರಂಥಕ್ಕೆ ಬರೆದ ಮುನ್ನುಡಿಯ ಒಕ್ಕಣೆಯನ್ನೂ ಕತೆಗಳನ್ನು ಹೇಳಿರುವ ಭಾಗದ ಒಕ್ಕಣೆಯನ್ನೂ ಹೋಲಿಸಿನೋಡಿದಲ್ಲಿ ಆಧಾರ ದೊರಕುತ್ತದೆ:

ಸ್ವಾರಸ್ಯವೇ ಕಥೆಯ ಜೀವ: 'ಕಥಾಯಾಂ ಸರಸಂ ವಸ್ತು.' ಅದೇ ಪ್ರಧಾನ; ಮಿಕ್ಕದ್ದು ಗೌಣ. ಅದು ಪಾತ್ರ ಪೋಷಣಕ್ಕೂ ಗುಣ ಚಿತ್ರಣಕ್ಕೂ

ಹೋಗುವುದಿಲ್ಲ.[1] ವರ್ಣನೆ ಅಲಂಕಾರಗಳೂ ಅಷ್ಟೇ. ಘಟನೆಗಳನ್ನು ಮರಸು ವುದಾದರೆ ಅವು ಕಥೆಗೆ ಕಲ್ಲು ಕಟ್ಟಿದಂತೆ ಬರಿಯ ಭಾರವಾಗುತ್ತದೆ.

"ವತ್ಸರಾಜನು ವಾಸವದತ್ತೆಯನ್ನು ಮದುವೆಯಾಗಿ ಕರೆತಂದದ್ದೇ ಒಂದು ಅದ್ಭುತವಾದ ಘಟನೆ; ಅದೇ ಕಥೆಗೆ ಬೀಜವಾಗಿಯೂ ಜನರಂಜಕವಾಗುವುದಕ್ಕೆ ಮುಖ್ಯ ಕಾರಣವಾಗಿಯೂ ಇತ್ತೆಂದು ತೋರುತ್ತದೆ. ಅಂತರಿಕ್ಷದಲ್ಲಿ ಹಾರಾಡುವ ವಿದ್ಯಾಧರರು ಆ ಮೇಲೆ ಬಂದು ತುಂಬಿಕೊಂಡಿರಬೇಕು. ಆದ್ದರಿಂದಲೇ, ಉದಯನನು ಸಂಸ್ಕೃತ ಪ್ರಾಕೃತಗಳಲ್ಲಿ ಅನೇಕ ಕಾವ್ಯಗಳ ನಾಯಕನಾದರೂ 'ವಿದ್ಯಾಧರ ಚಕ್ರವರ್ತಿ' ಎನಿಸಿಕೊಂಡು ಹಲವು ಹೆಂಡಿರನ್ನು ಮದುವೆಯಾದ ಅವನ ಮಗ ನರವಾಹನದತ್ತನು ಒಂದು ಕಾವ್ಯಕ್ಕೂ ನಾಯಕನಾಗಿಲ್ಲ!"

ಈ ಗದ್ಯದ ಪಾರಿಭಾಷಿಕತೆ ವಿವೇಚನೆಗೆ (ವಿಮರ್ಶೆಗೆ) ಸಹಜ. ಭಾರತೀಯ ಸಂಸ್ಕೃತಿಗೆ ಸಹಜವಾದ ಪಾರಿಭಾಷಿಕ ಪದಗಳು ಆಧುನಿಕ ವಿಮರ್ಶಕನ ಅಭಿಪ್ರಾಯ ಗಳನ್ನು ಜನರಿಗೆ ಅರ್ಥವಾಗುವಂತೆ ವಿವರಿಸಲು ಬಹುಮಟ್ಟಿಗೆ ಸಮರ್ಥವೂ ಉಚಿತವೂ ಆಗಿವೆ ಎಂಬುದನ್ನು ಶಾಸ್ತ್ರಿಗಳ ವಿಮರ್ಶಾತ್ಮಕ ಬರಹಗಳಿಂದ ಕಂಡು ಕೊಳ್ಳಬಹುದಾಗಿದೆ. "ಬೃಹತ್ಕಥೆಯೂ ಒಂದು ಕಥೆ; ಪರಿಕಥೆಯಲ್ಲ,[2] ಖಂಡ ಕಥೆಯಲ್ಲ, ಸಕಲಕಥೆಯಲ್ಲ; **ಎಲ್ಲಜಾತಿಯ** ಕಥೆಗಳನ್ನು ಒಳಗೊಂಡಿರುವ ದೊಡ್ಡ ಕಥೆ....ವತ್ಸರಾಜನು ಚರಿತ್ರ ವ್ಯಕ್ತಿಯೆಂದು ಭಾವಿಸಿದ್ದದ್ದರಿಂದ **ನಡೆದದ್ದು, ಕೇಳಿದ್ದು, ಕಲ್ಪಿಸಿದ್ದು** ಎಲ್ಲವೂ ಅದರಲ್ಲಿತ್ತೆಂದು ಊಹಿಸಬಹುದು; ಚಿತ್ರ ವಿಚಿತ್ರ ವಾದ ಕಥೆಗಳಿದ್ದು ಅದ್ಭುತರಸವು[3] ಪ್ರಧಾನವಾಗಿದ್ದಿರಬಹುದು." ಅದ್ಭುತ ಪರಿಣಾಮವನ್ನು ಒಟ್ಟಿನಲ್ಲಿ ಉಂಟುಮಾಡುವಂತಹ ಸಂವಿಧಾನ ಬೃಹತ್ಕಥೆಯದು ಎಂಬುದು ತಾತ್ಪರ್ಯ. ಅದರಲ್ಲಿ ಏನಿದೆ, ಏನಿಲ್ಲ ಎಂಬುದನ್ನು ಶಾಸ್ತ್ರಿಗಳ ಬಾಯಿಂದಲೇ ಕೇಳಬೇಕು:

---

[1] "Short story is a prose narrative briefer than the short novel, more restricted in characters and situations, and usually concerned with a single effect...the short story **does not develop Character** fully .. The climax may occur at the very end...the back ground against which the characters move is generally sketched lightly"—Karl Beckson.

[2] "ಆಖ್ಯಾಯಿಕಾ ಕಥಾ ಖಂಡಾ ಕಥಾ ಪರಿಕಥಾ ಕಥಾ ಕಥಾನಿಕೇತಿ ಮನ್ಯಂತೇ ಗದ್ಯ ಕಾವ್ಯಂಚ ಪಂಚಧಾ"—ಅಗ್ನಿ ಪುರಾಣದ ೩೩೭ನೆಯ ಅಧ್ಯಾಯದ ೧೨ನೆಯ ಶ್ಲೋಕ.

[3] (1) "The structural principle is thus realisable in more than one way in the epic"—K. R. Srinivasa Iyengar

(2) "The work of literature is an aesthetic object, capable of arousing asthetic experience"—Rene Wellek.

"ಹೀಗೆ ಬೃಹತ್ಕಥೆಯು ವಿಂಧ್ಯಾರಣ್ಯದಲ್ಲಿ ಹುಟ್ಟಿ ಹೆಮ್ಮರವಾಗಿ ಬೆಳೆದು ನಾಲ್ಕು ಕಡೆಗೆ ಉತ್ತರ ದಕ್ಷಿಣಗಳ ಕಡೆಗೆ ಹೆಚ್ಚಾಗಿ—ತನ್ನ ಶಾಖೋಪಶಾಖೆಗಳನ್ನು ನೀಡಿತು. ಅವುಗಳಿಂದ ಬಿಳಿಲು ಬಿದ್ದು, ಬೇರುಬಿಟ್ಟು, ನೆಲದಲ್ಲಿ ಊರಿಗಳಾಗಿ ಹೊಸ ಹೊಸ ಮರಗಳಾದವು. ಮೊದಲಿನ ತಾಳು ಈಗ ಇಲ್ಲದಿದ್ದರೂ ಈ ಬಿಳಿಲು ಮರಗಳೇ—ಕೂಡಿಕೊಂಡು ಮಹಾ ವೃಕ್ಷವಾಗಿವೆ. ಅದರಲ್ಲಿ ರಾಷ್ಟ್ರಗಳಿವೆ, ರಾಜರಿದ್ದಾರೆ; ವರ್ತಕರಿದ್ದಾರೆ, ವಿಟರಿದ್ದಾರೆ, ವಂಚಕರಿದ್ದಾರೆ; ಸತಿಯರಿದ್ದಾರೆ, ಅಸತಿಯರಿದ್ದಾರೆ; ರಸಿಕರಿದ್ದಾರೆ, ಋಷಿಗಳಿದ್ದಾರೆ; ದೇವತೆಗಳಿದ್ದಾರೆ, ನಾಗಯಕ್ಷ ರಾಕ್ಷಸ ಗಂಧರ್ವಾದಿಗಳಿದ್ದಾರೆ; ಮೃಗಪಕ್ಷಿಗಳೂ ಭೂತಬೇತಾಳಗಳೂ ಸೇರಿಕೊಂಡಿವೆ; ಕ್ರಿಸ್‌ಮಸ್ ಹಬ್ಬದ ಮರದಂತೆ ಅದರಲ್ಲಿ ನಾನಾದೇಶದ ಆಟದ ಸಾಮಾನುಗಳೂ ಅಲಂಕಾರಗಳೂ ತೂಗುಕಟ್ಟಿವೆ; ಮೂರು ಲೋಕದಲ್ಲಿ ಯಾವುದು ಏನುಬೇಕು ಎಂದರೆ ಅದು ಇಲ್ಲಿದೆ; ಆ ಲೋಕಗಳನ್ನು ಮೀರಿ ಕವಿಯ ಕಲ್ಪಿತ ಲೋಕಕ್ಕೆ ಸೇರಿದ ನಾನಾ ಅದ್ಭುತಗಳು, ವಿಚಿತ್ರ ವಸ್ತುಸಂಗ್ರಹ ಶಾಲೆಯಲ್ಲಿರುವಂತೆ ತುಂಬಿವೆ,"

ಈ ವಿವರಣೆಯಿಂದ ಮಹಾಕವಿ ಗುಣಾಢ್ಯನ ಕಲ್ಪನಾ ಸಾಮರ್ಥ್ಯದ ಪರಿಚಯವಾಗುತ್ತದೆ.[8] ಲಲಿತಸಾಹಿತ್ಯದ ಮೂರು ಮಹಾಜಾತಿಗಳಾದ ಭಾವಗೀತ, ಮಹಾಕಾವ್ಯ, ನಾಟಕಗಳಿಗೆ ಉಳಿದವುಗಳೆಲ್ಲವೂ ಉಪಜಾತಿಗಳು. ಈ ಎಲ್ಲವುಗಳ ಹೂರಣವೂ "A word of fiction–ಕಾಲ್ಪನಿಕ ಪ್ರಪಂಚ"ವೇ ಆಗಿರುವುದರಿಂದ ಒಬ್ಬೊಬ್ಬ ಕವಿಯದು ಒಂದೊಂದು ಕಾಲ್ಪನಿಕ ಪ್ರಪಂಚ; ಅಕ್ಷರಸತ್ಯ, ತರ್ಕಶುದ್ಧ (Of material logic) ಸತ್ಯಗಳು ಅದರಲ್ಲಿಲ್ಲ. ಭೂತ, ಬೇತಾಳ, ಬ್ರಹ್ಮರಾಕ್ಷಸಗಳೆಂದು ಕವಿ ಕಡೆದಿಟ್ಟ ಪಾತ್ರಗಳಲ್ಲೂ ನಮಗೆ ಲಕ್ಷ್ಯವಾದವುಗಳೆಂದರೆ ಅವುಗಳ ಮನಃಸ್ಥಿತಿಗಳು, ಕಾರ್ಯಾರಂಭದ ಉದ್ದೇಶಗಳು, ಮೌಲ್ಯಮಾಪನಗಳು, ಮನಃಪ್ರಣಾಲಿಗಳು ಮತ್ತು ಆಶೆ–ಆಕಾಂಕ್ಷೆಗಳು. ಮನಃಶಾಸ್ತ್ರವು ಬೆಳೆದಿರುವ ಇಂದಿನ ದಿನಮಾನದಲ್ಲಿ ಕಾವ್ಯದ ಬಳಕೆಗೆ ಬರುವ (Symbols and myths of our ciivlisation)–ನಮ್ಮ ನಾಗರಿಕತೆಯ ಪ್ರತೀಕಗಳ ಮತ್ತು ಪುರಾಣಕಥೆಗಳ ಮಹತ್ವವು ಮೊದಲಿಗಿಂತಲೂ ಬಹಳ ಹೆಚ್ಚಾಗಿದೆ. ಈ ದೃಷ್ಟಿಯಿಂದ ನೋಡಿದಾಗಲಂತೂ ಗುಣಾಢ್ಯನ ಅಸಂಖ್ಯಾತ ಕಟ್ಟುಕತೆಗಳು ಕೊಡುವ ಮನಶ್ಚಿತ್ರಗಳು ಅಮೂಲ್ಯವೆನ್ನಿಸದಿರವು. ಅಂಥ ಪ್ರತೀಕ (ಸಂಕೇತ), ಪುರಾಣ ಪ್ರತಿಮೆಗಳನ್ನು ಬಳಸುವ ಇಂದಿನ ೨–೩ನೆಯ ದರ್ಜೆಗಳ ಕವಿಗಳ ಪರಾವಲಂಬಿ ಪ್ರತಿಭೆಯ ಪ್ರಕಾರವು ಅಂಥವುಗಳನ್ನು ಮೊದಲಬಾರಿಗೆ ನಿರ್ಮಿಸಿದ ಅನನ್ಯತಾ ಸಂಪನ್ನ

---

[8] "A character in a novel differs from a historical figure or a figure in real life. He is made only of the sentences describing him or put into his mouth by the author. He has no past, no future, and sometimess no contiunity of life"—"Theoiy of Literature" Page 25.

ಕವಿಪ್ರತಿಭೆಯ ಎದುರು ಬಹಳ ಮಂದವಾಗಿ ಕಾಣದಿರದು. ಆದರಿಂದಲೇ ಶಾಸ್ತ್ರಿಗಳ ಪ್ರೀತಿಗೌರವಗಳಿಗೆ ಬೃಹತ್ಕಥೆ ಪಾತ್ರವಾಯಿತು, ಅವರ ಕೈಯಿಂದ ಅದು ಸಮಗ್ರವಾಗಿಯೂ ಶುದ್ಧವಾಗಿಯೂ ಕನ್ನಡರೂಪವನ್ನು ಪಡೆಯಲು ತಕ್ಕುದಾಯಿತು! ಇದರಲ್ಲಿ ಮೀನು, ಕಾಗೆ, ಇಲಿ, ಪಾರಿವಾಳ, ಜಿಂಕೆ, ಗೂಬೆ, ಕಪಿ ಮುಂತಾದ ಕ್ಷುದ್ರ ಜಂತುಗಳು ಬುದ್ಧಿವಂತರೆಂದು ಪಾತ್ರವರ್ಗದಲ್ಲಿ ಗುಣಾಢ್ಯನು ಸೇರಿಸಿಕೊಂಡಿರುವುದು ಮೂರ್ಖರಿಗಿಂತ ಅವು ಎಷ್ಟೋವಾಸಿ ಎಂದು ಧ್ವನಿಸುವ ವಿಡಂಬನೆ—ಎಂದು ಅಭಿಪ್ರಾಯಪಟ್ಟಿರುವುದು ಶಾಸ್ತ್ರಿಗಳ ಸಹೃದಯತೆಯ ವೈದಗ್ಧ್ಯಕ್ಕೆ ಮಹಾಪ್ರಮಾಣ. ಹೀಗೇ ೬೬ ಪುಟಗಳಷ್ಟಿರುವ ಪೀಠಿಕೆ (ಮುನ್ನುಡಿ)ಯಲ್ಲಿ ಪ್ರತ್ಯಕ್ಷಾಪ್ರತ್ಯಕ್ಷವಾಗಿ ಸಾಹಿತ್ಯದ ಸಿದ್ಧಾಂತ, ವಿಮರ್ಶೆ ಮತ್ತು ಇತಿಹಾಸಗಳಿಗೆ ಸಂಬಂಧಿಸಿದ ವಿವಿಧ ವಿಧೇಯ ಅಂಶಗಳನ್ನು ಬೃಹತ್ಕಥೆಗೆ ಅನ್ವಯಿಸಿ ಶಾಸ್ತ್ರಿಗಳು ಆವಶ್ಯಕವೂ ಉಚಿತವೂ ಆದ ತಮ್ಮ ಪಾಂಡಿತ್ಯಪ್ರಭೆಯನ್ನು ಪ್ರಖರವಾಗಿ ಬೀರಿದ್ದು ಪ್ರಶಂಸನೀಯವಾಗಿದೆ. ಉತ್ಕೃಷ್ಟಕಾವ್ಯದ ಲಕ್ಷಣಗಳನ್ನು ಸಾಂದರ್ಭಿಕವಾಗಿ ಅವರು ಅಲ್ಲಿ ಕೊಟ್ಟಿರುವುದು ಮನನೀಯ:

"ಕವಿಗೆ ಶಬ್ದಸಂಪತ್ತು ಕರತಲಾಮಲಕವಾಗಿದೆ; ಆದರೆ ಭಾಷೆ ಸರಳವಾಗಿದೆ. ಸರ್ಗದ ಕೊನೆಯಲ್ಲಿ ಮಹಾಕಾವ್ಯಸಂಪ್ರದಾಯದಂತೆ 'ಭಿನ್ನವೃತ್ತ'ವಿರುತ್ತದೆ. ಅಲ್ಲಲ್ಲೇ ತಿಳಿಯಾದ, ಮಧುರವಾದ, ಹಾಸ್ಯವಿದೆ. ಗೌರವಗಂಭೀರವಾದ ಜನಸಮಾಜದ ಚಿತ್ರವಿದೆ. ಸ್ವಲ್ಪವೂ ಗ್ರಾಮ್ಯತೆ ಇಲ್ಲ; ನೀಚತನವಿಲ್ಲ, ಅಶ್ಲೀಲವಿಲ್ಲ; ವರ್ಣನೆ ಹಿತವಾಗಿ ಮಿತವಾಗಿ ರಮಣೀಯವಾಗಿದೆ. ಕ್ಲಿಷ್ಟವಾದ ಅಲಂಕಾರಗಳಿಲ್ಲ. ವತ್ಸರಾಜನ ಕಥೆಯೂ ಅದರಲ್ಲಿ ಬರುವ ಘಟನೆಗಳೂ ಉಪಕಥೆಗಳೂ ಕಾಶ್ಮೀರಪಾಠಕ್ಕಿಂತ ಹೆಚ್ಚು ಸುಂದರವೂ ಸುಸಂಬದ್ಧವೂ ಸಮಂಜಸವೂ ಸಂಘಟಿತವೂ ಆಗಿವೆ. ಸಂಭಾಷಣೆಯಲ್ಲಿಯೂ ಸಂವಿಧಾನಕೌಶಲದಲ್ಲಿಯೂ ಶ್ರೇಷ್ಠ ಕಾದಂಬರಿಗೆ ಸರಿದೂಗುತ್ತವೆ. ದಂಡಿಯು ಹೇಳುವ ವೈದರ್ಭೀ ಗುಣಗಳಿಗೆ....ಈ ಗ್ರಂಥದಲ್ಲಿ ಬೇಕಾದಷ್ಟು ಉದಾಹರಣೆಗಳು ದೊರೆಯುತ್ತವೆ." ಉತ್ತಮ ಪ್ರತಿಭಾವಂತರ ಉತ್ತಮ ಕಾವ್ಯಗಳಿಗೆ ತಕ್ಕ ಪುರಸ್ಕಾರ ದೊರಕದಾದಾಗ ಅವರು ಕೆಲವುಸಲ ಏನುಮಾಡುತ್ತಾರೆ ಎಂಬುದಕ್ಕೆ ಶಾಸ್ತ್ರಿಗಳು ಕೊಟ್ಟ ಕತೆಯೊಂದು ಸರಿಯಾದ ಉತ್ತರವನ್ನು ಹೇಳುತ್ತದೆ:

"ಒಬ್ಬ ವರ್ತಕನು ಕಟಾಹದ್ವೀಪಕ್ಕೆ ಸರಕು ತೆಗೆದುಕೊಂಡುಹೋದನು. ಅದರಲ್ಲಿ ಬಹುಭಾಗ ಅಗಿಲು ಚಕ್ಕೆಯಾಗಿತ್ತು. ಮಿಕ್ಕಸರಕು ವ್ಯಾಪಾರವಾಯಿತು. ಅಲ್ಲಿಯ ಜನ ಅಗಿಲುಮರವನ್ನು ಕಂಡರಿಯರು; ಆದ್ದರಿಂದ ಅವರು ಅದನ್ನು ಕೇಳಲಿಲ್ಲ; ಆಗ ಅವನು ಅದೆಲ್ಲವನ್ನೂ ಸುಟ್ಟು ಇದ್ದಿಲುಮಾಡಿ ಮಾರಿದನು!"

ಶಾಸ್ತ್ರಿಗಳ "ಕಥಾಮೃತ"ವನ್ನು ಸವಿಯಲಾರದವರಿಗೆ ಕೂಡ ಈ ಉಕ್ತ ಕಥೆ ಅನ್ವಯಿಸದಿರದು!

**ಡಾ. ಜಿ. ವರದರಾಜರಾವ್**

# ಗುರುಕೃಪೆ

ಈಗ್ಗೆ ಸುಮಾರು ಮೂವತ್ತು ವರ್ಷಗಳ ಹಿಂದಿನ ಮಾತು. ಆಗತಾನೆ ನಾನು ಇಂಟರ್‌ಮಿಾಡಿಯೆಟ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದೆ. ಕನ್ನಡದಲ್ಲಿ ತಕ್ಕಮಟ್ಟಿಗೆ ಹೆಚ್ಚಿಗೆ ಅಂಕಗಳನ್ನು ಗಳಿಸಿದ್ದೆ. ಆಧುನಿಕ ಕನ್ನಡಸಾಹಿತ್ಯದ ಆ ಪರ್ವಕಾಲದ ಪ್ರಭಾವದಿಂದ ನಾನೂ ಸಹ ಕೆಲವು ಕತೆ, ಕವಿತೆಗಳನ್ನು ಬರೆದಿದ್ದುದರಿಂದ, ಅಂದು ಕನ್ನಡದ ಮುಂದಾಳುಗಳಾಗಿದ್ದ ಕೆಲವು ಲೇಖಕರ ಪರಿಚಯವಾಗಿತ್ತು. ಈ ವಿಶ್ವಾಸದಿಂದ ಪ್ರೇರಿತನಾಗಿ ಕನ್ನಡ ಆನರ್ಸ್ ತರಗತಿಗೆ ಸೇರಿ ವ್ಯಾಸಂಗವನ್ನು ಮುಂದುವರಿಸಬೇಕೆಂದು ಹಂಬಲವುಂಟಾಯಿತು. ಆದರೆ, ಇಂಟರ್‌ಮಿಾಡಿಯೆಟ್ಟಿನಲ್ಲಿ ನಾನು ವಿಜ್ಞಾನವನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡಿದ್ದುದರಿಂದಲೂ, ಕನ್ನಡದಲ್ಲಿ ವಿಜ್ಞಾನದ ವಿದ್ಯಾರ್ಥಿಗಳಿಗೆ ಒಂದೇ ಒಂದು ಪ್ರಶ್ನಪತ್ರಿಕೆ ವಿಧಾಯಕವಾಗಿದ್ದುದರಿಂದಲೂ, ನನ್ನಂಥವನಿಗೆ ಕನ್ನಡ ಆನರ್ಸ್ ತರಗತಿಗೆ ಸೇರಲು ಅವಕಾಶವೇ ಇರಲಿಲ್ಲ. ಈ ಸಂಕಟವನ್ನು ನನ್ನ ಪೂಜ್ಯ ಗುರುಗಳಲ್ಲಿ ಒಬ್ಬರಾದ ಶ್ರೀ ವಿ. ಸೀತಾರಾಮಯ್ಯನವರಲ್ಲಿ ಹೇಳಿಕೊಂಡಾಗ, ಅವರು ಅತ್ಯಂತ ಸಹಾನುಭೂತಿಯಿಂದ ಕೇಳಿ, "ಈಗತಾನೆ ಕೃಷ್ಣಶಾಸ್ತ್ರಿಗಳು ಕನ್ನಡದ ಪ್ರಾಧ್ಯಾಪಕರಾಗಿ ನೇಮಿತರಾಗಿದ್ದಾರೆ, ಅವರನ್ನು ಒಂದು ಬಾರಿ ಕಂಡು ವಿಚಾರಿಸಿ ನೋಡಿ, ಅವರು ಒಪ್ಪಿದರೆ ಆಗಬಹುದು" ಎಂದು ಸಲಹೆಮಾಡಿದರು. ಕೃಷ್ಣಶಾಸ್ತ್ರಿಗಳು ಕೆಲವುಕಾಲ ಇಂಟರ್‌ಮಿಾಡಿಯೆಟ್ಟಿನಲ್ಲಿ ನನಗೆ ಗುರುಗಳಾಗಿದ್ದರೂ ಅವರ ಪರಿಚಯದ ಲಾಭ ನನಗೆ ಆಗಿರಲಿಲ್ಲ. ಮೇಲುನೋಟಕ್ಕೆ ಅವರು ತುಂಬಾ ಕಟ್ಟುನಿಟ್ಟಿನ ಅಧ್ಯಾಪಕರಂತಿದ್ದರು. ಆದರೂ ತುಂಬ ಧೈರ್ಯಮಾಡಿಕೊಂಡು, ಒಂದು ದಿನ, ಬಸವನಗುಡಿಯಲ್ಲಿದ್ದ ಅವರ ಮನೆಗೆ ಹೋಗಿ, ನನ್ನ ಪ್ರವರವನ್ನೆಲ್ಲ ಹೇಳಿಕೊಂಡು "ದೊಡ್ಡಮನಸ್ಸುಮಾಡಿ ನನಗೆ ಕನ್ನಡ ಕಲಿಯಲು ಅವಕಾಶ ಕಲ್ಪಿಸಿಕೊಡಬೇಕು" ಎಂದು ಕೋರಿದೆ. ತಕ್ಷಣವೇ ಅವರು "ಆಗಲಪ್ಪ ಮೈಸೂರು ಕಾಲೇಜಿಗೆ ಅರ್ಜಿ ಹಾಕಿಕೊಳ್ಳಿ, ನೋಡೋಣ" ಎಂದು ಹೇಳಿದರು. ಹೆಚ್ಚು ಮಾತನ್ನಾಡದಿದ್ದರೂ, ಆಡಿದ ಆ ಒಂದೆರಡು ನುಡಿಗಳೇ ನನಗೆ ಹುರುಪನ್ನುಂಟು ಮಾಡಿತು.

ನಿಯಮಕ್ಕನುಸಾರವಾಗಿ, ಸಾಕಷ್ಟು ವಿವರಗಳ ಸಮೇತ ಮಹಾರಾಜಾ ಕಾಲೇಜಿಗೆ ಅರ್ಜಿ ಹಾಕಿಕೊಂಡಿದ್ದಾಯಿತು. ಮುಂದೆ ಏನಾಗುವುದೋ ಎಂದು ಚಾತಕಪಕ್ಷಿಯಂತೆ ನಿರೀಕ್ಷಿಸುತ್ತಿದ್ದೆ. ಒಂದು ದಿನ ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಜೆ. ಸಿ. ರಾಲೋ ಅವರಿಂದ ಪತ್ರಬಂದಿತು. ಆತುರಾತುರವಾಗಿ ತೆರೆದುನೋಡಿದಾಗ ನನ್ನಮನಸ್ಸು ಕುಸಿಯಿತು. ಆ ಪತ್ರದಲ್ಲಿ ಹೀಗಿತ್ತು :

"With reference to his application for admission to the I B.A. (Hons) class in Kannada Mr. G. Varadaraja Rao is informed that he cannot be admitted to that class." (dated 27th June 1939).

ಪತ್ರದ ಒಕ್ಕಣೆಯನ್ನು ಓದಿದಮೇಲೆ ಮುಂದೆ ಏನುಮಾಡಬೇಕೆಂದು ತೋಚದಂತಾಯಿತು. ಆದರೂ ತೀರ ನಿರಾಶನಾಗದೆ, ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರನ್ನು ಹೋಗಿ ಕಂಡೆ. ಅವರು ಇಂಗ್ಲಿಷಿನ ಪ್ರಾಧ್ಯಾಪಕರಷ್ಟೇ ಅಲ್ಲದೆ, ಕನ್ನಡದ ಗೌರವ ಪ್ರಾಧ್ಯಾಪಕರೂ ಆಗಿದ್ದುದರಿಂದ ಏನಾದರೂ ನೆರವು ಮಾಡುವರೇನೋ ಎಂದು ಚಪಲ. ಅವರು ನಗುನಗುತ್ತ, "ಮೈಸೂರಿಗೆ ಹೋಗಿ ಶ್ರೀಮಾನ್ ಕೃಷ್ಣಶಾಸ್ತ್ರಿಗಳನ್ನೂ ವೈಸ್–ಛಾನ್ಸೆಲರ್ ಶ್ರೀಮಾನ್ ಎನ್. ಎಸ್. ಸುಬ್ಬರಾಯರನ್ನೂ ಖುದ್ದಾಗಿ ನೋಡಿ, ಬೇಕಿದ್ದರೆ ನನ್ನ ಹೆಸರನ್ನೂ ತಿಳಿಸಿ" ಎಂದು ಬೆನ್ನು ತಟ್ಟಿದರು.

ಮಾರನೆಯ ದಿನವೇ ಮೈಸೂರಿಗೆ ಬಂದು, ಮೊದಲು ಕೃಷ್ಣಶಾಸ್ತ್ರಿಗಳನ್ನು ಕಂಡೆ, ಅವರು "ನಾನೇನೋ ಶಿಫಾರಸು ಮಾಡಿದ್ದೇನಪ್ಪ; ಪ್ರಿನ್ಸಿಪಾಲ್ ಒಪ್ಪದಿದ್ದರೆ ನಾನೇನು ಮಾಡುವುದಕ್ಕಾಗುತ್ತೆ? ಅವನೋ ಫರಂಗಿಯವನು. ಒಂದು ಬಾರಿ ಮನಸ್ಸುಮಾಡಿದರೆ ಬದಲಾಯಿಸುವುದು ಕಷ್ಟ" ಎಂದರು. ಬಳಿಕ ಶ್ರೀಮಾನ್ ಎನ್. ಎಸ್. ಸುಬ್ಬರಾಯರನ್ನೂ ಕಂಡೆ. ಏನೂ ಪ್ರಯೋಜನ ವಾಗಲಿಲ್ಲ. ಕಡೆಗೆ ಎಲ್ಲೂ ಇಲ್ಲದ ಧೈರ್ಯದಿಂದ ಪ್ರಿನ್ಸಿಪಾಲ್ ಜೆ. ಸಿ. ರಾಲೋ ಅವರನ್ನೇ ಭೇಟಿಯಾದೆ. ಆತ ಬಹಳ ಸಹಾನುಭೂತಿಯಿಂದ, ನಾನು ಆಡಿದ ಹರಕು ಮುರಕು ಇಂಗ್ಲಿಷ್ ಮಾತುಗಳನ್ನಾಲಿಸಿ, ಮುಗುಳ್ನಗುತ್ತ "Yes, I remember, your professor has strongly recommended your case. Ask the head clerk to bring your application" ಎಂದು ಸೂಚಿಸಿದರು. ಆ ಕೂಡಲೆ ನನ್ನ ಅರ್ಜಿಯನ್ನು ಮತ್ತೊಮ್ಮೆ ಪರಿಶೀಲಿಸಿ ತಕ್ಷಣವೇ ಅವರು ತಾತ್ಕಾಲಿಕವಾಗಿ ನನಗೆ ಕನ್ನಡ ಆನರ್ಸ್ ತರಗತಿಗೆ ಪ್ರವೇಶ ದೊರಕಿಸಿಕೊಟ್ಟರು. ಈ ವಿಷಯವನ್ನು ನಾನು ಕೃಷ್ಣಶಾಸ್ತ್ರಿಗಳಿಗೆ ತಿಳಿಸಿದಾಗ ಅವರಿಗೆ ನನಗಿಂತ ಹೆಚ್ಚು ಸಂತೋಷವೂ ವಿಸ್ಮಯವೂ ಆಯಿತು. "ನಾಳೆಯಿಂದಲೇ ತರಗತಿಗೆ ಬಾ ಇನ್ನು ಮುಂದಿನ ಹೊಣೆ ಅವನಿಗೆ ಸೇರಿದ್ದು" ಎಂದರು. ಅಂತೂ ಕನ್ನಡ ಆನರ್ಸ್

ತರಗತಿಗೆ ಸೇರಬೇಕೆಂಬ ನನ್ನ ಹಂಬಲ ಕೃಷ್ಣಶಾಸ್ತ್ರಿಗಳ ಕೃಪೆಯಿಂದಲೂ, ಇಂಗ್ಲಿಷ್ ಪ್ರಾಧ್ಯಾಪಕರ ಸಮಯೋಚಿತವಾದ ಸಹಾನುಭೂತಿಯಿಂದಲೂ ನೆರವೇರಿತು. ನನ್ನ ಅಭಿರುಚಿಗೂ ಅಧ್ಯಯನಕ್ಕೂ ಪರಸ್ಪರ ಮೇಳವುಂಟಾಗಿ ನನ್ನ ಜೀವನದ ಕ್ರಮವೇ ಅಂದಿನಿಂದ ಮಾರ್ಪಟ್ಟಿತು. ಮನಸ್ಸು ಪ್ರಸನ್ನ ವಾಯಿತು. ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಹೇಳಿದಂತೆಯೇ ಸುಮಾರು ಒಂದು ತಿಂಗಳಾದ ಮೇಲೆ ಜೆ. ಸಿ. ರಾಲೋ ಅವರಿಂದ ಬಂದ ಮತ್ತೊಂದುಪತ್ರ ನನಗೆ ಅತ್ಯಂತ ಆಪ್ಯಾಯಮಾನವೆನಿಸಿತ್ತು, ಅದರಲ್ಲಿನ ಒಕ್ಕಣೆ ಹೀಗಿತ್ತು.

"Mr. G. Varadaraja Rao is informed that his admission to the Honors Course in Kannada has been approved by the University". (dated 18th July 1939).

ಅಂದು ನನಗಾದ ಆನಂದಕ್ಕೆ ಪಾರವೇ ಇರಲಿಲ್ಲ.

ಕೃಷ್ಣಶಾಸ್ತ್ರಿಗಳನ್ನು ದೂರದಿಂದ ಕಂಡು ಬೆದರಿದ್ದ ನನಗೆ ಅವರ ಅಭಿಮಾನದ ಆಳವನ್ನು ಅರಿತಂತೆಲ್ಲ ನನ್ನ ಅಭಿಪ್ರಾಯ ಬದಲಾಯಿತು. ತರಗತಿಯ ಪಾಠ ಪ್ರವಚನಗಳಲ್ಲಿ ಅವರು ನನ್ನ ಪ್ರಗತಿಯ ಕಡೆ ವಿಶೇಷವಾದ ಲಕ್ಷ್ಯವನ್ನಿಟ್ಟಿದ್ದರು. ಅವರ ವಿಶೇಷವಾದ ಶಿಫಾರಸ್ಸಿನ ಮೇಲೆ ಬಂದವನಾದ್ದರಿಂದ, ಈ ಬಗ್ಗೆ ಆಗಿಂದಾಗ್ಗೆ ಎಚ್ಚರಿಸುತ್ತಲೂ ಇದ್ದರು. ನನಗೆ ಹಳಗನ್ನಡದ ವ್ಯಾಕರಣವನ್ನು ಕಲಿಸುತ್ತಿದ್ದ ಗುರುಗಳು, ನನ್ನ ವ್ಯಾಕರಣದ ಅಭಿರುಚಿಯನ್ನು ಕೃಷ್ಣಶಾಸ್ತ್ರಿಗಳಿಗೆ ತಿಳಿಸಿದಾಗ ಬಹಳ ಸಂತೋಷಪಟ್ಟುಕೊಂಡು ಉತ್ತೇಜನ ನೀಡುತ್ತಿದ್ದರು. ಇದಲ್ಲದೆ, ಕತೆ ಕವಿತೆಗಳಲ್ಲಿದ್ದ ನನ್ನ ಆಸಕ್ತಿಯನ್ನು ಕೈಬಿಡದೆ ಬೆಳಸಿಕೊಳ್ಳುವಂತೆ ಸಲಹೆ ಮಾಡುತ್ತಿದ್ದರು. ನನ್ನ ಅದೃಷ್ಟವಶಾತ್ ಆ ವರ್ಷ ಮಹಾರಾಜ ಕಾಲೇಜಿನ ಕರ್ಣಾಟಕಸಂಘದವರು ಏರ್ಪಡಿಸಿದ್ದ ಸಣ್ಣಕತೆಯ ಸ್ಪರ್ಧೆಯಲ್ಲಿ ನನಗೇ ಪ್ರಥಮಬಹುಮಾನ ಬಂದಾಗ, ಬಹಳ ಮೆಚ್ಚಿಕೊಂಡು, ಬೆಂಗಳೂರಿನಲ್ಲಿ ನಡೆದ ಸಣ್ಣಕತೆಗಾರರ ಸಮ್ಮೇಳನಕ್ಕೂ ನನ್ನನ್ನು ಕಳುಹಿಸಿದ್ದರು.

ವಿದ್ಯಾರ್ಥಿ ಲೇಖಕರನ್ನು ಕಂಡರೆ ಕೃಷ್ಣಶಾಸ್ತ್ರಿಗಳಿಗೆ ತುಂಬ ವಾತ್ಸಲ್ಯ. ಅವರ ಆ ಅಭಿಮಾನದ ಒಂದೆರಡು ನಿದರ್ಶನಗಳನ್ನು ಇಲ್ಲಿ ಹೇಳಬಯಸುತ್ತೇನೆ: ಒಂದು ಬಾರಿ "ಪ್ರಬುದ್ಧ ಕರ್ಣಾಟಕ"ದಲ್ಲಿ ಪ್ರಕಟಿಸಲೆಂದು ಒಂದು ಪದ್ಯವನ್ನು ಅವರ ಕೈಯಲ್ಲಿ ಕೊಟ್ಟೆ. ಅವರು "ಇನ್ನೂ ನಾಲ್ಕಾರು ಪದ್ಯಗಳಿದ್ದರೆ ತಂದುಕೊಂಡು ಚೆನ್ನಾಗಿರುವುದನ್ನು ನಾನೇ ಆರಿಸಿಕೊಳ್ಳುತ್ತೇನೆ" ಎಂದರು. ಹಾಗೆಯೇ ಮಾಡಿದೆ. ಅವರೇ ಒಂದನ್ನು ಆರಿಸಿಕೊಂಡು ಪ್ರಕಟಿಸಿದಾಗ ನನಗೆ ಆದ ಆನಂದ ಅನಿರ್ವಚನೀಯ. ಹೀಗೆಯೇ ಮತ್ತೊಮ್ಮೆ ಒಂದು ಘಟನೆ ನಡೆಯಿತು. ಪಂಪನ ಶತಮಾನೋತ್ಸವವನ್ನು ನಡೆಸಿದ ಸಂದರ್ಭದಲ್ಲಿ "ಪ್ರಬುದ್ಧ ಕರ್ಣಾಟಕ"ದ

ವಿಶೇಷಾಂಕವೊಂದನ್ನು ಪ್ರಕಟಿಸಬೇಕೆಂದಿದ್ದರು. ಆಗ, ಪಾಠ ಮುಗಿದಮೇಲೆ, ನನ್ನನ್ನು ಕರೆದು “ಪಂಪನ ಮೇಲೆ ಬರೆದಿರುವ ಪದ್ಯವೇನಾದರೂ ಇದೆಯೇ ನಿನ್ನಲ್ಲಿ” ಎಂದು ಕೇಳಿದರು. ನಾನು ಪಂಪನನ್ನು ಕುರಿತು ಬರೆದಿದ್ದ ಅಷ್ಟ ಷಟ್ಪದಿಯೊಂದನ್ನು ತೆಗೆದುಕೊಂಡುಹೋಗಿ ಕೊಟ್ಟೆ. ಅವರು ಅದನ್ನು ಹೃತ್ಪೂರ್ವಕ ವಾಗಿ ಮೆಚ್ಚಿಕೊಂಡಿದ್ದೇ ಅಲ್ಲದೆ “ಪ್ರಬುದ್ಧ ಕರ್ಣಾಟಕ”ದ ಮೊದಲ ಪುಟದಲ್ಲಿಯೇ ಪ್ರಕಟಿಸಿದ್ದನ್ನು ಕಂಡು ನನಗೆ ಕ್ಷಣಕಾಲ ಮೈಮರೆಯುವಂತಾಯಿತು. ಇದನ್ನು ಕಂಡ ಎಷ್ಟೋ ಜನ ನನ್ನ ಗೆಳೆಯರೂ ವಿಶ್ವಾಸವುಳ್ಳ ಹಿರಿಯರೂ ನನಗೆ ಅಭಿನಂದನೆ ಯನ್ನೂ ಸಲ್ಲಿಸಿದ್ದುಂಟು! (ಆ ಕಾಲದಲ್ಲಿ “ಪ್ರಬುದ್ಧ ಕರ್ಣಾಟಕ”ದ ಮೊದಲನೆಯ ಪುಟದಲ್ಲಿ ಪದ್ಯ ಪ್ರಕಟವಾಗುವುದು ಒಂದು ಹೆಮ್ಮೆಯ ಸಂಗತಿಯಾಗಿತ್ತು.) ಮೈಸೂರು ವಿಶ್ವವಿದ್ಯಾನಿಲಯದ ರಜತೋತ್ಸವ ಸಂದರ್ಭದಲ್ಲಿ ಕವಿಸಮ್ಮೇಳನವನ್ನು ಏರ್ಪಡಿಸಿದಾಗ ಭಾಗವಹಿಸಿದ ವಿದ್ಯಾರ್ಥಿಕವಿಗಳಲ್ಲಿ ನಾನೂ ಒಬ್ಬನಾಗಿದ್ದೆ. ಇಂಥ ಸಣ್ಣ ಪುಟ್ಟ ಪ್ರಸಂಗಗಳು ಎಷ್ಟೋ ನೆನಪಾಗುತ್ತವೆ. ಮುಖ್ಯವಾಗಿ ಕೃಷ್ಣ ಶಾಸ್ತ್ರಿಗಳ ಈ ವಿದ್ಯಾರ್ಥಿಪ್ರೇಮ ಅನುಭವಿಸಿ ಅರಿಯುವಂತಹುದು. ದೈವಾನು ಗ್ರಹದಿಂದ ಅವರ ನಿರೀಕ್ಷೆಗೆ ತಕ್ಕಂತೆ ನನ್ನ ವ್ಯಾಸಂಗ ತೃಪ್ತಿಕರವಾಗಿ ಮುಂದು ವರಿಯಿತು. ಶ್ರೀಮಾನ್ ತೀ. ನಂ. ಶ್ರೀಕಂಠಯ್ಯ, ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್, ಶ್ರೀಮಾನ್ ಕೆ. ವಿ. ಪುಟ್ಟಪ್ಪ ಮೊದಲಾದ ಅಧ್ಯಾಪಕರ ನೇತೃತ್ವದಲ್ಲಿ ಅಂದಿನ ಕನ್ನಡ ವಿದ್ಯಾರ್ಥಿಗಳ ವ್ಯಾಸಂಗ ಅತ್ಯಂತ ಉತ್ಸಾಹ ಪೂರ್ಣವಾಗಿ ಸಾಗುತ್ತಿತ್ತು. ತರಗತಿಗೆ ಸೇರುವ ವಿದ್ಯಾರ್ಥಿಗಳ ಸಂಖ್ಯೆ, ಅಲ್ಪ ವೆನ್ನಿಸಿದ್ದರೂ, ಇಂಥ ಕನ್ನಡ ಅಧ್ಯಾಪಕರ ಮಾರ್ಗದರ್ಶನದಲ್ಲಿ ಅಂದಿನ ವ್ಯಾಸಂಗ ಪರಿಶ್ರಮಪೂರ್ಣವಾಗಿರುತ್ತಿತ್ತು.

ಒಳ್ಳೆಯ ಕೆಲಸವನ್ನು ಮಾಡಿದಾಗ ಕೃಷ್ಣಶಾಸ್ತ್ರಿಗಳ ಕೈಯಲ್ಲಿ ಹೊಗಳಿಸಿ ಕೊಳ್ಳುವುದು ಎಷ್ಟು ಸಹಜವೋ, ಅವರಿಗೆ ಒಪ್ಪಿಗೆಯಾಗದಿದ್ದಾಗ ಬೈಸಿಕೊಳ್ಳು ವುದೂ ಅಷ್ಟೇ ಸಹಜವಾಗಿತ್ತು. ವಿದ್ಯಾರ್ಥಿಗಳು ಹಸಿದು ಒಣಮೋರೆಯಲ್ಲಿರುವು ದನ್ನು ಕಂಡಾಗ ಅವರು ತಾವಾಗಿ ವಿಚಾರಿಸಿ, ಸುಮ್ಮನಿದ್ದ ಸಲುವಾಗಿ ಟೀಕಿಸಿದ ಪ್ರಸಂಗಗಳು ಹಲವಾರು. ಒಮ್ಮೆ, ಒಬ್ಬ ವಿದ್ಯಾರ್ಥಿ ಪರೀಕ್ಷೆಯ ಶುಲ್ಕವನ್ನು ಕೊಡಲಾರದೆ ತೆಪ್ಪಗಿದ್ದಾಗ, ಈ ವಿಷಯ ತಿಳಿದಕೂಡಲೆ ಅವನನ್ನು ಚೆನ್ನಾಗಿ ಬೈದು, ತಾವು ದುಡ್ಡು ಕೊಟ್ಟಿದ್ದುಂಟು. ನನಗೆ ಆನರ್ಸ್ ಪರೀಕ್ಷೆಯಲ್ಲಿ ಮೊದಲ ನೆಯ ತರಗತಿಗೆ ಕೆಲವು ಅಂಕಗಳು ಮಾತ್ರವೇ ಕಡಮೆಯಾದಾಗ, ಕೃಷ್ಣಶಾಸ್ತ್ರಿಗಳಿಗೆ ಆದ ಕೋಪ ಹೇಳತೀರದು. ಮುಂದೆ ಎಂ.ಎ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿ ಯಲ್ಲಿ ತೇರ್ಗಡೆಯಾದ ಅನಂತರವೇ ಅವರ ಕೋಪ ಶಮನವಾದದ್ದು! ಅವರ ಈ ಸದಾಗ್ರಹ ಎಷ್ಟೋ ಜನಕ್ಕೆ ಅನುಗ್ರಹಸದೃಶವಾಗಿತ್ತು. ವಾಸ್ತವಿಕವಾಗಿ ನನಗೆ ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆಯಾದಾಗ ತಕ್ಷಣವೇ ನನ್ನ ಮನಸ್ಸು ಇಬ್ಬರು

ಪ್ರಾಧ್ಯಾಪಕರನ್ನು ನೆನೆಯುವಂತಾಯಿತು. ಒಬ್ಬರು ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ; ಮತ್ತೊಬ್ಬರು ಜೆ. ಸಿ. ರಾಲೋ. ಕೃಷ್ಣಶಾಸ್ತ್ರಿಗಳನ್ನು ನೇರವಾಗಿ ಕಂಡು, ನನ್ನ ಕೃತಜ್ಞತೆಯನ್ನು ಸಮರ್ಪಿಸಿ ಪ್ರಶಸ್ತಿಪತ್ರವನ್ನು ಕೇಳಿದಾಗ ಅವರು ಅತ್ಯಂತ ಅಭಿಮಾನದಿಂದ ಬರೆದುಕೊಟ್ಟರು. ಕನ್ನಡಕ್ಕಾಗಿ ಮುಡಿಪಾಗಿದ್ದ ಸುವರ್ಣ ಪದಕಗಳೂ, ಬಹುಮಾನಗಳೂ ನನಗೆ ಬಂದುದನ್ನು ಕಂಡು ಹಿಗ್ಗಿದ್ದಲ್ಲದೆ, ತಮ್ಮ ಪ್ರಶಸ್ತಿ ಪತ್ರದಲ್ಲಿ ನಾನು ಕನ್ನಡ ಆನರ್ಸ್ ತರಗತಿಗೆ ಬಂದು ಸೇರಿದ್ದು ಮೊದಲ್ಗೊಂಡು, ಆ ನಾಲ್ಕು ವರ್ಷಗಳಲ್ಲಿ ಅವರು ನನ್ನ ಬಗ್ಗೆ ಇಟ್ಟಿದ್ದ ಅಭಿಮಾನವನ್ನೆಲ್ಲ ಸ್ಪಷ್ಟಪಡಿಸಿದ್ದರು. ಮಾತು ಮಾತಿನಲ್ಲಿಯೂ ಅವರ ಮಮತೆ ಪ್ರಕಟವಾಗುವಂತಿತ್ತು. ಇದೇ ಸಂದರ್ಭದಲ್ಲಿ. ನನ್ನ ವಿಚಾರವನ್ನರಿತ ಜೆ. ಸಿ. ರಾಲೋ ಅವರು ಬರೆದ ಒಂದು ಪತ್ರವೂ ಸಹ ಇಲ್ಲಿ ಸ್ಮರಣಾರ್ಹವಾದುದು.[1] ಕನ್ನಡ ಆನರ್ಸ್ ತರಗತಿಗೆ ಸೇರಲು ಅವರು ಮಾಡಿದ ಸಕಾಲಿಕ ಸಹಾಯವನ್ನೂ ನನ್ನ ವ್ಯಾಸಂಗ ಪೂರ್ಣವಾದುದನ್ನೂ ಕುರಿತು, ಆಗ ಜಯಪುರದಲ್ಲಿ ಕೆಲಸದಲ್ಲಿದ್ದ ಅವರಿಗೆ ಕೃತಜ್ಞತಾ ಪೂರ್ವಕವಾಗಿ ನಾನು ಕಾಗದ ಬರೆದಾಗ, ಅವರು ತಕ್ಷಣವೇ ಪ್ರತ್ಯುತ್ತರವನ್ನು ಬರೆದು ನನ್ನನ್ನು ದೂರದಿಂದಲೇ ಆಶೀರ್ವದಿಸಿದ್ದರು. ಶಿಷ್ಯವಾತ್ಸಲ್ಯಪೂರ್ಣವಾದ ಆತನ ನುಡಿಗಳನ್ನೂ ನಾನು ಎಂದಿಗೂ ಮರೆಯುವಂತಿಲ್ಲ.

ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆಯಾದ ಬಳಿಕ ಸಂಶೋಧನ ವಿದ್ಯಾರ್ಥಿಯಾಗಿ ಇನ್ನೂ ಕೆಲವುಕಾಲ ಕೃಷ್ಣಶಾಸ್ತ್ರಿಗಳ ಸಾನ್ನಿಧ್ಯದಲ್ಲಿಯೇ ಇದ್ದು ಕೆಲಸ ಮಾಡಬೇಕು ಎನ್ನಿಸಿತು. ಈ ಅಪೇಕ್ಷೆಯನ್ನು ಅವರಲ್ಲಿ ವಿನಂತಿಮಾಡಿಕೊಂಡೆ. ಆಗ ಅವರು "ಅದೆಲ್ಲಾ ಈಗ ಆಗೋ ಹಾಗಿಲ್ಲ. ಸದ್ಯದಲ್ಲಿ ಎಲ್ಲಿ ಕೆಲಸ ಸಿಕ್ಕಿದರೆ ಅಲ್ಲಿ ಇರು. ಅವಕಾಶವಾದರೆ ಎಂದಾದರೂ ಒಂದು ದಿನ ವಿಶ್ವವಿದ್ಯಾನಿಲಯಕ್ಕೆ ಬರಬಹುದು" ಎಂದು ಸ್ವಲ್ಪ ಕಟುವಾಗಿಯೇ ನುಡಿದರು. ನನಗೆ ಆಶಾಭಂಗವಾಯಿತು. ಮುಂದೆ ಮಾತನಾಡದೆ ಸುಮ್ಮನಾದೆ. ಅನಂತರ ತಮ್ಮ ಉದಾಹರಣೆಯನ್ನೇ ಹೇಳಿ ಸಮಾಧಾನಪಡಿಸಿದರು. (ಅವರೂ ಸಹ ಮೊದಲು ಕಛೇರಿಯಲ್ಲಿ ಗುಮಾಸ್ತರಾಗಿದ್ದು ಅನಂತರ ಅಧ್ಯಾಪಕರಾಗಿದ್ದರು.) ಕನ್ನಡದ ವ್ಯಾಸಂಗವನ್ನು

---

[1]. I was delighted to hear of your great success or rather successes for evidently you have "swept the board" in Kannada. It just shows how much harm some rules might do if they were allowed to defy reason. There should be a good career for you now, all the more because you have not depended entirely on examination performance but have always been producing things of your own. I wish I could have been at your convocation! It will be a pleasure to me to hear how you get on (Jaipur, Aug. 27th, 1943).

ಮುಗಿಸಿದ ನನಗೆ ಕಾಲೇಜಿನಲ್ಲಿ ತಕ್ಷಣ ಕೆಲಸ ದೊರೆಯದಿದ್ದರೂ, ದೇವರ ದಯೆಯಿಂದ ಕನ್ನಡದ ಸಂಪರ್ಕ ತಪ್ಪಲಿಲ್ಲ. ಸರ್ಕಾರದ ಕನ್ನಡ ಭಾಷಾಂತರ ಕಛೇರಿಯಲ್ಲಿ ಒಂದು ಹುದ್ದೆ ದೊರಕಿತು. ಅಲ್ಲಿ ಕೃಷ್ಣಶಾಸ್ತ್ರಿಗಳ ಶಿಷ್ಯವರೇಣ್ಯರಲ್ಲಿ ಒಬ್ಬರೂ, ಹೆಸರುವಾಸಿಯಾದ ಸಾಹಿತಿಗಳೂ ಆದ ರಾಜಸೇವಾಸಕ್ತ ಸಿ. ಕೆ. ವೆಂಕಟರಾಮಯ್ಯನವರ ಆಶ್ರಯದಲ್ಲಿ ಕೆಲಸಮಾಡುವ ಸುಯೋಗವೇ ದೊರೆಯಿತು.

ನಾನು ಉದ್ಯೋಗವನ್ನು ಅವಲಂಬಿಸಿದ ಮೇಲೆ ಕೃಷ್ಣಶಾಸ್ತ್ರಿಗಳನ್ನು ಆಗಿಂದಾಗ್ಗೆ ಸಂಧಿಸುವ ಅವಕಾಶ ಉಂಟಾಗಿತ್ತು. ಒಮ್ಮೆ, ನಾನು ಬರೆದಿದ್ದ "ಕಲಿಕರ್ಣ" ಎಂಬ ಪುಸ್ತಕವನ್ನು ಅವರಿಗೆ ಕಳುಹಿಸಿಕೊಟ್ಟಿದ್ದೆ. ಅದರಲ್ಲಿನ ಚಿತ್ರಗಳನ್ನು ಕಂಡು ಅವರಿಗೆ ಆನಂದವಾಯಿತು. ಅನಂತರ ಮುಖತಃ ಕಂಡಾಗ "ಪುಸ್ತಕ ಚೆನ್ನಾಗಿದೆಯಪ್ಪ. ಚ. ವಾಸುದೇವಯ್ಯನವರ 'ಭೀಷ್ಮಚರಿತೆ' ಆದ ಮೇಲೆ ಅಂಥ ಇನ್ನೊಂದು ಪುಸ್ತಕ ಬಂದಂತಾಯಿತು" ಎಂದರು. ಗುರುಗಳ ಈ ಔದಾರ್ಯದ ಮಾತುಗಳನ್ನು ಕೇಳಿ ನಾನು ಕ್ಷಣಕಾಲ ಮೂಕವಿಸ್ಮಿತನಾದೆ. ಇನ್ನೊಮ್ಮೆ 'ವಿಜಯದಶಮಿ' ಎಂಬ ಕವನಸಂಕಲನವೊಂದನ್ನು ಕಳುಹಿಸಿಕೊಟ್ಟಾಗ ಅದನ್ನು ಓದಿದಕೂಡಲೆ ಒಂದು ಪತ್ರಬರೆದರು. ಆ ಪತ್ರದ ತುಂಬ ಅವರ ವಿಶ್ವಾಸ ಎದ್ದು ಕಾಣುವಂತಿದೆ.[1] ಕನ್ನಡ ಭಾಷಾಂತರ ಕಛೇರಿಯಲ್ಲಿದ್ದವನು, ಕಾಲೇಜಿನ ಅಧ್ಯಾಪಕನಾಗಿ ವಿಶ್ವವಿದ್ಯಾನಿಲಯಕ್ಕೆ ಬಂದಾಗ ಅವರಿಗಾದ ಆನಂದ ಅಷ್ಟಿಷ್ಟಲ್ಲ. ಅವರು ಎಂದೋ ಆಡಿದ್ದ ಮಾತು ನಿಜವಾಯಿತೆಂದು ನಾನೂ ಸಹ

---

[1] "Thank you for the gift of your 'ವಿಜಯದಶಮಿ' on 'ವಿಜಯದಶಮಿ' day. I have just finished reading it.

.... I do not see how anybody can say your poetry is cold after reading pieces like ಪಟ್ಟಣ and ದುರಂತ. You have immortalised ಚಿತ್ರದುರ್ಗ by your poetic and prose writings thereon and justified your stay there.

I am glad you are now on the staff of the Maharaja's College. Make full use of the Libraries and fuller use of T. N. S. while at Mysore.

Let me conclude this with your own line of ನಾಡಹಬ್ಬ and wish you the best of success.

ಇಂಥ ಹಬ್ಬವೆ ನೂರು ಸಾರಲಿ
ಊರು ಕೇರಿಯು ತಣಿಯಲಿ."

ಬಸವನಗುಡಿ ೩-೧೦-೧೯೫೬

ಅವರನ್ನು ಆಗಿಂದಾಗ್ಗೆ ನೆನೆಯುತ್ತಲೇ ಇದ್ದೆ. ಚಿತ್ರದುರ್ಗದಲ್ಲಿದ್ದ ನನ್ನನ್ನು ಕನ್ನಡಕೋಶದ ಕಛೇರಿಗೆ ಕರೆಸಿಕೊಳ್ಳಬೇಕೆಂದು ಕಾಗದವನ್ನು ಬರೆದಿದ್ದರು. ಅಂತೂ, ನಾನು ಎಲ್ಲಿಯೇ ಇರಲಿ, ಅವರ ಅಭಿಮಾನ ಎಂದಿಗೂ ಕಡಮೆಯಾಗಿರಲಿಲ್ಲ. ಕಂಡಾಗಲೆಲ್ಲ ಯೋಗಕ್ಷೇಮವನ್ನೂ ವಿಚಾರಿಸುತ್ತಿದ್ದರು.

ಮೈಸೂರಿನ ಕಾಲೇಜಿಗೆ ಬಂದಮೇಲೆ ಒಂದು ಬಾರಿ ಅವರಿಗೆ ಪತ್ರ ಬರೆಯಬೇಕಾಗಿ ಬಂದಿತು. ನಾನು ಎಂ.ಎ. ತರಗತಿಯಲ್ಲಿದ್ದಾಗ ಕುಮಾರವ್ಯಾಸ ಭಾರತದಲ್ಲಿ 'ಱ' ಮತ್ತು 'ೞ' ಕಾರಗಳ ಪ್ರಯೋಗವನ್ನು ಕುರಿತು ಒಂದು ಪ್ರಬಂಧವನ್ನು ಬರೆಯುವಂತೆ ಹೇಳಿದ್ದರು. ನನ್ನ ಮಿತ್ರರ ನೆರವನ್ನು ಪಡೆದು ಪ್ರಬಂಧವನ್ನೇನೋ ಬರೆದೆ. ಅದನ್ನು ಓದಿನೋಡಿ, ಕೆಲವು ಸಲಹೆಗಳನ್ನಿತ್ತು, ತಿದ್ದಿ ಪ್ರಕಟಿಸುವಂತೆ ತಿಳಿಸಿದರು. ನಾನು ಅದನ್ನು ಪ್ರಕಟಿಸದೆ ಹಾಗಯೇ ಸುಮ್ಮನಿದ್ದೆ. ಒಮ್ಮೆ ಕಾಗದ ಬರೆದು ಅದನ್ನು ತಪ್ಪದೆ ಪ್ರಕಟಿಸುವಂತೆ ಒತ್ತಾಯಮಾಡಿದರು. ಅಷ್ಟೇ ಅಲ್ಲದೆ, ಆಗ ಬೆಂಗಳೂರಿನಲ್ಲಿಯೇ ಇದ್ದ ತೀ. ನಂ. ಶ್ರೀಕಂಠಯ್ಯನವರಿಗೂ ತಿಳಿಸಿ, ಅದನ್ನು ಪ್ರಕಟಿಸುವಂತೆ ಹೇಳಿಕಳುಹಿಸಿದರು. ಕಡೆಗೆ ಅದನ್ನು 'ಕನ್ನಡಸಾಹಿತ್ಯ ಪರಿಷತ್ಪತ್ರಿಕೆ'ಯಲ್ಲಿ ಪ್ರಕಟಿಸಲಾಯಿತು. (ಸಂ. XXX, ಸಂ. ೧, ಪು ೨೫-೩೮) ಅದನ್ನು ಓದಿದ ಹಲವರು ಮೆಚ್ಚಿಕೊಂಡರು. ಬೇರಾವುದೋ ಸಂದರ್ಭದಲ್ಲಿ ಆ ಲೇಖನಕ್ಕೆ ಹೆಚ್ಚು ಬೆಲೆ ಬಂದಿತೆಂದು ಅವರಿಗೆ ನಾನು ಕಾಗದ ಬರೆದಾಗ, ಅವರು ಹಿಂದಿನ ಕಥೆಯನ್ನೆಲ್ಲ ನೆನೆಸಿಕೊಂಡು ಕೂಡಲೆ ಒಂದು ಕಾಗದ ಬರೆದರು:

> .... ನಿಮ್ಮ ಕಾಗದ ತಲಪಿ ಸಂತೋಷವಾಯಿತು. ನಾನು ನಿಮಗೆ ಕುಮಾರವ್ಯಾಸನ ಮೇಲೆ ಎಂಟು ಹತ್ತು ವಿಷಯಗಳನ್ನು ಸೂಚಿಸಿ, ರಜೆ ತೆಗೆದುಕೊಂಡಂತೆ ಜ್ಞಾಪಕ. ಆ ವಿಷಯಗಳಲ್ಲಿ 'ಱ' ಮೇಲಣ ಪ್ರಬಂಧವೊಂದೇ ಬೆಳಕು ಕಂಡದ್ದು. ಅದನ್ನು ಬರೆಯುವಾಗಲೂ, ಪ್ರಕಟಿಸುವಾಗಲೂ ನಾನು ನಿಮಗೆ ತುಂಬ ಹಿಂಸೆ ಮಾಡಿದೆ. ಅದನ್ನು ಇನ್ನೂ ಉತ್ತಮಪಡಿಸುವುದು ಸಾಧ್ಯ. ಏನಾದರೂ ಆಗಲಿ ಅದು ಗಣ್ಯವಾಯಿತೆಂದು ಕೇಳಿ ಸಂತೋಷವಾಯಿತು. 'ವಚನ ಭಾರತ'ದಲ್ಲಿ ಕುಮಾರವ್ಯಾಸನ ಮೇಲೆ ಒಂದು ಟಿಪ್ಪಣಿ ಬರೆದಿದ್ದೇನೆ. ಅದನ್ನು ಯಾರೂ ಗಮನಿಸಿದಂತಿಲ್ಲ. ಅದೇ ಸಂಶೋಧನೆಗೊಂದು ದೊಡ್ಡವಿಷಯವಾಗುತ್ತದೆ. ಶ್ರೀ ಶ್ರೀಕಂಠಯ್ಯನವರ ನೇತೃತ್ವದಲ್ಲಿ ನಿಮ್ಮ ಕೆಲಸ ಉತ್ತಮವಾದೀತೆಂದೂ, ಅಭ್ಯುದಯ ದೊರೆಯುತ್ತದೆಂದೂ ನಂಬುತ್ತೇನೆ....

ಬಸವನಗುಡಿ<br>
೨-೨-೧೯೫೯

ಇಂತೀ ಆಶೀರ್ವಾದ<br>
ಎ. ಆರ್. ಕೃಷ್ಣಶಾಸ್ತ್ರಿ

ಹವಿನಾರು ವರ್ಷಗಳ ಹಿಂದಿನ ಘಟನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆದಿರುವ ಈ ಪತ್ರ ಅಭಿಮಾನಪೂರ್ಣವಾಗಿದೆ.

ಇತ್ತೀಚೆಗೆ ಮೈಸೂರಿಗೆ ಬಂದಾಗ ಅವರಿಗೆ "ಕುಮಾರರಾಮನ ಸಾಂಗತ್ಯಗಳು" ಎಂಬ ಪುಸ್ತಕವನ್ನು ಕೊಟ್ಟಾಗ, ಹಾಗೆಯೇ ಒಮ್ಮೆ ತಿರುವಿಹಾಕಿ, ಪರೀಕ್ಷಕರ ಅಭಿಪ್ರಾಯಗಳನ್ನೂ ಪರಿಶೀಲಿಸಿ, "ತುಂಬಾ ಕೆಲಸಮಾಡಿದ್ದೀರಿ. ವಿದ್ವಾಂಸರೂ ಬಹಳ ಒಳ್ಳೆಯ ಮಾತುಗಳನ್ನಾಡಿದ್ದಾರೆ. ಚಿತ್ರದುರ್ಗದಲ್ಲಿ ಇದ್ದದ್ದಕ್ಕೆ ಸಾರ್ಥಕವಾಯಿತು. ನನ್ನ ಕೈಯಲ್ಲಿ ಓದುವುದಕ್ಕೆ ಆಗುತ್ತೋ ಇಲ್ಲವೋ ಹೇಳಲಾರೆ" ಎಂದರು. ಆದರೆ ಸಾಯಂಕಾಲದ ವೇಳೆಗೆ ಅದರ ಬಹುಭಾಗವನ್ನು ಓದಿ ಸಂತೋಷಪಟ್ಟದ್ದಾಗಿ ತಿಳಿದುಬಂದಿತು. ಒಳ್ಳೆಯ ಕೆಲಸಕ್ಕೆ ಎಳ್ಳಷ್ಟೂ ಹಿಂತೆಗೆಯದೆ ಮೆಚ್ಚುವ ಇಂಥ ಹೃದಯವೈಶಾಲ್ಯವಿರುವ ವಿದ್ವಾಂಸರಾಗಲಿ, ಪ್ರಾಧ್ಯಾಪಕರಾಗಲಿ ಇರುವುದು ತುಂಬ ವಿರಳ. ವಿದ್ಯಾರ್ಥಿದೆಸೆಯಿಂದ ಅವರ ವಿಶ್ವಾಸವನ್ನು ಪಡೆದ ನನ್ನಂಥವರು ಕೃಷ್ಣಶಾಸ್ತ್ರಿಗಳ ಶಿಷ್ಯವೃಂದದಲ್ಲಿ ಎಷ್ಟು ಜನರಿದ್ದಾರೋ ಏನೋ ಹೇಳಲಳವಲ್ಲ !

ಕಟ್ಟಕಡೆಯದಾಗಿ, ನಮ್ಮ ಗುರುಗಳ ವಿಚಾರವಾಗಿ ನಡೆದ ಇನ್ನೊಂದು ಸಂದರ್ಭದೊಂದಿಗೆ ಈ ಲೇಖನವನ್ನು ಮುಗಿಸುತ್ತೇನೆ. ಮಾನಸಗಂಗೋತ್ರಿಯ ಕನ್ನಡ ಶಾಖೆಯಲ್ಲಿ ಕೃಷ್ಣಶಾಸ್ತ್ರಿಗಳ ಭಾವಚಿತ್ರವನ್ನು ಅನಾವರಣ ಮಾಡಬೇಕೆಂದು ನಿರ್ಧರಿಸಿದಾಗ, ಆ ಚಿತ್ರವನ್ನು ಕೊಡುವ ಮಹಾಭಾಗ್ಯ ನನ್ನ ಪಾಲಿಗೆ ಬಂದಿತು. ಈ ಸುದ್ದಿ ಶ್ರೀಯುತರಿಗೆ ತಿಳಿದರೆ ಏನೆನ್ನುವರೋ ಎಂದು ಅಳುಕು ನನ್ನನ್ನು ಕಾಡುತ್ತಿತ್ತು. ಏಕೆಂದರೆ, ನಾನು ವಿದ್ಯಾರ್ಥಿಯಾಗಿದ್ದಾಗ ಅವರ ಭಾವಚಿತ್ರವೊಂದನ್ನು ತೆಗೆದುಕೊಂಡು ಮನೆಗೆಹೋಗಿ ಸಹಿಮಾಡಿಕೊಡಬೇಕೆಂದು ಕೇಳಿದೆ. ಆಗ ಅವರು ತುಂಬ ಕೋಪಮಾಡಿಕೊಂಡರು. "ನನಗೆ ಇಂಥ ಭಕ್ತಿಬೇಕಿಲ್ಲ, ಹಾಗೆ ಭಕ್ತಿಯಿದ್ದರೆ ಅದು ಹೃದಯದಲ್ಲಿದ್ದರೆ ಸಾಕು. ಭಾವಚಿತ್ರ ತಗಲುಹಾಕಿ ಮೆರೆಸಬೇಕಾಗಿಲ್ಲ" ಎಂದು ಗದರಿಸಿದ್ದರು. ಅವಾಕ್ಕಾಗಿ ನಿಂತಿದ್ದ ನನ್ನನ್ನು ನೋಡಿದರು. ನಾನು ಮನೆಬಿಟ್ಟು ಹೊರಗೆ ಬಂದೆ, ಕೂಡಲೇ ಕರೆದರು. ಆ ವೇಳೆಗೆ ಅವರಿಗೇ ಮನಸ್ಸು ಕರಗಿತೋ ಏನೋ ! "ತಾ ಇಲ್ಲಿ. ನಾನು ಸಹಿ ಮಾಡಿದ್ದನ್ನು ಬೇರೆ ಯಾರಿಗೂ ಹೇಳಬೇಡ. ಇನ್ನೂ ಎಲ್ಲರೂ ನನ್ನನ್ನು ಬೆನ್ನು ಹತ್ತುತ್ತಾರೆ. ನನಗೆ ಇದು ಇಷ್ಟವಿಲ್ಲ" ಎಂದು ಬೈಯುತ್ತ ಸಹಿಮಾಡಿಕೊಟ್ಟರು. ನಾನು ಬೈಸಿಕೊಂಡಿದ್ದು ಸಾರ್ಥಕವಾಯಿತು ಎಂದುಕೊಂಡೆ. ಆ ನೆನಪು ನನ್ನಲ್ಲಿ ಇನ್ನೂ ಹಚ್ಚಹಸುರಾಗಿದ್ದುದರಿಂದ ಈ ಅನಾವರಣದ ಕಾರ್ಯಕ್ರಮ ತಿಳಿದರೆ ಏನನ್ನುವರೋ ಎಂದು ಚಿಂತಿಸುತ್ತಿದ್ದೆ. ಕಾರ್ಯಕ್ರಮ ನಡೆದಬಳಿಕ ಅವರಿಂದ ಒಂದು ಕಾಗದವೂ ಬಂದಿತು. ಏನಿರಬಹುದೋ ಎಂದು ಓದಿದಾಗ ಮನಸ್ಸು ನೆಮ್ಮದಿಯಾಯಿತು. ಕೃಷ್ಣಶಾಸ್ತ್ರಿಗಳು ನನಗೆ ಬರೆದ ಕಾಗದಗಳಲ್ಲಿ ಇದೇ ಕಡೆಯದು.

ಶ್ರೀಮಾನ್ ವರದರಾಜರಾಯರಿಗೆ ಕೃಷ್ಣಶಾಸ್ತ್ರಿಯ ಆಶೀರ್ವಾದಗಳು. ಮೊನ್ನೆ ೨೪ನೇ ತಾರೀಖು ನಡೆದ ಕನ್ನಡಸಂಘದ ಸಮಾರಂಭಕ್ಕೆ ನೀವು ಮತ್ತು ಶ್ರೀ. ಜವರೇಗೌಡರು ಕಳುಹಿಸಿದ ಆಹ್ವಾನವು ತಲಪಿತು. ನೀವು ನನ್ನ ಭಾವಚಿತ್ರವನ್ನು ಕೊಟ್ಟಿರೆಂದು ತಿಳಿದು ತುಂಬ ಸಂತೋಷವಾಯಿತು. ನಿಮಗೆ ನನ್ನಮೇಲೆ ಪ್ರೀತಿಗೌರವಗಳು ಬಹಳ. ಹೆಚ್ಚು ಬರೆಯಲಾರೆ; ತುಂಬನಿಶ್ಯಕ್ತಿಯಾಗಿದೆ. ಮ॥ ರಂಗಣ್ಣನವರಿಗೆ ನನ್ನ ವಿಶ್ವಾಸಪೂರ್ವಕ ವಿಜ್ಞಾಪನೆಗಳನ್ನು ತಿಳಿಸಿ.

ಬಸವನಗುಡಿ }<br>೨೦-೯-೧೯೬೬ }

ಇಂತೀ ವಿಜ್ಞಾಪನೆಗಳು<br>ಎ. ಆರ್. ಕೃಷ್ಣಶಾಸ್ತ್ರೀ

ಕೃಷ್ಣಶಾಸ್ತ್ರಿಗಳ ಮನಸ್ಸು ಎಷ್ಟು ಮೃದುವಾದುದು ಎನ್ನುವುದಕ್ಕೆ ಈ ವಿಶ್ವಾಸಪೂರ್ವಕವಾದ ಪತ್ರಕ್ಕಿಂತ ಇನ್ನು ಹೆಚ್ಚಿನ ಪ್ರಮಾಣಬೇಕೆ? ಯಾರು ತೋರಿದ ದಾರಿಯಲ್ಲಿ ನಾನು ಈವರೆಗೆ ಸಾಗಿ ಬಂದಿರುವೆನೊ ಆ ಗುರುಗಳು ನನ್ನ ಬಗ್ಗೆ ಆಡಿರುವ ಈ ಔದಾರ್ಯದ ನುಡಿಗಳನ್ನು ನೆನೆದರೆ ನನ್ನ ಮನಸ್ಸಿಗೆ ತುಂಬ ಸಂಕೋಚವಾಗುತ್ತದೆ. ಅಂಥವರ ಕೃಪೆಯಿಂದ ನಾನು ಇಂದು ಒಬ್ಬ ವ್ಯಕ್ತಿಯಾಗಿದ್ದೇನೆ; ನನ್ನ ಬದುಕು ಅವರ ಬೆಳಕಿನಲ್ಲಿ ಕಣ್ಣು ತೆರೆದು ಮುನ್ನಡೆದಿದೆ. ಅವರ ಆಶೀರ್ವಾದವನ್ನು ನೆನೆದಾಗ ನನಗಾದ ಸಂತೋಷವನ್ನೇ ಒಂದು ಪದ್ಯದಲ್ಲಿ ಹೀಗೆ ಹೇಳಿಕೊಂಡಿರುತ್ತೇನೆ:

ಕನ್ನಡದ ಕಲ್ಕೆಗಾತುರದಿಂದ ಎದೆ ಮಿಡಿಯೆ<br>ತುಂಬು ಹರಕೆಯನಿತ್ತು ಬೆಂಬಲದ ಕೈ ನೀಡಿ<br>ಶಿಷ್ಯ ವಾತ್ಸಲ್ಯದಲಿ ಬಾಯ್ತುಂಬ ಕೊಂಡಾಡಿ<br>ಸರಿದಾರಿ ತೋರ್ದುದನು ನಾನೆಂದಿಗೂ ಮರೆಯೆ.<br>ಸವಿಮುಮತೆ ಮೈವೆತ್ತಿಹುದು ಮಾತುಮಾತಿನಲಿ<br>ನಡೆನುಡಿಗೆ ಕನ್ನಡಿಯು ಹಿಡಿದಂತೆ ಬಿಂಬಿಸಿರೆ<br>ಪೂರ್ಣ ಪಾಂಡಿತ್ಯದಲಿ ಘನಮೌನ ಶೋಭಿಸಿರೆ<br>ಸತ್ಯ ಸರಳತೆ ಬೆರೆತು ಬೆಳಗಿಹವು ಬಾಳಿನಲಿ.<br>ದೈವಕೃಪೆ ಗುರುಕೃಪಾರೂಪದಲಿ ಮೈದೋರಿ<br>ಮಂದಬುದ್ಧಿಯ ತಿದ್ದಿ ಶುದ್ಧಿಗೊಳಿಸಿಹುದಿಂತು<br>ಭಗ್ನಹೃದಯಕೆ ಭರವಸೆಯ ನೀಡಿದುದು ನಿಂತು.<br>ಗುರುಕರುಣೆಗೆಣೆಯಿಲ್ಲ; ಸಕಲ ರಕ್ಷಣಕಾರಿ !<br>ಕನ್ನಡದ ಹಂಬಲಕೆ ಕೈನೀರೆರೆದ ಗುರುವೆ<br>ಕೈಮುಗಿವೆ, ಕೈಮುಗಿವೆ ನಿಮ್ಮಡಿಗಳಿಗೆ ಮಣಿವೆ.

# ಶಾಸ್ತ್ರಿಗಳ ಸೂಕ್ತಿಗಳು

**ಕರ್ತವ್ಯನಿಷ್ಠೆ**

ನಾನು ಜೇನುಗೂಡಿಗೆ ಕೈ ಇಟ್ಟಿದ್ದೇನೆ; ಜೇನು ಎದ್ದಿದೆ; ಅದು ನನ್ನನ್ನು ಕಡಿದರೆ ಚಿಂತೆಯಿಲ್ಲ. ನಮ್ಮ ಜನಕ್ಕೆ ಜೇನುತುಪ್ಪ ದೊರಕಿದರೆ ಸರಿ.

(ಭಾಷಣಗಳು–ಲೇಖನಗಳು, ಪು. ೪೦)

*　　　*　　　*

**ಭಾಷೆ–ಭಾವ :**

ಭಾಷೆಗಿಂತಲೂ ಭಾವ ಮುಖ್ಯ; ಭಾಷೆ ಗಾಡಿಯಿದ್ದ ಹಾಗೆ; ಗೊಬ್ಬರದ ಗಾಡಿಯಲ್ಲಿ ಚಿನ್ನದ ಗಟ್ಟಿಗಳನ್ನು ಹೇರಿಕೊಂಡು ಬಂದರೆ ಅವಕ್ಕೆ ಬೆಲೆ ಕಡಮೆಯಾಗುತ್ತದೆಯೇ? ಚಿನ್ನದ ಗಾಡಿಯಲ್ಲಿ ಗೊಬ್ಬರವನ್ನು ಹೇರಿಕೊಂಡು ಬಂದರೆ ಅದಕ್ಕೆ ಬೆಲೆ ಬರುತ್ತದೆಯೇ?

(ಭಾಷಣಗಳು–ಲೇಖನಗಳು, ಪು. ೧೧)

*　　　*　　　*

**ಪಾರಿಭಾಷಿಕ ಪದ :**

'ಕಶೇರುಕ' ಎಂಬುದು ಎಷ್ಟು ಕಷ್ಟವೋ 'ವರ್ಟಿಬ್ರೇಟ್' ಎಂಬುದೂ ಅಷ್ಟೇ ಕಷ್ಟ

(ಭಾಷಣಗಳು–ಲೇಖನಗಳು, ಪು. ೩೨)

*　　　*　　　*

**ಪಾಂಡಿತ್ಯ :**

ತಿಳಿಯದವರನ್ನು ಪಾಂಡಿತ್ಯದಿಂದ ಬೆರಗು ಮಾಡಿದರೆ, ಇಬ್ಬರಿಗೂ ಕಷ್ಟ. ಯಾರಿಗೂ ಲಾಭವಿಲ್ಲ.

(ಭಾಷಣಗಳು–ಲೇಖನಗಳು, ಪು. ೨೯)

*　　　*　　　*

**ಪುಸ್ತಕವಿಮರ್ಶೆ :**

ಗ್ರಂಥಗಳು ಪತ್ರಿಕೆಗಳಿಗೆ ಅನೇಕ ವೇಳೆ ಬರುವುದು ವಿಮರ್ಶೆಗಲ್ಲ, ಸ್ತೋತ್ರಕ್ಕೆ.

(ಭಾಷಣಗಳು–ಲೇಖನಗಳು, ಪು. ೨೯)

*　　　*　　　*

**ಇಂದಿನ ಲೇಖಕರು :**

ಈಗಿನ ಅನೇಕ ಲೇಖಕರಿಗೆ ನಿಯಮ ಪರಿಶ್ರಮಗಳು ಬೇಡ; ಅವು ಕೋಟಿನ ಗುಂಡಿಗಳ ಹಾಗೆ.

(ಭಾಷಣಗಳು–ಲೇಖನಗಳು, ಪು. ೨೭)

*　　　*　　　*

**ಒಳಿತು-ಕೆಡಕು**

ಕೆಟ್ಟದ್ದು ಎಂದಿದ್ದರೂ ಕೆಟ್ಟದ್ದೇ; ಒಳ್ಳೆಯದೂ ಅತಿಯಾದರೆ ಕೆಟ್ಟದ್ದೇ.

(ಕಥಾಮೃತ, ಪೀಠಿಕೆ, ಪು. ೫೪)

ಡಾ. ಕೆ. ಕೃಷ್ಣಮೂರ್ತಿ

# ಪ್ರೊ. ಎ. ಆರ್. ಕೃ. ಮತ್ತು 'ಸಂಸ್ಕೃತ ನಾಟಕ'

"ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರುವೇ ನಮಃ"

೧

ಈಗ ಇಪ್ಪತ್ತೇಳುವರ್ಷಗಳ ಹಿಂದೆ, ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಮೇಜರ್ ಸಂಸ್ಕೃತ, ದ್ವಿತೀಯ ಭಾಷೆ ಕನ್ನಡ–ಇವುಗಳನ್ನು ಕಲಿಯಲು ಬಿ.ಎ. ಕ್ಲಾಸನ್ನು ಸೇರಿದ ನನಗೆ ಪಠ್ಯಗ್ರಂಥಗಳಲ್ಲಿ ಒಂದು "ಸಂಸ್ಕೃತ ನಾಟಕ"; ಇನ್ನೊಂದು "ದೇವೀ ಚೌಧುರಾಣಿ". ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ಸ್ವಯಂ ಮೊದಲನೆಯದನ್ನು ಬರೆದಿದ್ದರೂ, ತಾವೇ ಆಗ ಕನ್ನಡದ ಪ್ರೊಫೆಸರರಾಗಿದ್ದರೂ, ಅದನ್ನು ಕಲಿಸಲು ತೀ.ನಂ.ಶ್ರೀ. ಅವರನ್ನು ಕಳುಹಿಸಿ ತಾವು ಕಾದಂಬರಿಯನ್ನು ಕಲಿಸಲು ಹೊರಟರು. 'ಓ, ಈ ಕಾದಂಬರಿಯಲ್ಲಿ ನಮಗೆ ತಿಳಿಯಲಾರದ್ದನ್ನು ಇವರೇನು ಕಲಿಸಿಯಾರು', ಎಂಬ ಒಂದು ವ್ಯಂಗ್ಯ ಮನೋಭಾವದಿಂದಲೇ ಹುಡುಗರು ಕ್ಲಾಸಲ್ಲಿ ಕಾಲಿಡುತ್ತಿದ್ದೆವು. ಇಂಗ್ಲಿಷ್ ಕಾದಂಬರಿಗಳ ಇತಿಹಾಸ, ಸರ್ ವಾಲ್ಟರ್ ಸ್ಕಾಟನ ವೈಶಿಷ್ಟ್ಯ, ಬಂಕಿಂಚಂದ್ರರ ಸ್ವದೇಶಪ್ರೇಮ ನವಸಾಹಿತ್ಯ ನಿರ್ಮಾಣಕ್ಕೆ ಪ್ರೇರಕವಾದ ವಿಶಿಷ್ಟಸನ್ನಿವೇಶಗಳು–ಇವನ್ನೆಲ್ಲ ಎಷ್ಟು ಉಚಿತವೋ ಅಷ್ಟೇ ಖಚಿತವೂ ಆದ ಮಾತುಗಳಲ್ಲಿ ಅವರು ಹೇಳತೊಡಗಿದೊಡನೆ ನಮ್ಮ ಗರ್ವಪರ್ವತಗಳಿಂದ ಕೆಲವೇ ದಿನಗಳಲ್ಲಿ ಕೆಳಗಿಳಿದೆವು. ಆದರೂ ಈ ಪ್ರಾಸ್ತವಿಕ ವಿಸ್ತಾರ ಮುಗಿದೊಡನೆ, ಕಥೆ ಕೈಗೆ ಬಂದಾಗ, ಸಿಕ್ಕಿ ಬೀಳುತ್ತಾರೆಂದು ಸಂಚುಹಾಕುತ್ತಿದ್ದೆವು. ಕೆಲವೇನಿಮಿಷಗಳಲ್ಲಿ ಕಥೆಯ ಅಸ್ಥಿಪಂಜರವನ್ನು ನಮ್ಮೆದುರಿಗಿಟ್ಟು, ಮುಂದೆ ನಾಲ್ಕಾರು ತಿಂಗಳುಗಳ ಅವಧಿಯಲ್ಲಿ ಇಡಿಯ ಭಗವದ್ಗೀತೆಯ ಬೋಧಸಾರವನ್ನೆಲ್ಲ ಅವರು ನಮಗೆ ತಿಳಿಯಹೇಳಿದ್ದನ್ನು ಯಾರೂ ಮರೆಯುವಂತಿಲ್ಲ. ಭದವದ್ಗೀತೆಗೂ ದೇವಿ ಚೌಧುರಾಣಿಗೂ ಇಮಾಂಸಾಬಿ-

ಗೋಕುಲಾಷ್ಟಮಿಗಳ ಸಂಬಂಧವೇ ಎಂದು ಗೊಣಗುತ್ತಿದ್ದವರು ಕಡೆಗೆ ಇವರ ಸಮಾರೋಪವನ್ನು ಕೇಳಿದ ಮೇಲೆ, ಕಾದಂಬರಿಯ ಅಂತರಾರ್ಥವನ್ನು ಗ್ರಹಿಸಿದ ಮೇಲೆ, ಶಾಸ್ತ್ರಿಗಳ ಅಸಾಧಾರಣ ಪಾಠಕ್ರಮವನ್ನು ಮನಸಾರೆ ಕೊಂಡಾಡು ತ್ತಿದ್ದರು. ಇದು ಅವರ ವಿಷಯಕ್ಕೆ ನನ್ನ ಅವಿಸ್ಮರಣೀಯವಾದ ಮೊದಲ ನೆನಪು.

ಆಗಲೇ ಸಂಸ್ಕೃತ ನಾಟಕಗಳಲ್ಲಿ ನಾಲ್ಕಾರನ್ನು ಮೂಲದಲ್ಲಿ ಓದಿಕೊಂಡಿದ್ದ ನನಗೆ ಕನ್ನಡದ ಒಂದು ಸ್ಥೂಲಸಮೀಕ್ಷಾಗ್ರಂಥ ಪಠ್ಯಪುಸ್ತಕವಾಗುವುದೆಂತು? ಸ್ಥೂಲಸಮೀಕ್ಷೆಯು ಸ್ಥೂಲತರ ಸಮೀಕ್ಷೆ ಎಷ್ಟು ಶಕ್ಯ? ಸಂಸ್ಕೃತದ ಗಂಧ ಗಾಳಿಯೂ ಇಲ್ಲದ ವಿದ್ಯಾರ್ಥಿಗಳಿಗೆ ಆಸಕ್ತಿಯುಳಿದೀತೆ? ಇತ್ಯಾದಿ ಶಂಕೆಗಳಿಂದ ತೊಳಲುತ್ತಿದ್ದ ನನಗೆ ತೀ. ನಂ. ಶ್ರೀ. ಅವರು ಅನುಸರಿಸಿದ ವಿಶಿಷ್ಟ ಬೋಧ ಕ್ರಮ—ಭಾಸ, ಕಾಳಿದಾಸ, ಭವಭೂತಿ ಇತ್ಯಾದಿ ಮಹಾಕವಿಗಳ ರಚನೆಯಲ್ಲಿ ರಸಸ್ಥಾನಗಳ ಮಧುರಮೋಹಕ ವಿಶ್ಲೇಷಣೆ, ಒಂದೊಂದೇ ನಾಟಕ ಪಠ್ಯಗ್ರಂಥ ವಾಗಿದ್ದರೆ ಎಷ್ಟು ಸಮಗ್ರವಾಗಿ ಸಾಮಾನ್ಯ ರಸವಿಮರ್ಶೆ ಸಾಧ್ಯವೋ ಅಷ್ಟೇ ಸಮಗ್ರವಾಗಿ ಎಲ್ಲ ಮುಖ್ಯ ನಾಟಕಗಳನ್ನೂ ವಿಮರ್ಶೆ ಮಾಡಿದ ರೀತಿ....ತುಂಬಾ ಮೆಚ್ಚಾಯಿತು, ಆ ಹಿನ್ನೆಲೆಯಲ್ಲಿ ಪಠ್ಯಗ್ರಂಥವಾದ "ಸಂಸ್ಕೃತನಾಟಕ"ದಿಂದ ಯಾವ ವಿಮರ್ಶೆಯಸಾಲನ್ನು ತೆಗೆದುಓದಿದರೂ ಅದು ಎಂಥ ರತ್ನಕಾಂತಿಯಿಂದ ಕೂಡಿದೆಯೆಂಬುದು ಅರಿವಾಗತೊಡಗಿತು. ಹೀಗೆ ನನಗೆ ಸಂಸ್ಕೃತನಾಟಕಗಳ ಬಗೆಗೆ ಸದಭಿರುಚಿ ಮೊಳೆಯಲು, ಬೆಳೆಯಲು, ಒಂದುಕಡೆ ಕೃಷ್ಣಶಾಸ್ತ್ರಿಗಳು ಇನ್ನೊಂದು ಕಡೆ ತೀ. ನಂ. ಶ್ರೀ. ಅವರು ಇವರೇ ಕಾರಣಪುರುಷರು.

೨

ಬಾಗಿಲುಕೋಟೆಯಲ್ಲಿ ಕಾಲೇಜು ೧೯೪೫ರಲ್ಲಿ ಆರಂಭವಾದಾಗ ಅಲ್ಲಿ ನನಗೆ ಬೋಧನಾವಕಾಶ ದೊರೆಯುವಂತೆ ತಮ್ಮ ಮಿತ್ರ ಡಾ. ನಂದೀಮಠರಿಗೆ ಕಾಗದ ಬರೆದು ನನ್ನನ್ನಾಶೀರ್ವದಿಸಿ ಕಳಿಸಿಕೊಟ್ಟವರೂ ಪ್ರೊ. ಕೃಷ್ಣಶಾಸ್ತ್ರಿಗಳೇ. ಅಲ್ಲಿಂದಾಚೆಗೆ ೧೯೫೫ರಲ್ಲಿ ನಾನು ಮತ್ತೆ ಮೈಸೂರಿಗೆ ಬಂದಾಗ ನನಗೆ 'ಧ್ವನ್ಯಾ ಲೋಕ'ದ ಪ್ರಬಂಧಕ್ಕಾಗಿ ಬೊಂಬಾಯಿವಿಶ್ವವಿದ್ಯಾಲಯದಿಂದ ದೊರೆತಿದ್ದ ಡಾಕ್ಟರೇಟ್ ಪ್ರಶಸ್ತಿಗಾಗಿ, ನನ್ನನ್ನು ಆದರದಿಂದ ಅಭಿನಂದಿಸಿ, ಮೇಲಿಂದ ಮೇಲೆ ಒತ್ತಾಯಮಾಡಿ, ಕನ್ನಡದಲ್ಲಿ ನನ್ನ ತಿಳಿವಳಿಕೆ ಇಳಿದು ಬರುವಂತೆ ಎಲ್ಲ ಹಿನ್ನೆಲೆ ಯನ್ನೂ ಕಲ್ಪಿಸಿ, ತಾವೇ ಕರಡುಗಳನ್ನು ಶೋಧಿಸುವುದರಲ್ಲೂ ನೆರವಾಗಿನಿಂತ ಮಹಾನುಭಾವರು ಅವರು. ಸಂಸ್ಕೃತದ ಸಾರವತ್ತಾದ ವಿಷಯ—ಕಾವ್ಯವಿರಲಿ, ಶಾಸ್ತ್ರವಿರಲಿ, ಕಥೆಯಿರಲಿ—ಕನ್ನಡದಲ್ಲಿ ಬಂದಲ್ಲದೆ ಅವರ ಹೃದಯಕ್ಕೆ ತೃಪ್ತಿ ಯಿರಲಿಲ್ಲ. ಆದರೆ ಅವರ "ಕನ್ನಡ"ದ ಕಲ್ಪನೆ, ಎಂದರೆ ಸಹಜ, ಸಮರ್ಥ,

ಅಚ್ಚನುಡಿ, ಇನ್ನೂ ನನ್ನಂತಹವರಿಗೆ ಆದರ್ಶವಾಗಿಯೇ ಉಳಿದಿದೆ. ಅವರ ಭಾಷೆಯ ಬಿಗಿ ಹಾಗು ಒಗರು, ಅವರ ಭಾವದ ಹಾಸು ಹಾಗು ಬೀಸು, ಅವರ ಹೋಲಿಕೆಗಳ ಬೆಳಕು ಹಾಗು ಸೆಳಕು ಕನ್ನಡ ಬರೆಹಗಾರರಾರಲ್ಲೂ ಅವರ ರೀತಿ ಯಲ್ಲಿ ಬಂದಿಲ್ಲ. ಮಹಾಭಾರತಕ್ಕೆ ಆರಲ್ಲ, ನೂರು ಕನ್ನಡರೂಪಾಂತರ ಗಳಿದ್ದರೇನಂತೆ? ಕೃಷ್ಣಶಾಸ್ತ್ರಿಗಳ ಕನ್ನಡವಚನ ತನ್ನ ವರ್ಚಸ್ಸಿನಿಂದ ನೂರ್ಕಾಲ ನಿಲ್ಲುವಂತಹುದು. ಅವರ 'ಭಾಸಕವಿ' 'ಸಂಸ್ಕೃತ ನಾಟಕ'ಗಳಲ್ಲಿ ಪುಟಗೊಂಡು ಬಂಗಾರದಂತೆ ಬೆಳಗುವ ಈ ಶಬ್ದಶಕ್ತಿ "ಕನ್ನಡ ಕೈಪಿಡಿ"ಯ ಅಲಂಕಾರಶಾಸ್ತ್ರ ವಿವರಣೆಯಲ್ಲಿ ವಿದ್ವತ್ತಿನ ವಿದ್ಯುದ್ವಿಲಾಸದಿಂದ ಬೆಳಗುತ್ತದೆ. ಅವರ ತಿಳಿಮನಸ್ಸು ಕಳಕಳಿ, ಪ್ರಾಚ್ಯ–ಪಾಶ್ಚಾತ್ಯ ಸಾರವಿಚಾರಗಳ ಸುಸ್ಪಷ್ಟ ತಿಳಿವಳಿಕೆ, ಅನೇಕ ಭಾಷೆಗಳಲ್ಲಿ ಪ್ರಭುತ್ವ, ನಿಷ್ಕೃಷ್ಟ ವ್ಯಾಕರಣಜ್ಞಾನ, ಜೀವನದಲ್ಲಿ ಶ್ರದ್ಧೆ ಹಾಗು ನಿಷ್ಠೆ, ಸೂಕ್ಷ್ಮಸಾಹಿತ್ಯಸಂವೇದನೆ, ಅಗಾಧ ಲೋಕಾನುಭವ, ಆಡಂಬರದಲ್ಲಿ ವೈರ–ಎಲ್ಲವೂ ಯಾವುದೋ ಒಂದು ಹಿತಮಿತ ಪ್ರಮಾಣದಲ್ಲಿ ಸೇರಿದ್ದರಿಂದ ಅವರು ಶಿಷ್ಯಕೋಟಿಯ ಹೃದಯಮಂದಿರದಲ್ಲಿ ಎಂದಿಗೂ ಆರಾಧ್ಯಮೂರ್ತಿಯಾಗಿ ಉಳಿ ದಿದ್ದಾರೆ; ಅವರು ಬರೆದದ್ದೆಲ್ಲ ಬಂಗಾರವಾಗಿದೆ. ಅವರು ಕೇವಲ ಒಬ್ಬ ವ್ಯಕ್ತಿ ಯಲ್ಲ; ಒಂದು ಸಾಂಘಿಕಶಕ್ತಿಯಾಗಿದ್ದರು. ತಾಪತ್ರಯಗಳಿಗೆ ಬಗ್ಗದೆ, ಕೋಪ ತಾಪಗಳಿಗೆ ಸಗ್ಗದೆ, ತಮ್ಮ ಧ್ಯೇಯವನ್ನು ತಮ್ಮಕೈಲಾದಷ್ಟು ಸಾಧಿಸಿಯೂ ಅತೃಪ್ತಿಯಿಂದಲೇ, ಪ್ರತಿಭೆಯ ಕಿಡಿಯನ್ನು ಪಾತಾಳದಲ್ಲಿದ್ದರೂ ಹುಡುಕಿ ತೆಗೆದು ಅದು ದೊಡ್ಡ ಪ್ರಕಾಶವಾಗುವಂತೆ ನೂರಾರುಶಿಷ್ಯರನ್ನು ತಯಾರುಮಾಡಿದ ಈ ಗರುಡಿಯಾಚಾರ್ಯರಿಗೆ ಯಾವ ಶ್ರದ್ಧಾಂಜಲಿಯೂ ಹೆಚ್ಚೆನಿಸದು.

ಪ್ರೊ. ಕೃಷ್ಣಶಾಸ್ತ್ರಿಗಳು ಬರೆದ ಒಂದೊಂದು ಮುಂದಿನ ಕೃತಿಯೂ "ಆಶೀರ್ವಾದಪೂರ್ವಕ" ಎಂದು ಸ್ವಹಸ್ತದಿಂದ ಬರೆದು ಅವರು ನನಗೆ ಅನು ಗ್ರಹಿಸಿದ ಪ್ರತಿಯಾಗಿ ನನ್ನ ಪುಸ್ತಕಸಂಗ್ರಹದಲ್ಲಿದೆ. ನಾನೂ ಕಾಲಾಂತರದಲ್ಲಿ ಬಂದ ನನ್ನ "ಧ್ವನ್ಯಾಲೋಕ ಮತ್ತು ಲೋಚನಸಾರ"ವನ್ನು ಅವರಿಗೆ ಸಮರ್ಪಣೆಮಾಡಿದ್ದೇ ಒಂದು ಈಗಿನ ಸಮಾಧಾನ. ಕನ್ನಡದಲ್ಲಿ ನಾನು ಬರೆಯಲು ತೊಡಗಿದ್ದು ಅವರಿಂದ; ಮುಂದುವರಿದಿದ್ದು ಅವರಿಂದ; ವಿದ್ವಾಂಸರ ಕಣ್ಣಿಗೆ ಕಂಡದ್ದು ಅವರಿಂದ. ಈಗ ಮೂರುವರ್ಷಗಳ ಕೆಳಗೆ ಅವರನ್ನು ನಾನು ಬೆಂಗಳೂರಿನಲ್ಲಿ ಕಂಡಾಗ ಅವರು ನನ್ನ ಹೊಸಕೃತಿಗಳನ್ನು ಸ್ವೀಕರಿಸಿ ಹರಸಿ "ನಿನಗೆ ಆಶೀರ್ವಾದಮಾಡಿ ಕೊಡಲು ನನ್ನ ಹೊಸಪುಸ್ತಕವಿಲ್ಲ; ಈಗ ಸೋತಿದ್ದೇನೆ, ಏನು ಮಾಡಲಿ? ಸ್ವಲ್ಪ ತಡಿ" ಎಂದು ಪುಸ್ತಕದ ಕಪಾಟಿಗೆ ಹೋಗಿ ವಿಂಟರ್‌ನಿಟ್ಸ್ ಅವರ ಜರ್ಮನ್‌ಭಾಷೆಯಲ್ಲಿರುವ Gestichte der Indishen Litteratur, Band II ಎಂಬ ಗ್ರಂಥವನ್ನು ತೆಗೆದು – "ಇದನ್ನು ಇನ್ನಾರಿಗೆ ಕೊಡಲಿ; ನೀನು ಉಪಯೋಗಮಾಡಿದರೆ ಸಾರ್ಥಕವಾಗುತ್ತೆ" ಎಂದು

ಕೈತುಂಬಿಸಿ ಕಳಿಸಿದ್ದು ಈಗಲೂ ಕಣ್ಣಿಗೆಕಟ್ಟಿದಂತಿದೆ. ಅದೇ ಅವರ ಕಡೆಯ ದರ್ಶನವಾಯಿತು.

೩

ಈ ಸ್ಮೃತಿಗಳ ಒತ್ತಡದಲ್ಲಿ 'ಸಂಸ್ಕೃತ-ನಾಟಕ'ದ ವಿಸ್ಮೃತಿ ಕ್ಷಮ್ಯವೆಂದು ಭಾವಿಸುತ್ತೇನೆ. ಅದರ ವಿಷಯವಾಗಿ ಈಚೆಗೆ, ಫ್ರೆಂಚ್ ಭಾಷೆಯಲ್ಲಿ ಪ್ರಸಿದ್ಧ ವಿದ್ವಾಂಸರಾದ ಡಾ. ಸಿಲ್ವೇನ್ ಲೇವಿ ಅವರ La Theatre Indien ಎಂಬ ಉದ್ಗ್ರಂಥವನ್ನೂ, ಜರ್ಮನ್‌ಭಾಷೆಯಲ್ಲಿ ವಿಖ್ಯಾತಿಯಾಂತಿರುವ ಡಾ. ಸ್ಟೆನ್ ಕೊನೋ ಅವರ Das indische Drama ಎಂಬ ಗ್ರಂಥವನ್ನೂ ಇಂಗ್ಲಿಷಿನಲ್ಲಿ ಡಾ. ಕೀತ್ ಅವರ Sanskrit Drama ಎಂಬ ಗ್ರಂಥವನ್ನೂ ಕೂಲಂಕಷವಾಗಿ ಅಭ್ಯಾಸಮಾಡಿದ್ದೇನೆ. ಆದರೆ ಎಲ್ಲಿಯೂ ಒಂದೆಡೆಯಲ್ಲಿ ಪ್ರೊ. ಕೃಷ್ಣಶಾಸ್ತ್ರಿಗಳ ಕನ್ನಡ ಗ್ರಂಥದಲ್ಲಿರುವ ಸಮಗ್ರದೃಷ್ಟಿ, ಭಾರತೀಯ ರಸಗ್ರಹಣವೈಶಿಷ್ಟ್ಯ, ವಿಮರ್ಶನವೈದುಷ್ಯ, ಭಾಷಾಸೌಂದರ್ಯ, ಭಾವವಿಸ್ತಾರಗಳನ್ನು ನಾನು ಕಂಡಿಲ್ಲ. ನಾನು ವಿದ್ಯಾರ್ಥಿಯಾಗಿ ಮೆಚ್ಚಿಕೊಂಡಿದ್ದ ಅವರ ಗದ್ಯಗುಣಗಳು ಮಾತಿನಮೊನೆ, ಉಕ್ತಿ ಚಮತ್ಕಾರ, ಸರಸ ದೃಷ್ಟಾಂತ ಇತ್ಯಾದಿ-ಇಂದಿಗೂ ನನಗೆ ಅನುಕರಣೀಯ ವಾಗಿಯೇ ಉಳಿದಿವೆ. ಆದರೆ ಎರಡುದಶಕಗಳಿಗೂ ಹೆಚ್ಚು ನಾನೇ ಅಧ್ಯಾಪಕ ನಾಗಿ ಕಳೆದಮೇಲೆ ಅವರು ಅದನ್ನು ಬರೆಯಲು ಪಟ್ಟಿರುವಶ್ರಮ, ಓದಿರುವ ಗ್ರಂಥರಾಶಿ, ಜೀರ್ಣಿಸಿಕೊಂಡಿರುವ ಅದ್ಭುತಶಕ್ತಿ-ಇವುಗಳನ್ನು ಅರ್ಥಮಾಡಿ ಕೊಂಡು ಬೆರಗಾಗಿದ್ದೇನೆ. ಇಂದಿಗೂ ಇದನ್ನು ಯಾರಾದರೂ ಇಂಗ್ಲಿಷಿಗೆ ಭಾಷಾಂತರಿಸಿದರೆ ಅಂತರರಾಷ್ಟ್ರೀಯಖ್ಯಾತಿಗೆ ಈ ಕೃತಿ ಪಾತ್ರವಾಗುವುದರಲ್ಲಿ ಸಂಶಯವಿಲ್ಲ.

ಭಾರತೀಯ ಅಭಿರುಚಿಯಲ್ಲಿ ಕಾಲಿದಾಸ, ಭವಭೂತಿ, ಹರ್ಷ ಮುಂತಾದ ವರ ಮಹತ್ವವೇನೆಂಬುದನ್ನು ಆಧುನಿಕ ಸಾಹಿತ್ಯ ವಿಮರ್ಶೆಯ ಭಾಷೆಯಲ್ಲಿ ಇಷ್ಟು ತಿಳಿಯಾಗಿ, ಇಷ್ಟುನಿಷ್ಕೃಷ್ಟವಾಗಿ, ಇಷ್ಟು ವಿದ್ವದ್ಗ್ರಾಹ್ಯವಾಗಿ, ಇಷ್ಟೇತೂಕದ ಮಾತುಗಳಲ್ಲಿ ತಿಳಿಸಿಕೊಡುವ ಮತ್ತೊಂದು ಗ್ರಂಥ ಎಲ್ಲಿಯೂ ಕಾಣಸಿಗದು. ಇವರ ವಿದ್ವನ್ನಿಷ್ಠೆಗೆ ಒಂದೇ ಉದಾಹರಣೆ: ಆದಿಯ "ಅಶ್ವಘೋಷ"ನ ಬಗೆಗೆ ಬರೆಯುವ ಮುನ್ನ ಕೃಷ್ಣಶಾಸ್ತ್ರಿಗಳು ಅದಕ್ಕೆ ಸಂಬಂಧಪಟ್ಟ ಜರ್ಮನ್‌ವಿದ್ವಾಂಸರ ಲೇಖನಗಳನ್ನು ಡಾ. ಎ. ಎನ್. ನರಸಿಂಹಯ್ಯನವರ ಮೂಲಕ ಲಂಡನ್ನಿನಿಂದ ತರಿಸಿಕೊಂಡು ಡಾ. ಟಿ. ಎಸ್. ಸುಬ್ಬರಾಯರೊಡನೆ ಕುಳಿತು ಓದಿದ ವಿಷಯ ವನ್ನು ಅವರೇ ನನಗೆ ಹೇಳಿದ್ದುಂಟು. ನಿಜವಾದ ಸಂಶೋಧನೆಯಿದು. ಅವರ ಕನ್ನಡಗ್ರಂಥದಲ್ಲಿ ಅದನ್ನು ಬಿಟ್ಟಿದ್ದರೂ ಅದು ಲೋಪವೆನಿಸುತ್ತಿರಲಿಲ್ಲ. ಆದರೆ ಅವರ ಆದರ್ಶ ಅಂತಾರಾಷ್ಟ್ರೀಯ ಪಾಂಡಿತ್ಯವಾಗಿತ್ತು. ಭಾಸನ "ಯಜ್ಞಫಲ"ದ

ಬಗೆಗೆ ವಿದ್ವಾಂಸರಲ್ಲಿ ನಡೆದ ಚರ್ಚಾತ್ಮಕಲೇಖನಗಳನ್ನೆಲ್ಲ ನನಗಿಂತ ಮುಂಚೆ ಅವರು ಓದಿ ಮುಗಿಸಿದ್ದುದನ್ನು ಇನ್ನೊಮ್ಮೆ ಕಂಡೆ. ಹೀಗೆ ಒಂದು ಉತ್ತಮ ಗ್ರಂಥರಚನೆಗೆ ಎಷ್ಟು ಸಹಾಯಸಾಮಗ್ರಿ ಬೇಕು, ಅದನ್ನು ಆಡಂಬರಕ್ಕಾಗಿ ಪ್ರದರ್ಶಿಸದೆ ಯಾವ ರೀತಿ ಉಪಯೋಗಿಸಬೇಕು, ಪಾಂಡಿತ್ಯದ ಬೆಂಬಳಿಯಲ್ಲಿ ರಸ ಸಂವೇದನೆ ಹೇಗೆ ಸರಿಗೂಡಬೇಕು, ಅಚ್ಚಿನ ಕಾಗದ, ಮುದ್ರಣ, ಶೋಧನ ಇವು ಹೇಗಿರಬೇಕು, ಪ್ರಾಚೀನ–ಆಧುನಿಕ ವಿಚಾರಗಳಲ್ಲಿ ಎಂತಹ ಸಾಮರಸ್ಯ ಶಕ್ಯ–ಎಲ್ಲವನ್ನೂ ಕನ್ನಡಿ ಹಿಡಿದು ತೋರಿಸುವಂತಿದೆ ಇಂದಿಗೂ "ಸಂಸ್ಕೃತ-ನಾಟಕ". ಅದರ ಕಾಂತಿ ಕುಂದಿಲ್ಲ.

ಈ ಶ್ರದ್ಧಾಂಜಲಿಯನ್ನು ಸಂಸ್ಕೃತನಾಟಕದ ಕೆಲವು ಸೂಕ್ತಿರತ್ನಗಳಿಂದ ಮುಗಿಸುವುದು ಸೂಕ್ತವೆನಿಸುತ್ತದೆ. ಅವುಗಳ ಗತಿ–ಗಮಕ, ಕಿಡಿ–ಕಳೆ, ಕಿರಿದರಲ್ಲಿ ಪಿರಿದರ್ಥವನ್ನು ತುಂಬಿಸುವ ಧ್ವನಿ, ಇವು ಕನ್ನಡನುಡಿಗೆ ಹೊಸ ತೊಡವು ಗಳೆನಿಸವೆ? ಅವುಗಳಲ್ಲಿ ಅತಿಪ್ರಶಂಸೆಯ ಆವೇಶವಿಲ್ಲ; ಸರಸವಿದ್ವಾಂಸನ ಅಭಿನಿವೇಶವಿದೆ:—

೧. ಭಾಸನ ಸಾತ್ವಿಕ ಪ್ರತಿಭೆಯಲ್ಲಿಯೂ ಮಧುರ ಮನೋಧರ್ಮ ದಲ್ಲಿಯೂ ಭಾವಿತರಾಗಿ ಬಂದ ಕ್ರೂರಿಗಳು, ತಮ್ಮ ನೈಸರ್ಗಿಕಕ್ರೌರ್ಯವನ್ನು ತಗ್ಗಿಸಿಕೊಳ್ಳುವರು; ದುರ್ಜನರು ಸಜ್ಜನರಾಗುವರು; ಸಜ್ಜನರು ಸತ್ತಮ ರಾಗುವರು. ಪ್ರತಿಮಾನಾಟಕದ ಕೈಕೆ, ಪಂಚರಾತ್ರದ ಕರ್ಣ, ಊರು ಭಂಗದ ದುರ್ಯೋಧನ ಇವರೇ ಇದಕ್ಕೆ ಉದಾಹರಣೆ. (ಪು. ೮೫)

೨. ಭಾರತದ ಶಕುಂತಲೆ ಸುಂದರಿಯಾದರೂ ಧೃಷ್ಟೆ; ದ್ರೌಪದಿಯ ತಂಗಿ.... (ಪು. ೧೩೯)

೩. ಭವಭೂತಿಯ ಗ್ರಂಥಗಳಿಂದ, ಅವನ ಪಾತ್ರಗಳ ಚಿತ್ರಗಳಿ ಗಿಂತಲೂ ಅವನಚಿತ್ರವು ದೃಢವಾಗಿ ನಿಲ್ಲುತ್ತದೆ; ಅವನು ಒಳ್ಳೆಯ ತೇಜಶ್ಶಾಲಿ; ಅವನದು ಸಂಸ್ಕೃತಸಾಹಿತ್ಯದಲ್ಲಿ ಒಂದು ಅಪೂರ್ವವ್ಯಕ್ತಿತ್ವ. (ಪು. ೨೧೨)

೪. ಕ್ರಿಸ್ತ ಶಕ ಹತ್ತು–ಹನ್ನೆರಡನೆಯ ಶತಮಾನಗಳ ಹೊತ್ತಿಗೆ ಸಾಹಿತ್ಯವು ಹೊಡೆಬಿಟ್ಟು ತೆನೆಯಾಗಿ ಕಾಳಾದ ಪಯರಿನಂತೆ ಒಣಗುವು ದಕ್ಕೆ ಮೊದಲಾಯಿತು. (ಪು. ೨೪೨)

೫. ಚರಿತ್ರೆಯದೃಷ್ಟಿಯಿಂದ ನೋಡಿದರೂ, ನಾಟಕವು ಸಾಹಿತ್ಯದ ಗೊಂಚಲಿನಲ್ಲಿ ಅರಳಿದ ದೊಡ್ಡಕುಸುಮವೆಂದು ಗೊತ್ತಾಗುತ್ತದೆ. (ಪು. ೩)

# ಶಾಸ್ತ್ರಿಗಳ ಸೂಕ್ತಿಗಳು

**ಸರ್ಕಾರದ ಬೆಂಬಲ :**

ಪ್ರಜಾಸಹಕಾರ ಎಷ್ಟೇ ಅವಶ್ಯವೆಂದರೂ ಸರ್ಕಾರಯಂತ್ರದ ಬೆಂಬಲವಿಲ್ಲದ ಪ್ರಜೆಯಿಂದ ಹೆಚ್ಚಿನ ಕೆಲಸವಾಗುವುದಿಲ್ಲ; ನೀತಿ ಬದಲಾಗುವುದಿಲ್ಲ.

(ವಚನಭಾರತ, ಪೀಠಿಕೆ, ಪು. ೩೬)

* * *

**ವಿವೇಕ :**

ಮನಸ್ಸು ಒಡೆದರೆ ಮಡಕೆ ಒಡೆದಹಾಗೇ; ಮತ್ತೆ ಆ ಚೂರುಗಳೇ ಅಂಟುವುದಿಲ್ಲ; ಹೊಸ ಚೂರುಗಳು ಅಂಟುವುದು ನಿಜವೆ? ಆದ್ದರಿಂದ ಗಡಿಗೆ ಬೇಕೆನ್ನುವರು ಅದು ಒಡೆಯದ ಹಾಗೆ ನೋಡಿಕೊಳ್ಳಬೇಕು. ಅದೇ ವಿವೇಕ.

(ವಚನಭಾರತ, ಪೀಠಿಕೆ, ಪು. ೪೦)

* * *

ರಾತ್ರಿಯಾಗುವುದನ್ನೂ ಬೆಳಗಾಗುವುದನ್ನೂ ಯಾರಾದರೂ ತಪ್ಪಿಸುವುದಕ್ಕಾಗುತ್ತದೆಯೇ? ಅವುಗಳು ಅನಿವಾರ್ಯವಾಗಿರುವಾಗ ಅವುಗಳಿಗೆ ತಗ್ಗಿ ಕತ್ತಲೆಯನ್ನು ದೀಪದಿಂದಲೂ, ಬಿಸಿಲನ್ನು ಕೊಡೆಯಿಂದಲೂ ತಗ್ಗಿಸಿಕೊಳ್ಳುವುದು ವಿವೇಕ.

(ಅದೇ, ಪು. ೬೪)

* * *

**ಸ್ನೇಹ-ಸಂಸಾರ :**

ಸ್ನೇಹವಿಲ್ಲದ ಸಂಸಾರ ಎಂಥ ಸಂಸಾರ? ಅದು ಮರಳುಕಾಡು; ಇಲ್ಲದಿದ್ದರೆ ಕುರುಕ್ಷೇತ್ರ. ಜೊತೆಯಲ್ಲಿ ಇರಬೇಕಾದವರು ಅಹಿತವಾದರೆ ಅದು ಕಾಲಿನಲ್ಲಿ ಮುಳ್ಳುಚುಚ್ಚಿ ಮುರಿದುಕೊಂಡಂತೆ; ತೆಗೆದರೆ ಗಾಯ, ತೆಗೆಯದಿದ್ದರೆ ನೋವು; ನಡಗೆ ಕುಂಟು.

(ವಚನಭಾರತ, ಪೀಠಿಕೆ, ಪು. ೩೭)

* * *

ಸಂಸಾರದಲ್ಲಿ ಒಬ್ಬರು ಸೋತಾಗಲಿ. ಇಬ್ಬರೂ ಸೋತಾಗಲಿ ಸ್ನೇಹ ಬೆಳೆಯಬೇಕು; ಆದರಿಂದಲೇ ಚಿಂತೆ ಕಷ್ಟಗಳ ನಿವಾರಣೆ; ಸುಖಸಂಪಾದನೆ.

(ಅದೇ, ಪು. ೩೯)

* * *

**ಗಂಡ–ಹೆಂಡತಿ :**

ಸಂಸಾರದಲ್ಲಿ ಗಂಡನೋ ಹೆಂಡತಿಯೋ ಎಡವಟ್ಟಾದರೆ ಪಾರ್ಶ್ವವಾಯುವಿನಿಂದ ಅರ್ಧ ದೇಹವೇ ಹೋದಂತೆ; ಅಂಥ ವ್ಯಕ್ತಿಗೆ ಏನು ಸುಖ? ನರಳುವುದು ಮರಣವನ್ನು ನಿರೀಕ್ಷಿಸುವುದು, ಎರಡೇ! ಇಬ್ಬರೂ ಅಂಥವರೇ ಆದರೆ, ಆದರ ಪರಿಣಾಮ ಇಕ್ಕಟ್ಟಾದ ಸೇತುವೆಯ ಮೇಲೆ ಟಗರುಗಳು ಹೋರಾಡಿ ಎರಡೂ ಹೊಳೆಗೆ ಮುಗುಚಿಕೊಳ್ಳುವಂತೆಯೇ.

(ವಚನಭಾರತ, ಪೀಠಿಕೆ, ಪು. ೪೦)

ಚಿ. ನ. ಮಂಗಳಾ

# ಸಹೃದಯ ಎ. ಆರ್. ಕೃ : ಒಂದು ನೆನಪು

ಹನ್ನೊಂದು ವರುಷಗಳ ಹಿಂದೆ ಒಂದು ದಿನ ನಾನು ಸೆಂಟ್ರಲ್ ಕಾಲೇಜಿನ ಲೇಡೀಸ್ ರೂಮಿನಲ್ಲಿ ಕುಳಿತಿದ್ದೆ. ನಾನು ಆಗ ಇಂಗ್ಲಿಷ್ ಆನರ್ಸ್ ಕೊನೆಯ ವರ್ಷದ ವಿದ್ಯಾರ್ಥಿನಿ. ಪರೀಕ್ಷೆ ಹತ್ತಿರವಾಗುತ್ತಿತ್ತು. ಪರೀಕ್ಷೆಯ ಯೋಚನೆಯ ಜೊತೆಗೆ ಇನ್ನೊಂದು ವಿಷಯ ಮನಸ್ಸಿನಲ್ಲಿತ್ತು. ನನ್ನ ಸಹಪಾಠಿಗಳ ಹತ್ತಿರ ಅದರ ಬಗ್ಗೆ ಮಾತಾಡಿದ್ದೆ. ನಾನು ಎರಡನೆಯ ವರ್ಷದ ಆನರ್ಸ್ ತರಗತಿಗೆ ಬರುವ ಹೊತ್ತಿಗೆ ಶ್ರೀ ವಿ. ಸೀ. ಅವರು ನಿವೃತ್ತರಾಗಿದ್ದರು. ಆದರೂ ಯಾವ ವಿಷಯ ತಲೆ ಹೊಕ್ಕರೂ ಮೊದಲು ಶ್ರೀ ವಿ. ಸೀ. ಅವರ ಬಳಿಗೆ ಹೋಗುತ್ತಿದ್ದೆ. ಅಂದೂ ಮನಸ್ಸಿನಲ್ಲಿ ಯೋಚನೆ ಯೋಚನೆಯಾಗಿ ರೂಪುಗೊಳ್ಳುತ್ತಿದ್ದ ಹಾಗೆ ಅವರ ಮನೆಗೆ ಹೋದೆ. ಅದೇ ವಿಶ್ವಾಸ. ಅದೇ ಆದರ. ಅದೇ ಪ್ರೋತ್ಸಾಹ. ನನ್ನ ಮನಸ್ಸಿನಲ್ಲಿ ಇದ್ದುದನ್ನು ಹೇಳಿದೆ. 'ಕೆಲಸವೇನೋ ಸ್ವಲ್ಪ ದೊಡ್ಡದೆ– ಆದರೆ ನಾಲ್ಕುದಿನ ಉಳಿಯುವ ಕೆಲಸ. ಪ್ರಯತ್ನ ಮಾಡಿನೋಡು. ನನ್ನ ಸಹಕಾರ ಇದ್ದೆ ಇದೆ' ಎಂದರು. ನಾನು ಕಾಲೇಜಿಗೆ ಮರಳಿ ಹೋಗಿ ಕೆಲಸ ಆರಂಭಿಸಿದೆ. ನನಗೆ ಸಿಕ್ಕಿದ್ದ ಸಹಕಾರ ಅಸದೃಶ. ನಾನು ಬಯಸಿದ್ದ ಕ್ಕಿಂತ ಹೆಚ್ಚಾಗಿ ಲೇಖನಗಳು ಬಂದವು. ಹಣ ಸಂಗ್ರಹವಾಯಿತು. ಲೇಖನ ಗಳನ್ನು ಪುಸ್ತಕರೂಪದಲ್ಲಿ ಪ್ರಕಟಮಾಡಲು ಕೇಳಿದಕೂಡಲೇ ಒಪ್ಪಿದರು ಸತ್ಯ ಶೋಧನದವರು. ಸಮಾರಂಭದ ದಿನವನ್ನೂ ಗೊತ್ತುಮಾಡಲಾಯಿತು. ಆಹ್ವಾನ ಪತ್ರಿಕೆಗಳೂ ಸಿದ್ಧವಾದವು. ಸೆಂಟ್ರಲ್ ಕಾಲೇಜಿನ ಜೀವನದಲ್ಲಿ ಜೀವವನ್ನು ತುಂಬಿ ನಿಂತಿದ್ದ ಕರ್ಣಾಟಕ ಸಂಘದ ಉಸಿರಾಗಿ ಕೆಲಸಮಾಡುತ್ತ ನಮಗೆ ಕನ್ನಡ ನಾಡು–ನುಡಿಗಳ ಹೃದಯ ದರ್ಶನ ಮಾಡಿಸಿದ ನಮ್ಮ ಗುರುಗಳಾದ ಶ್ರೀ ಜಿ. ಪಿ. ರಾಜರತ್ನಂ ಅವರಿಗೆ ನಾವು ಕಾಲೇಜನ್ನು ಬಿಡುವ ಮುನ್ನ ಏನಾದರೂ 'ಕಾಣಿಕೆ' ಕೊಡಬೇಕೆಂಬ ನಮ್ಮ ಆಸೆ ಕೃತಿರೂಪಕ್ಕಿಳಿದು ಕೊನೆಯ ಘಟ್ಟವನ್ನು ಮುಟ್ಟಿತ್ತು. 'ರಾಜರತ್ನಂ' ಅವರ ಸಾಹಿತ್ಯವನ್ನು ಕುರಿತು ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರಾಗಿದ್ದ ನಾವು ಬರೆದ ಲೇಖನಗಳ ಸಂಗ್ರಹ

ಬೆಂಗಳೂರು ಪ್ರೆಸ್ಸಿನಲ್ಲಿ ಸಿದ್ಧವಾಗುತ್ತಿತ್ತು. ಆಗ ಪುಸ್ತಕಕ್ಕೊಂದು ಮುನ್ನುಡಿ ಬೇಕೆನಿಸಿತು. 'ಇದಕ್ಕೆ ಮುನ್ನುಡಿ ಬರೆಸಿದರೆ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳಿಂದ ಬರೆಸಬೇಕು ಎಂದರು' ಸ್ನೇಹಿತರು. ನನಗೆ ಕೃಷ್ಣಶಾಸ್ತ್ರಿಗಳ ಪರಿಚಯವಿರಲಿಲ್ಲ. ಆದರೂ ಪರವಾಗಿಲ್ಲವೆಂದು ಹೊರಟೆ. ಆಗ ಮಧ್ಯಾಹ್ನ. ಸಾಯಂಕಾಲದ ವರೆಗೂ ಕಾಯುವಷ್ಟು ತಾಳ್ಮೆ ಇರಲಿಲ್ಲ ನನಗೆ. ವಯಸ್ಸಾದವರನ್ನು ಮಧ್ಯಾಹ್ನದ ವೇಳೆ ಹೋಗಿ ತೊಂದರೆ ಮಾಡಬಾರದು ಎನಿಸಿದರೂ ಅದನ್ನು ಮನಸ್ಸಿಗೆ ತಂದು ಕೊಳ್ಳದೆ ಹೊರಟೆ. ಬಾಂದಿನವರ ಬೀದಿಗೆ ಹೋಗಿ ಅಲ್ಲಿ ಅವರ ಮನೆ ಯಾವುದೆಂದು ವಿಚಾರಿಸಿ ಮನೆಗೆ ಹೋದೆ. ಬಾಗಿಲುಗಳೆಲ್ಲ ಮುಚ್ಚಿದ್ದವು. ಹೊರಟು ಹೋಗಲೆ ಎನಿಸಿತು. ಆದರೂ ಬಿಡಲಿಲ್ಲ. ಮೆಲ್ಲಗೆ ಬಾಗಿಲು ತಟ್ಟಿದೆ. ಬಲಗಡೆಯ ಬಾಗಿಲು ತೆರೆಯಿತು. ನಾನು ಕೃಷ್ಣಶಾಸ್ತ್ರಿಗಳನ್ನು ನೋಡಿರಲಿಲ್ಲ. ಪೇಟ ಕೋಟು ಹಾಕಿಕೊಂಡಿದ್ದ ಅವರ ಫೋಟೋ ಮಾತ್ರ ಪುಸ್ತಕದಲ್ಲಿ ನೋಡಿದ್ದೆ. ಬಾಗಿಲು ತೆಗೆದವರು ವಯಸ್ಸಾದ ವ್ಯಕ್ತಿ. ಆದರೆ ಅವರ ವಯಸ್ಸನ್ನು ಬೆಳ್ಳಗಾಗಿದ್ದ ಅವರ ತಲೆಗೊಡಲು ಮಾತ್ರ ಹೇಳುತ್ತಿತ್ತು. ಕಚ್ಚೆಪಂಚೆ. ಅದರ ಅವರ ಮೇಲೊಂದು ಬಿಳಿಯ ಬನಿಯನ್. 'ಯಾರು ಬೇಕು' ಎಂದರು. 'ಕೃಷ್ಣಶಾಸ್ತ್ರಿಗಳನ್ನು ನೋಡಬೇಕಾಗಿತ್ತು' ಎಂದೆ. 'ನಾನೇ ಕೃಷ್ಣಶಾಸ್ತ್ರಿ. ಬಾಮ್ಮ' ಎಂದರು. ಒಳಗೆ ಹೋಗಿ ಚಾಪೆಯ ಮೇಲೆ ಕುಳಿತೆ. ಏನು ಬೇಕಾಗಿತ್ತು. ಒಳ್ಳೆ ಬಿಸಲಿನಲ್ಲಿ ಬಂದೆಯಲ್ಲಮ್ಮ'. ಎಂದರು. ಆಗ ನನಗೆ ನಾನು ಮಧ್ಯಾಹ್ನದ ವೇಳೆಯಲ್ಲಿ ಅವರಿಗೆ ತೊಂದರೆ ಕೊಟ್ಟದ್ದು ಮನವರಿಕೆಯಾಗಿ 'ಮಧ್ಯಾಹ್ನ ಬಂದು ತೊಂದರೆಕೊಟ್ಟೆ ಸಾರ್–ಸಾಯಂಕಾಲ ಬರೋಣ ಅಂದುಕೊಂಡೆ. ಆದರೆ ಈಗಲೆ ಬಂದು ಬಿಟ್ಟೆ. ನಿಮಗೆ ಪಾಪ ತೊಂದರೆ ಆಯಿತು' ಎಂದೆ. 'ಪರವಾಗಿಲ್ಲಮ್ಮ. ಅದಕ್ಕೇನಂತೆ. ಮಧ್ಯಾಹ್ನ ನಾನು ನಿದ್ದೆಮಾಡೊಲ್ಲ. ನನಗೇನು ತೊಂದರೆಯಿಲ್ಲ–ನಿನಗೇ ಪಾಪ ಬಿಸಿಲು. ಏನು ಸಮಾಚಾರ?' ಎಂದರು. ನಾನು ನನ್ನ ಆತ್ಮಚರಿತ್ರೆಯನ್ನು ಸ್ವಲ್ಪ ಹೇಳಿ, ಬಂದ ಕೆಲಸ ಹೇಳಿದೆ. ಅವರಿಗಾದ ಆನಂದ ಅಷ್ಟಿಷ್ಟಲ್ಲ. ಸಮಾರಂಭಕ್ಕೆ, ಪುಸ್ತಕದ ಪ್ರಕಟಣೆಗೆ ಸಂಬಂಧಿಸಿದ ಪ್ರತಿಯೊಂದು ವಿಷಯವನ್ನೂ ಕೇಳಿದರು. ಅವರೇ ಸಮಾರಂಭವನ್ನು ಏರ್ಪಡಿಸಿರುವವರ ರೀತಿ ಅದರ ಬಗ್ಗೆ ಆಸೆ ತೋರಿದರು. ಅವರು ಕೊಟ್ಟ ಉಪಯುಕ್ತ ಸಲಹೆಗಳು ಒಂದೆ ಎರಡೆ?..! ಒಂದು ಸಮಾರಂಭವನ್ನು ಏರ್ಪಡಿಸಬೇಕಾದರೆ ಎಷ್ಟು ವಿಷಯಗಳನ್ನು ಮುಂದಾಲೋಚಿಸಿರಬೇಕು ಎಂಬುದನ್ನು ಆಗ ತಿಳಿದುಕೊಂಡೆ. 'ಸಮಾರಂಭ ಎಲ್ಲಿ ಮಾಡುತ್ತೀರಿ' ಎಂದರು. 'ಸೆಂಟ್ರಲ್ ಕಾಲೇಜಿನ ಮ್ಯಾಥಮ್ಯಾಟಿಕ್ಸ್ ಹಾಲ್‌ನಲ್ಲಿ' ಎಂದೆ. ಎಷ್ಟು ಹೊತ್ತಿಗೆ ಎಂದರು. ಆರು ಘಂಟೆಗೆ ಎಂದೆ. 'ಆರು ಘಂಟೆಗಾದರೆ ಸ್ವಲ್ಪ ಹೊತ್ತಿಗೆಲ್ಲಾ ಕತ್ತಲಾಗಿಬಿಡುತ್ತೆ. ಆ ಹಾಲಿನಲ್ಲಿ ಲೈಟುಗಳೆಲ್ಲಾ ಸರಿಯಾಗಿವೆಯೇನೋ ನೋಡಿಕೊಂಡಿರಿ. ಯಾಕೆ ಅಂದರೆ ರಾತ್ರೆ

ಆ ರೂಮುಗಳನ್ನು ಉಪಯೋಗಿಸುವುದಿಲ್ಲ. ಲೈಟಿಲ್ಲದೆ ಆಗ ತೊಂದರೆ ಆಗಬಾರದು. ಏನೇ ಆಗಲಿ ಜೊತೆಗೆ ಒಂದೆರಡು ಪೆಟ್ರೋಮ್ಯಾಕ್ಸ್ ತಂದಿಟ್ಟು ಕೊಂಡಿರಿ. ನೀವು ಹೆಣ್ಣುಮಕ್ಕಳು ಎಲ್ಲಾ ಸೇರಿ ಮಾಡುತ್ತಾ ಇದೀರಿ. ರಾಜ ರತ್ನಂ ಅವರ ಮನೆಯವರನ್ನು ಕರೆದು ಬನ್ನಿ. Invocation ಹಾಡೋಹಾಗಿದ್ದರೆ ರಾಜರತ್ನಂ ಅವರ ಪದ್ಯವನ್ನೇ ಯಾವುದಾದರೂ ಹಾಡಲಿ. ಪ್ರಾರ್ಥನಾರೂಪ ದಲ್ಲಿರೋ ಪದ್ಯವಾದರೆ ಒಳ್ಳೆಯದು. ಆಮೇಲೆ ಸಮಾರಂಭ ಮುಗಿಯೋದು ಎಂಟು ಎಂಟೂವರೆಯಾಗಿಬಿಡತ್ತೆ. ಹೆಣ್ಣುಮಕ್ಕಳು ಮನೆಗೆ ವಾಪಸು ಹೋಗೋ ದಕ್ಕೆ ಜೊತೆಗೆ ಯಾರಾದರೂ ಇರೋಹಾಗೆ ಮನೆಯಿಂದ ಯಾರನ್ನಾದರೂ ಕರೆದು ಕೊಂಡು ಬಂದಿದ್ದರೆ ಒಳ್ಳೆಯದು. ರಾಜರತ್ನಂ ಅವರಿಗೆ ಅವರ ಮನೆಯವರಿಗೆ ಎರಡು ಹಾರ ತನ್ನಿ ಸಾಕು. ಬಂದವರಲ್ಲಿ ಅವರಿಗೆ ಇವರಿಗೆ ಅಂತ ಹಾರಗಳು ಬೇಡ. ಅದು ಸರಿಹೋಗೋದಿಲ್ಲ. ಸುಮ್ಮನೆ ಶ್ರಮ, ಖರ್ಚು....' ಹೀಗೆ ಪ್ರತಿಯೊಂದು ವಿಷಯವನ್ನೂ ಕೇಳಿ ಸಲಹೆಕೊಟ್ಟರು. ವಿ. ಸೀ. ಅವರಿಗೆ ಮೈ ಅಷ್ಟು ಸ್ವಸ್ಥವಿಲ್ಲದೆ ಇದ್ದು ಅವರು ಸಮಾರಂಭಕ್ಕೆ ಬರಲು ಆಗುತ್ತದೋ ಇಲ್ಲವೋ ಎಂದಿದ್ದಕ್ಕೆ ಪರವಾಗಿಲ್ಲ. 'ಅವರು ಆಯಾಸ ಮಾಡಿಕೊಳ್ಳುವುದು ಬೇಡ. ನಾನು ಸ್ವಲ್ಪ ಮುಂಚೆಯೇ ಬರುತ್ತೇನೆ' ಎಂದರು. ಕೊನೆಗೆ ಮುನ್ನುಡಿ ವಿಷಯಕ್ಕೆ ಬಂತು. ಅದಕ್ಕೆ ಅವರು 'ಮುನ್ನುಡಿ ಬೇಡಮ್ಮ' ಎಂದರು. 'ಇಲ್ಲ ಸಾರ್. ಖಂಡಿತ ತಮ್ಮ ಆಶೀರ್ವಾದ ಬೇಕು.' ಎಂದೆ. ಬಹಳ ಒತ್ತಾಯ ಮಾಡಿದ ಮೇಲೆ 'ಆಗಲಿ' ಎಂದರು. ಆದರೆ ಕೂಡಲೆ ಕೇಳಿದರು. 'ನಾನು ನೀವು ಬರೆದ ಲೇಖನಗಳನ್ನು ಓದಿಲ್ಲ. ಬಹಳ ಶ್ರದ್ಧೆಯಿಂದ ಕೆಲಸಮಾಡುತ್ತ ಇರೋದರಿಂದ ಚೆನ್ನಾಗೇ ಬರೆದಿರುತ್ತೀರಿ. ಅದೂ ಅಲ್ಲದೆ ವಿ. ಸೀ. ಅವರೂ ನೋಡಿದ್ದಾರೆ. ಆದರೂ ಪುಸ್ತಕ ನೋಡದೆ ಹೇಗೆ ಮುನ್ನುಡಿ ಬರೆಯೋದು'?

ನನಗೆ ಒಂದು ನಿಮಿಷ ನಾನು ಮಾಡಿದ ಕೆಲಸ ಅನುಚಿತ ಎನಿಸಿತು. ಮೊದಲು ಲೇಖನಗಳನ್ನೆಲ್ಲಾ ತಂದು ತೋರಿಸಿ ಅಚ್ಚಿನ ಮನೆಗೆ ಕಳುಹಿಸುವುದಕ್ಕೆ ಮೊದಲು ಮುನ್ನುಡಿ ಕೇಳಬೇಕಿತ್ತು. ಲೇಖನಗಳನ್ನೇ ನೋಡದೆ ಅವರು ತಾನೆ ಹೇಗೆ ಮುನ್ನುಡಿ ಬರೆಯುತ್ತಾರೆ? ನಾನು 'ನನಗೆ ಗೊತ್ತಾಗಲಿಲ್ಲ ಸಾರ್. ಈಗೇನು ಮಾಡಲಿ. ನಾನು ತಪ್ಪುಮಾಡಿಬಿಟ್ಟೆ.' ಎಂದೆ. ಮುನ್ನುಡಿ ಬರೆಸುವ ವಿಷಯವನ್ನು ಮೊದಲೇ ನಿರ್ಧಾರಮಾಡದೆ ಮಾಡಿದ ಕೆಲಸದ ಫಲವಾಗಿತ್ತು ಇದು. ಅದಕ್ಕೆ ಅವರು ನಕ್ಕು 'ತಪ್ಪೇನೂ ಇಲ್ಲ. ಆದರೆ ಯಾವುದರ ವಿಷಯ ಬರೆದರೂ ಅದನ್ನು ಓದದೆ ಬರೆಯಬಾರದು. ಈಗೇನೂ ಪರವಾಗಿಲ್ಲ. ಪ್ರೆಸ್ಸಿನವ ರಿಗೆ ಹೇಳಿ ನನಗೆ ಪ್ರೂಫ್ ಕಳಿಸು. ನಾನು ಅದನ್ನು ಓದಿ ಮುನ್ನುಡಿ ಬರೆದು ಕಳಿಸುತ್ತೇನೆ.' ಎಂದರು. ನನಗಾದ ಸಂತೋಷದಲ್ಲಿ ಅವರನ್ನು ವಂದಿಸು ವುದನ್ನೂ ಮರೆತು 'ಬರ್ತೀನಿ ಸಾರ್' ಎಂದಷ್ಟೇ ಹೇಳಿ ನೇರವಾಗಿ ಪ್ರೆಸ್ಸಿಗೆ

ಹೋದೆ. ಅಲ್ಲಿ ಅವರನ್ನು ಗಡಿಬಿಡಿಪಡಿಸಿ ಅಚ್ಚಾಗಿದ್ದ ಲೇಖನಗಳ ಹಾಳೆಗಳನ್ನೂ, ಅಚ್ಚಾಗದಿದ್ದ ಲೇಖನಗಳ ಹಸ್ತಪ್ರತಿಗಳನ್ನೂ ತೆಗೆದುಕೊಂಡು ಮತ್ತೆ ಕೃಷ್ಣಶಾಸ್ತ್ರಿಗಳ ಮನೆಗೆ ಬಂದೆ. 'ನೀನೇ ಬಂದೆಯಾ. ಯಾಕೆ ಆಯಾಸ ಮಾಡಿಕೊಳ್ಳುತ್ತೀಯಾ, ಯಾರ ಕೈಲಾದರೂ ಕಳಿಸಿದ್ದರೆ ಆಗಿತ್ತು' ಎಂದರು. 'ಯಾರ ಕೈಲಾದರೂ ಕಳಿಸಿ ಅದು ನಿಮಗೆ ಸರಿಯಾದ ಕಾಲಕ್ಕೆ ಮುಟ್ಟಿತೋ ಇಲ್ಲವೋ ಎಂದು ಯೋಚನೆ ಮಾಡುವುದಕ್ಕಿಂತ ನಾನೇ ತಂದುಬಿಟ್ಟರೆ ಮನಸ್ಸಿಗೆ ಸಮಾಧಾನ' ಎಂದೆ. ಅವರಿಗೆ ಬಹಳ ಸಂತೋಷವಾಯಿತು.

'ಹೌದಮ್ಮ ಇದನ್ನು ಜ್ಞಾಪಕದಲ್ಲಿಟ್ಟುಕೊ. ನಮ್ಮ ಕೈಲಾಗುವ ಕೆಲಸವನ್ನು ನಾವೇ ಮಾಡಿಬಿಟ್ಟರೆ ಕೆಲಸ ಆಗಿಯೇ ಹೋಗುತ್ತದೆ. ಕೆಲಸ ಇನ್ನೊಬ್ಬರಿಗೆ ವಹಿಸಿ ಅವರ ಮೇಲೆ ಸೂಪರ್‌ವೈಸ್ ಮಾಡುವುದನ್ನು ನಾವು ಆದಷ್ಟು ಬಿಡಬೇಕು' ಎಂದರು. ಒಂದು ದಿನದ ಕಾಲಾವಕಾಶ ತೆಗೆದುಕೊಂಡು ಎಲ್ಲ ಲೇಖನಗಳನ್ನೂ ಓದಿದರು. ನಾನು ಕರಡು ಪ್ರತಿ ತಿದ್ದುವಾಗ ತಿದ್ದದೆ ಬಿಟ್ಟ ತಪ್ಪುಗಳನ್ನೂ ತಿದ್ದಿದರು. ನಮ್ಮನ್ನು ಸಂತೋಷದಿಂದ ಹೃದಯಪೂರ್ವಕವಾಗಿ ಹರಸಿ ಮುನ್ನುಡಿ ಬರೆದುಕೊಟ್ಟರು.

ಸಮಾರಂಭದ ದಿನ ಕಾರು ಕಳುಹಿಸಲೆ ಎಂದು ಕೇಳಿದೆ. ಅದಕ್ಕವರು 'ಬೇಡ. ಕಾಲು ಗಟ್ಟಿಯಾಗಿರೋವಾಗ ಕಾರು ಅನಾವಶ್ಯಕ' ಎಂದರು. 'ನಾನು ಬೇರೆ ಎಲ್ಲೋ ಹೋಗಬೇಕಾಗಿದೆ. ಅಲ್ಲಿಂದ ನೇರ ನಿಮ್ಮ ಸಮಾರಂಭಕ್ಕೆ ಬರುತ್ತೇನೆ. ಬರುವುದು ನನ್ನ ಕರ್ತವ್ಯ.' ಎಂದರು. ಸಮಾರಂಭಕ್ಕೆ ಬಂದು ನಮ್ಮನ್ನು ಹರಸಿದರು. ಅವರ ಆ ಹರಕೆ ನಮ್ಮ ಬಾಳ ಶಕ್ತಿಯಾಗಿ ಬೆಳಗುತ್ತಿದೆ.

**ಕೋ. ಚನ್ನಬಸಪ್ಪ.**

# ಸೌಜನ್ಯಮೂರ್ತಿ
# ಎ. ಆರ್. ಕೃಷ್ಣಶಾಸ್ತ್ರಿಗಳು

'ಶಾಸ್ತ್ರಿಗಳಿದಾರೆಯೇ ಅಮ್ಮ?'

'ಇದ್ದಾರೆ ಬನ್ನಿ, ಕುಳಿತುಕೊಳ್ಳಿ.'

ನಾನು ಮಂದವಾಗಿ ಉರಿಯುತ್ತಿದ್ದ ವಿದ್ಯುದ್ದೀಪದ ಬೆಳಕಿನಲ್ಲಿ ಇನ್ನೂ ನಿಂತುಕೊಂಡೇ ಇದ್ದೆ. ಅಷ್ಟರಲ್ಲೇ ಹೆಗಲಮೇಲೊಂದು ಉತ್ತರೀಯ ಎಳೆದುಕೊಂಡು ಶ್ರೀ ಕೃಷ್ಣಶಾಸ್ತ್ರಿಗಳು ನಾನು ನಿಂತಿದ್ದೆಡೆಗೆ ನಿಧಾನವಾಗಿ ಬಂದರು.

'ನಮಸ್ಕಾರ' ಎಂದು ಕೈಮುಗಿದೆ.

'ನಮಸ್ಕಾರ. ಕುಳಿತುಕೊಳ್ಳಿ' ಎಂದರು, ಕ್ಷೀಣಧ್ವನಿಯಲ್ಲಿ. ಅವರ ಕೃಶಶರೀರವನ್ನು ಕಂಡು ಅವರು ಶಾಸ್ತ್ರಿಗಳೇ ಎಂಬ ಸಂಶಯ ಬಂತು! ಅಷ್ಟು ಕೃಶವಾಗಿ ಹೋಗಿದ್ದರು; ಧ್ವನಿ ಅಷ್ಟು ಕುಗ್ಗಿ ಹೋಗಿತ್ತು! ಬೆಳಕೂ ಮಂದವಾಗಿತ್ತು. ಅವರ ಆ ಸ್ಥಿತಿಯನ್ನು ನೋಡಿ ನನಗೆ ಎದೆಯಲ್ಲಿ ಕೈಯಿಟ್ಟು ಕಲಕಿದಂತಾಯಿತು.

'ತುಂಬ ಬಳಲಿ ಬಿಟ್ಟಿದ್ದೀರಿ. ಗುರ್ತೇ ಸಿಕ್ಕುವಂತಿಲ್ಲ.'

'ಹೌದು. ಆರೋಗ್ಯ ಏನೇನೂ ಚೆನ್ನಾಗಿಲ್ಲ. ಉಂಡ ಅನ್ನ ಜೀರ್ಣವಾಗುತ್ತಿಲ್ಲ. ರಾತ್ರಿ ನಿದ್ರೆ ಬರುವುದಿಲ್ಲ. ಬಾತ್‌ರೂಮಿಗೆ ಹೋಗುವುದಕ್ಕೂ ಆಗುತ್ತಿಲ್ಲ. ಯಾರಾದರೂ ಕರೆದುಕೊಂಡೇ ಹೋಗಬೇಕು.....' ಇಷ್ಟು ಹೇಳುವುದಕ್ಕೇ ಪ್ರಯಾಸಪಟ್ಟರು.

ಅವರ ಆ ಸ್ಥಿತಿಯಲ್ಲಿ, ನಾನಾರು ಎಂಬುದು ಗೊತ್ತು ಸಿಕ್ಕಿತೋ ಇಲ್ಲವೋ ಎಂಬ ಅನುಮಾನ ಬಂತು. ನನ್ನ ಹೆಸರು ಹೇಳುತ್ತಿದ್ದಂತೆಯೇ....

'ಗುರ್ತುಸಿಕ್ಕಿತು. ಪ್ರಬುದ್ಧ ಕರ್ಣಾಟಕ'ದಲ್ಲಿ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಬಗ್ಗೆ ಬರೆಯುತ್ತಿದ್ದ ಪ್ರಬಂಧಗಳನ್ನು ಮುಂದುವರಿಸಿದ್ದೀರಾ? ಇತ್ತೀಚೆಗೆ ನಾನು ನೋಡಿಲ್ಲ. ಓದುವುದಕ್ಕೂ ತೊಂದರೆ....'

ಮಾತನಾಡುತ್ತಾ, ನಡುಮನೆಯಿಂದ ಅವರ ರೂಮಿನೊಳಗೆ ಹೋದೆವು. ಅಲ್ಲಿ ಬೆಳಕು ಇನ್ನೂ ಮಂದವಾಗಿತ್ತು. ಶ್ರೀ ರಾಮಕೃಷ್ಣರ ಭಾವಚಿತ್ರ ಗೋಡೆಯ ಮೇಲಿತ್ತು. ಕೆಲವು ಬಂಗಾಳಿ ಪುಸ್ತಕಗಳು ಒಂದು ಕಡೆ ಕುಳಿತಿದ್ದುವು.

'ನಿರ್ಮಲ ಭಾರತಿ' ನಿಮ್ಮಲ್ಲಿದೆಯೋ? ಎಂದು ಕೇಳಿದರು.

'ಇದೆ. ಓದಿದ್ದೇನೆ. ನಮ್ಮ ಮಕ್ಕಳೆಲ್ಲ ಓದಿದ್ದಾರೆ. ಅಂಥ ಪುಸ್ತಕ ಕನ್ನಡದಲ್ಲಿ ಬಹು ವಿರಳ.'

'ಇರಲಿ. ಇನ್ನೊಂದು ಕೊಡುತ್ತೇನೆ. ಹೊಸಮುದ್ರಣ ಬಂದಿದೆ' ಎಂದು ಒಂದು ಪ್ರತಿ ಕೈಗಿಟ್ಟರು. ನಾನು ಎರಡೂ ಕೈಚಾಚಿ, ಅದನ್ನು ಪ್ರಸಾದ ಎಂಬಂತೆ ತೆಗೆದುಕೊಂಡು:

'ತಮ್ಮ ಹಸ್ತಾಕ್ಷರದಿಂದ ಆಶೀರ್ವದಿಸಬೇಕು....' ಎಂದೆ,

'ಬರೆಯುವುದಾಗುವುದಿಲ್ಲ. ಇರಲಿ ತೆಗೆದುಕೊಳ್ಳಿ....' ಸ್ವಲ್ಪ ಹೊತ್ತು ಮೌನವಾಗಿದ್ದು. 'ಇನ್ನು ಸ್ವಾಮಿ ಸಾಕುಮಾಡಬೇಕು ಚೆನ್ನಬಸಪ್ಪನವರೇ. ಬಾಳೇ ಸಾಕಾಗಿದೆ' ಎಂದರು.

ಈ ಮಾತು ಕೇಳಿ ನನ್ನ ಕಣ್ಣಲ್ಲಿ ನೀರು ಬಂತು. ಈ ಮಾತಾಗಿ ಇಲ್ಲಿಗೆ ಎರಡುವರೆ ವರ್ಷಗಳಾಗಿರಬೇಕು. ಅಂದು ಅವರು ಬಯಸಿದ ಕೊನೆ ಮೊನ್ನೆ ತಾನೆ ಬಂತು! ಅವರಿಗೇನೋ ಅದು ಬಂಧವಿಮೋಚನೆ. ಆದರೆ ಇರುವ ನಮಗೆ?

ಶ್ರೀ ಕೃಷ್ಣಶಾಸ್ತ್ರಿಗಳವರ ಶಿಷ್ಯತ್ವ ಪಡೆಯುವ ಸೌಭಾಗ್ಯ ನನ್ನದಾಗಿರಲಿಲ್ಲ. ಅವರ ನಿಕಟ ಪರಿಚಯದ ಪುಣ್ಯವೂ ನನಗೆ ಒದಗಲಿಲ್ಲ. ಅವರು ನುಡಿದು ನಡೆದು, ಪಾವನಗೊಳಿಸಿದ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗಮಾಡುವ ಸೌಕರ್ಯವೂ ನನಗೆ ಲಭಿಸಲಿಲ್ಲ. ಆದರೂ ಅವರ ಬಗ್ಗೆ ನನ್ನಲ್ಲಿ ಗುರುಭಕ್ತಿ ವುಂಟಾಯಿತು.

ಅದಕ್ಕೆ ಏಕಮಾತ್ರ ಕಾರಣ, ಅವರು ಮಹಾಕವಿ ಕುವೆಂಪು ಅವರ ವಿದ್ಯಾಗುರುಗಳು ಎಂಬುದು. ಶ್ರೀ ಕುವೆಂಪು ಅವರ 'ರಕ್ತಾಕ್ಷಿ' ನಾಟಕಕ್ಕೆ ಮುನ್ನುಡಿ ಬರೆಯುತ್ತಾ ಶ್ರೀ ಶಾಸ್ತ್ರಿಗಳು ತಮಗೂ ಕವಿಗಳಿಗೂ ನಡೆದ ಸಂಭಾಷಣೆಯನ್ನು ಸ್ಮರಿಸಿ ಹೀಗೆ ಬರೆದಿದ್ದಾರೆ:

"ಈಗ ಕೆಲವು ತಿಂಗಳ ಹಿಂದೆ ನನ್ನ ಪ್ರಿಯಮಿತ್ರರಾದ ಶ್ರೀಮಾನ್ ಕೆ. ವಿ. ಪುಟ್ಟಪ್ಪನವರು ತಮ್ಮ ರಕ್ತಾಕ್ಷಿ ನಾಟಕಕ್ಕೆ ನಾನು ಒಂದು ಮುನ್ನುಡಿಯನ್ನು ಬರೆಯಬೇಕೆಂದು ಕೇಳಿದರು. ನಾನು 'ಬಂಗಾರದ ಅರಮನೆಗೆ ಹಿತ್ತಾಳೆಯ ಕಲಶವೆ?' ಎಂದು ಆಕ್ಷೇಪಿಸಿದೆ. ಅವರು ಅದಕ್ಕೆ ಉತ್ತರವಾಗಿ 'ಎಂತಹ ಅರಮನೆಯಾದರೆ ಏನು? ಸಿಡಿಲುಕಂಬಿ ಕಬ್ಬಿಣದ್ದಾದರೂ ಅದರ ಕ್ಷೇಮಕ್ಕೆ ಅತ್ಯಾವಶ್ಯಕವಲ್ಲವೆ ಎಂದು ಉಪಮಾನಕ್ಕೆ ಪ್ರತ್ಯುಪಮಾನವನ್ನು ಕೊಟ್ಟು ಒಂದು ವಿಶ್ವಾಸಪೂರ್ಣವಾದ ವಾಕ್ಯಾರ್ಥ ನಡೆಸಿದರು. ಈ ವಾಕ್ಯಾರ್ಥದಲ್ಲಿ ಅವರೇ ಗೆಲ್ಲಲು

'ಶಿಷ್ಯಾದಿಚ್ಛೇತ್ ಪರಾಜಯಂ' ಎಂಬ ಹಳೆಯ ಹೇಳಿಕೆಯ ತತ್ತ್ವವು ಹೊಸದಾಗಿ ಸ್ಥಾಪಿತವಾಯಿತು. ಇದು ಈ ಮುನ್ನುಡಿಯ ಚರಿತ್ರೆ."

ಈ ಮಾತುಗಳನ್ನು ಓದಿದೊಡನೆಯೇ ಈ ಗುರು–ಶಿಷ್ಯರ ಅನ್ಯಾದೃಶ ಸಂಬಂಧದಿಂದ ನಾನು ಸುಮ್ಮನೆ ತಲೆಬಾಗಿದೆ. ಈ ಮಾತುಗಳಲ್ಲಿರುವ ಚಮತ್ಕಾರ, ಉಪಮೆ ಪ್ರತ್ಯುಪಮೆಗಳ ಸ್ವಾರಸ್ಯ ಬುದ್ಧಿಗೆ ಮೆಚ್ಚಿಗೆಯಾವುದು ಸಹಜ. ಆದರೆ, ಅವುಗಳ ಹಿಂದಿರುವ ಮನೋಭಾವದ ಗುರುಗಳ ಔದಾರ್ಯ, ವೈಶಾಲ್ಯ, ದೊಡ್ಡಸ್ತಿಕೆ, ಸೌಜನ್ಯ, ಗುಣಗ್ರಾಹ್ಯ ಬುದ್ಧಿ ಇವುಗಳಿಂದ ಶ್ರೀ ಶಾಸ್ತ್ರಿಗಳಿಗೆ ನನ್ನ ಮನಸ್ಸು ಮಣಿಯಿತು!

ಶ್ರೀ ಶಾಸ್ತ್ರಿಗಳು ತಮ್ಮ ಶಿಷ್ಯರ ಬಗ್ಗೆ ತೋರಿದ ಈ ದೊಡ್ಡಸ್ತಿಕೆ ಆಗಿನ ಕಾಲದಲ್ಲಿ ಬಹುದೊಡ್ಡ ಮಹತ್ವದ ಮಾತು. ಏಕೆಂದರೆ, ನಮ್ಮ ದೇಶದಲ್ಲಿ ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಎಲ್ಲರೂ ಶ್ರೀ ಶಾಸ್ತ್ರಿಗಳಂತೆ ಗುಣಗ್ರಾಹಿಗಳಲ್ಲ. ಒಂದು ವೇಳೆ ಗ್ರಹಿಸಿದರೂ ಅವರಂತೆ ಅದನ್ನು ಮುಕ್ತಕಂಠದಿಂದ ಹೊಗಳುವುದು ಕಡಮೆ. ಅದರಲ್ಲೂ ತಮ್ಮ ಶಿಷ್ಯರಲ್ಲೇ ತಮಗಿಂತ ಅಧಿಕ ಸಾಹಿತ್ಯಶಕ್ತಿ ಕೀರ್ತಿ ಕಂಡು ಬಂದುದನ್ನು ನೋಡಿ ಸಹಿಸುವುದೇ ಕಷ್ಟ. ಅದನ್ನು ಪ್ರಶಂಸಿಸುವುದು ದೂರ ಉಳಿಯಿತು!

ಆದರೆ ಶ್ರೀ ಶಾಸ್ತ್ರಿಗಳು ಮಾತ್ರ ಶ್ರೀ ಕುವೆಂಪು ಅವರ ಬಗ್ಗೆ ಕಡೆಯ ತನಕ ಇದೇ ಸದ್ಭಾವನೆಯನ್ನು ಇಟ್ಟುಕೊಂಡಿದ್ದರು. ಮೊಟ್ಟಮೊದಲನೆಯ ವಿದ್ಯಾರ್ಥಿ ಕವಿ ಸಮ್ಮೇಳನವನ್ನು ಏರ್ಪಡಿಸಿ ಅದಕ್ಕೆ ಶ್ರೀ ಕುವೆಂಪು ಅವರನ್ನೇ ಅಧ್ಯಕ್ಷರಾಗಿ ಮಾಡಿದ್ದೂ ಶ್ರೀ ಶಾಸ್ತ್ರಿಗಳೇ. ಅಲ್ಲಿಂದ ಹಿಡಿದು ಶ್ರೀ ರಾಮಾಯಣದರ್ಶನಂ ಮಹಾಕಾವ್ಯಕ್ಕೆ ಭಾರತ ಸಾಹಿತ್ಯ ಅಕ್ಯಾಡೆಮಿ ಪ್ರಥಮ ಪಾರಿತೋಷಕವನ್ನು ಕೊಟ್ಟು ಸನ್ಮಾನಿಸುವ ವರೆಗೂ ಶ್ರೀ ಶಾಸ್ತ್ರಿಗಳು ತಮ್ಮ ಶಿಷ್ಯರ ವೃದ್ಧಿಯಾಗುತ್ತಿರುವ ಕೀರ್ತಿಯಿಂದ ಪುಲಕಿತರಾಗಿ ಹೆಮ್ಮೆ ಪಡುತ್ತಿದ್ದರು.

ಶ್ರೀ ಶಾಸ್ತ್ರಿಗಳ ಸೌಜನ್ಯವಂತೂ ಅವರ್ಣನೀಯ. ಅದರಲ್ಲೂ ತಮ್ಮ ಕೈಕೆಳಗೆ ಓದಿ ಆಡಿದ ತಮ್ಮ ಶಿಷ್ಯರ ಬಗ್ಗೆ ಅವರಿಗೆಷ್ಟು ಗೌರವ! 'ಬಂಕಿಮ ಚಂದ್ರರ ವಿಚಾರವಾಗಿ ರವೀಂದ್ರರು ಬರೆದ ಸಮಾಲೋಚನೆಯೊಂದನ್ನು ತಮ್ಮ ಗ್ರಂಥದ ಪೀಠಿಕಾಭಾಗದಲ್ಲಿ ಸೇರಿಸುವ ಸಂದರ್ಭದಲ್ಲಿ' ಶ್ರೀ ಕುವೆಂಪು ಅವರ ಮುನ್ನುಡಿಗಾಗಿ ಕಾಗದ ಬರೆಯುತ್ತಾ ಶ್ರೀ ಕೃಷ್ಣಶಾಸ್ತ್ರಿಗಳು: "ಇಬ್ಬರು ಕವೀಂದ್ರರು ಎರಡುಕಡೆಯಿಂದ ನನ್ನನ್ನೂ ಬಂಕಿಮನನ್ನೂ ಎತ್ತಿ ನಿಲ್ಲಿಸಿದಂತಾಗುತ್ತದೆ" ಎಂದು ತಮ್ಮ ಒಲವರವನ್ನು ಮೆರೆದಿದ್ದಾರೆ.[1]

---

[1] 'ಬಂಕಿಮಚಂದ್ರ'–ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು. ಮುನ್ನುಡಿಯಲ್ಲಿ ಶ್ರೀ ಕುವೆಂಪು, ಪುಟ xii.

ಶ್ರೀ ಶಾಸ್ತ್ರಿಗಳ ಈ ಸೌಜನ್ಯದಿಂದ ಯಾರಿಗೆ ತಾನೆ ಅವರ ಬಗ್ಗೆ ಗೌರವ, ಪೂಜ್ಯಬುದ್ಧಿ ಉದ್ದೀಪನವಾಗುವುದಿಲ್ಲ?

ಈ ಬಗೆಯ ವಾತ್ಸಲ್ಯ ಮಹಾಕವಿಗಳಿಗೆ ಮಾತ್ರ ಮೀಸಲಾಗಿರಲಿಲ್ಲ. ಸಾಹಿತ್ಯಕ್ಷೇತ್ರದಲ್ಲಿ ಉತ್ತಮ ಕೆಲಸ ಮಾಡಿದವರು ಅವರೆಷ್ಟೇ ಸಣ್ಣವರಾಗಿರಲಿ ಅದರಬಗ್ಗೆ ಅದೇ ಬಗೆಯ ವಾತ್ಸಲ್ಯ; ಗೌರವ. ೧೯೫೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಿದ್ದ ಶ್ರೀ ಕುವೆಂಪು ಸನ್ಮಾನಸಮಾರಂಭದ ಅಧ್ಯಕ್ಷ ಸ್ಥಾನದಿಂದ ಶ್ರೀ ರಾಮಾಯಣದರ್ಶನದ ಬಗ್ಗೆ ಬರೆದ ತಮಗಿಂತ ಎಷ್ಟೋ ಕಿರಿಯರಾದವರನ್ನು ಅವರು ಸ್ಮರಿಸಿದರು. ಅವರು ಕಂಡು, ಕೇಳಿ, ಅರಿಯದ ನನ್ನ ಬಗ್ಗೆ ಅವರಿಗಿದ್ದ ವಾತ್ಸಲ್ಯಕ್ಕೂ ಅವರ ಸಜ್ಜನಿಕೆ ಸೌಜನ್ಯಗಳೇ ಕಾರಣ.

ಹೀಗೆ ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ಆಪ್ತಶಿಷ್ಯರಿಗೂ, ತೀರಾ ಕಿರಿಯರಿಗೂ ಕೊಟ್ಟ ಪ್ರೋತ್ಸಾಹ, ತೋರಿದ ಆದರ ಪ್ರೇಮಗಳಲ್ಲದೆ, ಶ್ರೀನಿವಾಸರಂತಹ ಶ್ರೇಷ್ಠ ಕತೆಗಾರರಿಗೂ ಧೈರ್ಯಕೊಟ್ಟರೆಂದು ಶ್ರೀ ಮಾಸ್ತಿ ಅವರೇ ಹೇಳಿದ್ದಾರೆ. 'ಪ್ರಬುದ್ಧಕರ್ಣಾಟಕ ಕೃಷ್ಣಶಾಸ್ತ್ರಿಗಳ ವಿಮರ್ಶೆಯ ಮೂಲಕ ನನಗೆ ಆಗ ಆವಶ್ಯಕವಾಗಿದ್ದ ಧೈರ್ಯವನ್ನು ಕೊಟ್ಟಿತು'[2] ಎಂದಿದ್ದಾರೆ. ಶ್ರೀ ಟಿ. ಎಸ್. ವೆಂಕಣ್ಣಯ್ಯ ಮತ್ತು ಕೃಷ್ಣಶಾಸ್ತ್ರಿಗಳ ಯಮಳಜೀವನ ಹೊಸಗನ್ನಡದ ಅಶ್ವಿನೀ ದೇವತೆ ಆಯಿತು ಎಂದು ಮುಕ್ತಕಂಠದಿಂದ ಕೊಂಡಾಡಿದ್ದಾರೆ.

ಶ್ರೀ ಕೃಷ್ಣಶಾಸ್ತ್ರಿಗಳು ಮತ್ತೆ ಇನ್ನೇನನ್ನೂ ಮಾಡದೆ, ಬರೆಯದೆ, ಇಷ್ಟೇ (ಮೇಲೆ ಹೇಳಿದ ಹಿರಿಕಿರಿಯ ಲೇಖಕರ ಬಗ್ಗೆ ವಾತ್ಸಲ್ಯ, ಪ್ರೋತ್ಸಾಹವನ್ನು ಕೊಡುವ ಔದಾರ್ಯ ತೋರಿಸಿದ) ಕೆಲಸಮಾಡಿದ್ದರೂ ಅವರು ಕನ್ನಡ ಜನರ ಚಿರಕೃತಜ್ಞತೆಗೆ ಪಾತ್ರರಾಗುತ್ತಿದ್ದರು. ಆದರೆ, ಅವರು 'ಪ್ರಬುದ್ಧಕರ್ಣಾಟಕ' ತ್ರೈಮಾಸಿಕ ಪತ್ರಿಕೆಯನ್ನು ಸ್ಥಾಪಿಸಿ, ಅದರ ಸಂಪಾದಕರಾಗಿ ಪಟ್ಟ ಕಷ್ಟ, ಅನುಭವಿಸಿದ ಭವಣೆ, ದುಡಿದ ದುಡಿಮೆ ಅಷ್ಟಿಷ್ಟಲ್ಲ! ಕನ್ನಡ ಮತ್ತು ಕನ್ನಡ ಪಂಡಿತರ ಬಗ್ಗೆ ಎಳ್ಳಷ್ಟೂ ಆದರಾಭಿಮಾನ ಗೌರವಗಳಿಲ್ಲದ, ತದ್ವಿರುದ್ಧವಾಗಿ ತಿರಸ್ಕಾರವಿದ್ದ ಈ ಶತಮಾನದ ಆದಿಯಲ್ಲಿ ಆ ಪುಣ್ಯಾತ್ಮರು ಕನ್ನಡಕ್ಕೂ, ಕನ್ನಡ ಪಂಡಿತರಿಗೂ ಗೌರವ, ಸ್ಥಾನಮಾನಗಳನ್ನು ತಂದುಕೊಟ್ಟರು. ನಿಂತುಕೊಳ್ಳಲು ಕಾಲಿಲ್ಲದ, ಎತ್ತಿತೋರಿಸಲು ಮುಖವಿಲ್ಲದ ಜನರಿಗೆ, ಆ ಜನರ ಭಾಷೆಗೆ, ಸತ್ವವಿದೆ ಎಂಬುದನ್ನು ತೋರಿಸಿಕೊಟ್ಟರು. ಆತ್ಮಪ್ರತ್ಯಯವನ್ನುಂಟುಮಾಡಿ ನಾವೂ ಒಬ್ಬ ಮನುಷ್ಯರೆಂಬ ಪ್ರಜ್ಞೆಯನ್ನು ಎಚ್ಚರಿಸಿದರು. ಇಂದು ಕರ್ಣಾಟಕ ಏಕೀಕರಣವಾಗಿ ಒಂದುರಾಜ್ಯ ನಿರ್ಮಾಣವಾಗಿದ್ದರೆ, ಅದಕ್ಕೆ ಶ್ರೀ ಕೃಷ್ಣಶಾಸ್ತ್ರಿಗಳು ಹಾಕಿದ ಬುನಾದಿ ಸಲ್ಪಮಟ್ಟಿಗಾದರೂ ಕಾರಣ. 'ಕನ್ನಡ ಸಾಹಿತ್ಯ ಆಗೆಯ

---

ಪ್ರಬುದ್ಧ ಕರ್ಣಾಟಕ ತಾರಣ ಸಂ.–೧೦೨, ಬೆಳ್ಳಿಯ ಸಂಚಿಕೆ. ಪು. ೩೪.

ಸ್ಥಿತಿಯಲ್ಲಿದ್ದಾಗ ದುಡಿದವರು ಯಾರು ಎಂಬುದನ್ನು ಜ್ಞಾಪಕದಲ್ಲಿಡುವುದು ಲೇಖಕ ಲೋಕಕ್ಕೆ ಶ್ರೇಯಸ್ಕರ'–ಎಂಬ ಶ್ರೀ ಮಾಸ್ತಿಯವರ ಮಾತು ತ್ರಿಕಾಲ ಸತ್ಯ !

ಶ್ರೀ ಕೃಷ್ಣಶಾಸ್ತ್ರಿಗಳವರ ಇದಿಷ್ಟು ಸೇವೆಯೇ ಅವರಿಗೆ ಅಜರಾಮರ ಕೀರ್ತಿಯನ್ನು ಕನ್ನಡಿಗರ ಹೃದಯ ಪೀಠದಲ್ಲಿ ಶಾಶ್ವತ ಸ್ಥಾನವನ್ನು ಪಡೆಯಲು ಸಾಕಾಗಿತ್ತು. ಆದರೆ, ಶ್ರೀ ಶಾಸ್ತ್ರಿಗಳು ಕನ್ನಡ ಸಾರಸ್ವತ ಆಕಾಶದಲ್ಲಿ ಧ್ರುವ, ಅರುಂಧತಿಯರಂತಹ ಕೃತಿ ನಕ್ಷತ್ರಗಳನ್ನು ಕೊಟ್ಟಿದ್ದಾರೆ. ಅವರ 'ಸಂಸ್ಕೃತನಾಟಕ' ಘನವಿದ್ವತ್ತಿನ ರಸಘಟ್ಟಿ. ಯುಗಕ್ಕೊಮ್ಮೆ ಹುಟ್ಟುವ ಅಪೂರ್ವ ಕೃತಿ. ಅವರ 'ವಚನ ಭಾರತ' ತಿಳಿಗನ್ನಡಕ್ಕೆ ಉತ್ಕೃಷ್ಟ ಮಾದರಿ. ಅವರ 'ಬಂಕಿಮಚಂದ್ರ' ಬಂಗಾಳೀ ಸಾಹಿತ್ಯ ಪ್ರಪಂಚಕ್ಕೆ ಕನ್ನಡಿಗರನ್ನು ಕರೆದೊಯ್ಯುವ ವಿಮಾನಯಾತ್ರೆ. ಅವರ 'ನಿರ್ಮಲ ಭಾರತಿ' ಮಕ್ಕಳ ಮನಸ್ಸನ್ನು ಅರಳಿಸುವ ಸುಲಲಿತ ಜೋಗುಳ ಗೀತೆ. ಮೇಲಾಗಿ ಶ್ರೀ ರಾಮಕೃಷ್ಣ ಪರಮಹಂಸರನ್ನು ಮೊಟ್ಟಮೊದಲ ಬಾರಿಗೆ ಕನ್ನಡನಾಡಿಗೆ ಪರಿಚಯಿಸಿಕೊಟ್ಟು, ಕನ್ನಡಿಗರ ಕುಂಡಲಿನೀ ಶಕ್ತಿಯನ್ನು ಸ್ವಲ್ಪ ಮಟ್ಟಿಗಾದರೂ ಜಾಗ್ರತಗೊಳಿಸಿದ ಗುರುಸಮಾನರು ಅವರು. ಅಂಥವರು ನಮ್ಮ ಮಧ್ಯೆ ಇದ್ದಷ್ಟು ಕಾಲವೂ ನಮಗೆ ಶ್ರೇಯಸ್ಸೇ. ಆದರೆ ಸಜೀವ ಇಲ್ಲದಿದ್ದಮಾತ್ರಕ್ಕೆ ಅವರು ಇಲ್ಲದಂತಾಗುವವರಲ್ಲ. ಪಂಪ ರನ್ನರಂತೆ, ಹರಿಹರ ರಾಘವಾಂಕರಂತೆ, ಲಕ್ಷ್ಮೀಶ ನಾರಾಯಣಪ್ಪರಂತೆ ಕನ್ನಡ ಇರುವವರೆಗೂ ಶ್ರೀ ಶಾಸ್ತ್ರಿಗಳು ಇದ್ದೇ ಇರುವರು. ಅವರು ನಮ್ಮ ಮನಸ್ಸಿನಿಂದ ಮರೆಯಾದರೆ ನಾವು ಕೃತಘ್ನರು ಎಂದು ಸಿದ್ಧವಾಗುವುದೇ ಹೊರತು, ಅವರು ಮರೆಯತಕ್ಕವರೆಂದಲ್ಲ.

# ಶಾಸ್ತ್ರಿಗಳ ಸೂಕ್ತಿಗಳು

**ಪ್ರೀತಿ:**

ಪ್ರೀತಿ ಎಂಬುದು ಲೋಕದಲ್ಲಿ ಬಹಳ ಅಪರೂಪವಾದ ಪದಾರ್ಥ.

(ಕಥಾಮೃತ, ಪೀಠಿಕೆ, ಪು. ೬೦)

*   *   *

**ವಿಧಿ:**

ದೇವರು ದಯಾಮಯ ಹೌದೋ ಅಲ್ಲವೋ ವಿಧಿಯೇನೋ ನಿರ್ದಯವೆಂಬುದು ಅನುಭವಕ್ಕೆ ಬಂದಿರುವ ಸಂಗತಿ.

(ಕಥಾಮೃತ, ಪೀಠಿಕೆ, ಪು. ೫೭)

*   *   *

**ಸ್ವಭಾವ:**

ಕಲ್ಲನ್ನು ತೇಯುವುದರಿಂದ ಮೇಲ್ಭಾಗಕ್ಕೆ ಹೊಳಪು ಬರುತ್ತದೆ! ಅದು ಮೃದು ವಾಗುವುದಿಲ್ಲ.

(ಕಥಾಮೃತ, ಪೀಠಿಕೆ, ಪು. ೫೮)

*   *   *

**ಮಾತು-ಮೌನ:**

ಮಾತಾಡುವುದರಿಂದ ಪರಹಿಂಸೆಯಾಗುವುದಾದರೆ, ಮುಚ್ಚುಮರೆಯೇ ಗುಣ, ಮೌನವೇ ಭೂಷಣ.

(ಕಥಾಮೃತ, ಪೀಠಿಕೆ, ಪು. ೫೯)

*   *   *

**ಸಾಮಾನ್ಯಜನ-ಮಹಾಪುರುಷ:**

ಸಾಮಾನ್ಯಜನಗಳು ಸೊಡಲಿನ ದೀಪಗಳ ಹಾಗೆ; ಕಣ್ಣು ಕಾಣುವಷ್ಟು ಬೆಳಕಾಗ ಬೇಕಾದರೆ, ಅಂಥ ಹಲವು ದೀಪಗಳು ಬೇಕಾಗಬಹುದು. ಆದರೆ ತೇಜಶ್ಶಾಲಿಯೂ, ಶೀಲ ಸಂಪನ್ನನೂ ಆದ ಮಹಾಪುರುಷನು ಚಂದ್ರಸೂರ್ಯರಂತೆ ಒಬ್ಬೊಬ್ಬನೇ ಕತ್ತಲೆಯನ್ನು ಕಳೆದು ಬೆಳಕನ್ನೂ ಉಲ್ಲಾಸವನ್ನೂ ಉಂಟುಮಾಡಿಯಾನು.

(ವಚನಭಾರತ, ಪೀಠಿಕೆ, ಪು. ೬೮)

*   *   *

**ಇತರರ ಅಜ್ಞಾನ:**

ನಮ್ಮ ಅಜ್ಞಾನ, ಅವಿವೇಕ, ಬುದ್ಧಿಮಾಂದ್ಯ, ಮೌಢ್ಯ ಇವುಗಳಿಂದ ಕೆಲವು ವೇಳೆ ನಮಗೆ ಕಷ್ಟಗಳು ಒದಗಬಹುದು. ಆದರೆ ಮಿಕ್ಕ ಕೆಲವು ವೇಳೆ ಇತರರ ಅಜ್ಞಾನ ಅವಿವೇಕಾದಿ ಗಳಿಂದಲೂ ನಾವು ಕಷ್ಟಕ್ಕೆ ಸಿಕ್ಕುತ್ತೇವೆ.

(ವಚನಭಾರತ, ಪೀಠಿಕೆ, ಪು. ೬೩)

ಡಾ. ಕೆ. ಎಂ. ಕೃಷ್ಣರಾವ್

# ಶಾಸ್ತ್ರಿಗಳ ಶಿಷ್ಯವಾತ್ಸಲ್ಯ

'ಪ್ರಬುದ್ಧ ಕರ್ಣಾಟಕ' ತನ್ನ ಸಂಸ್ಥಾಪಕರ ಸ್ಮಾರಕ ಸಂಚಿಕೆಯನ್ನು ಪ್ರಕಟಿಸುತ್ತಿರುವುದು ಉಚಿತವೂ ಆವಶ್ಯಕವೂ ಆದ ಕಾರ್ಯ. ಐವತ್ತು ವರ್ಷಗಳ ಹಿಂದೆ ಸಾವಿರದ ಒಂಭೈನೂರ ಹದಿನೆಂಟರಲ್ಲಿ ಬೆಂಗಳೂರಿನ ವಿಜ್ಞಾನ ವಿಷಯ ಪ್ರಧಾನವಾದ ಸೆಂಟ್ರಲ್ ಕಾಲೇಜಿನಲ್ಲಿ ಕರ್ಣಾಟಕ ಸಂಘವನ್ನು ಅದರೊಂದಿಗೇ ಅದರ ಆಶ್ರಯದಲ್ಲೇ 'ಪ್ರಬುದ್ಧ ಕರ್ಣಾಟಕ'ವೆಂಬ ಕನ್ನಡ ಪತ್ರಿಕೆಯನ್ನೂ, ಸರ್ವವೂ ಆಂಗ್ಲಮಯವಾಗಿದ್ದ ಆ ಕಾಲದಲ್ಲಿ ಸ್ಥಾಪಿಸಿದ ಕೀರ್ತಿ, ಕೆಚ್ಚು ಕೃಷ್ಣಶಾಸ್ತ್ರಿಗಳವರದು. ಐವತ್ತು ವರ್ಷಗಳ ತರುವಾಯ ಆ ಕರ್ಣಾಟಕ ಸಂಘವೂ ಆ ಪ್ರಬುದ್ಧ ಕರ್ಣಾಟಕ ಪತ್ರಿಕೆಯೂ ತಮ್ಮ ಸ್ವರ್ಣ ಮಹೋತ್ಸವ ಆಚರಿಸುವ ಸುವರ್ಣ ಸಂಚಿಕೆಯನ್ನು ಪ್ರಕಟಿಸುವಸನ್ನಾಹದಲ್ಲಿದ್ದಾರೆ! ಪ್ರಬುದ್ಧ ಕರ್ಣಾಟಕದಂತಹ ಹಿರಿಯ ಪತ್ರಿಕೆಯನ್ನೂ ಕಾಲೇಜಿನ ಸಂಘವೊಂದರ ಆಶ್ರಯದಲ್ಲಿ ಧೈರ್ಯದಿಂದ ಪ್ರಾರಂಭಿಸಿ, ಅನೇಕ ವರ್ಷಗಳ ಕಾಲ ಅದರ ಸಂಪಾದಕರಾಗಿದ್ದುಕೊಂಡು ಉತ್ಕೃಷ್ಟ ಲೇಖನ–ವಿಮರ್ಶೆಗಳನ್ನು ತಾವೇ ಬರೆದು, ಇತರ ಅನೇಕರಿಂದ ಬರೆಸಿ, ಕಷ್ಟದಿಂದಲೇ ಆದರೂ ಪ್ರೀತಿಯಿಂದ ದುಡಿದು, ಆ ಪತ್ರಿಕೆಗೆ ಕನ್ನಡ ನಾಡಿನ ವಿದ್ವತ್ಪ್ರಪಂಚದಲ್ಲಿ ಭದ್ರವೂ ಚಿರಸ್ಥಾಯಿಯೂ ಆದ ಸ್ಥಾನವನ್ನು ಗಳಿಸಿಕೊಟ್ಟು, ಅದು ಮೈಸೂರು ವಿಶ್ವವಿದ್ಯಾನಿಲಯದ ಪತ್ರಿಕೆಯಾಗುವಂತೆ ಮಾಡಿದ ಶ್ರೇಯಸ್ಸು ಅದರ ಸಂಸ್ಥಾಪಕ–ಸಂಪಾದಕ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳಿಗೆ ಸಲ್ಲತಕ್ಕುದಾಗಿದೆ. ಅವರ ಆತ್ಮ, ಪಾರ್ಥಿವ ಶರೀರವನ್ನು ಬಿಟ್ಟುಹೋದ ಈ ದುಃಖಮಯ ಸನ್ನಿವೇಶದಲ್ಲಿ ಅವರ ಗೌರವಾರ್ಥವಾಗಿ ಪ್ರಬುದ್ಧ ಕರ್ಣಾಟಕದ ೫೦ನೆಯ ಸಂಪುಟದ ಮೊದಲನೆಯ ಸಂಚಿಕೆ ಅವರ ಸ್ಮರಣ ಸಂಚಿಕೆಯಾಗಿ ಹೊರಬೀಳುತ್ತಿರುವುದು ಕೇವಲ ಉಚಿತವಾಗಿದೆ.

ಈ ಸ್ಮರಣ ಸಂಚಿಕೆಗೆ ಡಾ. ಶಾಸ್ತ್ರಿಗಳ ಅನೇಕ ಶಿಷ್ಯರಲ್ಲಿ ಒಬ್ಬನಾದ ನಾನು ಗುರುಗಳ ವಿಚಾರವಾಗಿ ಅಲ್ಪಸ್ವಲ್ಪವಾದರೂ, ತಿಳಿದುದನ್ನು ಬರೆಯುವುದು ಉಚಿತವೂ, ನನ್ನ ಆದ್ಯ ಕರ್ತವ್ಯವೂ ಆಗಿದೆ. ಲೇಖನವೊಂದನ್ನು ಕಳಿಸಿಕೊಡ

ಬೇಕೆಂದು ಸಂಪಾದಕರ ಪತ್ರ ಬಂದ ಮೇಲಂತೂ, ಅದನ್ನು ಮಾಡಲೇಬೇಕು ಎಂಬ ನಿಷ್ಠೆಯಿಂದ, ಕಾಲಾವಕಾಶ ಸಾಕಷ್ಟು ಇಲ್ಲದಿದ್ದರೂ, ಒಂದೆರಡು ವಿಚಾರ ವನ್ನಾದರೂ ಬರೆಯೋಣವೆಂದು ಪ್ರವೃತ್ತನಾಗಿದ್ದೇನೆ.

ಐದು ವರ್ಷಗಳ ಕಾಲ ಪ್ರೊ. ಕೃಷ್ಣಶಾಸ್ತ್ರಿಗಳ ಅಪಾರ ಶಿಷ್ಯವೃಂದದಲ್ಲಿ ನಾನೂ ಒಬ್ಬನಾಗುವ ಸುಯೋಗ ನನಗೆ ಮೈಸೂರಿನ ಮಹಾರಾಜರ ಕಾಲೇಜಿನಲ್ಲಿ ಒದಗಿತ್ತು (೧೯೪೧-೧೯೪೬). ಕನ್ನಡ ಆನರ್ಸ್ ಮತ್ತು ಎಂ.ಎ. ತರಗತಿಗಳಲ್ಲಿ ಅವರ ಸಮರ್ಥ ನೇತೃತ್ವದಲ್ಲಿ ಕನ್ನಡ ಭಾಷೆ ಸಾಹಿತ್ಯಗಳನ್ನು ವ್ಯಾಸಂಗಮಾಡುವ ಸದವಕಾಶ ಪಡೆದಿದ್ದುದನ್ನು ನಾನು ಸದಾ ಸ್ಮರಿಸುವವನಾಗಿದ್ದೇನೆ. ಆಗಿನ ಆ ಕಾಲೇಜು ಪ್ರಖ್ಯಾತ ವಿದ್ವಾಂಸರೂ, ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಅಧ್ಯಾಪಕರೂ ಆದ ಅನೇಕ ಮಹನೀಯರಿಂದ ತುಂಬಿ ಕಂಗೊಳಿಸುತ್ತಿತ್ತು. ಮಾನ್ಯ ಕೃಷ್ಣ ಶಾಸ್ತ್ರಿಗಳು ಕನ್ನಡದ ಪ್ರೊಫೆಸರ್ ಆಗಿದ್ದರು. (ಅವರು ಕಾರ್ಯನಿಮಿತ್ತ ಆರು ತಿಂಗಳು ರಜಪಡೆದಾಗ ಆ ಸ್ಥಾನದಲ್ಲಿ ಕನ್ನಡ ಕವಿ ಪುಂಗವ ಶ್ರೀ ಕುವೆಂಪು ಅವರು ತಾತ್ಕಾಲಿಕ ಪ್ರೊಫೆಸರಾಗಿ ಬಂದರು). ಪ್ರೊ. ಬಿ. ಎಂ. ಶ್ರೀಕಂಠಯ್ಯನವರು ಆಗಾಗ್ಗೆ ಬಂದು ಉಪನ್ಯಾಸಗಳನ್ನು ಮಾಡುತ್ತಿದ್ದರು. ಶ್ರೀ ವಿ. ಸೀ., ಶ್ರೀ ತೀ. ನಂ. ಶ್ರೀಕಂಠಯ್ಯ, ಶ್ರೀ ಡಿ. ಎಲ್. ಎನ್., ಶ್ರೀ ಎನ್. ಅನಂತರಂಗಾಚಾರ್ಯ, ಶ್ರೀ ಕ. ವೆಂ. ರಾಘವಾಚಾರ್ ಅವರುಗಳು ಕನ್ನಡ ಪಾಠ ಹೇಳುತ್ತಿದ್ದರು ಭಾಷಾಶಾಸ್ತ್ರಕ್ಕೆ ಡಾ. ಎ. ಎನ್. ನರಸಿಂಹಯ್ಯನವರಿದ್ದರು. ಸಂಸ್ಕೃತಕ್ಕೆ ಪ್ರೊ. ಸಿ. ಆರ್. ನರಸಿಂಹಶಾಸ್ತ್ರಿಗಳು, ಪ್ರೊ. ಎಂ. ಲಕ್ಷ್ಮೀನರಸಿಂಹಯ್ಯನವರೂ, ಕೆಲ ಕಾಲ ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳವರೂ ಇದ್ದರು. ಇಂಗ್ಲಿಷ್‌ಗೆ ಪ್ರಖ್ಯಾತ ಪ್ರಾಧ್ಯಾಪಕ ರಾಲೋ, ಪ್ರೊ. ಡಬ್ಲ್ಯು. ಜಿ. ಈಗಲ್‌ಟನ್, ಶ್ರೀ ಬಿ. ಎಸ್. ಕೇಶವನ್ ಇದ್ದರು. ಕರ್ಣಾಟಕದ ಸಾಂಸ್ಕೃತಿಕ ಇತಿಹಾಸ ಬೋಧನೆಗೆ ಇದ್ದ ಡಾ. ಎಂ. ಎಚ್. ಕೃಷ್ಣ ಮತ್ತು ಡಾ. ಎಸ್. ಶ್ರೀಕಂಠಶಾಸ್ತ್ರಿಗಳವರಿಬ್ಬರೂ ಸುಪ್ರಸಿದ್ಧ ವಿದ್ವಾಂಸರಾಗಿದ್ದರು. ತಮಿಳನ್ನು ತುಂಬ ಪ್ರೀತಿಯಿಂದ ದಿವಂಗತ ಶ್ರೀ ಎನ್. ರುದ್ರಪತಿ ಅವರು ಹೇಳಿಕೊಡುತ್ತಿದ್ದರು.

ಈ ಗುರುವೃಂದದ ಪ್ರೀತಿ-ವಿಶ್ವಾಸ ವಾತ್ಸಲ್ಯಗಳನ್ನು ಎಂದೂ ಮರೆಯುವಂತಿಲ್ಲ.

ದಿವಂಗತ ಪ್ರೊ. ಕೃಷ್ಣಶಾಸ್ತ್ರಿಗಳು ತುಂಬಿದ ಕೊಡದಂತಿದ್ದ ವಿದ್ವಾಂಸರು, ಆದರ್ಶ ಅಧ್ಯಾಪಕರು. ಅವರ ಹೃದಯ ತುಂಬ ಮೃದು, ಕೋಮಲ ಮತ್ತು ವಾತ್ಸಲ್ಯಪೂರ್ಣ. ಹೊರಗೆ ಮಾತ್ರ ಅವರು ಕೊಂಚ ಗಡುಸು ಎಂಬಂತೆ ತೋರುತ್ತಿತ್ತು.

ಕನ್ನಡ ಬಿ. ಎ. (ಆನರ್ಸ್) ಮತ್ತು ಎಂ. ಎ. ತರಗತಿಗಳಲ್ಲಿ ಇಬ್ಬರೇ ವಿದ್ಯಾರ್ಥಿಗಳಿದ್ದ ನಮಗೆ ಪ್ರೊ. ಕೃಷ್ಣಶಾಸ್ತ್ರಿಗಳು ಗಂಟೆ ಗಂಟೆಗಳ ಕಾಲ, ಕಾಲ

ಪರಿಮಿತಿಯ ಪರಿವೆಯಿಲ್ಲದೆ ಪಂಪಭಾರತದ ಸೊಗಸನ್ನು, ಯಕ್ಷಗಾನಗಳ ಸ್ವಾರಸ್ಯವನ್ನೂ, ಭಾಷಾ ಚರಿತ್ರೆಯ ವಿಕಾಸವನ್ನೂ, ಕಾವ್ಯ ಮೀಮಾಂಸೆಯ ರಸದೌತಣವನ್ನೂ ಉಣಿಸುತ್ತಿದ್ದರು. ಸಾವಧಾನವಾಗಿ ವಿವರ ವಿವರವಾಗಿ ಪದರು ಪದರಾಗಿ ವಿಷಯಗಳನ್ನು ವಿಭಜಿಸಿ ವಿಶ್ಲೇಷಿಸಿ ಮಧ್ಯೆ ಮಧ್ಯೆ ಹಾಸ್ಯವನ್ನು ಹುದುಗೊಳಿಸಿ, ಕೇವಲ ನಿರಾಡಂಬರವಾದ ಮನಮುಟ್ಟುವ ಹೃದಯಂಬುಗುವ ಸರಳ ಸವಿಶೈಲಿಯ ಅವರ ಉಪನ್ಯಾಸಗಳನ್ನು ನಾವೆಂದೂ ಮರೆಯುವಂತಿಲ್ಲ. ಅವರ ಸಂಸ್ಕೃತ, ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳ ವಿದ್ವತ್ತು ತುಂಬ ಆಳವಾದುದಾಗಿತ್ತು. ಪಾಂಡಿತ್ಯ ಎಷ್ಟು ಆಳವಾಗಿದ್ದಿತೋ ಅವರ ಬಾಹ್ಯವ್ಯಕ್ತಿತ್ವ ಅಷ್ಟೇ ಸರಳವಾಗಿಯೂ ನಿರಾಡಂಬರವಾಗಿಯೂ ಇದ್ದಿತು. ಕೋಪ ದರ್ಪ ಅಹಂಕಾರ ಅವಜ್ಞೆಗಳನ್ನು ಎಂದೂ ನಾವು ಅವರ ಮುಖದಲ್ಲಿ ಮಾತಿನಲ್ಲಿ ಕಂಡ ನೆನವು ನನಗಿಲ್ಲವೇ ಇಲ್ಲ.

ವಿದ್ಯಾರ್ಥಿಗಳನ್ನು ವಾತ್ಸಲ್ಯಪೂರ್ಣವಾಗಿ ಮಾತನಾಡಿಸಿ ಅವರ ಯೋಗಕ್ಷೇಮವನ್ನು ಆಗಾಗ್ಗೆ ವಿಚಾರಿಸಿ, ಕಷ್ಟಸುಖಗಳನ್ನು ಪ್ರೀತಿಯಿಂದ ಕೇಳಿ ತಮ್ಮಿಂದಾದಷ್ಟು ಉಪಕಾರ–ಸಹಾಯ ಮಾಡುತ್ತಿದ್ದ, ವಿದ್ಯಾರ್ಥಿಗಳಿಗೆ ತಂದೆಯೋಪಾದಿಯಲ್ಲಿದ್ದ ಗುರುಗಳು ಕೃಷ್ಣಶಾಸ್ತ್ರಿಗಳು. ಈ ಮಾತು ಹೇಳುವಾಗ, ಇಪ್ಪತ್ತನಾಲ್ಕು ವರ್ಷಗಳ ಹಿಂದೆ ಅಂದು ನಡೆದ ಒಂದು ಘಟನೆ, ದೃಷ್ಟಾಂತವಾಗಿ ಜ್ಞಾಪಕಕ್ಕೆ ಬರುತ್ತಿದೆ.

ನನ್ನ ಸಹಪಾಠಿ (ಇದ್ದವನೇ ಒಬ್ಬ) ಅಷ್ಟೇನೂ ಸುಖವಾಗಿರಲಿಲ್ಲ. ಆತನಿಗಿಂತ ಕೊಂಚವಾಸಿ ನಾನು, ಅಷ್ಟೆ. ಇಬ್ಬರೂ ಸ್ಕಾಲರ್‌ಷಿಪ್–ಫ್ರೀಷಿಪ್ಪುಗಳ ಬೇಟೆಯಲ್ಲಿ ಸ್ಪರ್ಧಿಸುತ್ತಿದ್ದೆವು, ಸ್ನೇಹಕ್ಕೆ ಕೊರತೆಬಾರದಂತೆ. ಒಮ್ಮೆ ಶಾಸ್ತ್ರಿಗಳು ನಮ್ಮಿಬ್ಬರನ್ನು ಕರೆದು ಒಟ್ಟಿಗೇ ಕೂಡಿಸಿಕೊಂಡು ನಮ್ಮ ನಮ್ಮ ಸ್ಥಿತಿಗತಿಗಳನ್ನು ಕೂಲಂಕಷವಾಗಿ ವಿಚಾರಿಸಿ ತಿಳಿದುಕೊಂಡು, ಕಾಲೇಜಿನಿಂದ ಇಬ್ಬರಿಗೂ ಒಂದೊಂದು ಬಗೆಯ ಸಹಾಯ ದೊರಕುವಂತೆ ಏರ್ಪಾಟುಮಾಡಿಕೊಟ್ಟು, ಇಬ್ಬರೂ ತಕ್ಕಮಟ್ಟಿಗೆ ನಿರಾಂತಕವಾಗಿ ವ್ಯಾಸಂಗವನ್ನು ಮುಂದುವರಿಸಲು ಅನುವುಮಾಡಿಕೊಟ್ಟರು.

ಅಂತಿಮ ಆನರ್ಸ್ ಪರೀಕ್ಷೆಗೆ ಹಣಕಟ್ಟುವ ಸಮಯ ಬಂದಾಗ, ನಾನೇನೋ ತೀರ್ಥರೂಪರು ಕಳಿಸಿಕೊಟ್ಟ ಹಣವನ್ನು ನೇರವಾಗಿ ಕಾಲೇಜಿಗೆ ತಲುಪಿಸಿ ಕೆಲಸ ಪೂರೈಸಿಬಿಟ್ಟೆ. ಆದರೆ ತೀರ್ಥರೂಪರು ದಿವಂಗತರಾಗಿದ್ದು, ಕಷ್ಟದ ಪರಿಸ್ಥಿತಿಯಲ್ಲಿ ವಿದ್ಯಾರ್ಜನೆಮಾಡುತ್ತಿದ್ದ ನನ್ನ ಸಹಪಾಠಿಗೆ ಹಣಕೊಡುವವರು ಯಾರೂ ಇಲ್ಲದೆ, ಪರೀಕ್ಷೆಗೆ ಈ ವರ್ಷ ಹೋಗುವುದೇ ಬೇಡ ಎಂಬ ತೀರ್ಮಾನಕ್ಕೆ ಆತ ಬಂದು, ಅದನ್ನು ನನಗೆ ತಿಳಿಸಿ, ಒಂದುವಾರ ಮುಂಚೆಯೇ ಕ್ಲಾಸಿಗೂ ಬರುವುದನ್ನು ನಿಲ್ಲಿಸಿಬಿಟ್ಟನು. ನಾನೂ ಕಟ್ಟಿ ಆತನಿಗೂ ಹಣ ಕೊಡುವಷ್ಟು ಸೌಕರ್ಯ ನನಗೂ ಇರಲಿಲ್ಲ.

ಕೃಷ್ಣಶಾಸ್ತ್ರಿಗಳು ಮೂರು ನಾಲ್ಕು ದಿನ ಆತ ಏಕೆ ಬರಲಿಲ್ಲ, ಬರುತ್ತಿಲ್ಲ ಎಂದು ನನ್ನನ್ನೇ ವಿಚಾರಿಸಿದರು. ಅನಂತರ ಒಂದು ದಿನ ಆತನ ಯೋಗಕ್ಷೇಮವನ್ನು ಆರೋಗ್ಯವನ್ನು ಪರಿಸ್ಥಿತಿಯನ್ನು ಕುರಿತು ಕೇಳಿದರು; ಪರೀಕ್ಷೆಯ ವಿಚಾರಕ್ಕೂ ಬಂದರು. ನಾನು ಇದ್ದುದನ್ನು ಅವರಿಗೆ ತಿಳಿಸಿದೆ. 'ಆತ ಪರೀಕ್ಷೆಗೆ ಕೂಡುವುದಿಲ್ಲವಂತೆ—ಓದಿಯೂ ಇಲ್ಲವಂತೆ, ಮುಖ್ಯವಾಗಿ ಹಣವೂ ಇಲ್ಲವಂತೆ' ಎಂದು ವರದಿಮಾಡಿದೆ.

"ನೀನೇನು ಮಾಡಿದೆಯಯ್ಯಾ? ಪರೀಕ್ಷೆಗೆ ನೀನು ಹಣಕಟ್ಟಿ ಆಯಿತೋ ಹೇಗೆ?" ಎಂದು ನನ್ನನ್ನು ಕೇಳಿದರು.

"ತಂದೆಯವರಿಂದ ಹಣ ಬಂದಿತು. ಪರೀಕ್ಷೆಗೆ ಹಣ ಕಟ್ಟಿದ್ದೇನೆ ನಿನ್ನೆ ತಾನೆ" ಎಂದೆ.

ಕೂಡಲೇ ಗುರುಗಳು:

"ನೀನು ಎಲ್ಲಾದರೂ ಪತ್ತೆಮಾಡಿ ಆತನನ್ನು ನನ್ನ ಬಳಿಗೆ ಇಂದು ಸಂಜೆಯೇ ಕರೆದುಕೊಂಡು ಬರಬೇಕು" ಎಂದು ಪ್ರೀತಿಯಿಂದ ಅಪ್ಪಣೆ ಮಾಡಿದರು.

ಗುರುಗಳ ಪ್ರೀತಿಯ ಅಪ್ಪಣೆಯನ್ನು ಶಿರಸಾವಹಿಸಿ ಸಹಪಾಠಿಯನ್ನು ಹುಡುಕುತ್ತಾ ಹೊರಟೆ. ಆತ ಮನೆಯಲ್ಲಾಗಲೀ ನಿರ್ದಿಷ್ಟವಾಗಿ ಒಂದು ಕಡೆಯಾಗಲೀ ಇರುವುದು ಕಷ್ಟವಾಗಿದ್ದುದರ ಪರಿಚಯ ನನಗೆ ಚೆನ್ನಾಗಿತ್ತು. ಈಗಂತೂ ಆತನ ಮನಸ್ಸೂ ಸರಿಯಾಗಿರಲಿಲ್ಲ. ಆದರೆ ಸಾಮಾನ್ಯವಾಗಿ ಆತ ಇರುವ ಸ್ಥಳಗಳೆಲ್ಲಾ ನನಗೆ ತಿಳಿದಿದ್ದುದರಿಂದ ಅಲ್ಲೆಲ್ಲಾ ಹೋಗಿ ನೋಡಿ ಅಂತೂ ಪತ್ತೆಮಾಡಿ ಗುರುಗಳ ಅಪ್ಪಣೆಯನ್ನು ತಿಳಿಸಿದೆ.

"ಈಗ ಅವರನ್ನು ನೋಡುವುದು ಬೇಡ" ಎಂದೇ ಆತ ಮೊದಲು ಹಟ ಹಿಡಿದ.

ಆದರೂ ಆತನನ್ನು ಬಲವಂತದಿಂದ ಒಪ್ಪಿಸಿ, ಮಾರನೆಯ ದಿನ ಕಾಲೇಜು ಪ್ರಾರಂಭವಾಗುವ ವೇಳೆಗೆ ನನ್ನ ಜೊತೆಯಲ್ಲಿಯೇ ಆತನನ್ನು ಶಾಸ್ತ್ರಿಗಳ ಬಳಿಗೆ ಕರೆದುಕೊಂಡು ಹೋದೆನು.

ಮೊದಲು ಗುರುಗಳು ಗಡುಸಾಗಿಯೇ ಇದ್ದರು. "ಹಣ ಇಲ್ಲ, ಪರೀಕ್ಷೆಗೇ ಕಟ್ಟುವುದಿಲ್ಲ, ಎಂದು ಇರುವ ಇಬ್ಬರಲ್ಲಿ ಒಬ್ಬ ತಲೆ ತಪ್ಪಿಸಿಕೊಂಡು ತಿರುಗಿದರೆ ಹೇಗೆ? ಇದು ಜವಾಬ್ದಾರಿಯ ವರ್ತನೆಯೆ? ನಾವೆಲ್ಲಾ ಇರುವುದೇಕೆ? ವಾರದಿಂದ ಕ್ಲಾಸಿಗೂ ಚೆಕ್ಕರ್ ಹೊಡೆದು ಓಡಾಡಿದರೆ ಬಂದ ಭಾಗ್ಯವೇನು?" ಎಂದೆಲ್ಲಾ ಆಕ್ಷೇಪಿಸಿದರು.

ಆತ ಮಾತ್ರ ಯಾವುದಕ್ಕೂ ಉತ್ತರ ಕೊಡದೆ, ತಾನು ಹೇಳುವುದೆಲ್ಲ ನನ್ನ ಮೂಲಕ ಅವರಿಗೆ ತಿಳಿದಿದೆ, ಅದು ಸಾಕು ಎಂಬಂತೆ, ಸುಮ್ಮನೆ ಕುಳಿತಿದ್ದ.

ಶಾಸ್ತ್ರಿಗಳು ಮಾತನಾಡುತ್ತಾ ಇದ್ದಂತೆಯೇ ಜೇಬಿನಿಂದ ಚೆಕ್ ಪುಸ್ತಕ ತೆಗೆದು ಪೆನ್ನನ್ನು ಕೈಯಲ್ಲಿ ತೆಗೆದು ಹಿಡಿದರು!

"ದುಡ್ಡು ಎಷ್ಟಯ್ಯಾ ಪರೀಕ್ಷೆಗೆ ಕಟ್ಟಬೇಕಾದ್ದು"? ಎಂದು ನನ್ನನ್ನು ಕೇಳಿದರು. ನಾನು:

"ಅರವತ್ತು ರೂಪಾಯಿ ಸಾರ್" ಎಂದೆ. "ಸರಿ," ಎಂದವರೇ ಚೆಕ್ ಬರೆಯಲು ತೊಡಗಿದರು. ಅದುವರೆಗೂ ಸುಮ್ಮನೆ ಮೌನವಾಗಿ ಕುಳಿತಿದ್ದ ಸಹಪಾಠಿ–ಶಿಷ್ಯ ಇದ್ದಕಿದ್ದಂತೆಯೇ:

"ಇಲ್ಲಸಾರ್ ನನಗೆ ಹಣ ಬೇಡ" ಎಂದುಸುರಿದ! ಗುರುಗಳಿಗೆ ಈತನ ಮಾತು ಅರ್ಥವಾಗಲಿಲ್ಲ.

"ಮತ್ತೇನು ಮಾಡುತ್ತೀಯೆ"? ಎಂದು ಕಣ್ಣಿಗೆ ಏರಿಸಿದ್ದ ಕನ್ನಡಕವನ್ನು ತೆಗೆದು ಕೈಯಲ್ಲಿ ಹಿಡಿದು, ಪೆನ್ನನ್ನು ಮೇಜಿನಮೇಲಿಟ್ಟು, ಅಚ್ಚರಿಯಿಂದ ಅವನ ಮುಖ ನೋಡುತ್ತಾ ಕುಳಿತರು.

ಗುರುಗಳು ಗಂಭೀರರಾಗಿದ್ದರು. ಶಿಷ್ಯರೂ ಗಂಭೀರವಾಗಿಯೇ ಕುಳಿತಿದ್ದೆವು.

ಒಂದೆರಡು ನಿಮಿಷ ಮೌನ ಕೋಣೆಯನ್ನು ಆವರಿಸಿತ್ತು.

ಗುರುಗಳೇ ಶಿಷ್ಯನ ಇಂಗಿತವನ್ನು ಪೂರ್ಣವಾಗಿ ಅರಿತುಕೊಂಡರು. ಒಮ್ಮೆ ನಸುನಕ್ಕು, ಮತ್ತೆ ಕನ್ನಡಕ ಏರಿಸಿ, ಪೆನ್ನು ಹಿಡಿದು ಸರಸರನೆ ಚೆಕ್‌ಬರೆದು ರುಜು ವನ್ನೂ ಮಾಡಿಯೇ ಬಿಟ್ಟರು–ನೂರು ರೂಪಾಯಿಗೆ!

ಚೆಕ್ ಹಾಳೆಯನ್ನು ಪುಸ್ತಕದಿಂದ ಹರಿದು ನನ್ನ ಕೈಗಿತ್ತು, ಅವನನ್ನು ಕುರಿತು ಹೇಳಿದರು!

"ನಿನಗೆ ನನ್ನಿಂದ ಧರ್ಮಾರ್ಥವಾಗಿ ಹಣ ಪಡೆಯಲು ಇಷ್ಟವಿಲ್ಲವಾದರೆ ಚಿಂತೆಯಿಲ್ಲ. ಇದನ್ನು ಸಾಲ ಎಂದು ತೆಗೆದುಕೊ. ಪ್ಯಾಸುಮಾಡಿದ ಮೇಲೆ ಉದ್ಯೋಗ ಸಂಪಾದಿಸಿ ಹಣಗಳಿಸಿದಾಗ ನಿಧಾನವಾಗಿ ನನಗೆ ಈ ಹಣವನ್ನು ಹಿಂದಕ್ಕೆ ಕೊಡುವಂತೆ. ಇನ್ನೇನಯ್ಯಾ–ಸಮಾಧಾನವಾಯಿತೆ? ಆದರೆ ನೀನು ಪರೀಕ್ಷೆಗೆ ಕಟ್ಟಲೇಬೇಕು, ತಿಳಿಯಿತೊ? ಓದುವುದಕ್ಕೆ ಇನ್ನೂ ಕಾಲಾವಕಾಶವಿದೆ. ಇನ್ನು ಮೇಲೂ ಸರಿಯಾಗಿ ಓದಿಕೊಂಡರೆ ಸಾಕು, ನೀನೇನೂ ದಡ್ಡನಲ್ಲ."

ಎಂದು ಹೇಳಿ ನನ್ನ ಕಡೆಗೆ ತಿರುಗಿ:

"ಏನಪ್ಪಾ ಇವನು ಪರೀಕ್ಷೆಗೆ ಕಟ್ಟುವಂತೆ ಮಾಡುವುದು ನಿನ್ನ ಜವಾಬ್ದಾರಿ, ತಿಳಿಯಿತೆ? ಚೆಕ್ಕಿನಿಂದ ಹಣ ಪಡೆದು ಆತನ ಪರವಾಗಿ ಬೇಕಾದರೆ ನೀನೇ ಕಾಲೇಜಿಗೆ ಹಣ ತಲುಪಿಸಿಬಿಡು. ನಾಳೆ ಸಂಜೆಹೊತ್ತಿಗೆ ಬಂದು ನೀನು ನನಗೆ ತಿಳಿಸಬೇಕು ಏನು ಮಾಡಿದಿರಿ ಎಂದು, ಏನಯ್ಯಾ?" ಎಂದರು.

"ಆಗಲಿ ಸಾರ್" ಎಂದು ನಾನು ತಲೆಯಲ್ಲಾಡಿಸಿದೆ. ಸಹಪಾಠಿ ಮಾತ್ರ ಏನೂ ಹೇಳದೆ ಮೌನವಾಗಿಯೇ ಕುಳಿತಿದ್ದ.

"ಸರಿ, ಇನ್ನು ಹೊರಡಿ. ನಾನು ಹೇಳಿದ್ದು ಜ್ಞಾಪಕವಿರಲಿ" ಎಂದರು.

ಅನಂತರ ಸಹಪಾಠಿಯನ್ನು ಒತ್ತಾಯಮಾಡಿ ಗುರುಗಳ ಮಾತು ಮೀರುವುದು ಬೇಡ ಎಂದು ಹೇಳಿ ಬಲಾತ್ಕಾರವಾಗಿಯೇ ಪರೀಕ್ಷೆಗೆ ಹಣ ಕಟ್ಟಿಸಿದ್ದಾಯಿತು.

ಈ ಘಟನೆಯಿಂದ ಪ್ರೊ. ಕೃಷ್ಣಶಾಸ್ತ್ರಿಗಳ ಶಿಷ್ಯವಾತ್ಸಲ್ಯ ಎಂತಹುದು ಎಂಬುದು ಸ್ಪಷ್ಟವಾಗುತ್ತದೆ.

ಆ ಕಾಲದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾದ ಪುಸ್ತಕಗಳನ್ನು ಬಡವಿದ್ಯಾರ್ಥಿಗಳಿಗೆ ಅರ್ಧ ಬೆಲೆಗೆ ಕೊಡುವ ಒಂದು ನಿಯಮವಿತ್ತು. "ಕನ್ನಡ ಕೈಪಿಡಿ" ಮತ್ತು "ಕುಮಾರವ್ಯಾಸ ಭಾರತ" ಪುಸ್ತಕಗಳನ್ನು ಕೊಳ್ಳಲು ಹೋದ ನನಗೆ ಈ ನಿಯಮವಿರುವ ವಿಚಾರ ತಿಳಿದು, ಅದನ್ನು ಉಪಯೋಗಿಸಿಕೊಳ್ಳುವ ಆಸೆಯಾಯಿತು. ಆದರೆ ಅದಕ್ಕೆ ಪ್ರೊಫೆಸರರ ಪತ್ರ ಬೇಕಾಗಿದ್ದಿತು. ನಾನು ಗುರುಗಳನ್ನು ಹೋಗಿ ಕೇಳಿದೆ. ಅವರು "ಬಡವರಿಗಂತೋ ಈ ಸೌಲಭ್ಯ? ಭಾರತದಲ್ಲಿರುವ ನಾವೆಲ್ಲಾ ಬಡವರೇ ಅಲ್ಲದೆ ಶ್ರೀಮಂತರು ಯಾರಿದ್ದಾರಯ್ಯಾ? ನಾನೂ ಬಡವನೇ ನೀನೂ ಬಡವನೆ. ಹೋಗು, ಈಗಲೇ ಪುಸ್ತಕಗಳನ್ನು ಕೊಂಡುಕೊಂಡು ಬಾ" ಎಂದು ಹೇಳಿ, ಪತ್ರವನ್ನು ಬರೆದುಕೊಟ್ಟರು. ನನ್ನ ತಂದೆಯ ವರಮಾನ, ಸ್ಥಿತಿಗತಿ ಇತ್ಯಾದಿ ಯಾವ ವಿಚಾರಗಳನ್ನೂ ಕೇಳುವ ತಂಟೆಗೇ ಅವರು ಹೋಗಲಿಲ್ಲ.

ಶಿಷ್ಯರು ನಾವು ಲೇಖನ ಬರೆದು, ಪುಸ್ತಕ ಪ್ರಕಟಿಸಿ ತೋರಿದರೆ, ಗುರುಗಳು ತುಂಬ ಸಂತೋಷ ಪಡುತ್ತಿದ್ದರು. ಅದರಲ್ಲಿ ತಮ್ಮ ಮನಮೆಚ್ಚಿದ ಅಂಶಗಳನ್ನು ಎತ್ತಿ ಎತ್ತಿ ಹೇಳಿ ಕೊಂಡಾಡುತ್ತಿದ್ದರು. ಹಾಗೆಯೇ ದೋಷಗಳೇನಾದರೂ ಇದ್ದರೂ, ಅವುಗಳನ್ನೂ ತೋರಿಸಿ ತಿದ್ದುತ್ತಿದ್ದರು.

ಶಿಷ್ಯನಾಗಿದ್ದ ಆ ಕಾಲವಾದ ಇಪ್ಪತ್ತು ವರ್ಷಗಳ ತರುವಾಯವೂ, ಅವರು ಹಾಗೆಯೇ ಈಗಲೂ ಮಾಡುತ್ತಿದ್ದರು. ನನ್ನ ಅನೇಕ ಕೃತಿಗಳನ್ನು ವಾತ್ಸಲ್ಯದಿಂದ ಓದಿ ಸಂತೋಷವನ್ನು ವ್ಯಕ್ತಪಡಿಸಿ, ಬೇರಾವುದೋ ಊರಿನಲ್ಲಿದ್ದ ನನಗೆ ಕೂಡಲೇ ಮೆಚ್ಚಿಗೆಯ ಪತ್ರ ಬರೆದರು. ಅವರಿಗೆ ಕಾಗದ ಬರೆದರೂ ಅಷ್ಟೆ. ಕೂಡಲೇ ಉತ್ತರ ಬರೆಯುತ್ತಿದ್ದರು.

ಶಿಷ್ಯರು ಅವರಿಗೆ ಸಮರ್ಪಿಸಿದ "**ಅಭಿವಂದನೆ**" ಗ್ರಂಥವಂತೂ ಅವರಿಗೆ ತುಂಬ ಸಂತೋಷ ಸಮಾಧಾನಗಳನ್ನು ತಂದಿತ್ತು. ಆ ವಿಚಾರವನ್ನು ನನಗೇ ಅವರು ಅನೇಕಬಾರಿ ಹೇಳಿದ್ದರು.

ಕನ್ನಡದಲ್ಲಿ ಉತ್ತಮ ಗ್ರಂಥಗಳು ಬರಬೇಕು ಎಂಬುದು ಅವರ ಹೃದಯ ಪೂರ್ವಕವಾದ ಆಸೆಯಾಗಿದ್ದಿತು. ಗುಣವಿರುವ ಕಡೆ ಅದನ್ನು ಗುರುತಿಸಿ ಮೆಚ್ಚಿ

ಪ್ರಶಂಸಿಸಿ ಪ್ರೋತ್ಸಾಹಿಸುವ ಹಿರಿಯಗುಣ ಅವರಲ್ಲಿ ಮನೆಮಾಡಿದ್ದಿತು. ಈ ಬಗೆಯ ಪ್ರೋತ್ಸಾಹವನ್ನು ಪಡೆದವರಲ್ಲಿ ನಾನೂ ಒಬ್ಬನಾಗಿದ್ದೇನೆ.

ಧಾರವಾಡದ ಕಾಲೇಜಿನ ಪತ್ರಿಕೆಯಲ್ಲಿ ಬಂದ ವಿದ್ಯಾರ್ಥಿಯೊಬ್ಬರ ಕಿರುಕವನವೊಂದನ್ನು ಓದಿ ಮೆಚ್ಚಿಕೊಂಡ ಕೃಷ್ಣಶಾಸ್ತ್ರಿಗಳು ಆ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಪ್ರೊ. ಫ್ಯಾರೆನ್ ಅವರಿಗೆ ಪತ್ರಬರೆದು, ಆ ಕವನವನ್ನು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಿಸಲು ಅನುಮತಿ ಕೇಳಿದರಂತೆ! ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಗುವುದೆಂದರೆ ಒಂದು ಹೆಮ್ಮೆ ಎಂದು ತಿಳಿದಿದ್ದ ಆ ಕಾಲದಲ್ಲಿ ಆ ವಿದ್ಯಾರ್ಥಿಗೆ ಇದರಿಂದ ಸಿಕ್ಕ ಪ್ರೋತ್ಸಾಹ ಸಣ್ಣದೇನಲ್ಲ. ಅನುಮತಿ ಪಡೆದು ಆ ಕವನ ಪ್ರಕಟವಾದ ಸಂಚಿಕೆಯನ್ನು ತಪ್ಪದೆ ಆ ವಿದ್ಯಾರ್ಥಿಗೆ ಸಂಪಾದಕ ಶಾಸ್ತ್ರಿಗಳು ಕಳಿಸಿಕೊಟ್ಟರು. ಆ ವಿದ್ಯಾರ್ಥಿ ಮುಂದೆ ಕನ್ನಡ ಎಂ.ಎ. ಮಾಡಿ ಈಗ ಮೂವತ್ತು ವರ್ಷಗಳಿಂದಲೂ ಸಮರ್ಥ ಕನ್ನಡ ಅಧ್ಯಾಪಕರಾಗಿದ್ದಾರೆ.

ಪ್ರೊ. ಕೃಷ್ಣಶಾಸ್ತ್ರಿಗಳು ಹೆಚ್ಚು ಮಾತಿನವರಾಗಿರಲಿಲ್ಲ. ಆಡಂಬರವಂತೂ ಅವರ ಬಳಿಯೇ ಸುಳಿಯಲು ಶಕ್ಯವಿರಲಿಲ್ಲ, ಹೇಳುವುದನ್ನು ಹೃದಯಪೂರ್ವಕವಾಗಿ, ಅದು ಕಟುವಾದರೂ ಚಿಂತೆಯಿಲ್ಲ, ಎದುರಿಗೇ ನೇರವಾಗಿಯೇ ಹೇಳಿಬಿಡುತ್ತಿದ್ದ ಸ್ವಭಾವ ಅವರದು; ಮುಂದೊಂದು ಹಿಂದೊಂದು ಹೇಳುವಂತಹವರಾಗಿರಲಿಲ್ಲ. ಸ್ಕಾಲರ್‌ಷಿಪ್ ಕೊಡಿಸುವಾಗೊಮ್ಮೆ, ಉದ್ಯೋಗಕ್ಕೆ ಶಿಫಾರ್ಸು ಮಾಡುವಾಗೊಮ್ಮೆ ಎರಡುಬಾರಿಯೂ, ಅವರು ನನಗೆ ಎದುರಿಗೇ, ನಿರ್ದಾಕ್ಷಿಣ್ಯವಾಗಿಯೇ ಹೇಳಿದರು:

"ನಿನಗೆ ಅದು ಸಿಗುವುದು ನನಗೆ ಇಷ್ಟವಿಲ್ಲ. ಅದಕ್ಕೆ ನೀನು ಅನರ್ಹ ಎಂದಲ್ಲ. ನಿನಗಿಂತ ಕಷ್ಟದ ಪರಿಸ್ಥಿತಿಯಲ್ಲಿ ಅವನಿದ್ದಾನೆ. ನಿನಗಿಂತಲೂ ಮುಂಚೆ ಪ್ಯಾಸು ಮಾಡಿದವರು ಇದ್ದಾರೆ. ಅವರಿಗೆ ಸಿಕ್ಕ ತರುವಾಯ, ನಾನೇ ಕರೆದು ನಿನಗೆ ಆ ಸ್ಥಾನವನ್ನು ಕೊಡಿಸಲು ಪ್ರಯತ್ನಿಸುತ್ತೇನೆ. ಈಗ ಬೇಡ. ಆದುವರೆಗೂ ನೀನು ಬೇರೆ ಕಡೆ ಇರಬಹುದು..... ಅವರಿಗೆ ನಾನು ಕಾಗದ ಬರೆದುಕೊಡುತ್ತೇನೆ. ಅನುಕೂಲವಾಗುತ್ತದೆ" ಎಂದು. ಆ ವಿಚಾರವಾಗಿ ಅವರು ಮಾಡಿದ ಶಿಫಾರ್ಸಿನ ಕಾಗದವನ್ನು ನನಗೆ ತೋರಿಸಿ ಅನಂತರ ಮೇಲಕ್ಕೆ ಕಳಿಸಿಕೊಟ್ಟರು. ಇದು ಅವರ ನೇರ–ನಿರ್ದಾಕ್ಷಿಣ್ಯ, ನಿಷ್ಕಲ್ಮಷ ಸ್ವಭಾವ. ಆಗ ಅವರು ಸಹಾಯಮಾಡಲಿಲ್ಲ ಎಂದು ಕೊಂಚವೂ ನನಗೆ ಅವರಮೇಲೆ ಅಸಮಾಧಾನವಾಗಲಿಲ್ಲ. ಒಂದು ನೀತಿ, ತತ್ತ್ವವನ್ನು ಅನುಸರಿಸಿ ನಡೆದರೆ, ನಮಗೆ ನಷ್ಟವಾದರೂ ಅಸಮಾಧಾನಕ್ಕೆ ಎಡೆಯಿಲ್ಲ. ಆದರೂ ಇಂತಹ ಸ್ವಭಾವವನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಅನೇಕರು ಅವರ ವಿಚಾರದಲ್ಲಿ ಅನ್ಯಥಾ ಭಾವಿಸಿದ್ದುಂಟು. ಅದಕ್ಕಾಗಿ ಅವರು ತಾವು ಮಾಡುವುದನ್ನು ಹೇಳುವುದನ್ನು ಎಂದೂ ಬಿಡುತ್ತಿರಲಿಲ್ಲ. ಈ ಬಗೆಯ ತತ್ತ್ವನಿಷ್ಠೆ ಇರುವ ಜನ ದೊರೆಯುವುದು ಅಪೂರ್ವ.

ಒಮ್ಮೆ ಗುರುಗಳು ದಾರಿಯಲ್ಲಿ ಸಿಕ್ಕಿ ಮಾತನಾಡಿಸಿ ಮನೆಗೆ ಬಾ ಎಂದು ಕರೆದರು. ಮರುದಿನ ನಾನು ಅವರ ಮನೆಗೆ ಹೋದೆ.

"ಏನಿಲ್ಲ ಪುಸ್ತಕ ಒಂದನ್ನು ಕೊಡೋಣ ಅಂತ ಬಾ ಎಂದೆನಯ್ಯಾ, ಅಷ್ಟೆ." ಎಂದು ಹೇಳಿ ತಮ್ಮ ಮೂರು ನಾಲ್ಕು ಪುಸ್ತಕಗಳನ್ನು ತೆಗೆದರು. ಪೆನ್ನು ಹಿಡಿದು ಬರೆಯುವಾಗ

"ಏನ್ರೀ–ಈಗ ನೀವು ಪಿಎಚ್.ಡಿ. ಪದವಿಯನ್ನು ಗಳಿಸಿ ಡಾಕ್ಟರ್ ಆಗಿದ್ದೀರಿ. ವಿದ್ವಾಂಸರೆಂದು ಹೆಸರು ಪಡೆದಿದ್ದೀರಿ ನಿಮಗೆ ಈಗ ಏನಂತ ಬರೀಲಿ? 'ವಿಶ್ವಾಸ ಪೂರ್ವಕ' ಎಂದು ಬರೆಯಲೋ?" ಎಂದು ಹೇಳಿ ಕೂಡಲೇ ನಸುನಗುತ್ತಾ "ಅಥವಾ 'ಆಶೀರ್ವಾದಪೂರ್ವಕ' ಎಂದು ಬರೆಯಬಹುದೊ?" ಎಂದು ಕೇಳಿದರು.

"ತಮ್ಮ ಮುಂದೆ ನಾನು ವಿದ್ವಾಂಸನೆ? ಡಾಕ್ಟರ್ ಆದರೆ ತಾನೆ ಏನು ಸಾರ್? ದಯವಿಟ್ಟು 'ಆಶಿರ್ವಾದ ಪೂರ್ವಕ' ಎಂದೇ ಬರೆಯಬೇಕು ಸಾರ್. ತಮ್ಮ ಆಶೀರ್ವಾದ ನನ್ನಮೇಲೆ ಎಂದೆಂದೂ ಎಂದಿನಂತೆಯೇ ಇರಬೇಕು" ಎಂದು ವಿನಯದಿಂದ ಪ್ರಾರ್ಥಿಸಿದೆ.

ಗುರುಗಳು ತುಂಬ ಸಂತೋಷದಿಂದ: "ಹಾಗೇ, ಆಗಲಪ್ಪ. ನೀವು ಮುಂದಕ್ಕೆ ಬರುವುದು ನನಗೆ ತುಂಬ ಸಂತೋಷ" ಎಂದು ಹೇಳಿ 'ಆಶೀರ್ವಾದ ಪೂರ್ವಕ' ಎಂದೇ ಬರೆದು ರುಜುಮಾಡಿ ಪುಸ್ತಕಗಳನ್ನು ಕೊಟ್ಟರು. ಆ ಮಧ್ಯೆ ಒಂದು ಪುಸ್ತಕಕ್ಕೆ 'ವಿಶ್ವಾಸಪೂರ್ವಕ' ಎಂದೂ ಬರೆದುಬಿಟ್ಟಿದ್ದರು.

ಇದು ಅವರ ಸರಳ ಸ್ವಭಾವವನ್ನು ತೋರಿಸುತ್ತದೆ. ನನಗೆ ಡಾಕ್ಟರೇಟ್ ಪದವಿ ಬಂದಮೇಲೆ ಅವರು ಎಲ್ಲಿ ಸಿಕ್ಕರೂ. "ಏನು ಡಾಕ್ಟ್ರೇ ಚೆನ್ನಾಗಿರುವಿರಾ?" "ಈಗ ಏನು ಬರೆಯುತ್ತಿದ್ದೀರಿ" "ನಿಮ್ಮ ಆ ಪುಸ್ತಕ ಚೆನ್ನಾಗಿತ್ತು ಓದಿದೆ." ಎಂದು ಅನಗತ್ಯ ಮರ್ಯಾದೆಯಿಂದ, ಆದರೂ ತುಂಬು ವಾತ್ಸಲ್ಯದಿಂದ ಮಾತನಾಡಿಸುತ್ತಿದ್ದರು. ಅವರ ಶಿಷ್ಯವಾತ್ಸಲ್ಯ ಆ ಮಾತುಗಳಲ್ಲಿ ತುಂಬಿದ್ದುದನ್ನು ಕಂಡುಕೊಳ್ಳಬಹುದಾಗಿದ್ದಿತು. ಅದರಿಂದ ಮನಸ್ಸಿಗೆ ತುಂಬ ಆಪ್ಯಾಯಮಾನವಾಗಿ ಹೃದಯ ಉಬ್ಬುತ್ತಿತ್ತು. ಆ ವಾತ್ಸಲ್ಯ ಇನ್ನೆಲ್ಲಿ?

ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಐವತ್ತು ವರ್ಷಗಳ ಹಿಂದೆ, ಸದುದ್ದೇಶದಿಂದ, ದೂರದೃಷ್ಟಿಯಿಂದ, ಕನ್ನಡದ ಅತೀವ ಅಭಿಮಾನ ನಿಷ್ಠೆ ಮಮತೆಗಳಿಂದ, ಹುಟ್ಟುಹಾಕಿ ಪೋಷಿಸಿ ಅಭಿವೃದ್ಧಿಪಡಿಸಿದ ಸೆಂಟ್ರಲ್ ಕಾಲೇಜಿನ ಕರ್ಣಾಟಕಸಂಘ ಈಗ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡಾಭಿಮಾನಿಗಳೂ, ಕನ್ನಡದಲ್ಲಿ ನಿಷ್ಠೆವುಳ್ಳವರೂ ಆದ ಹಿರಿಯ ಅಧಿಕಾರಿಗಳ ನೆರವು ಪ್ರೋತ್ಸಾಹಗಳಿಂದ, ೧೯೬೮ರ ಆಗಸ್ಟ್ ತಿಂಗಳಲ್ಲಿ ತನ್ನ ಸುವರ್ಣಮಹೋತ್ಸವವನ್ನು ವಿಜೃಂಭಣೆಯಿಂದ ಆಚರಿಸಲು ಸಿದ್ಧತೆಮಾಡಿಕೊಳ್ಳುತ್ತಿದೆ. ಆ ಸಂಘದಲ್ಲೇ ಅವರಿಂದಲೇ ಜನ್ಮತಾಳಿ,

ಈಗ ಮೈಸೂರು ವಿಶ್ವವಿದ್ಯಾನಿಲಯದ ಪ್ರಮುಖ ಪತ್ರಿಕೆಯಾಗಿ, ಕನ್ನಡನಾಡಿನ ಪ್ರೌಢವೂ ಕೀರ್ತಿಯುತವೂ ಆದ ತ್ರೈಮಾಸಿಕ ಪತ್ರಿಕೆ ಪ್ರಬುದ್ಧಕರ್ಣಾಟಕವೂ ಸಾವಿರ ಪುಟಗಳ ಬೃಹತ್‌ಸ್ವರ್ಣ ಸಂಚಿಕೆಯಾಗಿ ಹೊರಬೀಳುವುದರಲ್ಲಿದೆ.

ಈ ಸುವರ್ಣಮಹೋತ್ಸವ ನಡೆಯುವುದನ್ನೂ, ಆ ಸ್ವರ್ಣಸಂಚಿಕೆ ಹೊರಬೀಳುವುದನ್ನೂ ಶಾಸ್ತ್ರಿಗಳು ಕಣ್ಣಾರೆ ಕಂಡಿದ್ದರೆ ಅವರಿಗೆಷ್ಟು ಸಂತೋಷ ಸಮಾಧಾನಗಳುಂಟಾಗುತ್ತಿದ್ದುವೊ. ಅಲ್ಲದೆ ಅವುಗಳನ್ನು ನಡೆಸಿದ ಮಹನೀಯರಿಗೂ, ಸಂಸ್ಥಾಪಕರ ಸನ್ನಿಧಿಯಲ್ಲಿ, ಅವರ ಕಣ್ಣೆದುರಿಗೇ ಈ ಉತ್ಸವಗಳನ್ನು ನೆರವೇರಿಸಿದ ಸಮಾಧಾನ ಸಂತೃಪ್ತಿಗಳೂ ಉಂಟಾಗುತ್ತಿದ್ದುವು. ಆ ಸುಸಮಯ ಒದಗುವ ಕೆಲವೇ ಸಮಯದ ಮುಂಚೆ ಅವರು ನಮ್ಮಿಂದ ಕಣ್ಮರೆಯಾದರಲ್ಲಾ, ಆ ಸಮಾಧಾನ–ಸಂತೃಪ್ತಿ ನಮ್ಮ ಪಾಲಿಗೆ ಇಲ್ಲವಾಯಿತಲ್ಲಾ, ಎಂದು ಮನ ಮರುಗುತ್ತಿದೆ; ಉಪಾಯವಿಲ್ಲ.

ಆದರೂ ಅಪಾರ ಶಿಷ್ಯವೃಂದದ ಹೃದಯಮಂದಿರದಲ್ಲೂ, ಕನ್ನಡಸಾಹಿತ್ಯ ಪ್ರಪಂಚದಲ್ಲಿಯೂ, ಡಾ. ಎ. ಆರ್. ಕೃಷ್ಣಶಾಸ್ತ್ರಿಗಳ ಹೆಸರು, ಸ್ಮರಣೆ, ಚಿರವಾಗಿ ಹಸಿರಾಗಿ ಇದ್ದೇ ಇರುತ್ತದೆ.

# ಶಾಸ್ತ್ರಿಗಳ ವೀರೋಪಾಸನೆ

......ಕನ್ನಡವೇ ತಮ್ಮ ಸರ್ವಸ್ವವೆಂದು ತಿಳಿದು ಅದಕ್ಕಾಗಿ ತನು ಮನ ಧನವನ್ನರ್ಪಿಸಿ ದುಡಿದಿರುವವರು ಬಹಳ ಮಂದಿಯಿಲ್ಲ. ಕನ್ನಡ ಬದುಕಲೆಂದು ನೂರೆಂಟು ಅಡಚಣೆಗಳನ್ನು, ಭರ್ತ್ಸನೆಗಳನ್ನು, ವಿರೋಧಗಳನ್ನು ಎದುರಿಸಿ ವೀರೋಪಾಸಕರಾಗಿ ನಿಂತವರು ವಿರಳ, ಅಂಥ ವಿರಳರಲ್ಲಿ ಕೃಷ್ಣಶಾಸ್ತ್ರಿಗಳವರ ಸ್ಥಾನ ಬಹಳ ಹಿರಿಯಸ್ಥಾನ.

ಕೃಷ್ಣಶಾಸ್ತ್ರಿಗಳವರ ಸಂದೇಶ ಕೇವಲ ಒಣ ಅಭಿಮಾನದಿಂದ ಪ್ರೇರಿತವಾಗಿದ್ದರೆ ನಾವು ಅದಕ್ಕೆ ಬೆಲೆ ಕೊಡಬೇಕಾಗಿರಲಿಲ್ಲ. ಆದರೆ ಅವರ ಮಾತಿನ ಹಿಂದೆ ಅಗಾಧವಾದ ಅಪಾರವಾದ ಸಂಸ್ಕೃತ, ಕನ್ನಡ, ಇಂಗ್ಲಿಷ್ ಪಾಂಡಿತ್ಯವಿದೆ; ಉಕ್ಕಿ ಹರಿವ ದೇಶಾಭಿಮಾನವಿದೆ......... ಕನ್ನಡಕ್ಕೆ ಕೀರ್ತಿ ತರುವ ಲೇಖಕರ ಒಂದು ಬಳಗ ಬೆಳೆಯಲು ಅವರು ಮಾಡಿದ ಪ್ರಯತ್ನ ಚಿರಸ್ಮರಣೀಯವಾದುದು........

ಜನ ಜೀವನಕ್ಕೂ ಅದರ ಸಮಸ್ಯೆಗಳಿಗೂ ಆದಷ್ಟು ದೂರವಿರುವುದೇ ಪಾಂಡಿತ್ಯದ ಲಕ್ಷಣ ಎಂದು ಕೆಲವು ಪಂಡಿತರು ಇಂದಿಗೂ ನಂಬಿದ್ದಾರೆ. ಜನಜೀವನದ ನಿಕಟ ಸಂಬಂಧ ವಿಲ್ಲದ ಅವರ ಪಾಂಡಿತ್ಯ ಪ್ರೇತವನದ ಪುಷ್ಪದಂತೆ ನಿರರ್ಥವಾಗುತ್ತದೆ, ಜಾತಿಮತಗಳ ಗೊಂದಲಗಳಲ್ಲಿ ಕೊಳೆಯುತ್ತಿದೆ. ಪಂಡಿತವರ್ಗ ಸ್ವಲ್ಪ ಕಣ್ಣು ತೆರೆದು ಶಾಸ್ತ್ರಿಗಳವರ ಮೇಲ್ಪಂಕ್ತಿಯನ್ನನುಸರಿಸುವುದಾದರೆ ನಾಡು ಬದುಕೀತು........

ಪಾಂಡಿತ್ಯದಿಂದ, ತ್ಯಾಗದಿಂದ, ಸಿಡಲಿನಂಥ ನುಡಿಗಳಿಂದ ಕನ್ನಡಿಗರಿಗೆ ಆತ್ಮಜ್ಞಾನ ವನ್ನುಂಟುಮಾಡಿಕೊಟ್ಟು ಕನ್ನಡನಾಡು ತಲೆಯೆತ್ತಿ ನಿಲ್ಲುವಂತೆ ಮಾಡಿದ್ದಾರೆ.

—ಅ. ನ. ಕೃಷ್ಣರಾಯ

(‘ಕನ್ನಡ ಕುಲರಸಿಕರು’ ಪು. ೩೧–೩೬)

ಸಿ. ಕೆ. ವೆಂಕಟರಾಮಯ್ಯ

# ಗುರುವರ್ಯ ಡಾಕ್ಟರ್ ಎ. ಆರ್. ಕೃಷ್ಣಶಾಸ್ತ್ರಿಗಳು

ಕೀರ್ತಿಶೇಷರಾದ ಗುರುವರ್ಯ ಡಾಕ್ಟರ್ ಎ. ಆರ್. ಕೃಷ್ಣಶಾಸ್ತ್ರಿಗಳ ನಿಧನದಿಂದ, ಸಾಹಿತ್ಯಾಕಾಶದಲ್ಲಿ ಉಜ್ಜ್ವಲವಾಗಿ ತೊಳಗುತ್ತಿದ್ದ ಶುಭತಾರೆಯೊಂದು ಕಣ್ಮರೆಯಾದಂತಾಯಿತು. ಅವರು ಉದ್ದಾಮ ವಿದ್ವಾಂಸರೂ, ಆದರ್ಶ ಗುರುವರ್ಯರೂ, ಪ್ರಸಿದ್ಧ ಸಂಪಾದಕರೂ, ಪ್ರಖ್ಯಾತ ಲೇಖಕರೂ, ಮಾರ್ಗದರ್ಶಕರಾದ ಭಾಷಾಭಿಮಾನಿಗಳೂ, ಪೂಜ್ಯರಾದ ಕರ್ಮಯೋಗಿಗಳೂ ಆಗಿದ್ದರು. ಅವರು ಐವತ್ತು ವರ್ಷಗಳ ದೀರ್ಘಕಾಲ ಅವಿಶ್ರಾಂತರಾಗಿ ಸಾಹಿತ್ಯಸೇವೆಮಾಡಿ ಚರಿತಾರ್ಥರಾದರು. ನಿಗರ್ವಿಗಳೂ ಸರಳಹೃದಯರೂ ಆಗಿದ್ದ ಆ ಮಹನೀಯರು ಎಲೆಯ ಮರದ ಅಮೃತಫಲದಂತಿದ್ದರೆ, ಅದರಲ್ಲಿ ಲೇಶಮಾತ್ರವೂ ಅತಿಶಯೋಕ್ತಿಯಿಲ್ಲ. ಅವರ ಕಾಯವೇನೋ ಅಳಿದಿದ್ದರೂ, ಅವರದು ಎಂದಿಗೂ ಮಾಸದೆ ನುಡಿಭಕ್ತರಿಗೆ ನಿರಂತರವಾಗಿ ಸ್ಫೂರ್ತಿಯನ್ನು ನೀಡುವ ಶಾಶ್ವತಕೀರ್ತಿ. ಅವರ ನಿಧನದಿಂದ ಅವರ ಕುಟುಂಬದವರಿಗೂ, ಅವರ ಬಂಧುಮಿತ್ರರಿಗೂ, ಅವರ ಅಸಂಖ್ಯಾತ ಶಿಷ್ಯರಿಗೂ ದುಸ್ಸಹವಾದ ವಿಯೋಗ ದುಃಖವುಟಾಂಗಿದೆ. ಅವರ ವಾತ್ಸಲ್ಯವನ್ನು ಸ್ಮರಿಸಿದರೆ, ಕಣ್ಣುಗಳಿಂದ ತಟಕ್ಕನೆ ಕಂಬನಿಯುರುಳುತ್ತದೆ; ಅವರು ತೋರುತ್ತಿದ್ದ ಶಿಷ್ಯಪ್ರಿಯತೆಯ ವೈಶಿಷ್ಟ್ಯವೇ ಅದಕ್ಕೆ ಕಾರಣ. ಅವರ ಆದ್ಯ ಶಿಷ್ಯರಲ್ಲೊಬ್ಬನಾಗಿದ್ದುದೇ ನನ್ನ ಜೀವನದೊಂದು ಸೌಭಾಗ್ಯ. ಯಾವ ದೃಷ್ಟಿಯಿಂದ ವಿಚಾರಮಾಡಿ ನೋಡಿದರೂ, ದೊಡ್ಡಬಾಳಿನ ಪುಣ್ಯಶ್ಲೋಕರವರು. ಪೂಜ್ಯರಾದ ಮತ್ತು ಪುಣ್ಯಶ್ಲೋಕರಾದ ಆ ಮಹನೀಯರನ್ನು ನೆನೆಯುವುದೇ ಒಂದು ಪುಣ್ಯ. ಅವರ ವಿಚಾರವಾಗಿ ಎಷ್ಟು ಬರೆದರೂ ಸಾಲದು. ಆದರೂ, ಅವರೊಂದಿಗಿನ ನನ್ನ ಸಂಬಂಧದ ನೆನಪುಗಳಲ್ಲಿ ಕೆಲವನ್ನು ಮಾತ್ರವೇ ಸಂಕ್ಷೇಪವಾಗಿ ಸೂಚಿಸಿ ಪ್ರೀತಿ ಭಕ್ತಿಗಳನ್ನು ತೋರುವುದು ಈ ಲೇಖನದ ಉದ್ದೇಶ. ಅವರ ನೆನಪಿನ ಸಂಚಿಕೆಗೆ ಲೇಖನವನ್ನು ಬರೆಯಬೇಕೆಂದು ನನ್ನನ್ನು ಕೇಳಿದ ವಿಶ್ವಾಸಕ್ಕಾಗಿ ನಾನು "ಪ್ರಬುದ್ಧ ಕರ್ನಾಟಕ"ದ ಸಂಪಾದಕರಿಗೆ ಕೃತಜ್ಞ.

ಗುರುವರ್ಯರು, ಬೆಂಗಳೂರು ಸೆಂಟ್ರಲ್ ಕಾಲೇಜಿನ ಕನ್ನಡ ಅಧ್ಯಾಪಕರಾಗಿ ಬಂದು ಪಾಠ ಹೇಳಿದ ಮೊದಲನೆಯದಿನವೇ ಅವರ ಶಿಷ್ಯರಿಗೆ ಅಚ್ಚುಮೆಚ್ಚಾದರು; ಕನ್ನಡದ ಪಾಠ ನಡೆಯುವಾಗ್ಗೆ ಮೌನವಾಗಿರದೆ ಕೆಲವರು ಮಾತನಾಡಿ "ಗಲಾಟೆ" ಮಾಡುತ್ತಿದ್ದುದು ಅದುವರೆಗಿನ ಪದ್ಧತಿ. ಆ ದಿನವೂ ಆ ಕೆಲವರು ಸಂಪ್ರದಾಯ ಲೋಪವಾಗದಂತೆ ಆ ರೀತಿ ಮಾಡಿದರು. ಗುರುಗಳು ಶಾಂತರಾಗಿಯೇ ಇದ್ದು "ಹೀಗೆ ಮಾಡಿದರೆ ಪರಿಣಾಮದಲ್ಲಿ ನಿಮಗೇ ನಷ್ಟ; ಸದ್ಯದಲ್ಲಿ, ಪಾಠವನ್ನು ಕೇಳಲು ನಿಮ್ಮ ಸಹಪಾಠಿಗಳಿಗೆ ಅಡ್ಡಿ, ನನಗೆ ವೃಥಾ ಕಂಠಶೋಷಣೆ. ಹೀಗೆ ಮಾಡಬೇಡಿ. ಸೆಂಟ್ರಲ್ ಕಾಲೇಜಿನ ದೊಡ್ಡ ಹೆಸರಿಗೆ ಕಳಂಕವನ್ನು ತರಬೇಡಿ. ನಮ್ಮೆಲ್ಲರಿಗಿಂತ ನಮ್ಮ ಕಾಲೇಜು ದೊಡ್ಡದು" ಎಂದರು. ಆ ಮಾತುಗಳಿಂದ–ಮೇಲಾಗಿ ಅವರು ಆ ಮಾತುಗಳನ್ನಾಡಿದ ರೀತಿಯಿಂದ–ಒಟ್ಟು ತರಗತಿಯೇ ನಿಶ್ಶಬ್ದವಾಯಿತು. ಪಾಠ ಹೇಳಿದ ವೈಖರಿಯಿಂದ ಶಿಷ್ಯರೆಲ್ಲರ ಹೃದಯಗಳನ್ನೇ ತಮ್ಮ ಕಡೆಗೆ ಸೆಳೆದು ಅವರಿಗೆ ಅಚ್ಚುಮೆಚ್ಚಾದರು, ನಮ್ಮ ಗುರುವರ್ಯರು. ಅವರ ವಿದ್ವತ್ತೂ, ಅವರ ಬೋಧಕ ಸಾಮರ್ಥ್ಯವೂ, ಅವರ ವಾತ್ಸಲ್ಯವೇ ಮುಂತಾದ ಸದ್ಗುಣಗಳೂ, ವ್ಯಕ್ತವಾದಂತೆಲ್ಲ, ಅವರಲ್ಲಿ ಶಿಷ್ಯರ ಪ್ರೀತಿ ಭಕ್ತಿಗಳು ಕ್ರಮಕ್ರಮವಾಗಿ ವೃದ್ಧಿಹೊಂದಿದುವು; ಇಂಗ್ಲಿಷ್ ಭಾಷೆಯನ್ನು ಅನನ್ಯ ಸುಲಭ ರೀತಿಯಲ್ಲಿ ಬೋಧಿಸುತ್ತಿದ್ದ ಟೇಟ್ ಸಾಹೇಬರಂತೆಯೇ, ಕನ್ನಡವನ್ನು ಬೋಧಿಸುವುದರಲ್ಲಿ ನಿಷ್ಣಾತರಾಗಿದ್ದ ಶಾಸ್ತ್ರಿಗಳು ಶಿಷ್ಯರ ಮನಸ್ಸನ್ನು ಆಕರ್ಷಿಸಿ ಅವರ ಪ್ರೀತಿಯನ್ನುಗಳಿಸಿದರು. ಅವಿರತವಾದ ವ್ಯಾಸಂಗದಿಂದ ಅವರ ವಿದ್ವತ್ತೂ, ವಿದ್ಯಾರ್ಥಿಗಳ ಮೇಲಿನ ಸಂತತ ವಾತ್ಸಲ್ಯದಿಂದ ಅವರ ಶಿಷ್ಯಪ್ರಿಯತೆಯೂ, ಮಹಾವೃಕ್ಷದ ಶಾಖೆಗಳಂತೆ ಕ್ರಮಕ್ರಮವಾಗಿ ಇನ್ನೂ ವೃದ್ಧಿಹೊಂದಿದುವು. ಕನ್ನಡದ ಅಧ್ಯಾಪಕರು ಕಪ್ಪುಹಲಗೆಯ ("ಬ್ಲ್ಯಾಕ್ ಬೋರ್ಡ್") ಮೇಲೆ, ಪಠ್ಯಪುಸ್ತಕಗಳಲ್ಲಿಯ ಪಾತ್ರಗಳ ಗುಣದೋಷಗಳು, ಪಾತ್ರಗಳ ಪರಸ್ಪರ ಸಾದೃಶ್ಯ ವೈದೃಶ್ಯಗಳು ಮುಂತಾದ ನಾನಾ ವಿಚಾರಗಳನ್ನು ಬರೆದು ಬೋಧಿಸುವ ಪರಿಪಾಠವನ್ನು, ಸೆಂಟ್ರಲ್ ಕಾಲೇಜಿನಲ್ಲಿ ಅವರೇ ಮೊಟ್ಟಮೊದಲು ಪ್ರಾರಂಭಿಸಿ ತಮ್ಮ ಶಿಷ್ಯರನ್ನೆಲ್ಲ ಅಚ್ಚರಿಗೊಳಿಸಿದರು. ಪಠ್ಯಪುಸ್ತಕಗಳನ್ನು ಹೃದಯಂಗಮವಾಗಿ ಬೋಧಿಸುವಷ್ಟರಿಂದ ಮಾತ್ರವೇ ಅವರಿಗೆ ತೃಪ್ತಿಯಿರಲಿಲ್ಲ. ಸಂದರ್ಭಾನುಸಾರವಾಗಿ, ಅವುಗಳ ವಿಚಾರದ ಜೊತೆಗೆ ಅನೇಕ ಶ್ರೇಷ್ಠಗ್ರಂಥಗಳ ವಿಚಾರವನ್ನೆತ್ತಿ ತುಲನಾತ್ಮಕವಾಗಿ ಶಿಷ್ಯರ ಮನಮುಟ್ಟುವಂತೆ ವಿಮರ್ಶಿಸಿ ಪಾಠ ಹೇಳುತ್ತಿದ್ದರು. ಅವರ ಪಾಠ ಪ್ರವಚನಗಳು ವಿದ್ವತ್ಪೂರ್ಣವಾಗಿಯೂ ಸ್ವಾರಸ್ಯವಾಗಿಯೂ ಇರುತ್ತಿದ್ದವು. ಪಾಠ ನಡೆಯುತ್ತಿದ್ದ ಪ್ರತಿಸಲದ ಅವಧಿಯ ಅರುವತ್ತು ನಿಮಿಷಗಳೂ ಅರುವತ್ತು ಕ್ಷಣಗಳಂತೆ ತೋರುತ್ತಿದ್ದವು. ಶಿಷ್ಯರು ಅವರ ಕೊಟಡಿಗೆ ಹೋದಾಗ ತಾವು ಅಧ್ಯಾಪಕರೆಂಬುದನ್ನು ಮರೆತು ಹಿರಿಯ ಮಿತ್ರರಂತೆ ಪ್ರೀತಿ ವಿಶ್ವಾಸಗಳಿಂದ

ಅವರು ಮಾತನಾಡುತ್ತಿದ್ದರು. ಅವರಿಗೆ ಶಿಷ್ಯರಲ್ಲಿದ್ದ ಪೂರ್ಣ ವಾತ್ಸಲ್ಯದ ಪರಿಣಾಮವಾಗಿ ಅವರ ಅಕ್ಕರೆಯ ಮಾತುಗಳನ್ನು ಎಷ್ಟು ಹೊತ್ತು ಕೇಳಿದರೂ ಯಾರಿಗೂ ತೃಪ್ತಿಯಾಗುತ್ತಿರಲಿಲ್ಲ. ಅವರ ಕೊಟಡಿಗೆ ಶಿಷ್ಯರು ಹೋದಾಗ ಅವರು ಪಾಠ ಪ್ರವಚನಗಳ ಸಂಬಂಧವಾದ ವಿಚಾರಗಳನ್ನೇ ಎತ್ತುತ್ತಿರಲಿಲ್ಲ. ಆಗಿನದು, ವಿದ್ಯಾರ್ಥಿಗಳ ಹಿತಸಾಧನೆಗೆ ಅವಶ್ಯವೆಂದು ಅವರು ಭಾವಿಸಿದ್ದ ಇತರ ಶ್ರೇಷ್ಠ ವಿಚಾರಗಳ ಚರ್ಚಾರೂಪದ "ಸುಖ ಸಂಕಥಾ ಪ್ರಸಂಗ"; ಮತ್ತು ಜೀವನದಲ್ಲಿ ಸತ್ಯ, ನೀತಿ, ಧರ್ಮ, ಸಂಪ್ರದಾಯ, ಸುಧಾರಣೆ, ದೈವಭಕ್ತಿ, ದೇಶಾಭಿಮಾನ, ಭಾಷಾಭಿಮಾನ ಮುಂತಾದವುಗಳ ಆವಶ್ಯಕತೆಗಳೆಷ್ಟೆಂಬ ವಿಚಾರಧಾರೆ. ಪಠ್ಯ ಪುಸ್ತಕಗಳ ಸಂಬಂಧವಾಗಿ ಅಥವಾ ಪಾಠದ ಸಂಬಂಧವಾಗಿ ಶಿಷ್ಯರಲ್ಲಾರಾದರೂ ಪ್ರಶ್ನೆಯನ್ನೇನಾದರೂ ಕೇಳಿದರೆ, "ಇದನ್ನು ಕ್ಲ್ಯಾಸಿನಲ್ಲಿ ಕೇಳಿ. ಇದಕ್ಕೆ ಅಥವಾ ನಿಮ್ಮ ಇತರ ಪ್ರಶ್ನೆಗಳಿಗೆ ಎಷ್ಟು ಬೇಕಾದರೂ ಉತ್ತರ ಹೇಳುತ್ತೇನೆ. ನಿಮಗೆ ಮಾತ್ರ ಇಲ್ಲಿ ಉತ್ತರ ಹೇಳಿದರೆ, ಇತರ ವಿದ್ಯಾರ್ಥಿಗಳಿಗೆಲ್ಲ ನಾನು ಪಕ್ಷಪಾತ ಮಾಡುವವನೆಂದೂ, ನನ್ನ ವಿದ್ಯಾರ್ಥಿಗಳಲ್ಲಿ ಕೆಲವರಿಗೆ ಮಾತ್ರ ಗೋಪ್ಯವಾಗಿ ವಿಶೇಷ ರೀತಿಯಲ್ಲಿ ನಾನು ಪಾಠ ಹೇಳುವೆನೆಂದೂ, ತಪ್ಪು ತಿಳಿವಳಿಕೆಯುಂಟಾಗಬಹುದು. ಅದಕ್ಕೆ ಅವಕಾಶ ಕೊಡಬಾರದು" ಎಂದು ಉತ್ತರ ಹೇಳುತ್ತಿದ್ದರು. ಅವರ ಶಿಸ್ತಿಗೂ, ನ್ಯಾಯಪರತೆಗೂ, ಇದೊಂದುನಿದರ್ಶನ.

ಪದಪ್ರಯೋಗ ಮಾಡುವುದರಲ್ಲಿ ಬಹಳ ಎಚ್ಚರಿಕೆಯಿಂದಿರಬೇಕೆಂಬುದು—ಅವರ ಮಾತುಗಳನ್ನೇ ಉಪಯೋಗಿಸುವುದಾದರೆ ಮೈಯೆಲ್ಲ ಮೆದುಳಾಗಿರಬೇಕೆಂಬುದು[1]—ಅವರೊಮ್ಮೆ ತಿಳಿಸಿದ ಅಭಿಪ್ರಾಯ. ಅವರು ಹಾಗೆ ತಿಳಿಸಿ, ಔಚಿತ್ಯಜ್ಞಾನವಿಲ್ಲದೆ ಪದಗಳನ್ನು ಪ್ರಯೋಗಿಸುವುದು ಅಕ್ಷಮ್ಯವೆಂದು ಸೂಚಿಸಿದ ಸಂದರ್ಭವಿದು: ಶೀಲಶುದ್ಧಿಯಿಲ್ಲದ ಕಲಾವಿದನೊಬ್ಬನನ್ನು ಬಣ್ಣಿಸುವಲ್ಲಿ, ಸಂತತವಾದ ಆತನ ತಪಸ್ಸಿನಿಂದ ಕಲಾಭಿವೃದ್ಧಿಯಾದುದಾಗಿ ಪತ್ರಿಕೆಯೊಂದರಲ್ಲಿ ಪ್ರಕಟವಾಗಿದ್ದುದನ್ನು ಉದಾಹರಣೆಯಾಗಿ ಪ್ರಸ್ತಾವಿಸಿ, "ಆತನಿಂದ ಕಲಾಭಿವೃದ್ಧಿಯಾಯಿತೆಂಬುದನ್ನು ಕೃತಜ್ಞತೆಯಿಂದ ಒಪ್ಪಿಕೊಳ್ಳೋಣ. ಅವರ ಸಂತತ ಪ್ರಯತ್ನದಿಂದ ಕಲಾಭಿವೃದ್ಧಿಯಾಯಿತೆಂದೋ, ಅಥವಾ ಆತನು ನಿರಂತರವಾಗಿ ಶ್ರಮಿಸಿದುದರಿಂದ ಕಲಾಭಿವೃದ್ಧಿಯ ಉಪಕಾರವಾಯಿತೆಂದೋ ಹೇಳಿ, ಅವರ ಕಲಾಭಿಜ್ಞತೆಯನ್ನು ಕೊಂಡಾಡೋಣ. ಹಾಗೆ ಕೃತಜ್ಞತೆಯನ್ನು ಸೂಚಿಸಿ ಪ್ರಶಂಸಿಸುವುದು ಮಾನವ ಧರ್ಮ. ಆದರೆ, ತಪಸ್ಸೆಂಬ ಮಾತನ್ನು ಬಿಟ್ಟು

---

[1] "ಮೈಯೆಲ್ಲ ಕಣ್ಣಾಗಿ" ಎಂಬುದನ್ನು ಅವರು "ಮೈಯೆಲ್ಲ ಮೆದುಳಾಗಿ" ಎಂಬ ರೂಪಕ್ಕೆ ತಿರುಗಿಸಿ ಬಳಸಿದರು. ಅಂದು ಅದು ಸಂದರ್ಭೋಚಿತವಾಗಿದ್ದು ಆಹ್ಲಾದವನ್ನುಂಟು ಮಾಡಿತು.

ಬಿಡೋಣ; ತಪಸ್ಸೆಂಬ ಪವಿತ್ರಪದದ ದುರುಪಯೋಗ ಮಾತ್ರ, ಬೇಡ. ಈ ಬಗೆಯ ಸಂದರ್ಭಗಳಲ್ಲಿ ತಪಸ್ಸೆಂಬ ಪದವನ್ನು ಪ್ರಯೋಗಿಸಿದರೆ, ಅದು ತಪಸ್ಸೆಂಬ ಪದದ ದುರುಪಯೋಗ. ಯಾವ ಸಂದರ್ಭದಲ್ಲಿ ಯಾವ ಪದವನ್ನು ಪ್ರಯೋಗಿಸಬೇಕೆಂಬ ಔಚಿತ್ಯವನ್ನರಿತು ವರ್ತಿಸಬೇಕು" ಎಂದು ಅವರು ಐವತ್ತು ವರ್ಷಗಳಿಗೂ ಹಿಂದೆ ಹೇಳಿದ ಅವರ ಮಾತುಗಳನ್ನು ನಿನ್ನೆ ಕೇಳಿದಂತಿದೆ. ಅಂದು ಅವರು ಆ ಮಾತುಗಳನ್ನಾಡಿದ ಕೂಡಲೆ, ನಾನು "ಅವರು ಶ್ರದ್ಧೆಯಿಂದ ಸಂತತವಾಗಿ ಶ್ರಮಿಸಿ ಕಲಾಸೇವೆಮಾಡಿದ ಪ್ರತಿಭಾಮಯವಾದ ಅದ್ಭುತಶಕ್ತಿಯನ್ನು ತಪಸ್ಸೆಂದು ಬಣ್ಣಿಸಿದರೇನು ತಪ್ಪು, ಸಾರ್? ಅದನ್ನು ತಪಸ್ಸೆನ್ನ ಕೂಡದೆ, ಸಾರ್?" ಎಂದು ಕೇಳಿದೆ. ನನ್ನ ಜೊತೆಯಲ್ಲಿದ್ದ ನನ್ನ ಸಹಪಾಠಿಯೊಬ್ಬರೂ "ಅದನ್ನು ತಪಸ್ಸೆನ್ನ ಕೂಡದೆ, ಸಾರ್?" ಎಂದು ಕೇಳಿದರು. ಒಡನೆಯೇ ಬಂದುವು, "ಕೂಡದು, ಕೂಡದು, ಸರ್ವಥಾ ಕೂಡದು. ಅದನ್ನು ಅದ್ಭುತಶಕ್ತಿಯೆನ್ನಬಹುದು, ಕಲಾಸಿದ್ಧಿಯೆನ್ನಬಹುದು, ಯಾವ ಮಾತುಗಳಲ್ಲಿ ಎಷ್ಟಾದರೂ ಕೊಂಡಾಡಬಹುದು. ತಪಸ್ಸೆಂದು ಮಾತ್ರ ಕರೆಯಕೂಡದು. ನನ್ನ ಮಾತನ್ನು ಒಪ್ಪುವ ಅಥವಾ ಒಪ್ಪದಿರುವ ಸ್ವಾತಂತ್ರ್ಯವೇನೋ ನಿಮಗಿದೆ. ವಯಸ್ಸಿನಲ್ಲಿ ನನಗಿಂತ ಕಿರಿಯರಾದ ನನ್ನ ಶಿಷ್ಯರಾಗಿದ್ದರೂ ನಿಮಗೆ ಆ ಸ್ವಾತಂತ್ರ್ಯವುಂಟು. ನನ್ನ ಅಭಿಪ್ರಾಯವನ್ನು ಪ್ರಾಮಾಣಿಕತೆಯಿಂದ ನಾನಿಟ್ಟುಕೊಂಡಿದ್ದು, ಅದು ತಪ್ಪೆಂದು ಯಾರಾದರೂ ತೋರಿಸಿಕೊಟ್ಟಾಗ ಅದನ್ನು ಬದಲಾಯಿಸಿ ತಿದ್ದಿಕೊಳ್ಳೋ ಸ್ವಾತಂತ್ರ್ಯ ನನಗೂ ಉಂಟು. ತಪಸ್ಸೆಂಬ ಈ ಪದಪ್ರಯೋಗದ ವಿಷಯದಲ್ಲಿ ನನ್ನ ಅಭಿಪ್ರಾಯ ಖಚಿತವಾಗಿದೆ. ಶೀಲಶುದ್ಧಿಯುಳ್ಳವನಾಗಿ ಧರ್ಮನಿಷ್ಠೆಯಿಂದ ಯಾವುದಾದರೂ ಮಹತ್ತಮಕಾರ್ಯಸಾಧನೆಗಾಗಿ ಸಂತತವಾಗಿ ಪ್ರಯತ್ನಿಸಿ ಶ್ರಮಿಸುವವನ ವಿಚಾರದಲ್ಲಿ ಮಾತ್ರವೇ ತಪಸ್ಸೆಂಬ ಪ್ರಯೋಗ ಸುಸಂಗತ" ಎಂಬ ಮಾತುಗಳು. ಆಗಲೂ ನಾನು ಸುಮ್ಮನಿರದೆ, "ಪೇಪರಿನಲ್ಲಿ ಬರೆದಿರೋರು ಅದನ್ನ ಪ್ರಯೋಗಿಸಿ ಬಿಟ್ಟಿದ್ದಾರಲ್ಲಾ, ಸಾರ್!" ಎಂದೆ. ಆ ಮಾತುಗಳನ್ನು ಕೇಳಿ ಅವರಿಗೆ ಕೊಂಚ ಅಸಮಾಧಾನವಾಯಿತೆಂದು ತೋರಿತು. ಅವರು "ಹೀಗೇಕೆ ಚಂಡಿಸುತ್ತೀರಿ? ಪೇಪರಿನಲ್ಲಿ ಬರೆದಿರೋರು ಅದನ್ನ ಪ್ರಯೋಗಿಸಿದ್ದಾರೆ, ಅಂತೀರಿ. ಅದಕ್ಕೆ ನಾನೇನು ಮಾಡಲಿ? ನನಗೆ ಸರಿಯೆಂತ ತೋರಿದ್ದನ್ನ ನನ್ನ ಶಿಷ್ಯರಿಗೆ ಹೇಳೋದು ನನ್ನ ಕರ್ತವ್ಯ. ಇನ್ಯಾರೋ ಏನೋ ಮಾಡಿದರೆ, ಅದಕ್ಕೆ ನಾನು ಹೊಣೆಯೆ? ಮೊನ್ನೆ ಒಬ್ಬರು ವಿದ್ವಾಂಸರು, ಒಬ್ಬರು ದೊಡ್ಡ ಅಧಿಕಾರಿಯವರನ್ನ ಶ್ರೀಮನ್ನಾರಾಯಣನಿಗೇ ಹೋಲಿಸಿ, ಆತನೇ ನಾರಾಯಣನಿಗಿಂತ ಒಂದು ಕೈ ಮೇಲೆಂದು ತೋರೋ ಹಾಗೆ ಹೊಗಳಿ ಹಲ್ಲುಕಿರಿದರಂತೆ. ಅದಕ್ಕೇನು ಮಾಡೋದು? ದೊಡ್ಡ ಅಧಿಕಾರಿಗಳನ್ನ—ಅವರು ನಿಜವಾಗಿಯೂ ಯೋಗ್ಯರಾಗಿದ್ದರೆ—ಎಷ್ಟು ಬೇಕಾದರೂ ಕೊಂಡಾಡಬಹುದು. ಕೊಂಡಾಡಲಿ! ಆದರೆ, ಮನುಷ್ಯರು ಎಂಥವರೇ ಆಗಿದ್ದರೂ

ಅವರನ್ನ ಶ್ರೀಮನ್ನಾರಾಯಣನಿಗೆ ಹೋಲಿಸುವುದು ತಪ್ಪು, ದೊಡ್ಡ ತಪ್ಪು. ಅದು ಮಾಡಬಾರದ ಕೆಲಸ. ಶ್ರೀಮನ್ನಾರಾಯಣ ತ್ರಿಮೂರ್ತಿಗಳಲ್ಲೊಬ್ಬ. ಅವನು ಇಲ್ಲವೆಂದು ವಾದಿಸುವಂಥೋರ ಕೂಡ, ಶ್ರೀಮನ್ನಾರಾಯಣನೆಂಬ ಕಲ್ಪನೆಯ ಹಿನ್ನೆಲೆಯಲಿರುವ ಪಾರಮ್ಯ ಭಾವನೆಯೂ ಪಾವಿತ್ರ್ಯಭಾವನೆಯೂ ಯಾವ ಮಾನವ ಮಹನೀಯನಿಗೂ ಅನ್ವಯಿಸಕೂಡದಷ್ಟು ಅಮೋಘವೆಂಬುದನ್ನ ಒಪ್ಪಲೇಬೇಕು. ಹೀಗಿರುವಾಗ, ಅಧಿಕಾರಿಯುಪರನ್ನ—ನಾನು ಈಗ ಹೇಳಿದಂತೆ —ಒಬ್ಬರು ವಿದ್ವಾಂಸರು ಶ್ರೀಮನ್ನಾರಾಯಣನಿಗೇ ಹೋಲಿಸಿದರೆಂದು ಕೇಳಿದೆ. ಅದು ವಿದ್ವತ್ತಿನ ದುರುಪಯೋಗ. ಅದಕ್ಕೆ ಯಾರು ಹೊಣೆ? ಹ್ಯಾಗೆ ಮಾತಾಡ ಬೇಕು, ಹ್ಯಾಗೆ ಬರೆಯಬೇಕು, ಅನ್ನೋದನ್ನ ಅವರವರೇ ಸಾವಧಾನವಾಗಿ ಯೋಚಿಸಿ ನಿರ್ಧರಿಸಿಕೊಳ್ಳೋದು ವಿವೇಕ. ವಿವೇಕತಪ್ಪಿದವರನ್ನೆಲ್ಲಾ ತಿದ್ದೋದ ಕ್ಯಾದೀತೆ? ಅಥವಾ ತಿದ್ದಲು ನಾವು ಯಾರು? ನಮ್ಮನ್ನ ನಾವು ತಿದ್ದಿಕೊಳ್ಳೋದೇ ಬೇಕಾದಷ್ಟಿದೆ" ಎಂದರು.

ಅವರು ಆ ದಿನ ಆಡಿದ ಮಾತುಗಳು ಎಂದಿಗೂ ಮರೆಯಲಾಗದ ವಿವೇಕ ವಾಣಿಗಳು, ಉಪದೇಶವಾಣಿಗಳು. ಆದರೂ, "ಹೀಗೇಕೆ ಚಂಡಿಸುತ್ತೀರಿ?" ಎಂಬ ಮಾತುಗಳು ನನ್ನ ಕಿವಿಗಳಲ್ಲಿ ಮೊರೆಯತೊಡಗಿದುವು. ಅವರಲ್ಲಿ ನಾನೇಕೆ ಹಾಗೆ ಅಪಚಾರ ಮಾಡಿದೆನೆಂದು ಮನಸ್ಸಿಗೆ ವ್ಯಥೆಯಾಯಿತು. ನನ್ನಲ್ಲಿ ಅವರಿಗೆ ಬಹಳ ವಾತ್ಸಲ್ಯವಿದ್ದುದನ್ನು ನೆನೆದಷ್ಟೂ ನನ್ನ ಮನೋವ್ಯಥೆಯೂ, ಪಶ್ಚಾತ್ತಾಪವೂ ಹೆಚ್ಚಿದುವು. ನಾವು ಅವರ ಕೊಟಡಿಯಿಂದ ಹೊರಟಾಗ ಅವರೇನೊ "ಮನಸ್ಸಿ ನಲ್ಲಿರುವುದನ್ನು ದಿಟ್ಟತನದಿಂದ ಹೇಳಿ ವಾದಿಸುವವರನ್ನು ಕಂಡರೆ ನನಗೆ ಇಷ್ಟ. ಅಂಥೋರೇ ನನಗೆ ಬೇಕು. ಕುರಿಗಳಂತೆ ತಲೆಬೊಗ್ಗಿಸಿ ಹೂಗುಟ್ಟುವವರು ಬೇಡ" ಎಂದು ಹೇಳಿದರು. ಆದರೂ ನನ್ನ ವ್ಯಥೆಯೇನೊ ಕಡಮೆಯಾಗಲಿಲ್ಲ. ಜೀವನವೇ ವಿಚಿತ್ರ! ಆ ಬಳಿಕ ಕೆಲವೇ ದಿನಗಳು ಕಳೆದ ಮೇಲೆ, ಅವರ ಮನಸ್ಸಿಗೆ ತಾತ್ಕಾಲಿಕ ವಾಗಿ ಅಸಮಾಧಾನವನ್ನುಂಟುಮಾಡಿದ ಕೆಲಸವೊಂದು ನನ್ನಿಂದ ನಡೆಯಿತು. ನನ್ನ ಉದ್ದೇಶವೇ ಒಂದು, ಆದುದೇ ಒಂದು! ಒಂದು ದಿನ, ತರಗತಿಯಲ್ಲಿ ಶಿಷ್ಯರೆಲ್ಲರೂ ಸೇರಿದ್ದೆವು; ಗುರುಗಳು ಬರುವ ಸಮಯ. ಅವರು ಕುಳಿತುಕೊಳ್ಳ ಬೇಕಾಗಿದ್ದ ಕುರ್ಚಿಯ ಎದುರಿಗಿದ್ದ ಮೇಜಿನ ಮೇಲೆ ಒಂದು ಗಡಿಗೆ; ಅದರ ಬಾಯಿಗೆ ಸಿಕ್ಕಿಸಿದ್ದ ಒಂದು ಪೊರಕೆ! ನನ್ನ ಸಹಪಾಠಿಗಳಲ್ಲಾರ ಗಮನವನ್ನು ಅದು ಸೆಳೆದಿರಲಿಲ್ಲ. ಅಸಹ್ಯವಾದ ಆ ಗಡಿಗೆಯನ್ನು ಮೇಜಿನ ಮೇಲಿನಿಂದ ತೆಗೆದಿಡುವ ಉದ್ದೇಶದಿಂದ ಮೇಜಿನ ಬಳಿಗೆ ಹೋಗಿ ಗಡಿಗೆಯ ಬುಡಕ್ಕೆ ಅಂಗೈ ಗಳನ್ನು ನಾನು ಹಾಕುವ ವೇಳೆಗೂ, ಅವರು ಬರುವ ವೇಳೆಗೂ ಸರಿಹೋಯಿತು. ಅವರು ಮೇಜಿನ ಬಳಿಗೆ ಬರುವಷ್ಟರಲ್ಲಿ ಆದನ್ನು ತೆಗೆದಿಡುವ ಆತುರದಿಂದ ಕೊಂಚ ಮೇಲಕ್ಕೆತ್ತಿದೆ. ಅಷ್ಟರಲ್ಲಿ ಅವರು ಸರಸರನೆ ಮುಂದೆ ಬಂದು, "ಬೇಡಿ, ಬೇಡಿ,

ತೆಗೆಯಬೇಡಿ. ನಿಮ್ಮ ಸ್ಥಳಕ್ಕೆ ಹೋಗಿ ಕುಳಿತುಕೊಳ್ಳಿ" ಎಂದರು. ನಾನು ಕುಳಿತುಕೊಳ್ಳಲು ಹೊರಟೆ. ಅಷ್ಟರಲ್ಲಿ ಅವರು ನಗುತ್ತ "ಹೂದಾನಿಗೆ ತುರಾಯಿ ಸೆಕ್ಕಿದಂತಿದೆ. ಹೇಗೂ ಸೆಕ್ಕಿಸಿದ್ದೀರಿ. ಗಡಿಗೆ ಏಕೆ ಬೇರೆಕಡೆಗಿಡಬೇಕು?" ಎಂದರು; ಮತ್ತೆ ನಕ್ಕರು. ಆಗ ನನ್ನ ಮನಸ್ಸಿನ ಸ್ಥಿತಿಯು ಹೇಗಾಗಿರಬೇಕೆಂಬುದನ್ನು ಊಹೆಗೆ ಬಿಡಬೇಕೇ ಹೊರತು, ಈಗಲೂ ವರ್ಣಿಸಲಳವಲ್ಲ. ನಾನು ಅಪರಾಧಿಯಲ್ಲವೆಂದು ತಿಳಿಸುವ ಸಾಮರ್ಥ್ಯವೂ ನನಗಿರಲಿಲ್ಲ; ಮಾತೇ ಹೊರಡದಂತಾಯಿತು. ನಾನು ನನ್ನ ಸ್ಥಳಕ್ಕೆ ಹೋಗುವುದಕ್ಕೆ ಮುಂಚಿತವಾಗಿಯೇ, ಅವರು ನನ್ನನ್ನು ಉದ್ದೇಶಿಸಿ "ಕೊಳ್ಳಿ, ಬೀಗದಕೈ. ನನ್ನ ಕೊಟಡಿಗೆ ಹೋಗಿ ಬಾಗಿಲು ಬೀಗತೆಗೆದು, ಒಳಗಿಟ್ಟಿರುವ ಕವಿರಾಜಮಾರ್ಗ ಪುಸ್ತಕ ತೆಗೆದುಕೊಂಡು ಬನ್ನಿ" ಎಂದು ಬೀಗದ ಕೈಯನ್ನು ಕೊಟ್ಟರು. ನಾನು ತರಗತಿಯಿಂದ ಹೊರಟು "ನನ್ನ ಮೇಲೆ ರೇಗಲಿಲ್ಲ. ನನ್ನನ್ನ ಗದರಿಸಲಿಲ್ಲ. ಇಂಥ ಗುರುಗಳಿಗೆ ಅಸಮಾಧಾನವಾಯಿತಲ್ಲಾ!" ಎಂದು ನನ್ನಲ್ಲಿ ನಾನೇ ಪೇಚಾಡಿಕೊಳ್ಳುತ್ತ ಅವರ ಕೊಟಡಿಯ ಬಳಿಗೆಹೋದೆ. ಅಲ್ಲಿ ಎಷ್ಟು ಹುಡುಕಿದರೂ ಅವರು ಹೇಳಿದ ಪುಸ್ತಕವೇ ಸಿಕ್ಕಲಿಲ್ಲ. ಬೀರುವಿನಲ್ಲಿ, ಮೇಜಿನಮೇಲೆ, ಎಲ್ಲಿ ಹುಡುಕಿದರೂ "ಕವಿರಾಜಮಾರ್ಗ" ಗ್ರಂಥ ಸಿಕ್ಕಲಿಲ್ಲ. ಬಾಗಿಲಿಗೆ ಬೀಗವನ್ನು ಹಾಕಿ ಹಿಂತಿರುಗಿದೆ. ತರಗತಿಯೊಳಕ್ಕೆ ("ಓಲ್ಡ್ ಕೆಮಿಸ್ಟ್ರಿಥಿಯೇಟರ್" ಒಳಕ್ಕೆ) ಪ್ರವೇಶಿಸುತ್ತಿದ್ದಂತೆಯೇ ಅವರು ನಗುತ್ತ "ಪುಸ್ತಕ ಸಿಕ್ಕಲಿಲ್ಲ. ಅಲ್ಲವೆ? ಪುಸ್ತಕ ಅಲ್ಲಿಲ್ಲ. ಇಲ್ಲಿ ನಡೆದದ್ದನ್ನ ವಿಚಾರಿಸುವಾಗ ನೀವು ಇಲ್ಲಿರಬಾರದೆಂತ ನಿಮ್ಮನ್ನ ಕಳಿಸಿದೆ. ನಾನು ಇಲ್ಲಿಗೆ ಬರುವುದಕ್ಕೆ ಮುಂಚೆ, ನೀವು ಮೇಲಕ್ಕೆದ್ದು ಮೇಜಿನ ಕಡೆಗೆ ಬಂದಾಗ, ಇಲ್ಲಿರುವವರು ಅದರ ಮೇಲೆ ಗಡಿಗೆಯಿದ್ದುದನ್ನು ನೋಡಿದರಂತೆ. ಅದನ್ನು ತೆಗೆಯಬೇಕೆಂತ ನೀವು ಅದರ ಬಳಿಗೆ ಹೋದಿರೆಂತ ಗ್ರಹಿಸಿದರಂತೆ. ನಿಮ್ಮ ಮೇಲೆ ಸಂದೇಹ ಹುಟ್ಟುವಂತಿದ್ದ ಸನ್ನಿವೇಶ. ಅನ್ಯಾಯವಾಗಿ ಸಂದೇಹ ಹುಟ್ಟಿತು. ನಿಮ್ಮ ಮನಸ್ಸಿಗೆ ನೋವಾಯಿತು. ಜೀವನದಲ್ಲಿ ಹೀಗೆ ವಿಧಿಯ ಕುಹಕವಿರುತ್ತೆ. ಬನ್ನಿ, ಬನ್ನಿ" ಎಂದರು. ವ್ಯಥೆಯಿಂದ ಪಾತಾಳಕ್ಕಿಳಿದು ಹೋಗಿದ್ದ ನನ್ನ ಮನಸ್ಸು ಉಲ್ಲಾಸದಿಂದ ಹುರಿದುಂಬಿ ಆಕಾಶಕ್ಕೇರಿತು. ಅವರ ಸಂಯಮ, ತಾಳ್ಮೆ, ಶಿಷ್ಯಪ್ರಿಯತೆ, ನ್ಯಾಯದೃಷ್ಟಿ, ಔಚಿತ್ಯಜ್ಞಾನ ಮುಂತಾದ ಸದ್ಗುಣಗಳು ಅಂದಿನ ಘಟನೆಯಿಂದ ವ್ಯಕ್ತವಾದುವು. ಅವರು ಕುರ್ಚಿಯನ್ನು ಮೇಜಿಗೆ ದೂರವಾಗಿರುವಂತೆ ಎಳೆದುಕೊಂಡು ಕುಳಿತಿದ್ದರು. ಗಡಿಗೆಯೂ ಅದಕ್ಕೆ ಸೆಕ್ಕಿದ್ದ ಪೊರಕೆಯೂ ಮೇಜಿನ ಮೇಲೆ ವಿರಾಜಿಸುತ್ತಿದ್ದುವು. ಗುರುಗಳು ಪ್ರಸನ್ನವದನರಾಗಿ ನಗುತ್ತ "ಇವೊತ್ತು ಪೊರಕೆಯನ್ನು ಕುರಿತು ಒಂದು ಪ್ರಬಂಧ ಬರೆಯಿರಿ" ಎಂದು ಹೇಳಿದರು. ನಾನು "ಸಮ್ಮಾರ್ಜನಿಯ ಹೇಳಿಕೆ" ಎಂಬ ಶೀರ್ಷಿಕೆಯಲ್ಲಿ ಬರೆದ ಪ್ರಬಂಧವನ್ನು ಅವರು ಬಹಳವಾಗಿ ಮೆಚ್ಚಿ, ಅದನ್ನು ತಮ್ಮ ಬಳಿಯಲ್ಲಿಟ್ಟುಕೊಂಡು

ತಾವು ಪಾಠ ಹೇಳುತ್ತಿದ್ದ ಇತರ ತರಗತಿಗಳಲ್ಲಿ ಕೂಡ, ಓದಿ ಹೇಳಿ ತಮ್ಮ ಮೆಚ್ಚಿಕೆಯನ್ನು ಸೂಚಿಸಿದರು. ಕೆಳಗಿನ ತರಗತಿಯವನ ಪ್ರಬಂಧವನ್ನು ಮೇಲಿನ (Senior) ತರಗತಿಯಲ್ಲಿ ಓದಿ ಹೇಳಿ ಪ್ರಶಂಸೆಮಾಡಿದುದರಿಂದ ತಮಗೆ ಅಪಮಾನವಾಯಿತೆಂದು ಮೇಲಿನ ತರಗತಿಯ ವಿದ್ಯಾರ್ಥಿಗಳಲ್ಲಿ ಕೆಲವರಿಗೆ ಅಸಮಾಧಾನವೂ ಆಯಿತು. ಆ ಮಾತು ಹಾಗಿರಲಿ. ಆಗಿನಿಂದ ನನ್ನಲ್ಲಿ ಗುರುಗಳ ವಾತ್ಸಲ್ಯವೂ ಕೃಪೆಯೂ ಏಕಪ್ರಕಾರವಾಗಿ ವೃದ್ಧಿಹೊಂದಿದುವು.

ಗುರುಗಳು ಶಿಕ್ಷಣಕ್ಷೇತ್ರದಲ್ಲಿ ನ್ಯಾಯಕ್ಕಾಗಿ ಹೋರಾಡುವುದರಲ್ಲಿ ಕೆಚ್ಚೆದೆಯ ಕಟ್ಟಾಳಿನಂತಿದ್ದ ಧೀರರು. ಉಪನಿಷತ್ತುಗಳೇ ಮುಂತಾದ ಆಧ್ಯಾತ್ಮಿಕ ಮತ್ತು ಧಾರ್ಮಿಕ ಗ್ರಂಥಗಳಲ್ಲಿ ಪ್ರಯೋಗವಾಗಿರುವ ಧೀರಶಬ್ದವು ಬಹಳ ಅರ್ಥಗರ್ಭಿತವಾದ ಶಬ್ದವೆಂಬುದನ್ನರಿತೇ ಅವರನ್ನು ಧೀರರೆಂದಿದ್ದೇನೆ. ನಾನು ಸೆಂಟ್ರಲ್ ಕಾಲೇಜಿನಲ್ಲಿ ಅವರ ಶಿಷ್ಯನಾಗಿದ್ದ ಅವಧಿಯಲ್ಲಿ ನಡೆದ ಹಲವು ನಿದರ್ಶನಗಳಿಂದ ಅದನ್ನು ಸಮರ್ಥಿಸಬಹುದಾದರೂ, ಕೇವಲ ಎರಡು ನಿದರ್ಶನಗಳನ್ನು ಮಾತ್ರವೇ ಇಲ್ಲಿ ಸೂಚಿಸಿ ತೃಪ್ತಿ ಹೊಂದಬೇಕಾಗಿದೆ. ಅನ್ಯಾಯವಾದರೆ ಅವರು ಸಹಿಸುತ್ತಿರಲಿಲ್ಲ. ವಿಜ್ಞಾನದ ಅಧ್ಯಾಪಕರೊಬ್ಬರು ಪ್ರಶ್ನಪತ್ರಿಕೆಗೆ ವಿದ್ಯಾರ್ಥಿಗಳು (ತರಗತಿಯ ಪರೀಕ್ಷೆಯಲ್ಲಿ) ಬರೆದ ಉತ್ತರಗಳನ್ನು ಪರಿಶೀಲಿಸಿ ಅಂಕಗಳನ್ನು ಕೊಡುವುದರಲ್ಲಿ ನೂತನ ಮಾರ್ಗವೊಂದನ್ನವಲಂಬಿಸಿದರು; ಒಂದೊಂದು ಪ್ರಶ್ನೆಯ ಉತ್ತರವನ್ನು ಓದಿನೋಡಿ ಅಂಕಗಳನ್ನು ಕೊಡುವ ವಾಡಿಕೆಯ ವಿಧಾನವನ್ನನುಸರಿಸದೆ, ಉತ್ತರಪತ್ರಿಕೆಯ ಉತ್ತರಗಳನ್ನೆಲ್ಲ (ಪ್ರತ್ಯೇಕ ಪ್ರತ್ಯೇಕವಾಗಿ ಓದಿ ಅಂಕಗಳನ್ನು ಕೊಟ್ಟು ಅವುಗಳನ್ನೆಲ್ಲಾ ಕೂಡಿ ಆ ವಿದ್ಯಾರ್ಥಿಗೆ ಬಂದ ಒಟ್ಟು ಅಂಕಗಳನ್ನು ಬರೆದು ಸೂಚಿಸುವುದನ್ನು ಬಿಟ್ಟು) ಕೊನೆಯವರೆಗೂ ಉದ್ದಕ್ಕೆ ಓದಿ ಒಟ್ಟಾರೆ ತೋರಿದಷ್ಟು ಅಂಕಗಳನ್ನು ಆ ಉತ್ತರಪತ್ರಿಕೆಯ ಮೇಲೆ ಬರೆದು ಸೂಚಿಸಿದುದೇ ಅವರು ಅನುಸರಿಸಿದ ನೂತನ ಮಾರ್ಗ. ಅದರಿಂದ ಉತ್ತರಪತ್ರಿಕೆಗಳನ್ನು ಪರಿಶೀಲಿಸುವುದರಲ್ಲಿ ಅಧ್ಯಾಪಕರ ಶ್ರಮವೇನೊ ಕಡಿಮೆಯಾಯಿತು. ಆದರೆ, ಅನೇಕ ವಿದ್ಯಾರ್ಥಿಗಳಿಗೆ ಬರಬೇಕಾದಷ್ಟು ಅಂಕಗಳು ಬಾರದೆ ಅನ್ಯಾಯವಾಯಿತು; ಪ್ರತ್ಯೇಕ ಪ್ರತ್ಯೇಕವಾಗಿ ಉತ್ತರಗಳನ್ನು ಪರಿಶೀಲಿಸಿ ಅಂಕಗಳನ್ನು ಕೊಟ್ಟಿದ್ದರೆ ಇನ್ನೂ ಹೆಚ್ಚು ಅಂಕಗಳು ಬರುತ್ತಿದ್ದುವೆಂಬುದು ಸಿದ್ಧವಾಯಿತು. ಆ ವಿಚಾರವೇ ತಮಗೆ ಸಂಬಂಧಪಟ್ಟಿಲ್ಲದಿದ್ದರೂ ನಮ್ಮ ಗುರುವರ್ಯರು ತಮ್ಮ ಶಿಷ್ಯರಲ್ಲಿ ಕೆಲವರಿಗೆ ಅನ್ಯಾಯವಾಗಿದ್ದುದನ್ನು ಸಹಿಸಲಾರದೆ, ವಿಜ್ಞಾನದ ಅಧ್ಯಾಪಕರ ಬಳಿಗೆ ಹೋಗಿ ಉತ್ತರಪತ್ರಿಕೆಗಳನ್ನು ಪರಿಶೀಲಿಸುವುದರಲ್ಲಿ ವಾಡಿಕೆಯ ವಿಧಾನವನ್ನನುಸರಿಸಿ ಮತ್ತೆ ಅಂಕಗಳನ್ನು ಕೊಡಬೇಕೆಂದು ಅವರಿಗೆ ಬಿನ್ನೈಸಿದರಂತೆ. ಅದು, ಅವರಿಂದ ಯಾರೂ ನಿರೀಕ್ಷಿಸುವಂತಿಲ್ಲದಿದ್ದ ಧೀರತೆಯ ಕೆಲಸ; ಕೆಲವರಿಗೆ ಅನ್ಯಾಯವಾಗಿದ್ದುದನ್ನು ತಪ್ಪಿಸುವ ಉದ್ದೇಶದಿಂದ, ದಾಕ್ಷಿಣ್ಯವನ್ನು ಬದಿಗೊತ್ತಿ ಧೀರತೆ

ಯಿಂದ ಕೈಕೊಂಡ ಪ್ರಾಮಾಣಿಕ ವರ್ತನೆ. ವಿಜ್ಞಾನದ ಅಧ್ಯಾಪಕರೂ ಅವರ ಸಲಹೆಗೆ ಸುಲಭವಾಗಿ ಒಪ್ಪದೆ "ಇದು 'ಜನರಲ್ ಇಂಪ್ರೆಷನ್ ಮೆಥಡ್'; ದೊಡ್ಡ 'ರಿಫಾರಂ' ನೆಡೆದಿದೆ" ಎಂದು ಮುಂತಾಗಿ ವಾದಿಸಿದರಂತೆ. ನಮ್ಮ ಗುರುಗಳು ದಿಟ್ಟತನದಿಂದ "ಈ ವಿಧಾನದಿಂದ ಅನ್ಯಾಯವಾಗಿದೆ, ಕೆಲವರಿಗೆ. ಸುಧಾರಣೆಯಿಂದ ನಿಜವಾಗಿಯೂ ಹೆಚ್ಚು ಹಿತಸಾಧನೆಯಾಗುವಂತಿದ್ದರೆ, ಅದು ಅವಶ್ಯವಾಗಿ ನಡೆಯುಬಹುದು. ವಿದ್ಯಾರ್ಥಿಗಳಿಗೆ ಅನ್ಯಾಯ. ಈ ಸುಧಾರಣೆ ಬೇಡ, ಖಂಡಿತ ಬೇಡ" ಎಂದು ಮುಂತಾಗಿ ಪ್ರತಿವಾದವನ್ನು ಹೂಡಿದರು. ಕೊನೆಗೆ ಅವರ ಉದ್ದೇಶವೇ ನೆರವೇರಿತು. ಅವರ ಧೀರತೆಯ ಎರಡನೆಯ ನಿದರ್ಶನವಿದು: ಮಿ. ಟೇಟ್ ಸಾಹೇಬರು ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲ್ ಹುದ್ದೆಯಿಂದ ನಿವೃತ್ತರಾಗಿ ಮಿ. ಮೆಟ್ಕಾಫ್ ಸಾಹೇಬರು ಆ ಹುದ್ದೆಯಲ್ಲಿದ್ದಾಗಿನ ಅವಧಿ ಯಲ್ಲೊಂದು ದಿನ. ಅಪರಾಹ್ನ ಮೂರು ಗಂಟೆಗೆ ಕಾಲೇಜಿನ ತರಗತಿಗಳೆಲ್ಲ ಬರಿದು. ಪಾಠ ಹೇಳಲು ತರಗತಿಗಳಿಗೆ ಹೋದ ಅಧ್ಯಾಪಕರು ಪ್ರಾಧ್ಯಾಪಕರು ಗಳಿಗೆಲ್ಲ ಅಚ್ಚರಿ. ನಾಲ್ಕು ಗಂಟೆಗೆ ಶ್ರೀಮತಿ ಸರೋಜಿನಿನಾಯ್ಡು ಅವರ ಭಾಷಣದ ಸ್ವಂತ ಕವನಗಳ ವಾಚನದ ರಸದೂಟವಿದ್ದ ಸಾರ್ವಜನಿಕ ಸಭೆಗೆ ಹಕ್ಕಿಗಳೆಲ್ಲ ಹಾರಿಹೋಗಿದ್ದುವು. ಪೂರ್ವಭಾವಿಯಾಗಿ ಪ್ರಿನ್ಸಿಪಾಲರ ಅಪ್ಪಣೆಯನ್ನು ಪಡೆದಿರ ಲಿಲ್ಲ; ಅಂದು ಕಾಲೇಜಿಗೂ ಹಿಂತಿರುಗಲಿಲ್ಲ. ಮಾರನೆಯದಿನ ಪ್ರಿನ್ಸಿಪಾಲರ ಅಧ್ಯಕ್ಷತೆಯಲ್ಲಿ ಅಧ್ಯಾಪಕರ ಮತ್ತು ಪ್ರಾಧ್ಯಾಪಕರ ರಹಸ್ಯಸಭೆ ನಡೆಯಿತು, ಕಾಲೇಜು ತರಗತಿಗಳಿಗೆ ಯಥಾಪ್ರಕಾರ ಬಂದಿದ್ದ ವಿದ್ಯಾರ್ಥಿಗಳಿಗೆ ಪಾಠ ಪ್ರವಚನಗಳು ಪೂರೈಸಿ ಕಾಲೇಜಿನ ದಿನಚರಿ ಮುಗಿದಮೇಲೆ. ಹಿಂದಿನ ದಿನ ಅಪ್ಪಣೆ ಪಡೆಯದೆ ಸಭೆಗೆ ಹೋಗಿದ್ದ ವಿದ್ಯಾರ್ಥಿಗಳ ವಿಚಾರದಲ್ಲಿ ಹೇಗೆ ಕ್ರಮ ಕೈಕೊಳ್ಳಬೇಕೆಂಬುದನ್ನು ಚರ್ಚಿಮಾಡುವುದು ರಹಸ್ಯ ಸಭೆಯ ಉದ್ದೇಶ. ಪ್ರಾಧ್ಯಾಪಕರುಗಳಲ್ಲಿ ಕೆಲವರು ಕೂಡ, ಬಿಚ್ಚು ಮನಸ್ಸಿನಿಂದ ಏನನ್ನೂ ಹೇಳದೆ, ವಿದ್ಯಾರ್ಥಿಗಳ ಮೇಲೆ ಕ್ರಮ ಜರುಗಿಸಬೇಕೆಂಬ ಅಭಿಪ್ರಾಯವನ್ನೇ ಸಮರ್ಥಿಸ ತೊಡಗಿದರಂತೆ. ಆಗ ನಮ್ಮ ಗುರುವರ್ಯರು ಇಂಗ್ಲಿಷಿನಲ್ಲಿ ಭಾಷಣ ಮಾಡಿ, ಪ್ರಿನ್ಸಿಪಾಲರು ವಿದ್ಯಾರ್ಥಿಗಳಮೇಲೆ ಕ್ರಮ ಜರುಗಿಸಬೇಕೆಂದಿದ್ದ ಶಿಸ್ತುಪಾಲಕ ರೆಂಬುದಕ್ಕೂ ಗಮನ ಕೊಡದೆ ದಿಟ್ಟತನದಿಂದ ವಿಷಯವನ್ನು ಮಂಡಿಸಿದರಂತೆ. ಅವರು ಸೂಚಿಸಿದ ಮುಖ್ಯ ಸಂಗತಿಗಳಿವು: "ಶ್ರೀಮತಿಯವರು ಬಹಳ ಪ್ರಖ್ಯಾತರು. ಅವರ ಕವನಗಳು ಜಗತ್ಪ್ರಸಿದ್ಧ. ಅವರ ಕವನಗಳ ವಾಚನವನ್ನು ಕೇಳಬೇಕೆಂಬ ಉತ್ಸಾಹಭರದಲ್ಲಿ ವಿದ್ಯಾರ್ಥಿಗಳು ಕಾಲೇಜಿನಿಂದ ಓಡಿಹೋದರು. ಬಹುಜನರು ಹೊರಟುಹೋಗಿದ್ದ ಕಾರಣ, ಆ ಬಳಿಕ ತರಗತಿಗಳ ಕೊಟಡಿಗಳಿಗೆ ಹೋದ ಇತರ ಕೆಲವರೂ, ಹೊರಟುಹೋದರು. ನಾವುಗಳು ತರಗತಿಗಳ ಕೊಠಡಿಗಳಿಗೆ ಹೋದಾಗ, ಯಾರೂ ಇರಲಿಲ್ಲ. ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಭಿಮಾನ ಮೂಡಬೇಕೆಂದೂ,

ವೃದ್ಧಿಯಾಗಬೇಕೆಂದೂ ಬೋಧಿಸುವ ನಾವೇ ಅವರು ತೋರಿದ ಸಾಹಿತ್ಯ ಪ್ರೇಮಕ್ಕಾಗಿ ಅವರ ಮೇಲೆ ಕ್ರಮ ಜರುಗಿಸುವುದು ಸರಿಯೆ? ಅವರು ಪೂರ್ವ ಭಾವಿಯಾಗಿ ಅನುಮತಿ ಪಡೆಯದೆ ಕಾಲೇಜನ್ನು ಬಿಟ್ಟುಹೋದುದು ತಪ್ಪೆಂಬುದನ್ನು ತಿಳಿಸಿ, ಮುಂದೆ ಹಾಗೆ ಮಾಡಬಾರದೆಂದು ಅವರವರ ತರಗತಿಯಲ್ಲಿ ಎಚ್ಚರಿಕೆ ಹೇಳಿದರೆ ಸಾಕು. ಇಷ್ಟಕ್ಕೂ. ಇವೊತ್ತು ಎಲ್ಲರೂ ತರಗತಿಗಳಿಗೆ ಬಂದಿದ್ದಾರೆ. ವಿಧೇಯತೆಯಿಂದ ವರ್ತಿಸಿ ಕಾಲೇಜಿನಿಂದ ಹೋಗಿದ್ದಾರೆ." ಅವರ ಸಲಹೆಯೇ ಉಳಿದವರಿಗೆ ಒಪ್ಪಿಗೆಯಾಯಿತಂತೆ. ರಹಸ್ಯ ಸಭೆಯಲ್ಲಿ ನಡೆದ ಚರ್ಚೆಯ ಸಂಗತಿ ಗಳು ಹೇಗೋ ಬೇಗ ಹೊರಬಿದ್ದವು. ವಿದ್ಯಾರ್ಥಿಗಳಿಗೆ ಅತ್ಯಾನಂದವಾಯಿತು; ತಮ್ಮ ಪರವಾಗಿ ವಾದಿಸಿದ ಮಹನೀಯರಲ್ಲಿ ಪ್ರೀತಿಗೌರವಗಳು ವೃದ್ಧಿ ಹೊಂದಿದುವು.

ಕನ್ನಡದಮೇಲಿನ ಉಜ್ಜ್ವಲವಾದ ಅಭಿಮಾನದಿಂದ ನಮ್ಮ ಗುರುವರ್ಯರು ೧೯೧೧ನೆಯ ಸಂವತ್ಸರದಲ್ಲಿ ಸೆಂಟ್ರಲ್ ಕಾಲೇಜಿನ "ಕರ್ಣಾಟಕ ಸಂಘ"ವನ್ನು ಸ್ಥಾಪಿಸಿದರು. ಆಗ್ಗೆ ಮೈಸೂರು ಸಂಸ್ಥಾನದಲ್ಲಿ ಆ ಬಗೆಯ ಮತ್ತಾವ ಸಂಘವೂ ಇರಲಿಲ್ಲ. ಅಂತಹ ಸಮಯದಲ್ಲಿ ಸಂಘವನ್ನು ಸ್ಥಾಪಿಸಿದ ದೂರದೃಷ್ಟಿಯನ್ನು ಎಷ್ಟು ಕೊಂಡಾಡಿದರೂ ಸಾಲದು. ಆಗ್ಗೆ ಕನ್ನಡ ಭಾಷೆಯ ಮತ್ತು ಕನ್ನಡ ಸಾಹಿತ್ಯದ ವಿಚಾರದಲ್ಲಿ ಕನ್ನಡಿಗರಲ್ಲೇ ಬಹುಭಾಗದವರಿಗಿದ್ದ ತಾತ್ಸಾರದ ದೃಷ್ಟಿಯನ್ನು ವಿಚಾರಮಾಡಿ ನೋಡಿದರೆ, ಸಂಘಸ್ಥಾಪನೆಯನ್ನು ದೊಡ್ಡ ಸಾಹಸ ವೆನ್ನಬೇಕು. ವಿಶ್ವವಿದ್ಯಾನಿಲಯದ ಪದವೀಧರರಾಗಿ ದೊಡ್ಡ ಹುದ್ದೆಯಲ್ಲಿದ್ದ ಕನ್ನಡಿಗರೊಬ್ಬರು "ಕನ್ನಡವೂ ಒಂದು ಭಾಷೆಯೆ?" ಎಂದು ಪ್ರಶ್ನಿಸಿ ತಿರಸ್ಕಾರ ವನ್ನು ಸೂಚಿಸಿದ್ದ ಕಾಲವದು. ಆಗ್ಗೆ, ಇಂಗ್ಲಿಷ್ ಭಾಷೆಯನ್ನು ಬಲ್ಲವರಿಗೆ ತಾವು ಕನ್ನಡದಲ್ಲಿ ಮಾತನಾಡುವುದೇ ಅಪಮಾನವೆಂಬ ಭಾವನೆ, ಕನ್ನಡದಲ್ಲಿ ಗ್ರಂಥ ಗಳನ್ನು ಬರೆದ ಪೂಜ್ಯರಾದ ಚನ್ನಪಟ್ಟಣದ ವಾಸುದೇವಯ್ಯನವರೇ ಮುಂತಾದವ ರಲ್ಲಿ ಏನೋ ಒಂದು ಬಗೆಯ ಮರುಕ ಮತ್ತು ಕನ್ನಡ ಭಾಷೆಯಲ್ಲಿ ಮಾತ ನಾಡುವುದು ಹೆಂಗಸರಿಗೂ ಮಕ್ಕಳಿಗೂ ಉಚಿತವೆಂಬ ನಂಬಿಕೆ; ಯತ್ನವಿಲ್ಲದೆ ತಾವು ಅವರೊಡನೆ ಕನ್ನಡದಲ್ಲಿ ಮಾತನಾಡಬೇಕಾಗಿದ್ದುದಕ್ಕಾಗಿ ಮನಸ್ಸಿಗೆ ಹೀನಾಯ ಮತ್ತು ಮುಜಗರ. ೧೯೧೫ನೆಯ ಸಂವತ್ಸರದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪಿತವಾಗಿದ್ದಿತಾದರೂ, ಹೆಚ್ಚು ಜನರಿಗೆ ಅದರ ಕಾರ್ಯಕಲಾಪ ಗಳಲ್ಲಿ ಆಸಕ್ತಿಯಿರಲಿಲ್ಲ. ಕನ್ನಡದ ಏಳಿಗೆಗಾಗಿ ಶ್ರಮಿಸುವುದರಲ್ಲಿ ಕನ್ನಡಿಗರಿಗೇ ಆದರವಿಲ್ಲದ ಸನ್ನಿವೇಶ. ಆಗ್ಗೆ ಮೈಸೂರು ಸಂಸ್ಥಾನದ ದಿವಾನರಾಗಿದ್ದ ಶ್ರೀ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಕನ್ನಡದಮೇಲಿನ ಅಭಿಮಾನದಿಂದ ಸೂಚಿಸಿದಂತೆ ಪ್ರಾಧ್ಯಾಪಕ ಬೆಳ್ಳಾವೆ ವೆಂಕಟನಾರಾಯಣಪ್ಪನವರಿಂದ ಭೌತ ವಿಜ್ಞಾನವನ್ನು ಕುರಿತ ಭಾಷಣವೊಂದು ಕನ್ನಡದಲ್ಲಿ ನಡೆಯಬೇಕೆಂದೂ,

ವಿದ್ಯಾಭ್ಯಾಸಖಾತೆಯ ಮುಖ್ಯಾಧಿಕಾರಿಗಳಾಗಿದ್ದ ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಶ್ರೀ ಎಂ. ಶಾಮರಾಯರ ಅಧ್ಯಕ್ಷತೆಯಲ್ಲಿ ಅದು ನಡೆಯಬೇಕೆಂದೂ ಗೊತ್ತಾಯಿತು. ಮೈಸೂರಿನ ರಂಗಾಚಾರ್ಲು ಸ್ಮಾರಕಭವನದಲ್ಲಿ ಆ ಭಾಷಣವನ್ನು ಕನ್ನಡದಲ್ಲಿ ಸಂಜೆ ಆರು ಗಂಟೆಗೆ ನಡೆಯಿಸಬೇಕೆಂದು ಗೊತ್ತಾಗಿದ್ದ ದಿನ ಐದೂ ಮುಕ್ಕಾಲು ಗಂಟೆಯವೇಳೆಗೇ ಭಾಷಣಕಾರರೂ, ಅಧ್ಯಕ್ಷತೆ ವಹಿಸಬೇಕಾಗಿದ್ದವರೂ ಅಲ್ಲಿಗೆ ಹೋದರು. ಭಾಷಣವನ್ನು ಕೇಳಲು ಬಂದಿದ್ದವರು ಶ್ರೀ ಎಂ. ವೆಂಕಟಕೃಷ್ಣಯ್ಯನವರು ಮತ್ತು ಇತರ ಏಳುಜನ ಶ್ರೋತೃಗಳು ಮಾತ್ರವೇ. ಆರೂವರೆ ಗಂಟೆಯವರೆಗೂ ಕಾದುನೋಡಿದರೂ ಯಾವುದೊಂದು ನರಪಿಳ್ಳೆಯೂ ಬರಲಿಲ್ಲ. ನಿರುತ್ಸಾಹದಿಂದ ಭಾಷಣ ಸಮಾರಂಭವನ್ನು ಮುಗಿಸಿ ಅಲ್ಲಿಂದ ಎಲ್ಲರೂ ತೆರಳಿದರು. ಇದು ಸಾಹಿತ್ಯ ಪರಿಷತ್ತು ಸ್ಥಾಪಿತವಾದ ಸ್ವಲ್ಪಕಾಲದ ತರುವಾಯ ನಡೆದ ಘಟನೆ. ಈ ಬಗೆಯದು, ಆಗ್ಗೆ ಕನ್ನಡಿಗರಿಂದ ಕನ್ನಡ ಭಾಷೆಗೆ ಸಮಾಜದಲ್ಲಿ ಲಭಿಸುತ್ತಿದ್ದ ಪ್ರೋತ್ಸಾಹ!

ಅಂತಹ ಸನ್ನಿವೇಶದಲ್ಲಿ ನಮ್ಮ ಗುರುವರ್ಯರು ಅನಿರ್ವಚನೀಯವಾದ ಧೀರತೆಯಿಂದಲೂ, ಅಸಾಮಾನ್ಯವಾದ ಭಾಷಾಭಿಮಾನದಿಂದಲೂ ಅಸೀಮವಾದ ಉತ್ಸಾಹದಿಂದಲೂ ಸಂಘವನ್ನು ಸ್ಥಾಪಿಸುವ ಸಂಕಲ್ಪಮಾಡಿದರು ಮತ್ತು ಸಂಘದ ಅಧ್ಯಕ್ಷರಾಗಿರಲು ಪ್ರಾಧ್ಯಾಪಕ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಕೃಪೆಮಾಡಿ ಸಮ್ಮತಿಸುವಂತೆ ಅವರನ್ನು ಒಪ್ಪಿಸಿದರು. ಸಂಘದ ಕಾರ್ಯದರ್ಶಿಗಳು ವಿದ್ಯಾರ್ಥಿಗಳೇ ಆಗಿರಬೇಕೆಂದು ನಿರ್ಣಯವಾಗಿ ಸಂಘವು ವಿದ್ಯಾರ್ಥಿವೃಂದಕ್ಕೆ ಸೇರಿದ ಸಂಸ್ಥೆಯೆಂಬ ಭಾವನೆಯುಂಟಾಯಿತು. ವಿಧಿವತ್ತಾಗಿ ಸಂಘಸ್ಥಾಪನೆಯಾದ ಶುಭದಿನ ಪ್ರಾಕ್ತನವಿಮರ್ಶವಿಚಕ್ಷಣ ರಾವ್‌ಬಹದ್ದೂರ್ ಶ್ರೀ ಆರ್. ನರಸಿಂಹಾಚಾರ್ಯರಿಂದ ಸಮಾರಂಭ ಭಾಷಣವಾಯಿತು. ಅಂದಿನ ಉತ್ಸಾಹವನ್ನೂ ಸಡಗರವನ್ನೂ ವರ್ಣಿಸಲಳವಲ್ಲ. ಪೂಜ್ಯರಾದ ನರಸಿಂಹಾಚಾರ್ಯರಿಗೂ ನನ್ನ ಪೂಜ್ಯಗುರುಗಳಾದ ಪ್ರಾಧ್ಯಾಪಕ ವೆಂಕಟನಾರಾಯಣಪ್ಪನವರು ಮತ್ತು ಶ್ರೀ ಶಾಸ್ತ್ರಿಯವರಿಗೂ, ವಿದ್ಯಾರ್ಥಿವೃಂದಕ್ಕೂ ಉಂಟಾದ ಸಂತೋಷಕ್ಕೆ ಇತಿಮಿತಿಯೇ ಇರಲಿಲ್ಲ. ಗುರುಗಳು ಸಂಘದ ಆಶ್ರಯದಲ್ಲಿ ವಿದ್ಯಾರ್ಥಿಗಳೂ ಭಾಷಣ ಮಾಡಬೇಕೆಂದು ಉದಾರಭಾವನೆಯಿಂದ ತೀರ್ಮಾನಿಸಿದರು; ಅವರೇ ಸಂಘದ ಕಾರ್ಯಾಧ್ಯಕ್ಷರು; ಸಂಘದ ಆಧಾರಸ್ತಂಭ. ನಾನು ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿದ ಅವಧಿಯಲ್ಲಿ ನನಗೆ ಲಭಿಸಿದ ನನ್ನ ಜೀವನದ ಮತ್ತೊಂದು ಸುಯೋಗವೆಂದರೆ, ಅದು ಶ್ರೀ ಎಸ್. ವಿ. ರಂಗಣ್ಣನವರ ಸ್ನೇಹ. ಇಂದಿಗೂ ನಮ್ಮಿಬ್ಬರಿಗೂ ಗಾಢಸ್ನೇಹ. ಅದು ನನಗೆ ಅಮೂಲ್ಯ. ಸಂಘಸ್ಥಾಪನೆಯ ಸಮಾರಂಭವಾದ ಬಳಿಕ ಕೆಲವು ದಿನಗಳು ಕಳೆದಮೇಲೆ, ನನ್ನ ಭಾಷಣವನ್ನೂ ಅನಂತರ ಶ್ರೀ ಎಸ್. ವಿ. ರಂಗಣ್ಣನವರ ಭಾಷಣವನ್ನೂ ಏರ್ಪಡಿಸಿದರು, ಗುರುಗಳು. ತಮ್ಮ

ಪ್ರೀತಿಯ ಶಿಷ್ಯರಾಗಿದ್ದ ನಮ್ಮಿಬ್ಬರ ಭಾಷಣಗಳನ್ನೂ ಮೆಚ್ಚಿ ಮನವಾರೆ ಹರಸಿದರು. ಆ ತರುವಾಯ ಸ್ವಲ್ಪಕಾಲಾನಂತರ, ಗುರುಗಳು ಸಂಘದ ಆಶ್ರಯದಲ್ಲಿ "ಪ್ರಬುದ್ಧ ಕರ್ಣಾಟಕ" ಪತ್ರಿಕೆಯನ್ನು ಪ್ರಕಟಿಸುವ ಮಹತ್ತರ ಕಾರ್ಯವನ್ನಾರಂಭಿಸಿದರು. ಕನ್ನಡದ ಪುರೋಭಿವೃದ್ಧಿ ಸಾಧನೆಯಲ್ಲಿ ಅವರಿಗಿದ್ದ ಅಪಾರವಾದ ಆಸಕ್ತಿಯನ್ನು ಎಷ್ಟು ಕೊಂಡಾಡಿದರೂ ಸಾಲದು. ಶ್ರೀ ಎಸ್. ವಿ. ರಂಗಣ್ಣನವರೂ, ನಾನೂ, ಮಾಡಿದ್ದ ಭಾಷಣಗಳು ಆ ಪತ್ರಿಕೆಯಲ್ಲಿ ಪ್ರಕಟವಾಗಿ ಜನಪ್ರಿಯವಾದುದನ್ನು ಕಂಡು ನಮ್ಮಿಬ್ಬರಿಗಿಂತಲೂ ನಮ್ಮ ಗುರುಗಳಿಗೇ ಹೆಚ್ಚಿನ ಸಂತೋಷವಾಯಿತು; ಅವರದೆಷ್ಟುಮಟ್ಟಿನ ಶಿಷ್ಯಪ್ರಿಯತೆ, ಅವರದೆಷ್ಟುಮಟ್ಟಿನ ಉದಾರ ಸ್ವಭಾವ— ಎಂಬ ಸಂಗತಿಗಳನ್ನು ಸೂಚಿಸುವುದಕ್ಕಾಗಿ ಇದನ್ನು ಇಲ್ಲಿ ಪ್ರಸ್ತಾವಿಸಿದ್ದೇನೆ. ಪ್ರಾಮಾಣಿಕತೆ, ಕಲಾಪ್ರೇಮ, ಅಚ್ಚುಕಟ್ಟು, ಶಿಸ್ತು—ಇವು ರಕ್ತಗತವಾಗಿ ಅವರಲ್ಲಿದ್ದ ಅಮೋಘ ಗುಣಗಳಲ್ಲಿ ನಾಲ್ಕು. ಪತ್ರಿಕೆಯ ಸಂಪಾದಕೀಯ ಲೇಖನ, ಪತ್ರಿಕೆಯನ್ನು ನೋಡಿದೊಡನೆಯೇ ಆಹ್ಲಾದಗೊಳಿಸುತ್ತಿದ್ದ ಕನ್ನಡ ಸೂರ್ಯೋದಯದ ಸಂಕೇತವಾದ ಮುಖಚಿತ್ರ, ಪತ್ರಿಕೆಯ ಸೊಗಸಾದ ಮುದ್ರಣ ಮತ್ತು ಕಾಲಕ್ಕೆ ಸರಿಯಾಗಿ ಸಂಚಿಕೆಗಳ ಪ್ರಕಟಣೆ—ಇವು ನಾಲ್ಕೂ ಅನುಕ್ರಮವಾಗಿ ಆ ನಾಲ್ಕು ಗುಣಗಳಿಗೆ ನಿದರ್ಶನಗಳು. ಪತ್ರಿಕೆಯನ್ನು ನೋಡಿ ಹರ್ಷಿಸಿದವರು ಹೆಚ್ಚಾಗಿದ್ದರೂ, ಕನ್ನಡದ ಪತ್ರಿಕೆಗೇಕೆ ಇಷ್ಟು ಅಲಂಕಾರವೆಂಬ ಭಾವನೆಯವರೂ ಕೆಲವರಿದ್ದರು. ಅವರಲ್ಲೊಬ್ಬರು "ಪತ್ರಿಕೆಗೆ ಅರಳೀಪೇಟೆ ರೇಷ್ಮೆಸೀರೆ ಉಡಿಸಿದ್ದೀರಿ" ಎಂದು ಅವರೊಡನೆ ಕುಹಕದ ಮಾತನ್ನಾಡಿದಾಗ, "ದೇವರ ದಯೆಯಿದ್ದರೆ ಕಾಶಿಯ ಪೀತಾಂಬರವನ್ನೇ ಉಡಿಸುತ್ತೇನೆ" ಎಂಬ ದಿಟ್ಟತನದ ಉತ್ತರವನ್ನು ಕೇಳಬೇಕಾಯಿತು. ನಮ್ಮ ಸಂಘದ ಸ್ಥಾಪನೆಯಿಂದ ಮತ್ತು ಪತ್ರಿಕೆಯ ಪ್ರಕಟಣೆಯಿಂದ ವಿದ್ಯಾರ್ಥಿವೃಂದಕ್ಕೆ ಉಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ನಮ್ಮ ಗುರುಗಳಿಗೆ ತಮ್ಮ ಶಿಷ್ಯರಲ್ಲಿ ಯಾರನ್ನು ಕಂಡರೂ ಪ್ರೀತಿವಾತ್ಸಲ್ಯಗಳು ಅಮಿತವಾಗಿದ್ದುವು. ಅದರ ಪರಿಣಾಮವಾಗಿ ಶಿಷ್ಯರಿಗೆ ಅವರ ಮೇಲಿನ ಪ್ರೀತಿ ಭಕ್ತಿಗಳು ವೃದ್ಧಿಯಾದುವು. ಮುಂದೆ, ಡಾಕ್ಟರ್ ಕೆ. ವಿ. ಪುಟ್ಟಪ್ಪನವರ ಅಧ್ಯಕ್ಷತೆಯಲ್ಲಿ ತರುಣ ಕವಿ ಸಮ್ಮೇಳನವನ್ನು ನಡಸಿದರು. ಅವರ ಪ್ರಿಯ ಮಿತ್ರರಾದ ಡಾಕ್ಟರ್ ಡಿ. ವಿ. ಗುಂಡಪ್ಪನವರು, ಡಾಕ್ಟರ್ ಮಾಸ್ತಿ ವೆಂಕಟೇಶ ಐಯಂಗಾರ್ಯರು, ದಿವಂಗತರಾದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರು ಮತ್ತು ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಯವರು ಮುಂತಾದ ಮಹನೀಯರ ನೆರವಿನಿಂದಲೂ, ಶಿಷ್ಯ ಪೀಳಿಗೆಗಳ ಸೇವೆಯಿಂದಲೂ, ಅವರ ಕ್ರಿಯಾಶಕ್ತಿಯಿಂದಲೂ, ಸಂಘದ ಅಧ್ಯಕ್ಷರಾಗಿದ್ದ ಪ್ರಾಧ್ಯಾಪಕ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಮತ್ತು ಪ್ರಾಧ್ಯಾಪಕ ಬಿ. ಎಂ. ಶ್ರೀಕಂಠಯ್ಯನವರು ಮುಂತಾದ ಹಿರಿಯರ ಸಲಹೆಗಳಿಂದಲೂ, ಸಂಘವೂ ಪತ್ರಿಕೆಯೂ ದಿನದಿನವೂ ವೃದ್ಧಿಯಾಗಿ ಕನ್ನಡಕ್ಕೆ

ಅಮೂಲ್ಯ ಸೇವೆಯನ್ನು ಸಲ್ಲಿಸಿದುವು; ಈಗಲೂ ಅವುಗಳಿಂದ ಅಮೂಲ್ಯ ಸೇವೆಯು ಸಲ್ಲುತ್ತಿದೆ.

ಗುರುವರ್ಯ ಡಾಕ್ಟರ್ ಎ. ಆರ್. ಕೃಷ್ಣಶಾಸ್ತ್ರಿಯವರಿಗೆ ಕನ್ನಡ, ಸಂಸ್ಕೃತ, ಇಂಗ್ಲಿಷು, ಬಂಗಾಳಿ ಮುಂತಾದ ಭಾಷೆಗಳಲ್ಲಿದ್ದ ಅಪಾರ ವಿದ್ವತ್ತು, ಅದರ ಪರಿಣಾಮವಾಗಿ ನಾನಾ ರೀತಿಗಳಲ್ಲಿ ಕನ್ನಡ ಭಾಷೆಯ ಉನ್ನತಿಗೆ ಸಾಧಕವಾಗುವಂತೆ ಸಮರ್ಪಿತವಾದ ಸೇವೆ, ಅವರ ಸಾತ್ವಿಕ ಜೀವನ, ಅವರು ಕನ್ನಡದ ಪುರೋಭಿವೃದ್ಧಿಗಾಗಿ ತಳೆದಿದ್ದ ತ್ರಿಕರಣ ಶುದ್ಧವಾದ ದೀಕ್ಷೆ, ಅವರಿಂದ ರಚಿತವಾಗಿರುವ ಭಾಸಕವಿ, ಸಂಸ್ಕೃತ ನಾಟಕ, ವಚನಭಾರತ, ಕಥಾಮೃತ ಮುಂತಾದ ಗ್ರಂಥ ರತ್ನಗಳು ಉತ್ತಮ ಗದ್ಯ ಲೇಖನಕ್ಕೆ ಮಾದರಿಗಳಾಗಿರುವ ಸಂಗತಿ, ಬಂಕಿಂಚಂದ್ರರ ಕೃತಿಗಳ ವಿಚಾರವಾಗಿ ಅವರು ರಚಿಸಿದ ಗ್ರಂಥಕ್ಕೆ ಭಾರತದ ಸಾಹಿತ್ಯ ಆಕಾಡಮಿ ಪ್ರಶಸ್ತಿಯು ಲಭಿಸಿದ ವಿಷಯ, ಮೈಸೂರು ವಿಶ್ವವಿದ್ಯಾನಿಲಯದಿಂದ ಆ ಮೊದಲೇ ಅವರಿಗೆ "ಡಾಕ್ಟರೇಟ್" ಪ್ರಶಸ್ತಿ ಲಭಿಸಿ ಅವರು ಸನ್ಮಾನಿತರಾಗಿದ್ದ ಸಂಗತಿ ಮುಂತಾದವುಗಳನ್ನು ಎಲ್ಲರೂ ಬಲ್ಲರು. ಯಾವ ಕಾಲದವರಾದರೂ, ಹೆಮ್ಮೆ ಪಡುವಂತಿದೆ, ಅವರ ಕ್ರಿಯಾಸಿದ್ಧಿ. ಶ್ರೇಷ್ಠ ಗದ್ಯಗ್ರಂಥಗಳನ್ನು ಬರೆಯಲಿಚ್ಛಿಸುವವರಿಗೆ ಸ್ಫೂರ್ತಿದಾಯಕವಾದ ನಿಧಿಗಳಂತಿವೆ ಅವರ ಗ್ರಂಥಗಳು. "ಗಮನವಿಟ್ಟು ಓದಬೇಕು, ಕಣ್ಣಿಟ್ಟು ನೋಡಬೇಕು, ಲಕ್ಷ್ಯವಿಟ್ಟು ಬರೆಯಬೇಕು" ಎಂಬಿವು ಲೇಖಕರಿಗೆ ಅವರು ಕರುಣಿಸಿರುವ ಅಮೂಲ್ಯವಾದ ಮೂರು ಸೂತ್ರ ಸಂದೇಶಗಳು. ದಿವಂಗತರಾದ ಅರ್ಥಶಾಸ್ತ್ರವಿಶಾರದ ಡಾಕ್ಟರ್ ಆರ್. ಶ್ಯಾಮಶಾಸ್ತ್ರಿಯವರ ವಿಚಾರವಾಗಿ "ಉದ್ಯೋಗದಿಂದ ವಿಶ್ರಾಂತಿ ಪಡೆದ ಬಳಿಕವೂ ಶಾಸ್ತ್ರನಿಷ್ಠೆಯಿಂದ ಕೆಲಸಮಾಡುತ್ತಿದ್ದ ನೋಟವೂ ಅನುಭವವೂ ಯಾರಿಗೂ ಸ್ಫೂರ್ತಿಯನ್ನು ಕೊಡುವಂತಹವೇ!" ಎಂದು ಅವರು ಬರೆದಿದ್ದರು; ಆ ಮಾತುಗಳನ್ನು ಅವರಿಗೇ ಅನ್ವಯಿಸಬಹುದಾಗಿದೆ. ಹೈದರಾಬಾದಿನಲ್ಲಿ ೧೯೪೧ನೆಯ ಸಂವತ್ಸರದಲ್ಲಿ ನಡೆದ ಕನ್ನಡ ಸಾಹಿತ್ಯಸಮ್ಮೇಳನದ ಅಧ್ಯಕ್ಷರಾಗಿ ಅವರು ಮಾಡಿದ ಭಾಷಣವನ್ನು ಕನ್ನಡ ಭಾಷಾಭಿಮಾನದ ಅಮೃತಝರಿಯೆನ್ನಬಹುದು. ಅವರು ಕನ್ನಡ ಭಾಷಾಭಿಮಾನದಿಂದ ಹಲವು ಭಾಷಣಗಳಲ್ಲಿ ಆಡಿದ ಮಾತುಗಳು, ನಾನಾ ಲೇಖನಗಳಲ್ಲಿ ಬರೆದಿರುವ ವಾಕ್ಯಗಳು ಭಾವುಕರ ಹೃದಯಗಳಲ್ಲಿ ಭಾಷಾಭಿಮಾನವನ್ನು ಉಕ್ಕಿಸುತ್ತವೆ; ಅವರ "ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯಾದೇಶದ ದಕ್ಷಿಣಭಾಗದಲ್ಲಿ ಒಂದು ಅಂಗೈಯಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ನೀವು ಅದನ್ನು ಅಲಕ್ಷ್ಯ ಮಾಡಿದರೆ, ಮಿಕ್ಕ ಯಾವ ಜನರೂ ಅದನ್ನು ಎತ್ತಿ ಹಿಡಿಯಲಾರರು. ಅದು ಹೋದರೆ ಹೋಗಲಿ ಎನ್ನುವ ಹಾಗಿದ್ದರೆ ಈ ಕಡೆ ಬಂಗಾಳ ಕೊಲ್ಲಿಯಿದೆ, ಆ ಕಡೆ ಅರಬ್ಬಿ ಸಮುದ್ರವಿದೆ, ಗುಡಿಸಿ ಹಾಕಿಬಿಡಿ. ಇತರ ಭಾಷೆಗಳು ಒತ್ತಿಕೊಂಡು ಬರಲಿ, ಆಕ್ರಮಿಸಿಕೊಳ್ಳಲಿ"

ಎಂಬ ಅಭಿಮಾನದ ಮಾತುಗಳು ಅವರ ಗುಂಡಿಗೆಯ ಬಿಸಿರಕ್ತದಿಂದಲೇ ಬರೆದಂತೆ ತೋರುವ ಅವರ ನೊಂದ ನುಡಿಗಳು. "ಕನ್ನಡಿಗರಿಗೆ ಕನ್ನಡ ದೇಶದಲ್ಲಿ ಹಿರಿಯ ಆಸ್ತಿಯಾಗಿ ಉಳಿದಿರುವುದು ಅವರ ಭಾಷೆ. ಅದನ್ನು ಉಳಿಸಿಕೊಳ್ಳಿರಿ" ಎಂಬುದು ಅವರ ಅಮರ ಸಂದೇಶ. ಹಿಂದಿ ಭಾಷೆಯ ಆಕ್ರಮಣ ಪ್ರವೃತ್ತಿಯನ್ನು ಖಂಡಿಸಿ, ೧೯೪೮ರ ಸಮ್ಮೇಳನಾಧ್ಯಕ್ಷ ಭಾಷಣದಲ್ಲಿ "ಕನ್ನಡಿಗರೇ, ನೀವು ಮಾತ್ರ ನಿಮ್ಮ ಕನ್ನಡದ ಅಭಿಮಾನವನ್ನು ಕಾಪಾಡಿಕೊಳ್ಳಿ. ಮೋಹಕ್ಕೆ ಸಿಲುಕಬೇಡಿ. ನಿಮ್ಮ ಕನ್ನಡದ ಅಭಿಮಾನವೆಂಬ ಕಾಮಧೇನು ಎಚ್ಚರವಾಗಿದ್ದರೆ, ಬ್ರಹ್ಮದಂಡ ಮುಂದೆ ಇದ್ದರೆ, ನಮ್ಮನ್ನು ಯಾವ ವಿಶ್ವಾಮಿತ್ರರ ಪಡೆಯೂ ಏನೂ ಮಾಡಲಾರದು" ಎಂದು ಎಚ್ಚರಿಕೆ ಹೇಳಿದ್ದರು. ಇಂಗ್ಲಿಷ್ ಭಾಷೆಯ ವಿಚಾರವಾಗಿ ಅವರು, "ಇಂಗ್ಲಿಷಿನ ಮೂಲಕ ಸಾಕ್ಷಾತ್ತಾಗಿಯೋ ಪರಂಪರೆಯಿಂದಲೋ ಗಳಿಸುವುದು ಸಾಧ್ಯವಾಗಿರುವಾಗ, ಅದಕ್ಕೆ ಅವಕಾಶವಿರುವಾಗ ಗಳಿಸೋಣ. ಅಲ್ಲದೆ ನಮ್ಮನ್ನು ನಾವು ತಿಳಿದುಕೊಳ್ಳುವುದಕ್ಕೆ ಸಹಾಯ ಮಾಡಿದ್ದು ಇಂಗ್ಲಿಷು. ನಮ್ಮಲ್ಲಿ ನವ ಚೈತನ್ಯವನ್ನುಂಟುಮಾಡಿದ್ದು ಇಂಗ್ಲಿಷು. ಸ್ವಹಸ್ತ ಪರಹಸ್ತ ಗಳಿಂದ ನಮ್ಮ ಕಣಜವನ್ನು ತುಂಬುವ ಸಂಪತ್ತು ಉಳ್ಳದ್ದು ಇಂಗ್ಲಿಷು. ಅದರ ಸಹಾಯದಿಂದ ಪಾಶ್ಚಾತ್ಯ ಪ್ರಪಂಚದೊಡನೆ, ವಿಶ್ವದೊಡನೆ ವ್ಯವಹಾರ ನಡೆಸ ಬಹುದು. ಆದ್ದರಿಂದ ಅದನ್ನು ಸದ್ಯಕ್ಕಾದರೂ ತಿರಸ್ಕರಿಸುವುದು ನನಗೆ ಒಪ್ಪಿಗೆ ಯಾದದ್ದಲ್ಲ" ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

ವಿದ್ಯಾರ್ಥಿಯಾಗಿದ್ದಾಗಿನಿಂದ ಸುಮಾರು ಐವತ್ತು ವರ್ಷಗಳ ಅವಧಿಯ ವರೆಗೆ, ಅವರೊಂದಿಗಿನ ನನ್ನ ಸಂಬಂಧದ ಸವಿನೆನಪುಗಳು ಇನ್ನೂ ಬಹಳವಾಗಿವೆ. ಅವರು ಏಕ ಪ್ರಕಾರವಾಗಿ ನನ್ನಲ್ಲಿ ಕೃಪೆ ತೋರಿದ್ದರು. ನನ್ನ ಗ್ರಂಥಗಳ ಮತ್ತು ನನ್ನ ಭಾಷಣಗಳ ವಿಚಾರವಾಗಿ ಮೆಚ್ಚಿಕೆಯನ್ನು ಸೂಚಿಸಿ ಹರಸಿದ್ದರು. ನಾನು ಬರೆದ ನಾಟಕಗಳ ರಂಗಪ್ರದರ್ಶನಗಳನ್ನು ನೋಡಿ ಹರ್ಷಿಸಿದ್ದರು. ವಿದ್ಯಾ ಶಾಖೆಯ, ಮೈಸೂರು ವಿಶ್ವವಿದ್ಯಾನಿಲಯದ ಅನೇಕ ಸಮಿತಿಗಳಲ್ಲಿ, ಕನ್ನಡ ಸಾಹಿತ್ಯಪರಿಷತ್ತಿನ ಸಂಬಂಧವಾಗಿ ಮತ್ತು ಇಂಗ್ಲಿಷ್–ಕನ್ನಡ ನಿಘಂಟು ಸಂಪಾದಕ ಮಂಡಲಿಯಲ್ಲಿ ಅವರೊಡನೆ ಸದಸ್ಯನಾಗಿ ಕೆಲಸಮಾಡಿ ಹರ್ಷಿಸಿದ್ದೇನೆ. ಅವರ ವಾತ್ಸಲ್ಯದ ಸುಯೋಗ ಸಂತೋಷಗಳನ್ನನುಭವಿಸಿ ಭಕ್ತಿ ತೋರಿದ್ದೇನೆ. ಅವರದು ಪರಿಶುದ್ಧವಾದ ಸಾತ್ವಿಕ ಜೀವನ, ಉದ್ದಾಮ ಪಾಂಡಿತ್ಯ, ತ್ರಿಕರಣ ಶುದ್ಧವಾದ ನಡೆನುಡಿ, ಅನೂನ ಪ್ರತಿಭೆ, ನಾಡು ನುಡಿಗಳ ಮೇಲಿನ ಗಾಢ ಭಕ್ತಿ, ಸರಳ ಹೃದಯದ ಶಿಷ್ಯಪ್ರಿಯತೆ ಮತ್ತು ವರ್ಣಿಸಲಳವಲ್ಲದಷ್ಟು ಮಟ್ಟಿನ ಸದ್ಗುಣ ಸಂಪತ್ತು. ಅವರ ಪವಿತ್ರ ಜೀವನವೂ, ಅವರು ರಚಿಸಿರುವ ಉದ್ದಾಮ ಗ್ರಂಥ ಗಳೂ, ಅವರು ನೀಡಿರುವ ಸ್ಫೂರ್ತಿದಾಯಕ ಸಂದೇಶವೂ ನಾಡು ನುಡಿಗಳ ಭಕ್ತರಿಗೆ ಚಿರಕಾಲ ಮಾರ್ಗದರ್ಶಕವಾಗಿರುತ್ತವೆ. ಅವರ ದೇಹವು ಕಣ್ಮರೆ

ಯಾಗಿದ್ದರೂ, ಅವರ ಶ್ರೀಮೂರ್ತಿಯು ಅವರ ಶಿಷ್ಯರ ಹೃದಯದಲ್ಲಿ ವಿರಾಜಿಸುತ್ತಿರುತ್ತದೆ. ಅವರನ್ನು ನೆನೆಯುವುದೇ ಒಂದು ಪುಣ್ಯ; ಅವರನ್ನು ನೆನೆದವನು ಧನ್ಯ.



ವಿಹಾರಿಗಳಾಗಿ ಶಾಸ್ತ್ರಿಗಳು



ಮೈಸೂರು ವಿಶ್ವವಿದ್ಯಾನಿಲಯ ಗೌರವ ಡಿ.ಲಿಟ್., ಪ್ರಶಸ್ತಿ ನೀಡಿದಾಗ (೧೯೬೦)

ಹಂಪ. ನಾಗರಾಜಯ್ಯ

# ಕನ್ನಡ ಮತ್ತು ಕೃಷ್ಣಶಾಸ್ತ್ರಿಗಳು

೧

"ಕರ್ನಾಟಕದ ಕಲಾಪ್ರಾಸಾದದ ಮೇಲೆ ನಿಂತಿದ್ದ ಕಲಶಗಳಲ್ಲಿ ದೊಡ್ಡ ದೊಡ್ಡ ಎರಡು ಸುವರ್ಣಕಲಶಗಳು ಬಿದ್ದುಹೋದುವು! ಕಾಲನು ಸರಸ್ವತಿಯ ಕಂಠಾಭರಣದಿಂದ ಎರಡು ಅಮೂಲ್ಯವಾದ ರತ್ನಗಳನ್ನು ಕಳವುಮಾಡಿಬಿಟ್ಟನು" —ಈ ಮಾತುಗಳನ್ನು ಬರೆದವರು ಡಾ. ಎ. ಆರ್. ಕೃಷ್ಣಶಾಸ್ತ್ರಿಗಳವರು. ಅವರು ಹೀಗೆ ಬರೆದದ್ದು ೧೯೩೭ರಲ್ಲಿ, ವೀಣೆ ಶೇಷಣ್ಣನವರು ಹಾಗೂ ನಟನ ಶ್ರೇಷ್ಠ ವರದಾಚಾರ್ಯರು ನಿಧನರಾದ ಸಂದರ್ಭದಲ್ಲಿ. ಆದರೆ ನಲವತ್ತೆರಡು ವರ್ಷಗಳ ತರುವಾಯ ಅವರದೇ ಆದ ಈ ವಾಕ್ಯಗಳನ್ನು ಅವರಿಗೇ ಅನ್ವಯಿಸಿ ಹೇಳಬೇಕಾದ ದುರ್ದೈವ ಇಂದು ಒದಗಿ ಬಂದಿದೆ. ಆಚಾರ್ಯ 'ತೀನಂಶ್ರೀ'ಯವರ ಸಾವಿನಿಂದ ಇನ್ನೂ ಚೇತರಿಸಿಕೊಳ್ಳದಿದ್ದ ಕನ್ನಡಪ್ರಪಂಚಕ್ಕೆ ಎಂಥ ಬರಸಿಡಿಲಿನ ಆಘಾತವಿದು. ಕೇವಲ ಒಂದೂವರೆ ವರ್ಷದ ಅವಧಿಯಲ್ಲಿ ಕನ್ನಡದ ಎರಡು ಕಲ್ಪವೃಕ್ಷಗಳು ಉದುರಿದುವು, ಎರಡು ವಿದ್ವತ್‌ಸೌಧಗಳು ಕುಸಿದುಬಿದ್ದುವು. ಸಹೃದಯ ಶ್ರೇಷ್ಠರೂ ರಸಜ್ಞ ವಿಮರ್ಶಕರೂ ಆದ ತೀನಂಶ್ರೀಯವರು ತೀರಿಹೋದ ಕೇವಲ ಹದಿನೇಳು ತಿಂಗಳಲ್ಲೇ ಕನ್ನಡದ ಕಟ್ಟಾಳುವೂ, ಅಚ್ಚುಕಟ್ಟಾದ ಕನ್ನಡದ ಬರೆಹದಿಂದ ಸಾಹಿತ್ಯದ ಸಿರಿಯನ್ನು ಹೆಚ್ಚಿಸಿದವರೂ ಆದ ಗದ್ಯದ ಆಚಾರ್ಯ ಶಿಲ್ಪಿ ಡಾ. ಎ. ಆರ್. ಕೃ. ಅವರು ೧-೨-೬೮ರಂದು ಮಧ್ಯರಾತ್ರಿಯ ನೀರವತೆಯಲ್ಲಿ ಬಯಲಾಗಿಹೋದರು. ಪ್ರಸಿದ್ಧಿಗೆ ಪ್ರಯತ್ನಪಡದೆ, ಸದ್ದುಗದ್ದಲವಿಲ್ಲದೆ ಏಕಾಂಗಿಯಾಗಿ ದುಡಿದು ಕನ್ನಡದ ಗುಡಿಯನ್ನು ಕಟ್ಟಿ, ಕನ್ನಡಕ್ಕೊಂದು ಕಿರೀಟವಾಗಿದ್ದ ಕೃಷ್ಣಶಾಸ್ತ್ರಿಗಳು ನಿಶ್ಶಬ್ದನಿಶೆಯಲ್ಲಿ ನೆಟ್ಟಗೆ ನಡೆದೇಬಿಟ್ಟರು. ಸರಸ್ವತಿಯ ಮನೆಯಲ್ಲಿ ಫೆಬ್ರವರಿ ತಿಂಗಳು ಒಂದನೆಯ ತಾರೀಖು ನಟ್ಟಿರುಳು ಎಲ್ಲರೂ ಮಲಗಿರುವಾಗ ಕಳ್ಳತನ ನಡೆದೇಬಿಟ್ಟಿತು. ಅಂದು ತುಂಬ ಬೆಲೆಬಾಳುವ ಕನ್ನಡದ ಆಸ್ತಿಯೊಂದು ಅಪಹೃತವಾಯಿತು.

೨

ದಿವಂಗತ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳನ್ನು ಕುರಿತ. ಕನ್ನಡದ ಕಟ್ಟಾಳು ವೆಂದು ಹೇಳಿದೆವಲ್ಲವೆ? ಹೌದು, ಆ ಮಾತು ಯಥಾರ್ಥವಾಗಿ ಅವರಿಗೆ ಅನ್ವಯಿಸುವಷ್ಟು ಬಹಳ ಜನ ತೋರಿಕೆಯ ಭಾಷಾಭಿಮಾನಿಗಳಿಗೆ ಅನ್ವಯಿಸಲಾರದು. ೧೯೪೧ರಲ್ಲಿ ನಡೆದ ಹೈದರಾಬಾದು ಸಾಹಿತ್ಯಸಮ್ಮೇಳನದ ಅಧ್ಯಕ್ಷಪೀಠದಿಂದ ಅವರು ಅಪ್ಪಣೆಕೊಡಿಸಿದ ಕನ್ನಡದ ಉತ್ಕಟಪ್ರೇಮದ ಪದಪುಂಜಗಳನ್ನು, ಅದನ್ನು ಹೇಳಿ ಕಾಲುಶತಮಾನದಮೇಲೆ ಆದರೂ, ಇಂದಿಗೂ ಓದಿದವರಲ್ಲಿ ಮೈ ನವಿರೇಳಿಸುತ್ತವೆ. ಇಂದು ಹಿಂದಿಯ ವಿರುದ್ಧ ಜನ ಬಂಡಾಯವೆದ್ದು ಭಾರತದಾದ್ಯಂತ ಬೊಬ್ಬೆ ಎಬ್ಬಿಸುತ್ತಿದ್ದಾರಷ್ಟೆ. ಶಾಸ್ತ್ರಿಗಳವರು ಭವಿಷ್ಯದರ್ಶಿಯಂತೆ ಅಂದೇ ಈ ಆಗುಹೋಗುಗಳ, ಅಲ್ಲೋಲಕಲ್ಲೋಲದ ಚಿತ್ರವನ್ನು ಊಹಿಸಿದ್ದರು. ಅದರಲ್ಲಿಯೂ ಪ್ರವಾದಿಯಾಗಿ ಅವರು ಹೇಳಿದ "ಕನ್ನಡಿಗರೇ, ನೀವು ಮಾತ್ರ ನಿಮ್ಮ ಕನ್ನಡದ ಅಭಿಮಾನವನ್ನು ಕಾಪಾಡಿಕೊಳ್ಳಿ. ಮೋಹಕ್ಕೆ ಸಿಲುಕಬೇಡಿ, ವಿಚಾರಮಾಡಿ. ನಿಮ್ಮ ಕನ್ನಡದ ಅಭಿಮಾನವೆಂಬ ಕಾಮಧೇನು ಎಚ್ಚರವಾಗಿದ್ದರೆ, ಬ್ರಹ್ಮದಂಡ ಮುಂದೆ ಇದ್ದರೆ ನಮ್ಮನ್ನು ಯಾವ ವಿಶ್ವಾಮಿತ್ರ ಹಿಂದಿ ಪಡೆಯೂ ಏನೂ ಮಾಡಲಾರದು"—ಎಂಬ ಅವರ ಮಾತುಗಳು ಮತ್ತೆಮತ್ತೆ ಮೆಲಕುಹಾಕುವಂತೆ ಮನನೀಯವಾಗಿವೆ.

ಕನ್ನಡಿಗರಿಗೆ ಕನ್ನಡದಿಂದಲೇ ಭುಕ್ತಿ, ಕನ್ನಡದಿಂದಲೇ ಮುಕ್ತಿ ಎಂಬುದು ಕನ್ನಡದ ಸೇನಾನಿಯಾಗಿದ್ದ ದಿವಂಗತ ಕೃಷ್ಣಶಾಸ್ತ್ರಿಗಳವರ ಸುಪ್ರಸಿದ್ಧ ಸೂಕ್ತಿ. ಯಾರಿಗೇ ಆಗಲಿ ಅನ್ಯಭಾಷೆಯೆಂಬುದು ಪ್ರಯತ್ನಪೂರ್ವಕವಾಗಿ ಪರಿಶ್ರಮದಿಂದ ಬಂದುದು. ಆದರೆ ತಾಯಿನುಡಿ ಸರಳಸುಲಭವಾಗಿ, ಸಹಜವಾಗಿ ಬಂದುದು. ಅನೇಕ ಜನರಿಗೆ ಈ ಸೂತ್ರದ ಸ್ವಾರಸ್ಯ ತಿಳಿಯದು. ಅನ್ಯಭಾಷೆಯಲ್ಲಿ ಬರೆದು ಜಹಗೀರಿ ಹಾಕಿಸಿಕೊಳ್ಳುವುದಕ್ಕಿಂತ ಸ್ವಭಾಷೆಯಲ್ಲಿ ಮುಲುಕಿ ತಪ್ಪುಮಾಡುವುದೇ ಎಷ್ಟೋ ಶ್ರೇಯಸ್ಕರವೆಂಬುದು ಕೃಷ್ಣಶಾಸ್ತ್ರಿಗಳ ಖಚಿತವಾದ ಅಭಿಪ್ರಾಯವಾಗಿತ್ತು. ಅಲ್ಲದೆ ಇಂಗ್ಲಿಷಿನಲ್ಲಿ ಬರೆಯುವವರು ಪ್ರಪಂಚದ ಆದ್ಯಂತವೂ ಇದ್ದಾರೆ; ಆದರೆ ಕನ್ನಡದಲ್ಲಿ ಬರೆಯಬಲ್ಲವರು ಕನ್ನಡ ನಾಡಿನಲ್ಲಿಯೇ ಹಲವರಿಲ್ಲವೆಂಬುದು ಅವರ ಈ ಅಭಿಪ್ರಾಯಕ್ಕೆ ಮುಖ್ಯ ಕಾರಣವಾಗಿತ್ತು. 'ಸಂಸ್ಕೃತಕ್ಕೆ ಕೊಟ್ಟ ಕಾಲಾವಕಾಶ, ಆಶ್ರಯಾವಕಾಶಗಳಲ್ಲಿ ನೂರರಲ್ಲಿ ಒಂದು ಪಾಲನ್ನು ಇಂಗ್ಲಿಷಿಗೆ ಕೊಟ್ಟರೆ ಆಗ ಕನ್ನಡವು ತನ್ನ ಗುರುತೇ ಸಿಕ್ಕದಷ್ಟು ಆಂಗ್ಲಮಯವಾಗಿಬಿಟ್ಟೀತು. ಇಷ್ಟು ಮಾತ್ರಕ್ಕೆ ಇಂಗ್ಲಿಷು ನಮ್ಮದಾದೀತೆ?' ಎಂದು ದೂರದರ್ಶಿತ್ವದಿಂದ ನುಡಿದಿದ್ದಾರೆ. ಅಂದಮಾತ್ರಕ್ಕೆ ಇಂಗ್ಲಿಷು ನಮಗೆ ಬೇಡವೇ ಬೇಡವೆಂಬುದು ಅವರ ಅಭಿಪ್ರಾಯವಾಗಿರಲಿಲ್ಲ. ಇಂಗ್ಲಿಷು ಪ್ರಪಂಚದ ಬಹುಜನರ ಭಾಷೆಯೆಂದೂ, ಅದರಿಂದ ಭಾರತೀಯರಿಗೂ ಭಾರತೀಯ ಭಾಷೆಗಳಿಗೂ ನವಚೈತನ್ಯವನ್ನು ಟುಮಾಡಿರುವುದು ಅವರಿಗೂ ತಿಳಿದಿತ್ತು.

ಆದರೆ ಇಂಗ್ಲಿಷನ್ನು ಕಡ್ಡಾಯವಾಗಿ ಕಲಿಯುವುದು ಅವರಿಗೆ ಇಷ್ಟವಿಲ್ಲ. ಇಂಗ್ಲಿಷಿಗೆ ವಿಶ್ವವಿದ್ಯಾನಿಲಯಗಳ ಶಿಕ್ಷಣದಲ್ಲಿ ಸ್ಥಾನವಿರಬೇಕಾದುದು ಉಚಿತ ವಾದರೂ ಆದ್ಯಸ್ಥಾನ, ಸಾರ್ವಭೌಮಸ್ಥಾನ ಕನ್ನಡಕ್ಕೆ. ಆನುಷಂಗಿಕವಾದ ಸ್ಥಾನ ಮಾತ್ರ ಇಂಗ್ಲಿಷಿಗೆ. ಏಕೆಂದರೆ ಮಾತೃಭಾಷೆಯ ಮೂಲಕ ಕಲಿತದ್ದೇ ಮೈ ಹತ್ತುವುದು, ಮತ್ತು ಮಾತೃಭಾಷೆಯಲ್ಲಿ ಬರೆದದ್ದೇ ನಿಲ್ಲುವುದೆಂಬುದು ಅವರ ಸಿದ್ಧಾಂತವಾಗಿತ್ತು. 'ಈಚೆಗೆ ಇಪ್ಪತ್ತೈದು ಮೂವತ್ತು ವರ್ಷಗಳಿಂದ ಸಂಸ್ಕೃತದ ಹಿಡಿತ ತಪ್ಪಿಸಿಕೊಂಡು, ಇಂಗ್ಲಿಷಿಗೆ ಸೆರೆಯಾಗದೆ, ತನ್ನ ಜಾಡನ್ನು ತಾನು ಕಂಡು ಕೊಂಡು ಕನ್ನಡ ಸಾಹಿತ್ಯವಾಹಿನಿ ಹರಿಯುತ್ತಿರುವುದನ್ನು ನೋಡಿದರೆ ಯಾರಿ ಗಾದರೂ ಇದರ ನಿಜಾಂಶವು ಮನವರಿಕೆಯಾಗುವುದು. ಆದ್ದರಿಂದ ಇಂಗ್ಲಿಷಿಗಿಂತ ಉತ್ತಮಸ್ಥಾನವು ಮಾತೃಭಾಷೆಗೆ ಸಲ್ಲಬೇಕು' ಎಂಬು ಅವರ ನಿಲುವಾಗಿತ್ತು. ಭಾಷೆಗಿಂತ ಭಾವ ಮುಖ್ಯ. ಸಂಸ್ಕೃತ, ಇಂಗ್ಲಿಷ್ ಅಥವಾ ಮತ್ತಾವುದೇ ವಿಶ್ವಮಾನ್ಯ ಭಾಷೆಯಲ್ಲಿ ಇರುವ ಸಾರವತ್ತಾದುದನ್ನು, ಸರ್ವೋತ್ಕೃಷ್ಟವಾದುದನ್ನು ಕೃತಜ್ಞತೆಯಿಂದ ಕನ್ನಡಕ್ಕೆ ಭಾಷಾಂತರಿಸಿಕೊಂಡು ಕನ್ನಡಿಸಿಕೊಳ್ಳೋಣ.

ಬೇರೆ ಭಾಷೆಗಳಲ್ಲಿ, ಬೇರೆ ದೇಶಗಳಲ್ಲಿ ಅವರ ಮಾತೃಭಾಷೆ ಮತ್ತು ದೇಶ ಭಾಷೆ ಬಿಟ್ಟು ಪರಭಾಷೆಯ ಮೂಲಕ ಪಾಠಪ್ರವಚನ ಹಾಗೂ ಪರೀಕ್ಷೆಗಳು ನಡೆಯದಿರುವಾಗ ಭಾರತದಲ್ಲಿ, ಅದೂ ವಿಶೇಷವಾಗಿ ಕನ್ನಡ ನಾಡಿನಲ್ಲಿ ಇಂಗ್ಲಿಷಿನ ಮೂಲಕ ಬೋಧಿಸುವ ಈ ವಿಚಿತ್ರ ಪರಿಸ್ಥಿತಿಯ ದೌರ್ಭಾಗ್ಯ, ದುಸ್ಥಿತಿ ಇನ್ನು ಇರಬೇಕೆ? ಎಂಬ ಪ್ರಶ್ನೆಗೆ ಶಾಸ್ತ್ರಿಗಳ ಉತ್ತರ ಹೀಗಿದೆ: "ಆದುದರಿಂದ ನಮ್ಮ ದೇಶದಲ್ಲಿ ಇಂಗ್ಲಿಷಿಗೆ ಸ್ವಲ್ಪ ಪ್ರಾಶಸ್ತ್ಯ ಕಡಿಮೆಮಾಡಿ....ಕನ್ನಡಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಡಬೇಕೆಂಬುದೇ ನನ್ನ ಅಭಿಪ್ರಾಯ." ಅವರ ಈ ಸೂಚನೆ ಯೊಂದೇ ಇಂದಿನ ಗೊಂದಲಕ್ಕೆ ಸೂಕ್ತ ಪರಿಹಾರ. "ಈ ವಿಚಾರವಾಗಿ ಸ್ವಲ್ಪ ವೀರೋಪಾಸನೆ ಇಲ್ಲದಿದ್ದರೆ ಕನ್ನಡ ಬದುಕದು. ಏಕದೇವೋಪಾಸನೆಯಂತೆ ಏಕ ಭಾಷೋಪಾಸನೆ ಮಾಡಿದರೆ ತಾನೇ ವರ ಸಿಕ್ಕೀತು? ಕನ್ನಡ ಭಕ್ತನು 'ತೈಲ ಧಾರೆಯಂತೆ ಕನ್ನಡದಲ್ಲಿ ಮನವ ಕೊಡು ಇಂಗ್ಲಿಷ್, ಸಂಸ್ಕೃತಾ!' ಎಂದು ಪ್ರಾರ್ಥಿಸಬೇಕು, ವೀರದೀಕ್ಷೆ ವಹಿಸಿಬೇಕು. ಕನ್ನಡದ ಭಕ್ತರಾಗಿ ಮಿಕ್ಕ ಭಾಷೆ ಗಳಿಗೆ ಪೂಜೆ ಸಲ್ಲಿಸುವುದನ್ನು ವಚನಕಾರರಾಗಿದ್ದರೆ ಬಹು ಕಠಿಣವಾದ ಮಾತಿನಲ್ಲಿ ಖಂಡಿಸುತ್ತಿದ್ದರು." ಆದುದರಿಂದ ಕನ್ನಡಿಗರಲ್ಲಿ ಕನ್ನಡಾಭಿಮಾನದ ಕಾವು ಬರಬೇಕು, ಏರಬೇಕು, ಕಾವಿನಿಂದ ಕಾರ್ಯಸಿದ್ಧಿ.

ಇದಕ್ಕೆ ಮುಖ್ಯವಾಗಿ ಕನ್ನಡಿಗರಲ್ಲಿ ಒಕ್ಕಟ್ಟು ಇರಬೇಕು. ಕನ್ನಡಿಗರೆಲ್ಲ ಒಂದೆಂಬ ಭಾವನೆ ಬರಬೇಕು. ಕನ್ನಡಿಗರು ಮೊದಲು ತಮ್ಮ ಉದ್ಧಾರವನ್ನು ನೋಡಿಕೊಳ್ಳಬೇಕು. ಪ್ರಪಂಚವನ್ನೇ ಉದ್ಧಾರಮಾಡುತ್ತೇನೆಂದು ಹೊರಡು ವುದಕ್ಕಿಂತ ಹೆಚ್ಚಿನ ಅವಿವೇಕ ಇನ್ನೊಂದಿಲ್ಲ. ಕನ್ನಡಿಗರು ತಮ್ಮ ನಾಡು ನುಡಿ

ಗಳನ್ನು ಅಭಿಮಾನದಿಂದ ಬೆಳಸಿ ಪುಷ್ಟಿಗೊಳಿಸಬೇಕು. ಅಂಥ ಪ್ರಯತ್ನ ಸ್ವಾಭಾವಿಕ, ನ್ಯಾಯಬದ್ಧ ಹಾಗೂ ಕ್ಷೇಮಕರವೆಂದು ಕೃಷ್ಣಶಾಸ್ತ್ರಿಗಳ ಭಾವನೆ. "ಕನ್ನಡಿಗರು ತಾವು ಗರಿಕಟ್ಟಿಕೊಳ್ಳಬೇಕು, ಕರ್ನಾಟಕದ ದೃಷ್ಟಿಯಿಂದ ಕೆಲಸ ಮಾಡಬೇಕು....ಪ್ರಕೃತ ರಾಜಕೀಯ ಸ್ಥಿತಿಯಲ್ಲಿ ಕನ್ನಡಿಗರು ತಾವು ಕನ್ನಡಿಗರು, ತಮ್ಮ ತಾಯಿನುಡಿ ಕನ್ನಡ; ಅದು ಉಳಿಯಬೇಕು, ಅದರಿಂದ ತಾವು ಬದುಕ ಬೇಕು, ಬೆಳೆಯಬೇಕು ಎಂಬುದನ್ನು ನಿರ್ಧರಮಾಡಿಕೊಂಡು ಅದನ್ನು ಉಳಿಸಿ ತಾವೂ ಉಳಿದು ಶಕ್ತಿಗಳಿಸಬೇಕು, ವಿದ್ಯೆಗಳಿಸಬೇಕು, ಸಂಪತ್ತುಗಳಿಸಬೇಕು. ಕನ್ನಡಿಗರು ಒಕ್ಕಟ್ಟಾಗಿರಲು ಇರುವ ಏಕಮಾತ್ರ ಸಾಧನ ಅವರ ನುಡಿ; ಸಾವಿರಾರು ವರ್ಷಗಳಿಂದ ಧೃಷ್ಟ ಪುಷ್ಟವಾಗಿ ಕಲ್ಪವೃಕ್ಷದಂತೆ ಬೆಳೆದು ಸಕಲ ಇಷ್ಟಾರ್ಥವನ್ನೂ ಕೊಡಬಲ್ಲ ಅವರ ನುಡಿ." ಕೃಷ್ಣಶಾಸ್ತ್ರಿಗಳು ಪೂರೈಸಿದ ಈ ಕನ್ನಡದ ಕಹಳೆಯನ್ನು ಆಲಿಸಿ ಕಾರ್ಯಾಚರಣೆಗೆ ತರುವ ಅಗತ್ಯ ಇಂದು ಬಹುವಾಗಿ ಬಂದಿದೆ.

ಜಾತಿಮತಗಳೂ ವೇಷಭೂಷಣಗಳೂ ಜನರ ಒಕ್ಕಟ್ಟಿಗೆ ಕಾರಣವಾಗದಿರ ಬಹುದು. ಆದರೆ ನಾವೆಲ್ಲ ಕನ್ನಡಿಗರು ಎಂಬುದು ಎಲ್ಲರನ್ನೂ ಒಂದುಗೂಡಿಸುವ ಮಂತ್ರವಾಗಬೇಕು, ಸಮರ್ಥ ಸೂತ್ರವಾಗಬೇಕಲ್ಲವೆ? "ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯ ದೇಶದ ದಕ್ಷಿಣಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ನೀವು ಅದನ್ನು ಅಲಕ್ಷ್ಯಮಾಡಿದರೆ ಮಿಕ್ಕ ಯಾವ ದೇಶದ ಯಾವ ಜನರೂ ಅದನ್ನು ಎತ್ತಿಹಿಡಿಯಲಾರದು. ಅದು ಹೋದರೆ ಹೋಗಲಿ ಎನ್ನುವ ಹಾಗಿದ್ದರೆ ಈ ಕಡೆ ಬಂಗಾಳಾಕೊಲ್ಲಿ ಇದೆ, ಆ ಕಡೆ ಅರಬ್ಬಿ ಸಮುದ್ರ ಇದೆ; ಗುಡಿಸಿಹಾಕಿಬಿಡಿ. ಇತರ ಭಾಷೆಗಳು ಒತ್ತಿಕೊಂಡು ಬರಲಿ, ಆಕ್ರಮಿಸಿಕೊಳ್ಳಲಿ!" ಕೃಷ್ಣಶಾಸ್ತ್ರಿಗಳ ಈ ಭಾವಾವೇಶದ ನುಡಿಗಳಲ್ಲಿ ಅಡಗಿರುವ ಕನ್ನಡದ ಅನುರಕ್ತಿಯನ್ನು ಅನುಲಕ್ಷಿಸಿ, ಅನುಕರಿಸಿ, ಅನುಸರಿಸಿ.

೩

ಕನ್ನಡದಲ್ಲಿ ಯಾವ ವಿಷಯದಲ್ಲೇ ಆಗಲಿ, ಯಾವ ಮಟ್ಟದಲ್ಲೇ ಆಗಲಿ ಬರೆಯಬಲ್ಲ ಜನ ಹೆಚ್ಚುಸಂಖ್ಯೆಯಲ್ಲಿ ಇಲ್ಲದಿರಬಹುದು. ಆದರೆ ಹಾಗೆ ಬರೆಯುವವರು ಸ್ವಲ್ಪವೇ ಆದರೂ ಸಮರ್ಥರಾದ ಜನರಿದ್ದಾರೆ. ಅಂಥ ಜನರನ್ನು ಬರೆಯುವಂತೆ ಬೇಡುವವರು, ಸ್ಫೂರ್ತಿ ಕೊಡುವವರು ಯಾರು? ಆ ಸಮರ್ಥಜನ ತಾನೆ ಸುಮ್ಮನೆ ಏಕೆ ಬರೆದಾರು? ಬರೆದರೂ ಪ್ರಕಟಿಸುವವರು ಯಾರು? ಪ್ರಕಟಿಸಿದರೂ ಕೊಳ್ಳುವವರು ಯಾರು? ಈ ಪ್ರಶ್ನಾವಳಿ ದೊಡ್ಡ ಸರಪಳಿ. ಇದಕ್ಕೆಲ್ಲ ಉತ್ತರ ಕನ್ನಡಿಗರನ್ನೇ ಅವಲಂಬಿಸಿದೆ. ಕನ್ನಡದಲ್ಲಿ ವಿಜ್ಞಾನ ವಿಷಯ ದಿಂದ ಹಿಡಿದು ಪ್ರೌಢ ಸಂಶೋಧನೆಯವರೆಗೂ ಕೃತಿ ನಿರ್ಮಾಣವಾಗಬೇಕಾದರೆ

ಅದಕ್ಕೆ ತಕ್ಕ ಪ್ರೋತ್ಸಾಹ, ಉತ್ತೇಜನ ಬೇಕು. ಇದಕ್ಕೆ ಕನ್ನಡಿಗರು ದುಡ್ಡು ಕೊಟ್ಟು ಕನ್ನಡ ಪುಸ್ತಕಗಳನ್ನು ಕೊಂಡು ಓದುವಂತೆ ಆಗಬೇಕು. ಕನ್ನಡಿಗರು ತಮ್ಮ ಹಣವನ್ನು ಕನ್ನಡೇತರ ಪುಸ್ತಕಗಳಿಗೆ ಸುರಿಯದೆ ಕನ್ನಡ ಕೃತಿಗಳನ್ನು ಕೊಳ್ಳುವ ವ್ಯಾಸಂಗ ಹವ್ಯಾಸವನ್ನು ಬೆಳಸಿಕೊಳ್ಳಬೇಕು, ತನ್ಮೂಲಕ ಕನ್ನಡದ ಬೆಳವಣಿಗೆಗೆ ಕಾರಣರಾಗಬೇಕು "ಒಂದು ಗೇಣು ಅಗಲದ ಕರ್ನಾಟಕದಲ್ಲಿ ಇರುವ ಒಂದು ಹಿಡಿ ಜನರು ಇರುವ ಅಲ್ಪಸ್ವಲ್ಪ ಧನವನ್ನೂ ಅಭಿಮಾನವನ್ನೂ ನಾನಾ ಕಡೆಗೆ ಹರಿದು ಹಂಚಿದರೆ ಕನ್ನಡಸಾಹಿತ್ಯ ಬದುಕುವುದು ಹೇಗೆ?.... ಇದು ನಿರಾಶಾವಾದವಲ್ಲ; ಕನ್ನಡಿಗರು ತಮ್ಮ ಧನ ಅಭಿಮಾನಗಳನ್ನು ಚೆದುರ ಗೊಡದೆ ಹೇಗೆ ಒಮ್ಮನಸ್ಸಿನಿಂದ ಒಂದುಗೂಡಿಸಬೇಕೆಂದು ಹೇಳಿರುವ ಮಾತು."

ಶಾಲಾ ಕಾಲೇಜುಗಳಲ್ಲಿ, ಶಿಶುವಿಹಾರದಿಂದ ಸ್ನಾತಕೋತ್ತರ ತರಗತಿಯ ತನಕ, ಓದುವುದಕ್ಕೆ ಆರಿಸಿಕೊಳ್ಳುವ ಮಾಧ್ಯಮದಿಂದ ಮೊದಲುಗೊಂಡು ಆಕಾಶವಾಣಿಯಲ್ಲಿ ಸುದ್ದಿ ಸಂಗೀತಗಳನ್ನು ಆಲಿಸುವವರೆಗೆ, ಗ್ರಾಮಪಂಚಾಯಿತಿ ಯಿಂದ ವಿಧಾನಸೌಧದವರೆಗೆ, ಕಡೆಗೆ ನ್ಯಾಯಲಯದ ವಿಚಾರಣೆಯಿಂದ ತೀರ್ಪಿನವರೆಗೆ "ಕನ್ನಡಿಗರು ಕನ್ನಡವನ್ನೇ ಕೋರಬೇಕು, ಕೇಳಬೇಕು, ಬಳಸ ಬೇಕು." ಕನ್ನಡ ನಮ್ಮದೆಂಬ ಅಭಿಮಾನದ ಜೊತೆಗೆ ಮಮತೆಯೂ, ಮಮತೆಯ ಜೊತೆಗೆ ವೀರೋಪಾಸನೆಯೂ ಇಂದು ಅತ್ಯಗತ್ಯವಾಗಿ ತೋರುತ್ತಿದೆ. ಕನ್ನಡ ನಾಡಿನ ಜನ, ಧನ, ಅಭಿಮಾನಗಳೆಲ್ಲ ಮೊದಲು ಕನ್ನಡದ ಕೆಲಸಗಳಿಗೆ, ಕನ್ನಡಿಗರಿಗೆ ಮೀಸಲಾಗಬೇಕು. ಕನ್ನಡಿಗರಲ್ಲಿ ಈ ಸ್ವಭಾಷಾಭಿಮಾನದ ಕಾವು ಬರಬೇಕು, ಅಕ್ಕರೆ ಉಕ್ಕಬೇಕು. ಹೊರಗಿನವರು ಬಂದು ನಮ್ಮಲ್ಲಿ ಸೇರಿ ನಮಗಿಂತಲೂ ಹೆಚ್ಚಾಗಿ ಅವರೆಲ್ಲ ಬೆಳೆದು ಬುದ್ಧಿವಂತರೂ ಭಾಗ್ಯವಂತರೂ ಬಲಶಾಲಿಗಳೂ ಆಗಿ, ಅವರ ಭಾಷೆಗಳನ್ನೇ ನಮ್ಮಲ್ಲಿ ಹರಡಿದ್ದಾರೆ, ಹರಡುತ್ತಿದ್ದಾರೆ. ವಸ್ತುಸ್ಥಿತಿ ಹೀಗಿದ್ದರೂ ಇನ್ನೂ ಸುಮ್ಮನಿರುವ, ತಮ್ಮ ಪಾಡಿಗೆ ತಾವು ತಿಂದುಂಡು ಕೊಂಡು ತೆಪ್ಪಗಿರುವ ಕನ್ನಡಿಗರನ್ನು ಏನೆಂದು ಕರೆಯೋಣ?

ಇದನ್ನೆಲ್ಲ ಸಮಗ್ರವಾಗಿ ಸಮೀಕ್ಷಿಸಿದ ಶಾಸ್ತ್ರಿಗಳು "ಕನ್ನಡಿಗರಿಗೆ ಕನ್ನಡ ದೇಶದಲ್ಲಿ ಹಿರಿಯ ಆಸ್ತಿಯಾಗಿ ಉಳಿದಿರುವುದು ಅವರ ಕನ್ನಡಭಾಷೆ; ಅದನ್ನು ಉಳಿಸಿಕೊಳ್ಳಿ" ಎಂದು ಉಚ್ಚಕಂಠದಲ್ಲಿ ಉತ್ತಿಷ್ಠಮಂತ್ರವನ್ನು ಹೇಳಿದ್ದಾರೆ. ಅವರ ಕನ್ನಡ ಭಾಷಾ ಭಕ್ತಿಪರಾಯಣತೆ ಅನನ್ಯವಾಗಿರುವಂತೆ ಅನುಕರಣೀಯ ಯೋಗ್ಯವಾಗಿದೆ. ಏಕೆಂದರೆ, ಅವರೇ ಒಂದುಕಡೆ ಹೇಳುವಂತೆ, ಇಂದು ದೊಡ್ಡವರಿಗಿಂತ ಚಿಕ್ಕವರಿಗೆ ಧೈರ್ಯ ಬಂದಿದೆ, ನಿಜ; ಆದರೂ ಇನ್ನೂ ಯಾರಿಗಾ ದರೂ ಅಧೈರ್ಯ ಉಳಿದಿದ್ದರೆ ಅದು ಕನ್ನಡಿಗರಿಗೇ ಆಗಿದೆ. ಕನ್ನಡದ ಪರವಾಗಿ ಎರಡು ಒಳ್ಳೆಯ ಮಾತೂ ಹೇಳಲಾರದ ಕನ್ನಡಿಗರಿದ್ದಾರೆಂಬುದನ್ನು ನೆನಸಿ ಕೊಂಡರೇ ವ್ಯಸನವಾಗುತ್ತದೆ. ಆದರೆ ಅಂಥ ಕನ್ನಡಾಭಿಮಾನಶೂನ್ಯರಾದ

ಕನ್ನಡಿಗರು ಬದುಕಿಯೂ ಸತ್ತಂತೆಯೇ. ಕನ್ನಡಿಗರು ಅಭಿಮಾನಧನರಾಗಿ ಎದ್ದು ನಿಲ್ಲಬೇಕು. ಕನ್ನಡದ ಮೇಲ್ಮೆ ಸಾಧಿತವಾಗದಂತೆ ಆಗಾಗ್ಗೆ ಉಂಟಾದ ಅನೇಕ ಅನುವು ಆಪತ್ತುಗಳನ್ನು ಕನ್ನಡ ತನ್ನ ಕಸುವಿನಿಂದ ದಾಟಿಕೊಂಡುಬಂದಿದೆ, ಅನೇಕ ಮಾರಕಶಕ್ತಿಗಳನ್ನು ಮೆಟ್ಟಿಬಂದಿದೆ. ಆದುದರಿಂದ ಎಚ್ಚೆತ್ತ ಕನ್ನಡಿಗರು ತಮ್ಮನ್ನು ಸುಳ್ಳುಪಳ್ಳು ಹೇಳಿ ತಪ್ಪುದಾರಿಗೆ ಅಭಿಮಾನಶೂನ್ಯದ ರಿಕ್ತಸ್ಥಿತಿಗೆ ಎಳೆಯುವ ಸ್ವಾರ್ಥಿಗಳ, ಸಮಯಸಾಧಕರ ಲೋಭ ಪ್ರಲೋಭಕ್ಕಾಗಲಿ, ಕೃತಕ ಭ್ರಾಂತಿಗಾಗಲಿ ಬಲಿಯಾಗಬಾರದು. ಕನ್ನಡಿಗರು ಅಗತ್ಯವಾದ ಆತ್ಮವಿಶ್ವಾಸ ದಿಂದ ಮುನ್ನಡಿಯಿಡಬೇಕು. ಭಯಬೇಡ, ಬೆದರಿಕೆಗೆ ಬಗ್ಗುವುದು ಬೇಡ, ಹೆದರಿಕೆಗೆ ಸೊಪ್ಪುಹಾಕುವುದು ಬೇಡ.

ಹಿಂದಿಭಾಷೆಯಿಂದ ಕನ್ನಡಕ್ಕೆ ಹೆಚ್ಚು ಪ್ರಯೋಜನವಿಲ್ಲವೆಂದು ೧೯೩೧ರಲ್ಲೇ ಕೃಷ್ಣಶಾಸ್ತ್ರಿಗಳು ಶಿವಮೊಗ್ಗದಲ್ಲಿ ಕರ್ನಾಟಕ ಸಂಘದ ವಾರ್ಷಿಕೋತ್ಸವ ಸಮಾರಂಭದ ಅಧ್ಯಕ್ಷತೆ ವಹಿಸಿದ್ದಾಗ ಹೇಳಿದ್ದರು. ಅನಂತರ ೧೯೩೯–೪೦ ಸರಿ ಸುಮಾರಿಗೆ ಆ ವಿಚಾರವನ್ನು ಪುನಃ ಕನ್ನಡಸಾಹಿತ್ಯ ಪರಿಷತ್‌ಪತ್ರಿಕೆಯ ಸಂಪಾದಕರಾಗಿದ್ದಾಗ ಪ್ರಸ್ತಾಪಿಸಿ, ಕನ್ನಡಕ್ಕೇ ಅಗ್ರಸ್ಥಾನವನ್ನಿತ್ತು ಹಿಂದಿಯನ್ನು ದೂರವಿಡಲು ಕರೆಕೊಟ್ಟರು. ೧೯೪೧ರಲ್ಲಿ ಮತ್ತೆ, ಹೈದರಾಬಾದಿನಲ್ಲಿ ನಡೆದ ೨೬ನೆಯ ಕನ್ನಡ ಸಾಹಿತ್ಯಸಮ್ಮೇಳನದ ಅಧ್ಯಕ್ಷಸ್ಥಾನದಿಂದ ಹಿಂದಿಯ ವಿಷಯದಲ್ಲಿ ಎಚ್ಚರವಹಿಸಿ ಕನ್ನಡವನ್ನು ಕಾಪಾಡಿಕೊಳ್ಳುವಂತೆ ಕಳಕಳಿಯಿಂದ ಕೇಳಿಕೊಂಡರು. ಹಿಂದಿಯನ್ನು ಬೆಳೆಯಗೊಡುವುದು ಕನ್ನಡಕ್ಕೆ ಪ್ರಯೋಜನವಾಗಲಿ ಕ್ಷೇಮವಾಗಲಿ ಇಲ್ಲವೆಂದು ಖಚಿತವಾಗಿ ಸಾರಿದರು: "ಇನ್ನು ಹಿಂದಿಯ ವಿಚಾರ. ಅದರ ಹೆದರಿಕೆ ನನಗೆ ಇದ್ದೇ ಇದೆ, ಹೆಚ್ಚಾಗುತ್ತಿದೆ; ಆದ್ದರಿಂದ ಅದನ್ನು ಮುಚ್ಚುಮರೆಯಿಲ್ಲದೆ ವ್ಯಕ್ತಪಡಿಸಿದ್ದೇನೆ. ಹಿಂದಿ ಭಾಷೆಯು ಸಾರ್ವತ್ರಿಕವಾದರೆ ಕನ್ನಡಕ್ಕೆ ಈಗ ಹೈದರಾಬಾದಿನಲ್ಲಿರುವ ಶೋಚನೀಯ ಸ್ಥಿತಿಯು ಮಿಕ್ಕೆಡೆಗಳಲ್ಲೂ ಬರುತ್ತದೆ."

ಹಾಗೆಂದು ಅವರಿಗೆ ಹಿಂದಿಯ ಮೇಲೆ ನಿಷ್ಕಾರಣವಾದ ದ್ವೇಷವಿಲ್ಲ. ಆದರೆ ಅದು ಕನ್ನಡವನ್ನು ಕಿತ್ತುಕೊಳ್ಳಲು ಬಂದರೆ–ಅದು ಹಿಂದಿಯಾಗಲಿ ಅಥವಾ ಮತ್ತೊಂದು ಭಾಷೆಯಾಗಲಿ–ಅವರು ಸುಮ್ಮನಿರುವುದಿಲ್ಲ. ಯಾರೂ ಸುಮ್ಮನಿರ ಬಾರದು. ಕನ್ನಡವನ್ನು ಬಿಟ್ಟು ಉಳಿದ ಎಲ್ಲ ಅಭ್ಯಾಗತ ಭಾಷೆಗಳು ಎಲ್ಲಿರಬೇಕೊ ಅಲ್ಲಿರಬೇಕು, ಹೇಗಿರಬೇಕೊ ಹಾಗಿರಬೇಕು. ಈ ಸ್ವಸ್ಥಾನ ಪರಿಜ್ಞಾನದಲ್ಲಿ ಏನಾದರೂ ತಾರತಮ್ಯ ತಲೆದೋರಿದರೆ ನಾವು ತಿನ್ನುವ ಅನ್ನವೂ, ಮಕ್ಕಳು ಕುಡಿಯುವ ಹಾಲೂ ಅನ್ಯರ, ಅನ್ಯಭಾಷೆಗಳ ಪಾಲಾಗುತ್ತವೆ. ಆದುದರಿಂದ ಕನ್ನಡನಾಡಿನ ಅನೇಕಾನೇಕ ಪೌರಸಭೆಯೇ ಮೊದಲಾದ ಸಂಘಸಂಸ್ಥೆಗಳು ಹಿಂದಿ ಪ್ರಚಾರಕ್ಕೆ ಮಾಡುವ ಖರ್ಚನ್ನು ಕನ್ನಡದ ಅಭಿವೃದ್ಧಿಗೆ ಕೊಡಲೆಂದು ಕೃಷ್ಣಶಾಸ್ತ್ರಿಗಳು ಮುವ್ವತ್ತುವರ್ಷದ ಕೆಳಗೆ ಕೇಳಿಕೊಂಡಿದ್ದಾರೆ. ಆದರೆ ಅದು

ಇಂದಿಗೂ ಕಾಗದದ ಮೇಲಿನ ಕೇಳಿಕೆಯಾಗಿಯೇ ಉಳಿದಿದೆ. "ಕನ್ನಡಿಗರು ಬಡವರು....ಅದರ ನಿವಾರಣೆಗೇ ಎಷ್ಟು ಶ್ರಮಪಟ್ಟರೂ ಸಾಲದಾಗಿದೆ, ಎಷ್ಟು ವೆಚ್ಚಮಾಡಿದರೂ ಸಾಲದಾಗಿದೆ....ಹೀಗಿರುವಾಗ ಹಿಂದಿಗಾಗಿ ಹಣವನ್ನೂ ಜನವನ್ನೂ ಅಭಿಮಾನವನ್ನೂ ಕೊಟ್ಟು ಅದನ್ನು ತುಂಬಿಕೊಳ್ಳುವುದು ನ್ಯಾಯವೇ?" ಕನ್ನಡಿಗರು ಈ ಪ್ರಶ್ನೆಯನ್ನು ಪರಿಭಾವಿಸಬೇಕು. ಈ ಎಲ್ಲ ಕಾರಣದಿಂದ, ಮುಖ್ಯವಾಗಿ ಕನ್ನಡದ ಅಭ್ಯುದಯದ ದೂರದೃಷ್ಟಿಯಿಂದ ಕನ್ನಡಕ್ಕೆ ಪ್ರಥಮ ಸ್ಥಾನ ಹಾಗೂ ಪ್ರಥಮ ಪೋಷಣೆ ಬೇಕೆಂದು ಅವರು ತಿಳಿಸಿದ್ದಾರೆ.

ದುರದೃಷ್ಟವೆಂದರೆ ಅನ್ಯಭಾಷೆಗಳಿಂದ ತಕ್ಕಮಟ್ಟಿಗೆ ಉದರಪೋಷಣ ಮಾಡಿಕೊಂಡ ಕನ್ನಡಿಗರಿಗಿಂತ, ಕನ್ನಡದಿಂದಲೇ ಉದರಪೋಷಣ ಮಾಡಿಕೊಳ್ಳುತ್ತಿರುವ ಕೆಲವು ಕನ್ನಡಿಗರು ಕನ್ನಡಕ್ಕೆ ವಿರುದ್ಧವಾಗಿ ವಾದಿಸುತ್ತಿರುವುದು. ಇದು ತುಂಬ ನಾಚಿಕೆಗೇಡಿನ ಪ್ರಸಂಗ, ಈ ನೆಲದಮೇಲೆ ಹುಟ್ಟಿಬಂದ ಎಲ್ಲ ಮಾನವರೂ ಹಲವಾರು ಸಾಲಗಳನ್ನು ನೆತ್ತಿಯಲ್ಲಿ ಹೊತ್ತೇ ಹುಟ್ಟುತ್ತಾನೆಂದು ಹಿರಿಯರ ಹೇಳಿಕೆಯಿದೆ. ಇವುಗಳಲ್ಲಿ ದೇವಋಣ, ಪಿತೃಋಣ ಮತ್ತು ದೇಶಋಣಗಳಂತೆ ಸಮಾಜಋಣ ಮತ್ತು ಭಾಷಾಋಣವೂ ಮುಖ್ಯವಾದವು. ಎರಡುಸಾವಿರ ವರ್ಷಗಳಿಂದ ಅನೇಕ ತಲೆಮಾರುಗಳಲ್ಲಿ ಶ್ರದ್ಧಾವಂತ ಹಾಗೂ ಪ್ರತಿಭಾವಂತ ಲೇಖಕರ ತುಷ್ಟಿಪುಷ್ಟಿಗಳಿಂದ ಸುಪುಷ್ಟ ಸಚೇತವಾಗಿ, ಸಂಜೀವಿನೀ ಶಕ್ತಿಯಾಗಿ, ಕುಗ್ಗದ ಸೌಭಾಗ್ಯವಾಗಿ ಕನ್ನಡಸಾಹಿತ್ಯ, ಭಾಷೆ ನಿಂತಿರುವುದನ್ನು ಚೆನ್ನಾಗಿ ಮನಗಾಣಬೇಕು.

೪

ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪಿತವಾದುದರ ಮೂಲೋದ್ದೇಶಗಳಲ್ಲಿ ಪ್ರಧಾನವಾದುದು ಕನ್ನಡದ ಓದು ಬೋಧನೆಗೆ ಅನಿರ್ಬಂಧ ಆದ್ಯತೆಯಿತ್ತು ಖಡ್ಡಾಯವಾಗಿ ಕಲಿಸುವುದು. ಆದರೆ ಬಹುಕಾಲ ವಿಶ್ವವಿದ್ಯಾನಿಲಯದ ಪ್ರಸಾದದಲ್ಲಿ ಕನ್ನಡಕ್ಕೇ ಕ್ಷಯರೋಗ ಪ್ರಾಪ್ತವಾಗಿತ್ತು. ಇಂದಿಗೂ ಇದು ಏನೂ ಆನಂದಿಸುವ ಆರೋಗ್ಯಭಾಗ್ಯ ಪಡೆದಿಲ್ಲ. ಇದರಿಂದ ಕನ್ನಡಿಗರೂ ಕಾಲೇಜು ಶಿಕ್ಷಕರೂ, ಶಾಸಕರೂ ಕೂಡಲೇ ಎಚ್ಚೆತ್ತು ಕನ್ನಡದ ಸ್ಥಾನಮಾನಗಳು ಯಾವ ಧಕ್ಕೆಯೂ, ಅಡ್ಡಿ ಆತಂಕಗಳೂ ಇಲ್ಲದಂತೆ ನೋಡಿಕೊಳ್ಳಬೇಕು. ಕನ್ನಡವು ಬಲಿತು, ಬೆಳೆದು, ಬೆಳಕು ಬೀರುವಂತೆ ಅವಕಾಶಮಾಡಿಕೊಡಬೇಕು. ಶಿಕ್ಷಣದ ಎಲ್ಲ ಹಂತಗಳಲ್ಲೂ, ರಾಜ್ಯವ್ಯವಹಾರ ಹಾಗೂ ನಾಡಿನ ಇತರ ಸಮಗ್ರ ವ್ಯವಹಾರವೂ ಕನ್ನಡವೇ ಮಾಧ್ಯಮವಾಗಿರಬೇಕು. ಕನ್ನಡ ಭಾಷೆ ಕೂಡಲೆ ಎಲ್ಲ ಮಟ್ಟದಲ್ಲೂ ಉಪಯೋಗಿಸಲು ಸಾಧ್ಯವಾಗುವಷ್ಟು ಸಮೃದ್ಧವಾಗಿ ಬೆಳೆದಿದೆಯಲ್ಲದೆ ಅದಕ್ಕೆ ಅನುಕೂಲವಾಗುವ ಸಾಧನ ಸಲಕರಣೆಗಳೆಲ್ಲ ಸಿದ್ಧವಾಗಿವೆ.

ಇವೆಲ್ಲಕ್ಕೂ ಮಿಗಿಲಾಗಿ ಕನ್ನಡದಲ್ಲಿ ಅಪೂರ್ವವಾದ ಆ ಅಂತರ್ಗತ ಸಾಮರ್ಥ್ಯ ವಿದೆ. ಏಕೆಂದರೆ ಪ್ರಪಂಚದ ಯಾವುದೇ ಪರಿಪೂರ್ಣವಾದ ಅಥವಾ ಸಮೃದ್ಧವಾದ ಭಾಷೆಯುಷ್ಟು ಸಮಸ್ಪರ್ಧಿಯಾಗಿ, ಹೊಯ್‌ಕಯ್ಯಾಗಿ ತೂಗಬಲ್ಲ ಶಕ್ತಿ, ಶಬ್ದ ಸಂಪತ್ತು ಕನ್ನಡಕ್ಕಿದೆ. ಸಾಕಷ್ಟು ನುರಿತು ಪಳಗಿ ಬೆಳಗಿರುವ ಸಂಸ್ಕಾರಸಂಪನ್ನ ಭಾಷೆ ಕನ್ನಡ. ಕನ್ನಡ ಭಾಷೆಯಲ್ಲಿ ಬುದ್ಧಿಭಾವಗಳ ಭಂಡಾರ ಬಹುವಾಗಿ ಬೆಳೆದಿದೆ. ಹೀಗಾಗಿ ಕನ್ನಡ ಸಮರ್ಥವಲ್ಲವೆಂಬ ಅದೂರ ದೃಷ್ಟಿಗಳ ಅವಿವೇಕಕ್ಕೆ ಕಿವಿಗೊಡುವುದು ಬೇಕಿಲ್ಲ.

"ಈಗಲೇ ಕನ್ನಡ ಓದುವವರಿಲ್ಲದೆ ಕನ್ನಡ ಸಾಹಿತ್ಯದ ದಾರಿಯಲ್ಲಿ ಕಾಡು ಕೊಂಟುಗಳನ್ನು ಏರಿಸಿಟ್ಟಂತಾಗಿದೆ! ಮುಂದೆ ಕನ್ನಡದ ಓದು ಬರಹಗಳನ್ನು ಬಲ್ಲವರು ಇನ್ನೂ ಕಡಮೆಯಾದರೆ ನಮ್ಮ ಮೈಸೂರು ದೇಶವು 'ಮಕ್ಕಳಿಲ್ಲ ಮರಿಯಿಲ್ಲ, ಹೆಸರು ತಾಯಮ್ಮ' ಎಂಬಂತೆ 'ಕನ್ನಡ ಓದುವವರಿಲ್ಲ ಬರೆಯು ವವರಿಲ್ಲ, ಹೆಸರು ಕನ್ನಡ ದೇಶ' ಎನ್ನುವ ಹಾಗಾಗುತ್ತದೆ. ಮೈಸೂರು ದೇಶವು ಕನ್ನಡ ದೇಶದ ಮಧ್ಯದಲ್ಲಿದೆ, ಅದರ ಜಾತಿಯು ಶುದ್ಧವಾಗಿದೆ, ಸಂಕರವಿಲ್ಲ ಎಂದು ನಾವು ಹೇಳಿಕೊಳ್ಳುತ್ತಿರುವುದು ಬರಿಯ ಒಣ ಹೆಮ್ಮೆಯಾಗುತ್ತದೆ. ತಾಯಿಯ ಹಾಲು ಸಾಲದೆ ಮಗುವಿಗೆ ಹುಯ್ಯುವ ಹಾಲು ಕುಡಿಸುತ್ತಿರುವಾಗ, ಇರುವ ಸ್ತನ್ಯವನ್ನೂ ಬಿಡಿಸಿ ಮಗುವನ್ನು ಉಪವಾಸ ಕೆಡವುವರುಂಟೇ? ಆದ್ದರಿಂದ ಈ ವಿಚಾರದಲ್ಲಿ ಬಾಯಿ ನಡೆಯತಕ್ಕ ಪ್ರತಿಯೊಬ್ಬರೂ ನಮ್ಮ ಜನಗಳಲ್ಲಿ ಸಾಮಾನ್ಯವಾಗಿ ಸ್ವಭಾವಸಿದ್ಧವಾಗಿ ಬಂದಿರುವ ಔದಾಸೀನ್ಯವನ್ನು ಬಿಟ್ಟು, ಯಾವ ಯಾವುದೋ ಕಾರಣಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಲೆಕ್ಕಾಚಾರ ಮಾಡುತ್ತ ಹಿಂದೆ ಮುಂದೆ ನೋಡಿ 'ಹೋದರೆ ಹೋಗಲಿ' ಎಂದು ಉಪೇಕ್ಷೆ ಮಾಡುವುದನ್ನು ಬಿಟ್ಟು ಕನ್ನಡವು ಬಲಿಯುವುದಕ್ಕೆ ತಕ್ಕ ಏರ್ಪಾಟನ್ನು ಮಾಡಿಸುವ ರೆಂದು ಭಾವಿಸುತ್ತೇವೆ." ಕೃಷ್ಣಶಾಸ್ತ್ರಿಗಳ ಈ ಮಾತುಗಳಲ್ಲಿ ಕೆನೆಕಟ್ಟಿರುವ ಕನ್ನಡತನದ ಜೊತೆಗೆ ಕನ್ನಡದ ಉಳಿವಿಗಾಗಿ ನಾವು ಮುಂದೆ ಕೈಗೊಳ್ಳಬೇಕಾದ ಕ್ರಮವೇನೆಂಬುದರ ಸ್ಥೂಲ ನಿರ್ದೇಶನವಿದೆ.

ಕನ್ನಡಿಗರಿಗೆ ಅವರ ಹಿತಕ್ಕಾಗಿ ಮತ್ತೊಂದು ಕಿವಿಮಾತು. ಕನ್ನಡಿಗರು ದೊಡ್ಡಪದವಿಗೆ ಬರಲಿ,ಅಧಿಕಾರ ನಿಮಿತ್ತದಿಂದ ಬೇರೆಕಡೆಯಲ್ಲಿರಲಿ, ಅವರು ಹೇಗಿದ್ದರೂ ಎಲ್ಲಿದ್ದರೂ ಮೊದಲು ಕನ್ನಡಿಗರೆಂಬುದನ್ನು ಮರೆಯಬಾರದು. ಅಷ್ಟೇ ಅಲ್ಲದೆ ಸಾಧ್ಯವಾದರೆ ಕನ್ನಡ ಭಾಷಾನಭಿಜ್ಞರ ಸಭೆಯಲ್ಲೂ ಕಡೆಗೆ ಸ್ವಾಗತ ವಂದನಾರ್ಪಣೆಯನ್ನಾದರೂ ಕನ್ನಡದಲ್ಲೇ ಮಾಡುವುದು ಲೇಸು. ಹಾಗೆ ಮಾಡುವುದೂ ಕನ್ನಡಕ್ಕೆ ಪ್ರಾಶಸ್ತ್ಯಕೊಟ್ಟಂತೆ, ಕನ್ನಡ ಭಾಷೆಗೆ ಕಿರೀಟವಿಟ್ಟಂತೆ ಎಂದು ಒಂದು ಸಂದರ್ಭದಲ್ಲಿ ಶಾಸ್ತ್ರಿಗಳು ಉಲ್ಲೇಖಿಸಿದ್ದಾರೆ. ಕನ್ನಡದ ವಿಚಾರ ದಲ್ಲಿ ಕನ್ನಡಿಗರು ವಿಶೇಷವಾದ ಅಭಿಮಾನವನ್ನು ತಳೆಯಬೇಕೆಂದು ತಿಳಿಸುವುದನ್ನು

ಕೃಷ್ಣಶಾಸ್ತ್ರಿಗಳು ಎಂದೂ ಮರೆಯುತ್ತಿರಲಿಲ್ಲ. ಅವರು ಅವಕಾಶ ಸಿಕ್ಕಾಗಲೆಲ್ಲ ಇದನ್ನು ಪ್ರಸ್ತಾಪಿಸುತ್ತಿದ್ದರು. ಒಮ್ಮೊಮ್ಮೆ ಇದರ ಪ್ರಸ್ತಾಪಕ್ಕೆ ಅವಕಾಶ ಅಥವಾ ಸಂದರ್ಭವಿಲ್ಲದಿದ್ದರೂ ಅವರು ಅದು ಹೇಗೊ ಅವಕಾಶ ಕಲ್ಪಿಸಿಕೊಂಡು ಕನ್ನಡದ ಒಲವು ತುಂಬಿ ಹರಿಯುವಂತೆ ಮಾತನಾಡುತ್ತಿದ್ದರು.

ಲೂಯಿ ರೈಸರ ನಿಧನದ ಸುದ್ದಿ ತಿಳಿದು ಪ್ರಬುದ್ಧ ಕರ್ನಾಟಕದಲ್ಲಿ ಟಿಪ್ಪಣಿ ಬರೆಯುತ್ತಾ ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದು ಅದರ ಉಪ್ಪನ್ನು ಮಣಗಟ್ಟಲೆ ತಿಂದವನೂ ಕನ್ನಡ ದೇಶಕ್ಕೆ ಇಷ್ಟು ಉಪಕಾರವನ್ನು ಮಾಡಿರುವುದು ಅಪರೂಪ ವೆಂದು ಉದ್ಗರಿಸಿದರು. ರೈಸ್ ಅವರು ಇಂಗ್ಲೆಂಡಿನಲ್ಲಿ ಮೃತ್ಯುಶಯ್ಯೆಯಲ್ಲಿ ಪವಡಿಸಿರುವಾಗ ಕನ್ನಡ ನಾಡಿನಿಂದ ಹೋದವರೊಬ್ಬರು ಸೌಜನ್ಯ ಸಭ್ಯತೆಗಳಿಂದ ಇಂಗ್ಲಿಷಿನಲ್ಲಿ ಮಾತನಾಡತೊಡಗಿದರು. ಆಗ ರೈಸರು 'ಇಂಗ್ಲಿಷ್ ಇರಲಿ, ದಯವಿಟ್ಟು ಕನ್ನಡದಲ್ಲಿಯೇ ಮಾತನಾಡಿ, ಅದನ್ನು ಕೇಳಬೇಕೆಂದು ಆಸೆಯಾಗಿದೆ 'ಆಹಾ ಕನ್ನಡ! ಎಷ್ಟು ಮಧುರ, ಎಷ್ಟು ಮಧುರ!' ಎಂದು ಆನಂದಿಸಿದರು. ಈ ಒಂದು ಪ್ರಸಂಗವನ್ನು ವಿವರಿಸುತ್ತಾ 'ಕನ್ನಡದ ಮೇಲೆ ಕನ್ನಡಿಗರಿಗೆ ಈ ಅಭಿಮಾನವಿದೆಯೇ?' ಎಂದು ಕೃಷ್ಣಶಾಸ್ತ್ರಿಗಳು ಗದ್ಗದಿಸಿದರು.

ಶಿವಮೊಗ್ಗದ ಕರ್ನಾಟಕ ಸಂಘಕ್ಕೊಂದು ಹೊಸದಾದ ಕಟ್ಟಡ ಪ್ರಾರಂಭ ವಾದಾಗ ಅದನ್ನು 'ಕನ್ನಡಕ್ಕೆ ಕಟ್ಟಿಕೊಟ್ಟ ಒಂದು ಗುಡಿ'ಯೆಂದು ಕರೆದು ಕನ್ನಡ ನಾಡಿನ ಮಿಕ್ಕ ಕರ್ನಾಟಕ ಸಂಘಗಳೂ ಹೀಗೇ ಕೆಲಸ ಮಾಡಿ ಯೋಗ್ಯತೆ ಮಾನ್ಯತೆಗಳನ್ನು ಪಡೆಯಲೆಂದೂ, ಕನ್ನಡ ಜನ ಬೆಳೆದು ಮುಂದೆ ಬರಲೆಂದೂ ಪ್ರಾರ್ಥಿಸಿದರು. ಕನ್ನಡಿಗರು ಯಾರೇ ಉನ್ನತ ಉದ್ದೆಗಳನ್ನು ಪಡೆದರೂ ಅದು ತಮಗೇ ದೊರೆತಂತೆ ಅವರು ಸಂತೋಷಿಸಿದರು. ರಾಷ್ಟ್ರಕವಿ ಕುವೆಂಪುರವರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದಾಗ ಅವರು ಆನಂದಿಸಿ ತಾವೇ ಸ್ಥಾನಪತಿಗಳಾದಂತೆ ಸುಖಿಸಿದರು. ಮುಂದೆ ಕುವೆಂಪುರವರನ್ನು ಮೈಸೂರು ಸರಕಾರ ರಾಷ್ಟ್ರಕವಿಗಳೆಂದು ಕರೆದು ಗೌರವಿಸಿ ಪ್ರಶಸ್ತಿಪ್ರದಾನ ಸಮಾರಂಭ ಏರ್ಪಡಿಸಿದಾಗ ಶಾಸ್ತ್ರಿಗಳು ಸಭೆಗೆ ಬಂದು ಮುಂಭಾಗದಲ್ಲಿ ಕುಳಿತು, ವೇದಿಕೆ ಹತ್ತುತ್ತಿದ್ದ ಕುವೆಂಪುರವರನ್ನು ಬಾಯ್ತುಂಬ ಮಾತನಾಡಿಸಿ ಸಂತೋಷ ವ್ಯಕ್ತಪಡಿಸಿದರು. ಕನ್ನಡದ ಪುಣ್ಯದಿಂದ ಕನ್ನಡಿಗರಾದ ಕನ್ನಡದ ಉತ್ಕಟ ಅಭಿಮಾನಿಗಳಾದ ಕುವೆಂಪುರವರು ಅನೇಕಾನೇಕ ಪದವಿಪ್ರಶಸ್ತಿಗಳಿಗೆ ಪಾತ್ರರಾಗ ಲೆಂದು ಶಾಸ್ತ್ರಿಗಳು ಅಂತಃಕರಣಪೂರ್ವಕವಾಗಿ ಬಯಸಿದರು, ಹಾರೈಸಿದರು.

ಕೃಷ್ಣಶಾಸ್ತ್ರಿಗಳಿಗೆ ೧೯೫೭ರಲ್ಲಿ ಮೈಸೂರಿನ ಕ್ರಾಫರ್ಡ್ ಭವನದಲ್ಲಿ ಕುವೆಂಪು ರವರ ಅಧ್ಯಕ್ಷತೆಯಲ್ಲಿ ಅರ್ಪಿಸಿದ ಸಮಾರಂಭ ನನಗೆ ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ. ಆ ಗ್ರಂಥವನ್ನು ಅವರು ಸಂತೋಷದಿಂದ ಸ್ವೀಕರಿಸುತ್ತಾ "ವಿಶ್ವವಿದ್ಯಾನಿಲಯದ ಉನ್ನತಾಧಿಕಾರಿಗಳಾದ ಡಾ. ಕೆ. ವಿ. ಪುಟ್ಟಪ್ಪನವರು

ಈ ಸಾಹಿತ್ಯರತ್ನಮಾಲೆಗೆ ತಮ್ಮದೊಂದು ರತ್ನವನ್ನು ಸೇರಿಸಿ, ತಾವೇ ಸಾಕ್ಷಾತ್ತಾಗಿ ಬಂದು ನನ್ನ ಹತ್ತಿರ ಕುಳಿತು ಅದನ್ನು ನನ್ನ ಕೊರಳಿಗೆ ಹಾಕಿದ್ದಾರೆ. ಇದರ ಮುಂದೆ ಯಾವ ಧನಕನಕಗಳು ಬಂದಾವು" ಎಂಬುದಾಗಿ ತುಂಬು ಅಭಿಮಾನದಿಂದ ಘೋಷಿಸಿದ್ದಾರೆ. ಈ ಉದ್ಘೋಷದ ಹಿನ್ನೆಲೆ ಅವರ ನಿರ್ಮಲವೂ ಅಪೂರ್ವವೂ ಆದ ಅಪಾರ ಶಿಷ್ಯವಾತ್ಸಲ್ಯ. ಅವರು ಎಂದೂ ಇಂಥ ಶಿಷ್ಯವಾತ್ಸಲ್ಯಪ್ರಪೂರ್ಣ ರಾಗಿಯೇ ಶೋಭಿಸಿದ್ದಾರೆ. ಪುಟ್ಟಪ್ಪನವರಿಗೆ ಭಾರತ ಸರಕಾರದ ಕೇಂದ್ರ ಸಾಹಿತ್ಯ ಪರಿಷತ್ತಿನಿಂದ ಬಹುಮಾನ ಬಂದ ಸಂದರ್ಭದಲ್ಲಿ, ಕನ್ನಡ ಸಾಹಿತ್ಯಪರಿಷತ್ತು ಬೆಂಗಳೂರಿನಲ್ಲಿ ೧೯೫೫ರಲ್ಲಿ ಏರ್ಪಡಿಸಿದ ಸಮಾರಂಭದಲ್ಲಿ ಅವರು ಆಡಿದ ಮಾತುಗಳೇ ಅವರು ಶಿಷ್ಯವಾತ್ಸಲ್ಯದ ಆಳವನ್ನು ಸಾರುವ ದಿವ್ಯಸಾಕ್ಷಿ. "ಕೇಂದ್ರ ಸರಕಾರ ಕುವೆಂಪುರವರಿಗೆ ಬಹುಮಾನವನ್ನಿತ್ತು ಉಪಾಧ್ಯಾಯವರ್ಗಕ್ಕೂ, ಮೈಸೂರು ವಿಶ್ವವಿದ್ಯಾನಿಲಯದ ಆಧುನಿಕ ಕನ್ನಡ ಕವಿಕುಲಕ್ಕೂ ಗೌರವ ಕೊಟ್ಟಿದೆ. ಈ ಶತಮಾನದ ಆದಿಯಿಂದಲೂ ಕನ್ನಡದ ಏಳುಬೀಳುಗಳನ್ನು ನೋಡುತ್ತಿರುವ ನಮ್ಮಂಥವರಿಗೆ ಇದೊಂದು ಅಪೂರ್ವವಾದ ಶುಭಸಂದರ್ಭ ವಾಗಿದೆ"–ಎಂದು ಅವರು ಉಬ್ಬಿ ಸಂತೃಪ್ತಿ ಸಮಾಧಾನ ಸಂತೋಷದ ಮಾತು ಗಳನ್ನು ತ್ರಿಕರಣಪೂರ್ವಕ ಆಡಿದ್ದಾರೆ.

ಕುವೆಂಪುರವರಂಥ ಮಹಾಕವಿಗಳು ಕನ್ನಡದಲ್ಲಿ ಅವತರಿಸಬೇಕಾದರೆ ಕನ್ನಡಿಗರು ಕನ್ನಡಕ್ಕೆ ಪ್ರೋತ್ಸಾಹಕೊಡಬೇಕು. ಏಕೆಂದರೆ "ಶಿಕ್ಷಣಕ್ರಮ ದಲ್ಲಿಯೂ ವ್ಯವಹಾರದಲ್ಲಿಯೂ ಕನ್ನಡಕ್ಕೆ ತಕ್ಕ ಸ್ಥಾನಮಾನಗಳು ದೊರೆಯ ದಿದ್ದರೆ, ಅದು ಮೂಲೆಗುಂಪಾಗಿ, ಮುಂದಿನ ತಲೆಮಾರಿನ ಹೊತ್ತಿಗೆ ಕನ್ನಡದಲ್ಲಿ ಬರೆಯುವವರು ಓದುವವರೇ ಇಲ್ಲದೆ ಹೋಗಬಹುದು; ಬಹುಮಾನ ಕೊಡುತ್ತೇ ವೆಂದು ಮುಂದೆ ಬಂದು ಪಂಜುಹಿಡಿದುಕೊಂಡು ಹುಡುಕಿದರೂ ಪುಟ್ಟಪ್ಪನವರಂಥ ಮೇಲುಮಟ್ಟದ ಕವಿ ದೊರೆಯದಂತಾಗಬಹುದು . . . . ಕನ್ನಡವಕ್ಕಿ ಹೊನ್ನಿನ ಪಂಜರದಲ್ಲಿ ಸೆರೆಯಾಗಿ ಕುಳಿತರೆ ಅದಕ್ಕೆ ಮೋಕ್ಷವಿಲ್ಲ." ಶಿಷ್ಯರನ್ನು ಬಿಚ್ಚು ಮನಸ್ಸಿನಿಂದ ಪ್ರಶಂಸಿಸುವಾಗಲೂ ಕನ್ನಡದ ಮುನ್ನಡೆಗಾಗಿ ನಾಲ್ಕು ಮಾತು ಗಳನ್ನು ಹೇಳದೆ ಬಿಡುತ್ತಿರಲಿಲ್ಲ. ಕೃಷ್ಣಶಾಸ್ತ್ರಿಗಳು 'ಹೆಬ್ಬೆರಳು' ಕೇಳುವ ಗುರುಗಳಾಗಿರಲಿಲ್ಲ. ಪರಮೇಶ್ವರ ಭಟ್ಟರು ಒಮ್ಮೆ ಶಾಸ್ತ್ರಿಗಳಿಗೆ ಪತ್ರ ಬರೆದು 'ನಾನು ಏಕಲವ್ಯನಂತೆ, ನನ್ನನ್ನು ಆಶೀರ್ವದಿಸಿರಿ' ಎಂದು ಪ್ರಾರ್ಥಿಸಿದರು. ಅದಕ್ಕೆ ಶಾಸ್ತ್ರಿಗಳ ಉತ್ತರ ಮನೋಜ್ಞ, ಹೃದಯಂಗಮ: "ನೀವು ಏಕಲವ್ಯನಾಗು ವುದು ಬೇಡ. ನಿಮ್ಮ ಹೆಬ್ಬೆರಳು ನಿಮಗೇ ಉಳಿದು ಕನ್ನಡ ಸಾರಸ್ವತಕ್ಕೆ ಸೇವೆ ಸಲ್ಲಿಸಿ. ಸರಸ್ವತಿ ಪ್ರಸನ್ನಳಾಗಲಿ" ಎಂಬರ್ಥದ ಉತ್ತರ ಶಾಸ್ತ್ರಿಗಳದು.

ಕನ್ನಡಮಕ್ಕಳಿಗೆ ವಿದ್ಯೆ ಮಾತೃಭಾಷೆಯ ಮೂಲಕವೇ ಆಗಬೇಕೆಂಬುದು ಕೃಷ್ಣಶಾಸ್ತ್ರಿಗಳ ಅಚಲವಾದ ಅಭಿಪ್ರಾಯವಾಗಿತ್ತು. ಕನ್ನಡವೇ ಶಿಕ್ಷಣ

ಮಾಧ್ಯಮವೆಂದು ಆಜ್ಞೆಯಾದರೆ ಅದರ ಮರುವರುಷವೇ ನೂರಾರು ಕನ್ನಡಗ್ರಂಥಗಳು ಜ್ಞಾನವಿಜ್ಞಾನಗಳ ಎಲ್ಲ ಶಾಖೆ ಮತ್ತು ವಿಷಯಗಳಿಗೆ ಸಂಬಂಧಿಸಿದಂತೆ ರಚಿತವಾಗುತ್ತವೆ. "ಕನ್ನಡಸಾಹಿತ್ಯವನ್ನು ಬೆಳೆಸಬೇಕೆಂಬ ಭಾವವಿರುವ ತನಕ ಕನ್ನಡಿಗರಾದ ನಾವು ದೇಶವನ್ನೂ ಭಾಷೆಯನ್ನೂ ಕೈ ಬಿಡಬಾರದು, ಅಲಕ್ಷ್ಯ ಮಾಡಬಾರದು. ಮನೆಯಲ್ಲಿ ವೃದ್ಧರಾದ ತಾಯಿತಂದೆಗಳು ಹೊಟ್ಟೆಗಿಲ್ಲದೆ ಹರುಕುಬಟ್ಟೆಯನ್ನುಟ್ಟುಕೊಂಡು ತಿರುಗಾಡುತ್ತಿರಬೇಕಾಗ ಮೈಸೂರು ದೇಶವೆಲ್ಲ ನಮ್ಮದೆಂದು ಹೇಳುತ್ತ ದಾನಧರ್ಮಗಳಿಗೆ—ಅವು ಎಷ್ಟೇ ಆವಶ್ಯಕವಾಗಿರಲಿ—ಚಂದಾಕೊಡುವುದಕ್ಕೆ ಹೋಗಬಾರದು" ಎಂಬುದು ಅವರ ನಿರ್ಧಾರವಾಗಿತ್ತು.

ಕರ್ನಾಟಕದಲ್ಲಿ ಹಲವಾರು ಭಾಷೆಗಳನ್ನಾಡುವವರು ಇರುವಾಗ ಕನ್ನಡಕ್ಕೇ ಪ್ರಾಶಸ್ತ್ಯಕೊಡುವುದು ಹೇಗೆಂದು ಪ್ರಶ್ನಿಸುವ ಅಥವಾ ಅಪೇಕ್ಷಿಸುವವರಿಗೆ ಅವರ ಹರಿತವಾದ, ಆದರೆ ಸಮಂಜಸವಾದ ಉತ್ತರ ಸದಾ ಸಿದ್ಧವಾಗಿರುತ್ತಿತ್ತು. ಈ ಬಗೆಯ ಕೂಗನ್ನು ಕುರಿತು ಅವರು, ಹೊಟ್ಟೆಯಲ್ಲಿ ಹುಟ್ಟಿ ತಂದೆತಾಯಿ ಹಾಗೂ ಮನೆತನದ ಹೆಸರು ಹೇಳುವ ಮಗನಿಗೆ ಅನ್ನ ಹಾಕುವಾಗ, ಭಿಕ್ಷಾನ್ನದ ಹುಡುಗರಿಗೆಲ್ಲಾ ಹೊಟ್ಟೆತುಂಬಿದೆಯೇ ಎಂದು ವಿಚಾರಮಾಡಿದಂತಿದೆಯೆಂದು ಅವರ ಉಪಮಾನವನ್ನಿತ್ತು ಉತ್ತರಿಸಿದ್ದಾರೆ. "ಸರ್ವೇಜನಾಸ್ಸುಖಿನೋಭವಂತು ಎಂಬ ಪಾರಮಾರ್ಥಿಕ ಬುದ್ಧಿಯು ಸ್ತುತ್ಯವಾದದ್ದೇ. ಆದರೆ ಕನ್ನಡ ದೇಶದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡದೇಹೋದರೆ ಮೆಕ್ಸಿಕೋ ದೇಶದವರೋ, ನ್ಯೂಜಿಲೆಂಡಿನವರೋ ಕೊಡುತ್ತಾರೆಯೇ? ಅಲ್ಲದೆ ಎಷ್ಟು ದೇಶಭಾಷೆಗಳಿಗಾದರೂ ಏಕೆ ಪ್ರಾಶಸ್ತ್ಯ ಕೊಡಬೇಕು?....ಕಳೆಕೀಳದಿದ್ದರೆ ಪೈರು ಹೇಗೆ ಬೆಳೆದೀತು?" ಎಂದು ಮರುಪ್ರಶ್ನೆಗಳಿಂದ ಮರುಪಕ್ಷದ ಮಹಾನುಭಾವರನ್ನು ಅವರು ಮೂಕರನ್ನಾಗಿ ಮಾಡಿದ್ದರು.

ಪ್ರಾಂತ ಭಾಷೆಗಳಲ್ಲಿ ಪಾಠಪ್ರವಚನಗಳನ್ನು ನಡಸುವುದಕ್ಕೆ ಇರುವ ಪ್ರತಿಬಂಧಕಗಳನ್ನೂ, ಅಡಚಣೆಗಳನ್ನೂ ಮುಂದುಮಾಡಿ ಮಾತನಾಡುತ್ತಿದ್ದ ಎದುರು ಪಕ್ಷದವರಿಗೆ ಶಾಸ್ತ್ರಿಗಳವರ ಚುರುಕು ಉತ್ತರ ನೋಡಿ: 'ನಿಜ, ಯಾವುದಕ್ಕೆ ಬಾಧಕಗಳಿಲ್ಲ? ಊಟ ಮಾಡುವುದಕ್ಕಿಲ್ಲವೆ? ಔತಣದ ಊಟಮಾಡುತ್ತಿರುವಾಗ ವೈದ್ಯರು ಎದುರಿಗೆ ಬಂದು ವಂಕಾಯಿವಾತಂ, ತೆಂಕಾಯಿಪಿತ್ತಂ ಎಂದು ದೋಷೋದ್ಘಾಟನಕ್ಕೆ ಕುಳಿತರೆ ದಿವ್ಯಭೋಜನವನ್ನು ಬಿಟ್ಟು ಎದ್ದು ಹೋಗಿಬಿಡೋಣವೆನ್ನಿಸುವುದು....ಮುಂದೆ ಬರುವ ಅಥವಾ ಬರಬಹುದೆಂದು ತಿಳಿದುಕೊಂಡಿರುವ ತೊಂದರೆಗಳನ್ನು ಯೋಚಿಸುತ್ತ ಕುಳಿತು ಕರ್ತವ್ಯವನ್ನು ದಬ್ಬುತ್ತಿರುವುದು ವಿವೇಕಿಗಳು ಮಾಡತಕ್ಕ ಕೆಲಸವಲ್ಲ." ಹೀಗೆ ದೇಶಭಾಷೆಯಾದ ಕನ್ನಡಕ್ಕೆ ತಕ್ಕ ಸ್ಥಾನಗೌರವಗಳನ್ನು ಕನ್ನಡ ನಾಡಿನಲ್ಲಿ ಮೊಟ್ಟಮೊದಲು ಕೊಡಬೇಕೆಂಬ ದೃಢಸಂಕಲ್ಪ ಅವರದು.

"ಹಿಂದೆ ಪ್ರೌಢಶಾಲೆಗಳಿಗೆ ಕನ್ನಡದ ಮೂಲಕ ಬೋಧನೆಯಾಗಬೇಕೆಂದು

ನಿರ್ಧರವಾದಾಗ ಆರು ತಿಂಗಳೊಳಗೆ ಎಲ್ಲ ಶಾಸ್ತ್ರಗಳ ವಿಚಾರವಾಗಿಯೂ ಪಠ್ಯ ಗ್ರಂಥಗಳು ಆದುವು, ಅಚ್ಚಾದುವು, ವಿದ್ಯಾರ್ಥಿಗಳ ಕೈಗೆ ಬಂದವು. ನಾಳೆ ಕಾಲೇಜಿಗೂ ಕನ್ನಡವೇ ಬೋಧಕ ಭಾಷೆಯಾಗಬೇಕೆಂದು ನಿರ್ಧಾರವಾಗಲಿ, ಆರು ತಿಂಗಳಲ್ಲದಿದ್ದರೆ ಒಂದು ವರ್ಷದಲ್ಲಿ ಬೇಕಾದ ಪಠ್ಯಪುಸ್ತಕಗಳೆಲ್ಲ ಬಂದಾವು. ಕನ್ನಡಿಗರಲ್ಲದವರು 'ಪಠ್ಯಪುಸ್ತಕಗಳೆಲ್ಲಿವೆ?' ಎಂದು ಆಕ್ಷೇಪಣೆ ಹೂಡುವರೇ ಹೊರತು, ಕನ್ನಡಿಗರು ಎಂದಿಗೂ ಹೂಡುವಂತಿಲ್ಲ." ಶಾಸ್ತ್ರಿಗಳು ಈ ಮಾತು ಹೇಳಿ ಇಪ್ಪತ್ತೇಳು ವರ್ಷಗಳಾದುವು. ಈ ಕಾಲು ಶತಮಾನದ ಅವಧಿಯಲ್ಲಿ ವಿಜ್ಞಾನ ವಿಷಯವನ್ನು ಕುರಿತ ನೂರಾರು ಹೊತ್ತಗೆಗಳು ಕನ್ನಡದಲ್ಲಿ ಬಂದಿವೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವೊಂದೇ ಈ ದಿಕ್ಕಿನಲ್ಲಿ ನಡೆದಿರುವ ಅದ್ಭುತ ಸಾಧನೆಯ ಸಂಕೇತವಾಗಿ ನಿಂತಿದೆ. ಆದರೂ ಕೃಷ್ಣಶಾಸ್ತ್ರಿಗಳ ಆಕಾಂಕ್ಷೆ ಇನ್ನೂ ಸಾಧಿತವಾಗಬೇಕಾದ ಗುರಿಯಾಗಿ ಉಳಿದಿರುವುದು ಶೋಚನೀಯವಾಗಿದೆ.

ವಿದ್ವಾಂಸರೂ ತಮ್ಮ ಜ್ಞಾನವನ್ನು ಸರಿಯಾದ ರೀತಿಯಲ್ಲಿ ಸಾರ್ಥಕಪಡಿಸ ಬೇಕಾದರೆ ತಾವು ತಿಳಿದ ಜ್ಞಾನವನ್ನು ದೇಶಭಾಷೆಗಳ ಪ್ರಣಾಲಿಯಲ್ಲಿ ಹರಿಸಬೇಕೆಂದು ಶಾಸ್ತ್ರಿಗಳು ಅಭಿಪ್ರಾಯ ಪಟ್ಟಿದ್ದರು. ದಿವಂಗತ ಪ್ರಾಕ್ತನವಿಮರ್ಶವಿಚಕ್ಷಣ ರಾವ್ ಬಹದ್ದೂರ್ ರಾ. ನರಸಿಂಹಾಚಾರ್ಯರು ಕನ್ನಡದಲ್ಲಿ ಕವಿಚರಿತೆಯನ್ನು ಬರೆದು ದನ್ನು ಕೃಷ್ಣಶಾಸ್ತ್ರಿಗಳು ಮುಕ್ತಕಂಠದಿಂದ ಕೊಂಡಾಡುತ್ತಾ, "ಶಾಸನದ ಇಲಾಖೆಯಲ್ಲಿ ಕೆಲಸಮಾಡುವಾಗ ಸಿಕ್ಕಿದ ಸಾಮಗ್ರಿಗಳ ಜೊತೆಗೆ ತಾವು ಮೈ ಮುರಿದು ಗಳಿಸಿದ ಸಂಗತಿಗಳನ್ನು ಜೋಡಿಸಿಕೊಂಡು ಅವರು ವಿಸ್ತಾರವಾದ ಕವಿ ಚರಿತ್ರ ಗ್ರಂಥಗಳನ್ನು ಬರೆಯಬೇಕೆಂದು ಅದರಲ್ಲಿಯೂ ಕನ್ನಡದಲ್ಲಿ ಬರೆಯ ಬೇಕೆಂದು ಹೊರಟದ್ದು ಮ. ಆಚಾರ್ಯರ ಲೋಕೋಪಕಾರ ಬುದ್ಧಿಯನ್ನು ವ್ಯಕ್ತ ಗೊಳಿಸುತ್ತದೆ. ಎಂದಿಗೆ ವಿದ್ವಾಂಸರೆಲ್ಲರೂ ಇಂತಹ ಬುದ್ಧಿಯಿಂದಲೇ ತಮತಮಗೆ ಸಾಧ್ಯವಾದ ವಿಚಾರಗಳಲ್ಲಿ ಉತ್ತಮವಾದ ಅಂಶಗಳನ್ನು ತಮ್ಮ ಮಾತೃಭಾಷೆಯಲ್ಲಿ ತಿಳಿಸಬೇಕೆಂದು ಹೊರಡುವರೋ ಅಂದಿಗೆ ನಮ್ಮ ದೇಶವು ಕಣ್ಣುಬಿಟ್ಟಿತೆಂದು ಹೇಳಬಹುದು. ಆರು ತಿಂಗಳ ಮಕ್ಕಳೂ ತಮ್ಮ ತಾಯಿಯ ಗುರುತನ್ನು ಮನಸ್ಸಿನಲ್ಲಿ ಅಚ್ಚಳಿಯದಂತೆ ಇಟ್ಟುಕೊಂಡಿದ್ದು ಆ ಚಹರೆಯನ್ನು ಕಂಡರೆ ನಲಿದಾಡುವುವು. ಪ್ರಕೃತದಲ್ಲಿ ನಮ್ಮ ಜನರ ಸ್ಥಿತಿಯು ಶಿಶುಗಳ ಸ್ಥಿತಿಗಿಂತಲೂ ಕಡೆಯಾಗಿದೆ. ನಮ್ಮ ತಾಯಿಯನ್ನು ನಾವು ಗುರುತಿಸಲೂ ಆಗದವರು ಆಕೆಯ ಸೇವೆಯನ್ನು ಮಾಡುವು ದೆಂತು?"

ಕೃಷ್ಣಶಾಸ್ತ್ರಿಗಳವರಲ್ಲಿದ್ದ ಕನ್ನಡ ನಾಡು ಮತ್ತು ನುಡಿಗಳ ಉತ್ಕಟ ಅಭಿ ಮಾನವನ್ನು ಕೆಲವು ಕನ್ನಡಿಗರೇ ಕಟುವಾಗಿ ಟೀಕಿಸಿದ್ದುಂಟು. ಒಮ್ಮೊಮ್ಮೆ ಮರ್ಯಾದೆಯ ಎಲ್ಲೆಯನ್ನು ಮೀರಿ ವೈಯಕ್ತಿಕ ದೂಷಣೆಗೆ ತೊಡಗಿದ ರಾವಣೇಶ ಶನೇಶ್ವರರಿಗೆ ಮತ್ತು ಅಂಥವರ ಚೇಲ ಕುಚೇಲರಿಗೆ ಕನ್ನಡಕ್ಕೂ ಕನ್ನಡಿಗರಿಗೂ

ಇರುವ ದುರ್ಬಲತೆಯನ್ನೂ, ಅಲ್ಪವ್ಯಾಪ್ತಿಯನ್ನೂ, ಸೋದಾಹರಣಪೂರ್ವಕವಾಗಿ ತೋರಿಸಿಕೊಟ್ಟರು. "ನನ್ನ ಭಾಷಣದಿಂದ ಅಲ್ಲೊಂದು ಇಲ್ಲೊಂದು ವಾಕ್ಯಗಳನ್ನು ಅವುಗಳ ಪ್ರಕರಣದಿಂದ ತೆಗೆದು ಬೇರೆಮಾಡಿಟ್ಟು ಖಂಡಿಸಿರುವುದು, ಹಸುವಿನ ಕೊಂಬು ಗೊರಸುಗಳನ್ನು ತೆಗೆದು ಮುಂದಿಟ್ಟು 'ಇಗೋ ನೋಡಿ ಹಸು ಹಾಯುತ್ತದೆ, ತುಳಿಯುತ್ತದೆ; ಇದೇ ಅದರ ಉಪಯೋಗ' ಎಂದು ಹೇಳುವಂತಿದೆ"–ಎಂಬ ಉತ್ತರದಿಂದ ಕೂಪಮಂಡೂಕಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದರು.

ಕೃಷ್ಣಶಾಸ್ತ್ರಿಗಳ ಕನ್ನಡದ ನಿಲುವು ಶಾಸ್ತ್ರೀಯ, ವೈಜ್ಞಾನಿಕ ಹಾಗೂ ತುಂಬ ತರ್ಕಬದ್ಧ. ಅಲ್ಲಲ್ಲಿ ಅವರು ನಿಷ್ಠುರವಾಗಿ, ಕಟುವಾಗಿ ಆಡಿರುವುದು ನಿಜ. ಆದರೆ ಅವರು ನಿಷ್ಠುರವಾಗಿ ನುಡಿದರೂ ನ್ಯಾಯವನ್ನೇ ನುಡಿದಿದ್ದಾರೆ; ಕಟುವಾಗಿ ಟೀಕಿಸಿದ್ದರೂ ಕಟು ಸತ್ಯವನ್ನೇ ತಿಳಿಸಿದ್ದಾರೆ. ೧೯೪೦ರಲ್ಲಿ ತಳೆದ ವಿಚಾರಧಾರೆಯನ್ನು, ಅದು ಸತ್ಯವೆಂದು ತೋರಿದುದರಿಂದ ೧೯೬೦ರಲ್ಲೂ ಮಾರ್ಪಾಟು ಮಾಡಲಿಲ್ಲ. "ನನ್ನ ಒಂದೆರಡು ಭಾಷಣ ಲೇಖನಗಳಲ್ಲಿ ಪ್ರಸ್ತಾಪಿಸಿರುವ ಭಾಷೆಗಳ ಸಮಸ್ಯೆ ಇಂದೂ ಹಾಗೇ ಇದೆ. ಕೇಂದ್ರ ಸರ್ಕಾರಕ್ಕೆ ಈಚೆಗೆ ಇಂಗ್ಲಿಷಿನ ಕಡೆಗೆ ಸ್ವಲ್ಪ ಒಲವರವಿರುವಂತೆ ತೋರುತ್ತದೆ. ಹಿಂದಿಯ ಬಗ್ಗೆ ಹಿಡಿತ ಸ್ವಲ್ಪವೂ ಸಡಿಲಿದಂತೆ ಕಾಣುವುದಿಲ್ಲ. ಪ್ರಾಂತೀಯ ಭಾಷೆಗಳು ಎಚ್ಚೆತ್ತುಕೊಳ್ಳುತ್ತಿವೆ. ನಮ್ಮ ಸುತ್ತಮುತ್ತ ತಮಿಳರೂ ಆಂಧ್ರರೂ ನಿಶ್ಯಬ್ದವಾಗಿ ತಮ್ಮ ತಮ್ಮ ಭಾಷೆಗಳನ್ನು ಬಲಪಡಿಸಿಕೊಳ್ಳುತ್ತಿದ್ದಾರೆ. ಕನ್ನಡಿಗರೇ ಮೀನಮೇಷ ಎಣಿಸುತ್ತಿದ್ದಾರೆ. ನಾಲ್ಕು ಕಡೆಯಿಂದಲೂ ಒತ್ತಡ ಬಂದರೆ ಕೊನೆಗೆ ನಿರ್ವಾಹವಿಲ್ಲದೆ ಒಪ್ಪಿಕೊಳ್ಳುತ್ತಾರೆಂದು ತೋರುತ್ತದೆ." ಹೌದು, ಇಂದು ನಾಲ್ಕೂ ಕಡೆಯಿಂದ ಒತ್ತಡಕೊಡುವ ಕಾರ್ಯವನ್ನು ತ್ವರಿತಗತಿಯಲ್ಲಿ ನಡಸಬೇಕಾಗಿದೆ.

ಕನ್ನಡವನ್ನು ಕುರಿತ ಅವರ ಈ ಅವ್ಯಾಜಪ್ರೇಮಕ್ಕೆ ಕಾರಣ ಖಚಿತತೆ, ಪೂರ್ವಾಪರ ವಿವೇಚನೆಯ ಚಿಂತನಮಂಥನ. ಅವರಿಗೆ ಕನ್ನಡದ ದೀಕ್ಷೆಯನ್ನು ಕೊಟ್ಟವರು ಅವರ ವಿದ್ಯಾಗುರುಗಳಾದ ಬಿ. ಎಂ. ಶ್ರೀಯವರು. ಕೃಷ್ಣಶಾಸ್ತ್ರಿಗಳ ಕನ್ನಡ ಪ್ರೇಮ ಎಷ್ಟು ಸಹಜವಾಗಿತ್ತೋ ಅಷ್ಟೇ ಸತ್ಯವಾಗಿತ್ತು; ಎಷ್ಟು ಸದೃಢವಾಗಿತ್ತೋ ಅಷ್ಟೇ ಮಹತ್ತರವಾಗಿತ್ತು. ಅಲ್ಲದೆ ಅವರದು ಉದಾತ್ತವಾದ ಉನ್ನತ ಮಟ್ಟದ ಅಭೀಪ್ಸೆಯಾಗಿತ್ತು. ಮಾನಸ ಗಂಗೋತ್ರಿಯನ್ನು ಕುರಿತು 'ಈ ಗಂಗೋತ್ರಿಯ ಗಂಗೆ ಎಲ್ಲಾ ಮಾಸಗಳಲ್ಲಿಯೂ ಕಾವೇರಿಯೊಡನೆ ಬೆರೆದು ಪ್ರವಹಿಸಿ ಕನ್ನಡ ಜನದ ಸ್ನಾನಪಾನಗಳಿಗೆ ಅನುವಾಗಲಿ! ಸಾರಸ್ವತ ಬೆಳೆ ಬೆಳೆಯಲಿ, ಜನತೆ ಬದುಕಲಿ, ನಾಡು ಪವಿತ್ರವಾಗಲಿ!' ಎಂದು ನುಡಿದು ಅಹೇತುಕವಾದ ಕನ್ನಡ ಪ್ರೇಮವನ್ನು ಕೋಡಿಹರಿಸಿದ್ದಾರೆ.

ಕನ್ನಡಕ್ಕಾಗಿ ನಿಷ್ಕಾಮಕರ್ಮಮಾಡಿದ ಕರ್ಮಯೋಗಿ ಕೃಷ್ಣಶಾಸ್ತ್ರಿಗಳ ಈ ಕಾರ್ಯನಿಷ್ಠೆ, ಉತ್ಸಾಹ, ಧೈರ್ಯ ಶ್ಲಾಘನೀಯವಾಗಿರುವಂತೆ ಎಲ್ಲ ಕಾಲಕ್ಕೂ

ಅನುಕರಣಯೋಗ್ಯವಾಗಿವೆ. ಕನ್ನಡದಲ್ಲಿ ಬರೆಯುವುದು ಹಾಗಿರಲಿ, ಮಾತನಾಡು ವುದೂ ಓದುವುದೂ ಅಪಮಾನ, ನಮ್ಮ ಗೌರವಕ್ಕೆ ಕುಂದು ಎಂದು ಜನ ಭಾವಿಸು ತ್ತಿದ್ದ ಅಂದಿನ ಕಾಲದಲ್ಲಿ, ನಾಲ್ಕು ದಶಕಗಳ ಹಿಂದೆ ಕನ್ನಡದ ಡಮರು ಡಿಂಡಿಮ ಗಳನ್ನು ಬಾರಿಸಿದರು; ಕನ್ನಡದ ಎಲ್ಲ ವಿರೋಧಿಗಳನ್ನು ತಮ್ಮ ಮಾತಿನ ಚಾಟಿ ಏಟಿನಿಂದ ಅಪ್ರತಿಹತರನ್ನಾಗಿ ಮಾಡಿದರು; ಕುಸಿಯುತ್ತಿದ್ದ ಕನ್ನಡವನ್ನು ಕೈಹಿಡಿದು ಊರೆಕೊಟ್ಟು ನಿಲ್ಲಿಸಿದರು. "ಹೆತ್ತತಾಯಿ ತನ್ನ ಏಕಮಾತ್ರಪುತ್ರ ನಲ್ಲಿ ತೋರುವ ನೈಜಪ್ರೇಮ, ಶಾಸ್ತ್ರಿಗಳಿಗೆ ಕನ್ನಡ ವಿಷಯದಲ್ಲಿ ಬೆಳೆದುಬಂದಿದೆ. ಕುಗ್ರಾಮಶಿಶುವಾಗಿ, ತೇಜೋಹೀನವಾಗಿ, ಬುನಾದಿಕಾಲದ ಜಾಡ್ಯಗಳ ಹೊಡೆತ ದಿಂದ ಬಡಕಲಾಗಿ ಮಾನಿತರ, ಸಭ್ಯರ, ರಸಿಕರ ದರ್ಶನಕ್ಕೇ ಅಂಜುತ್ತಿದ್ದ ಕನ್ನಡ ಶಿಶುವನ್ನು ಕೈಹಿಡಿದು ಜನರ ಬೆಂಬಲವನ್ನು, ಪ್ರೋತ್ಸಾಹವನ್ನು, ದುಡಿಮೆಯನ್ನು ಶಕ್ತಿಯನ್ನೂ ಪಡೆದು ಅದನ್ನು ಪೋಷಿಸಿ, ಅದಕ್ಕೆ ತಕ್ಕ ಸೌಂದರ್ಯವನ್ನು ವೀರ್ಯವನ್ನೂ ವ್ಯಾಪ್ತತೆಯನ್ನೂ ಕೊಟ್ಟು, ಅದನ್ನು ರಾಜಮಾನ್ಯವನ್ನಾಗಿ ಮಾಡಿದ ಕೀರ್ತಿ ಇತರ ಸಾಹಿತಿಗಳಿಗಿಂತಲೂ ಮಿಗಿಲಾಗಿ ಶಾಸ್ತ್ರಿಗಳಿಗೆ ಸಲ್ಲತಕ್ಕದ್ದು" (ಅಭಿವಂದನೆ, ೧೯೫೬, ಪುಟ. ೯).

ಕೃಷ್ಣಶಾಸ್ತ್ರಿಗಳು ಕನ್ನಡದ ಸೇವೆ ಮಾಡುವುದೇ ಮುಖ್ಯ ಜೀವಮಂತ್ರ ವಾಗಿಟ್ಟುಕೊಂಡು ದುಡಿದವರು. ಅಹರ್ನಿಶಿಯೂ ಕನ್ನಡದ ಕ್ಷೇಮಚಿಂತನೆಯಲ್ಲೇ ಹೊತ್ತು ಕಳೆದು ಹಣ್ಣಾದವರು. ಇಂದಲ್ಲ ಮುಂದೆ ದೇಶಭಾಷೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಬಂದೇ ಬರುತ್ತದೆಂದು ದೃಢವಾಗಿ ನಂಬಿದ್ದವರು. ಅವರು ನಿರಂತರ ವಾಗಿ ನಡಸಿದ ಕನ್ನಡ ವ್ಯವಸಾಯದ ಫಲ ಹಾಗೂ ಬೆವರಿನಬೆಲೆಯನ್ನು ಇಂದಿನ ಪೀಳಿಗೆಯವರಾದ ನಾವು ಅನುಭವಿಸಿ ಸುಖಿಸುತ್ತಿದ್ದೇವೆ. ಅವರು ಅಂದು ನೆಟ್ಟು ಹೋದ ಕನ್ನಡದ ತೆಂಗಿನಮರದಿಂದ ಇಂದು ನಾವು ತಿಳಿಯಾದ ಸ್ವಾದುವಾದ ಎಳನೀರು ಕುಡಿಯುತ್ತಿದ್ದೇವೆ. ಹೀಗಾಗಿ ಪ್ರಯತ್ನ, ಪರಿಶ್ರಮ ಅವರದು; ಫಲ, ಪ್ರಯೋಜನ ನಮ್ಮದು. ಜೇನುಗೂಡಿಗೆ ಕೈ ಇಟ್ಟು ಕಡಿಸಿಕೊಂಡವರು ಅವರು, ಜೇನುತುಪ್ಪ ಪಡೆದು ಸವಿಯುತ್ತಿರುವವರು ನಾವು.

ಕೃಷ್ಣಶಾಸ್ತ್ರಿಗಳಲ್ಲಿ ಕೀಳುತನವಾಗಲಿ, ಕುತ್ಸಿತವಾಗಲಿ ಇರಲಿಲ್ಲ. ಕೇವಲ ಕನ್ನಡದ ದೀಕ್ಷೆ ತಳೆದು ತುಂಬಿದ ಕೊಡವಾಗಿ ತಪಸ್ವಿಗಳಂತೆ ಬಾಳಿದರು. ಬಿ. ಎಂ. ಶ್ರೀಕಂಠಯ್ಯನವರನ್ನು ಹೊಸಗನ್ನಡದ ಕಣ್ವರೆಂದು ಕರೆದಿದ್ದಾರೆ. ಕೃಷ್ಣಶಾಸ್ತ್ರಿ ಗಳನ್ನು ಹೊಸಗನ್ನಡದ ವ್ಯಾಸರೆಂದು ಕರೆಯಬಹುದು. ಅವರನ್ನು ವ್ಯಾಸರೆಂದು ಕರೆಯುವುದು, ಹಲವು ದೃಷ್ಟಿಗಳಿಂದ ಅರ್ಥಗರ್ಭಿತವಾಗಿರುವುದಲ್ಲದೆ, ತುಂಬ ಔಚಿತ್ಯಪೂರ್ಣವಾಗಿದೆ. ವ್ಯಾಸರ ಪರಿಶುಭ್ರತೆ, ಪ್ರಾಮಾಣಿಕತೆ, ಪರಿಜ್ಞಾನ, ದೀರ್ಘಾಯುಸ್ಸು, ಸಾಹಿತ್ಯಶಕ್ತಿ, ನಿಷ್ಠೆ—ಮುಂತಾದ ಗುಣಗಳು ಇವರಲ್ಲಿ ಸಮಾವೇಶ ಗೊಂಡಿದ್ದುವು.

೬

ಕೃಷ್ಣಶಾಸ್ತ್ರಿಗಳು ಕನ್ನಡದಲ್ಲಿ ಸತ್ವಯುತವಾದ ಸಾಹಿತ್ಯವನ್ನು ಸೃಷ್ಟಿಸಿದವರ ಸಾಲಿಗೆ ಸೇರಿದವರು. ಉತ್ತಮವಾದ, ಶಾಶ್ವತವಾದ ಸಾಹಿತ್ಯ ರಚಿಸಬೇಕೆಂಬುದು ಅವರ ಆದರ್ಶವಾಗಿತ್ತು. "ತಮಗೆ ಸಮಾನವಿಲ್ಲವೆಂದು ಮೆರೆಯುವ ಚಕ್ರಾಧೀಶ್ವರರು ಹೋಗುವರು. ಅವರ ವಿಸ್ತಾರವಾದ ಚಕ್ರಾಧಿಪತ್ಯಗಳು ಉರುಳಿ ಹೋಗುವುವು. ಆದರೆ ಕಾಲನು ಇವೆಲ್ಲವುಗಳನ್ನು ಒಂದೊಂದಾಗಿ ತುಳಿದು ನುಚ್ಚು ನೂರು ಮಾಡುತ್ತಾ ಹೋಗುವಾದ ಉತ್ತಮವಾದ ಸಾಹಿತ್ಯರತ್ನಗಳಿಗೆ ಮಾತ್ರ ಮನಸೋತು ಅವುಗಳನ್ನು ಆರಿಸಿ ಮಾಲೆಕಟ್ಟಿ ಕಂಠದಲ್ಲಿ ಧರಿಸಿಕೊಂಡು ಹೋಗುವನು. ಅಲ್ಲದೆ ಸಾಹಿತ್ಯವು ಮನ್ಮಥನ ಹಸ್ತಗತವಾದ ಕುಸುಮಾಯುಧದಂತೆ ಸುಕೋಮಲವೂ ಮನೋಹರವೂ ಆದ ವಿಶ್ವವಿಜಯಿಯಾದ ಒಂದು ಅಪೂರ್ವ ಆಯುಧ. ಇದನ್ನು ಗ್ರಂಥಕರ್ತರು ಸರಿಯಾಗಿ ಉಪಯೋಗಿಸಿದರೆ ಪರಿಣಾಮದಲ್ಲಿ ನಿರ್ಘೃಣವಾದ ಉಕ್ಕಿನಕತ್ತಿಯನ್ನು ಹಿಡಿದು ಮಾಡುವ ಯುದ್ಧಕ್ಕಿಂತಲೂ ಹೆಚ್ಚು ಉಪಯೋಗವೂ ಮಂಗಳವೂ ಉಂಟಾಗಬಹುದು." ಕೃಷ್ಣಶಾಸ್ತ್ರಿಗಳವರ ಈ ಮಾತುಗಳು ಅವರಂಥವರ ಉತ್ತಮಮಟ್ಟದ ಬರೆಹಕ್ಕೆ ಮಾತ್ರ ಅನ್ವಯಿಸುತ್ತದೆಯೇ ಹೊರತು ಕಳಪೆಯಾದ ಕಸಕಡ್ಡಿಗಳಿಗಲ್ಲ.

ಆಚಾರ್ಯರ ಬರೆಹ ಶ್ರೇಷ್ಠಸಾಹಿತ್ಯಕ್ಕೆ ಒರೆಗಲ್ಲು, ಅದರ ಅಂತಸ್ಸತ್ವಕ್ಕೊಂದು ಅಳತೆಗೋಲು. ಅವರ ಶ್ರೀರಾಮಕೃಷ್ಣಪರಮಹಂಸ ಚರಿತ್ರೆ, ಸ್ವಾಮಿ ಶಿಷ್ಯ ಸಂವಾದ, ನಾಗಮಹಾಶಯ ಮತ್ತು ಸರ್ವಜ್ಞಕವಿ–ಮುಂತಾದ ಸರಳವಾದ ಹೊತ್ತಗೆಗಳಲ್ಲೂ ಈ ಹಿರಿಯಗುಣಗಳನ್ನು ಗುರುತಿಸಬಹುದು. ಕೃಷ್ಣಶಾಸ್ತ್ರಿಗಳು ಪಂಡಿತಪಾಮರರಿಬ್ಬರ ಆನಂದಕ್ಕೂ ಸಾಹಿತ್ಯದ ಸುಗ್ಗಿಯನ್ನು ತಂದುಕೊಟ್ಟ ಭಗೀರಥ ಸಾಹಿತಿ. ಅವರದು ಅದೊಂದು ಬಗೆಯ ವಿಶಿಷ್ಟವ್ಯಕ್ತಿತ್ವ. ಪ್ರಧಾನವಾಗಿ ಅವರು ಪಂಡಿತರು, ನಿಜ. ಆದರೆ ಪ್ರಾಚೀನದ ಜೊತೆಗೆ ಆಧುನಿಕ ದೃಷ್ಟಿಯನ್ನು ಹೊಂದಿದ್ದರು. ಅವರು ವಾಸ್ತವವಾಗಿ ಪ್ರಾಚೀನತೆ ಮತ್ತು ಅರ್ವಾಚೀನತೆಗಳ ಸಮ್ಮಿಳನದ ದಿವ್ಯಸಂಕೇತವಾಗಿದ್ದರು. ಅವರ ಪಾಂಡಿತ್ಯವೂ ಅಷ್ಟೆ. ಅದು ಪೆಡಸಿಲ್ಲದ ಪರಿಶುದ್ಧವಾದ, ಆದರೆ ಖಚಿತವಾದ ಪಾಂಡಿತ್ಯವಾಗಿತ್ತು. ಇದಕ್ಕೆ ಅವರ ಮನೆತನದಲ್ಲಿ ಪರಂಪರೆಯಾಗಿ, ರಕ್ತಗತವಾಗಿ ಹರಿದುಬಂದ ಸಂಸ್ಕಾರವೇ ಕಾರಣ.

ಬಹಳ ಹಿಂದೆ ಮೈಸೂರಿನ ಮಹಾರಾಜರವರ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಘನವಿದ್ವಾಂಸರಾಗಿದ್ದ ಅಂಬಳೆ ರಾಮಕೃಷ್ಣಶಾಸ್ತ್ರಿಗಳು ಎ. ಆರ್. ಕೃ ಅವರ ತಂದೆಯವರು. ತಂದೆಯವರೇ ಈ ಮಗನಿಗೆ ಸಂಸ್ಕೃತಸಾಹಿತ್ಯ ಮತ್ತು ವ್ಯಾಕರಣಗಳನ್ನು ಹೇಳಿಕೊಟ್ಟವರು. ಅಂದಮೇಲೆ ಸಂಸ್ಕೃತದಲ್ಲಿ ಶಾಸ್ತ್ರಿಗಳವರಿಗಿದ್ದ ಅಸಾಧಾರಣಪಾಂಡಿತ್ಯವನ್ನು ತಲಸ್ಪರ್ಶಿಯಾದ ಜ್ಞಾನದ ಆಳವನ್ನೂ ಅರಿಯ

ಬಹುದು. ಸಂಸ್ಕೃತ ಸ್ನಾತಕೋತ್ತರ ಪದವೀಧರರನ್ನೂ ನಾಚಿಸುವ ವಿದ್ವತ್ತನ್ನು ಶಾಸ್ತ್ರಿಗಳು ಸಂಪಾದಿಸಿದ್ದರು. ಅವರು ಬಹುಭಾಷಾವಿಶಾರದರೂ ಆಗಿದ್ದರು. ಸಂಸ್ಕೃತದಂತೆ ಕನ್ನಡದಲ್ಲೂ ವಿಶೇಷವಾದ ಪ್ರಭುತ್ವವೂ ಇತ್ತು. ಇಂಗ್ಲಿಷಿನಲ್ಲಿ ಅಪಾರವಾದ ಅಭ್ಯಾಸ, ಬಂಗಾಳಿಯಲ್ಲಿ ಬಹುವಾದ ಪರಿಚಯ, ಅಲ್ಲದೆ ತಮಿಳು ತೆಲುಗುಗಳಲ್ಲೂ ಸಾಕಷ್ಟು ವ್ಯವಹಾರಜ್ಞಾನವಿತ್ತು.

ಈ ರೀತಿಯಲ್ಲಿ ಅವರ ಸಾಹಿತ್ಯ ಪರಿಚಯು ಲೋಕವಿಸ್ತಾರವಾಗಿತ್ತು. ಇದರಿಂದಾಗಿ ಅವರ ಮಾತು ಮತ್ತು ಬರೆಹಕ್ಕೆ ಅಪೂರ್ವವಾದ ಹದ ದೊರೆತಿತ್ತು. ಭಾಸಕವಿ, ಸಂಸ್ಕೃತ ನಾಟಕ ಹಾಗೂ ಕನ್ನಡ ಕೈಪಿಡಿಯಲ್ಲಿ ಬರೆದಿರುವ ಅಲಂಕಾರ ಶಾಸ್ತ್ರಚರಿತ್ರೆ–ಇವು ಮೂರೂ ಗ್ರಂಥಗಳು ಅವರ ಸಂಸ್ಕೃತ ಜ್ಞಾನಕ್ಕೆ ಹಿಡಿದ ಮಣಿದರ್ಪಣವಾಗಿವೆ. ಭಾಸಕವಿಯನ್ನು ಕುರಿತು ಬರೆಯಬಹುದಾದ ಮಾತುಗಳೆಲ್ಲ ಅಲ್ಲಿ ಕೇಂದ್ರೀಕೃತವಾಗಿವೆ; ಸಂಸ್ಕೃತ ನಾಟಕವಂತೂ ಸಲಕ್ಷಣ ಸರ್ವಗಾತ್ರ ಕೃತಿರತ್ನವಾಗಿದೆ. ಹರಿಶ್ಚಂದ್ರಕಾವ್ಯಸಂಗ್ರಹ ಮತ್ತು ಕವಿಜಿಹ್ವಾಬಂಧನ ಎಂಬ ಎರಡು ಸಂಪಾದಿತಗ್ರಂಥಗಳು ಅವರ ಕನ್ನಡದ ವೈದುಷ್ಯವನ್ನು ಸಾರುತ್ತವೆ. ವಚನಭಾರತವಂತೂ ಅರವತ್ತು ವರ್ಷಗಳ ಸಾರಸ್ವತ ತಪಸ್ಸು ಕೇವಲ ಆರುತಿಂಗಳ ಅವಧಿಯಲ್ಲಿ ಕನ್ನಡಕೆ ಇಳಿದುಬಂದಂತಿರುವ ಗದ್ಯದೇಗುಲವಾಗಿದೆ. ಸೋಮದೇವನ ಕಥಾಸರಿತ್‌ಸಾಗರದ ಕನ್ನಡ ಭಾಷಾಂತರೇ ಅವರ ಕಥಾಮೃತ. ಶ್ರೀಪತಿಯ ಕಥೆಗಳು ಹನ್ನೆರಡು ಅತ್ಯುತ್ತಮ ಕಥೆಗಳ ಸಂಕಲನ. ವಚನಭಾರತ, ಕಥಾಮೃತ ಮತ್ತು ಶ್ರೀಪತಿಯ ಕಥೆಗಳು–ಇವು ಆಬಾಲವೃದ್ಧರಾದಿಯಾಗಿ ಎಲ್ಲರೂ ಓದಿ ಆನಂದಿಸಬೇಕಾದ ಕೃತಿರತ್ನಗಳು. ಯಾವ ಕನ್ನಡಿಗರ ಮನೆಯಲ್ಲಿ ಇವನ್ನು ಓದುವುದಿಲ್ಲವೋ ಅವು ಕನ್ನಡಿಗರ ಮನೆಗಳೇ ಅಲ್ಲವೆನ್ನುವಷ್ಟು ಸರ್ವಜನಾದರಣೀಯ ಸರ್ವೋತ್ಕೃಷ್ಟ ಸಾಹಿತ್ಯರತ್ನಗಳಿವು.

ನಿರ್ಮಲ ಮತ್ತು ಭಾರತೀ ಎಂಬ ಇಬ್ಬರು ಮೊಮ್ಮಕ್ಕಳ ವ್ಯಾಜದಿಂದ ಕನ್ನಡನಾಡಿನ ಚಿಕ್ಕಮಕ್ಕಳಿಗೆಂದೇ ಪ್ರತ್ಯೇಕವಾಗಿ ಬರೆದ ಸಚಿತ್ರ 'ನಿರ್ಮಲ ಭಾರತೀ' ಕಿರುಹೊತ್ತಗೆಯನ್ನು ಮಕ್ಕಳಂಥ ಮುಗ್ಧಮನಸ್ಸಿನ ದೊಡ್ಡವರೂ ಓದಿ ಸುಖಿಸಬಹುದು. (ಇದರ ಒಂದು ಪ್ರತಿಯನ್ನು ನನಗೆ ಅವರು ಆಶೀರ್ವಾದ ಪೂರ್ವಕವಾಗಿ ಕೊಟ್ಟುದನ್ನು ಕೃತಜ್ಞತೆಯಿಂದ ನೆನೆಯುತ್ತೇನೆ). ಈ ಪುಸ್ತಕಗಳ ಜೊತೆಗೆ 'ಭಾಷಣಗಳು ಮತ್ತು ಲೇಖನಗಳು' ಎಂಬ, ಅವರ ಎಲ್ಲ ಲೇಖನಗಳ ಸಂಕಲನದ ಗ್ರಂಥವನ್ನೂ ಸೇರಿಸಿದರೆ ಅಲ್ಲಿಗೆ ಅವು ಕನ್ನಡದ ಆದರ್ಶಶೈಲಿಗೆ ಉತ್ತಮಮಾದರಿಯ ಹಾಗೂ ಮೇಲ್ಪಂಕ್ತಿಯ ಗ್ರಂಥಗಳಾಗುತ್ತವೆ. 'ಬಂಕಿಮ ಚಂದ್ರ' ಎಂಬುದು ಅವರಿಗಿದ್ದ ವಂಗಭಾಷೆಯ ಪರಿಚಯದ ಜೊತೆಗೆ ಆದರ ವಿಸ್ತಾರ, ವೈವಿಧ್ಯ ಹಾಗೂ ಅವರ ರಸಜ್ಞವಿಮರ್ಶೆಯ ಔನ್ನತ್ಯವನ್ನು ಬಿಂಬಿಸುವ ಉದ್‌ಗ್ರಂಥವಾಗಿದೆ. ಅವರಿಗೆ ಕೇಂದ್ರಸರಕಾರದಿಂದ ಸಾಹಿತ್ಯಅಕಾದೆಮಿ

ಪ್ರಶಸ್ತಿಯನ್ನು ತಂದುಕೊಟ್ಟ ಈ ಹೆಬ್ಬೊತ್ತಿಗೆ ಕನ್ನಡದಲ್ಲೇಕೆ ಬಂಗಾಳಿಯಲ್ಲೇ ಬಂಕಿಮಚಂದ್ರರನ್ನು ಕುರಿತು ಬರೆದ ಗ್ರಂಥಗಳಲ್ಲಿ ಅತ್ಯುತ್ತಮವೆಂಬ ಮುಕ್ತ ಕಂಠದ ಪ್ರಶಂಸೆಗೆ ಪಾತ್ರವಾಗಿದೆ. ಇದಕ್ಕೆ ಬಂದ ಕೇಂದ್ರಅಕಾದೆಮಿ ಪ್ರಶಸ್ತಿಯನ್ನು ಅವರ ಮನೆಗೇ ಹೋಗಿ ನೀಡಿದ ಸರಳಸುಂದರ ಸಮಾರಂಭ ಇಂದಿಗೂ ಸ್ಮರಣೀಯವಾಗಿದೆ. (ನನಗಂತೂ ಕಣ್ಣಿಗೆ ಕಟ್ಟಿದಂತಿದೆ).

ಶಾಸ್ತ್ರಿಗಳು ಕೇವಲ ಸಂಶೋಧಕರು ಹಾಗೂ ಸಾಹಿತಿಗಳಷ್ಟೇ ಆಗಿರದೆ ಹಲವು ಕಾರ್ಯಕ್ಷೇತ್ರಗಳಲ್ಲಿ ದುಡಿದು ಅನೇಕ ಚಟುವಟಿಕೆಗಳಲ್ಲಿ ಭಾಗವಹಿಸಿದವರೂ ಆಗಿದ್ದರು. ಒಡಹುಟ್ಟಿದ ಸೋದರರಂತೆ ಇದ್ದ ತಳುಕಿನವೆಂಕಣ್ಣಯ್ಯನವರೊಡನೆ ಅವರು ಅನೇಕ ಕನ್ನಡದ ಕಾರ್ಯಗಳನ್ನು ಸಾಧಿಸಿದರು. ಕೃಷ್ಣಶಾಸ್ತ್ರಿಗಳು ಮತ್ತು ವೆಂಕಣಯ್ಯನವರ ಜೋಡಿಯನ್ನು ಕಂಡು ಅವರಿಗೆ ಅಶ್ವಿನೀದೇವತೆಗಳೆಂದು ಹೆಸರಿಟ್ಟಿದ್ದರು. ಕೃಷ್ಣಶಾಸ್ತ್ರಿಗಳು ಕನ್ನಡದ ಪ್ರಜ್ಞೆಯನ್ನು ಕನ್ನಡಿಗರಲ್ಲಿ ಉದ್ದೀಪನಗೊಳಿಸಲು ಕೆಲವು ಸುಪುಷ್ಟಯೋಜನೆಗಳನ್ನು ಕೈಗೊಂಡರು. ಈಗ ಬೆಂಗಳೂರಿನ ಸೆಂಟ್ರಲ್‌ಕಾಲೇಜಿನ ಕರ್ನಾಟಕ ಸಂಘಕ್ಕೆ ಚಿನ್ನದಹಬ್ಬ ಮಾಡುವ ಸಿದ್ಧತೆಗಳು ನಡೆಯುತ್ತಿವೆ. ಐವತ್ತುವರ್ಷಗಳ ಹಿಂದೆ ಇದನ್ನು ಮೊಟ್ಟಮೊದಲು ಹುಟ್ಟುಹಾಕಿದವರು ಕೃಷ್ಣಶಾಸ್ತ್ರಿಗಳು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಈ ವರ್ಷದ ಕಡೆಯಲ್ಲಿ ಎರಡುಸಾವಿರ ಪುಟಗಳ ಚಿನ್ನದಹಬ್ಬದ ಸಂಚಿಕೆಯನ್ನು ಹೊರತರಲು ಏರ್ಪಾಟು ನಡೆದಿದೆ, ಮುದ್ರಣಕಾರ್ಯ ಆರಂಭವಾಗಿದೆ. ಪ್ರಬುದ್ಧಕರ್ಣಾಟಕ ಭಾರತದ ಕೆಲವೇ ಪ್ರೌಢಪತ್ರಿಕೆಗಳ ಶ್ರೇಣಿಯಲ್ಲಿ ಅಗ್ರಮಾನ್ಯವಾದುದು. ಅದನ್ನು ಪ್ರಾರಂಭಿಸಿದ ಆದ್ಯ ಪ್ರವರ್ತಕರು ಎ. ಆರ್. ಕೃ. ಅವರು ಪ್ರಬುದ್ಧಕರ್ನಾಟಕದ ಮೊದಲ ಹದಿಮೂರು ವರ್ಷ ಅವರೇ ಸಂಪಾದಕರಾಗಿ, ಲೇಖನಗಳನ್ನು ಬರೆಸಿ, ತಿದ್ದಿ, ಕರಡುಪ್ರತಿ ನೋಡಿ, ಸರ್ವಾಂಗಸುಂದರವಾಗಿ ಹೊರತರುತ್ತಿದ್ದುದನ್ನು ನೆನಸಿಕೊಂಡರೇ ಕೃತಜ್ಞತೆ ತೊಟ್ಟಿಕ್ಕುತ್ತದೆ. ಪ್ರಬುದ್ಧಕರ್ನಾಟಕ ಕೃಷ್ಣಶಾಸ್ತ್ರಿಗಳು ಕಟ್ಟಿದ ಪ್ರಭಾಪುಂಜ, ಪ್ರತಿಭಾವಲಯ. ಹೊಸಗನ್ನಡದಲ್ಲಿ ಒಂದು ಹೊಸ ಮನ್ವಂತರವನ್ನು ತೆರೆದ ಶಕ್ತಿಗಳಲ್ಲಿ ಪ್ರಬುದ್ಧಕರ್ನಾಟಕ ವಹಿಸಿದ ಪಾತ್ರ ಮಹತ್ತರವಾದುದೆಂಬುದನ್ನು ಎಂದಿಗೂ ಮರೆಯುವಂತಿಲ್ಲ. ಕರ್ನಾಟಕಸಂಘ ಅವರ ಪರಿಶ್ರಮದ ಫಲವಾದರೆ, ಪ್ರಬುದ್ಧಕರ್ನಾಟಕ ಅವರ ಪ್ರತಿಭೆ ದೂರದೃಷ್ಟಿಗಳ ಫಲವಾಗಿದೆ. ಕರ್ನಾಟಕಸಂಘ ಸ್ಥಾಪಿಸಿ ವಿದ್ಯಾರ್ಥಿವೃಂದವನ್ನೂ, ಪ್ರಬುದ್ಧ ಕರ್ನಾಟಕ ಪ್ರಾರಂಭಿಸಿ ವಾಚಕವೃಂದವನ್ನೂ ಸಂಸ್ಕಾರಗೊಳಿಸಿ ಕನ್ನಡ ಅಭಿಮಾನವನ್ನು ಬಿತ್ತಿದರು.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕನ್ನಡ ನಿಘಂಟನ್ನು ಐದುಸಾವಿರ ಪುಟಗಳ ಪ್ರಮಾಣದಲ್ಲಿ ಐದುಸಂಪುಟ ಹಾಗೂ ಐವತ್ತುಸಂಚಿಕೆಗಳಲ್ಲಿ ಹೊರತರಲು

ಸಿದ್ಧತೆ ಸಾಗಿದೆ. ಈಗಾಗಲೇ ಅದರ ನಾಲ್ಕು ಸಂಚಿಕೆಗಳು ಹೊರಬಂದಿವೆ. ಈ ನಿಘಂಟನ್ನು ಪ್ರಾರಂಭಿಸಿದ ಪ್ರಪ್ರಥಮ ಅಧ್ಯಕ್ಷರೂ ಸಂಪಾದಕರೂ ಕೃಷ್ಣಶಾಸ್ತ್ರಿಗಳೇ ಆಗಿದ್ದರೆಂಬುದು ಉಲ್ಲೇಖಾರ್ಹವಾಗಿದೆ. ಅಲ್ಲದೆ ಕನ್ನಡ ನಿಘಂಟಿನ ಮಾದರಿ ಎಂಟು ಪುಟಗಳನ್ನು ಸಿದ್ಧಪಡಿಸಿ ಅದಕ್ಕೆ ಒಂದು ಖಚಿತಸ್ವರೂಪ ಕೊಟ್ಟವರು ಅವರು. ನಿಘಂಟಿನ ಮೊಟ್ಟಮೊದಲ ಸಂಚಿಕೆ ಅರ್ಪಿತವಾದುದೂ ಅವರಿಗೇ ಹೀಗಾಗಿ ಅವರು ಕನ್ನಡ ನಿಘಂಟಿಗೆ ಒಂದು ಚೌಕಟ್ಟನ್ನು ಕೊಟ್ಟ ವಿಶ್ವಕರ್ಮಾಚಾರ್ಯರಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ವತಿಯಿಂದ ಹಿಂದೆ ಪ್ರಕಟವಾದ ಇಂಗ್ಲಿಷ್-ಕನ್ನಡ ನಿಘಂಟಿನ ಸಲಹಾಮಂಡಲಿಯ ಸದಸ್ಯರಾಗಿಯೂ ಅವರು ಸೇವೆ ಸಲ್ಲಿಸಿದ್ದರು.

ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನಮೇಲೆ ತುಂಬ ಅಭಿಮಾನವಿತ್ತು. ಹೈದರಾಬಾದು ಕನ್ನಡಿಗರೂ, ಮೈಸೂರು ಕನ್ನಡಿಗರೂ ಅಣ್ಣತಮ್ಮಂದಿರು, ಅಕ್ಕತಂಗಿಯರು ಎಂಬ ಭಾವನೆ ಬರುವುದಕ್ಕೆ ಕಾರಣ ಹಾಗೂ ಕನ್ನಡಿಗರಲ್ಲಿ ಒಕ್ಕಟ್ಟು ಬರುವುದಕ್ಕೆ ಸಾಹಿತ್ಯಪರಿಷತ್ತೇ ಮುಖ್ಯಕಾರಣವೆಂದು ಅವರು ಭಾವಿಸಿದ್ದರು. ಎಲ್ಲರಂತೆ ನಾವೂ ಒಂದು ನಾಡನ್ನು ಕನ್ನಡನಾಡನ್ನು ಕಟ್ಟಿಕೊಳ್ಳಬೇಕೆಂಬ ಕನಸನ್ನು ಬಾವುಟದ ಚಿಹ್ನೆಯಾಗಿ ಎತ್ತಿಹಿಡಿದದ್ದು ಕನ್ನಡಸಾಹಿತ್ಯ ಪರಿಷತ್ತು ಎಂದು ಅವರು ಸಾರಿದರು. "ಪರಿಷತ್ತು ಶಾರದೆಯ ದೇವಸ್ಥಾನ; ಅದಕ್ಕೆ ಗುಡಿಗೋಪುರಗಳನ್ನು ಕಟ್ಟಿಸುವುದೂ, ಸೇವಾಕಾರ್ಯಕ್ಕೆಂದು ದತ್ತಿ ಬಿಡುವುದೂ ಪೂಜೆ ನಡಸುವುದೂ ಪಣ್ಯಪನಿ ವಾರಗಳನ್ನು ಹಂಚುವುದೂ ಅದರ ಭಕ್ತಾದಿಗಳ ಕೆಲಸ" ಎಂದು ಅವರು ಒಂದೆಡೆ ಆಡಿದ್ದಾರೆ. ಇದರಂತೆ ಅವರೇ ಪರಿಷತ್ತಿಗೆ ಒಂದುಸಾವಿರ ರೂಪಾಯಿಯ ದತ್ತಿ ನಿಧಿಯೊಂದನ್ನು ಕೊಟ್ಟಿದ್ದಾರೆ. ಹಿಂದೆ ಪರಿಷತ್‌ಪತ್ರಿಕೆಯ ಸಂಪಾದಕರಾಗಿಯೂ ಸೇವೆ ಮಾಡಿದ್ದಾರೆ. ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಸಭಾಸದರೂ ಆಗಿದ್ದರು. ೧೯೪೧ರಲ್ಲಿ ಹೈದರಾಬಾದಿನಲ್ಲಿ ನಡೆದ ೨೬ನೆಯ ಕನ್ನಡಸಾಹಿತ್ಯಸಮ್ಮೇಳನದ ಅಧ್ಯಕ್ಷರಾಗಿ ಕನ್ನಡದ ಅಗ್ರಪೂಜೆಯನ್ನೂ ಪಡೆದಿದ್ದರು.

ಕೃಷ್ಣಶಾಸ್ತ್ರಿಗಳು ಎಪ್ಪತ್ತೆಂಟುವರ್ಷದ ತುಂಬುಬಾಳನ್ನು ಬಾಳಿದವರು. ಅವರ ಜನನ ೧೨-೨-೧೮೯೦. ಬೆಂಗಳೂರು ಸೆಂಟ್ರಲ್‌ಕಾಲೇಜು ಮತ್ತು ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಬಹುಕಾಲ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ದುಡಿದು ಸಾವಿರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದರು. ೧೯೧೫ರಿಂದ ೧೯೪೯ರ ವರೆಗೆ ಸುಮಾರು ಮೂರೂವರೆ ದಶಕದ ಶಿಕ್ಷಣ ಸೇವೆ ಅವರದು. ವೃತ್ತಿಯಿಂದ ನಿವೃತ್ತರಾದಮೇಲೂ ೧೯೫೩ರಿಂದ ೧೯೫೫ರ ವರೆಗೆ ಎರಡು ವರ್ಷ ಕಾಲ ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಗೌರವ ಪ್ರಾಧ್ಯಾಪಕರಾಗಿ ದುಡಿದರು, ಯಾವ ಪ್ರತಿಫಲವನ್ನೂ ಪಡೆಯದೆ. ಅವರ ಈ ಶ್ರದ್ಧಾಸಕ್ತಿಗಳ

ಪವಿತ್ರ ಕಾಯಕವನ್ನು ಕಂಡು ಮೆಚ್ಚಿದ ಮೈಸೂರು ವಿಶ್ವವಿದ್ಯಾನಿಲಯ ೧೯೬೦ರಲ್ಲಿ ಅವರಿಗೆ ಗೌರವ 'ಡಿ.ಲಿಟ್' ಪದವಿಯನ್ನಿತ್ತು ಸನ್ಮಾನಿಸಿತು. ಆ ಪ್ರಶಸ್ತಿ ಪ್ರದಾನೋತ್ಸವದಲ್ಲಿ ಅವರು ಮಾಡಿದ ವಂದನಭಾಷಣ ಕನ್ನಡದಲ್ಲಿತ್ತೆಂಬುದನ್ನು ನೆನಪಿಗೆ ತಂದುಕೊಳ್ಳಬೇಕು. (ಅಂದು ಅವರು ಮಾಡಿದ ಹತ್ತು ನಿಮಿಷಗಳ ಪುಟ್ಟ ಭಾಷಣ ಇನ್ನೂ ಕಿವಿಯಲ್ಲಿ ಕೇಳುತ್ತಿದೆ.) ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವದ ಇತಿಹಾಸದಲ್ಲಿ ಅದು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದ ದಿನ. ಏಕೆಂದರೆ ಇದುವರೆಗೆ ಘಟಿಕೋತ್ಸವದಲ್ಲಿ ಆದ ಕನ್ನಡಭಾಷಣಗಳು ಬೆರಳಲ್ಲಿ ಎಣಿಸುವಷ್ಟು ಕಡಮೆ ಇವೆ. "ಈ ಪ್ರಶಸ್ತಿ ಪ್ರದಾನೋತ್ಸವಕ್ಕೆ ನಾನು ಬರುತ್ತಿದ್ದಾಗಲೆಲ್ಲಾ ಇಲ್ಲಿ ನಡೆಯುತ್ತಿದ್ದ ಇಂಗ್ಲಿಷ್ ಉಪದೇಶ ಭಾಷಣಗಳನ್ನು ಕೇಳಿ, ಇಲ್ಲಿ ಯಾರಿಗಾದರೂ ಎಂದಾದರೂ ಕನ್ನಡದಲ್ಲಿ ಮಾತನಾಡುವ ಅವಕಾಶ ದೊರೆತೀತೇ ಎಂಬ ಕುತೂಹಲವೂ ಕಾತರವೂ ಮೂಡುತ್ತಿದ್ದುವು. ಅವುಗಳನ್ನು ತೃಪ್ತಿಪಡಿಸಿಕೊಳ್ಳುವ ಭಾಗ್ಯ ಇಂದು ನನ್ನದಾಗಿದೆ"—ಎಂದು ಅಂದು ಅವರು ಆರಂಭದಲ್ಲೇ ಆಡಿದ್ದರು.

ಹೀಗೆ ಹಗಲಿರುಳೂ ಕನ್ನಡದ ಪ್ರಗತಿ ಪುರೋಭಿವೃದ್ಧಿಗಳ ಕನಸನ್ನೇ ಕಾಣುತ್ತಿದ್ದ ಇಂಥ ಆಚಾರ್ಯಶ್ರೇಷ್ಠರನ್ನು ಕಳೆದುಕೊಂಡ ದೌರ್ಭಾಗ್ಯ ಮಾತ್ರ ಇಂದು ನಮ್ಮದಾಗಿದೆ. ಆದರೆ "ಅವರ ಹಾಗೆ ಬಾಳಿ ಸತ್ತವರ ಸಾವೂ ಒಂದು ಸಾವೆ? ಅವರು ಸ್ವರ್ಗಸ್ಥರಾಗಿದ್ದರೂ ಕೀರ್ತಿಶೇಷರಾಗಿ ನಮ್ಮಲ್ಲಿ ಇದ್ದೇ ಇರುತ್ತಾರೆ. ಅಚ್ಚಕಸ್ತೂರಿಯೂ ಪಚ್ಚಕರ್ಪೂರವೂ ಕರಗಿಹೋದರೆ ಅದೃಶ್ಯವಾಗುವವೇ ಹೊರತು ನಷ್ಟವಾಗಿ ಹೋದಂತಾಯಿತೇ?"

# ಶಾಸ್ತ್ರಿಗಳ ಸೂಕ್ತಿಗಳು

**ಕ್ರೂರ ಹೆಂಡತಿ :**

ಕ್ರೂರಳಾದ ಹೆಂಡತಿಯೊಡನೆ ಬಾಳುವೆ ಮಾಡುವುದು, ಕಠಿಣ ವೇಶ್ಯೆಯೊಡನಿರುವುದಕ್ಕಿಂತ ಕಷ್ಟ.

(ಕಥಾಮೃತ, ಪೀಠಿಕೆ, ಪು. ೫೫)

*    *    *

**ಮದುವೆಗೆ ಮುನ್ನ :**

ವಿವಾಹ ಪೂರ್ವದಕಣ್ಣು ಮೋಹದಕಣ್ಣು, ವಾಸ್ತವಿಕತೆಯನ್ನು ಕಾಣದಕಣ್ಣು, ಬಣ್ಣವಿಟ್ಟು ನೋಡುವಕಣ್ಣು.

(ಕಥಾಮೃತ, ಪೀಠಿಕೆ, ಪು. ೬೨)

*    *    *

**ಮದುವೆ :**

ಮದುವೆಯಲ್ಲಿ ಸುಖವಿಲ್ಲದಿಲ್ಲ....ಆದರೆ ಅದು ಲಾಟರಿ, ಅದೃಷ್ಟ ಪರೀಕ್ಷೆ. ಬಲೆ ಬೀಸಿದರೆ ಮೀನು ಸಿಕ್ಕಿದರೂ ಸಿಕ್ಕಿತು; ಅರೇಬಿಯನ್ ನೈಟ್ಸ್ ಕಥೆಯಂತೆ ಭೂತ ಸೆರೆಯಾದ ಚೊಂಬು ಸಿಕ್ಕಿದರೂ ಸಿಕ್ಕಿತು.

(ಕಥಾಮೃತ, ಪೀಠಿಕೆ, ಪು. ೬೧)

*    *    *

**ಧರ್ಮಾಚರಣೆ :**

ಧರ್ಮಾಚರಣೆಯು ಇರುವುದು ಮುಖ್ಯವಾಗಿ ಆತ್ಮೋದ್ಧಾರಕ್ಕಾದ್ದರಿಂದ ಅದನ್ನು ಸಾರ್ವಜನಿಕವಾಗಿ ಮಾಡುವುದಕ್ಕಿಂತ, ಸ್ವಂತವಾಗಿ, ತನ್ನ ತನ್ನ ಮಟ್ಟಿಗೆ ಇಟ್ಟುಕೊಳ್ಳುವುದು ಮೇಲು.

(ವಚನಭಾರತ, ಪೀಠಿಕೆ, ಪು. ೫೦)

*    *    *

**ನಾರಣಪ್ಪನ ಭಾರತ :**

ನಾರಣಪ್ಪನ ಭಾರತ ಕನ್ನಡ ಸಾಹಿತ್ಯದ ಗೋಪುರಕ್ಕೆ ಇಟ್ಟಿರುವ ಬಂಗಾರದ ಕಲಶಗಳಲ್ಲಿ ಒಂದು.

(ವಚನಭಾರತ, ಪೀಠಿಕೆ, ಪು. ೧೧)

*    *    *

**ಸಂಧಿ :**

ಸಂಧಿಯಾಗುವುದು ಅಪೂರ್ವ; ಅದರಲ್ಲಿ ನ್ಯಾಯವಿರುವುದೂ ಅಪೂರ್ವ; ಗೆದ್ದವನಿಗೆ ಎಂದರೆ ಬಲಿಷ್ಠನಿಗೆ ' ನ್ಯಾಯ 'ವಿರಬಹುದು, ಅದನ್ನು ಅವನು ನ್ಯಾಯವೆನ್ನಬಹುದು. ಅಂಥ ಸಂಧಿಯಲ್ಲಿ ಯುದ್ಧಬೀಜವಿದ್ದೇ ಇರುತ್ತದೆ.

(ವಚನಭಾರತ, ಪೀಠಿಕೆ, ಪು. ೬೮)

*    *    *

**ಸಂಪ್ರದಾಯ :**

ಕೆಲವು ಸಂದರ್ಭಗಳಲ್ಲಿ ನಾನು ಸಂಪ್ರದಾಯವನ್ನು ಬಿಟ್ಟು ಹೋಗಿರುವಂತೆ ತೋರಬಹುದು; ನಾನು ಸಂಪ್ರದಾಯ ವಿರೋಧಿಯಲ್ಲ.

(ವಚನಭಾರತ, ಪೀಠಿಕೆ, ಪು. ೬೨)

ಎಚ್. ಎಂ. ಶಂಕರನಾರಾಯಣರಾವ್

# ಆಚಾರ್ಯ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು

೧-೨-೧೯೬೮ನೆಯ ಗುರುವಾರ ರಾತ್ರಿ ಹೊಸಗನ್ನಡ ಸಾಹಿತ್ಯವೃಕ್ಷದ ಒಂದು ಮಾಗಿದ ಅಮೃತಫಲ ತೊಟ್ಟು ಕಳಚಿ ಭೂಮಿಗೆ ಬಿದ್ದು ತಾಯಿಮಡಲಿಗೆ ಸೇರಿ ಹೋಯಿತು. ಆ ಅಮೃತಫಲವೇ 'ಕನ್ನಡದ ಸೇನಾನಿ' 'ಕನ್ನಡದ ಗರುಡಿ ಯಾಚಾರ್ಯ' 'ಹೊಸಗನ್ನಡದ ಅಶ್ವಿನೀದೇವತೆಗಳಲ್ಲೊಬ್ಬರು'–ಹೀಗೆಂದು ಬಗೆಬಗೆಯಾಗಿ ಪ್ರಖ್ಯಾತಿಹೊಂದಿದ್ದ ಡಾ. ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ., ಡಿ.ಲಿಟ್. ಅವರು. ಎಪ್ಪತ್ತೆಂಟು ವರುಷಗಳ ಸಾರ್ಥಕವಾದ ತುಂಬುಜೀವನ ವನ್ನು ನಡೆಸಿ, ಋಷಿಸದೃಶರಾಗಿ ಬಾಳಿದ ಅವರು ಸಂತರಾಗಿ ದೇವಗಣದಲ್ಲಿ ಸೇರಿ ಹೋದರು. ಹಳೆಯ ಪಾಂಡಿತ್ಯ ಹೊಸಚೈತನ್ಯದ ಸೇತುವೆಯಂತಿದ್ದ ಅವರ ಮರಣದಿಂದ ಕನ್ನಡ ವಿದ್ವತ್ಪ್ರಪಂಚ ಬಡವಾಗಿ ಹೋಯಿತು.

ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಸಂಪ್ರದಾಯಕ್ಕೆ ಸೇರಿದ ವೈದಿಕ ಮನೆತನದಲ್ಲಿ ಮೈಸೂರಿನಲ್ಲಿ ಜನ್ಮವೆತ್ತಿದರು. ಇವರ ತಂದೆಯವರು ಮೈಸೂರಿನ ಸಂಸ್ಕೃತ ಮಹಾಪಾಠಶಾಲೆಯಲ್ಲಿ ವ್ಯಾಕರಣದ ಪ್ರಾಧ್ಯಾಪಕರಾಗಿದ್ದರು. ಚಿಕ್ಕಂದಿ ನಲ್ಲಿಯೇ ಮಾತೃವಾತ್ಸಲ್ಯದಿಂದ ವಂಚಿತರಾದ ಇವರಿಗೆ ತಂದೆಯೇ ತಾಯಿಯೂ ಆದರಲ್ಲದೆ, ಅವರು ಮಗನಿಗೆ ಚಿಕ್ಕಂದು ಪಾಣಿನಿಯ ಸೂತ್ರಗಳನ್ನು ಹೇಳಿಕೊಟ್ಟು ಇವರ ಸಂಸ್ಕೃತಪಾಂಡಿತ್ಯಕ್ಕೆ ಸುಭದ್ರವಾದ ತಳಹದಿಯನ್ನು ಹಾಕಿದರು. 'ಮನುಷ್ಯನೇ ತನ್ನ ಅದೃಷ್ಟದ ನಿಯಾಮಕ' ಎಂಬ ತತ್ವವನ್ನು ನಂಬಿ ಚಿಕ್ಕಂದಿ ನಲ್ಲಿ ಚೆನ್ನಾಗಿ ವಿದ್ಯಾಭ್ಯಾಸ ಮಾಡಿದರು. ವಿಜ್ಞಾನ ಚರಿತ್ರೆಗಳನ್ನು ವ್ಯಾಸಂಗ ಮಾಡುವ ಆಸೆಯಿದ್ದರೂ, ಬಡತನದಿಂದ ಅದು ಸಾಧ್ಯವಾಗದೆ ಶಾಸ್ತ್ರಿಗಳು ಕನ್ನಡ ಸಂಸ್ಕೃತಗಳನ್ನು ತಮ್ಮ ವಾಸಂಗದ ವಿಷಯವನ್ನಾಗಿ ಆಯ್ದುಕೊಂಡದ್ದು ಕನ್ನಡದ, ಕನ್ನಡಿಗರ ಪುಣ್ಯ. ಸಂಸ್ಕೃತ ಪಾಠಶಾಲೆಯಲ್ಲಿ ಸಂಪ್ರದಾಯದ ರೀತಿಯಲ್ಲಿ ವ್ಯಾಸಂಗ ಮಾಡಿದುದರಿಂದಲೂ, ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ವ್ಯಾಸಂಗವನ್ನು ಮುಂದುವರಿಸಿದುದರಿಂದಲೂ, ಇವರ ಪಾಂಡಿತ್ಯಕ್ಕೆ ಆಳ ಅಗಲಗಳು ದೊರಕಿದವು. ಕಾಲೇಜಿನಲ್ಲಿ ಸಂಸ್ಕೃತ ಕನ್ನಡಗಳ ವ್ಯಾಸಂಗ

ಗಳಲ್ಲಿ ಮೊದಲಸ್ಥಾನವನ್ನು ಇತರರಿಗೆ ಬಿಟ್ಟುಕೊಡದೆ ಇವರು ಬಹುಮಾನಗಳನ್ನು ಗಳಿಸಿದರು. ವಿಶ್ವವಿದ್ಯಾನಿಲಯದಲ್ಲಿ ಉಪಾಧ್ಯಾಯರಾದ ಮೇಲೆ ಶಾಸ್ತ್ರಿಗಳು ತಮ್ಮ ಪಾಂಡಿತ್ಯವನ್ನು ಎತ್ತರಿಸಿಕೊಂಡರು; ಬಿತ್ತರಿಸಿಕೊಂಡರು. ಇಂಗ್ಲಿಷ್ ಕನ್ನಡ ಸಂಸ್ಕೃತ ಭಾಷೆಗಳ ಪಾಂಡಿತ್ಯದ ಜೊತೆಗೆ, ಚಿಕ್ಕಂದು ಶ್ರೀ ವೆಂಕಣ್ಣಯ್ಯ ನವರ ಜೊತೆಗೆ ಇವರಿಗೆ ಶ್ರೀ ರಾಮಕೃಷ್ಣಾಶ್ರಮದ ಸಂಪರ್ಕವುಂಟಾದ ಕಾರಣ, ಬಂಗಾಳಿಯನ್ನು ಚೆನ್ನಾಗಿ ಕಲಿತರು. ತೆಲುಗು ತಮಿಳು ಭಾಷೆಗಳಲ್ಲಿಯೂ ಇವರಿಗೆ ಸಲುಗೆ ಇತ್ತು. ಹೀಗೆ ಬಹುಭಾಷೆಗಳನ್ನು ತಿಳಿದ ಇವರು, ಮಿಕ್ಕ ಭಾಷೆಗಳಲ್ಲಿ ತಾವು ತಿಳಿದ ವಿಷಯವನ್ನು ನಮ್ಮ ಜನರಿಗೆ ಸರಳವಾದ ಆದರೆ ಬಿಗಿಯಾದ ಕನ್ನಡದಲ್ಲಿ ಹೇಳಬೇಕೆಂದು ಸಂಕಲ್ಪಿಸಿಕೊಂಡರು.

ಇದೇನು ದೊಡ್ಡ ವಿಷಯ ಎಂದು ನಮಗೆ ಇಂದು ತೋರಬಹುದು. ಏಕೆಂದರೆ 'ಕನ್ನಡ ಕನ್ನಡ' ಎನ್ನುವ ಕೂಗು ಈಗ ಎಲ್ಲೆಲ್ಲಿಯೂ ಕೇಳಿಬರುತ್ತಿದೆ. ಆದರೆ ಈ ಶತಮಾನದ ಆದಿಯಲ್ಲಿ ಕನ್ನಡದ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಐವತ್ತು ವರ್ಷಗಳ ಹಿಂದೆ ನಮ್ಮ ಕಣ್ಣನ್ನು ಹರಿಯಬಿಡಬೇಕು. ಆಗ ಕನ್ನಡ ಕೇಳುವವರಿಲ್ಲದೆ ಮೂಲೆಗುಂಪಾಗಿತ್ತು. ಪಂಡಿತರು ಸಾಹಿತ್ಯರಚನೆ ಮಾಡು ತ್ತಿದ್ದರೂ, ಸಂಸ್ಕೃತಪದಭೂಯಿಷ್ಠವಾದ ಆ ಸಾಹಿತ್ಯ ಜನಸಾಮಾನ್ಯರಿಗೆ ಎಟುಕದ ಮಾತಾಗಿತ್ತು. ಇಂಗ್ಲಿಷ್ ಭಾಷೆಯ ಪ್ರಾಬಲ್ಯದ ಆ ಕಾಲದಲ್ಲಿ ಕೃತವಿದ್ಯರಾದವರು ಆ ಭಾಷೆಯಿಂದಲೇ ಭುಕ್ತಿಮುಕ್ತಿಗಳೆಂದು ದೃಢವಾಗಿ ನಂಬಿ, ಕನ್ನಡವನ್ನು ಹೀನಾಯವಾಗಿ ಕಾಣುತ್ತಿದ್ದರು. ವಿದ್ಯಾವಂತನಾದವನು ಕನ್ನಡದಲ್ಲಿ ಬರೆದರೆ ಮಾತನಾಡಿದರೆ ಅದು ಅಗೌರವದ ಕುರುಹು ಎಂದು ಜನರು ಭಾವಿಸು ತ್ತಿದ್ದರು. ಕನ್ನಡ ಪಂಡಿತರಿಗೆ ಕನ್ನಡ ಕಲಿಸುವವರಿಗೆ ಆಗ ವಿದ್ಯಾರ್ಥಿವೃಂದದಲ್ಲಿ ಗೌರವವಿರಲಿಲ್ಲ. ಶ್ರೀ ಕೃಷ್ಣಶಾಸ್ತ್ರಿಗಳು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಮೊದಲು ಉಪಾಧ್ಯಾಯರಾಗಿ ನೇಮಕಗೊಂಡಾಗ, ತಮ್ಮ ಪಾಂಡಿತ್ಯದಿಂದ, ಶೀಲದಿಂದ ವಿದ್ಯಾರ್ಥಿಗಳಲ್ಲಿ ಕನ್ನಡದ ವಿಷಯದಲ್ಲಿ ಅಕ್ಕರೆಯನ್ನು ಉಕ್ಕಿಸಿದರು; ಅವರ ಪ್ರೀತಿವಿಶ್ವಾಸಗಳನ್ನು ಗಳಿಸಿಕೊಂಡು ವಿಜ್ಞಾನಕ್ಕೆ ಮೀಸಲಾದ ಆ ಕಾಲೇಜಿ ನಲ್ಲಿ ಕನ್ನಡಕ್ಕಾಗಿ ಒಂದು ಗುರುಗದ್ದುಗೆಯನ್ನು ನಿರ್ಮಿಸಿಕೊಂಡರು. ಅಷ್ಟೇ ಅಲ್ಲ; 'ಪ್ರಬುದ್ಧ ಕರ್ಣಾಟಕ'ವನ್ನು ಸ್ಥಾಪಿಸಿ, ಅದರ ಮೂಲಕ ಕನ್ನಡದ ವಿದ್ವತ್ಪ್ರಪಂಚವನ್ನು ಬೆಳೆಸಿದರು.

೨

ತಮ್ಮ ವಿದ್ಯಾಭ್ಯಾಸ ಮುಗಿದ ಮೇಲೆ ಶ್ರೀ ಕೃಷ್ಣಶಾಸ್ತ್ರಿಗಳು ಮೈಸೂರಿನ ಡಿಸ್ಟ್ರಿಕ್ಟ್ ಆಫೀಸಿನಲ್ಲಿ ಸಣ್ಣ ಸಂಬಳದ ಮೇಲೆ ಗುಮಾಸ್ತರಾಗಿ ಕೆಲಸ ಮಾಡು ತ್ತಿದ್ದರೆಂಬುದನ್ನು ಕೇಳಿ ಅನೇಕರಿಗೆ ಆಶ್ಚರ್ಯವೆನಿಸಬಹುದು. ಆದರೆ ಅದು

ಸತ್ಯಸಂಗತಿ. ಅವರು ಹಾಗೆಯೇ ಕೆಲಸದಲ್ಲಿ ಮುಂದುವರೆದಿದ್ದರೆ, ಉನ್ನತ ಸ್ಥಿತಿಗೆ ಬರುತ್ತಿದ್ದುದೇನೋ ನಿಜ, ಆದರೆ ಇಂದು ಅವರನ್ನು ಯಾರೂ ನೆನೆಸಿ ಕೊಳ್ಳುತ್ತಿರಲಿಲ್ಲ. ಆದರೆ ಕನ್ನಡಿಗರ ಸುದೈವದಿಂದ ಆಚಾರ್ಯ ಶ್ರೀಯವರು ಅವರನ್ನು ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಕನ್ನಡ ಉಪಾಧ್ಯಾಯರನ್ನಾಗಿ ಕಳುಹಿಸಿಕೊಟ್ಟರು. ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಟೇಟರು ಅವರನ್ನು ವಿಶ್ವಾಸದಿಂದ ಬರಮಾಡಿಕೊಂಡರು. ಅದು ಶುಭಮುಹೂರ್ತ! ನಮ್ಮ ಕಡೆ ಹೊಸಗನ್ನಡದ ಸಾಹಿತ್ಯ ನಿರ್ಮಾಣಕ್ಕೆ ಅದು ನಾಂದಿಯಾಯಿತು!

೩

ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ಬದುಕಿನಲ್ಲಿ ಅನೇಕ ಕಹಿಗಳನ್ನುಂಡರು; ಕಷ್ಟ ಪ್ರಸಂಗಗಳನ್ನು ಎದುರಿಸಿದರು. ಚಿಕ್ಕಂದು ಅವರು ತಾಯಿಯನ್ನು ಕಳೆದು ಕೊಂಡು ಮಾತೃವಾತ್ಸಲ್ಯದಿಂದ ವಂಚಿತರಾದ ವಿಷಯವನ್ನು ಈ ಮೊದಲೇ ಹೇಳಿತಷ್ಟೆ. ಅವರ ಒಬ್ಬನೇ ಮಗ ತೀರಿಕೊಂಡ; ಬೆಳೆದ ಪ್ರೀತಿಯ ಮಗಳು ಹೆತ್ತು ಸ್ವಾಮಿಯ ಪಾದವನ್ನು ಸೇರಿದಳು; ಮೈಸೂರಿನ ಶಾರದಾವಿಲಾಸ ಲಾ ಕಾಲೇಜಿನ ಪ್ರಿನ್ಸಿಪಾಲರಾದ ಇವರ ಎರಡನೆಯ ಅಳಿಯಂದಿರು ಶ್ರೀ ಕೆ. ನರಹರಿ ರಾಯರು ಇವರ ಮುಪ್ಪಿನಲ್ಲಿ ಸಾವಿಗೀಡಾದದ್ದು ಇವರಿಗೆ ತಡೆಯಲಾರದ ಪೆಟ್ಟಾ ಯಿತು. ಹಿಂದಿಯಿಂದ ಕನ್ನಡಕ್ಕೆ ಕ್ಷೇಮವಿಲ್ಲ ಎಂದು ನಂಬಿದ್ದ ಇವರು, ಹಿಂದಿಗೆ ವಿರೋಧವಾಗಿ ಏಕಾಂಗಿಯಾಗಿ ಹೋರಾಡಬೇಕಾಯಿತು. ಆ ದಾಳಿಗಳನ್ನೆಲ್ಲ ಈ ಕನ್ನಡವಸಿಷ್ಠರು ಕನ್ನಡದ ಅಭಿಮಾನವೆಂಬ ಬ್ರಹ್ಮದಂಡದಿಂದ ಧೈರ್ಯದಿಂದ ನಿರ್ಭಯವಾಗಿ ಎದುರಿಸಿದರು. ಮನೆಯ ಕಷ್ಟ, ಹೊರಗಿನ ಪ್ರತಿಭಟನೆಗಳನ್ನು ಇವರು ಧೈರ್ಯವಾಗಿ ಸಹಿಸಿ ಎದುರಿಸಿದರೂ ಬದುಕಿನ ಕೊನೆಯಲ್ಲಿ "ನನ್ನ ಆರೋಗ್ಯ ಹೋಯಿತು; ನನ್ನ ಕೆಲಸವನ್ನು ನಾನು ಮಾಡಿಕೊಳ್ಳಲಾರದವನಾದೆ; ಇನ್ನೊಬ್ಬರಿಗೆ ಹೊರೆಯಾದೆ" ಎಂಬ ಕೊರಗು ಅವರನ್ನು ಬಾಧಿಸತೊಡಗಿತು. ಅವರು ಆ ಸ್ಥಿತಿಗೆ ಇಳಿದಿರಲಿಲ್ಲವೆಂಬುದು ನಮಗೆ ಗೊತ್ತಿತ್ತು. ಆದರೆ ನಮ್ಮ ಸಮಾಧಾನದಿಂದ ಅವರಿಗೆ ತೃಪ್ತಿಯುಂಟಾಗುತ್ತಿರಲಿಲ್ಲ. ಆದರೂ ಅವರು ಸಾಯುವ ಮುನ್ನ ತಮ್ಮ ಕೆಲಸಗಳೆಲ್ಲವನ್ನೂ ತಾವೇ ಮಾಡಿಕೊಂಡು, ಮಲಗಿ ಕೊಂಡು ಶಾಂತ ರೀತಿಯಲ್ಲಿ ಕಣ್ಮುಚ್ಚಿಕೊಂಡರಂತೆ! ದೊಡ್ಡವರಿಗೆ ತಕ್ಕ ಸಾವು!

೪

ಶ್ರೀ ಕೃಷ್ಣಶಾಸ್ತ್ರಿಗಳು ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾದ ಮೇಲೆ, ಅವರು ದೇಹತ್ಯಾಗ ಮಾಡುವವರೆಗೂ ನನಗೂ ಅವರಿಗೂ ಒಂದು ರೀತಿಯ ನಿಕಟ ಸಂಬಂಧವಿತ್ತು. ಈ ಅವಧಿಯಲ್ಲಿ ಅವರಲ್ಲಿ ಕಂಡ ಕೆಲವು ಅನುಕರಣ ಸುಲಭ

ವಲ್ಲದ ಗುಣಗಳಿಂದ ಮುಗ್ಧನಾಗಿದ್ದೇನೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸ ಬಯಸುತ್ತೇನೆ. ಅವರು ನಿವೃತ್ತರಾದಾಗ ಎರಡನೆಯ ಮಹಾಯುದ್ಧ ಮುಗಿದಿತ್ತು. ದೇಶಕ್ಕೆ ಸ್ವಾತಂತ್ರ್ಯ ಬಂದಿರಲಿಲ್ಲ. ನಿವೃತ್ತಿ ಎಂದರೆ ಸಂಬಳ ಅರ್ಧ ಆಗುವುದು ತಾನೆ? ಆ ಸಮಯದಲ್ಲಿ ನಿವೃತ್ತನಾಗುವವನು ಸೇವೆಯ ವಿಸ್ತಾರಕ್ಕೆ ಬಯಸು ತ್ತಾನೆ, ಇಲ್ಲವೆ ನಿವೃತ್ತನಾಗಲೇಬೇಕಾಗಿ ಬಂದರೆ ಬೇರೆಯ ಕೆಲಸಕ್ಕೆ ಪ್ರಯತ್ನಿಸು ತ್ತಾನೆ. ಶ್ರೀ ಕೃಷ್ಣಶಾಸ್ತ್ರಿಗಳು ಈ ಸೂತ್ರಕ್ಕೆ ಹೊರತಾಗಿ ನಿಂತರು. ತಮ್ಮ ಸೇವೆಯ ವಿಸ್ತರಣೆಗೆ ಅವರು ಇಷ್ಟಪಡಲಿಲ್ಲ. ಇಷ್ಟೇ ಅಲ್ಲ, ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಇವರು ಎರಡು ವರ್ಷಗಳ ಕಾಲ ಪ್ರಾಧ್ಯಾಪಕರಾಗಿ ದ್ದಾಗ, ತಮ್ಮ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವುದೆಂಬ ಭಾವನೆಯಿಂದ ಆ ಸಂಸ್ಥೆ ಯವರು ಕೊಡಲೊಪ್ಪಿದ ಗೌರವಧನವನ್ನು ವಿನಯದಿಂದ ನಿರಾಕರಿಸಿದರು. ಪರೀಕ್ಷಕತ್ವ, ಸಮಿತಿಯ ಸದಸ್ಯತ್ವ ಬಂದಾಗಲೂ ಅವುಗಳನ್ನು ಬೇಡವೆಂದರು. 'ನಿಮಗೆ ಹಣ ಬೇಡವೆ?' ಎಂದು ನಾನು ಅವರನ್ನು ಕೇಳಿದಾಗ, ಅದಕ್ಕೆ ಪ್ರತ್ಯುತ್ತರವಾಗಿ ಅವರು 'ಹಣ ಯಾರಿಗೆ ಬೇಡ? ಈ ಪದವಿಗಳನ್ನೆಲ್ಲ ಇದುವರೆಗೆ ನಾನು ಅನುಭವಿಸಿದೆ. ನನಗಿಂತ ಕಿರಿಯರು ಮುಂದೆ ಬರಬೇಡವೆ? ಅವರೇನೂ ಅಸಮರ್ಥರಲ್ಲವಲ್ಲ! ಇಲ್ಲಿ ನೋಡು. ನಿವೃತ್ತನಾದ ಮೇಲೆ ಕಾಲ ಕಳೆಯದೆ ನಾನು ಒಂದು ಕಾಮಧೇನುವನ್ನು ಸಾಕಿದ್ದೇನೆ; ಕಲ್ಪವೃಕ್ಷವನ್ನು ಬೆಳೆಸಿದ್ದೇನೆ. ಆ ಕಾಮಧೇನುವೇ ವಚನಭಾರತ; ಕಲ್ಪವೃಕ್ಷವೇ ಕಥಾಮೃತ' ಎಂದು ಹೇಳಿ ದರು. ಈ ಉತ್ತರ ನನ್ನನ್ನು ಬಹುವಾಗಿ ಆಕರ್ಷಿಸಿತು.

ಶ್ರೀ ಕೃಷ್ಣಶಾಸ್ತ್ರಿಗಳಿಗೆ ಅವಕಾಶ ದೊರಕಿದಾಗ ಒಳ್ಳೆಯ ಕೆಲಸಮಾಡ ಬೇಕೆನ್ನುವುದರಲ್ಲಿ ತುಂಬ ನಂಬಿಕೆ. ಒಮ್ಮೆ ಅವರು ನನಗೆ ಈ ರೀತಿ ಪತ್ರ ಬರೆದರು: 'My dear HMS......I am a believer in work–when there is incentive and opportunity. It may be rough-hewn. If we wait for perfection, we may never see it. We should not be ashamed to revise or rewrite. It is given to very–few if at all–to write once and for all. So let Bhattas and Murthis write, when they can and what they can.' ಈ ಮಾತಿನಿಂದ ಶಾಸ್ತ್ರಿಗಳು ತಮ್ಮ ಬರವಣಿಗೆಯನ್ನು ಮತ್ತೆ ಮತ್ತೆ ತಿದ್ದಿ ಬರೆಯುತ್ತಿದ್ದರೆಂದು ಅರ್ಥವಲ್ಲ. ಅಭಿಪ್ರಾಯ ಗಳಲ್ಲಿ ಭೇದವಿರಬಹುದು—ಅವು ಯಾರ ಬರವಣಿಗೆಯಲ್ಲಿ ತಾನೆ ಇರುವುದಿಲ್ಲ? ಆದರೆ ಶಾಸ್ತ್ರಿಗಳು ಬರೆದ ಗ್ರಂಥಗಳು ಸರ್ವಾಂಗಸುಂದರವಾಗಿ ಅಚ್ಚುಕಟ್ಟಾಗಿವೆ. ಅವರ ಹಸ್ತಪ್ರತಿ ಸ್ಫುಟವಾಗಿದ್ದು ಒಂದು ಚಿತ್ತೂ ಇಲ್ಲದೆ ಇರುತ್ತಿತ್ತು. ಒಂದು ವಿಷಯವನ್ನು ಬರವಣಿಗೆಗೆ ಇಳಿಸುವುದಕ್ಕಿಂತ ಮುಂಚೆ ಅವರು ಬಹುಕಾಲ ಆಳವಾಗಿ ಯೋಚಿಸುತ್ತಿದ್ದರು. ಆ ಬಳಿಕ ಅದನ್ನು ಲೀಲಾಜಾಲವಾಗಿ ಬರೆದು

ಕೊಂಡು ಹೋಗುತ್ತಿದ್ದರು. ಉದಾಹರಣೆಗೆ 'ಸಂಸ್ಕೃತ ನಾಟಕ' ಬರೆಯಲು ಅವರಿಗೆ ಹತ್ತುವರ್ಷಬೇಕಾಯಿತು. ಅದರಲ್ಲಿ ಪಾಂಡಿತ್ಯ ಯಥೇಚ್ಛವಾಗಿದೆ; ಆದರೆ ಅದು ಅಕ್ಲಿಷ್ಟಪ್ರಸನ್ನ ಶೈಲಿಯ ಗ್ರಂಥ. 'ಬಂಕಿಮಚಂದ್ರ' ರೂಪಗೊಳ್ಳು ವುದಕ್ಕೆ ಎಂಟು ವರ್ಷಗಳು ಬೇಕಾದವು. 'ವಚನ ಭಾರತ' ಅರವತ್ತು ವರ್ಷಗಳ ತಪಸ್ಸಿನ ಫಲ. ಶ್ರೀ ಶಾಸ್ತ್ರಿಗಳು ಕನ್ನಡಕೋಶದ ಮೊದಲ ಅಧ್ಯಕ್ಷರಾಗಿದ್ದರಷ್ಟೆ. ಅದರ ವಿಳಂಬದಿಂದ ಬೇಸತ್ತ ಅವರು 'ಸಮಿತಿಯಲ್ಲಿರುವವರು ಕನ್ನಡ ಭಾಷೆಯಲ್ಲಿ ನುರಿತವರು. ನಮಗೆ ತಿಳಿಯದುದು ಬೇರೆಯವರಿಗೆ ತಿಳಿಯುತ್ತದೆಯೇ? ಒಂದು ವೇಳೆ ತಪ್ಪಾದರೆ ತಿದ್ದಿಕೊಳ್ಳೋಣ' ಎನ್ನುತ್ತಿದ್ದರು. ನಿಘಂಟುವಿನ ಕರಡುಪ್ರತಿಯ ಎಂಟು ಪುಟಗಳನ್ನು ಸಿದ್ಧಮಾಡುವಾಗ, ಅವರು ಮಿಕ್ಕೆಲ್ಲ ಕೆಲಸಗಳನ್ನೆಲ್ಲ ಬದಿಗಿಟ್ಟು ನಿಘಂಟುಗಳಲ್ಲಿ ಮಗ್ನರಾಗಿರುತ್ತಿದ್ದರು.' 'ವಚನಭಾರತ' 'ನಿಬಂಧ ಮಾಲಾ'ಗಳನ್ನು ರಚಿಸುತ್ತಿದ್ದಾಗ ಅವರು ಅನುಸರಿಸುತ್ತಿದ್ದ ನಿಯಮ ಅನೂಹ್ಯ. ದಿನಕ್ಕೆ ಮೂರು ಪುಟಗಳಷ್ಟು 'ವಚನಭಾರತ' ಬರೆಯಬೇಕೆಂಬುದು ಅವರ ಸತ್ಯಸಂಕಲ್ಪ. ಇದಕ್ಕಾಗಿ ಪ್ರತಿನಿತ್ಯವೂ ಹತ್ತೂಕಾಲು ಗಂಟೆಗೆ ಊಟಮಾಡಿ, ಹನ್ನೊಂದರವರೆಗೆ ವಿಶ್ರಾಂತಿ ಪಡೆದು, ಆ ಬಳಿಕ ವಿದ್ಯಾರ್ಥಿಯಂತೆ ಮೇಜಿನ ಮುಂದೆ ಕುಳಿತು ಗ್ರಂಥರಚನೆಗೆ ತೊಡಗುತ್ತಿದ್ದರು. ಸಂಕಲ್ಪಿಸಿದಷ್ಟು ಬರವಣಿಗೆಯನ್ನು ಬರೆಯದೆ ಅವರು ಮೇಲಕ್ಕೆ ಏಳುತ್ತಿರಲಿಲ್ಲ. ಬಂಗಾಳಿಯನ್ನು ಬಲ್ಲ ಕನ್ನಡಿಗನ ಕರ್ತವ್ಯವೆಂದು ತಿಳಿದು, ರವೀಂದ್ರನಾಥ ಠಾಕೂರರ ಪ್ರಬಂಧಗಳ ಅನುವಾದಕ್ಕೆ ಒಪ್ಪಿಕೊಂಡು, ಮಿಕ್ಕ ಭಾಷೆಗಳಲ್ಲಿ ಈ ಗ್ರಂಥದ ಅನುವಾದ ಬರುವುದಕ್ಕೆ ಮುಂಚೆಯೇ ತಮ್ಮ ಕಾರ್ಯವನ್ನು ಮುಗಿಸಿದರು. ಶಾಸ್ತ್ರಿಗಳ ಸಂಸ್ಕೃತ ಬಂಗಾಳೀ ಸಾಹಿತ್ಯದ ಅಭ್ಯಾಸದ ಫಲವಾಗಿ ಕನ್ನಡಿಗರಿಗೆ 'ಭಾಸಕವಿ' 'ಸಂಸ್ಕೃತ ನಾಟಕ' 'ವಚನ ಭಾರತ' 'ಕಥಾಮೃತ' 'ಬಂಕಿಮಚಂದ್ರ' 'ನಿಬಂಧಮಾಲಾ' ಗ್ರಂಥಗಳಂತಹ ತನಿವಣ್ಣುಗಳು ದೊರಕಿದವು. ಶಾಸ್ತ್ರಿಗಳ ಈ ವೀರನಿಷ್ಠೆ ಅನು ಕರಣೀಯ.

ಅಷ್ಟಮದಗಳಲ್ಲಿ ವಿದ್ಯಾಮದವೂ ಒಂದೆಂದು ಬಲ್ಲವರು ಹೇಳುತ್ತಾರೆ. ಯೌವನ, ಇತರರು ಅಸೂಯೆಪಡುವಂತಹ ಅಧಿಕಾರ, ಒಳ್ಳೆಯ ವಿದ್ಯೆ ಇವು ಗಳಿದ್ದಲ್ಲಿ ಮನುಷ್ಯನಲ್ಲಿ ಅಹಂಕಾರಮೂಡುವುದು—ಅಹಂಕಾರ ಕ್ಷಮ್ಯ; ದುರಹಂ ಕಾರ ಅಕ್ಷಮ್ಯ—ಸಹಜ. ಶ್ರೀ ಕೃಷ್ಣಶಾಸ್ತ್ರಿಗಳಿಗೆ ಇವೆಲ್ಲ ಇದ್ದುವು. ಆರೋಗ ದೃಢಕಾಯವಾದ ದೇಹ, ನಾಲ್ಕಾರು ಭಾಷೆಗಳಲ್ಲಿ ಪ್ರಭುತ್ವ, ವಿಶ್ವವಿದ್ಯಾನಿಲಯ ದಲ್ಲಿ ಆಗ ಏಕೈಕವಾಗಿದ್ದ ಕನ್ನಡ ಪ್ರಾಧ್ಯಾಪಕ ಪದವಿ, ಹತ್ತಾರು ಸಮಿತಿಗಳ ಸದಸ್ಯತ್ವ ಇವೆಲ್ಲ ಅವರಿಗಿದ್ದರೂ ದುರಹಂಕಾರದ ಮಾತಿರಲಿ, ಅಹಂಕಾರವೂ ಅವರ ಬಳಿ ಸುಳಿಯುತ್ತಿರಲಿಲ್ಲ. 'ನೀವು ವಿದ್ವಾಂಸರು, ಪಂಡಿತರು, ನಾವು ಅಷ್ಟೇನೂ ತಿಳಿದವರಲ್ಲ' ಎಂದು ಹೇಳಿದರೆ, ಅವರು ಹೇಳುತ್ತಿದ್ದುದಾದರೂ

ಏನು? 'ಪಾಂಡಿತ್ಯವನ್ನು ಅಳೆಯಲು ಇನ್ನೂ ಯಾರೂ ಯಾವ ಯಂತ್ರವನ್ನೂ ನಿರ್ಮಿಸಿಲ್ಲ. ನಮ್ಮ ನಮ್ಮ ಯೋಗ್ಯತೆಗೆ ತಕ್ಕಂತೆ ನಾವೆಲ್ಲ ವಿದ್ವಾಂಸರೇ! ಕಷ್ಟ ಪಟ್ಟು ಪಾಂಡಿತ್ಯವನ್ನು ಗಳಿಸಿ; ಯಾರ ಮುಂದೂ ತಲೆ ತಗ್ಗಿಸಬೇಡಿ. ನಮ್ಮಲ್ಲಿ ಪಾಂಡಿತ್ಯವಿಲ್ಲವೆಂದು ಆಡಿಕೊಳ್ಳುವವರು ಸರ್ವಜ್ಞರಲ್ಲವಷ್ಟೆ!' ಎಂದು ನಮ್ಮನ್ನು ಪ್ರೋತ್ಸಾಹಿಸುತ್ತಿದ್ದರು.

ಹಣಕಾಸಿನ ವ್ಯವಹಾರದಲ್ಲಿಯೂ ಕೃಷ್ಣಶಾಸ್ತ್ರಿಗಳದು ಕಟ್ಟು ನಿಟ್ಟಾದ ಸ್ವಭಾವ. 'ನಾನು ಒಳ್ಳೆಯವನು; ನೀನು ಒಳ್ಳೆಯವನು; ಆದರೆ ದುಡ್ಡು ಕೆಟ್ಟದ್ದು; ಆದ್ದರಿಂದ ಅದರ ವಿಚಾರದಲ್ಲಿ ಎಚ್ಚರಿಕೆಯಿಂದಿರಬೇಕು' ಎಂಬುದು ಅವರ ತತ್ವವಾಗಿತ್ತು. ಹಣಕಾಸಿನ ವಿಷಯದಲ್ಲಿ ಅನೇಕರಿಗೆ ಅಪ್ರಿಯವಾದರೂ ನಿಷ್ಠುರವಾಗಿ ನಡೆದುಕೊಂಡರು, ತಮ್ಮ ಘನತೆಯನ್ನು ಉಳಿಸಿಕೊಂಡರು. ದಾನದ ವಿಷಯದಲ್ಲಿ ಅವರು ಸಂಪ್ರದಾಯಬದ್ಧರು. ಉದ್ದೇಶ ಸರಿಯಾದುದೆಂದು ತೋರಿದರೆ ಅವರು ಮುಕ್ತಹಸ್ತರಾಗಿ ಕೊಡುತ್ತಿದ್ದರು. ನನ್ನ ಮನೆಯಲ್ಲಿದ್ದ ಒಬ್ಬ ವಿದ್ಯಾರ್ಥಿಗೆ ಪರೀಕ್ಷೆ ಕಟ್ಟಲು ತೂಕವಾದ ಮೊತ್ತವನ್ನು ಕೊಟ್ಟು, ಕೆಲವು ಕಾಲದಮೇಲೆ ಆತನು ಅದನ್ನು ಹಿಂದಿರುಗಿಸಲು ಬಂದಾಗ 'ನಾನು ಇದನ್ನು ನಿನಗೆ ಸಾಲವಾಗಿ ಕೊಡಲಿಲ್ಲ. ನನ್ನಂತೆಯೇ ಉಪಾಧ್ಯಾಯನಾದ ನೀನು ಇದನ್ನು ಯೋಗ್ಯರಾದ ಬಡ ವಿದ್ಯಾರ್ಥಿಗಳಿಗೆ ಕೊಟ್ಟರೆ ನನ್ನ ಹಣ ನನಗೆ ಬಂದಹಾಗಾಯಿತು' ಎಂದು ಹೇಳಿ ಅವನನ್ನು ಕಳುಹಿಸಿಕೊಟ್ಟರು. ಕೃಷ್ಣಶಾಸ್ತ್ರಿಗಳು ಶ್ರೀಮಂತರೇನಲ್ಲ. ಆದರೂ ಹೃದಯದ ಶ್ರೀಮಂತತನದಿಂದ ಕನ್ನಡ ಸಾಹಿತ್ಯಪರಿಷತ್ತು, ಮೈಸೂರಿನ ಸಂಸ್ಕೃತ ಮಹಾಪಾಠಶಾಲೆ, ಮೈಸೂರು ವಿಶ್ವವಿದ್ಯಾನಿಲಯಗಳಲ್ಲಿ ದತ್ತಿಗಳನ್ನು ಕಲ್ಪಿಸಿದ್ದಾರೆ.

'ಪ್ರಬುದ್ಧ ಕರ್ಣಾಟಕ' ಶ್ರೀ ಕೃಷ್ಣಶಾಸ್ತ್ರಿಗಳ ಚೊಚ್ಚಲ ಮಗು. ಅದನ್ನು ಬೆಳಸಿ ಸುಪುಷ್ಟವನ್ನಾಗಿ ಮಾಡಲು ಅವರು ತಮ್ಮ ತನುಮನಗಳನ್ನು ಧಾರೆಯೆರೆದರು. ಐವತ್ತು ವರ್ಷಗಳ ಕಾಲ ಸುಪುಷ್ಟವಾಗಿ ಬೆಳೆದುಬಂದಿರುವ ಕನ್ನಡದ ಏಕೈಕ ಪತ್ರಿಕೆಯೆಂದರೆ 'ಪ್ರಬುದ್ಧ ಕರ್ಣಾಟಕ'ವೇ! ಕವಿತೆ, ಸಣ್ಣ ಕಥೆ, ವಿಮರ್ಶೆ, ಸಂಶೋಧನೆಗಳಿಗೆ ಅದು ಲೇಖಕರಿಗೆ ಎಂಥ ಕಲ್ಪವೃಕ್ಷವಾಯಿತೆಂಬುದು ಈಗ ಎಲ್ಲರಿಗೂ ತಿಳಿದ ವಿಷಯ. ಈ ಪತ್ರಿಕೆಯಿಂದ ಅದೆಷ್ಟು ಜನ ಕವಿಗಳು, ಕಥೆ ಗಾರರು, ಲೇಖಕರು ಪ್ರಕಾಶಕ್ಕೆ ಬಂದರು! ಶ್ರೀಮಾಸ್ತಿಯವರ 'ಜೀವನ'ವನ್ನು ವಿಶೇಷವಾಗಿ ಅದರ ಸಂಪಾದಕೀಯ ಟಿಪ್ಪಣಿಗಳಿಗಾಗಿ ಓದುತ್ತಿದ್ದಂತೆ ವಿದ್ಯಾರ್ಥಿ ಗಳಾದ ನಾವು 'ಪ್ರಬುದ್ಧಕರ್ಣಾಟಕ'ವನ್ನು ಕಥೆಗಾಗಿ ವಸ್ತುಕೋಶಗಳಾಗಿ ಓದುತ್ತಿದ್ದೆವು. ಅವು ಅಷ್ಟು ನವೀನವಾಗಿ ಸಾರಸ್ಯವಾಗಿ ಉಚ್ಚಮಟ್ಟದ್ದಾಗಿರು ತ್ತಿದ್ದುವು. ಪತ್ರಿಕೆಯ ವಿಷಯದಲ್ಲಂತೂ ಶಾಸ್ತ್ರಿಗಳದು ವೀರವ್ರತ. ಆಯಾ ಹಬ್ಬಗಳ ದಿನ ಪತ್ರಿಕೆ ಗ್ರಾಹಕರ ಕೈಸೇರಬೇಕೆಂಬ ಉದ್ದೇಶದಿಂದ, ಅದನ್ನು ಹೊರ

ತರಲು ಅವರು ದೇಹಶ್ರಮವನ್ನೂ ಲಕ್ಷಿಸುತ್ತಿರಲಿಲ್ಲ. ಅಚ್ಚುಕೂಟಗಳಿಗೆ, ಲೇಖಕರ ಬಳಿಗೆ ಹೋಗಲು ಅವರು ಸೈಕಲ್ಲನ್ನೂ, ಕಾಲನ್ನೂ ಸವೆಯಿಸಿದ ಲೆಕ್ಕವನ್ನು ದೇವರೇ ಬಲ್ಲ! ಕನ್ನಡ ಪ್ರಾಧ್ಯಾಪಕತ್ವದ ಜೊತೆಗೆ 'ಪ್ರಬುದ್ಧ ಕರ್ಣಾಟಕ'ದ ಸಂಪಾದಕತ್ವವೂ ಅವರಿಗೆ ಬಳುವಳಿಯಾಗಿ ಬಂತು. ಕನ್ನಡ ಉಪಾಧ್ಯಾಯರಿಂದ 'ಪ್ರಬುದ್ಧ ಕರ್ಣಾಟಕ'ಕ್ಕೆ ನಾನು ಪ್ರತಿವರ್ಷವೂ ನಿರೀಕ್ಷಿಸು ವುದು ಒಂದು ಲೇಖನ ಮತ್ತು ಒಂದು ವಿಮರ್ಶೆ ಎಂದು ತಮ್ಮ ನೀತಿಯನ್ನು ಪ್ರಕಟಿಸಿದರು. (ನಮ್ಮ ನಾಡಿನ ವಿಶ್ವವಿದ್ಯಾನಿಲಯದ ಉಪಾಧ್ಯಾಯರು ವರ್ಷಕ್ಕೆ ಒಂದರಂತೆ ಲೇಖನ ಬರೆದುಕೊಟ್ಟರೆ ಕನ್ನಡ ಬದುಕಿಹೋದೀತು!) ಉಪಾಧ್ಯಾ ಯರ ಮೊದಲ ನಿಷ್ಠೆ 'ಪ್ರಬುದ್ಧ ಕರ್ಣಾಟಕ'ಕ್ಕೆ ಎಂಬುದು ಇವರ ವಾದ. (ಅಧ್ಯಾಪಕರೊಬ್ಬರ ನಾಟಕ ಬೇರೆ ಪತ್ರಿಕೆಯಲ್ಲಿ ಪ್ರಕಟವಾದಾಗ ಈ ನಿಷ್ಠೆಗೆ ಚ್ಯುತಿ ಬಂದಿತೆಂದು ಇವರು ಕೊರಗಿದರು.) ಪತ್ರಿಕೆ ಸಕಾಲದಲ್ಲಿ ಸುಪುಷ್ಟವಾಗಿ ಬರಬೇಕೆನ್ನುವ ಉದ್ದೇಶದಿಂದ ಒಳ್ಳೊಳ್ಳೆಯ ಬರಹಗಳನ್ನು ಹುಡುಕಿ ತಂದು ಮೂರು ಸಂಚಿಕೆಗಳಿಗೆ ಬೇಕಾಗುವ ಸಾಮಗ್ರಿಯನ್ನು ಮುಂಗಡವಾಗಿ ಇಟ್ಟು ಕೊಳ್ಳುತ್ತಿದ್ದರು. ಒಮ್ಮೆ ಹೀಗಾಯಿತು. ಮರಿಮಲ್ಲಪ್ಪನವರ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದ ಶ್ರೀ ಜಿ. ಆರ್. ರಂಗಸ್ವಾಮಿಯವರು 'ಕ್ಷ-ಕಿರಣ' (X Rays)ಗಳ ಮೇಲೆ ಸೊಗಸಾದ ಲೇಖನವನ್ನು ಬರೆದು ತಂದು ಶಾಸ್ತ್ರಿಗಳಿಗೆ ತೋರಿಸಿದರು. ಲೇಖನವನ್ನು ಶಾಸ್ತ್ರಿಗಳು ಮೆಚ್ಚಿದ್ದಲ್ಲದೆ, ಅದು ಪತ್ರಿಕೆಯಲ್ಲಿ ಬರಲು ಯೋಗ್ಯವಾದುದೆಂದು ನಿರ್ಧರಿಸಿ, ಅದನ್ನು ಅಚ್ಚುಕೂಟಕ್ಕೆ ಕೊಟ್ಟು, ಕರಡುಗಳನ್ನು ತಿದ್ದಿ, ಲೇಖನಕ್ಕೆ ಬೇಕಾದ ಪಡಿಯಚ್ಚುಗಳನ್ನು ಮಾಡಿಸಿ ಪ್ರಕಟಿಸಿ ದರು. ಈ ಸಂದರ್ಭದಲ್ಲಿ ಲೇಖಕರ ಮನೆಗೆ ಶಾಸ್ತ್ರಿಗಳು ಬಂದುದನ್ನು ಕಂಡು, ಲೇಖಕರಿಗೆ ಆಶ್ಚರ್ಯವಾಯಿತು. ಈ ರೀತಿಯ ನಿದರ್ಶನಗಳು ಎಷ್ಟೋ! ಒಂದು ಅವಧಿಯಲ್ಲಿ ಪತ್ರಿಕೆ ಸೊರಗಿ ಬಡವಾಗಿಹೋಯಿತು. ಆದರೆ ಮತ್ತೆ ಅದು ಶ್ರೀ ದೇ. ಜವರೇಗೌಡರ ಮತ್ತು ಶ್ರೀ ಎಸ್. ವಿ. ಪರಮೇಶ್ವರ ಭಟ್ಟರ ಸಂಪಾದಕತ್ವದಲ್ಲಿ, ಸುಪುಷ್ಟಗೊಂಡು ಹೊರಬಂದಾಗ, ಸಂತೋಷಗೊಂಡು ಅವರು 'ಶ್ರೀ ಜವರೇ ಗೌಡರ ಮತ್ತು ಶ್ರೀಪರಮೇಶ್ವರ ಭಟ್ಟರ ಸಂಪಾದಕತ್ವದಲ್ಲಿ 'ಪ್ರಬುದ್ಧ ಕರ್ಣಾಟಕ' ಕ್ರಮವಾಗಿ ಆದರೆ ಸುದೃಢವಾಗಿ ಮುಂದುವರಿಯುತ್ತಿದೆ' ಎಂದು ಬರೆದರು. ಈ ಪತ್ರಿಕೆಯ ವಿಷಯದಲ್ಲಿ ಕೊನೆಯವರೆಗೆ ಇದೆ ತೆರನಾದ ಅಭಿಮಾನ ಇವರಿಗಿತ್ತು.

ಶ್ರೀ ಶಾಸ್ತ್ರಿಗಳು ಬೆಂಗಳೂರಿನಲ್ಲಿದ್ದಾಗ ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯ ಸಂಪಾದಕರಾಗಿದ್ದರು. ಆದರ್ಶವಾದಿಗಳ ಮಧ್ಯದಲ್ಲಿದ್ದುಕೊಂಡು ಅದನ್ನು ನಡೆಸಬೇಕಾದುದು ಎಷ್ಟು ಕಷ್ಟವಾಗಿತ್ತೆಂಬುದನ್ನು ಅವರೇ ಒಂದುಕಡೆ ಹೇಳಿ ಕೊಂಡಿದ್ದಾರೆ. ಆ ಪತ್ರಿಕೆಯ ಕೊನೆಗೆ ಪ್ರಾಚ್ಯ ಲೇಖನಾವಳಿಗಳನ್ನು ಕೊಡುವ,

ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಕನ್ನಡ ಲೇಖನಗಳ ಸಾರವನ್ನು ಹೊರಗಡೆಯವರಿಗೆ ತಿಳಿಯಲು ಅನುಕೂಲವಾಗುವಂತೆ ಅವುಗಳ ಸಾರವನ್ನು ಇಂಗ್ಲೀಷಿನಲ್ಲಿ ಕೊಡುವ ಸಂಪ್ರದಾಯವನ್ನು ಅಲ್ಲಿ ರೂಢಿಗೆ ತಂದರು.

೫

ಶ್ರೀ ಕೃಷ್ಣಶಾಸ್ತ್ರಿಗಳ ಪಾಂಡಿತ್ಯ ಹಾಗೂ ಅವರ ಕೃತಿಗಳ ನೆಲೆ ಬೆಲೆಗಳನ್ನು ಕುರಿತು ಇಲ್ಲಿ ಉಲ್ಲೇಖಿಸುವುದು ಈ ಲೇಖನಕ್ಕೆ ಮೀರಿದ ವಿಷಯ ನನಗಿಂತಲೂ ಹೆಚ್ಚು ಸುಸಮರ್ಥರಾದವರು ಇದನ್ನು ಮಾಡಬೇಕು. ಆದರೆ ಈಗ ನಾನು ಅವರ ಮಿತ್ರ ಮತ್ತು ಶಿಷ್ಯಸಂಬಂಧವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ಶ್ರೀ ಕೃಷ್ಣಶಾಸ್ತ್ರಿಗಳನ್ನು ಮೊದಲಬಾರಿ ಕಂಡವರಿಗೆ ಅವರು ಒರಟು ಎಂಬ ಭಾವನೆ ಮನಸ್ಸಿನಲ್ಲಿ ಮೂಡುತ್ತಿದ್ದಿತೆಂದು ಅನೇಕರು ನನಗೆ ಹೇಳಿದ್ದುಂಟು. ಈ ಹೇಳಿಕೆಯನ್ನು ಸ್ವಲ್ಪ ಮಾರ್ಪಡಿಸಿ ಹೇಳಬೇಕೆಂದು ನನಗೆ ತೋರುತ್ತದೆ. ಕೃಷ್ಣಶಾಸ್ತ್ರಿಗಳ ಪ್ರಕೃತಿ ನಿಷ್ಠುರ, ಮಾತು ನೇರ ಹಾಗೂ ತೀಪ್ರ; ಹೃದಯ ಅಷ್ಟೇ ಮೃದು. ಅವರ ಮಿತ್ರವೃಂದ ಕಿರಿದಾದದ್ದಾದರೂ ಘನವಾದದ್ದು. ಅವರ ಶಿಷ್ಯಕೋಟಿ ಶ್ರೇಷ್ಠವಾದದ್ದು. ಅವರು ತಮ್ಮ ಬಳಿ ಹೆಚ್ಚಾಗಿ ಜನರನ್ನು ಸೇರಿಸುತ್ತಿರಲಿಲ್ಲವಾದರೂ, ಒಮ್ಮೆ ಒಬ್ಬರ ವಿಷಯದಲ್ಲಿ ಅಭಿಮಾನ ಮೂಡಿತೆಂದರೆ ಅದು ಎಂಥ ಅಭಿಮಾನ! 'ವೆಂಕಣ್ಣಯ್ಯ ಬೇರೆಯಲ್ಲ, ನಾನು ಬೇರೆಯಲ್ಲ' 'ವೆಂಕಣ್ಣಯ್ಯನ ಪ್ರಾರ್ಥನೆಯಿಂದ ನನ್ನ ಪ್ರಾಣ ಉಳಿಯಿತು' ಎಂದು ಅವರು ತಮ್ಮ ಮತ್ತು ವೆಂಕಣ್ಣಯ್ಯನವರ ಸ್ನೇಹಸಂಬಂಧವನ್ನು ಸ್ಮರಿಸಿಕೊಂಡಿದ್ದಾರೆ. ವೆಂಕಣ್ಣಯ್ಯನವರ ಪ್ರಕೃತಿ ಕೃಷ್ಣಶಾಸ್ತ್ರಿಗಳ ಪ್ರಕೃತಿಯಿಂದ ಭಿನ್ನವಾದುದು. ಆದರೆ ಇಬ್ಬರೂ ಶುದ್ಧಚೇತನರು. ಇವರಿಬ್ಬರ ಸ್ನೇಹ ಹೊಸಗನ್ನಡ ಸಾಹಿತ್ಯದ ಬೆಳವಣಿಗೆಗೆ ಒಂದು ಅಪೂರ್ವ ಯೋಗವನ್ನು ತಂದುಕೊಟ್ಟಿತು! ಹಿರಿಯ ಸಾಹಿತಿಗಳಾದ ಶ್ರೀ ಮಾಸ್ತಿಯವರೂ ಶಾಸ್ತ್ರಿಗಳೂ ಮೈಸೂರಿನ ವೆಸ್ಲಿಯನ್ ಮಿಷನ್ ಸ್ಕೂಲಿನಲ್ಲಿ ಓದಿದವರು. ಮಾಸ್ತಿಯವರು ಒಂದು ತರಗತಿ ಮುಂದು; ಶಾಸ್ತ್ರಿಗಳು ಒಂದು ತರಗತಿ ಹಿಂದು. ಮಾಸ್ತಿಯವರಲ್ಲಿ ಶಾಸ್ತ್ರಿಗಳಿಗೆ ತುಂಬ ಅಭಿಮಾನ. ತಮ್ಮ ಬಾಲ್ಯವನ್ನು ನೆನೆಸಿಕೊಳ್ಳುತ್ತ ಒಮ್ಮೆ ಶಾಸ್ತ್ರಿಗಳು 'ಆ ಹುಡುಗ ತನ್ನ ವಯಸ್ಸಿಗೆ ಮೀರಿದ ಇಂಗ್ಲಿಷ್ ಭಾಷೆಯನ್ನು ಪ್ರಯೋಗಿಸುತ್ತಿದ್ದ. (ಅವರು ಹೇಳುತ್ತಿದ್ದ ವಾಕ್ಯ ಮರೆತುಹೋಗಿದೆ). ಇದನ್ನು ಕಂಡು ನಮಗೆಲ್ಲ ಆಶ್ಚರ್ಯ. ಒಮ್ಮೆ ಶಾಲೆಯಲ್ಲಿ ಇಂಗ್ಲಿಷ್ ಕಾಗುಣಿತದ ಸ್ಪರ್ಧೆ ನಡೆಯಿತು. ನಾನೂ ಬಹುದೂರ ಈತನೊಡನೆ ಸ್ಪರ್ಧಿಸಿದೆ. ಕೊನೆಗೆ ಒಂದು ಪದದ ಕಾಗುಣಿತದಲ್ಲಿ ಸೋತುಹೋದೆ.' ಈ ರೀತಿ ಅಭಿಮಾನದಿಂದ ಹೇಳಿದ್ದುಂಟು. ರೇಷ್ಮೆಯಂತೆ ಶ್ರೇಷ್ಠ, ನವುರು, ಕಾಂತಿಯುಕ್ತ ಹಾಗೂ ಬಹುದಿನ ಬಾಳತಕ್ಕ 'ಮಾಸ್ತಿಸಾಹಿತ್ಯ'

ವನ್ನು ಇವರು ಬಾಯಿತುಂಬ ಹೊಗಳುತ್ತಿದ್ದರು. ಎಂ. ಆರ್. ಶ್ರೀನಿವಾಸಮೂರ್ತಿಗಳಿಗೂ ಅವರಿಗೂ ಇದ್ದ ಸ್ನೇಹ ಶಾಸ್ತ್ರಿಗಳು ಮೂರ್ತಿಗಳ ಮೇಲೆ ಬರೆದಿರುವ ಚರಮ ಲೇಖನದಲ್ಲಿ ಸುವ್ಯಕ್ತವಾಗಿದೆ. ಇನ್ನು ಅವರ ಶಿಷ್ಯರೋ! ಇಂಗ್ಲೀಷಿನಲ್ಲಿ ಉದ್ದಾಮ ಪಂಡಿತರಾದರೂ ಕನ್ನಡದಲ್ಲಿ ಘನವಾದ ಕೃತಿರಚನೆ ಮಾಡಿದವರೆಂದು ರಂಗಣ್ಣನವರಲ್ಲಿ ಅಭಿಮಾನ. ಅವರ 'ರಂಗಬಿನ್ನಪ' ಕನ್ನಡದ ಗೀತಾಂಜಲಿ ಎಂದು ಶಾಸ್ತ್ರಿಗಳು ಬಾಯಿತುಂಬ ಪ್ರಶಂಸಿಸಿದರು. ಎಸ್. ವಿ. ಎಂಬ ಅಕ್ಷರಗಳಿಗೆ ಶೈಲಿ ವಚನಗಳ ರಂಗಣ್ಣ ಎಂದು ಅರ್ಥ ಕಲ್ಪಿಸಿದರು. ಸಾರ್ಥಕವಾದ ಕಲ್ಪನೆ! ನಾ. ಕಸ್ತೂರಿಗಳು ಶಾಸ್ತ್ರಿಗಳ ಮಾತಿನಂತೆ ನಾಟಕದ ಕಸ್ತೂರಿಯಾದರು!

ಕೃಷ್ಣಶಾಸ್ತ್ರಿಗಳಿಗೆ ರಾಷ್ಟ್ರಕವಿ ಶ್ರೀ ಕುವೆಂಪು ಅವರಲ್ಲಿಯೂ ಅವರ ಕೃತಿಗಳಲ್ಲಿಯೂ ತುಂಬು ಅಭಿಮಾನ. 'ಸುಗ್ಗಿ ಬರುತಿದೆ' ಎಂಬ ಕವನವನ್ನು ಅದರ ಭಾಷೆ ಭಾವ ಛಂದಸ್ಸುಗಳಿಗಾಗಿ ಉದಹರಿಸುತ್ತಿದ್ದರು. ದೆಹಲಿ ಸಾಹಿತ್ಯ ಅಕಾಡೆಮಿಯ ಸಾಹಿತ್ಯಪ್ರಶಸ್ತಿ ಶ್ರೀ ಪುಟ್ಟಪ್ಪನವರಿಗೆ ಸಂದಾಗ ಸಾಹಿತ್ಯ ಪರಿಷತ್ತಿನಲ್ಲಿ ಮಾಡಿದ ಅವರ ಭಾಷಣ ಅಭಿಮಾನದ್ಯೋತಕವಾಗಿದೆ. ಅವರು ವಿಶ್ವವಿದ್ಯಾನಿಲಯದ ಕುಲಪತಿಗಳಾದಾಗ ತಮಗೇ ಆ ಪದವಿ ಸಂದಂತೆ ಹೆಮ್ಮೆಗೊಂಡರು. ಕೃಷ್ಣಶಾಸ್ತ್ರಿಗಳ 'ಬಂಕಿಮಚಂದ್ರ'ಕ್ಕೆ ಮುನ್ನುಡಿಯನ್ನು ಬರೆಯುತ್ತ ಶ್ರೀ ಪುಟ್ಟಪ್ಪನವರು "ಬಂಕಿಮಚಂದ್ರರ ವಿಚಾರವಾಗಿ ರವೀಂದ್ರರು ಬರೆದ ಸಮಾಲೋಚನೆಯೊಂದನ್ನು ತಮ್ಮ ಗ್ರಂಥದ ಪೀಠಿಕಾ ಭಾಗದಲ್ಲಿ ಸೇರಿಸುವ ಸಂದರ್ಭದಲ್ಲಿ ನನ್ನ ಮುನ್ನುಡಿಗಾಗಿ ಕಾಗದ ಬರೆಯುತ್ತ ಶ್ರೀ ಕೃಷ್ಣಶಾಸ್ತ್ರಿಗಳು 'ಇಬ್ಬರು ಕವೀಂದ್ರರು ಎರಡು ಕಡೆಯಿಂದ ನನ್ನನ್ನೂ ಬಂಕಿಮನನ್ನೂ ಎತ್ತಿ ನಿಲ್ಲಿಸಿದಂತಾಗುತ್ತದೆ' ಎಂದು ತಮ್ಮ ಒಲವರವನ್ನು ಮೆರೆದಿದ್ದಾರೆ. ಶ್ರೀ ಶಾಸ್ತ್ರಿಗಳ ಶಕ್ತಿ ಅಂತಹ ಮುಪ್ಪಿನ ಸ್ಥಿತಿಗೆ ಇಳಿದಿಲ್ಲ ಎನ್ನುವುದಕ್ಕೆ ಅವರ ಈ ವಿಮರ್ಶ ಮಹಾಕೃತಿಯೆ ಸಾಕ್ಷಿಯಾಗಿದೆ" ಎಂದು ಹೇಳಿ ತಮ್ಮ ವಿಶ್ವಾಸವನ್ನು ವ್ಯಕ್ತಪಡಿಸಿದರು. ಅದನ್ನು ನೋಡಿ ಮುಗ್ಧರಾದ ಶಾಸ್ತ್ರಿಗಳು 'ನಾನು ಪುಟ್ಟಪ್ಪನವರಿಗೆ ಸೋತದ್ದು ಎರಡನೆಯಬಾರಿ' ಎಂದರು. ಇದಲ್ಲವೆ ಶಿಷ್ಯವಾತ್ಸಲ್ಯ! ಕಷ್ಟಕಾಲದಲ್ಲಿ ಮನುಷ್ಯ ಸಹಾಯಮಾಡಿದಾಗ ಮನುಷ್ಯನ ಯೋಗ್ಯತೆ ಪ್ರಕಾಶಕ್ಕೆ ಬರುತ್ತದೆ. ಶ್ರೀ ತೀ. ನಂ. ಶ್ರೀಗಳ ತಂದೆ ತೀರಿಕೊಂಡಾಗ ಶಾಸ್ತ್ರಿಗಳು ಒಂದು ಹೆಗಲುಕೊಟ್ಟರು. ತೀ. ನಂ. ಶ್ರೀಗಳ ವಿದ್ವತ್ತಿನಲ್ಲಿ ಅಭಿಮಾನವುಳ್ಳ ಅವರು, ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಿಗೆ 'ಶ್ರೀ ತೀ. ನಂ. ಶ್ರೀಗಳ ವಿದ್ವತ್ಪೂರ್ಣವಾದ ಬರವಣಿಗೆ ಅಲ್ಪವೇ ಇರಬಹುದು. ಆದರೆ ಅವರು ಬರೆದಿರುವುದೆಲ್ಲ ಅಪ್ಪಟ ಬಂಗಾರ' ಎಂದು ಸಾರಿ ಹೇಳಿದರು. 'ವೀರಶೈವ ಸಾಹಿತ್ಯದಲ್ಲಿ ನಾನೇನು ಪರಿಣತನಲ್ಲ. ಅದನ್ನು ಚೆನ್ನಾಗಿಬಲ್ಲ ನರಸಿಂಹಾಚಾರ್ಯರ ಬಳಿ ನನಗೆ ಸಂಶಯಬಂದಾಗ ಕೇಳುತ್ತೇನೆ. ಸಾಹಿತ್ಯಚರಿತ್ರೆಯ ವಿಷಯದಲ್ಲಿ ಅವರು ಶ್ಲಾಘ್ಯವಾದ ಕೆಲಸಮಾಡಿದ್ದಾರೆ.

ಅದು ಪುಸ್ತಕರೂಪದಲ್ಲಿ ಹೊರಬರದಿದ್ದುದು ದುರ್ದೈವ.' ಇದು ಶ್ರೀ ನರಸಿಂಹಾಚಾರ್ಯರ ವಿದ್ವತ್ತಿನ ವಿಷಯದಲ್ಲಿ ಶಾಸ್ತ್ರಿಗಳ ಪ್ರಶಂಸೆ!

ಡಾ. ಕೆ. ಕೃಷ್ಣಮೂರ್ತಿಗಳು ಧ್ವನ್ಯಾಲೋಕವನ್ನು ಕನ್ನಡಿಸಲು ಶಾಸ್ತ್ರಿಗಳೇ ಕಾರಣರೆಂಬುದು ಈಗ ಎಲ್ಲರಿಗೂ ತಿಳಿದ ವಿಷಯ. ಕೃಷ್ಣಮೂರ್ತಿಗಳು ವಯಸ್ಸಿನಲ್ಲಿ ಕಿರಿಯರಾದರೂ, ಸಂಸ್ಕೃತ ಕನ್ನಡಗಳ ಅವರ ಪಾಂಡಿತ್ಯದಿಂದ ಸಂಸ್ಕೃತದಿಂದ ಕನ್ನಡಕ್ಕೆ ಬಹಳ ಕೃತಿಗಳು ಬರಬಹುದೆಂದು ನಂಬಿದ್ದರು. ಕೃಷ್ಣಮೂರ್ತಿಯವರೂ ಅವರ ನಂಬಿಕೆಯನ್ನು ಸಫಲಗೊಳಿಸಿದ್ದಾರೆ. ಶೂದ್ರಕನ ಮೃಚ್ಛಕಟಿಕದ ಭಾಷಾಂತರದ ವಿಷಯದಲ್ಲಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ ನನಗೆ ಈ ರೀತಿ ಪತ್ರ ಬರೆದರು: (ಈ ಪತ್ರಗಳಲ್ಲಿ ನನ್ನ ಹೆಸರು ಬಂದರೆ ಹೂವಿನೊಡನೆ ನಾರು ಎಂಬಂತೆ) 'ಕಾಣಿಕೆಯನಿದಕೊಂಡು ಸಂತಸದಿ ಹರಸುವೆನು। ಸರಸತಿಯ ಕೃಪೆಯಿಂದ ನನಸಾಯ್ತು ಸವಿಗನಸು॥ My dear HMS, .... Thanks for ಕಿರುಮಣ್ಣಿನ ಗಾಡಿ. It is really ಹೊನ್ನಿನಗಾಡಿ. Is it not? It is very good of you to have remembered my lesson on ಮೃಚ್ಛಕಟಿಕ. My admiration for the book has not abated even after the lapse of these 25 years. To me, it is still a bundle of problems. I can not be sure even about the country of ಶೂದ್ರಕ though the learned doctor says that it is 'ನಿಸ್ಸಂದಿಗ್ಧ' and thinks it is ಕರ್ಣಾಟಕ. It is an acheivement of modern Kannada literature because it is one of the longest of sanskrit dramas and the stanzas though fairly simple, are varied and their number is more than 350. I notice the Dr has maintained ಪ್ರಾಸ also in ಕಂದಪದ್ಯ. My hearty congratulations and blessings to the author and publisher— Yours affectionately, A. R. Krishna Sastri' ಲೇಖಕನಿಗೆ ಶಿಷ್ಯನಿಗೆ ಹಿರಿಯರಿಂದ ಇದಕ್ಕಿಂತ ಇನ್ನೇನು ಪ್ರಶಸ್ತಿಬೇಕು? ಎಲ್ಲಕ್ಕೂ ಮಿಗಿಲಾಗಿ ನನ್ನ ಮಿತ್ರರಾದ ಶ್ರೀ ಪರಮೇಶ್ವರಭಟ್ಟರು ಶಾಸ್ತ್ರಿಗಳಿಗೆ "ನಾನು ಏಕಲವ್ಯ, ನೀವು ದ್ರೋಣರಿದ್ದಂತೆ. 'ಕನ್ನಡ ಶಾಕುಂತಳ'ವನ್ನು ನಿಮಗೆ ಅರ್ಪಿಸುತ್ತೇನೆ. ಒಪ್ಪಿಕೊಳ್ಳಿ" ಎಂದು ಬರೆಯಲು ಅವರು ಬರೆದ ಹೃದಯಸ್ಪರ್ಶಿಯಾದ ಉತ್ತರವಿದು:

ಚಿ. ಪರಮೇಶ್ವರಭಟ್ಟನಿಗೆ ಆಶೀರ್ವಾದ—

ನಿನ್ನ ಕಾಗದ ತಲುಪಿತು. ನನ್ನ ಶಿಷ್ಯರಾದ ನೀವು ಕೆಲವರು ನನ್ನ ಮೇಲೆ ಹೊರಿಸುತ್ತಿರುವ ಗೌರವದಿಂದ ನಾನು ಭೂಮಿಗೆ ಬಗ್ಗುತ್ತಿದ್ದೇನೆ. ವಯಸ್ಸು, ವೃದ್ಧಾಪ್ಯ ನನ್ನನ್ನು ಬಗ್ಗಿಸಿಲ್ಲ.

ಗೌರವವು ಪ್ರತಿಯಾಗಿ ವಾತ್ಸಲ್ಯವನ್ನು ಚಿಮ್ಮಿಸುತ್ತಿದೆ. ಅದರಲ್ಲಿ ಅಸ್ವಾಭಾವಿಕತೆ ಏನೂ ಇಲ್ಲ. ಗುಣಕ್ಕೆ ಮತ್ಸರವೇ? ಈಗಾಗಲೇ ನನ್ನ ಹೆಸರು ನಿನ್ನ ಕೃತಿಗಳ ಸಂಬಂಧದಲ್ಲಿ ಬೇಕಾದಷ್ಟು ಬಂದಿದೆ. ಅಷ್ಟು ಗೌರವ ಸಾಕು. ಹೆಚ್ಚಾದರೆ ಕಾಳಿದಾಸನಿಗೇ ಆಶ್ಚರ್ಯವಾದೀತು. ಶಾಕುಂತಳದ ಮರ್ಯಾದೆ ನನಗೆ ಬಹಳ ಹಿರಿದು. ನಿನ್ನ ಸಂಕಲ್ಪವೇ ಸಾಕು ನನ್ನ ಸಂತೋಷಕ್ಕೆ. ಕಪ್ಪುಶಾಯಿಯಲ್ಲಿ ಅದರ ಪ್ರಕಾಶನ ಬೇಡ.' ನಿಮ್ಮಂಥ ಭೀಮಾರ್ಜುನರಿರುವಾಗ ನಾನು ದ್ರೋಣನೆಂದುಕೊಳ್ಳುವುದಕ್ಕೆ ಹೆಮ್ಮೆಯೇ! ಆದರೆ ನೀನು ಏಕಲವ್ಯನಾಗುವುದು ಬೇಡ. ನಿನ್ನ ಹೆಬ್ಬೆರಳುಗಳು ಇನ್ನೂ ಬಹುದಿನ ಮಿಕ್ಕ ಬೆರಳುಗಳೊಂದಿಗೆ ಸಹಕರಿಸಿ ಸತ್ಕಾರ್ಯ ನಡೆಸಲಿ! ಇದರ ಯುಕ್ತಾಯುಕ್ತತೆಯ ವಿಷಯದಲ್ಲಿ ಶಂಕರನಾರಾಯಣನ ಸಲಹೆ ತೆಗೆದುಕೊಳ್ಳಬೇಡ. ಅವನು ನನಗೆ ರತ್ನಾಭಿಷೇಕ ಮಾಡುತ್ತೀನೆಂದರೂ ಯುಕ್ತವೇ ಎನ್ನುತ್ತಾನೆ.

೨೨-೭-೧೯೫೮ **A. R. Krishna Sastri**

ಇದಿಷ್ಟೂ ತಮ್ಮೊಂದಿಗೆ ಸಂಬಂಧವನ್ನಿಟ್ಟುಕೊಂಡಿದ್ದವರ ಮಾತಾಯಿತು. ಅವರಲ್ಲಿಗೆ ಯಾರಾದರೂ ಒಂದು ಗ್ರಂಥವನ್ನು ಕಳುಹಿಸಿ ಅದನ್ನು ಅವರು ಒಪ್ಪಿದಲ್ಲಿ, ತಕ್ಷಣವೇ ಲೇಖಕರಿಗೆ ಮುಕ್ತಕಂಠದ ಪ್ರಶಂಸೆ ದೊರಕುತ್ತಿತ್ತು. ಇನ್ನು ನಮಗೆ ಕಾಣದ ವಿದ್ಯಾರ್ಥಿಗಳ ವಿಷಯದಲ್ಲಿಯಾದರೋ! ಅವರು ಮುಖ್ಯ ಪರೀಕ್ಷಕರಾದಾಗ ಉಪಪರೀಕ್ಷಕರಿಗೆ 'ಕನ್ನಡದ ವಿಷಯದಲ್ಲಿ ಮಕ್ಕಳಿಗೆ ತೊಂದರೆಯಾಗಕೂಡದು. ಎಷ್ಟೋ ಜನ ಪ್ರಪ್ರಥಮಶ್ರೇಣಿಗೆ ಅರ್ಹರಾಗಿರುತ್ತಾರೆ. ಆದಕಾರಣ ಸ್ವಲ್ಪ ಪ್ರತಿಭೆ ಮಿಂಚಿದರೂ ಕೈಹಿಡಿಯದೆ ಧಾರಾಳವಾಗಿ ಅಂಕಗಳನ್ನು ಕೊಡಿ' ಎಂದು ಸೂಚನೆ ಕೊಡುತ್ತಿದ್ದ ಧಾರಾಳಹೃದಯ ಶಾಸ್ತ್ರಿಗಳದು.

ವಟವೃಕ್ಷ ವಿಸ್ತಾರವಾಗಿ ಹಬ್ಬಿ ಇತರ ಗಿಡಮರಗಳ ಬೆಳವಣಿಗೆಯನ್ನು ಮರೆಮಾಡುವುದುಂಟು. ಈ ಮಾತು ಶಾಸ್ತ್ರಿಗಳಿಗೆ ಅನ್ವಯಿಸುತ್ತಿರಲಿಲ್ಲ, ತಮ್ಮ ಯೋಗ್ಯತೆಯಲ್ಲಿ ಅವರಿಗೆ ದೃಢವಾದ ನಂಬಿಕೆಯಿದ್ದುದರಿಂದ ಇತರರ ಏಳ್ಗೆಯನ್ನು ನೋಡಿ ಅವರು ಎಂದೂ ಕರುಬಲಿಲ್ಲ. ಅದಕ್ಕೆ ಪ್ರತಿಯಾಗಿ ಸಂತೋಷಪಡುತ್ತಿದ್ದರು. ತಮ್ಮ ಅಧಿಕಾರವನ್ನು ಶಿಷ್ಯರಾದ ಶ್ರೀ ಪುಟ್ಟಪ್ಪನವರಿಗೆ ವಹಿಸಿಕೊಡುತ್ತ 'ವೆಂಕಣ್ಣಯ್ಯನವರ ನಿಧನದಿಂದಾಗಿ ನಾನು ಇಲ್ಲಿಗೆ ಬಂದಾಗ, ಸೂತಕದ ಮನೆಯನ್ನು ಹೊಕ್ಕಹಾಗಿತ್ತು. ಈಗ ಪುಟ್ಟಪ್ಪನವರಿಗೆ ಕ್ರಮವಾಗಿ ಅಧಿಕಾರ ಬಂದಿದೆ. ಇದನ್ನು ನಾನು ಅವರಿಗೆ ಸಂತೋಷದಿಂದ ವಹಿಸಿಕೊಡುತ್ತೇನೆ. ಅವರ ಅಧಿಕಾರಾವಧಿಯಲ್ಲಿ ಅವರ ಕೈಬಾಯಿಗಳು ನಡೆಯಲಿ. ದೇವರು ಅವರಿಗೆ

ಆಯುರಾರೋಗ್ಯಗಳನ್ನೂ ಸನ್ಮಂಗಳಗಳನ್ನೂ ಉಂಟುಮಾಡಲಿ’ ಎಂದು ಹಾರೈಸಿದರು. ಅವರ ಹಾರೈಕೆ ಸಂಪೂರ್ಣವಾಗಿ ಫಲಿಸಿತೆಂಬುದು ಎಲ್ಲರಿಗೂ ತಿಳಿದ ವಿಷಯ. ವಿದ್ಯಾರ್ಥಿಗಳನ್ನು ಮುಂದೆ ಬಿಟ್ಟು ಕೆಲಸಮಾಡಿಸುತ್ತ, ಅವರ ಉತ್ಕರ್ಷವನ್ನು ನೋಡಿ ಸಂತೋಷಪಡುತ್ತ ತೆರೆಯ ಮರೆಯಲ್ಲಿದ್ದವರು ಕೃಷ್ಣ ಶಾಸ್ತ್ರಿಗಳು. ಇಷ್ಟಾದರೂ ತಾವು ಮಾಡಬೇಕಾಗಿದ್ದ ಕೃತಿರಚನೆಯನ್ನು ಸಮಗ್ರವಾಗಿ ಪಾಂಕ್ತವಾಗಿ ಮಾಡಿದ್ದಾರೆ. ಡೆಮ್ಮಿ ಆಕಾರದ ಮೂರುಸಾವಿರಕ್ಕೂ ಮಿಕ್ಕ ಪುಟಗಳ ಸರಳಸುಂದರವಾದ, ತೂಕವಾದ ಗದ್ಯಸಾಹಿತ್ಯವನ್ನು ಶಾಸ್ತ್ರಿಗಳು ಕನ್ನಡಿಗರಿಗೆ ಬಿಟ್ಟುಹೋಗಿದ್ದಾರೆ. ಒಬ್ಬಿಬ್ಬರ ವಿಷಯದಲ್ಲಿ ಮೃತರ ಪಾಂಡಿತ್ಯಕ್ಕೆ ಸಮನಾದ ಗ್ರಂಥರಚನೆ ಮಾಡಲಿಲ್ಲವೆಂಬ ಕೊರಗು ನಮ್ಮ ಮನಸ್ಸಿನಲ್ಲಿ ಉಳಿಯುತ್ತದೆ. ಶ್ರೀ ಕೃಷ್ಣಶಾಸ್ತ್ರಿಗಳ ವಿಷಯದಲ್ಲಿ ಆ ರೀತಿಯ ಕೊರಗಿಗೇ ಅವಕಾಶವಿಲ್ಲ.

೬

ಶ್ರೀ ಕೃಷ್ಣಶಾಸ್ತ್ರಿಗಳು ಅರಮನೆ ಗುರುಮನೆಗಳ ಪ್ರಶಸ್ತಿಗಳನ್ನು ಎಂದೂ ಬಯಸಿದವರಲ್ಲ. ಅರಮನೆಯ ಪುರಾಣ ಪ್ರಕಟನೆಗಳ ಸಮಿತಿಯ ಅಧ್ಯಕ್ಷ ಗಿರಿಯನ್ನು ಅವರು ನಿರಾಕರಿಸಿದರು. ಆದರೂ ಅವರಿಗೆ ಗೌರವಗಳು ದೊರೆತಿರುವುದು ಸಂತಸದ ವಿಷಯ. ೧೯೪೧ನೆಯ ವರುಷದ ಡಿಸೆಂಬರ್ ತಿಂಗಳಲ್ಲಿ ಹೈದರಾಬಾದಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದರು. ೧೯೫೬ರಲ್ಲಿ ಅವರ ಶಿಷ್ಯರೂ ಮಿತ್ರರೂ ಸೇರಿ ‘ಅಭಿವಂದನೆ’ ಎಂಬ ವಿದ್ವತ್ಸಂಪುಟವೊಂದನ್ನು ಮೈಸೂರಿನಲ್ಲಿ ಅರ್ಪಿಸಿದರು. ೧೯೬೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಡಿ.ಲಿಟ್ ಪದವಿಯನ್ನು ಕೊಟ್ಟು ಗೌರವಿಸಿತು. ‘ಬಂಕಿಮಚಂದ್ರ’ ಗ್ರಂಥಕ್ಕೆ ದೆಹಲಿ ಸಾಹಿತ್ಯ ಅಕಾಡಮಿಯ ಪುರಸ್ಕಾರ ದೊರೆತು, ಆ ಬಹುಮಾನ ಇವರ ಮನೆಯ ಬಾಗಿಲಿಗೇ ಬಂತು !

೭

ಜೀವನದ ಕಷ್ಟ-ಸುಖಗಳು, ನೋವು-ನಲವುಗಳು, ಕಹಿ–ಸಿಹಿಗಳು ಏನೇ ಇರಲಿ ಶ್ರೀ ಕೃಷ್ಣಶಾಸ್ತ್ರಿಗಳು ಪುಣ್ಯವಂತರು. ಚಿಕ್ಕಂದು ತಂದೆಯ ಮಾರ್ಗದರ್ಶನ, ಬೆಳೆಯುವಲ್ಲಿ ಪ್ರೊ ಎಂ. ಹಿರಿಯಣ್ಣ, ಪ್ರೊ ಬಿ. ಎಂ. ಶ್ರೀಕಂಠಯ್ಯ ಇವರ ಬೋಧೆ, ಪ್ರಾಪ್ತವಯಸ್ಕರಾದಾಗ ಸರ್ವಶ್ರೀ ಡಿ. ವಿ. ಗುಂಡಪ್ಪ, ವೆಂಕಣ್ಣಯ್ಯ, ಮಾಸ್ತಿ, ಎಂ. ಆರ್. ಶ್ರೀನಿವಾಸಮೂರ್ತಿ ಇಂಥವರ ಸ್ನೇಹ, ಅಧಿಕಾರಾವಧಿಯಲ್ಲಿ ಸರ್ವ ಶ್ರೀ ಎಸ್. ವಿ. ರಂಗಣ್ಣ, ಸಿ. ಕೆ. ವೆಂಕಟರಾಮಯ್ಯ, ಕೆ. ವಿ. ಪುಟ್ಟಪ್ಪ, ತೀ. ನಂ. ಶ್ರೀಕಂಠಯ್ಯ, ಡಿ. ಎಲ್. ನರಸಿಂಹಾಚಾರ್, ಎಸ್. ವಿ. ಪರಮೇಶ್ವರ

ಭಟ್ಟ, ಜಿ. ಪಿ. ರಾಜರತ್ನಂ, ದೇ. ಜವರೇಗೌಡ, ಜಿ. ವರದರಾಜರಾವ್ ಇಂಥ ಪೀಳಿಗೆಯ ನಿರ್ಮಾಣ ಹಾಗೂ ಸಾಹಿತ್ಯರಚನೆಯಿಂದ ಶ್ರೀ ಶಾಸ್ತ್ರಿಗಳು ಕೃತಕೃತ್ಯರು. ಅವರ ಹೆಸರು ಅವರ ಶಿಷ್ಯರ ಹೃದಯದಲ್ಲಿ ಯಾವಾಗಲೂ ಪರಿಮಳಿಸುತ್ತದೆ. ಮೈಸೂರು ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ, ಕನ್ನಡಿಗರ ಮನದಲ್ಲಿ ಹೊಸಗನ್ನಡ ಆದ್ಯ ಪ್ರವರ್ತಕರು, ಕನ್ನಡದ ಮೇಲ್ಮೆಗಾಗಿ ಹೋರಾಡಿದ **ಕನ್ನಡದ ವಸಿಷ್ಠರು** ಎಂದು ಅವರ ಹೆಸರು ಅಮರವಾಗಿ ನಿಲ್ಲುತ್ತದೆ. ತಮ್ಮ ಉದಾರವಾದ ನಡೆನುಡಿಗಳಿಂದ ಶ್ರೀ ಕೃಷ್ಣಶಾಸ್ತ್ರಿಗಳು 'ಇಲ್ಲಿ ಸಂದು' ಅಲ್ಲಿ ಸಲ್ಲಲು ನಮ್ಮನ್ನು ಅಗಲಿ ದೇವಸನ್ನಿಧಿಗೆ ಹೋಗಿದ್ದಾರೆ. ಅವರ ಆತ್ಮಕ್ಕೆ ಶಾಂತಿಯಿರಲಿ!

# ಶಾಸ್ತ್ರಿಗಳ ಕಥೆಗಳು

....ಬಾಳಿನ ಮೇಲ್ಮುಸುಕಿಗೆ ಮಾರುಹೋಗದೆ ಒಳಗಿನ ಉತ್ಸೇಕವನ್ನೂ ಉಮ್ಮಳವನ್ನೂ ಕಂಡು ಕೊರಗಿ ಮರುಗಿ ಪ್ರಸನ್ನವಾಗಿ ನಲಿದು ಹತೋಟಿ ತಪ್ಪದಂತೆ ಸರಿಯಾದ ಹದದಲ್ಲಿ ಸುಸ್ಪಷ್ಟವಾಗಿ ವಿವರಿಸುವ ಶಕ್ತಿ ಸಾಮಾನ್ಯವಲ್ಲ. ಇಂಥ ಸಾಹಿತ್ಯವನ್ನು ಅಭ್ಯಾಸ ಮಾಡುವುದರಿಂದ ಜೀವನದಲ್ಲಿ ಹಿರಿದಾದ ಅನುಭವವನ್ನು ಪಡೆದಂತೆ ಭಾಸವಾಗುತ್ತದೆ. ಇಂಥ ಆಳವಾದ ಅನುಭವ, ತಿಳಿಯಾದ ಮಾತು ಶ್ರೀ ಕೃಷ್ಣಶಾಸ್ತ್ರಿಗಳ ಕತೆಗಳ ಆಕರ್ಷಣೆಗೆ ಕಾರಣವಾಗಿವೆ....

....'ಶ್ರೀಪತಿಯ ಕತೆಗಳ'ನ್ನು ಶ್ರೀನಿವಾಸರ 'ಕೆಲವು ಸಣ್ಣಕಥೆಗಳೊ'ಡನೆ ಹೋಲಿಸಿ ನೋಡಿದರೆ ಶಾಸ್ತ್ರಿಗಳ ಮಾಸ್ತಿಯವರ ಮಧ್ಯೆ ಒಂದು ಹೋಲಿಕೆ ಇರುವುದು ಕಾಣುತ್ತದೆ. ಶ್ರೀನಿವಾಸರ ಹಿಂದೆ ಬರೆಯುತ್ತಿದ್ದವರಂತೆ ಶಾಸ್ತ್ರಿಗಳು ಪುರಾಣ ಹೇಳಿದಂತೆ ಕತೆ ಹೇಳುತ್ತಾ ಹೋಗುವುದಿಲ್ಲ. ನಾಲ್ಕೈದು ಕತೆಗಳಲ್ಲಿ ಸನ್ನಿವೇಶದ ಏಕತೆ ಮತ್ತು ನಾಟಕೀಯವಾದ ರಚನೆಯಿಂದ ಕಲಾಸುಭಗತೆ ಅವರಿಗೆ ಸಿದ್ಧಿಸಿದೆ. ಶ್ರೀನಿವಾಸರಂತೆಯೇ ಶಾಸ್ತ್ರಿಗಳು ತಿಳಿಯಾದ ಬಳಕೆಯ ಕನ್ನಡವನ್ನು ಚೆಲುವಾಗಿ ಬರೆಯುತ್ತಾರೆ. ಯಾರ ಮನಸ್ಸನ್ನೂ ನೋಯಿಸದ ಹಾಸ್ಯ ಮನಸ್ಸಿಗೆ ಉಲ್ಲಾಸವನ್ನು ತರುತ್ತದೆ. ಒಮ್ಮೊಮ್ಮೆ ದುಃಖದ ಮಡುವಿನ ಮೇಲೆಯೂ ಈ ಹಾಸ್ಯದ ತರಂಗಲೀಲೆ ಸುಳಿಯುತ್ತದೆ. ತನ್ನ ಅನುಭವಕ್ಕೆ ಮೀರಿದ ವಸ್ತುವನ್ನು ಮುಟ್ಟಲು ಹಿಂದೆಗೆಯುವ ಪ್ರಾಮಾಣಿಕತೆ ಇವರ ಒಂದೊಂದು ಕತೆಯಲ್ಲಿಯೂ ಒಡೆದು ಕಾಣುತ್ತದೆ. ಶ್ರೀನಿವಾಸರಂತೆಯೇ ಜೀವನದ ಸಂದರ್ಭಗಳನ್ನು ಆಳವಾಗಿ ಹೊಕ್ಕು ವಿಮರ್ಶಿಸುವ ಮನೋಧರ್ಮ ಶಾಸ್ತ್ರಿಗಳದು........

—ಕೆ. ನರಸಿಂಹಮೂರ್ತಿ

('ಜೀವನ', ಆಗಸ್ಟ್–೧೯೫೨)

ಶ್ರೀನಿವಾಸರಾವ್ ಕೊರಟಿ

# ಡಾ. ಎ. ಆರ್. ಕೃ. ಅವರ ಒಂದು ಅಪ್ರಕಟಿತ ಕೃತಿ—“ರಾಮಪ್ಪ”

ಹೊಸಗನ್ನಡ ಸಾಹಿತ್ಯದ ಅಶ್ವಿನೀದೇವತೆಗಳಲ್ಲಿ ಒಬ್ಬರಾದ ದಿವಂಗತ ಡಾ. ಎ. ಆರ್. ಕೃಷ್ಣಶಾಸ್ತ್ರಿ ಅವರು ವಿಶ್ವವಿದ್ಯಾನಿಲಯದಲ್ಲಿ ಉದ್ಯೋಗನಿರತ ರಾಗಿದ್ದಾಗ ಮಾಡಿದ ಸಾಹಿತ್ಯಸೇವೆಗಿಂತಲೂ, ಅವರು ವಿಶ್ರಾಂತರಾದನಂತರ ಮಾಡಿದ ಸೇವೆ ಮಿಗಿಲಾದುದು. ಹೀಗೆಂದ ಮಾತ್ರಕ್ಕೆ ಅವರು ಬೆಂಗಳೂರಿನ ಸೆಂಟ್ರಲ್ ಕಾಲೇಜು ಮತ್ತು ಮೈಸೂರಿನ ಮಹಾರಾಜಾ ಕಾಲೇಜುಗಳಲ್ಲಿ ಕನ್ನಡದ ಪ್ರಾಧ್ಯಾಪಕರಾಗಿದ್ದಾಗ ಕನ್ನಡ ಸಾರಸ್ವತ ಲೋಕಕ್ಕೆ ಸಲ್ಲಿಸಿದ ಸೇವೆ, ಮಾಡಿದ ಸಾಧನೆ, ಪಡೆದ ಸಿದ್ಧಿ ಕಡಿಮೆಯ ದರ್ಜೆಯದೇನೂ ಅಲ್ಲ. ಆಗ ಅವರು ಕನ್ನಡದ ರಕ್ಷಾಮಣಿ ಎನಿಸಿದ್ದ ಆಚಾರ್ಯ ‘ಶ್ರೀ’ಯವರ ಸೆಚ್ಚಿನ ಕನ್ನಡದ ಗರಡಿಯಾಳಾಗಿ, ಅಸಂಖ್ಯಾತ ವಿದ್ಯಾರ್ಥಿವೃಂದಕ್ಕೆ ವಿದ್ಯಾದಾನ ಮಾಡಿದರು; ಹೊಸಗನ್ನಡದಲ್ಲಿ ಮನ್ವಂತರವನ್ನು ತೆರೆದ ಪ್ರಬುದ್ಧಕರ್ನಾಟಕ ಪತ್ರಿಕೆಯನ್ನು ಆರಂಭಿಸಿ, ನೂರಾರು ಲೇಖಕರನ್ನು ಬೆಳಕಿಗೆ ತಂದರು; ಸ್ವತಃ ಅನೇಕ ವಿದ್ವತ್ಪೂರ್ಣ ಲೇಖನ ಗಳನ್ನೂ, ಸಂಶೋಧಕ ಬರೆಹಗಳನ್ನೂ, ಕಥೆ-ವಿಮರ್ಶೆಗಳನ್ನೂ ಬರೆದು ಹೊಸ ಗನ್ನಡ ಗದ್ಯಕ್ಕೆ ಒಂದು ಬಗೆಯ ಧಾತುವನ್ನೂ ಪುಷ್ಟಿಯನ್ನೂ ನೀಡಿ, ರಚನಾ ಶೈಲಿಯಲ್ಲಿ ಮೇಲ್ಪಂಕ್ತಿಯನ್ನು ಹಾಕಿದರು. ಕನ್ನಡನುಡಿಯ ದೇಗುಲವಾದ ಕನ್ನಡ ಸಾಹಿತ್ಯಪರಿಷತ್ತನ್ನು ಕಟ್ಟಿ ಬೆಳಸಿದರು; ಕನ್ನಡಕ್ಕೆ ಶ್ರೇಷ್ಠಮಟ್ಟದ ಇಂಗ್ಲಿಷ್-ಕನ್ನಡ ಕೋಶವನ್ನು ಕೊಡುವುದರಲ್ಲಿ ಪ್ರಧಾನಪಾತ್ರ ವಹಿಸಿದರು; ತಮ್ಮ ಉಜ್ವಲ ಲೇಖನ ಹಾಗೂ ಭಾಷಣಗಳಿಂದ ಜನಜಾಗೃತಿಯನ್ನುಂಟು ಮಾಡಿದರು. ಅವರ ಲೇಖಣಿಯಿಂದ ಹೊರಬಿದ್ದ ಗ್ರಂಥಗಳ ಸಂಖ್ಯೆ ಕಿರಿದಾದರೂ, ಬಹುಬೆಲೆಯ ಅತ್ಯಮೂಲ್ಯ ಕಾಣಿಕೆಗಳೇ ಆಗಿವೆ. ಆದರೆ, ಇವುಗಳಿಂದ ಶಾಸ್ತ್ರಿಗಳ ಬಹುಮುಖ ವ್ಯಕ್ತಿತ್ವವನ್ನಾಗಲಿ, ಅವರ ಪ್ರತಿಭೆಯ ಹಿರಿಮೆಯನ್ನಾಗಲೀ ಅಳೆಯಲು ಸಾಧ್ಯವಾಗದೆಂಬ ಸಂಗತಿ ಗಮನಾರ್ಹವಾಗಿದೆ.

ಶಾಸ್ತ್ರಿಗಳು ಯಾವ ಬರವಣಿಗೆಯ ಕೆಲಸವನ್ನು ಕೈಗೊಂಡರೂ ಅದನ್ನು

ಪರಿಷ್ಕಾರವಾಗಿ ಮಾಡುತ್ತಿದ್ದರು. ಬರೆಯುವ ಮೊದಲು ಅವರು ವಿಷಯ ಸಂಗ್ರಹಿಸಿ, ಟಿಪ್ಪಣಿ ಮಾಡಿಕೊಂಡು, ಅನಂತರ ದುಂಡಾದ ಕೈಬರೆಹದಲ್ಲಿ ಚಿತ್ರಿಸ್ಲಿದಂತೆ, ಫೂಲ್ಸ್‌ಕ್ಯಾಪ್ ಹಾಳೆಯ ಒಂದೇ ಮಗ್ಗುಲಲ್ಲಿ ಅಂದವಾಗಿ ಬರೆಯುತ್ತಿದ್ದರು. ಬರೆದ ಮೇಲೆ ತಿದ್ದಿ ಪರಿಷ್ಕರಿಸುತ್ತಿದ್ದರು. ಹಾಗೆ ಪರಿಷ್ಕರಿಸಿ, ತಮಗೆ ಒಪ್ಪಿಗೆಯಾದ ಮೇಲೆ, ಹಸ್ತಪ್ರತಿ ಪೂರ್ತಿ ಮುಗಿದ ಮೇಲೆ, ಹಸ್ತಪ್ರತಿ ಪೂರ್ತಿ ಮುಗಿದ ಮೇಲೆಯೇ, ಅದನ್ನು ಅಚ್ಚಿನ ಮನೆಗೆ ಕೊಡುತ್ತಿದ್ದರು. ಆಗಲೂ ಅವರು ಅಚ್ಚಿನಮನೆಯ ಆಯ್ಕೆ, ಕಾಗದ, ಮುದ್ರಣವಿನ್ಯಾಸಗಳ ಬಗೆಗೆ ಪೂರ್ವ ಯೋಜಿತ ನಿರ್ಧಾರವಿಲ್ಲದೆ ದುಡುಕುತ್ತಿರಲಿಲ್ಲ. ಯಾವ ವಿಷಯದಲ್ಲಿಯೂ ಆತುರ ಅವರಿಗೆ ಸೇರದ ಸಂಗತಿಯಾಗಿತ್ತು. ಅವರು ಅಚ್ಚು-ಕಟ್ಟುಗಳು ಚೆನ್ನಾಗಿರಬೇಕು, ಸುಂದರ ಚಿತ್ರಗಳಿಂದ ಗ್ರಂಥವು ತುಂಬಿರಬೇಕು, ಬೆಲೆ ಶ್ರೀಸಾಮಾನ್ಯನಿಗೆ ಎಟಕುವಂತಿರಬೇಕು-ಎಂದೆಲ್ಲಾ ಯೋಚಿಸಿ, ಪುಸ್ತಕದ ಬೆಲೆಯನ್ನು ನಿರ್ಣಯಿಸುವುದು ಹವ್ಯಾಸವಾಗಿತ್ತು. ಅವರೆಂದಿಗೂ ಆತುರದಲ್ಲಿ ತಮ್ಮ ಬರಹಗಳನ್ನು ಅಚ್ಚಿಗೆ ಕೊಡುತ್ತಿರಲಿಲ್ಲ. ಅಚ್ಚಿನಮನೆ ಎಷ್ಟೇ ದೂರವಾಗಲಿ, ಹೇಳಿದ್ದ ಸಮಯಕ್ಕೆ ಸರಿಯಾಗಿ ಪ್ರೂಫ್ ನೋಡಲು ಹೋಗುತ್ತಿದ್ದರು. ಎಷ್ಟೇ ವೇಳೆಯಾದರೂ ಶ್ರದ್ಧೆಯಿಂದ ಒಂದು ತಪ್ಪೂ ಉಳಿಯದಂತೆ ಅದನ್ನು ತಿದ್ದಿ ನೋಡಿ, ಅಚ್ಚಿಗೆ ಕೊಟ್ಟು, ಉಳಿದ ಕೆಲಸಕ್ಕೆ ಗಮನಕೊಡುತ್ತಿದ್ದರು. ಅವರಿಗೆ ತಮ್ಮ ಒಂದೊಂದು ಕೃತಿ ಹೊರಬರುವಾಗಲೂ ತಾಯಿಗೆ ಮಗು ಹುಟ್ಟಿದಷ್ಟು ಸಂಭ್ರಮ. ನಿಜವಾಗಿಯೂ ಅವರು ಕೊಟ್ಟಿರುವ ಗ್ರಂಥ ಸಮುದಾಯ, ಅವರ ದೀರ್ಘಕಾಲದ ಚಿಂತನೆಯ, ಯೋಜನೆಯ ರಸಘಟ್ಟಗಳೆಂದರೆ ಅತಿಶಯೋಕ್ತಿಯಲ್ಲ.[1]

೨

ಕೃಷ್ಣಶಾಸ್ತ್ರಿಗಳು ಯಾವ ಕೆಲಸವನ್ನು ಕೈಗೊಂಡರೂ ಅಚ್ಚುಕಟ್ಟಾಗಿ ಮಾಡುತ್ತಿದ್ದರೆಂದು ಆಗಲೇ ತಿಳಿಸಿಯಾಯಿತು. ಅವರು ಶಿಸ್ತಿನ ಶಿಪಾಯಿಗಳಾಗಿದ್ದರು. ಕೆಲಸಮಾಡಲು ತೊಡಗಿದರೆ, ಯುವಕರನ್ನೂ ನಾಚಿಸುವ ಉತ್ಸಾಹ, ಸಡಗರಗಳಿಂದ ಮಾಡುತ್ತಿದ್ದರು. ಅವರ ಕಾರ್ಯಶ್ರದ್ಧೆ ಎಂದಿಗೂ ಕಡಮೆಯಾಗುತ್ತಿರಲಿಲ್ಲ. ಇದಕ್ಕೆ 'ವಚನಭಾರತ'ವು ಒಂದು ಉದಾಹರಣೆ. ಅದನ್ನು ಬರೆಯುವ ಕಾಲಕ್ಕೆ ಶಾಸ್ತ್ರಿಗಳು ವಿಶ್ರಾಂತರಾಗಿದ್ದರೂ ಕಾಲೇಜಿಗೆ ಹೊರಟವರಂತೆ

---

[1] ಅವರ 'ಬಂಕಿಮಚಂದ್ರ' ವಿಮರ್ಶಾಕೃತಿಗೆ ದೊರೆತ ಎರಡು ಪ್ರಶಸ್ತಿಗಳು ಇದನ್ನೇ ಸಮರ್ಥಿಸುತ್ತವೆ. ಆ ವರ್ಷದ ಶ್ರೇಷ್ಠ ಸಾಹಿತ್ಯಕೃತಿಯೆಂದು ೧೯೬೧ರಲ್ಲಿ ಸಾಹಿತ್ಯ ಅಕಾಡೆಮಿಯವರು ಬಹುಮಾನ ನೀಡಿದರೆ, ಇಂಗ್ಲೆಂಡಿನಲ್ಲಿ ನಡೆದ ಗ್ರಂಥ ಪ್ರದರ್ಶನಕ್ಕೆ ಭಾರತ ಕಳುಹಿಸಿಕೊಟ್ಟಿದ್ದ ಗ್ರಂಥಗಳಲ್ಲಿ ಅತ್ಯಂತ ಸುಂದರವಾಗಿ ಕಲಾತ್ಮಕವಾಗಿ ಮುದ್ರಣ ವಿನ್ಯಾಸ ಹೊಂದಿರುವುದಕ್ಕಾಗಿ ಆ ಕೃತಿಗೆ ಬಹುಮಾನ ದೊರಕಿತು.

ಹತ್ತು ಗಂಟೆಗೆ ಊಟಮಾಡಿ ಬರೆಯಲು ಕುಳಿತರೆ ಸಂಜೆಯ ತನಕ ಬಿಡುವಿಲ್ಲದೆ ಬರವಣಿಗೆಯನ್ನು ಮುಂದುವರೆಸಿ, ನಂತರ ವಾಯು ಸಂಚಾರಕ್ಕೆ ತೆರಳುತ್ತಿದ್ದರು. ಮನೆಗೆ ಬಂದಮೇಲೆ ಮಕ್ಕಳನ್ನು ಕೂಡಿಸಿಕೊಂಡು, ಅವರಿಗೆ ಅಂದಂದು ಬರೆದುದನ್ನು ಓದಿ ಹೇಳಿ, ಅವರ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತಿದ್ದರು. ಹೀಗೆ ಅನೇಕ ವರ್ಷಗಳ ದುಡಿಮೆಯ ಫಲವಾಗಿ ಹೊರಬಿದ್ದ ಕೃತಿಗಳು ವಚನಭಾರತ, ಬಂಕಿಮಚಂದ್ರ, ಕಥಾಮೃತ ಮತ್ತು ನಿಬಂಧಮಾಲಾ–ಭಾಗ ೧. ಆದರೆ ಕೊನೆಯ ಕೃತಿಯನ್ನು ಬರೆಯುವ ವೇಳೆಗೆ ಶಾಸ್ತ್ರಿಗಳ ಆರೋಗ್ಯ ಮೊದಲಿನಂತೆ ಉಳಿದಿರಲಿಲ್ಲ. ಬರವಣಿಗೆಯ ಆಯಾಸ ತಡೆದುಕೊಳ್ಳಲಾಗದೆ ಕಡೆಕಡೆಗೆ ಅವರು ಹಾಸಿಗೆ ಹಿಡಿದರು. ಆಗ ಬರೆಯಬೇಕಾದ ಒಂದೆರಡು ಅಧ್ಯಾಯಗಳು ಹಾಗೆಯೇ ಉಳಿದವು. ಅದಕ್ಕೆ ಬರೆಯಬೇಕಾದ ಮುನ್ನುಡಿಯನ್ನು ಬೇರೊಬ್ಬರು (ಶ್ರೀ ಎ. ಎನ್. ಮೂರ್ತಿರಾಯರು) ಬರೆಯಬೇಕಾಯಿತು. ದಣಿದು, ಹಾಸಿಗೆ ಹಿಡಿದ ಶಾಸ್ತ್ರಿಗಳು ಮೊದಲಿನಂತೆ ಆರೋಗ್ಯವಂತರಾಗಲಿಲ್ಲ. ಸಶ್ರಮವಾದ ಯಾವುದೇ ಸಾಹಿತ್ಯ ಚಟುವಟಿಕೆಯನ್ನು ಕೈಗೊಳ್ಳಲು ಅಸಮರ್ಥರಾದುದರಿಂದ ಅವರಿಗೆ ಪ್ರಿಯವಾಗಿದ್ದ ಬರವಣಿಗೆ ಬಹುಮಟ್ಟಿಗೆ ನಿಂತೇ ಹೋಯಿತೆನ್ನಬಹುದು. ಆದರೂ ಪೇಪರ್ ಓದುವ ಹವ್ಯಾಸವನ್ನು ಅವರೆಂದೂ, ಅಪಘಾತಕ್ಕೆ ಈಡಾದ ಸಮಯದಲ್ಲಿಯೂ ಸಹ, ಬಿಡಲಿಲ್ಲ; ಮನಸ್ಸಿಗೆ ಏನನ್ನಾದರೂ ಬರೆಯಬೇಕೆನಿಸಿದಾಗ, ಭಾವದ ಒತ್ತಡ ತೀವ್ರವಾದಾಗ, ಮತ್ತೆ ಲೇಖಣಿ ಹಿಡಿಯುತ್ತಿದ್ದುದುಂಟು. ಆದರೆ ಇದು ಅಪರೂಪ. ಹೀಗಿದ್ದರೂ ಸಾಯುವುದಕ್ಕೆ ಕೇವಲ ಹದಿನೈದು ದಿನಗಳ ಮೊದಲು ತಾವು ಓದಿದ ಶಾಕುಂತಲ ನಾಟಕದ ಬಗೆಗೆ ೪–೬ ಪುಟಗಳ ವಿಮರ್ಶೆಯನ್ನು ಬರೆದಿದ್ದರು. ಒಟ್ಟಿನಲ್ಲಿ ಅವರೊಬ್ಬ ಸಾಹಿತ್ಯ ತಪಸ್ವಿಗಳಾಗಿದ್ದರು.

೩

ಶ್ರೀ ಶಾಸ್ತ್ರಿಗಳ ಮಗಳು ಹಾಗೂ ಅಳಿಯಂದಿರ[1] ಉಪಕಾರದಿಂದ ಮತ್ತು ನಮ್ಮ ಸುದೈವದಿಂದ ಅವರ ಸಾರಸ್ವತ ಸಂಪತ್ತಿನ ಅಪ್ರಕಟಿತ ರಚನೆಯೊಂದರ ಕೆಲವು ಭಾಗಗಳು ನಮಗೆ ಲಭ್ಯವಾಗಿವೆ. ಇವು ಶ್ರೀ ಶಾಸ್ತ್ರಿಗಳು ಬರೆಯಬೇಕೆಂದುಕೊಂಡಿದ್ದ ಉದ್ಗ್ರಂಥವೊಂದರ ಬಗೆಗೆ ಸಾಕಷ್ಟು ಪರಿಚಯವನ್ನು ನೀಡಬಲ್ಲದಾಗಿದೆ. ಈ ವಿವರಗಳು ಬೆಳಕಿಗೆ ಬಂದುದು ಹೀಗೆ:

ಕೃಷ್ಣಶಾಸ್ತ್ರಿಗಳು ಅನಾರೋಗ್ಯದಿಂದ ಬಳಲುತ್ತಿದ್ದಾಗ ಒಮ್ಮೆ ಅವರನ್ನು ಸಂದರ್ಶಿಸಲೆಂದು ಹೋಗಿದ್ದಾಗ, ಅವರ ಅಳಿಯಂದಿರು ಶ್ರೀ ಶಾಸ್ತ್ರಿಗಳ ಕೆಲವು ಲೇಖನಗಳಿದ್ದ ಫೈಲೊಂದನ್ನು (ಹಳೆಯ ಪತ್ರಿಕೆಗಳ ಮಧ್ಯೆ ಬಿದ್ದಿದ್ದುದನ್ನೆಲ್ಲಾ

---

[1] ಶ್ರೀಮತಿ ಕೆ. ಶಾಂತ ಮತ್ತು ಶ್ರೀ ಕೆ. ರಾಮಚಂದ್ರನ್.

ಒಂದುಗೂಡಿಸಿ, ಮುಂದೆಂದಾದರೂ ಅದು ಉಪಯೋಗಕ್ಕೆ ಬಂದೀತೆಂದು ಅವನ್ನು ಸುರಕ್ಷಿಸಿದ್ದರು) ನನಗೆ ತೋರಿಸಿ, ಲೋಕಾಭಿರಾಮವಾಗಿ ಮಾತನಾಡುತ್ತಾ ತಿಳಿಸಿದರು–"ಇವುಗಳಲ್ಲಿ ನಮ್ಮ ಮಾವನವರ ಕೆಲವು ಹಸ್ತಪ್ರತಿಗಳಿವೆ. ಅವು ಗಳಿಂದ ನಿಮಗೆ ಏನಾದರೂ ಪ್ರಯೋಜನವಾಗಬಹುದು."

ಅಂದೇ ಅದನ್ನು ಮನೆಗೆ ತಂದೆನಾದರೂ ಕಾರಣಾಂತರಗಳಿಂದ ದೀರ್ಘ ಕಾಲದವರೆಗೆ ಆ ಹಸ್ತಪ್ರತಿಯನ್ನು ತೆರೆದು ನೋಡಲಾಗಲಿಲ್ಲ. ಈಚೆಗೆ ಶ್ರೀ ಶಾಸ್ತ್ರಿಗಳು ತೀರಿಕೊಂಡಾಗ, ಅವನ್ನು ನೋಡುವ ಕುತೂಹಲ ಉಂಟಾಯಿತು. ಹಸ್ತಪ್ರತಿಯನ್ನು ಸಮಗ್ರವಾಗಿ ಓದಿದಮೇಲೆ ಇದನ್ನು ಶಾಸ್ತ್ರಿಗಳ ಜೀವಿತ ಕಾಲದಲ್ಲಿಯೇ ಓದಲಾಗಲಿಲ್ಲವಲ್ಲಾ ಎಂದು ವಿಷಾದವೂ ಉಂಟಾಗಿದೆ. ಆದರೆ ಯಾವುದಕ್ಕೂ ಲಭ್ಯ ಬೇಕಷ್ಟೆ!

೪

ಶಾಸ್ತ್ರಿಗಳು ಬಿಟ್ಟುಹೋದ ಅಪ್ರಕಟಿತ ಹಸ್ತಪ್ರತಿಯಲ್ಲಿ ಫೂಲ್ಸ್‌ಕ್ಯಾಪ್ ಆಕಾರದ ಸುಮಾರು ೨೦೦ ಪುಟಗಳಿವೆ. ಇದನ್ನು ಬರೆಯಲು ಅವರು ಆರಂಭಿಸಿದ್ದು ಯಾವಾಗಲೆಂದು ಖಚಿತವಾಗಿ ಹೇಳಲಾಗದಿದ್ದರೂ ಅವುಗಳನ್ನು ೧೯೪೭ಕ್ಕೆ ಹಿಂದೆ ಅಥವಾ ಸರಿಸುಮಾರಿನಲ್ಲಿ ಬರೆಯಲು ತೊಡಗಿದ್ದರೆಂದು ತಿಳಿಯಲು ಆಧಾರವಿದೆ. ಅವರು ಹೀಗೆ ಬರೆಯಲು ಆರಂಭಿಸಿ, ದಿನಕ್ಕೆ, ಮೂರುದಿನಕ್ಕೆ ಒಂದೊಂದು ಅಧ್ಯಾಯವನ್ನೊ, ಘಟ್ಟವನ್ನೋ ಮುಗಿಸಿದ್ದಾರೆ. ಆದರೆ ಎಲ್ಲ ಪ್ರಕರಣಗಳು, ಅಧ್ಯಾಯಗಳಿಗೆ ಅವರು ದಿನಾಂಕವನ್ನು ನಮೂದಿಸಿಲ್ಲ; ಕೆಲವಕ್ಕೆ ಮಾತ್ರ ಗುರುತುಮಾಡಿದ್ದಾರೆ. ಈ ಪ್ರಕರಣಗಳನ್ನು ಸ್ವತಂತ್ರ ಲೇಖನಗಳೆಂಬಂತೆ ಪ್ರತಿ ಯೊಂದಕ್ಕೂ ಆರಂಭದಲ್ಲಿ ಒಂದೊಂದು ಸುಭಾಷಿತವನ್ನು ಸಂಸ್ಕೃತ, ಇಂಗ್ಲಿಷ್, ಕನ್ನಡ ಸಾಹಿತ್ಯಕೃತಿಗಳಿಂದ ಉದ್ಧರಿಸಿ ಕೊಟ್ಟಿದ್ದಾರೆ. ಉದಾಹರಣೆಗೆ ಇವನ್ನು ಗಮನಿಸಬಹುದು :

"ಅಸಂತುಷ್ಟೋ ದ್ವಿಜೋ ನಷ್ಟಃ ||"

"You, tailor made men!"–Carlyle

"ಓಂ ನಮಶ್ಶಿವಾಯ ಸಿದ್ಧಾಯ ನಮಃ ||"

"ರಸದ ಹೊರಲೇಪನದಲಿ ಹುದುಗಿದ
ವಿಸುನಿಯಂತಿರೆ . . ." ಕುಮಾರವ್ಯಾಸ

"ಏನೇ ಬೀರಿ ಓಡಾಟ? ಶ್ಯಾನುಭೋಗರ
ಮನೆಯ ದೇವರೂಟ!"

"ಅನ್ನಾದ್ಭವತಿ ಭೂತಾನಿ . . . ಕರ್ಮ ಸಮುದ್ಭವಃ ‖"–ಗೀತಾ ೩–೧೪

ಸ್ವಸುಖನಿರಭಿಲಾಷಃ . . . ವೃತ್ತಿರೇವಂ ವಿಧೈವ"—ಶಾಕುಂತಲ.

ಇಂಥ ಹಲವು ಸುಭಾಷಿತಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಇವುಗಳನ್ನೇ ಶೀರ್ಷಿಕೆಯಾಗಿ ಇಡುವ ಯೋಚನೆ ಅವರಿಗೆ ಇದ್ದಿರಬಹುದೆನ್ನಲು ಆಧಾರವಿದೆ. ಕೆಲವು ವಾಕ್ಯಗಳ ಪಕ್ಕದಲ್ಲಿ "Ch. heading" ಎಂದು ಬರೆದಿದ್ದಾರೆ. ಈ ಎಲ್ಲ ಬರವಣಿಗೆಯ ಗುರಿ ಏನು?– ಹೀಗೆಂದು ನಿರ್ಧಾರವಾಗಿ ಹೇಳುವುದು ಕಷ್ಟ. ಇವುಗಳೆಲ್ಲ ರಾಮುಪ್ಪ ಅಥವಾ ರಾಮಾಶಾಸ್ತ್ರಿ ಎಂಬ ಶ್ರೋತ್ರಿಯನನ್ನು ಕುರಿತ ಚಿತ್ರಗಳು. ಇದು ಮೈಸೂರಿನಲ್ಲಿ ಹಿಂದೆ ಇದ್ದರೆಂದು ಹೇಳಲಾದ ರಾಮುಶಾಸ್ತ್ರಿಗಳೆಂಬ ಶ್ರೋತ್ರಿ (ವೈದ್ಯ ?)ಯ ಜೀವನ–ಕತೆಯೆ ? ಅಥವಾ ಅವರ ಬದುಕಿನ ಮೇಲೆ ಕಲ್ಪಿಸಿದ ಕಾದಂಬರಿಯೆ ? ಅಥವಾ ಅವರ ಜೀವನವನ್ನು ಆಧರಿಸಿ ಬರೆದ ರಸಮಯ ವ್ಯಕ್ತಿ ಚಿತ್ರಗಳೆ?–ಯಾವುದನ್ನೂ ಹೀಗೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ, ಈ ಸಮಗ್ರ ಬರವಣಿಗೆಯಲ್ಲಿ ಜೀವನ ಚರಿತ್ರೆಯ ತಂತ್ರವಾಗಲಿ, ಇತಿವೃತ್ತದ ರೀತಿಯಾಗಲಿ, ಕಾದಂಬರಿಯ ತಂತ್ರ–ಶೈಲಿ, ಕಥಾ–ನಿರೂಪಣೆಗಳಾಗಲೀ ಕಂಡುಬರುವುದಿಲ್ಲ. ಒಂದೊಂದು ಅಧ್ಯಾಯವೂ ಒಂದೊಂದು ಸ್ವತಂತ್ರ ಲೇಖನದಂತೆ ಭಾಸವಾಗುತ್ತವೆ. ಒಂದು ಘಟನೆಗೂ ಇನ್ನೊಂದಕ್ಕೂ ಪ್ರತ್ಯಕ್ಷ ಸಂಬಂಧವಿದ್ದಂತಿಲ್ಲವಾದರೂ, ಒಬ್ಬ ವ್ಯಕ್ತಿಯ ಪಾತ್ರಪರಿಪೋಷಣೆಗೆ ನೆರವಾಗುವ ಚಿತ್ರಗಳಿಂದ ಕೂಡಿದೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರ 'ಹಳ್ಳಿಯ ಚಿತ್ರಗಳ'ನ್ನಾಗಲಿ, 'ನಮ್ಮೂರಿನ ರಸಿಕ'ರನ್ನಾಗಲಿ ಹೋಲುವ ಬರವಣಿಗೆ ಇಲ್ಲಿನದು. ಆದರೆ, ಇವು ಪೂರ್ಣಗೊಂಡು ಹಿಂದೆಯೇ ಪ್ರಕಟಿತವಾಗಿದ್ದಲ್ಲಿ, ಹಳ್ಳಿಯ ಚಿತ್ರಗಳಿಗಿಂತ ಉತ್ತಮ ರಸಚಿತ್ರಗಳನ್ನು ನೀಡುವುದರ ಮೂಲಕ, ಆ ಬಗೆಯ ರಚನೆಗೆ ಬಹು ಹಿಂದೆಯೇ ನಾಂದಿ ಹಾಡಿ, ಹೆದ್ದಾರಿಯನ್ನೇ ತೆರೆಯಬಹುದಿತ್ತು. ಹೀಗಾಗಿ, ಈ ಕೃತಿಯನ್ನು ಯಾವುದೊಂದು ಸಿದ್ಧರೂಪದ ಶೀರ್ಷಿಕೆಯಿಂದ ಕರೆಯುವುದೂ ಕಷ್ಟವಾಗಿದೆ. ಒಮ್ಮೆ ಶಾಸ್ತ್ರಿಗಳ ಮುಂದೆ ಪ್ರಸ್ತಾಪಿಸಿದಾಗ–"ನಾನೊಂದು ಕಾದಂಬರಿಯನ್ನು ಬರೆಯಲು ಹೊರಟದ್ದುಂಟು; ಆದರೆ ಅದು ಇಂದಿನ ಅರ್ಥದಲ್ಲಿ ಕಾದಂಬರಿಯೂ ಅಲ್ಲ; ಕಥೆಯೂ ಅಲ್ಲ–ಕೇವಲ ವ್ಯಕ್ತಿಚಿತ್ರಗಳ ಸಂಕಲನ" ಎಂದು ಹೇಳಿ, ಈ ವಿಷಯದಲ್ಲಿ ಮಾತನಾಡಲು ತಮಗೆ ಇಷ್ಟವಿಲ್ಲವೆಂಬಂತೆ, ವಿಷಯಾಂತರ ಮಾಡಿದ್ದುಂಟು. ಅವರಿಂದ ಈ ಬಗ್ಗೆ ಹೆಚ್ಚಿನ ವಿಷಯ ತಿಳಿಯಲು ಸಾಧ್ಯವಾಗಲಿಲ್ಲ.

ಇಲ್ಲಿನ ಬರವಣಿಗೆಯನ್ನು ಎರಡು ಪ್ರಮುಖ ಗುಂಪಾಗಿ ವಿಂಗಡಿಸಬಹುದು —ರಾಮಾಶಾಸ್ತ್ರಿಯನ್ನು ಕುರಿತು ಬರೆದ ಆತನ ಸಂಸಾರ ಚಿತ್ರಗಳು; ಇನ್ನೊಂದು

ಬೇರೆ ಬೇರೆ ಸಂದರ್ಭಗಳಲ್ಲಿ ಅವರು ಬರೆದು ಪ್ರಕಟಿಸಲು ಹಿಂಜರಿದ ಸ್ವತಂತ್ರ ಬಿಡಿ ಲೇಖನಗಳು. ಇವುಗಳು ಹರಟೆಗಳು ಇಲ್ಲವೇ ಪ್ರಬಂಧರೂಪಗಳಲ್ಲಿವೆ. ಉದಾಹರಣೆಗೆ: ಅಚ್ಯುತರಾಯನನ್ನು ಕುರಿತ ವ್ಯಕ್ತಿಚಿತ್ರ; 'ಅಸಂತುಷ್ಟೋ ದ್ವಿಜೋ ನಷ್ಟಃ'—ಎಂಬ ಉಪಾಧ್ಯಾಯ ವರ್ಗವನ್ನು ಕುರಿತ ಪ್ರಬಂಧ; ದುಡಿಮೆಯನ್ನು ಕುರಿತು ಬರೆದ ಲೇಖನ, ಬಾರಾಬಲೂತಿ ಪದ್ಧತಿ; 'ಶಾಸ್ತ್ರ ಸಟೆಯೇ, ದಿಟವೇ' ಎಂಬ ತಾತ್ತ್ವಿಕ ಚರ್ಚೆ; ಹಣಪ್ರಪಂಚ ಎಂಬ ಹರಟೆ; ಪುಸ್ತಕ ವ್ಯಾಪಾರ ಮತ್ತು ವೆಂಕಮ್ಮನವರ ವಿಸಿಟ್ (Visit) ಎಂಬ ಸಂಭಾಷಣೆ . . . .

ಈ ಎಲ್ಲ ಬರಹಗಳು ಅವರು ಬೇರೆ ಬೇರೆ ಕಾಲದಲ್ಲಿ ಬರೆದ ಲಘು ಬರಹಗಳ ಗುಂಪಿಗೆ ಸೇರುತ್ತವೆ. ಇವುಗಳಲ್ಲಿ ಕೆಲವಾದರೂ ಅವರ 'ಶ್ರೀಪತಿಯ ಕಥೆ'ಗಳಲ್ಲಿ ಸೇರದಿರುವುದು ಆಶ್ಚರ್ಯವೇ ಸರಿ!

೫

ಇನ್ನು ಶಾಸ್ತ್ರಿಗಳ 'ರಾಮಾಶಾಸ್ತ್ರಿ' ಅಥವಾ 'ರಾಮಪ್ಪ'ನನ್ನು ಕುರಿತು ಕೆಲವು ಸಂಗತಿಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಈ ಎಲ್ಲ ಬರವಣಿಗೆ ಅಚ್ಚಿನಲ್ಲಿ ಸುಮಾರು ೨೫೦ ಪುಟಗಳಷ್ಟು ಆಗಬಹುದು. ಈ ಬರವಣಿಗೆಯನ್ನು ಕೈಗೊಳ್ಳುವುದರಲ್ಲಿ ಶಾಸ್ತ್ರಿಗಳ ಉದ್ದಿಶ್ಯವೇನಿತ್ತೋ ತಿಳಿಯದಾದರೂ, ಅದರ ಸಲುವಾಗಿ ಅವರು ಮಾಡಿಕೊಂಡಿದ್ದ ಟಿಪ್ಪಣಿಗಳು—ಹತ್ತಾರು ಪುಟಗಳು ದೊರೆತಿವೆ. ಅವುಗಳು ಬಹುಪಾಲು ಇಂಗ್ಲಿಷ್ ಭಾಷೆಯಲ್ಲಿ ಇದ್ದು ಸ್ವಾರಸ್ಯಕರವಾದ ಅಂಶಗಳಿಂದ ಕೂಡಿವೆ.

ಉದಾ: Railways ಎಂಬ ಶೀರ್ಷಿಕೆಯ ಅಡಿಯಲ್ಲಿ ಈ ಅಂಶಗಳನ್ನು ಕೊಟ್ಟಿದ್ದಾರೆ:

1864—Madras—Bangalore
1 -2-1881—Bangalore—Channapatna
25-3-1881—Channapatna—Mandya
1882—To Mysore
1884—Bangalore To Tumkur
1889—Upto Harihar
1899—Birur-Shimoga
1891—Mysore to Nanjangud.

ಇದನ್ನು ಓದಿದಮೇಲೆ ಶಾಸ್ತ್ರಿಗಳು ತಮ್ಮ ಕಥಾನಾಯಕನು ಭಾವ ಮೈದುನನ ಉಪನಯನದ ಸಲುವಾಗಿ ಪತ್ನಿಯೊಡನೆ ಕಡೂರಿಗೆ ರೈಲಿನಲ್ಲಿ

ಪ್ರಯಾಣಮಾಡುವಾಗ, ಬೇಕಾಗುವ ವಿವರಗಳ ಸಲುವಾಗಿ ಸಂಗ್ರಹಿಸಿಕೊಂಡಂತೆ ಕಾಣುತ್ತದೆ.

ಅದರಂತೆ ಸಿಂಗ್ರಯ್ಯನ ಗ್ರಂಥದಿಂದಲೂ, ಮೈಸೂರು ಗೆಜಿಟಿಯರ್ ಗ್ರಂಥದಿಂದಲೂ Rangacharlu ಬಗ್ಗೆ ಕೊಟ್ಟಿರುವ Some Dates ಇತ್ಯಾದಿ ಕೆಲವು ಟಿಪ್ಪಣಿಗಳನ್ನು ನೋಡಬಹುದು. ಇವುಗಳಲ್ಲಿನ ಸ್ವಾರಸ್ಯಭಾಗವನ್ನು ಕುರಿತು ಒಂದೆರಡು ಉಲ್ಲೇಖನಗಳನ್ನು ಕೊಟ್ಟಿದೆ—

"ಕೃಷ್ಣರಾಜ ಭೂಪ— ಮನೆಯೆಲ್ಲಾ ದೀಪ!"

"ಚೇಳಿನ ಮಂತ್ರದಲ್ಲಿ ಮಂತ್ರಕ್ಕಿಂತ ಉಗುಳು ಹೆಚ್ಚು—ಆದ್ದರಿಂದ ಮಂತ್ರಕ್ಕಿಂತ ಔಷಧಿಯೇ ವಾಸಿ."

"ಹಾಲಿಗೆ ದೋಷವಿಲ್ಲ; ಬೆಳ್ಳಿಪಾತ್ರೆಗೆ ದೋಷವಿಲ್ಲ; ಮಡಕೆ—to be thrown out."

"In ಸಾವಿತ್ರು's marriage at ರಾಣಿಬೆನ್ನೂರು, ರಾಮುಪ್ಪ acted as ಮಾಮುಪ್ಪ —The most appealing thing was ಗೋಮುಖದಲ್ಲಿ ತುಪ್ಪ."

"ಜಾಣೆಯ ಮೂಗುತಿಯಿಂದ ಕೋಣೆಯ ಕಸ ಹೋಯಿತು ಎಂಬಂತೆ ಚಾಮರಾಜವೊಡೆಯರು ಪಟ್ಟಕ್ಕೆ ಬಂದಮೇಲೆ ಈ ನಗರಕ್ಕೆ ಭೇಟಿಕೊಟ್ಟ ಲಿಟ್ಟನ್ ಮೊದಲುಗೊಂಡು ಢಫರಿನ್, ಲಾನ್ಸ್‌ಡೌನ್, ಕರ್ಸನ್, ಹಾರ್ಡಿಂಗ್‌ರವರೆಗೆ ವೈಸ್‌ರಾಯರ ಭೇಟಿಯಿಂದಲೂ ಆಲ್ಬರ್ಟ್, ವಿಕ್ಟರ್, ಗಾಯಕವಾಡ—ಮುಂತಾದವರ ಭೇಟಿಯಿಂದಲೂ ಊರಿನ ಹಳೆಯ ಹಳ್ಳಕೊಳ್ಳಗಳಲ್ಲಿದ್ದ ಕೊಚ್ಚೆ ಕೊಳಕುಗಳೆಲ್ಲ ಹೋಗಿ ಸುಂದರವಾದ ರಸ್ತೆಗಳಿಂದಲೂ ರಮ್ಯವಾದ ಉದ್ಯಾನಗಳಿಂದಲೂ, ಭವ್ಯವಾದ ಗಡಿಯಾರ ಫೌನ್‌ಟನ್ ಮುಂತಾದವುಗಳಿಂದಲೂ ಅಲಂಕೃತವಾಯಿತು."

ಈ ಟಿಪ್ಪಣಿಗಳ ಆಧಾರಗಳ ಮೇಲಿಂದ ಶಾಸ್ತ್ರಿಗಳು ಬರೆಯಬೇಕೆಂದಿದ್ದ ಉದ್ಗ್ರಂಥದ ಸ್ವರೂಪವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಈ ವಿವರಗಳನ್ನು ಕೊಡುವುದರಲ್ಲಿ ಅವರ ಉದ್ದಿಶ್ಯವೇನಿತ್ತೋ ತಿಳಿಯದು.

"ಇಪ್ಪತ್ತನೆಯ ಶತಮಾನಕ್ಕೆ ಕಾಲಿಡುವುದು ಈ ಕಥೆಯ ಉದ್ದೇಶವಲ್ಲವಾದುದರಿಂದ ಹೆಚ್ಚು ವಿವರಗಳಿಗೆ ಹೋಗದೆ ಅದಕ್ಕೆ ಸ್ವಲ್ಪ ಹಿಂದೆ ಮುಂದೆ ಇದ್ದವುಗಳನ್ನು ಹೆಸರಿಸಿದೆ" ಎಂದಿದ್ದಾರೆ ಒಂದು ಕಡೆ.

*   *   *

ನಾವು ರಾಮುಪ್ಪನನ್ನು ಪ್ರಥಮ ಬಾರಿಗೆ ಪರಿಚಯ ಮಾಡಿಕೊಳ್ಳುವುದು ವಿಚಿತ್ರ ಸನ್ನಿವೇಶದಲ್ಲಿ—

“ ಈಗ ದೊಡ್ಡಕೆರೆಯ ಮೈದಾನವಾಗಿರುವುದು ಹಿಂದೆ ದೊಡ್ಡ ಕೆರೆಯಾಗಿತ್ತು. ಮೈಸೂರಿಗೆ ಅದು ದೊಡ್ಡ ಕೆರೆಯು, ಕುಕ್ಕನಹಳ್ಳಿಯ ಕೆರೆಗಿಂತ, ಕಾರಂಜಿ ಕೆರೆಗಿಂತ ದೊಡ್ಡಕೆರೆ. ನೀರಿನ ಬಣ್ಣ ಹಸುರು, ಯಾವಾಗಲೂ ಹಸುರು. ಉಳಿದ ಎರಡು ಕೆರೆಗಳ ಬಣ್ಣ ಮಳೆಗಾಲದಲ್ಲಿ ಕೆಂಪು; ಮಿಕ್ಕಕಾಲಗಳಲ್ಲಿ ತಿಳಿನೀಲಿ. ಆದರೆ ಕಾರಂಜಿ ಕೆರೆ ದೂರವಾದ್ದರಿಂದಲೂ, ಕುಕ್ಕನಹಳ್ಳಿಯ ಕೆರೆಯನ್ನು ಉಪಯೋಗಿಸಲು ನಿರ್ಬಂಧವಿದ್ದುದರಿಂದಲೂ ಊರಿನ ಜನರು ದೊಡ್ಡಕೆರೆಗೆ ಸ್ನಾನಕ್ಕೆ, ಬಟ್ಟೆ ಒಗೆಯು ವುದಕ್ಕೆ ಹೋಗುತ್ತಿದ್ದುದು ಹೆಚ್ಚು. ಇದಕ್ಕೆ ಒಳ್ಳೆಯ ಅಚ್ಚುಕಟ್ಟಾದ ಸೋಪಾನ ಗಳಿದ್ದುವು–ಸಂಧ್ಯಾ ಮಂಟಪಗಳಿದ್ದುವು–ಈಗಲೂ ಇವೆ. ಗಂಡಸರು ಹೆಂಗಸರಿಗೆ ಪ್ರತ್ಯೇಕವಾದ ಸ್ನಾನಘಟ್ಟಗಳು ಇದ್ದುವು. ಆದ್ದರಿಂದ ಇಲ್ಲಿ ಯಾವಾಗಲೂ ಗಿಜಿಗಿಜಿ ಎಂದು ಇರುತ್ತಿತ್ತು.

“ ಇಲ್ಲಿ ಸ್ನಾನಮಾಡಲು, ಬಟ್ಟೆ ಒಗೆಯಲು ಊರಿನ ಜನರು ಸ್ತ್ರೀಪುರುಷರೆ ನ್ನದೆ, ಲೌಕಿಕ ವೈದಿಕರೆನ್ನದೆ ಎಲ್ಲರೂ ಬರುತ್ತಿದ್ದರು. ಹೀಗೆ ಇದು ಮಧ್ಯಪ್ರದೇಶ ವಾಗಿದ್ದುದರಿಂದ ಕ್ರೈಸ್ತಪಾದ್ರಿಗಳು ಈ ಸ್ಥಳವನ್ನು ತಮ್ಮ ಪ್ರಸಂಗಕ್ಕೆ ಆರಿಸಿ ಕೊಂಡಿದ್ದರು. ಕೋಟೆಯಿಂದ ಚಾಮುಂಡಿ ಬೆಟ್ಟಕ್ಕೆ ಹೋಗುವ ರಸ್ತೆಯಲ್ಲಿ ಒಂದು ದಿನ ಒಬ್ಬಪಾದ್ರಿಯು ಉಪದೇಶ ಕೊಡುತ್ತಿದ್ದನು. ಅವನು ಕೃಷ್ಣನನ್ನು ಜಾರ–ಚೋರನೆಂದು ಬೈದು, ಋಷಿಮುನಿಗಳನ್ನೆತ್ತಿ ಆಕ್ಷೇಪಿಸಿ ಕೊನೆಗೆ ಏಸುಕ್ರಿಸ್ತ ನನ್ನು ಹೊಗಳಿ ಅವನು ಸಮುದ್ರದ ಮೇಲೆ ನಡೆದ ಕಥೆಯನ್ನು ಹೇಳಿ ‘ ನೀವು ನಮ್ಮ ಏಸು ಸ್ವಾಮಿಯನ್ನು ನಂಬಬೇಕು.... ’ ಎಂದು ಹೇಳುತ್ತಿದ್ದನು. ಇದನ್ನು ಸ್ವಲ್ಪ ಕೇಳುತ್ತಾ ಹೊತ್ತಿನಿಂದ ಆ ಗುಂಪಿನಲ್ಲಿದ್ದ ಒಬ್ಬನು—

‘ ಏಸುಕ್ರಿಸ್ತನ್ನ ನಂಬು,
ತಲೆಗೊಂದು ದಿಂಬು,
ಕೈಗೊಂದು ಚಂಬು ’—ಎಂದನು.

ಪಾದ್ರಿಗೆ ಇದು ಸರಿಯಾಗಿ ಗೊತ್ತಾಗಲಿಲ್ಲ.

‘ ಹಾ ! ಏನಿದು ಚಂಬು ’ ಎಂದನು.

‘ ಚಂಬು ಏತಕ್ಕೆ ಗೊತ್ತಾಗಲಿಲ್ಲವೆ ? ಬೆಳ್ಳಗೆ ಬೆಳಗಿಕೊಂಡು “ ಹರಯೇ ನಮಃ ” ಎಂದು ಹೊರಡುವುದಕ್ಕೆ ’—ಎಂದನು.

ಇದು ಮೊದಲಿಗಿಂತ ಕ್ಲಿಷ್ಟವಾಯಿತು.

‘ ನಾನು ನಿಮ್ಮನ್ನು ಹಿಂಬಾಲಿಸಲಾರೆ;[1] ನಿಮ್ಮನ್ನು ನೀವು ವ್ಯಾಖ್ಯಾನ ಮಾಡಿ.’

---

[1] I can’t follow you—ಎಂಬ ಇಂಗ್ಲಿಷ್ ಬಳಕೆ ಮಾತಿನ ಪದಶಃ ಭಾಷಾಂತರ ವಿದು.

"ಇದಕ್ಕೆ ಪ್ರಾಯಶಃ ಆ ಕನ್ನಡಿಗನಿಗೆ ವ್ಯಾಖ್ಯಾನ ಬೇಕಾಗಿತ್ತೆಂದು ಕಾಣುತ್ತದೆ. ಆದರೆ ಅದರ ಅರ್ಥವನ್ನು ಊಹಿಸಿಕೊಂಡು, 'ಉಪಾದಾನಕ್ಕೆ' ಎಂದರು. ಪಾದ್ರಿಯು ಕಣ್ಣುಬಿಟ್ಟನು. ವ್ಯಾಖ್ಯಾನಕ್ಕೆ ಟೀಕೆ ಬೇಕಾಯಿತು.—'ತಿರುಪಕ್ಕೆ' ಎಂದರು. ಇದೂ ಅರ್ಥವಾಗಲಿಲ್ಲ. "ಭಿಕ್ಷಕ್ಕೆ" ಎಂದು ವಿವರಿಸಿದ ಮೇಲೆ ಅವನು 'ಹಾ!' ಎಂದನು. ಇಂಗ್ಲಿಷಿನ 'ಬೆಗ್' ಎಂಬ ಮಾತಿಗೆ 'ಭಿಕ್ಷ' ಎಂಬುದೊಂದನ್ನೇ ಅವನು ಕಲಿತಿದ್ದ. ಅಂತೂ ಇಂತೂ ಕಕ್ಕಾಬಿಕ್ಕಿಯಾಗಿ ಇಂಗು ತಿಂದು ಮುಖ ಸೊಟ್ಟಗಾಗಿ ಕೊನೆಗೆ "ನೀವು ಕ್ರೈಸ್ತರಾದರೆ ಸುಂದರಿಯರನ್ನು ಮದು ವೆಮಾಡಿಕೊಳ್ಳಬಹುದು, ತುಂಬ ಸಂಪಾದನೆ ಮಾಡಬಹುದು, ಬೇಕಾದ ಹಾಗೆ ತಿಂಡಿ–ಪಾನೀಯಗಳನ್ನು ಪಡೆಯಬಹುದು"—ಎಂದನು.

'ಇವನೊಬ್ಬ ಕಲಿಯುಗದ ವಿಶ್ವಾಮಿತ್ರ ಬಂದನಪ್ಪ ಹೊಲತಿಯರನ್ನು ಮದುವೆ ಮಾಡಿಸುವುದಕ್ಕೆ! ಯಾರು ಬೇತುಕೊಂಡಿದ್ದಾರೆ ಸದ್ಯ ಇವರಿಗೆ! ಇವರ ತಿಂಡಿತೀರ್ಥಗಳು ಗೊತ್ತೇ ಇವೆ–ಮದ್ಯ–ಮಾಂಸ.'

"ಇದರ ಮೊದಲ ಭಾಗ ಪಾದ್ರಿಗೆ ಅರ್ಥವಾಗಲಿಲ್ಲ. ಕೊನೆಯ ಎರಡು ಮಾತುಗಳ ಬಲದಿಂದ ಬ್ರಾಹ್ಮಣರ ಯಜ್ಞ ಯಾಗಾದಿಗಳನ್ನು ಖಂಡಿಸಿ, ಹಿಂದೆ ಅವರು ಮಾಂಸ ಭಕ್ಷಕರಾಗಿದ್ದರೆಂದು ಘೋಷಿಸಿದನು. ಕೊನೆಗೆ 'ಮದ್ಯವೆಂದರೇನು? ದ್ರಾಕ್ಷಾರಸ. ಅದನ್ನು ಕುಡಿದರೆ ಏನು ತಪ್ಪು. ನಾವು ಒಂದು ರೂಪದಲ್ಲಿ ಮದ್ಯ, ಮಾಂಸ ಕುಡಿದು ತಿಂದರೆ ನೀವು ಇನ್ನೊಂದು ರೂಪದಲ್ಲಿ ಕುಡಿದು ತಿಂದು ಮಾಡುತ್ತೀರಿ' ಎಂದು ಸವಾಲು ಹಾಕಿದನು.

'ಯಾರು? ನಾವೇ? ಬ್ರಾಹ್ಮಣರೆ?'

'ಹೌದು, ನೀವು! ಬ್ರಾಹ್ಮಣರು!'

'ನಿನ್ನ ಬಾಯಲ್ಲಿ ಹುಳುಬಿದ್ದು ಹೋಗುತ್ತೆ! ಯಾವ ಜಾತಿಕೆಟ್ಟ ಚಂಡಾಲ ತಿನ್ನುವುದನ್ನು ಕುಡಿಯುವುದನ್ನು ನೋಡಿದ್ದೀಯೋ!'

'ಚಂಡಾಲ ಯಾಕೆ? ನೀವು ತಿಂದು ಕುಡಿಯುವುದಿಲ್ಲವೆ?'

'ಏನು ನೋಡಿದ್ದೀಯೆ?'

'ನೀವು ಎಂದೂ ಹಾಲು, ಮೊಸರು, ಬೆಣ್ಣೆ ತಿನ್ನುವುದಿಲ್ಲವೆ? ಎಳನೀರು ಕುಡಿಯುವುದಿಲ್ಲವೆ? ಅದೇನು?'

'ಹಾಲು ಮೊಸರು ಬೆಣ್ಣೆಗಳನ್ನು ಮಾಂಸವೆಂದು ಕರೆಯುವವರನ್ನು ಎಂದಿಗೂ ಕಂಡಿರಲಿಲ್ಲ, ಕೇಳಿರಲಿಲ್ಲ; ಎಳನೀರಿಗೂ ಹೆಂಡಕ್ಕೂ ಏನು ಸಂಬಂಧ?'

'ಹೆಂಡ ಎಲ್ಲಿಂದ ಬರುತ್ತೆ?'

'ಈಚಲು ಮರದಿಂದ'

'ತೆಂಗಿನ ಮರದಿಂದ!'

'ಹೆಂಡ ತೆಗೆಯುವುದು ಈಚಲಮರದಿಂದ ಎಂದು ಗೊತ್ತಿಲ್ಲ—ಇವನು ಬಂದು ನಮಗೆ ಬೋಧಿಸುತ್ತಾನಂತೆ ಏನನ್ನೊ!'

'ಅಯ್ಯೊ, ನಿಮ್ಮೂರಿನಲ್ಲಿ ಈಚಲ ಹೆಂಡವಿರಬಹುದು. ನೀವು ಮದರಾಸು ಪ್ರಾಂತಕ್ಕೆ ಹೋಗಿ ನೋಡಿ. ಮದರಾಸು ಪಟ್ಟಣದಲ್ಲಿಯೂ ನೋಡಿ....ಈಚಲು ಮರದಿಂದ ತೆಗೆದ ಹಾಗೆಯೇ ಅವುಗಳಿಂದಲೂ ಹೆಂಡ ತೆಗೆಯುತ್ತಾರೆ.'

'ಇರಬಹುದು. ನನಗೆ ಅಷ್ಟು ತಿಳುವಳಿಕೆ ಸಾಲದು. ಹಾಗಿದ್ದರೆ ಅದು ಅನ್ಯಾಯ. ಸಂತತಿಯನ್ನು ಪಡೆದು ವಂಶವನ್ನು ಬೆಳಸಬೇಕಾದ ಗರತಿ ಹುಡುಗಿಯರನ್ನು ಸೂಳೆಗಾರಿಕೆಗೆ ಹಾಕಿದ ಹಾಗೆ. ಇರಲಿ, ಅಷ್ಟು ಮಾತ್ರದಿಂದ ಎಳನೀರು ಹೆಂಡವಾಗುವುದು ಹೇಗೆ?'

'ಅದನ್ನು ನಿದರ್ಶನ ಮಾಡಿಕೊಡುವುದು ಸುಲಭ! ಎಳನೀರೂ ತೆಂಗಿನ ಸಾರ—ಹೆಂಡವೂ ಅದರ ಸಾರ—ಒಂದು ಮೇಲಿಂದ ಬರುತ್ತದೆ; ಇನ್ನೊಂದು ಕೆಳಗಿನಿಂದ ಬರುತ್ತದೆ.'

'ಹಾಲು ಮೊಸರನ್ನು ಮಾಂಸ ಎಂದು ಹೇಗೆ ಕರೆದಿರಿ?'

'ಅವು ಎಲ್ಲಿಂದ ಬಂತು? ಗಿಡದಲ್ಲಿ ಬೆಳೆಯುತ್ತವೆಯೆ? ಭೂಮಿಯಲ್ಲಿ ಅಗೆದು ತೆಗೆಯುತ್ತಾರೋ! ಹಸುವಿನ ಮೈಯಿಂದ ಬರಲಿಲ್ಲವೆ? ಜಿಣ್ಣೆ ಹಾಲಿನ ಜಿಡ್ಡು, ಅದೇನು? ಹಸುವಿನ ಮೈಯಿನ ಕೊಬ್ಬಲ್ಲವೆ? ಒಳಗಿದ್ದರೆ ಮಾಂಸ, ಹೊರಗೆ ಬಂದರೆ ಹಾಲು ಅಷ್ಟೇ!'

"ಋಷಿ ಮೂಲಗಳನ್ನು, ಭಾಗವತದ ಹುಳುಕುಗಳನ್ನು ತಿಳಿದುಕೊಂಡು ಬತ್ತಳಿಕೆಯಲ್ಲಿಟ್ಟುಕೊಂಡಿದ್ದವನು, ಹಾಲು ಮೊಸರುಗಳ ಮೂಲರೂಪಗಳನ್ನು ತರ್ಕಿಸಿ ಸಿದ್ಧಮಾಡಿ ಇಟ್ಟುಕೊಂಡಿದ್ದನೆಂದು ತೋರುತ್ತದೆ. ಈ ಕುತರ್ಕಗಳು ಎಂಥವರನ್ನೂ ಅಪ್ರತಿಭರನ್ನಾಗಿ, ತಾತ್ಕಾಲಿಕವಾಗಿಯಾದರೂ ಮೂಕರನ್ನಾಗಿ ಮಾಡುತ್ತವೆ. ಹಾಗೇ ಎಷ್ಟೋ ಸಾರಿ ಮಾಡಿರಬೇಕು. ಅದರಂತೆ ತಾನು ಈಗಲೂ ಜಯಶೀಲನಾದೆನೆಂದು ಗೆದ್ದ ಹುಂಜನಂತೆ ಕತ್ತೆತ್ತಿ—

'ಈಗ ಏನೆನ್ನುತ್ತೀರಿ' ಎಂದನು.

"ಆಗ ಆ ಗುಂಪಿನಲ್ಲಿ ಹಿಂದೆ ಇದ್ದ ಒಬ್ಬ ವೈದಿಕ ಬ್ರಾಹ್ಮಣನು 'ನಿಮಗೆ ಮೇಲು, ಕೆಳಗು, ಒಳಗು ಹೊರಗು, ಹಿಂದು ಮುಂದು—ಒಂದಕ್ಕೂ ವ್ಯತ್ಯಾಸವೇ ಇಲ್ಲ. ಎಲ್ಲಾ ಒಂದೇ ಆಗಿರುವಂತೆ ಕಾಣುತ್ತದೆ.'—ಎಂದನು.

'ಹೌದು, ಅದರಲ್ಲಿ ತಪ್ಪೇನು?' ಎಂದು ತನ್ನ ಜೇಬಿನಿಂದ ಒಂದು ರೂಪಾಯಿ ನಾಣ್ಯವನ್ನು ತೆಗೆದು ಅದನ್ನು ಹಿಂದೆ ಮುಂದೆ ತಿರುಗಿಸಿ 'ಇದರಲ್ಲಿ ಮೇಲೆ ಬೆಳ್ಳಿ, ಕೆಳಗೆ ಬೆಳ್ಳಿ ಇಲ್ಲವೆ? ಹಿಂದೆ ಬೆಳ್ಳಿ ಮುಂದೆ ಬೆಳ್ಳಿ ಇಲ್ಲವೆ?' ಎಂದು ಸಮರ್ಥನೆ ಮಾಡಿದನು.

"ಅದಕ್ಕೆ ಆ ಬ್ರಾಹ್ಮಣನು ರೇಗಿ

"ಈ ಜನ ತಾಯಿಯ ನ್ಮೆಯಿಂದ ಬರುವುದೆಲ್ಲ ಹಾಲು ಅನ್ನುವಂತೆ ಕಾಣುತ್ತದೆ. ನೀನೇನು ತಾಯಿಯ ಹಾಲು ಕುಡಿದೆಯೋ, ಇನ್ನೇನಾದರೂ ಕುಡಿದೆಯೋ!" ಎಂದು ಹೇಳಿ ಕೋಪದಿಂದ ಸಿರ್ರನೆ ಹೊರಟುಹೋಗುವುದರಲ್ಲಿದ್ದನು. ಜನ ಗೊಳ್ಳೆಂದು ನಕ್ಕಿತು. ಆಗ ಪಾದ್ರಿಯ ಮುಖ ಜೋಲು ಬಿತ್ತು. ಒಬ್ಬಿಬ್ಬರು ಅದನ್ನು ವಾಚ್ಯವಾಗಿ ಅವಾಚ್ಯವಾಗಿ ಸ್ಪಷ್ಟಪಡಿಸಿ ಅವನನ್ನು ಸಂಬೋಧಿಸಿದರು. ಅವನು ಮುಖ ಕೆಂಪಗೆ ಮಾಡಿಕೊಂಡು ಇದಕ್ಕೆ ಉತ್ತರ ಕೊಡಲಾರದೆ ಅರ್ಧ ಮೆಚ್ಚಿಕೆಯಿಂದಲೂ, ಅರ್ಧ ಕುತೂಹಲದಿಂದಲೂ—

'ಅಯ್ಯಾ, ಇಲ್ಲಿ ಬನ್ನಿ. ನೀವು ಯಾರು?' ಎಂದನು.

"ಪ್ರಸಂಗ ಅಲ್ಲಿಗೆ ಮುಗಿಯಿತು. ಗುಂಪು ಹುಚ್ಚುಹುಚ್ಚಾಗಿ ನಗುತ್ತಾ ಚದುರುವುದಕ್ಕೆ ಮೊದಲಾಯಿತು.

'ನಾನು ಯಾರಾದರೇನು? ನಾನೂ ಒಬ್ಬ ಮನುಷ್ಯ.'

'ನೀವು ಬಹಳ ಬುದ್ಧಿವಂತರು.'

'ನನಗೆ ನಿನ್ನ ಉಡುಗೂರೆ ಏನೂ ಬೇಕಾಗಿಲ್ಲ.'

'ಇದುವರೆಗೆ ಈ ತರ್ಕವನ್ನು ನಾನು ಅನೇಕ ಸ್ಥಳಗಳಲ್ಲಿ ಮಾಡಿದ್ದೇನೆ. ಯಾರೂ ಉತ್ತರ ಕೊಟ್ಟಿರಲಿಲ್ಲ. ನೀವು ಕೊಟ್ಟಿರಿ. ನಿಮಗೆ ಹರಿತವಾದ ಬುದ್ಧಿಯಿದೆ. ನೀವು ಇಂಗ್ಲಿಷ್ ಓದಿ. ನಿಮಗೆ ಸಹಾಯ ಮಾಡಿಸುತ್ತೇನೆ, ನೀವು ದೊಡ್ಡ ಅಧಿಕಾರಕ್ಕೆ ಬರಬಹುದು!'

'ಅದೊಂದೇ ಕಡಿಮೆ. ಇಂಗ್ಲಿಷ್ ಓದುವುದು–ಈ ಕುತರ್ಕಗಳಿಗೆ ತಾನೆ? ಅದೇ ತಾನೇ ನೀವು ಕಲಿತಿರುವುದು, ಕಲಿಸುವುದು!'

"ಪಾದ್ರಿಯು ಬ್ರಾಹ್ಮಣನನ್ನು ಅಲಕ್ಷ್ಯಮಾಡಿ ಹೊರಟುಹೋಗಬಹುದಿತ್ತು. ಆದರಿಂದ ಅವನ ಕೆಲಸಕ್ಕಾಗಲಿ, ಸಂಬಳಕ್ಕಾಗಲಿ ಏನೂ ಕುಂದು ಬರುತ್ತಿರಲಿಲ್ಲ. ಆದರೆ ಆ ವರ್ಚಸ್ವಿಯಾದ ಬ್ರಾಹ್ಮಣನಲ್ಲಿ ಅವನಿಗೆ ಏನೋ ಕುತೂಹಲ ಗೌರವ ಹುಟ್ಟಿತು. ಅವನ ಪರಿಚಯ ಮಾಡಿಕೊಳ್ಳಬೇಕೆಂದು ಯೋಚಿಸಿದನು.

"ಹತ್ತೊಂಬತ್ತನೆಯ ಶತಮಾನದಲ್ಲಿ ಇಂಡಿಯಾದ ಆದ್ಯಂತವೂ ಹೀಗೇ ಪಾದ್ರಿಗಳು ಆಯಾ ಪ್ರಾಂತದ ಪಂಡಿತರನ್ನು ಸ್ನೇಹ ಮಾಡಿಕೊಂಡು ನಯವಾದ ಮಾತನಾಡಿ, ಹಣದ ಆಸೆ ತೋರಿಸಿ, ಅವರಿಂದ ಭಾಷೆಯನ್ನು ಕಲಿತರು. ಆಯಾ ಭಾಷೆಗಳಲ್ಲಿ ತಮ್ಮ ಧಾರ್ಮಿಕ ಸಾಹಿತ್ಯಗಳನ್ನು ಭಾಷಾಂತರ ಮಾಡಿಸಿಕೊಂಡರು. ವೇದ ಪುರಾಣ ಶಾಸ್ತ್ರ ಇವುಗಳ ಸಾರಾಂಶವನ್ನು ತಿಳಿದುಕೊಂಡು ಅವುಗಳನ್ನು ತಮ್ಮ ಮೂಗಿನ ನೇರಕ್ಕೆ ಉಪಯೋಗಿಸಿಕೊಂಡರು. ಆದ್ದರಿಂದ ಇಂಥವರು ಸಿಕ್ಕಿದರೆ ಬಿಡುತ್ತಿರಲಿಲ್ಲ. ಆದ್ದರಿಂದ ಅವರನ್ನು ಸಮಾಧಾನಗೊಳಿಸಿ ಕೊನೆಗೆ—

'ನೀವು ಇಂಗ್ಲಿಷ್ ಕಲಿಯದಿದ್ದರೆ ಬೇಡ. ನೀವು ಹೇಳುವಂತೆ ಆ ಮ್ಲೇಂಛ

ಭಾಷೆ ನಿಮಗೆ ಬೇಡ. ನನಗೆ ನೀವು ಸಂಸ್ಕೃತ ಹೇಳಿಕೊಡಿ. ನನ್ನ ಗುರುಗಳಾಗಿ' ಎಂದು ವಿನಯವನ್ನು ತೋರಿಸಿದನು.

'ಮ್ಲೇಂಚ್ಛನಿಗೆ ಸಂಸ್ಕೃತವನ್ನು ಹೇಳಿಕೊಡುವುದು ಮ್ಲೇಂಚ್ಛ ಭಾಷೆಯನ್ನು ಕಲಿಯುವುದಕ್ಕಿಂತ ಹೀನ. ಅಂಥವರ ಬಾಯಿಗೆ ದರ್ಭೆ ಹಾಕಿ ಸುಡಬೇಕು. ಏನು, ನಾನು ಅಂಥ ಹೀನಕೃತ್ಯ ಮಾಡುವವನೆಂದು ತಿಳಿದುಕೊಂಡೆಯಾ?'

'ಸಂಸ್ಕೃತ ಬೇಡಿ, ಕನ್ನಡ ಹೇಳಿಕೊಡಿ. ನನ್ನ ಕನ್ನಡವನ್ನು ನೋಡಿದ್ದೀರಿ. ನನಗೆ ಚೆನ್ನಾಗಿ ಬರುವುದಿಲ್ಲ. ಅದನ್ನು ನೀವು ಎಷ್ಟು ಚೆನ್ನಾಗಿ ಆಡುತ್ತೀರಿ. ನಿಮ್ಮ ಹಾಗೆ ಆಡಬೇಕೆಂದು ನನಗೆ ತುಂಬ ಆಸೆ."–ಎಂದನು.

ಅವರೊಡನೆ ಮಾತನಾಡುತ್ತಾ ಮೆಲ್ಲನೆ ನಡೆದು ಅಲ್ಲಿಂದ ಸುಮಾರು ಒಂದು ಫರ್ಲಾಂಗ್ ಇದ್ದ ತನ್ನ ಮನೆಯ ಹತ್ತಿರಕ್ಕೆ ಬಂದು ಅದನ್ನು ತೋರಿಸಿ, ಅವರಿಗೆ ತಿಂಗಳಿಗೆ ಆರು ರೂಪಾಯಿ ಸಂಬಳ ಕೊಡುವುದಾಗಿಯೂ, ವಾರಕ್ಕೆ ಎರಡು ದಿವಸ ಒಂದೊಂದು ಘಂಟೆ ಬಂದು ಕನ್ನಡ ಹೇಳಿಕೊಡಬೇಕೆಂದೂ ಅವನನ್ನು ಒಪ್ಪಿಸಿದನು.

ಆ ಬ್ರಾಹ್ಮಣನೇ ರಾಮಪ್ಪ ಉರುಫ್ ರಾಮಾಶಾಸ್ತ್ರಿಗಳು."

೬

ಮುಂದೆ ನಾವು ರಾಮಪ್ಪನನ್ನು ಕಾಣುವುದು ಮಣೇಗಾರ ಬಾಳಾಜಿರಾಯರ ಮನೆಯಲ್ಲಿ. ಆಹೊತ್ತು ರಾಮಪ್ಪನವರು ಎಳೆಯಷ್ಟಮಿಯ ಹಬ್ಬವೆಂದು ಅವರಲ್ಲಿ ಊಟಕ್ಕೆ ನಿಂತಿದ್ದರು. ಊಟವಾದ ಮೇಲೆ ಮನೆಯವರು ಗಂಧ ಹೂವು ಎಲೆಯಡಿಕೆಗಳನ್ನು ಅವರಿಗೆ ತಂದುಕೊಟ್ಟರು. ಗಂಧವೆಂದರೆ ಶ್ರೀಗಂಧ. ಅದು ದೇವರ ಪೂಜೆ ಮಾಡಿ ಮಿಕ್ಕ ಪ್ರಸಾದ. ಅದನ್ನು ರಾಮಪ್ಪನವರು ಭಕ್ತಿಯಿಂದ ತೆಗೆದು ಕತ್ತಿಗೆ ಲೇಪಿಸಿಕೊಂಡರು. ಎಲೆಯಡಿಕೆಯಲ್ಲಿದ್ದ ಮೂರುಕಾಸನ್ನು ಸೊಂಟಕ್ಕೆ ಸಿಕ್ಕಿಸಿಕೊಂಡರು. ವೀಳಯದೆಲೆ-ಅಡಿಕೆಯನ್ನು ಅಲ್ಲಿಯೇ ಬಿಟ್ಟರು. ಇನ್ನು ಹೂವನ್ನು ಏನು ಮಾಡಬೇಕೆಂಬುದು ತಿಳಿಯದೆ ಮಣೇಗಾರರ ಮಗಳು ನಾಲ್ಕು ವರ್ಷದ ಸಾವಿತ್ರಿಯನ್ನು ಕರೆದು—

"ಸಾವಿತ್ರು, ಬಾಮ್ಮಾ ಹೂ ಮುಡಿಸುತ್ತೇನೆ" ಎಂದರು.

"ಹೂಂ! ನಾನೇನೂ ಬರೋದಿಲ್ಲ" ಎಂದಳು ಆ ಹುಡುಗಿ.

"ಮತ್ತೆ ಹಾಗಾದರೆ ಈ ಹೂವು ಏನು ಮಾಡಲಿ?"

"ತಗೊಂಡು ಹೋಗಿ ನಿಮ್ಮ ಹೆಂಡತಿಗೆ ಕೊಡಿ."

"ನೀನೇ ನನ್ನ ಹೆಂಡತಿ, ಬಾ ತಗೋ."

"ಹೂಂ, ನಾನೇನೂ ಅಲ್ಲ!"

"ಮತ್ತೆ ಯಾರು?"

"ಕೋಟಿ ಬಾಗಿಲು ಮೂಗು ಹರಕಿ" ಎಂದು ಆ ಬಾಲೆ ರಾಮುಪ್ಪನವರನ್ನು ಹಾಸ್ಯ ಮಾಡುವಳು.

ಈ ಸರಸಸಲ್ಲಾಪವನ್ನು ಆಲಿಸಿದ ಮಣೇಗಾರರ ಪತ್ನಿ ಗಿರಿಜಾಬಾಯಿಯವರು ರಾಮುಪ್ಪನಿಗೆ ವಯಸ್ಸು ಮುವತ್ತು ಆದರೂ ಇನ್ನೂ ಮದುವೆಯಾಗುವ ಯೋಚನೆ ಏಕೆ ಮಾಡಿಲ್ಲವೆಂದು ಆಕ್ಷೇಪಿಸುವರು.

"ನಿಮ್ಮೂರ ಕಡೆ ಹೆಣ್ಣು ಸಿಕ್ಕದೆ ಇದ್ದರೆ ಹೇಳಿ. ನಾನು ಇಲ್ಲೇ ಹೆಣ್ಣು ಕೊಡಿಸುತ್ತೇನೆ. ನೀವು ಒಪ್ಪುವಂಥ ಹೆಣ್ಣು ಕೊಡಿಸುತ್ತೇನೆ" ಎಂದು ಗಿರಿಜಾಬಾಯಿಯ ಸಲಹೆ.

"ನಾನು ಒಪ್ಪುವುದೇನು! ನಮ್ಮ ತಂದೆ ಒಪ್ಪಿದರೆ ಸರಿ, ಅದಕ್ಕೂ ಕಾಲ ಬರಬೇಕಲ್ಲ." ಎಂದು ರಾಮುಪ್ಪನವರ ವಾದ. ಅವರ ತಾಯಿಯೂ ಈ ಬಗ್ಗೆ ಒತ್ತಾಯ ಮಾಡುತ್ತಲೇ ಇದ್ದಳು. ತಾಯಿಯ ಮಾತು ನಡೆದಿದ್ದರೆ ಈಗ ಅವರಿಗೆ ಮದುವೆಯಾಗಿ ಮಕ್ಕಳಾಗಿ ಎಷ್ಟೋ ಕಾಲವಾಗುತ್ತಿತ್ತು. ಆದರೆ ಕಂಕಣಬಲ ಕೂಡಿಬಂದಿರಲಿಲ್ಲ. (ಏಕೆಂಬುದು ನಮಗೆ ತಿಳಿಯುವುದಿಲ್ಲ).

"ನಾನು ಮದುವೆ ಮಾಡಿಕೊಂಡರೆ ಇನ್ನು ಮೇಲೆ ನಿಮ್ಮ ಮನೆಯಲ್ಲಿ ಒಬ್ಬ ವಾರದ ಬ್ರಾಹ್ಮಣನ ಜತೆಗೆ ಒಬ್ಬ ವಾರದ ಮುತ್ತೈದೆಯನ್ನೂ ಸಾಕಿಕೊಳ್ಳಬೇಕಾಗುತ್ತದೆ"–ಎಂದು ರಾಮುಪ್ಪನ ದೂರು.

ಅವಳನ್ನು ತಾವು ಸಾಕುವುದಕ್ಕೂ ಸಿದ್ಧವೆಂದು ಗಿರಿಜಾಬಾಯಿ ಹೇಳಿದಾಗ ರಾಮುಪ್ಪನವರು ಮಾತಿಲ್ಲದಾಗುವರು.

ಮುವತ್ತಾರರ ಹರಯದಲ್ಲಿ ಕಠೋರ ಬ್ರಹ್ಮಚರ್ಯದಿಂದ ಕೆಚ್ಚಾದ ಶರೀರ ಅವರದು. ರೋಗ ಅವರ ಹತ್ತಿರ ಸುಳಿಯಲು ಅಂಜುತ್ತಿದ್ದರೂ, ಒಮ್ಮೆ ಹಸಿವು ತಡೆಯದೆ ಕಡಲೆಪುರಿ ತಿಂದು, ನೀರು ಕುಡಿದು ದಿನಗಳನ್ನು ಕಳೆದುದರಿಂದ ಹೊಟ್ಟೆ ನೋವು ಆರಂಭವಾಗಿ ಆಮಶಂಕೆಗೆ ತಿರುಗಿ ಅವರನ್ನು ಹಾಸಿಗೆ ಹಿಡಿಯುವಂತೆ ಮಾಡಿತ್ತು. ತಮ್ಮ ಮನೆಗೆ ವಾರದಲ್ಲಿ ಹೆಚ್ಚು ದಿನ ಊಟಕ್ಕೆ ಬರಲು ಸಂಕೋಚಪಟ್ಟು ಕಾಹಿಲೆ ತಂದುಕೊಂಡ ರಾಮುಪ್ಪನನ್ನು ಆ ಸ್ಥಿತಿಯಲ್ಲಿ ನೋಡಿ ಮಾತೃಹೃದಯದ ಗಿರಿಜಾಬಾಯಿಯೇ ಅವರನ್ನು ತೊಟ್ಟಿಲ ಮಗುವನ್ನು ನೋಡಿಕೊಳ್ಳುವಂತೆ ನೋಡಿಕೊಂಡು, ಕಾಹಿಲೆಯಿಂದ ಗುಣಪಡಿಸಿದರಂತೆ. ಅಲ್ಲಿಂದಾಚೆಗೆ ರಾಮುಪ್ಪನವರಿಗೂ ಮದುವೆಯ ಆವಶ್ಯಕತೆ ತಲೆದೋರಿತ್ತು. ಅನುವು ಆಪತ್ತಿಗಾದರೂ ಒಬ್ಬಳು ಜತೆಯಲ್ಲಿ ಇರುವುದು ಒಳ್ಳೆಯದೆಂದು ಮದುವೆಯಾಗಲು ನಿರ್ಧರಿಸಿದರು.

"ನೀವು ಹೇಳಿದ ಹಾಗೆ ಇನ್ನೊಂದು ಸಾರಿ ಊರಿಗೆ ಹೋಗಿ ಬರುವಷ್ಟು ಹೊತ್ತಿಗೆ ಮದುವೆಯಾದೀತು. ನೀವು ಸುಬ್ಬರಾಯ ಷಷ್ಠಿಗೆ ಬೇರೊಬ್ಬ ಬ್ರಹ್ಮಚಾರಿ

ಯನ್ನು ಒವಗಿಸಿಟ್ಟುಕೊಂಡಿರಬೇಕಾದೀತು ನೋಡೋಣ" ಎಂದು ಹೇಳಿ ಅಲ್ಲಿಂದ ಅವರು ಏಳುವರು.

"ಅದು ತೊಟ್ಟಿಲ ಮಕ್ಕಳಿಗೆ ಮದುವೆ ಮಾಡುತಿದ್ದ ಕಾಲ. ಹಾಗಿದ್ದರೂ ರಾಮಪ್ಪನವರಿಗೆ ಇಷ್ಟು ವಯಸ್ಸಾದರೂ ಮದುವೆಯೇಕಾಗಿರಲಿಲ್ಲವೆಂದು ತಿಳಿಯ ಬೇಕಾದರೆ ಅವರ ಪೂರ್ವಪರಿಚಯ ಅವಶ್ಯಕ–" ಎಂಬ ಮಾತುಗಳೊಂದಿಗೆ ಈ ಅಧ್ಯಾಯ ಮುಗಿದಿದ್ದರೂ, ಈಗ ದೊರೆತಿರುವ ಹಸ್ತಪ್ರತಿಯಲ್ಲಿ ಎಲ್ಲೂ ಈ ಪ್ರಸ್ತಾಪದ ಬಗೆಗೆ ವಿವರಗಳು ದೊರಕುವುದಿಲ್ಲ. (ಬಹುಶಃ ಶಾಸ್ತ್ರಿಗಳು ಈ ಭಾಗವನ್ನು ಬರೆಯಲಿಲ್ಲವೋ ಅಥವಾ ಬರೆದಿದ್ದ ಭಾಗ ಕಳೆದುಹೋಗಿರುವುದೋ ತಿಳಿಯದು.)

ಇನ್ನೊಂದು ಪ್ರಕರಣದಲ್ಲಿ ರಾಮಪ್ಪನವರ ಮದುವೆಯ ಪ್ರಸ್ತಾಪ ಪರೋಕ್ಷ ವಾಗಿ ಬರುತ್ತದೆ.

ಒಂದು ದಿನ ದಾಸೇಗೌಡನು ಅಮ್ಮೂರಿನ ರಾಮಚಂದ್ರ ಭಟ್ಟರ (ಇವರು ರಾಮಪ್ಪನ ತಂದೆ ಇರಬೇಕು; ಯಾವುದೂ ಸ್ಪಷ್ಟವಿಲ್ಲ) ಮನೆಗೆ ಬಂದು ಗೌರಮ್ಮ ನವರನ್ನು–ರಾಮಾಶಾಸ್ತ್ರಿಗಳ ತಾಯಿ–ಜೋಯಿಸರು ಎಲ್ಲಿ ಹೋಗಿದ್ದಾರೆಂದು ವಿಚಾರಿಸುವರು. ಈ ಸಂದರ್ಭದಲ್ಲಿ ತಾಯಿ ಗೌರಮ್ಮ ಅವರು ಹೊರಗೆ ಪರದೇಶಿಯ ಹಾಗೆ ಅಲೆಯುತ್ತಿರುವುದಾಗಿ ತಿಳಿಸುವರು. ರಾಮಪ್ಪನ ಮದುವೆಯ ವಿಷಯವಾಗಿ ಮಾತನಾಡುತ್ತಾ–

"ಮಾಡಿಕೊಳ್ಳುವ ಹುಡುಗರನ್ನ ದೇಶಭ್ರಷ್ಟರನ್ನಾಗಿ ಮಾಡಿ ಕಳುಹಿಸಿ ಯಾರಿಗೆ ಮದುವೆ ಮಾಡಲಪ್ಪ? ಆ ಕಂಬಕ್ಕೆ ಮಾಡಲೆ? ಈ ಮನೇಲಿ ನನ್ನ ಮಾತು ಏನು ನಡೆಯುತ್ತೆ? ನಾನು ಯಾರು?"–ಎಂದು ಉದ್ಗಾರ ತೆಗೆಯುವರು.

(ಆದರೆ ಈ ಮದುವೆಗೆ ಇದ್ದ ಅಡ್ಡಿಯಾಗಲಿ, ಅಡಚಣೆಯಾಗಲಿ, ಏನು ಎಂಬುದು ದೊರೆತಿರುವ ಹಸ್ತಪ್ರತಿಯಲ್ಲಿ ಎಲ್ಲೂ ಹೊರಪಡುವುದಿಲ್ಲ.)

ಮುಂದಿನ ಪ್ರಕರಣದಲ್ಲಿ ರಾಮಪ್ಪನವರಿಗೆ ಮದುವೆಯಾಗಿದೆ. ಕಡೂರಿನ ಬಳಿಯ ಒಂದು ಹಳ್ಳಿಯ ಶ್ಯಾನುಭೋಗರಾದ ಸುಬ್ಬಣ್ಣನವರ ಮಗಳು ಪಾರ್ವತಮ್ಮ ಅವರಿಗೆ ಪತ್ನಿಯಾಗಿ ದೊರಕಿದ್ದಾಳೆ. ಅವಳಿನ್ನೂ ಪತಿಗೃಹಕ್ಕೆ ಬಂದಿಲ್ಲ. ಈ ಸಂದರ್ಭದಲ್ಲಿ ಬಾಳಾಜಿರಾಯರ ಪುತ್ರಿ ಸಾವಿತ್ರಿಯು ಮನೆಗೆ ಬಂದ ರಾಮಪ್ಪನನ್ನು ಚುಡಾಯಿಸುವಳು.

"ನಿಮ್ಮ ಹೆಂಡತಿಯ ಹೆಸರು ಏನು ರಾಮಪ್ಪನವರೇ?"

"ಹೇಳಲೋ"

"ಹೂಂ"

"ಅವಳದ್ದು ನೀವೆಲ್ಲಾ ಪೂಜೆ ಮಾಡ್ತೀರಲ್ಲಾ, ಆ ದೇವರ ಹೆಸರು."

"ನಾವು ಲಕ್ಷ್ಮೀಪೂಜೆ ಮಾಡ್ತೀವಿ."

"ಇನ್ಯಾರ ಪೂಜೆ ಮಾಡ್ತೀರಿ?"

"ಇನ್ನು ಯಾರ್‍ಯಾರ ಪೂಜೆನೋ ಮಾಡ್ತೀವಿ?"

"ಕೋಟೆಯಲ್ಲಿರುವ ದೇವರ ಹೆಸರು ಹೇಳಿ!" ಎಂದರು ಯಾರೋ ಹಿಂದಿನಿಂದ.

"ಮಾರಮ್ಮನ ಪೂಜೆ ಮಾಡುತ್ತೀವಿ!"

ಎಲ್ಲರೂ ಖೊಳ್ಳೆಂದು ನಗುವರು.

ಹೀಗೆ ಅವರನ್ನು ಹಾಸ್ಯ ಮಾಡಿ, ಗೇಲಿ ಎಬ್ಬಿಸಿ, ಅವರ ಬಾಯಿಂದ ಪತ್ನಿಯ ಹೆಸರನ್ನು ಹೊರಡಿಸುವರು. (ಈ ಅಧ್ಯಾಯ ಏಕೋ ಅರ್ಧಕ್ಕೆ ನಿಂತು ಹೋಗಿದೆ.)

ಮುಂದಿನ ಪ್ರಕರಣಗಳಲ್ಲಿ ರಾಮುಪ್ಪನವರು ಮೈಸೂರಿನಲ್ಲಿ ಮನೆ ಮಾಡಿ ಪತ್ನಿಯನ್ನು ಕರೆತರುವುದು; ಮೊದಲು ಗಿರಿಜಾಬಾಯಿ ಅವರ ಮನೆಯ ರೂಮಿನಲ್ಲಿ ಸಂಸಾರ ಹೂಡುವುದು. ಅನಂತರ ಅಣ್ಣಯ್ಯಪ್ಪ ಅವರಿಂದ ನೂರು ರೂಪಾಯಿಗೆ ಭೋಗ್ಯಕ್ಕೆ ಪಡೆದ ಮನೆಗೆ ಹೋಗುವುದು ಈ ವಿವರಗಳು ಬಂದಿವೆ.

ರಾಮುಪ್ಪನವರು ಮೈಸೂರಿನಲ್ಲಿ ಮನೆ ಮಾಡಿದ ಕಥೆ ಸ್ವಾರಸ್ಯವಾಗಿದೆ:

"ಚಾಮರಾಜ ಒಡೆಯರು ಸ್ವರ್ಗಸ್ಥರಾದ ಸಂದರ್ಭದಲ್ಲಿ ಅರಮನೆಯವರು ಬೇಕಾದಷ್ಟು ದಾನಧರ್ಮಗಳನ್ನು ನಡೆಸಿದರು. ಆಗ ಕೊಡದಿದ್ದ ದಾನವೇ ಇಲ್ಲ. ಗೃಹಾರಾಮಗಳನ್ನು ಮೊದಲುಗೊಂಡು ಗಜಾಶ್ವಗಳವರೆಗೆ ಕಂಡು ಕೇಳದ ಮಹಾ ದಾನಗಳೆಲ್ಲಾ ಆದುವು. ಶ್ರೋತ್ರಿಯರೂ, ನಿತ್ಯಸ್ನಾನ ಜಪ ತಪ ಪೂಜೆ ಪುರಸ್ಕಾರ ಗಳನ್ನು ಮಾಡುವವರೂ ಆದ ಬ್ರಾಹ್ಮಣರಿಗೇ ಅವುಗಳನ್ನು ಕೊಡಬೇಕೆಂದು ಕಾರ್ಯಕರ್ತರ ಉದ್ದೇಶವಾಗಿತ್ತು. ಆದರೆ ಅವರನ್ನು ಹುಡುಕುವುದು ಹೇಗೆ! 'ಛಿ!' ಅಗ್ನಿಷ್ಟೋಮ ಯಾಗ ಮಾಡಿ, ದುರ್ದಾನಕ್ಕೆ ಕೈ ಒಡ್ಡಲೇ' ಎಂದು ಹಿಂದೆ ಪೂರ್ಣಯ್ಯನವರಿಗೇ ಉತ್ತರ ಬಂದಿತ್ತು ಕೃಷ್ಣರಾಜವೊಡೆಯರು ಸ್ವರ್ಗಸ್ಥರಾದಾಗ. ಆದ್ದರಿಂದ ತ್ರಿಮತಸ್ಥರಲ್ಲಿ ಯಾರೇ ಆಗಲಿ ಅರ್ಹರಾದವರನ್ನು ಆರಿಸಿ, ಒಪ್ಪಿಸಿ, ಅವರಿಗೆ ದೊಡ್ಡ ದಾನಗಳನ್ನೆಲ್ಲಾ ವಿನಿಯೋಗಿಸುವ ಕೆಲಸವನ್ನು ಅರಮನೆಯ ಧರ್ಮಾಧಿಕಾರಿಗಳಿಗೇ ಒಪ್ಪಿಸಿದರು.

ರಾಮುಪ್ಪನವರ ಗುರುಗಳಾದ ರಾಮಶೇಷಶಾಸ್ತ್ರಿಗಳು ಒಂದು ದಿನ ಅವರನ್ನು ಮನೆಗೆ ಕರೆಸಿ, ಅವರು ಶಕಟದಾನವನ್ನು ತೆಗೆದುಕೊಳ್ಳಬೇಕೆಂದು ತಿಳಿಸಿದರು. ಮೊದಲು ಇದಕ್ಕೆ ಸಮ್ಮತಿಸದಿದ್ದರೂ ಗುರುಗಳ ಮಾತನ್ನು ಮೀರಲಾರದೆ ದಾನಕ್ಕೆ ಒಪ್ಪಿದರು. ರಾಮುಪ್ಪನವರ ಧರ್ಮಸಂಕಟವನ್ನು ಅರಿತಿದ್ದ ಗುರುಗಳು ಒಂದು ಕೈಲಿ ದಾನವನ್ನು ಸ್ವೀಕರಿಸಿ ಮತ್ತೊಂದು ಕೈಯಲ್ಲಿ ಎತ್ತುಗಾಡಿಗಳನ್ನು ಧರ್ಮಾಧಿ ಕಾರಿಗಳ ಬಳಿಗೆ ಕಳುಹಿಸಿಕೊಡಬೇಕೆಂದೂ, ಅವರು ಕೊಡುವ ನೂರೈವತ್ತು ರೂಪಾಯಿಗಳನ್ನು ತೆಗೆದುಕೊಂಡುಬಂದು ಮನೆ ಮಾಡಿಕೊಳ್ಳಬೇಕೆಂದೂ, ಸಲಹೆ ಮಾಡಿ ಕಳುಹಿಸಿಕೊಡುವರು.

ಅದರಂತೆ ಶಕಟದಾನದಿಂದ ಬಂದ ಹಣದಲ್ಲಿ ಕೊಂಚ ಭಾಗವನ್ನು ದೇವ ಬ್ರಾಹ್ಮಣರ ಕಾರ್ಯಕ್ಕೆ ವಿನಿಯೋಗಿಸಿ, ಉಳಿದ ನೂರು ರೂಪಾಯಿಗಳನ್ನು ಕೊಟ್ಟು ಅಣ್ಣಯ್ಯಪ್ಪನು ತನ್ನ ನಾದಿನಿಯ ಸಲುವಾಗಿ ಹೊಸದಾಗಿ ಕಟ್ಟಿಸಿದ್ದ ಮನೆಯನ್ನು ಹತ್ತು ವರ್ಷ ಭೋಗ್ಯಕ್ಕೆ ಪಡೆಯುವರು.

ಪತ್ನಿಯ ಜತೆಯಲ್ಲಿ ಹೊಸಮನೆಗೆ ಬಂದಮೇಲೆ ರಾಮಪ್ಪನವರ ರಸಿಕತೆಗೆ ಕೋಡುಬರುವುದು. ಅವರು ವೈದಿಕವೃತ್ತಿಯ ಜತೆಯಲ್ಲಿಯೇ ವೈದ್ಯವೃತ್ತಿಯನ್ನೂ ಕೈಗೊಂಡು ಹತ್ತು ಜನರಿಗೆ ಬೇಕಾದ ವ್ಯಕ್ತಿಯಾಗುವರು. ಬಡಬಗ್ಗರ ಕಾಹಿಲೆಗೆಲ್ಲಾ ಇವರದೇ ಸಿದ್ಧೌಷಧ. ಕೈಲಿ ನಾಲ್ಕು ಕಾಸು ಓಡಾಡಿ, ಹೆಂಡತಿಯ ಮೈಮೇಲೆ ಒಂದಿಷ್ಟು ಬಂಗಾರದ ಒಡವೆಗಳೂ ಬರುವುದು. ಈಗ ರಾಮಪ್ಪನವರಿಗೆ ಸಂಸಾರದಲ್ಲಿ ಶಾಂತಿ ನೆಮ್ಮದಿಗಳು ದೊರಕಿವೆ. ಪಾರ್ವತಮ್ಮನೂ ಗಂಡನಿಗೆ ಅನುಕೂಲಳಾದ ಪತ್ನಿ. ಅವರ ದಾಂಪತ್ಯಜೀವನದ ಲತೆಯಲ್ಲಿ ಹೂ ಹಣ್ಣು ಬಿಟ್ಟಂತೆ ಪುಟ್ಟರಾಮುವೆಂಬ ಮಗನೂ, ನಂಜಮ್ಮ ಮತ್ತು ಲಕ್ಷ್ಮೀ ಎಂಬ ಹೆಣ್ಣುಮಕ್ಕಳೂ ಅವರಿಗೆ ಆಗಿದ್ದಾರೆ.

ಹೀಗಿರುವ ಸಂಸಾರದಲ್ಲಿ ಕಾಮರ್ುಗಿಲು ಮುತ್ತಿದಂತೆ ನಂಜಮ್ಮನು ಹಠಾತ್ತನೆ ತೀರಿಕೊಳ್ಳುವಳು.

ಅವಳನ್ನು ರಾಮಪ್ಪ ತುಂಬಾ ಪ್ರೀತಿಸುತ್ತಿದ್ದರು. ಅವರ ಸಂಸಾರದಲ್ಲಿ ಬಿದ್ದ ಪ್ರಥಮ ಪೆಟ್ಟು ಇದು; ಉಂಟಾದ ಪ್ರಥಮ ವಿಯೋಗ. ಇದರಿಂದ ಜರ್ಜರಿತರಾದರೂ ಮಗುವಿನ ಅಂತ್ಯಕ್ರಿಯೆಗಳನ್ನು ಮಾಡಿ ಬರುವರು. ಇಲ್ಲಿ ಚಿತ್ರಿತವಾಗಿರುವ ಸನ್ನಿವೇಶದ ಗಾಂಭೀರ್ಯ, ಮೌನ, ಶೋಕದ ಚರಮ ಸೀಮೆಯಲ್ಲಿಯೂ ವಿವೇಕ, ಹೃದಯ ವಿದ್ರಾವಕತೆ ಶಾಸ್ತ್ರಿಗಳಿಗೆ ಮಾತ್ರ ಸಿದ್ಧಿಸಬಲ್ಲದ್ದು.

ಮುಂದೆ ಒಂದಾದಮೇಲೆ ಒಂದರಂತೆ ವಿಪತ್ತುಗಳ, ತೊಂದರೆ–ತಾಪತ್ರಯಗಳ ಸರಮಾಲೆ ಅವರದಾಗುವುದು.

ಪುಟ್ಟರಾಮು ಜ್ವರದಿಂದ ಹಾಸಿಗೆ ಹಿಡಿದವನು ಚೇತರಿಸಿಕೊಂಡುದೇ ಒಂದು ಪವಾಡ !

ಇದೇ ಸಮಯದಲ್ಲಿ ದೇಶದಲ್ಲೆಲ್ಲಾ ಪ್ಲೇಗುಮಾರಿ ಕಾಣಿಸಿಕೊಂಡು ಜನರನ್ನು ಕಬಳಿಸಲಾರಂಭಿಸಿದ್ದಳು. ಒಂದೊಂದು ದಿನದಲ್ಲಿ ಇಡೀ ಊರುಗಳೇ, ಸಂಸಾರಗಳೇ ಅವಳಿಗೆ ಬಲಿಯಾಗುತ್ತಿತ್ತು. ಆಗಿನ್ನೂ ಅದು ಹೊಸಕಾಹಿಲೆ, ಔಷಧ ತಿಳಿಯದು. ಹೀಗಾಗಿ, ಮೈಸೂರಿನಲ್ಲಿಯೂ ಅವರ ಆಸುಪಾಸಿನಲ್ಲಿಯೂ ನೊಂದವರು, ನರಳಿದವರು ಬಹುಮಂದಿ. ಇಂಥ ಸಮಯದಲ್ಲಿ ರಾಮಪ್ಪ ಸುಮ್ಮನೆ ಕೂಡುವುದುಂಟೆ? ಹೊತ್ತುಗೊತ್ತಿಲ್ಲದೆ, ಊರಿಂದ ಊರಿಗೆ ಅಲೆದು ರೋಗಿಗಳಿಗೆ ವೈದ್ಯಕೀಯ ನೆರವು ನೀಡಿ ಬರುವರು; ಕೈಲಾದ ಚಿಕಿತ್ಸೆ, ಶುಶ್ರೂಷೆ ಮಾಡುವರು.

ಇದರ ಫಲವಾಗಿ ರಾಮಪ್ಪನವರೂ ಹಾಸಿಗೆ ಹಿಡಿದು ಮಲಗುವರು. ಅದು

ಕ್ರಮೇಣ ಪ್ಲೇಗು ಎಂದು ತಿಳಿಯುತ್ತಲೇ ತಾವೇ ಔಷಧ-ಉಪಚಾರ ಮಾಡಿಕೊಂಡು ಹೆಂಡತಿ ಮಕ್ಕಳಿಗೆ ಧೈರ್ಯ ಹೇಳುವರು. ಸುಮಾರು ಮೂರು ವಾರಗಳ ಕಾಲ ಅವರು ಹಾಸಿಗೆಯಲ್ಲಿ ಪ್ರಜ್ಞಾಶೂನ್ಯರಾಗಿ ಮಲಗುವರು. ಅವರನ್ನು ಪಾರ್ವತಮ್ಮ ನೆರಳಿನಂತೆ ಉಪಚರಿಸಿದರು. ಮಕ್ಕಳು ಕಂಗೆಡಬಹುದೆಂದು ತಾವು ಧೈರ್ಯ ತಂದುಕೊಂಡು ಗಂಡನ ಆರೈಕೆ ಮಾಡಿದ ಈ ಪುಣ್ಯಜೀವಿಯ ಸಹನೆ ಮುಗಿಲುಮುಟ್ಟುತ್ತದೆ. ಕಡೆಗೆ ಅವರು ಮಾಡಿದ್ದ ದಾನಧರ್ಮ, ಪುಣ್ಯ ಕಾರ್ಯಗಳ ಫಲವಾಗಿ ರಾಮುಪ್ಪನವರು ಸಾವಿನ ದವಡೆಯಿಂದ ಪಾರಾಗುವರು.

ಅವರು ಮೆಲ್ಲನೆ ಚೇತರಿಸಿಕೊಂಡು, ಕೆಲವು ದಿನಗಳನಂತರ ಎದ್ದು ಓಡಾಡುವಂತೆ ಆಗುವರು.

“ ಶಾಸ್ತ್ರಿಗಳೇ, ಈ ಸಲ ದೊಡ್ಡ ಗಂಡಾಂತರ ಕಳೆದಿರಿ.”— ಎಂದು ನೋಡಿದವರೆಲ್ಲರೂ ಅವರನ್ನು ಅಭಿನಂದಿಸುವವರೇ.

“ ನಿಮ್ಮ ತಾಳಿಯ ಪುಣ್ಯ ಚೆನ್ನಾಗಿತ್ತು, ಪಾರ್ವತಮ್ಮನವರೇ ”—ಎಂದು ಹೆಂಗಸರೆಲ್ಲರೂ ಪಾರ್ವತಮ್ಮನವರನ್ನು ಹೊಗಳುವವರೇ. ಈ ಮಾತಿಗೆ ಪಾರ್ವತಮ್ಮನವರು—“ ಹೌದಮ್ಮ, ಅದಕ್ಕೇನು ಸಂದೇಹ. ಆ ಮಹಾತಾಯಿ ಗೌರಮ್ಮ ನನ್ನ ಅರಶಿನ-ಕುಂಕುಮ ಉಳಿಸಿಕೊಟ್ಟಳು ”–ಎಂದು ಅಷ್ಟೇ ಭಕ್ತಿಯಿಂದ ಉತ್ತರ ಕೊಡುವರು.

೭

ಇಲ್ಲಿಗೆ ರಾಮುಪ್ಪನನ್ನು ಕುರಿತ ಚಿತ್ರಗಳ ಮಾಲೆ ಹಠಾತ್ತನೆ ನಿಲ್ಲುವುದು.

ಈ ಚಿತ್ರದ ಚೌಕಟ್ಟಿನಲ್ಲಿ ಇನ್ನೂ ಅನೇಕ ಸ್ವಾರಸ್ಯಕರ ಸನ್ನಿವೇಶಗಳನ್ನು ಶಾಸ್ತ್ರಿಗಳು ಹೆಣೆದಿದ್ದಾರೆ. ರಾಮುಪ್ಪನವರು ಉಪಾಕರ್ಮ ಮಾಡಿಸುತ್ತಿದ್ದ ರೀತಿ, ತಮ್ಮ ಪತ್ನಿಗೆ ಗೌರೀವ್ರತದ ದೀಕ್ಷೆ ಕೊಟ್ಟ ಪ್ರಸಂಗ, ಹಸಿದು ಮನೆಗೆ ಬಂದ ರಾಮುಪ್ಪನವರು ಮನೆಯಲ್ಲಿ ಅಡಿಗೆ ಪರಿಕರಗಳಿಲ್ಲದೆ ಮಾತಿನ ಮೇಲೋಗರ ಸವಿಯುವುದು; ಪಾರ್ವತಮ್ಮನವರ ಅಡಿಗೆಯ ವೈಖರಿ; ಅವರು ತಯಾರಿಸುತ್ತಿದ್ದ ದೋಸೆ, ಹೊಯ್ಗಡುಬುಗಳ ಸವಿ, ಭಾವಮೈದುನನ ಉಪನಯನಕ್ಕೆಂದು ಪತ್ನೀ ಸಮೇತ ಕಡೂರಿನ ರೈಲಿನಲ್ಲಿಯೂ, ಅನಂತರ ಎತ್ತಿನ ಗಾಡಿಯಲ್ಲೂ ಪ್ರಯಾಣ ಮಾಡುವುದು, ಗಿರಿಜಾಬಾಯಿಯ ಮನೆಯಲ್ಲಿ ನಡೆಯುತ್ತಿದ್ದ ವನಿತಾಗೋಷ್ಠಿ, ಅಂಚೆ ಪುಟ್ಟಮ್ಮ, ಮಡಿ ಮಂಜಕ್ಕ–ಮುಂತಾದ ಅಪೂರ್ವ ವ್ಯಕ್ತಿಚಿತ್ರಗಳನ್ನೂ, ಈಗ್ಗೆ ಸುಮಾರು ೬೦–೭೦ ವರ್ಷಗಳ ಹಿಂದಿನ ಮೈಸೂರು ನಗರದ ಜನಜೀವನದ ರಸಮಯ ಸನ್ನಿವೇಶಗಳನ್ನೂ ತಮ್ಮ ಅಸದೃಶ ಲೇಖನಿಯಿಂದ ವಿವರವಿವರವಾಗಿ ಚಿತ್ರಿಸಿದ್ದಾರೆ.

ಕೃಷ್ಣಶಾಸ್ತ್ರಿಗಳು ಸಂಪ್ರದಾಯದಲ್ಲಿ ಶ್ರದ್ಧೆ, ನಂಬಿಕೆಯನ್ನು ಇಟ್ಟವರು;

ತಪ್ಪದೆ ಪರಿಪಾಲಿಸಿದವರು. ಆದರೆ ಅವರ ಸಂಪ್ರದಾಯ ನಿಷ್ಠೆ ಅಂಧಶ್ರದ್ಧೆಯ ದಾಗಿರಲಿಲ್ಲ; ಆಧುನಿಕ ದೃಷ್ಟಿ–ಸೃಷ್ಟಿಗಳ ಸಮನ್ವಯವಾಗಿತ್ತು ಅದು ಹೀಗಾಗಿ ಅವರ ರಚನೆಗಳಲ್ಲಿ ಅಲ್ಲಲ್ಲಿ ಇದರ ಪ್ರಭಾವ ಕಂಡುಬರುತ್ತದೆ. ಬಾಳಿಗೊಂದು ನಂಬಿಕೆ, ಬದುಕಿಗೊಂದು ಗುರಿ, ಅದರ ಸಫಲತೆಯತ್ತ ಸಾಧನೆ ಇವು ಅವರ ಆದರ್ಶದ ಮೊದಲ ಹಂತ. ನಾಲ್ಕು ಜನರಿಗೆ ಉಪಕಾರಿಯಾಗಿ ಚೆನ್ನಾಗಿ ಬದುಕಬೇಕು, ಬಾಳಬೇಕು ಎನ್ನುವುದು ಅವರ ಜೀವನ ದರ್ಶನದ ಒಳತಿರುಳು.

ಈ ಅಪ್ರಕಟಿತ ಕೃತಿಯ ನಾಯಕ ರಾಮಪ್ಪನಲ್ಲಿ ಅವನ ಕೌಟುಂಬಿಕ ಶ್ರದ್ಧೆ, ದಾಂಪತ್ಯ ಜೀವನದ ರಸಿಕತೆ, ಮಕ್ಕಳಲ್ಲಿನ ವಾತ್ಸಲ್ಯ, ತಮ್ಮನ್ನು ಹುಡುಕಿ ಕೊಂಡು ಬರುವ ರೋಗಿಗಳ ಬಗೆಗೆ ಅನುಕಂಪ, ಗುರುಭಕ್ತಿ, ಶಾಸ್ತ್ರ ಧರ್ಮ ನಿಷ್ಠೆ, ಋಜುಜೀವನ ಪ್ರಿಯತೆ, ವ್ಯವಹಾರಕುಶಲತೆ ಇತ್ಯಾದಿ ಗುಣ ವಿಶೇಷಗಳಲ್ಲಿ– ಅವರ ಜೀವನ ದರ್ಶನದ ಎಲ್ಲ ಪಡಿನೆಳಲನ್ನೂ ಕಾಣಬಹುದಾಗಿದೆ. ಅದರಲ್ಲಿಯೂ ರಾಮಪ್ಪನ ದಾಂಪತ್ಯ ಜೀವನದ ರಸಿಕತೆಯಂತೂ ರಾಮಾಶ್ವಮೇಧದ ಮುದ್ದಣ– ಮನೋರಮೆಯರ ನೆನಪನ್ನು ಮರುಕೊಳಿಸುತ್ತದೆ; ಹಾಗೂ ಅದಕ್ಕಿಂತ ಯಾವ ಬಗೆಯಲ್ಲಿಯೂ ಇದು ಕೀಳೆನಿಸುವುದಿಲ್ಲ. ಶುಚಿಜೀವನದತ್ತ, ಋಜುಜೀವನ ದತ್ತ, ಋತದ ಪರಿಪಾಲನೆಯತ್ತ ಅವರು ಸರ್ವದಾ ಜಾಗ್ರತರಾಗಿದ್ದಾರೆ. ಒಮ್ಮೊಮ್ಮೆ ಈ ಪ್ರಸಂಗಗಳು ಎಷ್ಟು ಸ್ವಾಭಾವಿಕವಾಗಿ ತೋರಿಬರುತ್ತವೆಯೆಂದರೆ ಶ್ರೀ ಶಾಸ್ತ್ರಿಗಳ ನೈಜಜೀವನದ ಅನೇಕ ಮಧುರಸನ್ನಿವೇಶಗಳನ್ನೇ ಇವು ಪ್ರತಿ ಬಿಂಬಿಸಿವೆಯೇನೋ ಎನ್ನುವ ಸಂದೇಹವೂ ಬಾರದಿರದು. ಈ ಕೃತಿಯನ್ನು ಪ್ರಕಟಿಸಲಾಗಲಿ, ಸಂಪೂರ್ಣಗೊಳಿಸಲಾಗಲೀ ಅವರು ಹೆಚ್ಚು ಉತ್ಸಾಹ ತೋರ ದಿರುವುದಕ್ಕೆ ಇದೂ ಒಂದು ಕಾರಣವಾಗಿರಬಹುದೆನ್ನಿಸುತ್ತದೆ. ಶಾಸ್ತ್ರಿಗಳು ಈ ಕೃತಿಯನ್ನು ಮುಗಿಸಿದ್ದರೆ, ಪುಟ್ಟಣ್ಣನವರ ಕುಣಿಗಲ್ ರಾಮಾಶಾಸ್ತ್ರಿಗಳ ಜೀವನ ಚರಿತ್ರೆಯನ್ನು ಹಲವು ಸಂಗತಿಗಳಲ್ಲಿ ಈ ಕೃತಿ ಮೀರಿಸುತ್ತಿತ್ತೆಂಬುದರಲ್ಲಿ ಸಂಶಯ ವಿಲ್ಲ. ಇಂತಹ ಉತ್ತಮ ಕೃತಿಯೊಂದನ್ನು ಶಾಸ್ತ್ರಿಗಳು ಏಕೆ ಮುಗಿಸಲಿಲ್ಲ, ಈ ಬಗ್ಗೆ ಬೇರೆಲ್ಲೂ ಪ್ರಸ್ತಾಪಿಸಿಲ್ಲವೇಕೆಂಬುದು ಅಚ್ಚರಿಯ ಸಂಗತಿಯೇ ಸರಿ!

ಈಗ ದೊರೆತಿರುವಷ್ಟು ಹಸ್ತಪ್ರತಿಯನ್ನೇ ಸಮರ್ಥರಾದವರು ಪರಿಷ್ಕರಿಸಿ, ಒಟ್ಟುಗೂಡಿಸಿ ಪ್ರಕಟಿಸಿದರೆ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಬಿಟ್ಟು ಹೋಗಿ ರುವ ಅಮೂಲ್ಯ ಸಾರಸ್ವತಭಂಡಾರಕ್ಕೆ ಇನ್ನೂ ಒಂದು ಒಳ್ಳೆಯ ಕಾಣಿಕೆ ಸೇರುವು ದೆಂಬುದರಲ್ಲಿ ಸಂದೇಹವಿಲ್ಲ. ಆ ದಿನ ಬೇಗ ಬರುವುದೆಂದು ಆಶಿಸಬಹುದಾಗಿದೆ.

ಎಸ್. ವಿ. ರಂಗಣ್ಣ

# ಗುರುದಕ್ಷಿಣೆ

ಐವತ್ತು ವರ್ಷಗಳ ಹಿಂದಣ ಕೆಲವು ಉಲ್ಲಾಸದ ವಿದ್ಯಮಾನಗಳನ್ನು ನೆನಸಿಕೊಂಡರೆ ನನಗೆ ಇಂದೂ ತುಂಬಿ ತುಳುಕುವ ಸಂತೋಷ. ಅವನ್ನು ರಶ್ಮಿಗಳೆಂದು ಬಗೆದರೆ ಕನ್ನಡನುಡಿ ಕನ್ನಡ ಕಾವ್ಯಗಳ ನೂತನ ಪರಿಚಯವೇ ಅವುಗಳನ್ನು ಪಸರಿಸುತ್ತಿದ್ದ ದೀಪದ ಕುಡಿ. ಸರಿ ಸುಮಾರಾಗಿ ಓದು ಕಲಿಯಲು ಆರಂಭಿಸಿದ ದಿವಸದಿಂದ ಇಂಗ್ಲಿಷ್ ಇಂಗ್ಲಿಷ್ ಎಂದು ತಲ್ಲೀನನಾಗಿದ್ದ ನನಗೆ ಕನ್ನಡ ಕಾಂಚೀಪಟ್ಟಣಕ್ಕೆ ಪ್ರವೇಶ ದೊರೆತದ್ದು ನನ್ನ ಬಾಳಿನ ಒಂದು ಸ್ಪಷ್ಟ ಸೌಭಾಗ್ಯ. ಅಲ್ಲಿನ ಸಣ್ಣ ಪುಟ್ಟ ಭಾರಿ ಭವ್ಯ ದೇವಾಲಯಗಳ ಸಂದರ್ಶನದಿಂದ ನಾನು ಮುಗ್ಧನಾದದ್ದು ಒಂದೇ ಅಲ್ಲ, ನನಗೊಂದು ಹೊಸ ಕಣ್ಣು ಬಂತು, ಮನಸ್ಸು ವಿಶಾಲವಾಯ್ತು, ಹೃದಯಕ್ಕೆ ಹೆಚ್ಚಿನ ಲವಲವಿಕೆ ಸೇರಿತು, ಒಟ್ಟಿನಲ್ಲಿ ವ್ಯಕ್ತಿ ವರ್ಚಸ್ಸು ಬೆಳೆಯಿತು. ನಮ್ಮ ತಾಯ್ನುಡಿ ಅಷ್ಟೊಂದು ಬೆಡಗು ಆಕರ್ಷಣೆ, ಅಷ್ಟೊಂದು ಸತ್ವಸ್ವಾರಸ್ಯ, ಅಷ್ಟೊಂದು ವೈವಿಧ್ಯ ಸಮೃದ್ಧಿಗಳಿಂದ ಕೂಡಿರುವುದನ್ನು ಕಂಡು ನನ್ನಲ್ಲಿ ಉಕ್ಕಿ ಬರುತ್ತಿದ್ದ ಅಚ್ಚರಿ ಹರ್ಷ ಆಳತೆಗೆ ಮೀರಿದ್ದು. ನನ್ನಂತೆಯೇ ನನ್ನ ಕೆಲವು ಸಹಪಾಠಿ ಸ್ನೇಹಿತರಿಗೂ ಇದೇ ತೆರದ ಆನಂದಾನುಭವ ಲಭ್ಯವಾಯ್ತು. ಕನ್ನಡದ ಪುನರುಜ್ಜೀವನ ಕಾಲ ಅದು; ತರುಣರಾದ ನಮ್ಮಲ್ಲೂ ಹುರುಪಿನ ಶ್ರದ್ಧೆ ಆಳಿಕೆ ನಡೆಸುತ್ತಿತ್ತೆಂದು ನುಡಿದರೆ ಜಂಬ ಎನ್ನಿಸಲಾರದು. ಅದೇನೇ ಇರಲಿ, ಆ ಚಟುವಟಿಕೆ ಎಲ್ಲಕ್ಕೂ ನಮ್ಮ ಕನ್ನಡ 'ಟ್ಯೂಟರ್' ಎ. ಆರ್. ಕೃಷ್ಣಶಾಸ್ತ್ರಿಗಳೇ ಕೀಲು.

೧೯೧೫ರಲ್ಲಿ ನಾನು ಬೆಂಗಳೂರು ಸೆಂಟ್ರಲ್ ಕಾಲೇಜಿನ ಜೂನಿಯರ್ ಇಂಟರ್‌ಮೀಡಿಯಟ್ ತರಗತಿಗೆ ಸೇರಿಕೊಂಡಾಗ ಇಂಗ್ಲಿಷ್ ವಿಭಾಗದ ಹೆಗ್ಗಡೆಯೂ ಕಾಲೇಜಿನ ಮುಖ್ಯಾಧಿಕಾರಿಯೂ ಆಗಿದ್ದವರು ಮಹಾಮಹಿಮರಾದ ಪ್ರಾಧ್ಯಾಪಕ ಜೆ. ಜಿ. ಟೇಟ್ ಅವರು. ಅವರಿಗೆ ಸಂಸ್ಕೃತ ಕನ್ನಡ ಭಾಷೆಗಳ ಮೇಲೂ ತುಂಬ ಅಭಿಮಾನ. ಬರಿ ಪಂಡಿತರಿಂದ ಬೋಧನೆ ಆದರೆ ಸಾಲದೆಂದು ಅವರು ಮನಗಂಡು, ಎಂ.ಎ. ಪದವೀಧರರಾದವರನ್ನು ಹುಡುಕಿ ಆರಿಸಿಕೊಂಡು ತಮ್ಮ ಅಚ್ಚುಮೆಚ್ಚಿನ

ವಿದ್ಯಾಶಾಲೆಗೆ ಬರವಮಾಡಿಕೊಳ್ಳುತ್ತಿದ್ದರು. ಎಲ್ಲಿಯೋ ಕಾರಕೂನರಾಗಿದ್ದ ಕೃಷ್ಣ ಶಾಸ್ತ್ರಿಗಳನ್ನು ಉಪ ಅಧ್ಯಾಪಕರಾಗಿ ನೇಮಿಸಿ ಸೆಂಟ್ರಲ್ ಕಾಲೇಜಿಗೆ ಕರೆತಂದದ್ದು ಕನ್ನಡಕ್ಕೆ ಪ್ರೊಫೆಸರ್ ಟೇಟರಿಂದ ಸಂದ ದೊಡ್ಡ ಉಪಕಾರ. ನಮ್ಮ ಇಂಟರ್ ಮೀಡಿಯಟ್ ಪರೀಕ್ಷೆ ಮುಗಿಯುವವರೆಗೂ ಶಾಸ್ತ್ರಿಗಳ ಪ್ರಭಾವ ನಮ್ಮ ಮೇಲೆ ಅಷ್ಟಾಗಿ ಬೀಳಲಿಲ್ಲ. ಕಾರಣ, ಸುಮಾರು ಎಂಬತ್ತು ತೊಂಬತ್ತು ಸಂಖ್ಯೆಯ ವಿದ್ಯಾರ್ಥಿ ಸಂದೋಹ; ಅವರಲ್ಲಿ ಬಹುಮಂದಿಗೆ 'ವರ್ನ್ಯಾಕ್ಯುಲರ್' ಎಂದರೆ ತಾತ್ಸಾರ; ಶಾಸ್ತ್ರಿಗಳೂ ಆಗತಾನೇ ಉಪಾಧ್ಯಾಯರಾದ ವೃತ್ತಿಕಲಿಕೆಯವರು; ಕನ್ನಡ ಪರೀಕ್ಷೆಯೂ ಬಹಳ ಹಗುರವಾಗಿತ್ತು. ೧೯೧೭ರಲ್ಲಿ ನಾನೂ ನನ್ನ ಗೆಳೆಯರೂ ಬಿ.ಎ. ತರಗತಿಗೆ ಸೇರಿದ ತರುವಾಯ ನಮಗೂ ಶಾಸ್ತ್ರಿಗಳಿಗೂ ನಿಕಟ ಸಂಬಂಧ ಉಂಟಾಯ್ತು. ಗೊತ್ತಾದ ಪಠ್ಯಪುಸ್ತಕ ಇರಲಿಲ್ಲ; ಕನ್ನಡ ಸಾಹಿತ್ಯದ ರುಚಿ ಯಾದ ಭಾಗಗಳನ್ನು ಅಧ್ಯಯನಕ್ಕೆ ಅವರು ಆರಿಸಿಕೊಳ್ಳುತ್ತ ಹೋದದ್ದು ಅವರ ಬುದ್ಧಿಸೂಕ್ಷ್ಮತೆಯ ಕುರುಹು. ನಮಗಂತೂ ವಾರ ವಾರವೂ ಕುತೂಹಲ ಕೆರಳಿಸಿ ಸಂತೃಪ್ತಿ ಒದಗಿಸುವ ಕಾವ್ಯಾಸ್ವಾದ. ಮಧ್ಯೆ ಮಧ್ಯೆ "ಏನಪ್ಪ, ನಿಮಗೆ ಯಾವಾಗಲೂ ಇಂಗ್ಲಿಷು; ಕನ್ನಡ ಏತಕ್ಕೆ ಬೇಕು?" ಎನ್ನುತ್ತ ನಮ್ಮನ್ನು ಅವರು ಬಲವಾಗಿಯೇ ಚುಚ್ಚುತ್ತಿದ್ದರು; "ಇನ್ನಷ್ಟು ಬಯ್ಯಲಿ, ಅದೂ ಹಿತವೇ!" ಎಂದುಕೊಳ್ಳುತ್ತಿದ್ದೇವೇ ಹೊರತು ಸಿಟ್ಟಾಗುತ್ತಿರಲಿಲ್ಲ ನಾವು. ಅಂದಿನವರೆಗೂ ತಾಯಿಯನ್ನು ಉಪೇಕ್ಷಿಸಿದ್ದಕ್ಕೆ ಪಶ್ಚಾತ್ತಾಪಪಟ್ಟು, ಮುಂದಾದರೂ ಆಕೆಯ ಲಾಲನೆಯಿಂದ ವರ್ಧಿಸೋಣ, ಎಂಬುದೇ ನಮ್ಮ ಭಾವನೆ.

ತೀಕ್ಷ್ಣ ಮುನ್ನೋಟ, ನಂಬಿಕೆಯುಳ್ಳ ಮುನ್ನೋಟ, ಸಫಲವಾಗಬಲ್ಲ ಮುನ್ನೋಟ ಶಾಸ್ತ್ರಿಗಳ ಹಿರಿಯ ಲಾಂಛನ. ಸಾಹಿತ್ಯ ಸಾಹಿತ್ಯಚರಿತ್ರೆಗಳ ಹಲವು ಆಧಾರಗ್ರಂಥಗಳನ್ನು ನಾವು ಓದುವಂತೆ ಪ್ರೇರೇಪಿಸಿದರು. ನಮ್ಮಿಂದ ಪ್ರಬಂಧ ಬರೆಯಿಸಿ, ತಿದ್ದಿ, ವಾಕ್ಯಗಳನ್ನು ಬಹಿರಂಗವಾಗಿ ಪಠಿಸಿ, ಮೆಚ್ಚಿಕೆಯಿತ್ತು, ಬೆನ್ನುತಟ್ಟಿ ಉತ್ತೇಜನ ನೀಡುತ್ತಿದ್ದರು, ಲೇಖನ ಶಕ್ತಿಯ ಬೇರುಗಳು ನಮ್ಮಲ್ಲಿದೆ ಯೆಂಬುದನ್ನು ಪತ್ತೆಮಾಡಿದವರು ಅವರು. ಅವಕ್ಕೆ ನೀರೆರೆದು ಗೊಬ್ಬರಹಾಕಿ ಅವು ಪಲ್ಲವಿಸಿ ಗಿಡವಾಗಿ ಫಲಬಿಡುವಂತೆ ಯೋಗಕ್ಷೇಮ ವಹಿಸಿದವರೂ ಅವರೇ. ಆದ್ದರಿಂದ, 'ಗುರುಗಳೆನಗಿಬ್ಬರು': ಪ್ರೊ. ಟೇಟ್, ಡಾ. ಕೃಷ್ಣಶಾಸ್ತ್ರೀ!

ಕನ್ನಡವನ್ನು ಕುರಿತ ಅವರ ಪ್ರೀತಿ ಆಸಕ್ತಿ ಆಸೆಗಳಿಗೆ ಅಷ್ಟೇ ಸಾಕಾಗಲಿಲ್ಲ. ೧೯೧೮ರಲ್ಲಿ ಸೆಂಟ್ರಲ್ ಕಾಲೇಜಿನ "ಕರ್ಣಾಟಕ ಸಂಘ"ವನ್ನು ಸ್ಥಾಪಿಸಿದರು. 'ಸಾಹಿತ್ಯ ಪರಿಷತ್ತು' 'ವಿದ್ಯಾವರ್ಧಕ ಸಂಘ' ಇವೆರಡನ್ನು ಬಿಟ್ಟರೆ ಅದೇ ಮೊದಲನೆಯ ಕನ್ನಡ ಸಂಘ ಎನ್ನಬಹುದೊ ಏನೊ. ಕ್ರಮೇಣ ಕಾಲೇಜಿನ ಉಪನ್ಯಾಸ ಚರ್ಚೆ ಜಯಂತಿ ಇತ್ಯಾದಿ ಸಮಾರಂಭಗಳೆಲ್ಲವೂ 'ಕರ್ಣಾಟಕ ಸಂಘ'ದ ಆಶ್ರಯದಲ್ಲೇ ಜರುಗಲಾರಂಭಿಸಿದುವು. ಅಲ್ಲದೆ, ವಿಜ್ಞಾನ ಲಲಿತಕಲೆ

ತಾಂತ್ರಿಕವಿದ್ಯೆ ಮುಂತಾದ ಕ್ಲಿಷ್ಟ ವಿಷಯಗಳ ಮೇಲೂ ಕನ್ನಡದಲ್ಲಿ ಭಾಷಣ ಮಾಡಿಸಿ, ಗಹನ ತೂಕವನ್ನು ಕನ್ನಡ ಹೊರಬಲ್ಲುದು ಎಂಬ ನಿಜಾಂಶವನ್ನು ಆಗಲೇ ಪ್ರಮಾಣಿಸಿ ಗೆದ್ದರು ಗುರುವರ್ಯ ಕೃಷ್ಣಶಾಸ್ತ್ರಿಗಳು. ಇಲ್ಲಿ, ಅವರ ಅಪೂರ್ವ ಸಾಮರ್ಥ್ಯವನ್ನು ಅರಿಯಬೇಕು ನಾವು; ಅರಿತು ತಲೆದೂಗಬೇಕು. 'ಅಂಥ ಕಷ್ಟ ವಿಷಯವನ್ನು ಕನ್ನಡದಲ್ಲಿ ನಿರೂಪಿಸುವ ಶಕ್ತಿ ಈ ವ್ಯಕ್ತಿಗುಂಟು' ಎಂಬುದನ್ನು ಅವರು ಹೇಗೊ ಗ್ರಹಿಸಿಬಿಡುತ್ತಿದ್ದರು; ಆಮೇಲೆ, "ಆಗದು" ಎಂಬ ಹಠವನ್ನು ಹಿಡಿಯಲು ಆ ವ್ಯಕ್ತಿ ತವಕಿಸಿದರೂ ಬಿಡದೆ, "ಆಗುತ್ತದೆ" ಎಂಬ ನಂಬಿಕೆಯನ್ನು ಅವನಲ್ಲಿ ಹುಟ್ಟಿಸಿ, ಸಹಾಯ ಕೊಟ್ಟು, ಹುರಿದುಂಬಿಸಿ, ಕಾರ್ಯ ಸಾಧಿಸಿ ಕೃತಕೃತ್ಯರಾಗುತ್ತಿದ್ದರು. ಇಷ್ಟಾಗಿಯೂ, ಅವರೇನೂ ವಾಗ್ಮಿತೆಗೆ ಹೆಸರಾಂತವರಲ್ಲ! ಹಾಗೂ, ಅವರು ಬಳಸುತ್ತಿದ್ದ ಸಾಧನ ಬಾಯುಪಚಾರವಲ್ಲ, ಒಣ ಹೊಗಳಿಕೆಯಲ್ಲ, ಅಲಂಕರಿಸಿದ ಅನೃತವಲ್ಲ; ವಿಚಾರಿತ ಪ್ರೋತ್ಸಾಹ, ರಚನಾತ್ಮಕ ವಿಮರ್ಶೆ. ಅವರಂಥ ನಿರ್ಮತ್ಸರದ ನಿಸ್ಸ್ವಾರ್ಥದ ಉದಾರ ಸಾಹಿತಿಗಳು ನಿಜವಾಗಿ ವಿರಳ. ಅವರಿಂದ ಸ್ಫೂರ್ತಿ ಪಡೆದು ಅನುಗ್ರಹೀತರಾದ ಬರೆಹಗಾರರು ಯಾರಾದರೂ ಕೃತಜ್ಞತೆಯನ್ನು ಹೇಳ ಹೊರಟರೆ, ಬೇಗ ಬಾಯಿ ಹಾಕಿ "ನನ್ನ ಹೆಸರನ್ನು ಏಕೆ ಹೇಳುತ್ತೀರಪ್ಪ; ನಾನು ಮಾಡಿದ್ದೇನು ನಿಮಗೆ?" ಎನ್ನುತ್ತಿದ್ದರು.

"ಕರ್ಣಾಟಕ ಸಂಘ"ದ ಇನ್ನೊಂದು ಕೂಸು "ಪ್ರಬುದ್ಧ ಕರ್ಣಾಟಕ". ಆ ಸಿಂಹಶಾಬ ಸಿಂಹಕ್ಕಿಂತಲೂ ಹೆಚ್ಚು ಬಲಿಷ್ಠವಾಗಿ ಹೆಚ್ಚು ಪ್ರಭಾವಯುಕ್ತವಾಗಿ ಪ್ರಚಂಡವಾಗಿ ಬೆಳೆಯುತ್ತದೆಂಬ ಮುಂಗಾಣ್ಕೆ ಅವರ ವಿಭಾವನೆಗೆ ಮಿಂಚಿರಬೇಕು. ಆದರೆ ಅದರ ಅಂಕುರಾರ್ಪಣೆ ಅಷ್ಟೇನೂ ಸುಲಭವಾದ ಕೆಲಸವಾಗಿರಲಿಲ್ಲ. ಶಾಸ್ತ್ರಿಗಳು ಪಟ್ಟ ಶ್ರಮ ಅಷ್ಟಿಷ್ಟಲ್ಲ. "ಕರ್ಣಾಟಕ ಸಂಘ"ದ ಅಧ್ಯಕ್ಷರಾದ ಬೆಳ್ಳಾವೆ ವೆಂಕಟನಾರಾಣಪ್ಪನವರ (ಪರಮ ಪೂಜ್ಯರಲ್ಲಿ ಅವರು ಶ್ರೇಷ್ಠರು!) ವಿರೋಧ ದೊಡ್ಡ ಅಡ್ಡಿಯಾಗಿತ್ತು. ಪತ್ರಿಕೆ ಏನು ಎಂಬುದನ್ನೇ ತಿಳಿಯದ ಹಲವು ಜನರಿಗೆ ಅದು ನಿರರ್ಥಕವೆಂಬ ಅಭಿಪ್ರಾಯ. ಆದರೂ ಅನೇಕ ವಿದ್ಯಾರ್ಥಿಗಳು ಶಾಸ್ತ್ರಿಗಳಿಗೆ ತಾವು ಚಂದಾದಾರರಾಗುವ ಭರವಸೆ ಕೊಟ್ಟದ್ದರಿಂದ ಅವರು ಅಧ್ಯಕ್ಷರೊಡನೆ ಉಪಾಯವಾಗಿ ಹೋರಾಡಿ ಜಯಗಳಿಸಿಕೊಂಡರು. ಪತ್ರಿಕೆಯನ್ನು ನಡೆಸುವ ಗುರುತರ ಜವಾಬ್ದಾರಿಯನ್ನು ಅವರೊಬ್ಬರೇ ಹೊತ್ತರು. ಹಲವು ಕಾಲ ಅದರ ಸಮಸ್ತ ಕಾರ್ಯಕಲಾಪಗಳನ್ನೂ ಅವರೊಬ್ಬರೇ ನೆರವೇರಿಸುತ್ತಿದ್ದರು. ಅದೊಂದು ರೋಮಾಂಚಕ ಕಥೆ! ಅವರಿವರ ಕೈ ಕಾಯುವುದು ಶಾಸ್ತ್ರಿಗಳಿಗೆ ಸದಾ ಹೊಲ್ಲ.

ಉಪಪ್ರಾಧ್ಯಾಪಕನಾಗಿ ನಾನು ಸೆಂಟ್ರಲ್ ಕಾಲೇಜಿಗೆ ವರ್ಗವಾದಾಗ ಅಲ್ಲಿನ ಅಧ್ಯಾಪಕ ವೃಂದದಲ್ಲಿ ಕೃಷ್ಣಶಾಸ್ತ್ರಿಗಳೂ ಒಬ್ಬರಾಗಿದ್ದುದು ನನ್ನ ಸುಯೋಗ. ನನ್ನ "ವಚನ"ಗಳಲ್ಲಿ ನನಗೇ ನಂಬಿಕೆ ಇರಲಿಲ್ಲ. ಹತ್ತೆಂಟು

ಸಂವತ್ಸರ; ನಂಬಿಕೆಯನ್ನು ಉಂಟುಮಾಡಿದವರು ಶಾಸ್ತ್ರಿಗಳು. ಆ ಪ್ರಸಂಗದ ಪುನರುಕ್ತಿ ಈಗ ಅನಗತ್ಯ. ೧೯೩೭ರಲ್ಲಿ ಆದ ಒಂದು ಸುಂದರ ಘಟನಾವಳಿಯ ವೃತ್ತಾಂತ ಈ ಸಂದರ್ಭದಲ್ಲಿ ಅನುರೂಪವೆಂದೇ ನನ್ನ ಭಾವನೆ. ಕಾಲೇಜಿನ ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ಹತ್ತಿರದ ಕೆಳೆಯನ್ನು ಬೆಳೆಸಲೋಸುಗ "ಟ್ಯುಟೋರಿಯಲ್ ಸಿಸ್ಟಮ್" ಎಂಬ ಪದ್ಧತಿಯನ್ನು ಜಾರಿಗೆ ತರಲು ಶಿಕ್ಷಣವೇತ್ತರಾದ ಕಾಲೇಜಿನ ಮುಖ್ಯಾಧಿಕಾರಿಗಳು ನಿಶ್ಚೈಸಿದರು. ಅದರ ಅಂಗವಾಗಿ ಬಡ ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಉಪಹಾರವನ್ನು ಉಚಿತವಾಗಿ ಕೊಡಬೇಕೆಂದು ನಿಷ್ಕರ್ಷಿತವಾಯ್ತು. ತಗಲುವ ಖರ್ಚನ್ನು ಅಧ್ಯಾಪಕರು ಮಾಸಾಷಾ ಚಂದದ ಮೂಲಕ ಭರಿಸಲು ಸಮ್ಮತಿಸಿದರು. ಉಪಹಾರದ ವ್ಯವಸ್ಥೆಗೆ ಕೃಷ್ಣಶಾಸ್ತ್ರಿಗಳು ಸರ್ವಾನುಮತದಿಂದ ಗೌರವಿಸಲ್ಪಟ್ಟರು. ದಾಕ್ಷಿಣ್ಯ ಸಂಕೋಚಗಳಿಂದ ಸಂಕೀರ್ಣವಾದ ತ್ರಾಸಮಯವಾದ ಟೀಕೆಗಳನ್ನು ಕೂಗಿ ಕರೆಯುವ ಕೆಲಸವೆಂದರೆ ಅನ್ನಸತ್ರದ ಯಾಜಮಾನ್ಯ. ಭೀತಿಗೊಳಿಸುವ ಅದರ ಸವಾಲು ಭೀತಿಗೊಳಿಸಲಿಲ್ಲ ಶಾಸ್ತ್ರಿಗಳನ್ನ. ಕಾಲೇಜಿನ ವಿದ್ಯಾರ್ಥಿನಿಲಯದಲ್ಲಿ ಪ್ರತ್ಯೇಕ ಅಡಿಗೆಯವನಿಂದ ತಯಾರಿಸಿದ ಹುಳಿಯನ್ನ ಮೊಸರನ್ನವನ್ನು ನೂರಕ್ಕೂ ಮೇಲ್ಪಟ್ಟ ಸಂಖ್ಯೆಯ ಹುಡುಗರಿಗೆ ಹೊತ್ತಿಗೆ ಸರಿಯಾಗಿ ತಟ್ಟೆಗಳಲ್ಲಿ ಸರಬರಾಜು ಮಾಡಿ ತೃಪ್ತಿಗೊಳಿಸುತ್ತಿದ್ದರು, ತೃಪ್ತಿಗೊಳ್ಳುತ್ತಿದ್ದರು. ಅಕ್ಕಿ ಬೇಳೆ ತೆಂಗಿನಕಾಯಿ ಕಾಯಿಪಲ್ಯ ತರುವುದರಿಂದ ಹಿಡಿದು, ಮೃಷ್ಟಾನ್ನದ–ಅದು ಮೃಷ್ಟಾನ್ನವಲ್ಲದೆ ಮತ್ತೇನು ?– ವಿನಿಯೋಗದವರೆಗೂ ಸಕಲವೂ ಅವರ ಖುದ್ದು ಸಮ್ಮುಖದಲ್ಲೇ ಆಗತಕ್ಕದ್ದು. ಅವರ ಕರ್ತವ್ಯನಿಷ್ಠೆ ಉಪಮಾತೀತ !

ತಾವು ತಾಳಿದ ಬಹು ಸಂಕಲ್ಪಗಳಲ್ಲಿ ಒಂದನ್ನೂ ಬಿಡದೇ ಅಚ್ಚುಕಟ್ಟಾಗಿ ಸಿದ್ಧಿಸಿಕೊಂಡ ಅವರ ಸಾರಸ್ವತ ಜೀವನ ಪರಿಪೂರ್ಣವಾದದ್ದು. ಎಲ್ಲರಿಗೂ ಅದೊಂದು ಆದರ್ಶ, ಎತ್ತರದ ಆದರ್ಶ. ಅದರ ಕಡೆ ಕತ್ತೆತ್ತಿ ನೋಡುತ್ತ, ನಾವೂ ದುಡಿಯೋಣ, ಆತ್ಮಕಲ್ಯಾಣಕ್ಕಾಗಿ, ಗುರು ಕಾಣಿಕೆಯಾಗಿ !

**ಅಂಬಳೆ ಆರ್. ಸದಾಶಿವಯ್ಯ**

# ಕೆಲವು ನೆನಪುಗಳು

ನನಗೆ ಈಗ ಎಂಬತ್ತನಾಲ್ಕು ವರ್ಷ. ನಾನು ಅರುವತ್ತು ನಾಲ್ಕುವರ್ಷದ ಹಿಂದೆ, ಮೈಸೂರಿನ ಮಹಾರಾಜಾ ಕೊಲೀಜಿಯೇಟ್ ಹೈಸ್ಕೂಲಿನಲ್ಲಿ (ಈಗ ಅದು ಮಹಾರಾಜಾ ಕಾಲೇಜು ಆಗಿದೆ), ೧೯೦೮ರಲ್ಲಿ ಎಫ್. ಎ. ತರಗತಿಗೆ ಸೇರಿದೆ. ೧೯೦೮ರಲ್ಲಿ ನನ್ನ ಸಹಪಾಠಿಯಾಗಿದ್ದವರಲ್ಲಿ ಡಾ. ಅಂಬಳೆ ವೆಂಕಟಸುಬ್ಬಯ್ಯ ಮತ್ತು ಶ್ರೀ ತಳಕಿನ ವೆಂಕಣ್ಣಯ್ಯನವರೂ ಇದ್ದರು. ಶ್ರೀ ಅಂಬಳೆ ರಾಮಕೃಷ್ಣ ಶಾಸ್ತ್ರಿಗಳು ಮಹಾರಾಜಾ ಸಂಸ್ಕೃತ ಪಾಠಶಾಲೆಯಲ್ಲಿ ತರ್ಕಶಾಸ್ತ್ರದ ಅಧ್ಯಾಪಕ ರಾಗಿದ್ದರು. ಅವರಿಗೂ ನಮ್ಮ ತಂದೆಯವರಾದ ಅಂಬಳೆ ರಾಮಾಭಟ್ಟ (ಶಾಸ್ತ್ರಿ) ಇವರಿಗೂ ತುಂಬಾ ಸ್ನೇಹವಿದ್ದುದರಿಂದ, ಅವರ ಮಕ್ಕಳಾದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳಿಗೂ ನನಗೂ ಆಗಿನಿಂದಲೇ ತುಂಬಾ ಪರಿಚಯವಿತ್ತು. ನಾನು ಸಂಸ್ಕೃತ ಪಾಠಶಾಲೆಯಲ್ಲಿ ಸಾಹಿತ್ಯ ಕಲಿತಾಗ, ರಾಮಕೃಷ್ಣಶಾಸ್ತ್ರಿಗಳನ್ನು ಚೆನ್ನಾಗಿ ಬಲ್ಲೆ. ಎ. ಆರ್. ಕೃಷ್ಣಶಾಸ್ತ್ರಿಗಳು ನನಗಿಂತ ಐದಾರು ವರ್ಷಕ್ಕೆ ಚಿಕ್ಕವರು. ಅವರ ತಂದೆಯವರಿಂದಲೇ ಸಂಸ್ಕೃತ ಕಲಿಯುತ್ತಿದ್ದರು. ಎಷ್ಟೋಬಾರಿ ಪಾಠಶಾಲೆ ಯಲ್ಲಿ ತಂದೆಯ ಜತೆಗೆ ಬಂದು, ಕೇವಲ ಒಂದು ದಟ್ಟಿಪಂಚೆ, ಮೇಲೊಂದು ಚೌಕಹೊದ್ದು ಇದ್ದ ಕೃಷ್ಣಶಾಸ್ತ್ರಿಗಳನ್ನು ನೋಡಿದ ನೆನಪು ಈಗಲೂ ಇದೆ. ಆಗ ಪ್ರಾಯಶಃ ನಾವು ಜತೆಯಲ್ಲಿಯೇ ಕೆಲವು ಸಂಸ್ಕೃತ ತರಗತಿಗೆ ಹೋಗುತ್ತಿದ್ದೆವೆಂದು ಕಾಣುತ್ತದೆ.

ಅನಂತರ ನಾನು ಸಂಸ್ಕೃತ ಪಾಠಶಾಲೆಯನ್ನು ಬಿಟ್ಟು ಲೌಕಿಕ ವಿದ್ಯಾಭ್ಯಾಸ ನಡೆಸಲು ಇಂಗ್ಲಿಷ್ ಶಾಲೆ ಸೇರಿದೆ. ಕೃಷ್ಣಶಾಸ್ತ್ರಿಗಳೂ ಹಾಗೆಯೇ ಮಾಡಿದರೆಂದೂ ನೆನಪು. ಹೇಗೂ ನಾನು ೧೯೦೮ಕ್ಕೆ ಆಗ ಮದ್ರಾಸು ವಿಶ್ವವಿದ್ಯಾನಿಲಯದವರು ನಡೆಸುತ್ತಿದ್ದ ಎಫ್. ಎ. ಪರೀಕ್ಷೆಗೆ ಸೇರಿದೆ. ೧೯೦೮ರಲ್ಲಿ ಪಾಸುಮಾಡಿದ ನಾನು ಸಾಂಸಾರಿಕ ಬಿಕ್ಕಟ್ಟಿನಿಂದ ಮುಂದಿನ ವ್ಯಾಸಂಗ ಮಾಡಲಾಗದೆ ಕೆಲಸಕ್ಕೆ ಸೇರಿದೆ. ಆಗ ಪರೀಕ್ಷೆಗಳು ಡಿಸೆಂಬರಿನಲ್ಲಿ ಆಗುತ್ತಿದ್ದುವು. ೧೯೦೯ನೆಯ ವರ್ಷ ನಾನು ಡಿಸ್ಟ್ರಿಕ್ಟ್‌ಬೋರ್ಡ್ ಕಚೇರಿಯಲ್ಲಿ ರೂ ೨೦-೧-೩೦ರ ಸಂಬಳದ ಗ್ರೇಡಿನಲ್ಲಿ ೨೦ರೂ ಸಂಬಳಕ್ಕೆ ಕೆಲಸಕ್ಕೆ ಸೇರಿದೆ.

ನಾನು ೧೯೩೪ರಲ್ಲಿ ಮೈಸೂರಿನ ಅಠಾರಾ ಕಚೇರಿಗೆ ವರ್ಗವಾಗಿ ಬಂದೆ. ಆಗಲೇ ನಾನು ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳನ್ನು ಮತ್ತೆ ಕಂಡುದು. ಆವೇಳೆಗೆ ಆತ ಬಿ. ಎ. ಪರೀಕ್ಷೆ ಮುಗಿಸಿ ಕನ್ನಡದ ಎಂ. ಎ. ಯನ್ನು ಮಾಡಿದ್ದರು. ನಮ್ಮ ಕಚೇರಿಯಲ್ಲಿ ನಮ್ಮ ಜತೆಯಲ್ಲಿದ್ದ ಗುಮಾಸ್ತರಲ್ಲಿ ಶ್ರೀಕಂಠಶಾಸ್ತ್ರಿ, ಸಂಪತ್ತಯ್ಯಂಗಾರ್ ಮತ್ತು ಟೈಪಿಸ್ಟ್ ಹರಿಹರನ್ ಇವರು ಶ್ರೀ. ಕೃಷ್ಣಶಾಸ್ತ್ರಿಗಳು ಗುಮಾಸ್ತರಾಗಿ ಬರುವ ವಿಷಯವನ್ನು ಮೊದಲು ಚರ್ಚಿಸಿದ್ದು ನನಗೆ ನೆನಪಿದೆ. ನಮ್ಮ ಜತೆಯಲ್ಲಿದ್ದ ಪೀರ್‌ಮುಹಮದ್ ಎಂಬಾತ, ಆಗಿನ ಡೆಪ್ಯುಟಿ ಕಮಿಷನರಾದ ಕುರಿಯನ್ ಮ್ಯಾಥನ್ ಅವರಿಗೆ ಬಹಳ ಬೇಕಾದವನಾಗಿದ್ದ. ಆತನೇ ನಮ್ಮ ಕೈಯಲ್ಲಿ ಮೊದಲು ಈ ಹೊಸ ಗುಮಾಸ್ತೆಯ ವಿಷಯ ಹೇಳಿದ್ದು. ಆಗ ಮಾತೆಲ್ಲಾ ಸಾಮಾನ್ಯವಾಗಿ ಇಂಗ್ಲಿಷಿನಲ್ಲಿಯೇ ನಡೆಯುತ್ತಿತ್ತೆಂಬುದನ್ನೂ ನೆನೆಯಬೇಕು. "A new clerk is joining. He is an M. A , but jobless" (ಒಬ್ಬ ಹೊಸ ಗುಮಾಸ್ತ ನಮ್ಮ ಜತೆಗೆ ಬರುತ್ತಾನೆ. ಆತ ಎಂ. ಎ. ಪಾಸುಮಾಡಿದರೂ ಕೆಲಸ ವಿಲ್ಲದವನು) ಎಂದು ಆತ ಹೇಳಿದ. ನಮಗೆ ಈ ಎಂ. ಎ. ಪಾಸುಮಾಡಿದಾತ ಹೇಗಿರುತ್ತಾನೋ ಎಂದು ಕುತೂಹಲ. ಆ ಹೊಸ ಗುಮಾಸ್ತೆಯನ್ನು ೩೦-೧-೪೫ರ ಗ್ರೇಡಿನಲ್ಲಿ ೩೫ ರೂಗಳ ಸಂಬಳದ ಮೇಲೆ ಗೊತ್ತುಮಾಡಲಾಗಿದ್ದುದಂತೂ ನಮಗೆ ಇನ್ನೂ ಆಶ್ಚರ್ಯದ ಸಂಗತಿ. ಆ ಗುಮಾಸ್ತೆ ಕೃಷ್ಣಶಾಸ್ತ್ರಿಯೆಂಬುದು ಆತ ಬರುವವರೆಗೆ ನನಗೆ ತಿಳಿದಿರಲಿಲ್ಲ. ಅಂತೂ ಆತ ಅಲ್ಲಿಗೆ ಬರುವುದಕ್ಕೆ ಮೊದಲು ನಾವೆಲ್ಲ ಆತನ ಬಗ್ಗೆ ತುಂಬಾ ಊಹಾಪೋಹವಾಗಿ ಮಾತಾಡಿಕೊಂಡೆವು. ಸಂಪತ್ತಯ್ಯಂಗಾರಿ ಕೊಂಚಮಟ್ಟಿಗೆ ಬಾಯಿಬಿಚ್ಚಿ ಅದೂ ಇದೂ ಹೇಳಿ, ಅನಂತರ ಸಾಹೇಬರ ಹತ್ತಿರ ಚಾಡಿ ಹೇಳುತ್ತಿದ್ದ. (ಆತ ಈಚೆಗೆ ೧೯೬೪ರಲ್ಲಿ ತೀರಿಕೊಂಡ.) ಅವನೂ ಪೀರ್‌ಮುಹಮ್ಮದ್ ಇಬ್ಬರೂ ಸಾಹೇಬರು ನಮ್ಮಮೇಲೆ ಕಣ್ಣಿಡಲು ಉಪಯೋಗಿಸುತ್ತಿದ್ದ, ನಮ್ಮ ಎಲ್ಲ ಮಾತುಕತೆಗಳನ್ನೂ ತಿಳಿದುಕೊಳ್ಳಲು ಬಳಸಿ ಕೊಳ್ಳುತ್ತಿದ್ದ ಗುಮಾಸ್ತೆಯರು. ಎಂ.ಎ. ಪಾಸುಮಾಡಿ ಬಂದ ಕೃಷ್ಣಶಾಸ್ತ್ರಿಗಳಿಗೂ ಡೆಪ್ಯುಟಿ ಕಮಿಷನರ್ ಮ್ಯಾಥ್ಯೂ ಸಾಹೇಬರಿಗೂ ಜಗಳ ತಂದುಹಾಕಿದವರು ಈ ಇಬ್ಬರು. ಮ್ಯಾಥನ್ ಸಾಹೇಬರು ಬರಿಯ ಬಿ. ಎ. ಆಗಿದ್ದುದರಿಂದ ಇವರಿಬ್ಬರೂ ಕೃಷ್ಣಶಾಸ್ತ್ರಿಗಳ ಮೇಲೆ ಚಾಡಿಹೇಳಲು, ಅನುವಾಯಿತು. ಕೃಷ್ಣಶಾಸ್ತ್ರಿಗಳು ಬಂದಾಗ ನನ್ನನ್ನು ಕಂಡು ಸಂತೋಷದಿಂದ "ಏನು, ಸದಾಶಿವಯ್ಯ, ನೀವು ಇಲ್ಲಿ ಇದೀರಾ! ಹಾಗಾದರೆ ನನಗೊಬ್ಬರು ನಂಟರು ಸಿಕ್ಕಿದಂತಾಯಿತು" ಎಂದರು. ಮೇಲುಕೋಟೆಯಂಚಿನ(ಅದೂ ಕೆಂಪುಅಂಚು), ಆಗಿನ ಕಾಲಕ್ಕೆ ನಯವಾಗಿದ್ದರೂ ದಪ್ಪಗೇ ಇದ್ದ, ಕೊಂಚ ಹಳದಿಮಿಶ್ರದ ಬಣ್ಣದ ಪಂಚೆಯನ್ನು ಉಟ್ಟು, ಪೂರ್ತಿ ತೋಳಿನ ಷರಟನ್ನು ಹಾಕಿಕೊಂಡು, ಮೇಲೆ ಮುಚ್ಚುಕೊರಳಿನ ಅಂಗಿ (ಸ್ಲೇಟ್ ಬಣ್ಣದ್ದು ಆಕಾಲದಲ್ಲಿ ಸಾಮಾನ್ಯವಾಗಿದ್ದುದು) ತೊಟ್ಟಿದ್ದರು. ತಲೆಗೆ ಒಂದು

ರುಮಾಲು-ಬರಿಯ ಬಿಳಿಯ ರುಮಾಲು, ಜರತಾರಿ ಅಂಚುಗಿಂಚಿರಲಿಲ್ಲ. ಹಣೆಗೆ ಎದ್ದುಕಾಣುವಂತೆ ಸಾದುಃಬೊಟ್ಟು ಇಟ್ಟುಕೊಂಡಿದ್ದರು. ಮಾತು ಮೃದುವಾಗಿದ್ದರೂ ಅದರಲ್ಲಿ ಒಂದುರೀತಿಯ ಗತ್ತು (Dignity) ಇತ್ತು. ನನಗೆ ನನ್ನ ಹಳೆಯ ಸ್ನೇಹಿತ ಇಲ್ಲಿ ಸಿಕ್ಕಿದನಲ್ಲ ಎಂದು ಸಂತೋಷವಾದರೂ, ಈತ, ಇಷ್ಟು ದೊಡ್ಡ ಪರೀಕ್ಷೆ ಮಾಡಿದವನು ಈ ಗುಮಾಸ್ತೆಯ ಕೆಲಸಕ್ಕೆ ಬಂದು ಸೇರಿದನಲ್ಲ ಎಂದು ಮನಸ್ಸಿಗೆ ಕಸಿವಿಸಿಯೂ ಆಯಿತು. ಗಂಭೀರವಾದ ಆ ಮುಖವನ್ನು ನೆಟ್ಟ ನಿಲುವಿನ ಆತನ ನಡೆಯನ್ನು ನೋಡಿದೊಡನೆಯೇ ನಮ್ಮ ಉಳಿದ ಗುಮಾಸ್ತರಿಗೆ ಒಂದು ರೀತಿಯ ಹಿಂದೇಟಿನ ಭಾವನೆ ಉಂಟಾಯಿತು. 'ಬನ್ನಿ, ಬನ್ನಿ' ಎಂದು ಹೇಳಿ, ಸಾಹೇಬರ ಬಳಿಗೆ ಪೀರ್ ಮಹಮ್ಮದ್ ಕರೆದುಕೊಂಡು ಹೋದ. ಅಲ್ಲಿ ಸಾಹೇಬರಿಗೆ ಕೆಲಸದ ರಿಪೋರ್ಟ್ (Duty Report) ಕೊಟ್ಟು ಕೃಷ್ಣಶಾಸ್ತ್ರಿ ಹೊರಕ್ಕೆಬಂದರು. ಆದಿನ ಅವರಿಗೆ ಇಂತಹ ಕೆಲಸ ಅಂತ ಗೊತ್ತುಮಾಡಲಿಲ್ಲ. ಸುಮ್ಮನೆ ನನ್ನ ಮೇಜಿನ ಪಕ್ಕದಲ್ಲಿಯೇ ಕುರ್ಚಿಹಾಕಿ ಕುಳಿತಿದ್ದರು. ಆಗ ನಾನು "ಏನು ಕೃಷ್ಣಶಾಸ್ತ್ರಿ, ಎಂ. ಎ. ಪಾಸುಮಾಡಿ ಈ ೩೫ ರೂಪಾಯಿಕೆಲಸಕ್ಕೆ, ಅದೂ ಗುಮಾಸ್ತೆಯ ಕೆಲಸಕ್ಕೇಕೆ ಬಂದಿರಿ?" ಎಂದು ಕೇಳಿದೆ.

"ಎಲ್ಲೂ ಕೆಲಸ ಸಿಕ್ಕಲಿಲ್ಲ. ಪರೀಕ್ಷೆಯಲ್ಲಿ ಪಾಸಾಗಿ ಎಂಟು ತಿಂಗಳಾಯಿತು. ಪಥ ಸಾಗಬೇಕಲ್ಲ. ಅದಕ್ಕಾಗಿ ಇಲ್ಲಿಗೆ ಬಂದಿದೇನೆ" ಎಂದರು ಕೃಷ್ಣಶಾಸ್ತ್ರಿ.

ಮಾತು ಹಾಗೆಯೇ ಆ ವಿಷಯ ಈ ವಿಷಯಕ್ಕೆ ಹೋಗಿ, ಕೆಲಸದ ಬಗ್ಗೆಯೇ ತಿರುಗಿ ಬಂದು ನಿಂತಿತು.

"ಹೇಗೇ ಆದರೂ, ನೀವು ಈ ಗುಮಾಸ್ತೆ ಕೆಲಸಕ್ಕೆ ಬಂದು ಸೇರಿದುದು ನನಗೆ ಸಮಾಧಾನವಿಲ್ಲ" ಎಂದು ನಾನು ಹೇಳಿದೆ. "ನನ್ನಂತಹವನಿಗೇನೋ ನಿರ್ವಾಹವಿಲ್ಲ. ಸಂಸಾರವಂದಿಗ-ಏನೂ ಪಾಸೂ ಮಾಡಿಲ್ಲ. ನೀವು ಎಂ.ಎ. ಮಾಡಿದ್ದು, ಗುಮಾಸ್ತೆಯಾಗುವುದೇ?" ಎಂದು ಹೇಳಿದೆ ನಾನು. ಸಾಹಿತ್ಯದಲ್ಲಿ ಕೃಷ್ಣಶಾಸ್ತ್ರಿಗಳಿಗೆ ಇದ್ದ ಅಪಾರ ಆಸಕ್ತಿ ನನಗೆ ಗೊತ್ತಿತ್ತು.

ಆಗ ಕೃಷ್ಣಶಾಸ್ತ್ರಿಗಳು "ಹೌದು. ಆದರೆ ಹೊಟ್ಟೆಪಾಡಿಗಾಗಿ ಈಗ ಇದು. ಆದರೆ ನಾನು ಇಲ್ಲಿ ಬಹಳಕಾಲ ಇರುವುದಿಲ್ಲ. ಬೇರೆ ಕಡೆ-ಅದರಲ್ಲಿಯೂ ಕಾಲೇಜು ಶಾಲೆಯಲ್ಲಿ ಕೆಲಸಕ್ಕೆ ಪ್ರಯತ್ನಿಸುತ್ತಿದೇನೆ" ಎಂದರು.

ಅವರ ಆ ಮಾತೇನೋ ಸಹಜವಾಗಿಯೇ ನಡೆಯಿತು. ಆ ಗುಮಾಸ್ತೆಯ ಕೆಲಸದಲ್ಲಿ ಅವರು ಕೇವಲ ಐದು ಅಥವಾ ಐದೂವರೆ ತಿಂಗಳು ಮಾತ್ರ ಇದ್ದರು. ಆಗ ನಡೆದ ಎರಡು ಘಟನೆಗಳು ನನಗೆ ಇನ್ನೂ ಚೆನ್ನಾಗಿ ನೆನಪಿನಲ್ಲಿವೆ.

ಮೊದಲ ಘಟನೆ ನಡೆದುದು ಅವರ ಗುಮಾಸ್ತೆಯ ಕೆಲಸಕ್ಕೆ ಸಂಬಂಧಿಸಿದಂತೆ. ಕೆಲಸಕ್ಕೆ ಸೇರಿದ ಮಾರನೆಯ ದಿನವೋ ಮೂರನೆಯ ದಿನವೋ ಅವರಿಗೆ ಮುಜರಾಯಿ ಇಲಾಖೆಯ ಗುಮಾಸ್ತೆಯೆಂದು ಹೆಸರಿಟ್ಟು, ದೇವಸ್ಥಾನಗಳು

ಮುಂತಾದ ವಿಷಯಗಳ ಕಾಗದ ಪತ್ರಗಳನ್ನೆಲ್ಲಾ ವಹಿಸಿ ಕೊಡಲಾಯಿತು. ನಮ್ಮ ಕಚೇರಿಗಳಲ್ಲಿ ಮುಜರಾಯಿ ಇಲಾಖೆಗೆ ಸಂಬಂಧಪಟ್ಟಂತೆ ಕಾಗದಪತ್ರಗಳು ಯಾವಾಗಲೂ ಸರಿಯಾಗಿ ವಿಲೇವಾರಿಯಾಗುವುದೇ ಅಪರೂಪ. ಯಾವಾಗಲೂ ಕಟ್ಟುಕಟ್ಟುಕಾಗದಗಳು ಹಾಗೆಯೇ ಬಿದ್ದಿರುತ್ತವೆ. ಹೊಸದಾಗಿ ಬಂದವರಿಗೆ ಮುಜರಾಯಿ ಕೆಲಸ ಒಪ್ಪಿಸಿದರೆ ಅವರಿಗೆ ಕೆಟ್ಟ ಹೆಸರು ಕಟ್ಟಿಟ್ಟ ಬುತ್ತಿಯೇ ಎಂಬುದು ನಮಗೆಲ್ಲಾ ಗೊತ್ತು. ಅದು ಕೃಷ್ಣಶಾಸ್ತ್ರಿಗಳಿಗೆ ಗೊತ್ತಿರಲಿಲ್ಲ. ಯಾವುದೋ ಒಂದು ದೇವಸ್ಥಾನದ ವ್ಯವಹಾರದಲ್ಲಿ ಕಾಗದಪತ್ರಗಳನ್ನೆಲ್ಲಾ ಚೆನ್ನಾಗಿ ಅಭ್ಯಾಸಮಾಡಿ ಅದರ ಬಗ್ಗೆ ಒಂದು Draft (ಮೊದಲ ಸಲಹೆ) ಸಿದ್ಧ ಮಾಡಿದರು ಕೃಷ್ಣಶಾಸ್ತ್ರಿಗಳು. ತುಂಬಾ ಸೊಗಸಾದ ಇಂಗ್ಲಿಷಿನಲ್ಲಿ ಅದರ ವಿಷಯ ವನ್ನೆಲ್ಲ ಕೂಲಂಕಷವಾಗಿ ವಿಮರ್ಶಿಸಿ, ಸಮಗ್ರವಾಗಿ ಅದರ ಸಮಸ್ಯೆಯನ್ನು ಬರೆದು, ಹೇಗೆ ಪರಿಹಾರವಮಾಡಬೇಕೆಂದೂ ಸೂಚಿಸಿದ್ದ ಅವರ ಬರವಣಿಗೆ ಕಾಲೇಜಿನ ಒಂದು ಉತ್ತಮ ಪ್ರಬಂಧದಂತೆ ಇತ್ತು. ಯಾರಿಗೇ ಆಗಲಿ ಆ ವಿಷಯ ಸ್ಪಷ್ಟವಾಗಿ ಗೊತ್ತಾಗುವಂತೆ ಬರೆದಿದ್ದರು. ಸುಮಾರು ಗಜದ ಕಾಗದದಲ್ಲಿ ಒಂದೂವರೆ ಪುಟವಷ್ಟಿತ್ತು ಅದು. ಅದನ್ನು ಸಾಹೇಬರ ಬಳಿಗೆ ತೆಗೆದುಕೊಂಡು ಹೋದಾಗ ಸಾಹೇಬರು ತುಂಬಾ ಸಿಟ್ಟಾಗಿ "ನೀವು ಎಂ.ಎ. ಪಾಸುಮಾಡಿದ್ದೀರೆಂಬುದು ನನಗೆ ಗೊತ್ತು. ನಿಮ್ಮನ್ನು ನಾನು ಡ್ರಾಫ್ಟ್ ಹಾಕಲು ಹೇಳಿದೆನೇ ಹೊರತು, ನಿಮ್ಮ ಪಾಂಡಿತ್ಯವನ್ನು ತೋರಿಸಿ ಒಂದು ಪ್ರೌಢವಾದ ಪ್ರಬಂಧ ಬರೆದು ತರಲು ಹೇಳಲಿಲ್ಲ" ಎಂದು ಕೂಗಾಡಿಬಿಟ್ಟರು. ಕೃಷ್ಣಶಾಸ್ತ್ರಿಗಳಿಗೆ ಆಗ ಇನ್ನೂ ಬಿಸಿ ವಯಸ್ಸು. ಅಭಿಮಾನ ಹೆಚ್ಚಿ, ಸಾಹೇಬರು ತಾವು ಬರೆದುದನ್ನು ಓದದೆಯೇ ಹೀಗೆಂದರಲ್ಲ ಎಂದು ಅವರಿಗೂ ಕೆರಳಿ ಅವರ ಮುಖವನ್ನೇ ದುರುಗುಟ್ಟಿಕೊಂಡು ನೋಡಿ ತಾವು ಬರೆದುದನ್ನು ಹರಿದುಹಾಕಿಬಿಟ್ಟರು. "ನಾಲ್ಕೇ ಪಂಕ್ತಿಯಲ್ಲಿ ಇದನ್ನು ಬರೆದು ತರುತ್ತೇನೆ" ಎಂದು ಹೇಳಿ ದಡದಡನೆ ಹಿಂದಕ್ಕೆ ಬಂದುಬಿಟ್ಟರು. ಅವರ ಅಂದಿನ ಧೈರ್ಯ ನಮಗೆಲ್ಲ ಆಶ್ಚರ್ಯವನ್ನುಂಟುಮಾಡಿತು. ಅನಂತರ ನಾಲ್ಕೇ ಸಾಲು ಬರೆದುಕೊಂಡು ಹೋಗಿ ಸಾಹೇಬರ ಮುಂದಿಟ್ಟು, ಅದಕ್ಕೆ ಅವರ ಒಪ್ಪಿಗೆಯನ್ನು ಪಡೆದುಬಂದರು. ಈ ಘಟನೆಯಾಗಲು ಹಿನ್ನೆಲೆ ಇಷ್ಟೇ. ಎಂ. ಎ. ಪಾಸುಮಾಡಿ ಬಂದಿರುವ ಕೃಷ್ಣಶಾಸ್ತ್ರಿ ನಿಮ್ಮನ್ನು ಲಕ್ಷ್ಯಮಾಡುವುದಿಲ್ಲ. ನೀವು ಬರಿಯ ಬಿ.ಎ. ಎಂದು ಹೀಯಾಳಿಸುತ್ತಾನೆ. ಅಲ್ಲದೆ ಕೆಲವು ತಿಂಗಳು ಮಾತ್ರ ಇಲ್ಲಿದ್ದು ಬೇರೆ ಎಲ್ಲಾದರೂ ಕೆಲಸ ಹುಡುಕಿಕೊಂಡು ಹೋಗಬೇಕೆಂದಿರುವ ಆತನಿಗೆ ನೀವು ಯಾವಲೆಕ್ಕ" ಇತ್ಯಾದಿ ಮಾತುಗಳನ್ನು ಸಂಪತ್ತಯ್ಯಂಗಾರಿ ಮತ್ತು ಪೀರ್ ಮುಹಮ್ಮದ್ ಇಬ್ಬರೂ ಮ್ಯಾರ್ಥ ಸಾಹೇಬರಿಗೆ ಚುಚ್ಚಿಬಿಟ್ಟಿದ್ದರು. ಅದು ಈ ರೀತಿಯಲ್ಲಿ ಹೊಗೆಯಾಡಿತ್ತು. ಕೃಷ್ಣಶಾಸ್ತ್ರಿಗಳಿಗೂ ಮ್ಯಾರ್ಥ ಸಾಹೇಬ ರಿಗೂ ಅಲ್ಲಿಂದ ಅಷ್ಟಕ್ಕಷ್ಟೇ!

ಎರಡನೆಯ ಘಟನೆ ನಡೆದುದು ಆಫೀಸಿನ ಕೆಲಸದ ಸಂಬಂಧವಾಗಿ, ನಾನೂ ಕೃಷ್ಣಶಾಸ್ತ್ರಿಗಳೂ ವ್ಯಾರ್ಥ್‌ಸಾಹೇಬರ ಮನೆಗೆ ಯಾವುದೋ ಕಾಗದಗಳನ್ನು ತೆಗೆದುಕೊಂಡು ಹೋಗಿದ್ದಾಗ. ನಾವಿಬ್ಬರೂ ವೈದಿಕ ಮನೆತನಕ್ಕೆ ಸೇರಿದವರು. ಆಗಂತೂ ಈಗಿನಂತೆ ಹೆಚ್ಚಿನ ಹೋಟಲುಗಳಿರಲಿಲ್ಲ. ಸಾಧಾರಣವಾಗಿ ಮನೆಯಲ್ಲಲ್ಲದೆ ಹೊರಗೆ ಎಲ್ಲೂ ಏನನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ವ್ಯಾರ್ಥ್ ಸಾಹೇಬರು ಅವರ ಮನೆಯಲ್ಲಿ ನಮಗೆ ಕಾಫಿಕೊಡಲು ಬಂದಾಗ ಕೃಷ್ಣಶಾಸ್ತ್ರಿ ಮತ್ತು ನಾನು ಇಬ್ಬರೂ ತೆಗೆದುಕೊಳ್ಳಲಿಲ್ಲ. ಆಗ ವ್ಯಾರ್ಥ್‌ಸಾಹೇಬರಿಗೆ ಸಿಟ್ಟುಬಂದು "ಸಂಪತ್ತಯ್ಯಂಗಾರಿಯೇ ತೆಗೆದುಕೊಳ್ಳುತ್ತಾರೆ. ನೀವೇಕೆ ತೆಗೆದುಕೊಳ್ಳ ಕೂಡದು? ಜಾತಿಗೆಡುತ್ತೀರೆಂದೋ!" ಎಂದು ಗುಡುಗಿದರು. ಆಗ ಕೃಷ್ಣಶಾಸ್ತ್ರಿಗಳು ಬಹಳ ನಯವಾಗಿ ಆದರೆ ದೃಢವಾಗಿ "ಅದೇನೂ ಅಲ್ಲ. ನಮಗೆ ಹೊರಗೆ ಎಲ್ಲಿಯೂ ಏನನ್ನೂ ತೆಗೆದುಕೊಳ್ಳುವ ಅಭ್ಯಾಸ ಇಲ್ಲ" ಎಂದು ಹೇಳಿದರು. ಹಾಗೆ ಆ ಸನ್ನಿವೇಶದಿಂದ ನಾವಿಬ್ಬರೂ ಪಾರಾದೆವು.

ಇದಾದ ಕೆಲವು ದಿವಸಗಳಿಗೇ ವ್ಯಾರ್ಥ್‌ಸಾಹೇಬರು ಮೈಸೂರಿನ ವೊತ್ತ ಮೊದಲ ವರಮಾನ ತೆರಿಗೆಯ ಅಧಿಕಾರಿಯಾಗಿ ನೇಮಿತರಾದರು. ಆಗ ಸಂಪತ್ತಯ್ಯಂಗಾರಿ, ಟೈಪಿಸ್ಟ್ ಹರಿಹರನ್ ಮತ್ತು ಶ್ರೀಕಂಠಶಾಸ್ತ್ರಿ—ಮೂವರೂ ಆತನ ಕಚೇರಿಗೆ ವರ್ಗವಾಗಿ ಹೋದರು. ಆತನಿಗೂ ಕೃಷ್ಣಶಾಸ್ತ್ರಿಗಳಿಗೂ ಸಂಬಂಧ ಚೆನ್ನಾಗಿಲ್ಲದುದರಿಂದ, ಕೃಷ್ಣಶಾಸ್ತ್ರಿಗಳನ್ನು ಹೊಸ ಕಚೇರಿಗೆ ವರ್ಗಾಯಿಸುವುದಿಲ್ಲವೆಂದು ಖಚಿತವಾಗಿದ್ದೆವು. ಆದರೆ ಕೃಷ್ಣಶಾಸ್ತ್ರಿಗಳಿಗೆ ಕಿರುಕುಳ ಕೊಡಬೇಕೆಂದೇ ಅವರನ್ನೂ ತನ್ನ ಹೊಸ ಕಚೇರಿಗೆ ಹಾಕಿಕೊಳ್ಳಲು ವ್ಯಾರ್ಥ್ ಸಾಹೇಬರು ಪ್ರಯತ್ನಿಸಿದರು. ಆಗ ಕೃಷ್ಣಶಾಸ್ತ್ರಿಗಳಿಗೆ ಪುಣ್ಯ ಚೆನ್ನಾಗಿದ್ದು ಇನ್ಸ್‌ಪೆಕ್ಟರ್ ಜನರಲ್ ಆಫ್ ಎಜುಕೇಷನ್—ಶ್ರೀ ಶಾಮರಾಯರ ಬೆಂಬಲದಿಂದಾಗಿ ಕಾಲೇಜಿನಲ್ಲಿ ಕೆಲಸ ಸಿಕ್ಕಿ ನಮ್ಮ ಕಚೇರಿಯ ಕೆಲಸಕ್ಕೆ ರಾಜೀನಾಮೆ ಕೊಟ್ಟು ಹೋದರು. ಕೃಷ್ಣಶಾಸ್ತ್ರಿಗಳು ಸ್ವಭಾವತಃ ಬಹಳ ಒಳ್ಳೆಯವರಾದುದರಿಂದ ಒಮ್ಮೆಯಾಗಲಿ ಡಿಸ್ಟ್ರಿಕ್ಟ್ ಕಚೇರಿಯಲ್ಲಿ ತಮಗೆ ಕಿರುಕುಳವಾಗುತ್ತಿದೆ, ತೊಂದರೆಯಿದೆ, ಸಮಾಧಾನಕರ ವಾತಾವರಣವಿಲ್ಲವೆಂದು ಬಾಯಿಬಿಟ್ಟು ಯಾರೊಂದಿಗೂ ಆಡಿದವರಲ್ಲ. ಕಚೇರಿಯಲ್ಲಿ ಅವರ ಆಪ್ತನಾಗಿದ್ದ ನನಗೇ ಎಷ್ಟೋ ವಿಷಯಗಳ ಬಗ್ಗೆ ತಮ್ಮ ಅನುಭವಗಳನ್ನು ಹೇಳದೆ ಬಚ್ಚಿಟ್ಟುಕೊಂಡಿದ್ದರು. ಅದು ಅವರ ಒಳ್ಳೆಯ ಸಂಸ್ಕೃತಿಯ ಫಲ, ಅಷ್ಟೇ!

ಸುಮಾರು ೧೯೨೦–೨೧ರ ವೇಳೆಗೆ ನಾನು ಈಗ ಸೋನಾರ್ ಬೀದಿಯೆಂದು ಹೆಸರಾಗಿರುವ ರಸ್ತೆಯಲ್ಲಿ ಒಂದು ಮನೆಯಲ್ಲಿ ಬಾಡಿಗೆಗೆ ಇದ್ದೆ. ಅಲ್ಲಿಂದಾಚೆಗೆ ಏಳೆಂಟು ಮನೆಯಾಚೆಗೆ ಡಾಕ್ಟರ್ ಎ. ವೆಂಕಟಸುಬ್ಬಯ್ಯನವರ ಮನೆ 'ದೇವಪ್ರಸಾದ'. ನಮ್ಮ ಮನೆಯ ಒಂದು ಪಕ್ಕಕ್ಕೆ ಡಾಕ್ಟರ್ ಎ. ಎನ್. ನರಸಿಂಹಯ್ಯ

ನವರಿದ್ದರು. ನನಗೆ ಅವರು ಬಂಧುಗಳಾಗಬೇಕು. ಅವರ ಮನೆಯಲ್ಲಿ ಎ. ಆರ್. ಕೃಷ್ಣಶಾಸ್ತ್ರಿ, ತಳಕಿನ ವೆಂಕಣ್ಣಯ್ಯ ಮತ್ತು ಡಾಕ್ಟರ್ ಎ. ಎನ್. ನರಸಿಂಹಯ್ಯ ಇವರು ಮೂವರೂ ಸಂಜೆಯ ವೇಳೆಯಲ್ಲಿ ಸೇರಿ ಸಾಹಿತ್ಯದ ಬಗ್ಗೆ ಬಹಳ ದೀರ್ಘವಾದ ಚರ್ಚೆಗಳನ್ನು ನಡೆಸುತ್ತಿದ್ದರು. ಎಷ್ಟೋಬಾರಿ ನಾನು ಅವರ ಜತೆಯಲ್ಲಿ ಕುಳಿತು ಆಸಕ್ತಿಯಿಂದ ಕೇಳುತ್ತಿದ್ದುದೂ ಉಂಟು. "ಕನ್ನಡಕ್ಕಾಗಿ ಅದು ಮಾಡಬೇಕು, ಇದು ಮಾಡಬೇಕು" ಎಂಬ ಮಾತುಗಳು ತುಂಬಾ ಸಾಮಾನ್ಯವಾಗಿ ಹೇಳುತ್ತಿದ್ದ ಮಂತ್ರ. ಆಗಾಗ ಬಿ. ಎಂ. ಶ್ರೀಕಂಠಯ್ಯನವರ ಹೆಸರೂ ಬರುತ್ತಿತ್ತು. ನನಗೆ ಅವರ ಬಗ್ಗೆ ಏನೂ ತಿಳಿಯದು. ಅಲ್ಲದೆ ಸಾಂಸಾರಿಕ ತಾಪತ್ರಯಗಳಲ್ಲಿ ಸಿಕ್ಕಿದ್ದ ನನಗೆ ಕನ್ನಡ ಸಾಹಿತ್ಯದ ಬಗ್ಗೆ ಆಸಕ್ತಿ ವಹಿಸುವುದು ಸಾಧ್ಯ ಇರಲಿಲ್ಲ. ಎ. ಆರ್. ಕೃಷ್ಣಶಾಸ್ತ್ರಿಗಳು ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ. ಕನ್ನಡ ಪ್ರೊಫೆಸರ ಬಿ. ಎಂ. ಶ್ರೀಕಂಠಯ್ಯ ತಳಕಿನ ವೆಂಕಣ್ಣಯ್ಯ ಇವರೊಂದಿಗೆ ಕೆಲಸ ಮಾಡುತ್ತಿದ್ದಾರೆ ಎಂಬುದಷ್ಟು ಮಾತ್ರ ನನಗೆ ಗೊತ್ತಿತ್ತು. ಆದಾದಮೇಲೂ ಆಗಾಗ ನಾನೂ ಅವರೂ ಸೇರುತ್ತಿದ್ದೆವು, ಮಾತನಾಡುತ್ತಿದ್ದೆವು. ಸಾಂಸಾರಿಕ ಜೀವನದಲ್ಲಿ ಅವರದೇ ಒಂದು ರೀತಿಯದಾಗಿತ್ತು ಎಂಬುದು ನನಗೆ ಚೆನ್ನಾಗಿ ಗೊತ್ತಿತ್ತು. ಆದರೂ ಅವರು ಅಪರೂಪಕ್ಕಾದರೂ ಆ ಬಗ್ಗೆ ಚಕಾರವನ್ನು ಎತ್ತುತ್ತಿರಲಿಲ್ಲ.

ಅನಂತರ ೧೯೪೧ರಲ್ಲಿ ನಾನು ಕೆಲಸದಿಂದ ನಿವೃತ್ತನಾಗಿ ಮೈಸೂರಿಗೆ ಬಂದ ನಂತರ ನನ್ನ ಎರಡನೆಯ ಮಗನನ್ನು ಮಹಾರಾಜಾ ಕಾಲೇಜಿಗೆ ಸೇರಿಸಲು ಬಂದಾಗಲೇ ಕೃಷ್ಣಶಾಸ್ತ್ರಿಗಳನ್ನು ಮತ್ತೆ ಕಂಡುದು. ಆ ವೇಳೆಗೆ ಅವರು ಪ್ರೊಫೆಸರ್ ಆಗಿದ್ದರು. ಬಹಳ ಆದರದಿಂದ ಮಾತಾಡಿಸಿದರು. ಮಗನನ್ನು ಕನ್ನಡ ಆನರ್ಸಿಗೆ ಸೇರಿಸಲು ಅವನು ಕನ್ನಡ ವಿದ್ಯಾರ್ಥಿಯೇ ಅಲ್ಲ, ಸಂಸ್ಕೃತ ವಿದ್ಯಾರ್ಥಿ ಎಂದು ತಿಳಿದನಂತರ ಅವರಿಗೆ ತುಂಬಾ ನಿರಾಸೆಯಾಯಿತು. ಹೇಗೂ ಕನ್ನಡದಲ್ಲಿ ಆಸಕ್ತಿಯುಳ್ಳವನಾಗಲಿ ಎಂದು ಹಾರೈಸಿದರು.

ಅವರ ಹಾರೈಕೆಯ ಫಲವಾಗಿಯೇ ನನ್ನ ಎರಡನೆಯ ಮಗನಿಗೆ ಕನ್ನಡದಲ್ಲಿ ಆಸಕ್ತಿ ಉಂಟಾಯಿತು. ಕನ್ನಡದಲ್ಲಿ ಅವನು ಪದ್ಯ ಬರೆದಾಗ ಅವನನ್ನು ಕರೆಸಿಕೊಂಡು "ನೀನು ನಮ್ಮ ಸದಾಶಿವಯ್ಯನ ಮಗ, ಚೆನ್ನಾಗಿ ಆಸಕ್ತಿಯಿಟ್ಟು ಕನ್ನಡದಲ್ಲಿ ಅಭ್ಯಾಸಮಾಡು. ಕೆಲಸಮಾಡು" ಎಂದು ಆಶೀರ್ವದಿಸಿದರು. ಅವನ ಪದ್ಯಗಳನ್ನು ಪ್ರಬುದ್ಧ ಕರ್ಣಾಟಕದಲ್ಲಿ ಅಚ್ಚುಮಾಡಿದರು. ನನಗೆ ಹೇಳಿಕಳಿಸಿ, ನನ್ನ ಜತೆಯಲ್ಲಿಯೂ ಕನ್ನಡದ ಕೆಲಸದ ಬಗ್ಗೆ ಹೇಳಿದರು. ೧೯೪೩–೧೯೪೪ರಲ್ಲಿ ಇದು ನಡೆದುದು.

ಅನಂತರದ ಅವರ ಸಾರ್ವಜನಿಕ ಜೀವನ, ಸಾಹಿತ್ಯ ಪಾಂಡಿತ್ಯ ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ನನಗೆ ೧೯೪೭ರಿಂದ ೧೯೫೭ರ ವರೆಗೆ ಆಗಾಗ ಸಿಗುತ್ತಲೇ

ಇದ್ದರು. ಅದೆಲ್ಲಾ ಈಚಿನ ವಿಷಯ. ಆದರೆ ನನಗೆ ಚೆನ್ನಾಗಿ ನೆನಪಿರುವುದು ಚಿಕ್ಕವಯಸ್ಸಿನಲ್ಲಿ ಎಂದರೆ ಈಗ ೭೦ ವರ್ಷಗಳ ಹಿಂದೆ ನಾನು ನೋಡಿದ್ದ ಚಿಕ್ಕ ಹುಡುಗ, ನನ್ನ ಜತೆಗೆ ಸಂಸ್ಕೃತ ಕಲಿತ ಹುಡುಗ, ಅನಂತರ ಐದು ತಿಂಗಳ ಕಾಲ ನನ್ನ ಜತೆ ಕೆಲಸಮಾಡಿ, ಕಚೇರಿಯಲ್ಲಿ ಆಪ್ತನಾಗಿದ್ದ ಸಹಚರ, ಸ್ನೇಹಿತ—ಆ ಕಾಲದ ನನ್ನ ನೆನಪುಗಳು ನನಗೆ ಇಂದಿಗೂ ಅಮೃತಪ್ರಾಯವಾಗಿವೆ.

ಈಗ ನನಗಿಂತಲೂ ಐದಾರುವರ್ಷ ವಯಸ್ಸಿಗೆ ಚಿಕ್ಕವರಾಗಿದ್ದ ಅಂಬಳೆ ಆರ್. ಕೃಷ್ಣಶಾಸ್ತ್ರಿಗಳು ಸ್ವರ್ಗಸ್ಥರಾದ ಸುದ್ದಿಕೇಳಿ ಈ ಕೆಲವು ಹಳೆಯ ನೆನಪುಗಳು ಮರುಕಳಿಸಿದುವು. ನನಗೂ ೮೪ ವರ್ಷಗಳಾದುದರಿಂದ ಇನ್ನೆಷ್ಟು ದಿನ ತಾನೇ ಈ ನೆನಪುಗಳು ಉಳಿದಾವು? ಹಾಗೆಂದು ಇವುಗಳನ್ನು ನನ್ನ ಎರಡನೆಯ ಮಗನಿಗೆ ಹೇಳಿ ಬರೆಸಿದೇನೆ.[1]

[1] ಈ ನೆನಪು ಬರೆದುಕೊಂಡುದು: ಎಸ್. ಅನಂತನಾರಾಯಣ

## ಶಾಸ್ತ್ರಿಗಳ ಬೋನು

"ತಿಂಡಿ ತಿಂದದ್ದಾಯಿತೊ? ಕಾಫಿ ಕುಡಿದದ್ದಾಯಿತೊ?"

"ಆಯ್ತು, ಸರ್."

"ಕೋ, ಬಾಯಲ್ಲಿ ಹಾಕಿಕೊ" ಎಂದು ಎರಡು ಬಾದಾಮಿ ಪೆಪ್ಪರ್‌ಮಿಂಟ್‌ಗಳನ್ನು ಕೊಟ್ಟು, "ಕ್ಲಾಸುಗಳ ಟೈಮ್‌ಟೇಬಲ್ ಬರೆದುಕೊಂಡಿದ್ದೀಯೊ?" ಎಂದರು.

"ಇದೆ, ಸರ್".

"ಕನ್ನಡ ಕ್ಲಾಸುಗಳದು?"

"ಅದೂ ಇದೆ, ಸರ್."

"ಪಠ್ಯಪುಸ್ತಕಗಳನ್ನು ಕೊಂಡುಕೊಂಡಿದ್ದೀಯೊ?"

"ಹೂಂ, ಸರ್"

"ಸ್ವಯಮಾಚಾರ್ಯನಾಗಬೇಕೆಂದಿದ್ದೀಯೊ?"

ಸುಳ್ಳು ಹೇಳಿ ತಪ್ಪಿಸಿಕೊಳ್ಳುವುದಕ್ಕೆ ಹೋಗಿ ಇನ್ನೇನಾದರೂ ಅನಾಹುತಗಳಾಗಬಹುದೆಂಬ ಹೆದರಿಕೆಯಿಂದ ಸುಮ್ಮನಿದ್ದೆ.

"ಶ್ರೀಕಂಠಯ್ಯನವರ ಕ್ಲಾಸಿಗೆ ತಪ್ಪದೆ ಹೋಗುತ್ತೀಯಂತೆ! ನಿನ್ನ ಡಿಪಾರ್ಟ್‌ಮೆಂಟಿನಲ್ಲಿ ಎಲ್ಲ ತರಗತಿಗಳಿಗೂ ಹೋಗುತ್ತೀಯಂತೆ! ಸಿ. ಆರ್. ನಾರಾಯಣರಾಯರ ಕ್ಲಾಸುಗಳಿಗೆ ಹಾಜರಾಗುತ್ತೀಯಂತೆ! ಕನ್ನಡಕ್ಕೆ ಮಾತ್ರ ಯಾಕಪ್ಪ– ಈ ಅನಾದರಣೆ ಎನ್ನಲೆ? ಅವಮರ್ಯಾದೆ ಎನ್ನಲೆ? ..."

ಇಷ್ಟೊಂದು ಸತ್ಯಾಂಶಗಳನ್ನು ಸಂಗ್ರಹಿಸಿಟ್ಟುಕೊಂಡಿದ್ದವರ ಹತ್ತಿರ ನನ್ನ ಆಟ ಏನು ತಾನೆ ನಡೆದೀತು? "ಇನ್ನು ಮೇಲೆ ಸರಿಯಾಗಿರುತ್ತೇನೆ, ಸರ್, ಕ್ಷಮಿಸಬೇಕು" ಎಂದೆ.

ಸುಳಿ ನಗೆಯೊಂದಿಗೆ "ಈಗೆಲ್ಲಪ್ಪ ಕ್ಷಮಿಸುವುದು! ಈ ವರ್ಷ ನೀನು ಕರ್ಣಾಟಕ ಸಂಘದ ಕಾರ್ಯದರ್ಶಿಯಾಗಿ ಕೆಲಸಮಾಡಿದ ಮೇಲೆ ಕ್ಷಮಿಸುತ್ತೇನೆ. ಮುಂದಿನ ಎರಡು ವರ್ಷ ನಿನ್ನ ಮುಖ್ಯ ಸಬ್ಜೆಕ್ಟ್ ಬೆಳೆದು ಬಿಡುತ್ತದೆ; ಪರೀಕ್ಷೆಗಳೂ ಬಂದು ಬಿಡುತ್ತವೆ. ಆದ್ದರಿಂದ ಈ ವರ್ಷವೇ ಕಾರ್ಯದರ್ಶಿಯಾಗಿಬಿಡು" ಎಂದರು.

ಭೇಟಿಯ ಮೊದಲನೇ ಭಾಗವನ್ನು ಮಾತ್ರ ಊಹಿಸಿಕೊಂಡಿದ್ದೆ; ಎರಡನೆಯದನ್ನು ನಿರೀಕ್ಷಿಸಿರಲಿಲ್ಲ. ದಿಗ್ಭ್ರಾಂತನಾದೆ.......

—ಬಿ. ಜಿ. ಎಲ್. ಸ್ವಾಮಿ

('ಪಂಚಕಲಶ ಗೋಪುರ', ಪು. ೮೧–೮೨)

ಎಂ. ವಿ. ಸೀತಾರಾಮಯ್ಯ

# ಪೂಜ್ಯ ಕೃಷ್ಣಶಾಸ್ತ್ರಿಗಳಿಂದ ನಾನು ಕಲಿತಪಾಠ

" ಕನ್ನಡದ ಕೃಷಿಯಿಂತು ಎಂದು ತೋರಿದ
ಕರ್ಮಯೋಗಿ ಗುರುವಿನ್ನೊಬ್ಬ "

—'ಮುಗಿಯದವಾಯೆ'ಯಲ್ಲಿ.

ನನ್ನ 'ಗುರುಪರಂಪರೆ'ಯಲ್ಲಿ ದಿವಂಗತ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಕಂಡುಬಂದಿರುವುದು ಹೀಗೆ. ಅವರು ನನಗೆ ಕಾಲೇಜಿನ ತರಗತಿಗಳಲ್ಲಿ ಪ್ರತ್ಯಕ್ಷವಾಗಿ ಪಾಠ ಹೇಳಿದ ಗುರುಗಳಲ್ಲ. ಆದರೂ, ಎಂದಿನಿಂದಲೂ ಅವರು ನನಗೆ ಗುರುಸ್ಥಾನೀಯರು, ಪೂಜ್ಯರು. ಇದಕ್ಕೆ ಒಂದು ಕಾರಣ, ಅವರು ನನ್ನ ಗುರುವರ್ಯರಾದ ದಿವಂಗತ ಟಿ.ಎಸ್. ವೆಂಕಣ್ಣಯ್ಯನವರ ಆತ್ಮೀಯ ಮಿತ್ರರೆಂಬುದು. ಪೂಜ್ಯ ಮಾಸ್ತಿಯವರು ವೆಂಕಣ್ಣಯ್ಯನವರನ್ನೂ ಕೃಷ್ಣಶಾಸ್ತ್ರಿಗಳನ್ನೂ ಕನ್ನಡದ ಅಶ್ವಿನೀದೇವತೆಗಳೆಂದು ಕರೆದಿರುವುದು ಕನ್ನಡದ ಅಭಿಮಾನಿಗಳಲ್ಲಿ ಈಗ ಮನೆಮಾತು. ವೆಂಕಣ್ಣಯ್ಯನವರ ಶಿಷ್ಯನಾದ ಮೇಲೆ ಕೃಷ್ಣಶಾಸ್ತ್ರಿಗಳ ಶಿಷ್ಯನಾದಂತೆಯೆ; ಕೃಷ್ಣಶಾಸ್ತ್ರಿಗಳ ಶಿಷ್ಯರೆಲ್ಲ ವೆಂಕಣ್ಣಯ್ಯನವರ ಶಿಷ್ಯರು. ಈ ಮಾತಿನಲ್ಲಿ ಅತಿಶಯೋಕ್ತಿಯಿಲ್ಲ. ಈ ಇಬ್ಬರು ಮಹನೀಯರ ದೇಹವೆರಡರಲ್ಲಿ ಆಡುತ್ತಿದ್ದುದು ಒಂದೇ ಕನ್ನಡದ ಉಸಿರು—ದಿವಂಗತ ಆಚಾರ್ಯ ಬಿ. ಎಂ. ಶ್ರೀ. ಯವರು ತುಂಬಿದ್ದು. ಎಂದಮೇಲೆ, ನಾನು ಕೃಷ್ಣಶಾಸ್ತ್ರಿಗಳ ಶಿಷ್ಯ ಅಲ್ಲವಾದೇನು ಹೇಗೆ? ಇಷ್ಟಕ್ಕೇ ಮುಗಿದಿದ್ದರೆ, ಈ ಮಾತು ಅತಿಶಯೋಕ್ತಿ ಅಲ್ಲವಾದರೂ ಅಭಿಮಾನದ್ದು ಎನ್ನಿಸೀತು. ಆದ್ದರಿಂದ, ನಾನು ಕೃಷ್ಣಶಾಸ್ತ್ರಿಗಳ ಶಿಷ್ಯ ಎಂದು ಹೆಮ್ಮೆಯಿಂದ ಹೇಳಿಕೊಳ್ಳಲು ಇನ್ನೊಂದು ಬಲವಾದ ಕಾರಣ ಇದೆ: ಅದು, ಅವರು ನನಗೆ ಕಲಿಸಿದ ಕನ್ನಡ ಸೇವೆಯ ಕಸರತ್ತು.

ಕಸರತ್ತು ಎನ್ನುವ ಮಾತು ಕೃಷ್ಣಶಾಸ್ತ್ರಿಗಳ ವಿಷಯದಲ್ಲಿ ಸಾರ್ಥಕ ವಿಶೇಷಣ: ಕನ್ನಡದ ಗರಡಿಗೆ ಮಾತ್ರವಲ್ಲದೆ, ನಿಜವಾದ ಗರಡಿಗೂ ಅವರು 'ಮಣ್ಣು ಹೊರುವ ಕೆಲಸ'ದಲ್ಲಿ ಮುಂದಾಳು. ಅವರು ವಾಸ್ತವವಾಗಿಯೂ ಗರಡಿ ಸಾಧನೆ ಮಾಡಿದ ಕಟ್ಟಾಳು. ಅವರು ಕೆಲವು ವರ್ಷಕಾಲ ಮೈಸೂರು

ಮಹಾರಾಜಾ ಕಾಲೇಜಿನ 'ಗರಡಿ ಮನೆ'ಯ ಮೇಲ್ವಿಚಾರಕರಾಗಿದ್ದುಕೊಂಡು ತಾವೂ ಸಾಧನೆ ಮಾಡಿ, ವಿದ್ಯಾರ್ಥಿಗಳಿಗೂ ಸಾಧನೆಯ ಗುರುಗಳಾಗಿದ್ದರು ಎಂದು ಕೇಳಿಬಲ್ಲೆ. ಆ ಗರಡಿಯಲ್ಲಿ ನಾನು ಅವರ ಕೈಲಿ ತರಪೇತಿ ಪಡೆಯಲಿಲ್ಲ. ಒಂದು ವೇಳೆ ಪಡೆದಿದ್ದರೂ, ಅವರ ಉನ್ನತ ವಕ್ಷಸ್ಥಲ, ಧೀರವಾದ ನಿಲುವು, ದಿಟ್ಟ ಹೆಜ್ಜೆ ಇವು ನನಗೆ ಲಭಿಸುತ್ತಿರಲಿಲ್ಲ. ಅವರ ಉಕ್ಕಿನ ಮೈಕಟ್ಟು ಕೂಡ ಪೂರ್ತಿಯಾಗಿ ಸಾಧನೆಯಿಂದ ಬಂದದ್ದಲ್ಲ, ಹುಟ್ಟಿನಿಂದಲೇ ಬಂದದ್ದು; ಸಾಧನೆಯಿಂದ ಅದಕ್ಕೆ ತಕ್ಕ ಹದ ಬಂದಿತ್ತು. ಹೀಗೆ ಆರೋಗ್ಯ ದೃಢಕಾಯರಾಗಿದ್ದುದರಿಂದಲೇ ಅವರು ಅಹರ್ನಿಶಿ ಅವಿಶ್ರಾಂತರಾಗಿ ಕನ್ನಡಕ್ಕಾಗಿ ದುಡಿಯಲು ಸಾಧ್ಯವಾಗಿದ್ದದ್ದು. ಇಂಥ ಕನ್ನಡದ ಕಲಿ ರುಗ್ಣಶಯ್ಯೆಯಲ್ಲಿದ್ದಾಗ, ಹುಟ್ಟುರೋಗಿಯಾದ ನಾನು ಕೂಡ ಅವರಿಗೆ ಧೈರ್ಯದ, ಸಮಾಧಾನದ, ಮಾತು ಹೇಳಬೇಕಾದ ವಿಪರ್ಯಾಸವೂ ನಡೆದುಹೋಯಿತು. ಅವರು ತಮ್ಮ ಐವತ್ತನೆಯ ವಯಸ್ಸಿನಲ್ಲಿ ತೀರಿಕೊಂಡದ್ದು, ಅವರ ವಿಷಯದಮಟ್ಟಿಗೆ ಅಕಾಲಮೃತ್ಯು ಎಂದೇ ಹೇಳಬೇಕು.

ನಿಜವಾದ ಗರಡಿಯಲ್ಲಿ ನಾನು ಅವರ ಶಿಷ್ಯತ್ವವನ್ನು ಮಾಡದಿದ್ದರೂ, ಕನ್ನಡದ ಗರಡಿಯಲ್ಲಿ ಕೆಲವು ವರ್ಷ ಅವರ ಶಿಷ್ಯತ್ವಮಾಡುವ ಸುಯೋಗ ನನ್ನದಾಗಿತ್ತು. ಅಂದು ಕನ್ನಡಸಾಹಿತ್ಯಪರಿಷತ್ತು ಕನ್ನಡದ ಗರಡಿಯೇ ಆಗಿತ್ತು. ಒಂದು ತತ್ತ್ವಕ್ಕಾಗಿ, ಒಂದು ನಿಷ್ಠೆಗಾಗಿ, ಒಂದು ಗುರಿಗಾಗಿ ಪರಿಷತ್ತಿನ ವೇದಿಕೆಯಿಂದ ಅಂದು ಕೇಳಿಬರುತ್ತಿದ್ದ ಸಿಂಹಗರ್ಜನೆ ಇಂದು ಕೇಳಿಬರುತ್ತಿಲ್ಲ. ದಿವಂಗತ ಬಿ. ಎಂ. ಶ್ರೀ. ಯವರು ಪರಿಷತ್ತಿನ ಉಪಾಧ್ಯಕ್ಷರಾದಮೇಲೆ, ಕನ್ನಡದ ಪಾಂಚಜನ್ಯವನ್ನು ಅವರು ಕೈಗೆತ್ತಿಕೊಂಡರು. ಅದಕ್ಕೆ ಮುಂಚೆ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಡಾ. ಡಿ. ವಿ. ಗುಂಡಪ್ಪನವರು ಪರಿಷತ್ತನ್ನು ಬಲಪಡಿಸುವ, ಪರಿಷತ್ತಿನ ಹೆಸರನ್ನು ನಾಡಿನ ಮೂಲೆಮೂಲೆಗೆ ಹರಡುವ, ಬಹುಮುಖವಾದ ಯೋಜನೆಯನ್ನು ಹಾಕಿಕೊಂಡು, ಅದನ್ನು ಕಾರ್ಯರೂಪಕ್ಕೆ ತರುವ ಹಿರಿಯ ಹೊಣೆಗಾರಿಕೆಗೆ ಹೆಗಲು ಕೊಟ್ಟಿದ್ದರು. ಹೊಸದಾಗಿ ಹಳಗನ್ನಡ ಹೊಸಗನ್ನಡ ಗ್ರಂಥಗಳನ್ನು ಪ್ರಕಟಿಸುವ ಸಾಹಸದ ಕಾರ್ಯದಲ್ಲಿ ತೊಡಗಲು ಪರಿಷತ್ತಿನ ಹಣಕಾಸಿನ ಪರಿಸ್ಥಿತಿ ಉತ್ತೇಜಕವಾಗಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಪಾಂಡಿತ್ಯ ಸಂವರ್ಧನೆಯ ಏಕೈಕ ಸಾಧನವಾಗಿ ಪರಿಷತ್ತಿನ ಕೈಲಿದ್ದದ್ದು ಪರಿಷತ್‌ಪತ್ರಿಕೆಯೊಂದೇ. ಅದರ ಘನತೆಯೂ ಇಳಿಮುಖವಾಗಿತ್ತು; ಸಂಪಾದಕೀಯ ವಿಭಾಗ ಸಪ್ಪೆಯಾಗಿತ್ತು; ವಿಮರ್ಶಾವಿಭಾಗ ವ್ಯಾಕರಣದೋಷಗಳನ್ನೂ ಮುದ್ರಣದೋಷಗಳನ್ನೂ ಪಟ್ಟಿ ಮಾಡಿ ತಿಳಿಸುವ ಪರಿಪಾಠಕ್ಕೇ ಇನ್ನೂ ಅಂಟಿಕೊಂಡಿತ್ತು. ವಿಶಾಲಕನ್ನಡ ಲೋಕದ ಆಗುಹೋಗುಗಳಿಗೆ, ವಿದ್ವತ್ ಪ್ರಪಂಚದ ಪ್ರಚಲಿತ ವಿಚಾರ ವಿಮರ್ಶೆಗೆ ಪರಿಷತ್‌ಪತ್ರಿಕೆ ತನ್ನ ಪುಟಗಳನ್ನು ತೆರೆದಿಡಲು ಅಸಮರ್ಥವಾಗಿತ್ತು. ಪತ್ರಿಕೆಯ ಬದುಕಿನ ಈ ಪರ್ವಕಾಲದಲ್ಲಿ ಪೂಜ್ಯ ಕೃಷ್ಣಶಾಸ್ತ್ರಿಗಳ ಕೈಸೆರೆವಾಗಿದ್ದುದು

ಪರಿಷತ್ತಿನ ಪುಣ್ಯ. ಪ್ರಬುದ್ಧ ಕರ್ಣಾಟಕವನ್ನು ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ ೧೯೩೦ರಲ್ಲಿಯೇ ವಹಿಸಿ ಕೊಟ್ಟಿದ್ದರು. ೧೯೩೩ರಲ್ಲಿ ಪೂಜ್ಯ ಡಾ. ಡಿ. ವಿ. ಗುಂಡಪ್ಪನವರು ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆಗೊಂಡು ಪರಿಷತ್ತಿಗೆ ಕಾಯಕಲ್ಪವನ್ನು ಮಾಡುವ ಧನ್ವಂತರಿಯಾಗಿ ದೀಕ್ಷೆವಹಿಸಿ ನಿಂತ ಮೇಲೆ, ಪರಿಷತ್ತಿನ ಮುಖಪತ್ರಿಕೆಗೆ ಹೊಸ ಮುಖವನ್ನು ಕೊಡುವ ಕಾರ್ಯಭಾರವನ್ನು ಕೃಷ್ಣಶಾಸ್ತ್ರಿಗಳ ಮೇಲೆ ಹೊರಿಸಿದರು. ಆಗ, ೧೯೩೪ ಫೆಬ್ರುವರಿ ತಿಂಗಳಲ್ಲಿ, ನಾನು ಪರಿಷತ್ತಿನ ಸಹಾಯಕ ಕಾರ್ಯದರ್ಶಿ ಎಂದು ನೇಮಕಗೊಂಡಿದ್ದೆ. ನನ್ನ ಮೇಲಧಿಕಾರಿಗಳಾಗಿದ್ದ ಗುಂಡಪ್ಪನವರು (ಪರಿಷತ್ಪತ್ರಿಕೆಯ ಸಂಪಾದಕ ಮಂಡಲಿಯ ಅಧ್ಯಕ್ಷರು) ಪತ್ರಿಕಾ ಸಂಪಾದಕರಾದ ಕೃಷ್ಣಶಾಸ್ತ್ರಿಗಳಿಗೆ ಸಹಾಯಕನಾಗಿ ಕೆಲಸ ಮಾಡಬೇಕೆಂದು ಆದೇಶ ನೀಡಿದರು; ಸಹಾಯಕ ಕಾರ್ಯದರ್ಶಿಯ ಸ್ಥಾನದಲ್ಲಿ ಕನ್ನಡ ಎಂ. ಎ. ಪದವೀಧರನನ್ನು ಪರಿಷತ್ತಿಗೆ ನೇಮಕಮಾಡಿಕೊಂಡ ಉದ್ದೇಶವೂ ಅದೇ ಆಗಿತ್ತು—ಪರಿಷತ್ತಿನ ಪ್ರಕಟನ ಕಾರ್ಯಕಲಾಪಗಳಿಗೆ ನೆರವಾಗುವುದು.

ಪರಿಷತ್‌ಪತ್ರಿಕೆಯ ಸಂಪಾದನ ಕಾರ್ಯದಲ್ಲಿ ನಾನು ಅವರಿಗೆ ಎಷ್ಟರ ಮಟ್ಟಿಗೆ ನೆರವಾದೆನೋ ಬಿಟ್ಟೆನೋ ಅದನ್ನು ವಿವರಿಸುವ ಗೋಜಿಗೆ ನಾನು ಇಲ್ಲಿ ಹೋಗುವುದಿಲ್ಲ. ನಾನು ಅವರಿಗೆ ನೀಡಿದ ನೆರವಿಗಿಂತ, ಅವರಿಂದ ಕಲಿತ ಪಾಠವೆ ಹೆಚ್ಚು. ಸ್ವಂತ ಕೆಲಸವೇ ಆಗಲಿ ಇನ್ನೊಬ್ಬರ ಕೆಲಸವೇ ಅಗಲಿ, ಅದರಲ್ಲಿಯೂ ಮುಖ್ಯವಾಗಿ ಸಾರ್ವಜನಿಕ ಸಂಘ ಸಂಸ್ಥೆಗಳಲ್ಲಿ ಕೆಲಸ ಮಾಡುವಾಗ, ಪ್ರತಿಫಲಾಪೇಕ್ಷೆಯಿಲ್ಲದೆ ದುಡಿಯಬೇಕು ಎಂಬ ನೀತಿಯನ್ನು 'ನಡೆದು' ತೋರಿಸಿಕೊಟ್ಟವರಲ್ಲಿ ಅವರು ಮುಖ್ಯರು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವನ್ನು ಅವರು ಕಟ್ಟಿ ಬೆಳಸಿದ್ದನ್ನು ಕೇಳಿ ಬಲ್ಲವನಾಗಿದ್ದೆ. ವಿದ್ಯಾರ್ಥಿಗಳನ್ನು ಮುಂದೆ ಬಿಟ್ಟುಕೊಂಡು, ತಾವು ಹಿಂದೆ ನಿಂತು ಅವರ ಪರವಾಗಿ ದುಡಿದು ಕೀರ್ತಿಯನ್ನೆಲ್ಲ ಅವರ ತಲೆಗೇ ಮುಡಿಸುವ ಹಿರಿಯತನವನ್ನು ಕಣ್ಣಾರೆ ಕಂಡೆ; ಕಲಿತೆ. ಅವರು ಪ್ರೊಫೆಸರಾಗಿ ಮೈಸೂರಿಗೆ ವರ್ಗಪಟ್ಟು ಹೋಗುವವರೆಗೆ, ಪರಿಷತ್ತಿನಲ್ಲಿ ತಮ್ಮ ಸಹಾಯಕನಾಗಿದ್ದ ನನ್ನನ್ನು ಕರ್ಣಾಟಕಸಂಘದ ವಾರ್ಷಿಕೋತ್ಸವಗಳಿಗೆ ತಪ್ಪದೆ ಆಹ್ವಾನಿಸುತ್ತಿದ್ದರು. ಆ ವಾರ್ಷಿಕೋತ್ಸವಗಳು ಹಬ್ಬದ ಹಾಗೆ ನಡೆಯುತ್ತಿದ್ದವು. ಒಂದು ಸಲ, ಆಗ ವಿದ್ಯಾರ್ಥಿಯಾಗಿದ್ದ ಡಾ. ಎನ್. ಎಸ್. ವೀರಪ್ಪನವರ ('ಚಾರ್ಲ್ಸ್ ಡಾರ್ವಿನ್' ಗ್ರಂಥದ ಲೇಖಕರು) ಕವನಗಳ ವಾಚನವನ್ನು ಏರ್ಪಡಿಸಿ, ಆ ವಾಚನಸಮಾರಂಭಕ್ಕೆ ನನ್ನನ್ನು ಅಧ್ಯಕ್ಷ ಎಂದು ಗೌರವಿಸಿದ್ದರು. ('ವೀರಪ್ಪ ಕವಿಯಾಗಿ ಮುಂದೆ ಬರಬೇಕು, ನೀನು ಸಭೆಯ ಅಧ್ಯಕ್ಷತೆ ವಹಿಸುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು. ನಾವೆಲ್ಲ ಮುದುಕರಾಗಿ ಮನೆಯಲ್ಲಿ ಕೂತಮೇಲೆ ನೀವು ತಾನೆ ಮುಂದೆ ಬಂದು ಕನ್ನಡದ ಕೆಲಸ ಮಾಡ

ಬೇಕಾದವರು?'—ಅಧ್ಯಕ್ಷನಾಗಲು ನಾನು ಸಂಕೋಚವನ್ನು ವ್ಯಕ್ತಪಡಿಸಿದಾಗ, ಅವರು ನನ್ನ ಮುಂದಿಟ್ಟ ಪ್ರಶ್ನೆ ಇದು.)

ಇಲ್ಲಿನ ಸರ್ಕಾರದ ಕಾಲೇಜಿನ ಕನ್ನಡ ವಿಭಾಗದ ಮುಖ್ಯ ಎಂದಾದ ಮೇಲೆ, ಅಂದಿನಿಂದ ನಾನು ನಿವೃತ್ತನಾಗುವವರೆಗೆ (೧೯೫೫–೧೯೬೭) ಕಾಲೇಜಿನ ಕರ್ಣಾಟಕ ಸಂಘವನ್ನು ಕಟ್ಟಿ ಬೆಳಸುವ ಸೇವಾಕಾರ್ಯಕ್ಕೆ ಸ್ಫೂರ್ತಿಶಕ್ತಿಯಾಗಿದ್ದವರು ಪೂಜ್ಯ ಶಾಸ್ತ್ರಿಗಳು; ಮೇಲ್ಪಂಕ್ತಿಯಾಗಿದ್ದವರು, ಪೂಜ್ಯ ಗುರುಗಳ ಹಾದಿಯನ್ನೆ ಹಿಡಿದು ಅವರು ಕಟ್ಟಿದ ಸಂಘವನ್ನು ಅದೇ ನಿಟ್ಟಿನಲ್ಲಿ ನಡಸಿಕೊಂಡು ಬಂದ ಅಣ್ಣ, ರಾಜರತ್ನಂ ಅವರು. 'ಅಹಂಕರೋವಿಮಾತಿ ವೃಥಾಭಿಮಾನಃ' ಎಂಬುದು ಶಾಸ್ತ್ರಿಗಳ ಬದುಕಿನ ಧ್ಯೇಯವಾಕ್ಯ; ಅದನ್ನು 'ಹೇಳಿ' ಕೊಡದೆ 'ಮಾಡಿ' ಕಲಿಸಿದ ಮಹನೀಯರು ಅವರು. ಅವರ ಕೆಲಸ ಕಾರ್ಯಗಳಲ್ಲಿ ಅಹಂಕಾರ ನಿರಸನವಿತ್ತೇ ಹೊರತು, ಬೂಟಾಟಿಕೆಯ ಆತ್ಮನಿರಸನವಿರಲಿಲ್ಲ. 'ಪ್ರಬುದ್ಧ ಕರ್ಣಾಟಕ'ಕ್ಕಾಗಿ ತಾವು ಮಾಡಿದ ಕೆಲಸದ ಬಗೆಗೆ ಅವರೇ ಹೀಗೆ ಹೇಳಿ ಕೊಂಡಿದ್ದಾರೆ:

"ಪತ್ರಿಕೆಯು ಆರಂಭವಾದಂದಿನಿಂದ ಹದಿಮೂರು ವರ್ಷ ನಾನೇ ಸಂಪಾದಕನಾಗಿದ್ದೆ. ಆದರೆ ಮೊದಲ ಒಂದೆರಡು ಸಂಪುಟಗಳಲ್ಲಿ ಹೊರತು ನನ್ನ ಹೆಸರು ಸಂಪಾದಕನೆಂದು ಎಲ್ಲಿಯೂ ಕಂಡುಬರುವುದಿಲ್ಲ. ನಾನು ಸಂಪಾದಕನೆಂದು ಮ್ಯಾಜಿಸ್ಟ್ರೇಟರ ಮುಂದೆ ಹೇಳಿಕೆ ಕೊಟ್ಟಿದ್ದರೂ, ಸಂಪಾದಕರ ಮತ್ತು ಪ್ರಕಾಶಕರ ಹೆಸರನ್ನು ಹಾಕಿಯೇ ಹಾಕಬೇಕೆಂಬ ನಿರ್ಬಂಧವಿಲ್ಲದ್ದರಿಂದಲೂ ನನ್ನ ಹೆಸರಿಗಿಂತಲೂ ಸಂಘದ ಹೆಸರು ಮುಂದಕ್ಕೆ ಬರಬೇಕೆಂಬುದು ನನ್ನ ಉದ್ದೇಶವಾಗಿದ್ದದ್ದರಿಂದಲೂ, ಲೇಖನದಲ್ಲಿ ತಿರುಳಿದ್ದರೆ ಅದರಿಂದ ಪತ್ರಿಕೆಗೆ ಹೆಸರು ಬರುತ್ತದೆಯೇ ಹೊರತು ಸಂಪಾದಕನ ಅಧಿಕಾರ ಶ್ರೀಮಂತಿಕೆಗಳಿಂದಲ್ಲವೆಂಬ ಒಂದು ದೃಢ ವಿಶ್ವಾಸವಿದ್ದದ್ದರಿಂದಲೂ ನನ್ನ ಹೆಸರನ್ನು ನಾನು ಪ್ರಕಟಿಸುತ್ತಿರಲಿಲ್ಲ. ಹೆಸರಿಲ್ಲದೆ, ಅಥವಾ ಬೇರೆಬೇರೆ ಹೆಸರಿನಿಂದ, ನಾನು ಪ್ರಬುದ್ಧ ಕರ್ಣಾಟಕಕ್ಕೆ ಎಷ್ಟೋ ಸಣ್ಣ ದೊಡ್ಡ ಲೇಖನಗಳನ್ನು ಬರೆದಿದ್ದೇನೆ; ಆದರೆ ಜವಾಬುದಾರಿ ಹೊರಬೇಕೆಂದಾಗ ನನ್ನ ಹೆಸರನ್ನು ಹಾಕುವುದಕ್ಕೆ ಎಂದೂ ಹಿಂತೆಗೆದಿಲ್ಲ." (ಪ್ರಬುದ್ಧ ಕರ್ಣಾಟಕದ ಬೆಳ್ಳಿಯ ಸಂಚಿಕೆ: ಪ್ರಬುದ್ಧ ಕರ್ಣಾಟಕದ ಹುಟ್ಟು ಮತ್ತು ಬೆಳವಣಿಗೆ: ಪು. ೧೯).

ಮೇಲಿನ ಮಾತುಗಳು ಅವರ ಪರಿಷತ್ಪತ್ರಿಕಾ ಸಂಪಾದಕತ್ವಕ್ಕೂ ಅನ್ವಯಿಸುತ್ತವೆ. ಹದಿಮೂರು ವರ್ಷ ಪ್ರಬುದ್ಧ ಕರ್ಣಾಟಕದ ಸಂಪಾದಕರಾಗಿ ದುಡಿದ ಮೇಲೆ, "ದೇವರು ಆ ಕಾಲದಲ್ಲಿ ನನಗೆ ಸ್ವಲ್ಪ ಬಿಡುವು ಕೊಟ್ಟು ಬೇರೆ ಕೆಲಸ ಮಾಡಿಸಿದ; ಆದರೆ ಆ ಬಿಡುವು ಇದ್ದದ್ದು ಕೆಲವು ವರ್ಷ ಮಾತ್ರ: 'ಸಂಸ್ಕೃತ ನಾಟಕ' ಬರೆದು ಮುಗಿಯುವವರೆಗೆ. ಈ ಮಧ್ಯೆ ಪರಿಷತ್ಪತ್ರಿಕೆಯ ಸಂಪಾದಕತ್ವ

ಒದಗಿತು. ಅದನ್ನು ಉತ್ತಮಗೊಳಿಸಬೇಕೆಂಬ ಆದರ್ಶವಾದಿಗಳ ಮಧ್ಯದಲ್ಲಿ ದುಡಿಯಬೇಕಾಯಿತು"—ಇದೂ ಕೃಷ್ಣಶಾಸ್ತ್ರಿಗಳ ಮಾತೇ. ಬಿ. ಎಂ. ಶ್ರೀ., ಡಿ. ವಿ. ಜಿ., ಎಂ. ಆರ್. ಶ್ರೀ., ವಿ. ಸೀ.-ಇವರುಗಳೇ ಆ ಆದರ್ಶವಾದಿಗಳು. ಇದರಿಂದ, ಪೂಜ್ಯ ಎ. ಆರ್. ಕೃ. ಆದರ್ಶವಾದಿ ಅಲ್ಲ ಎಂದು ತಿಳಿಯತಕ್ಕದ್ದಲ್ಲ. 'ಪರಿಷತ್ಪತ್ರಿಕೆಗಾಗಿ ನಾನು ಮಾಡಿದ್ದು ಏನೂ ಇಲ್ಲ, ಇತರರ ಆದರ್ಶವನ್ನು ಕಾರ್ಯರೂಪಕ್ಕೆ ತಂದದ್ದಷ್ಟೆ ನನ್ನ ಕೆಲಸ' ಎಂಬ ನಿರ್ಮಮತೆಯ ಧ್ವನಿ ಆ ಮಾತಿನ ಒಂದು ಕಡೆಯಿಂದ ಹೊರಟರೆ, ಸಂಪಾದಕ ಮಂಡಲಿ ಹಾಕಿಕೊಟ್ಟ ಚೌಕಟ್ಟಿನ ನಿರ್ಬಂಧಕ್ಕೆ ಸಿಲುಕಿ ಕಾರ್ಯ ಮಾಡಬೇಕಾಯಿತು ಎಂಬ ಧ್ವನಿ ಇನ್ನೊಂದು ಕಡೆಯಿಂದ ಹೊರಡುತ್ತದೆ. ಪ್ರಬುದ್ಧ ಕರ್ಣಾಟಕವೂ ಮೈಸೂರು ವಿಶ್ವವಿದ್ಯಾನಿಲಯದ ಕೈಗೆ ಹೋದಮೇಲೆ (೧೯೩೨), ಅದರ ಅಧಿಕಾರಿಗಳು "ಪ್ರಬುದ್ಧ ಕರ್ಣಾಟಕವೂ ತನ್ನ ಕಾಲಮೇಲೆ ತಾನು ನಿಂತು ತನ್ನ ಅನ್ನವನ್ನು ತಾನು ಗಳಿಸಿಕೊಂಡು ಜೀವಿಸಬೇಕೆಂದು ಅಪ್ಪಣೆಮಾಡಿದರು. ಸರ್ಕಾರದ ಇಲಾಖೆಗೆ ಸೇರಿದ್ದರಿಂದ ನಾನಾ ನಿಯಮಗಳಿಗೆ ಬದ್ಧರಾಗಿ, ಹತ್ತಾರು ಜನಗಳಿಗೆ ಉತ್ತರವಿತ್ತು, ಸ್ವತಂತ್ರವಾಗಿ ಯಾವ ಪ್ರಯೋಗಗಳನ್ನೂ ಮಾಡಲಾರದೆ, ಕೊಲ್ಲಲಾರದೆ ಕಾಪಾಡಲಾರದೆ, ಕೆಲವು ಕಾಲ ಪತ್ರಿಕೆಯನ್ನು ಒಂದು ನಿರ್ಬಂಧದಲ್ಲಿ ನಡಸಿಕೊಂಡು ಬರಬೇಕಾಯಿತು; ಇದರ ಪೂರ್ಣ ಅನುಭವ ಬಂದದ್ದು ಕೆಲವು ವರ್ಷಗಳ ಮೇಲೆ".

ಈ ಹಿನ್ನೆಲೆಯಲ್ಲಿ, ಪರಿಷತ್ತಿನ ಆಶ್ರಯದಲ್ಲಿ ಪರಿಷತ್‌ಪತ್ರಿಕೆಯನ್ನೂ (೧೯ನೆಯ ಸಂಪುಟದಿಂದ ೪ ಸಂಪುಟಗಳು) ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಪ್ರಬುದ್ಧ ಕರ್ಣಾಟಕವನ್ನೂ (೨೧ರಿಂದ ೨೪ ವರ್ಷ ಪೂರ್ತಿಯ ನಾಲ್ಕು ಸಂಪುಟಗಳು) ಕೈಗೆ ತೆಗೆದುಕೊಂಡು, ನಿಯಮ ನಿಬಂಧನೆಗಳಿಗೆ ಒಳಗಾಗಿಯೂ ಪತ್ರಿಕಾ ಸಂಪಾದಕರಾಗಿ ಅವರು ಸಾಧಿಸಿದ ಕೆಲಸ ಅದ್ಭುತವಾದದ್ದು ಎಂದು ನನ್ನ ಭಾವನೆ. ಪ್ರಬುದ್ಧ ಕರ್ಣಾಟಕದ ವಿಚಾರವಾಗಿ ನಾನು ಇಲ್ಲಿ ತಿಳಿಯಹೇಳಲಾರೆ; ಅವರು ಅದಕ್ಕಾಗಿ ಪಟ್ಟ ಪರಿಶ್ರಮವನ್ನು ಕಣ್ಣಾರೆ ಕಂಡವನಲ್ಲ. ವೈಸ್‌ಚಾನ್ಸಲರಾಗಿದ್ದ "ಶ್ರೀಮಾನ್ ಸುಬ್ಬರಾಯರ ಆಜ್ಞೆಯನ್ನು, ಶ್ರಮವಾದರೂ, ಶಕ್ತಿಮೀರಿ ಪರಿಪಾಲಿಸಿದ್ದೇನೆ. ಆ ಶ್ರಮ ಸಾರ್ಥಕವೆಂದು ತಿಳಿದಿದ್ದೇನೆ" ಎಂದು ಶಾಸ್ತ್ರಿಗಳೇ ಸಂಕೋಚ ಪಡದೆ ಸಂತೋಷದಿಂದ ತಿಳಿಸಿರುವುದನ್ನು ಉಲ್ಲೇಖಿಸಿದರೆ ಸಾಕು. ಅವರು ಪರಿಷತ್‌ಪತ್ರಿಕೆಯ ಸಂಪಾದಕರಾಗಿದ್ದ ನಾಲ್ಕು ವರ್ಷವೂ ಅವರು ಹೇಳಿದ ಕೆಲಸವನ್ನು ಸಂತೋಷದಿಂದ ಮಾಡಿಕೊಟ್ಟಿದ್ದೇನೆ; ಮಾಡಿಕೊಟ್ಟದ್ದಕ್ಕಿಂತ ಹೆಚ್ಚಾಗಿ, ಅವರು ಮಾಡುವುದನ್ನು ನೋಡಿ ವಿದ್ವತ್‌ಪತ್ರಿಕೆಯೊಂದನ್ನು ನಡಸುವುದು ಹೇಗೆ ಎಂಬುದನ್ನು ತಕ್ಕಮಟ್ಟಿಗೆ ಕಲಿತಿದ್ದೇನೆ. ಆದ್ದರಿಂದ, ಅವರು ಪರಿಷತ್ಪತ್ರಿಕೆಯನ್ನು ನಡೆಸುತ್ತಿದ್ದದ್ದನ್ನು ಬಲ್ಲ ನಾನು ಆ ಬಗೆಗೆ ನಾಲ್ಕು ಮಾತನ್ನು ತಿಳಿಸಬಯಸುತ್ತೇನೆ.

ಬಹುಮಟ್ಟಿಗೆ ಪರಂಪರಾಗತ ಪಾಂಡಿತ್ಯಕ್ಕೆ ಮೀಸಲಾಗಿದ್ದ ಪತ್ರಿಕೆಯನ್ನು ಆಧುನಿಕ ಸಂಶೋಧನಾತ್ಮಕ ಪಾಂಡಿತ್ಯಕ್ಕೆ ತೆರವು ಮಾಡಿಕೊಡುವ ಹೊಣೆಗಾರಿಕೆಯನ್ನು ಹೊತ್ತಿದ್ದರು ಶಾಸ್ತ್ರಿಗಳು. ಪತ್ರಿಕೆಯಲ್ಲಿ ಅವರು ಮಾಡಿದ ಮಾರ್ಪಾಟುಗಳು ಹಳಬರನ್ನು ಎದುರು ಹಾಕಿಕೊಳ್ಳದೆ ಹೊಸ ವಿದ್ವಾಂಸರನ್ನು ಸ್ವಾಗತಿಸಿದವು. ಅದುವರೆಗೂ ತೆಳ್ಳನೆಯ ಒಳಹಾಳೆಯನ್ನೆ ರಕ್ಷಾಪುಟವಾಗಿ ಮಾಡಿ, ಅದರ ಮೇಲೆ ರವಿವರ್ಮನ ಸರಸ್ವತೀ ಚಿತ್ರದ 'ಹಾಫ್‌ಟೋನ್' ಪಡಿಯಚ್ಚನ್ನು ಮುದ್ರಿಸುತ್ತಿತ್ತು. ಶಾಸ್ತ್ರಿಗಳು ದಪ್ಪರಟ್ಟಿನ ರಕ್ಷಾ ಕವಚವನ್ನು ಪತ್ರಿಕೆಗೆ ತೊಡಿಸಿ, ಅದರ ಮೇಲೆ ರವಿವರ್ಮನ ಅದೇ ಚಿತ್ರದ ರೇಖಾರೂಪವನ್ನು ಬಿಡಿಸುವ ನಿಶ್ಚಯ ಮಾಡಿದರು. ಆ ಚಿತ್ರವನ್ನು ರೇಖಿಸಿಕೊಡುವ ಕಾರ್ಯವನ್ನು ನನಗೇ ವಹಿಸಿದರು. ಸ್ವಂತ ಕಲ್ಪನೆಯ ಚಿತ್ರವನ್ನೇ ಚಿತ್ರಿಸಿಕೊಡುತ್ತೇನೆ ಎಂದಾಗ, "ಮುಖಪುಟದಲ್ಲಿ ಎದ್ದುಕಾಣುವಂತಹ ಬದಲಾವಣೆಮಾಡಿ ಪರಿಷತ್ತಿನ ಹಳೆಯ ಅಭಿಮಾನಿಗಳನ್ನು ಎದುರುಹಾಕಿಕೊಳ್ಳಬಾರದು, ನಾವುಮಾಡುವ ಬದಲಾವಣೆಯೆಲ್ಲ ಒಳಗಡೆ ನಡೆಯಬೇಕು. ಚಿತ್ರ ಅದೇ ಇರಲಿ, ಅದಕ್ಕೆ ಹೊಸ ಕಳೆ ಕೊಡು. ಹೇಗಿದ್ದರೂ ಬ್ಲಾಕು ಸವೆದುಹೋಗಿದೆ, ಹೊಸದು ಮಾಡಿಸಬೇಕು" ಎಂದು ನನಗೆ ಒಲವಿಲ್ಲದ ಕೆಲಸವನ್ನು ನನ್ನಿಂದ ಚೆನ್ನಾಗಿಯೇ ಮಾಡಿಸಿಕೊಂಡು, ಸಂತೋಷಪಟ್ಟರು. (ಅವರಿಗೆ ರವಿವರ್ಮನ ಸಂಪ್ರದಾಯದ ಚಿತ್ರಕಲೆಯಲ್ಲಿ ಅಭಿಮಾನ; ಬಂಗಾಳಿ ಸಂಪ್ರದಾಯದ ಕಲೆ ಅವರಿಗೆ ಹಿಡಿಸುತ್ತಿರಲಿಲ್ಲ. ಶ್ರೀ ವಿ. ಸೀತಾರಾಮಯ್ಯನವರು ಸಂಪಾದಕರಾದ ಮೇಲೆ ಕಾಣಿಸಿಕೊಂಡ 'ನೃತ್ಯಸರಸ್ವತಿ'ಯ ಚಿತ್ರ ಇಂದಿಗೂ ಅಚ್ಚಾಗುತ್ತಿದೆ). ರಟ್ಟಿನಜೊತೆಗೆ, ಒಳಗಿನ ಕಾಗದದ ತೂಕವೂ ಹೆಚ್ಚಿತು. "ಬರವಣಿಗೆಯ ತೂಕದ ಜೊತೆಗೆ, ಕಾಗದದ ತೂಕವೂ ಆಗತ್ಯ ಸೀತಾರಾಮಯ್ಯ, ಪತ್ರಿಕೆಯ ತೂಕ ಏರಬೇಕಾದರೆ! ಪರಿಷತ್ಪತ್ರಿಕೆಯ ಸಂಪಾದನ ಕಾರ್ಯಕ್ಕೂ ಪರಿಷತ್ತಿನಲ್ಲಿ ಸಂಶೋಧನೆ ಮಾಡುವವರಿಗೂ ದೇಶವಿದೇಶಗಳ ವಿದ್ವತ್ ಪತ್ರಿಕೆಗಳ ಆಗತ್ಯವಿದೆ. ಅವನ್ನೆಲ್ಲಾ ಚಂದಾಕೊಟ್ಟು ತರಿಸಿಕೊಳ್ಳುವುದಕ್ಕೆ, ಪರಿಷತ್ತಿಗೆ ಹಣವೆಲ್ಲಿದೆ? ಅಗ್ಗದ ಕಾಗದದ ಮೇಲೆ ಅಚ್ಚುಹಾಕಿದ ಬಡಕಲು ಪತ್ರಿಕೆ ಕಳಿಸಿಕೊಟ್ಟರೆ, ಶ್ರೀಮಂತ ಪತ್ರಿಕೆಗಳು ನಮಗೆ ವಿನಿಮಯವಾಗಿ ಬರುತ್ತವೇನು?" ಎಂದು ಬಹು ದೂರದೃಷ್ಟಿಯಿಂದ ಪತ್ರಿಕೆಯ ಒಳಹೊರ ಸ್ವರೂಪವನ್ನು ಉತ್ತಮಪಡಿಸುವ ಕಂಕಣತೊಟ್ಟರು. ೧೯ನೆಯ ಸಂಪುಟದಿಂದ ಈಚಿನ ನಾಲ್ಕು ಸಂಪುಟಗಳ ಸಂಚಿಕೆಗಳನ್ನು ಅದರ ಹಿಂದಿನ ಸಂಪುಟಗಳ ಸಂಚಿಕೆಗಳೊಂದಿಗೆ ಹೋಲಿಸಿ ಪರಿಶೀಲಿಸಿದರೆ, ಕೃಷ್ಣಶಾಸ್ತ್ರಿಗಳು ಪಟ್ಟ ಪರಿಶ್ರಮದ ಫಲದ ಪರಿಚಯವಾಗುತ್ತದೆ. ಅವರ ಈ ಯೋಜನೆ 'ಒಂದು ಕಲ್ಲೇಟಿನಿಂದ ಎರಡು ಹಣ್ಣು ಉದುರಿಸು'ವ ಕಾರ್ಯ; ಬೀಸಿದ ಹಿಟ್ಟು ರೊಟ್ಟಿಯೂ ಆಗಬೇಕು. ಇದರಿಂದಾಗಿ, ಪರಿಷತ್ಪತ್ರಿಕೆಯ ವಿನಿಮಯ ಪತ್ರಿಕೆಗಳ ಪಟ್ಟಿ ಬೆಳೆಯಿತು. ಈ ವಿನಿಮಯ ಪತ್ರಿಕೆಗಳಲ್ಲಿ "ಪ್ರಾಚ್ಯ

ದೇಶಗಳ, ಮುಖ್ಯವಾಗಿ ಭರತಖಂಡದ, ಭಾಷೆ ಸಾಹಿತ್ಯ ಚರಿತ್ರೆ ಸಂಸ್ಕೃತಿ ಮುಂತಾದವುಗಳ ಮೇಲೆ....ಈಚೆಗೆ ಪ್ರಕಟವಾಗಿ ಬಂದಿರುವ ಮುಖ್ಯ ಲೇಖನಗಳು" ಆ ವಿಷಯಗಳಲ್ಲಿ ಕೆಲಸಮಾಡುವ ವಿದ್ವಾಂಸರ ಮತ್ತು ಅವುಗಳಲ್ಲಿ ಆಸಕ್ತಿಯುಳ್ಳ ಜನರ ಗಮನಕ್ಕೆ ಬರಬೇಕೆಂಬ ಉದ್ದೇಶದಿಂದ, 'ಪ್ರಾಚ್ಯ ಲೇಖನಮಾಲೆ' ಎಂಬ ಉಪಯುಕ್ತ ವಿಭಾಗವನ್ನು ಪ್ರಾರಂಭಿಸಿದರು. ಮೊದಲಿನ ಒಂದೆರಡು ಸಂಚಿಕೆಗಳಲ್ಲಿ ಲೇಖನಗಳ–ಲೇಖಕರ ಹೆಸರುಗಳಷ್ಟೆ ಪ್ರಕಟವಾಗುತ್ತಿದ್ದು, ಆಮೇಲಿನ ಸಂಚಿಕೆಗಳಲ್ಲಿ ಗಮನಾರ್ಹ ಲೇಖನಗಳ ಸಾರಾಂಶವನ್ನೂ ಕೊಡುವ ನಿರ್ಧಾರವನ್ನು ಅವರು ಕೈಗೊಂಡರು. ತಮಗಾದಷ್ಟು ಪತ್ರಿಕೆಗಳನ್ನು ತಾವು ಓದಿ, ಲೇಖನಗಳನ್ನು ಗುರುತಿಸುತ್ತಿದ್ದರು; ಉಳಿದ ಪತ್ರಿಕೆಗಳನ್ನು ನಾನು ಓದಿ, ಗಮನಾರ್ಹ ಲೇಖನಗಳನ್ನು ಗುರುತಿಸಿ, ಅವರು ಆಯ್ಕೆಮಾಡಿದ ಲೇಖನಗಳ ಸಾರಾಂಶವನ್ನು ಬರೆದುಕೊಡುವ ಶ್ರಮಸಾಧ್ಯವಾದ, ಆದರೆ ನನ್ನ ಸ್ವಂತ ದೃಷ್ಟಿಯಿಂದ ಪ್ರಯೋಜನಕರನಾಗಿ ಪರಿಣಾಮಿಸಿದ, ಕೆಲಸವನ್ನು ಮಾಡಿಕೊಡಬೇಕಾಗಿತ್ತು. ಎಷ್ಟೋವೇಳೆ, ನಾನು ಬರೆದ ಒಂದು ಪುಟದ ಸಾರಾಂಶವನ್ನು ನಾಲ್ಕಾರು ವಾಕ್ಯಗಳಿಗೆ ಭಟ್ಟಿ ಇಳಿಸುವ ಅದ್ಭುತವನ್ನು ಸಾಧಿಸಿ, ತೋರಿಸುತ್ತಿದ್ದರು, (ಪರಿಷತ್ಪತ್ರಿಕೆಯಲ್ಲಿ ಅವರು ಮೊದಲು ಮಾಡಿದ ಈ ಪತ್ರಿಕಾವಿಭಾಗವನ್ನು ಅವರು ಪ್ರಾಧ್ಯಾಪಕರಾದ ಮೇಲೆ, ಎರಡನೆಯಸಲ ಪ್ರಬುದ್ಧ ಕರ್ಣಾಟಕದ ಸಂಪಾದಕರಾದಾಗ, 'ಪ್ರಾಚ್ಯ ಲೇಖನಾವಳಿ' ಎಂಬ ಹೆಸರಿನಿಂದ ಆ ಪತ್ರಿಕೆಗೂ ಜೋಡಿಸಿದರು. ಈಗ ಈ ವಿಭಾಗ ಈ ಎರಡು ಪ್ರಮುಖ ಪತ್ರಿಕೆಗಳಲ್ಲಿಯೂ ಕಂಡುಬರುತ್ತಿಲ್ಲ). ೨೧ನೆಯ ಸಂಪುಟದ ೪ನೆಯ ಸಂಚಿಕೆಯಿಂದ ಒಂದೆರಡು ನಿದರ್ಶನಗಳನ್ನು ಕೊಟ್ಟು, ಈ ವಿಭಾಗದ ಸ್ವಾರಸ್ಯವನ್ನೂ ಉಪಯುಕ್ತತೆಯನ್ನೂ ಮನಗಾಣಿಸಬಹುದು (ಆ ವೇಳೆಗೆ ಇದು ಒಂದು ಸ್ಥಿರವಾದ ವ್ಯವಸ್ಥಿತ ರೂಪವನ್ನು ತಳೆದಿತ್ತು) :

1. *Journal of the Benares Hindu University, Vol. I, No. 1, 1937*

1. "Agasthya or the Rise and Spread of Hindu Culture."

—Mr. K. A. Neelakantha Sastri, M.A.

2. "State of Hinduism and Buddhism in Sudraka's Mrcchakatika".

—Dr. S. K. Belvalkar, M.A. Ph.D.

[Sudraka seems to have used Śakāra as an instrument for venting out his own views against contemporary society and superstitions.]

2. *Journal of the Annamalai University, January 1937*

1. "The age of Tholkappiam,"

—Mr. S. S. Bharathi.

[5th or 6th Century B.C. : *Vide* also issue of May 1937]

2. "The Semantic Principle of Expansion"

—Mr. A. C. Chattiar.

[Examples—Place, ಗೋಷ್ಠ, ತಣ್ಣೀರ್, ಎಣ್ಣೆ, etc.]

3. "Siddhitraya" of Yamunacharya. Edited with English translation and notes by Mr. R. Ramanujachari and Mr. K. Srinivasa Chari. (pp. 19-100.)

3. **ಜಯಕರ್ಣಾಟಕ–ಮಾರ್ಚಿ ೧೯೩೭**

1. **ದ್ರಾವಿಡ ಲಿಪಿಯಿಂದ ಬ್ರಾಹ್ಮೀಲಿಪಿಯ ಉತ್ಪತ್ತಿ. ಲೇಖಾಂಕ ೧.**

**—ಶ್ರೀ ಪ್ರ. ಗೋ. ಕುಲಕರ್ಣಿ**

2. **ಇತಿಹಾಸ ಸಂಶೋಧಕರು**

**—ಶ್ರೀ ಎಸ್. ಆರ್. ಶೇಷಗಿರಿರಾವ್, ಬಿ.ಎ.**

4. **ಆಂಧ್ರ ಸಾಹಿತ್ಯಪರಿಷತ್ಪತ್ರಿಕೆ—ಏಪ್ರಿಲ್-ಮೇ, ೧೯೩೭**

**ಪ್ರಕಾಶ ವರ್ಷುಡು—ರಸಾರ್ಣವಾಲಂಕಾರಮು**

**—ಶ್ರೀ ಈ. ವೇಂಕಟವೀರರಾಘವಾಚಾರ್ಯುಲುಗಾರು, ಎಂ.ಎ.**

ಸಮಕಾಲೀನ ಪತ್ರಿಕೆಗಳ ಪ್ರಾಕ್ತನ ವಿಚಾರ ವಿಮರ್ಶೆಗಳನ್ನು ಪರಿಷತ್ಪತ್ರಿಕೆಯ ವಾಚಕರಿಗೆ ಪರಿಚಯಮಾಡಿಕೊಡುವುದು ಎಷ್ಟು ಮುಖ್ಯವೋ, ಅದರ ವಿಷಯ ಸಾರಸಂಗ್ರಹವನ್ನು ಕನ್ನಡವರಿಯದ ಹೊರ ವಿದ್ವಾಂಸರ ಗಮನಕ್ಕೆ ತರುವುದೂ ಅಷ್ಟೇ ಮುಖ್ಯ ಎಂದು ಶಾಸ್ತ್ರಿಗಳು ತಿಳಿದಿದ್ದರು. ಪರಿಷತ್ಪತ್ರಿಕೆಯ ಪ್ರತಿಗಳು-ಎಷ್ಟೇ ಅಲ್ಪಸಂಖ್ಯೆಯಲ್ಲಿಯೇ ಆಗಲಿ-ಇಂಗ್ಲೆಂಡ್, ಜರ್ಮನಿ, ಅಮೆರಿಕಾ ಮುಂತಾದ ಪಾಶ್ಚಾತ್ಯ ದೇಶಗಳ ಕೆಲವು ಪತ್ರಿಕೆಗಳಿಗೂ ಪಂಡಿತ ಸಂಸ್ಥೆಗಳಿಗೂ ಹೋಗುತ್ತಿದ್ದುವು. ಅಲ್ಲಿನ ವಿದ್ವತ್ ಪ್ರಪಂಚಕ್ಕೆ ಪರಿಷತ್ಪತ್ರಿಕೆಯ ಲೇಖನಗಳ ಸಾರವನ್ನು ಪರಿಚಯಮಾಡಿಕೊಡುವ ಉದ್ದೇಶದಿಂದ, Contents in Brief ಎಂಬ ವಿಷಯಸಂಗ್ರಹ ಪತ್ರವನ್ನು ಇಂಗ್ಲಿಷಿನಲ್ಲಿ ಅಚ್ಚುಹಾಕಿಸಿ, ಪತ್ರಿಕೆಯ ಮುಖಪುಟಕ್ಕೆ ಅಂಟಿಸಿ ಕಳಿಸುವ ಏರ್ಪಾಡುಮಾಡಿದರು. (ಈಗ ಲೇಖನ ಶೀರ್ಷಿಕೆಗಳ ಆಂಗ್ಲ ಅನುವಾದ ಮಾತ್ರ ಪ್ರಕಟವಾಗುತ್ತಿದೆ.) ಲೇಖನಗಳ ಇಂಗ್ಲಿಷು ಸಾರಾಂಶದ ಕರಡನ್ನು ಸಿದ್ಧಗೊಳಿಸುವ ಕಾರ್ಯವನ್ನು ಅನೇಕ ವೇಳೆ ನನಗೆ ವಹಿಸಿ, ನನ್ನ ಕರಡನ್ನು ತಾವು ಪರಿಷ್ಕಾರಮಾಡುತ್ತಿದ್ದರು. ಈ ವಿಭಾಗ

ದಲ್ಲಿ ಕೃಷ್ಣಶಾಸ್ತ್ರಿಗಳ ಕೈವಾಡದ ಕೌಶಲವನ್ನು ಒಂದು ವಿಷಯಖಂಡದ ಮೂಲಕ ಪರಿಚಯಮಾಡಿಕೊಡುವುದು ಅಗತ್ಯ :

*Vol. XXI. October-December 1936. No. 4*

2. *National Literature in Kannada*: By Mr. R. S. Mugali, M.A., B.T., Professor of Kannada, Willingdon College, Sangli.

> "Prof. Mugali points out in this article that 'The Love of the Land' has been from the earliest times a source of inspiration for poets of the Kannada Country and gives examples from inscriptions, and works of Ancient and Modern periods of Kannada Literature."

ದಿವಂಗತ ಕೃಷ್ಣಶಾಸ್ತ್ರಿಗಳು ಕೈಕೊಂಡು ನಡಸಿದ ಈ ವಿದ್ವತ್‌ಪತ್ರಿಕಾ ಸಂಪಾದನ ಕಾರ್ಯವಿಭಾಗಗಳನ್ನು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯಾಗಲಿ ಪ್ರಬುದ್ಧ ಕರ್ಣಾಟಕವಾಗಲಿ ಪುನರಾರಂಭಮಾಡಿ ನಡಸಿಕೊಂಡು ಹೋದರೆ, ಅವರ ನೆನಪಿಗೆ ಅದೂ ಒಂದು ಸ್ಮಾರಕವಾಗಿಯೇ ಪರಿಣಮಿಸುವುದು; ಆಕರ ಲೇಖನಗಳಿಗಾಗಿ ತಡಕಾಡುವ ಸಂಶೋಧನ ಕಾರ್ಯಕರ್ತರಿಗೆ ಅತ್ಯಂತ ಪ್ರಯೋಜನ ಕಾರಿಯಾಗಿ ಪರಿಣಮಿಸುವುದು.

ಪರಿಷತ್ಪತ್ರಿಕೆಯ ವಿಮರ್ಶಾವಿಭಾಗ ತೃಪ್ತಿಕರವಾಗಿರಲಿಲ್ಲವೆಂದು ಈ ಮೊದಲೇ ಸೂಚಿಸಿದ್ದೇನೆ. ಲೇಖನ ವಿಭಾಗಕ್ಕೆ ಇದ್ದ ಪರಿಮಿತಿಯಲ್ಲಿ ಹೆಚ್ಚಿನ ವೈವಿಧ್ಯವನ್ನಾಗಲಿ ಪ್ರಾತಿನಿಧ್ಯವನ್ನಾಗಲಿ ಕಲ್ಪಿಸಲು ಸಾಧ್ಯವಿರಲಿಲ್ಲ. ವಿಸ್ತಾರ ಗೊಳ್ಳುತ್ತಿದ್ದ ಪರಿಷತ್ತಿನ ಕಾರ್ಯಕಲಾಪಗಳ ವರದಿ ಎಷ್ಟೋ ವೇಳೆ ಪರಿಷತ್ಪತ್ರಿಕೆಯ ಅರ್ಧಭಾಗವನ್ನು ನುಂಗಿಬಿಡುತ್ತಿತ್ತು. ಈ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ, ಪರಿಷತ್ಪತ್ರಿಕೆಗೆ ನಾಡಿನ ಪ್ರಮುಖ ಲೇಖಕರ ಮತ್ತು ವಿದ್ವಾಂಸರ ಸಹಾಯ ಸಹಕಾರಗಳನ್ನು ದೊರಕಿಸಿಕೊಂಡು, ಪತ್ರಿಕೆಗೆ ಅಖಿಲ ಕರ್ಣಾಟಕ ವ್ಯಾಪ್ತಿಯ ಸ್ವರೂಪವನ್ನು ಕೊಡುವ ಕಾರ್ಯದಲ್ಲಿ ವಿಮರ್ಶಾವಿಭಾಗವನ್ನು ಯಶಸ್ವಿಯಾಗಿ, ಸಮರ್ಥವಾಗಿ, ಬಳಸಿಕೊಂಡರು ಸಂಪಾದಕ ಶಾಸ್ತ್ರಿಗಳು. ಅವರು ಇಷ್ಟಪಟ್ಟಿದ್ದರೆ, ತಮ್ಮ ಸುತ್ತಮುತ್ತ ಇದ್ದ ಬೆಂಗಳೂರಿನ ವಿದ್ವಾಂಸ ಮಿತ್ರರಿಂದ ಪುಸ್ತಕಗಳನ್ನು ಬೇಗ ಬೇಗನೆ ವಿಮರ್ಶೆ ಮಾಡಿಸಬಹುದಾಗಿತ್ತು. ಹಾಗೆ ಮಾಡಿದ್ದರೆ, ಪರಿಷತ್ತಿನ ಆದರ್ಶವನ್ನು ಕಾರ್ಯರೂಪಕ್ಕೆ ತರುವುದು ಸಾಧ್ಯವಾಗುತ್ತಿರಲಿಲ್ಲ. ಪರಿಷತ್ಪತ್ರಿಕೆಗೆ ವಿಮರ್ಶೆಗೆಂದು ಬರುವ ಪುಸ್ತಕಗಳಲ್ಲಿ ಯಾವುದನ್ನು ಯಾರಿಗೆ ಕಳಿಸಬೇಕು ಎಂದು ನಿರ್ಧರಿಸಿ, ಪುಸ್ತಕಗಳನ್ನು ಕಳಿಸಿ ವಿಮರ್ಶೆಯನ್ನು ಬೇಗ ಬರಮಾಡಿಕೊಳ್ಳುವ ಕರ್ತವ್ಯವನ್ನು ನನಗೆ ವಹಿಸಿದ್ದರು. ಈ ಕಾರ್ಯಕ್ಕಾಗಿಯೇ ಒಂದು ರಿಜಿಸ್ಟರನ್ನು ಏರ್ಪಡಿಸಿದ್ದರು. ಅದರಲ್ಲಿ, ಪುಸ್ತಕವನ್ನು ವಿಮರ್ಶೆಗೆ ಕಳಿಸಿದ ತಾರೀಖು,

ವಿಮರ್ಶೆ ಬಂದ ತಾರೀಖು, ವಿಮರ್ಶೆ ಸಕಾಲದಲ್ಲಿ ಬಾರದಿದ್ದರೆ ವಿಮರ್ಶಕರಿಗೆ ನೆನಪುಕೊಡುವ ತಾರೀಖುಗಳು, ಹೋಗಬರ ತಗಲುಪ ಅಂಚೆಹಾಸಲು (ಪುಸ್ತಕಗಳನ್ನು ಹಿಂದಿರುಗಿಸಲು ತಗಲುವ ಮೌಲ್ಯದ ಅಂಚೆಚೀಟಿಗಳನ್ನು ಪುಸ್ತಕದೊಂದಿಗೆ ಇರಿಸಲಾಗುತ್ತಿತ್ತು)–ಇವೆಲ್ಲ ನಮೂದಾಗಬೇಕು. 'ಅವರು ಇವರು ಎಂದು ನೋಡಬೇಡ. ನಿರ್ದಾಕ್ಷಿಣ್ಯವಾಗಿ ನೆನಪುಕೊಡು' ಎಂದು ನನಗೆ ಕಟ್ಟುನಿಟ್ಟಾದ ಆಜ್ಞೆ. ಐದಾರು ಸಲ ನೆನಪುಕೊಟ್ಟು, ಕೆಲವರಿಂದ ವಿಮರ್ಶೆ ತರಿಸಿಕೊಂಡ ನೆನಪು ನನಗಿದೆ. ವಿಮರ್ಶೆಗಳು ಅತಿ ದೀರ್ಘವಾಗಿದ್ದರೆ, ಲೇಖಕರ ಆಶಯಕ್ಕೆ ಭಂಗ ಬಾರದಂತೆ, ಮುದ್ರಣವಾದಮೇಲೆ ಬಹುಶಃ ಲೇಖಕರ ಅರಿವಿಗೇ ಬಾರದಂತೆ, ಅರಿವಿಗೆ ಬಂದರೂ ಅವರು ಆಕ್ಷೇಪ ಮಾಡಲು ಅವಕಾಶವಿರದಂತೆ, ಒಂದು ವೇಳೆ ಆಕ್ಷೇಪ ಮಾಡಿದರೂ ತಮ್ಮ ಕಾರ್ಯವನ್ನು ಸಮರ್ಥನೆಮಾಡಿಕೊಳ್ಳಲಾಗುವಂತೆ, ಸಂಪಾದಕ ಶಾಸ್ತ್ರಿಗಳು ವಿಮರ್ಶೆಯ ಲೇಖಗಳಿಗೆ ಮಾಡುತ್ತಿದ್ದ 'ಶಸ್ತ್ರಚಿಕಿತ್ಸೆ' (ಅಥವಾ ವಿಮರ್ಶಾಶಸ್ತ್ರಚಿಕಿತ್ಸೆ) ನನಗೆ ಆಶ್ಚರ್ಯಕರವಾಗಿ ಕಾಣುತ್ತಿತ್ತು. ಇಂಥ ಸಂದರ್ಭಗಳಲ್ಲಿ, ವಿಮರ್ಶೆಗಳು ಮುದ್ರಣವಾದಮೇಲೆ, ಯಾವ ಆಕ್ಷೇಪವೂ ಬಂದದ್ದು ನನ್ನ ನೆನಪಿನಲ್ಲಿಲ್ಲ. ಆದರೆ, ಲೇಖನವಿಭಾಗಕ್ಕೆ ಅವರು ಈ ಕಾರ್ಯತತ್ತ್ವವನ್ನು ಅನ್ವಯಿಸುತ್ತಿರಲಿಲ್ಲ. ಕೆಲವು ವಿದ್ವಾಂಸರ (ಉದಾ. ಗೋವಿಂದ ಪೈ) ಲೇಖನಗಳ 'ಗ್ಯಾಲಿ ಪ್ರೂಫನ್ನು' ಅವರಿಗೇ ತಿದ್ದಲು, ಕಳಿಸಿ, ಅವರ ತಿದ್ದುಪಾಟುಗಳು ಕಡೆಯ ಪ್ರೂಫಿನಲ್ಲಿ ಆಗಿದೆಯೇ ಇಲ್ಲವೆ ಎಂದು ಬಹು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದರು. "ನೋಡು, ಇದು ಗೋವಿಂದಪೈ ಅವರ ಲೇಖನ. ಒಂದು ಅಕ್ಷರವನ್ನೂ ನೀನು ಅರಿವಿಲ್ಲದೆ ಕೂಡ ತಿದ್ದುವ ಸಾಹಸಕ್ಕೆ ಹೋಗಬೇಡ. ಅವರ 'ಕಡಮೆ'ಗಳನ್ನೂ 'ಕಂಡಿತ'ಗಳನ್ನೂ ಹಾಗೆಯೇ ಬಿಟ್ಟುಬಿಡು; ತಿದ್ದಿದೆಯೋ, ಅವರೊಂದಿಗೆ ದೀರ್ಘವಾದ ಪತ್ರವ್ಯವಹಾರಕ್ಕೆ ಸಿದ್ಧವಾಗಿರಬೇಕು. ಅಲ್ಲದೆ, ಅಂಥವರು ಪೂರ್ವಾಲೋಚನೆ ಪೂರ್ವನಿಶ್ಚಯಗಳಿಲ್ಲದೆ ಪದಪ್ರಯೋಗ ಮಾಡುವುದಿಲ್ಲ" ಎಂದು ಶಾಸ್ತ್ರಿಗಳು ಕೊಟ್ಟ ನಿರ್ದೇಶ, ನನಗೆ ಮಾತ್ರವಲ್ಲ ಎಂದು ನಾನು ತಿಳಿದಿದ್ದೇನೆ. ಈ ಸಂಪಾದಕೀಯ ಸೂಕ್ಷ್ಮವನ್ನು ಸಂಪಾದಕೀಯ ಕರ್ತವ್ಯವನ್ನು ನಿರ್ವಹಿಸುವವರು ಮಾತ್ರವಲ್ಲದೆ, ಕಂಪಾಸಿಟರುಗಳು ಕೂಡ ಗಮನಿಸಬೇಕು ಎಂದು ನನಗೆ ತೋರುತ್ತದೆ. ಕೃಷ್ಣಶಾಸ್ತ್ರಿಗಳು ನನ್ನಿಂದಲೂ ವಿಮರ್ಶೆ ಮಾಡಿಸುತ್ತಿದ್ದರು; ನಿರ್ದಾಕ್ಷಿಣ್ಯವಾಗಿ ತಿದ್ದಿ, ಮಾರ್ಗದರ್ಶನ ಮಾಡುತ್ತಿದ್ದರು. ಪ್ರೂಫನ್ನು ತಿದ್ದುವುದರಲ್ಲಿ ನಾನು ಅವರಿಂದ ಕಲಿತದ್ದು ಸ್ವಲ್ಪವೇನಲ್ಲ. ಪ್ರೂಫನ್ನು ತಿದ್ದುವುದು ಡಿ.ವಿ.ಜಿ. ಅವರ ಕೈಯಲ್ಲಿ 'ಕೊಲೆ'; ಕೃಷ್ಣಶಾಸ್ತ್ರಿಗಳ ಕೈಯಲ್ಲಿ 'ಕಲೆ'. ಈ ವಿಚಾರದಲ್ಲಿ, ಇಬ್ಬರಿಂದಲೂ ಪ್ರಭಾವಿತನಾಗಿದ್ದೇನೆ ನಾನು. ಈ ಇಬ್ಬರ 'ಮಾರ್ಗ'ಗಳನ್ನೂ ವಿವರಿಸತೊಡಗಿದರೆ, ಅದೇ ಒಂದು ಲೇಖನವಾದೀತು!

ಕನ್ನಡದ ಹೊಲದಲ್ಲಿ ಕೃಷ್ಣಶಾಸ್ತ್ರಿಗಳು ಕೃಷಿಮಾಡಿ ತೆಗೆದ ಬೆಳೆಯಲ್ಲಿ ತಮಗಾಗಿ ತೆಗೆದದ್ದು ಒಂದು ಪಾಲಾದರೆ, ಇತರರಿಗಾಗಿ ತೆಗೆದದ್ದು ಮೂರು ಪಾಲು; ಅದು, ಪ್ರಬುದ್ಧ ಕರ್ಣಾಟಕ, ಪರಿಷತ್ಪತ್ರಿಕೆಗಳ ಸಂಪಾದಕರಾಗಿ, 'ನ ಮಮ ನ ಮಮ' ಎಂದು ದುಡಿದದ್ದು. ನಾನು ಅವರಿಂದ ಕಲಿತ ಮುಖ್ಯ ಪಾಠ ಇದು: ಕನ್ನಡದ ಕೆಲಸ ಮಾಡುವಾಗಲೆಲ್ಲ–'ನ ಮಮ ನ ಮಮ' ಎಂಬ ನಿಷ್ಕಾಮಕರ್ಮದ ಮಂತ್ರವನ್ನು ಜಪಿಸುತ್ತಿರಬೇಕು.

# ಶಾಸ್ತ್ರಿಗಳ ಬೋಧನೆ

ಒಂದು ಸಲ, ನನಗೆ ಚೆನ್ನಾಗಿ ಜ್ಞಾಪಕವಿದೆ, ನಮ್ಮ ಗದ್ಯಭಾಗದ ಪಠ್ಯಪುಸ್ತಕವಾದ ವೆಂಕಟಾಚಾರ್ಯರ 'ವಿಷವೃಕ್ಷ'ದ ಯಾವುದೊ ಒಂದು ಉಪನ್ಯಾಸವನ್ನು ಬರೆಯುವುದಕ್ಕೆ ಶ್ರೀ ಶಾಸ್ತ್ರಿಗಳವರು ಕ್ಲಾಸಿಗೆ ನೇಮಿಸಿದ್ದರು. ಹುಡುಗತನದ ಉತ್ಸಾಹದಿಂದ ಕೂಡಿ ಭಾರೀ ಉಪನ್ಯಾಸವನ್ನೇ ರಚಿಸಬೇಕೆಂದು ನನಗೆ ತಿಳಿದ ದೊಡ್ಡ ದೊಡ್ಡ ಕನ್ನಡ ಸಂಸ್ಕೃತ ಶಬ್ದಗಳನ್ನು ಉಪಯೋಗಿಸಿ ಆರಂಭದಲ್ಲಿಯೇ "ಕೋಟ್ಯನುಕೋಟಿ ನಕ್ಷತ್ರಗಳಿಂದ ಖಚಿತವಾದ ಅನಂತವಾದ ಅಪಾರವಾದ ಮತ್ತು ಅಮಿತ ಸಂಖ್ಯೆಯ ಜ್ಯೋತಿರ್ವತ್ಸರಗಳಾಚೆ ಇರುವ ತಾರೆ ನಿಹಾರಿಕೆಗಳಿಂದ ಕೂಡಿದ ಈ ವಿಶ್ವ ಜಗತ್ತಿನಲ್ಲಿನ ಸ್ವಪ್ನ ಸುಂದರ ಧ್ಯೇಯಗಳ ಸಮ್ಮೋಹಿನೀ ಶಕ್ತಿಯನ್ನೂ ಮತ್ತು ಕಠೋರ ವಾಸ್ತವ ಜಗತ್ತಿನ ನಿಷ್ಕರುಣ ನಿಯಮಗಳನ್ನೂ ನೋಡಿದರೆ, ಈ ವಿಶ್ವವೇ ಒಂದು ಅಪ್ರತಿಮ ಸೌಂದರ್ಯದ ಮತ್ತು ವಿಚಿತ್ರತೆಯ ಒಂದು ಅಗಾಧವಾದ ನಾಟಕರಂಗವೆಂದು ಹೇಳಬಹುದು.." ಎನ್ನುವ ರೀತಿಯಲ್ಲಿ ಬರೆದಿದ್ದೆ. ಶ್ರೀ ಶಾಸ್ತ್ರಿಗಳವರು ಉಪನ್ಯಾಸವನ್ನು ಓದಿ "ಬಹಳ ಚೆನ್ನಾಗಿದೆ. ಶೈಲಿ ಸ್ಫೂರ್ತಿಯುತವಾಗಿದೆ. ಆದರೆ ಶಬ್ದಗಳೇ ಹೆಚ್ಚು; ಅರ್ಥ ಕಡಮೆ. ಇದೇ ಭಾವಗಳನ್ನು ಸುಲಭ ಶೈಲಿಯಲ್ಲಿ ಹೇಳಬಹುದಾಗಿತ್ತು ಮತ್ತು ಮುಖ್ಯವಾಗಿ, ಚೆನ್ನಾಗಿ ತಿಳಿಯದ ವಿಷಯವಾಗಿ ಏನನ್ನೂ ಬರೆಯಬಾರದು" ಅಂದರು. ನಂಬರೇನೋ ಹೆಚ್ಚಾಗಿಯೇ ಕೊಟ್ಟಿದ್ದರು; ಆದರೆ ಅವರು ಹೇಳಿದ "ತಿಳಿಯದೇ ಇದ್ದ ವಿಷಯದಲ್ಲಿ ಏನೂ ಬರೆಯಬಾರದು" ಎನ್ನುವ ವಾಕ್ಯ ಇನ್ನೂ ಮನಸ್ಸಿನಲ್ಲಿ ಚೆನ್ನಾಗಿ ನಟ್ಟಿದೆ....

—ಬಿ. ಎಸ್. ಮಾಧವರಾವ್
('ಅಭಿವಂದನೆ', ಪುಟ ೪)

ಪ. ವಿ. ಚಂದ್ರಶೇಖರ

# ಎ. ಆರ್. ಕೃ. ಅವರ ರಸಜ್ಞತೆ

ಕನ್ನಡ ಸಾರಸ್ವತ ಪ್ರಪಂಚಕ್ಕೆ ಎ. ಆರ್. ಕೃಷ್ಣಶಾಸ್ತ್ರಿ ಅವರು ಚಿರಪರಿಚಿತರು. ಅವರ ಪ್ರೌಢವಾದ ವ್ಯಕ್ತಿತ್ವಕ್ಕೆ ಅವರ ವೈದುಷ್ಯವೂ ರಸಜ್ಞತೆಯೂ ಎರಡು ಕಣ್ಣುಗಳಿದ್ದ ಹಾಗೆ. ಪಟ್ಟುಹಿಡಿದು ವ್ಯಾಸಂಗಮಾಡಿ ಅವರು ನಿರ್ದುಷ್ಟವಾದ ವೈದುಷ್ಯವನ್ನು ಗಳಿಸಿಕೊಂಡಂತೆ ಕಾವ್ಯದ ರಸತರಂಗಗಳಲ್ಲಿ ಮುಳುಗೇಳುತ್ತ ಅವರು ತಮ್ಮ ಲೋಕಾನುಭವಕ್ಕೊಂದು ಸ್ಪಷ್ಟರೂಪವನ್ನು ಪಡೆದರು. ಕೃಷ್ಣಶಾಸ್ತ್ರಿಗಳ ಜ್ಞಾನಪಿಪಾಸೆ ಹಿರಿದು. ಅವರ ಗ್ರಂಥರಚನೆ ಘನವಾದುದು. ಅವರ 'ಸಂಸ್ಕೃತ ನಾಟಕ' ಸಂಶೋಧನಾತ್ಮಕವೂ ವರ್ಣನಾತ್ಮಕವೂ ರಸಮಯವೂ ಆದ ಗ್ರಂಥ. ಸಂಸ್ಕೃತ ನಾಟಕ ಸಾಹಿತ್ಯದ ಬಗ್ಗೆ ದೊರೆಯಬಹುದಾದ ಎಲ್ಲಾ ಮಾಹಿತಿಯನ್ನೂ ನಾವು ಅಲ್ಲಿ ಪಡೆಯಬಹುದು. 'ವಚನಭಾರತ' ಅವರ ಕಲಾಪ್ರೌಢಿಮೆಗೆ ಒಂದು ಸಾಕ್ಷಿ. 'ಕಥಾಮೃತ'ದಿಂದ ಕನ್ನಡಸಾಹಿತ್ಯ ಫಲವತ್ತಾಯಿತು. 'ಬಂಕಿಮಚಂದ್ರ' ಎಂಬ ಅವರ ಗ್ರಂಥ ವಿಮರ್ಶಕ–ಓದುಗ ಪ್ರಪಂಚಕ್ಕೆ ಮಾರ್ಗದರ್ಶನ ಮಾಡುವಂತಹದು. ಕನ್ನಡನಾಡು–ನುಡಿಗಳ ಹಲವು ಸಮಸ್ಯೆಗಳನ್ನು, ಇತರ ವಿಷಯಗಳನ್ನು ಕುರಿತ ಅವರ ಆಳವಾದ ವಿಚಾರಗಳು 'ಭಾಷಣಗಳು ಮತ್ತು ಲೇಖನಗಳು' ಎಂಬ ಹೊತ್ತಗೆಗಳಲ್ಲಿ ಮೂಡಿವೆ. 'ಶ್ರೀಪತಿಯ ಕಥೆ'ಗಳು ಅವರ ಸೃಷ್ಟಿಶೀಲವಾದ ಕಲೆಗೆ ಸಾಕ್ಷಿ.

ಎ. ಆರ್. ಕೃಷ್ಣಶಾಸ್ತ್ರಿಗಳ ವಿಮರ್ಶನಾ ವಿಧಾನ್ವ ರಸಮಯವಾದುದು. ನಾಟಕವಾಗಲಿ, ಕಾದಂಬರಿಯಾಗಲಿ ಅವುಗಳ ತಂತ್ರ ಸಂವಿಧಾನಗಳಲ್ಲಿಯೂ, ರಸ ನಿರೂಪಣೆಯಲ್ಲಿಯೂ ಸಮಾನವಾದ ಗಮನವಿಟ್ಟು ಅವುಗಳ ಒಟ್ಟು ಅಂದವನ್ನು ಹೃದ್ಯವಾಗಿ ನಿರೂಪಿಸುತ್ತಾರೆ. ಭಾಸ ಮತ್ತಿತರ ನಾಟಕಕಾರರನ್ನು ಕುರಿತ ಅವರ ವಿಮರ್ಶೆಯ ಲೇಖನಗಳಲ್ಲಿ ಶಾಸ್ತ್ರೀಯವಾದ ವಿಮರ್ಶನದೃಷ್ಟಿ ಮತ್ತು ಕಲ್ಲುಸಕ್ಕರೆಯಂತೆ ತಟ್ಟನೆ ಕರಗುವ ಸಹೃದಯತೆ ಎರಡನ್ನೂ ಕಾಣಬಹುದು. ಹದಿನಾರು–ಹದಿನೆಂಟು ಶತಮಾನಗಳ ಹಿಂದಿನ ಕಾವ್ಯಲೋಕದಲ್ಲಿ ಸಂಚರಿಸುತ್ತ, ತಮ್ಮ ಲೋಕಾನುಭವದಿಂದ ಆ ಸನ್ನಿವೇಶವನ್ನು ಬೆಳಗುತ್ತ ಒಂದು ಬಗೆಯ

ಆತ್ಮೀಯವಾದ ಭಾವನಾ ಪ್ರಪಂಚವನ್ನು ಅವರು ನಮ್ಮ ಪಾಲಿಗೆ ನಿರ್ಮಿಸುತ್ತಾರೆ. ಭಾಸನ ನಾಟಕಗಳ ವಿಮರ್ಶೆಯಲ್ಲಿ ಇದಕ್ಕೆ ಹಲವು ಹತ್ತು ಉದಾಹರಣೆಗಳನ್ನು ಕಾಣಬಹುದು. "ಸ್ವಪ್ನ ವಾಸವದತ್ತ" ನಾಟಕದಲ್ಲಿ ವಾಸವದತ್ತೆ 'ಉದಯನನ ಪ್ರಣಯದಲ್ಲಿ ಹುಳಿಮುರಿದು ಹಣ್ಣಾದವಳಂತೆ.' ತನ್ನ ಮೋಹದ ಗಂಡನಿಗಾಗಿ ಅವಳು ಎಂತಹ ತ್ಯಾಗಕ್ಕೂ ಸಿದ್ಧಳು. ಸವತಿಯನ್ನೂ ತಂದುಕೊಳ್ಳುತ್ತಾಳೆ. ಸಾಮಾನ್ಯಸ್ತ್ರೀಯಂತೆ ಅವಳ ಅಂತಃಪುರದಲ್ಲಿ ಅಜ್ಞಾತವಾಗಿ ವಾಸಿಸುತ್ತಾಳೆ. ಎದುರಿಗೆ ಗಂಡನನ್ನೂ ಅವನ ಗಾಢವಾದ ಪ್ರೇಮವನ್ನೂ ಕಂಡುಕೇಳಿದರೂ ಉಕ್ಕಿಉಕ್ಕಿ ಬರುವ ತನ್ನ ಪ್ರಣಯವನ್ನು ಸಂಯಮಿಸಿಕೊಳ್ಳುತ್ತಾಳೆ.

ಇಲ್ಲಿ ಶ್ರೀ ಕೃಷ್ಣಶಾಸ್ತ್ರಿಗಳು ವಾಸವದತ್ತೆಯನ್ನು ವಿಶ್ಲೇಷಿಸುತ್ತ ಅವಳ ಮನದ ಅಸಂಖ್ಯವಾದ ಭಾವ ಪರಂಪರೆಯನ್ನೂ, ಅದನ್ನು ಸಂಯಮಿಸಿಕೊಳ್ಳಲು ಪ್ರಯತ್ನಿಸುತ್ತ ಸಹಜವಾಗಿ ಆತುರದಲ್ಲಿ ಮಾತನಾಡಿ ಚಾತುರ್ಯದಿಂದ ಪರಿಹರಿಸಿ ಕೊಳ್ಳುವ ಪರಿಯನ್ನೂ, ತನ್ನ ವೈಯಕ್ತಿಕವಾದ ಆಸೆಗಳನ್ನು ಬಿಗಿಹಿಡಿದು ಪತಿಯ ಕ್ಷೇಮಾಭ್ಯುದಯಕ್ಕಾಗಿ ಪರಿತಪಿಸುವ ಅವಳ ಗಾಢವಾದ ಪ್ರೇಮವನ್ನೂ ಒಂದೇ ಮಾತಿನಲ್ಲಿ ಸಂಕ್ಷೇಪಿಸಿ 'ಹುಳಿಮುರಿದು ಹಣ್ಣಾದವಳು' ಎನ್ನುತ್ತಾರೆ. ಈ ಸಾಮತಿ ಎಷ್ಟು ಅರ್ಥಪೂರ್ಣವಾದುದು! ಭಾವ ಸಂಸ್ಕಾರವಲ್ಲವೇ ಸಂಸಾರದ ಪರಮ ಪ್ರಯೋಜನ! ಇಂತಹ ನಡವಳಿಕೆ ವಾಸವದತ್ತೆಯ ತಾಯಿ ಅಂಗಾರ ವತಿಯಲ್ಲಿಯೂ ಚೆನ್ನಾಗಿ ಕಾಣುತ್ತದೆ. ಆಸೆಯ ಮಗಳನ್ನು ಅಳಿಯನ ಆತುರಕ್ಕೆ ಕಳೆದುಕೊಂಡರೂ, ಮುಂದೆ ಅವಳನ್ನೂ ಕಳೆದುಕೊಂಡು ನೊಂದು ಪರಿತಪಿಸುವ ಅಳಿಯನಲ್ಲಿ ಅವಳಿಗೆ ಪುತ್ರವಾತ್ಸಲ್ಯ. ಇಂತಹ ಔದಾರ್ಯವೇ ಸ್ತ್ರೀಜೀವನದ ಪರಮಾದರ್ಶವೆಂಬುದು ವಿಮರ್ಶಕರ ಆಶಯವೆಂಬುದು ವ್ಯಕ್ತವಾಗುತ್ತದೆ.

ಸ್ವಪ್ನವಾಸವದತ್ತ ನಾಟಕದಲ್ಲಿ ಪಾತ್ರಗಳ ಗುಣ ಔದಾರ್ಯ ವ್ಯಕ್ತವಾಗುವ ಹಲವು ಸನ್ನಿವೇಶಗಳನ್ನು ವಿಮರ್ಶಿಸುತ್ತ ಅವರು 'ಭಾಸನ ಕೌಶಲವು ಇಂತಹ ಸನ್ನಿವೇಶಗಳ ಕಲ್ಪನೆಯಲ್ಲಿ ಚೆನ್ನಾಗಿ ಕಂಡುಬರುವುದೇ ಹೊರತು ಇದರಿಂದ ಕಥೆಯೇನೂ ಬೆಳೆಯುವುದಿಲ್ಲ ನಿಜ. ಆದರೆ ನಾಟಕದಲ್ಲಿ ಕಥೆ ಬೆಳೆಯುವುದೇ ಮುಖ್ಯವಲ್ಲ' ಎನ್ನುತ್ತಾರೆ. ಅದರಲ್ಲಿ ಕಥೆಯ ಹಣ್ಣುಗಳಂತಿರುವ ಇಂಥ ರಸವತ್ತಾದ ಸನ್ನಿವೇಶಗಳನ್ನು ಕಲ್ಪಿಸಿ ಅವುಗಳಿಂದ ರಸವು ಸೂಸುವಂತೆ ಮಾಡಬೇಕು. 'ಹಸುವನ್ನು ಉಪಚರಿಸಿ ಆದರಿಸಿ ಹುಲ್ಲುಹಿಂಡಿಗಳನ್ನು ತಿನ್ನಿಸುವುದೆಲ್ಲಾ ಅದರ ಮೊಲೆಗಳಿಂದ ಹಾಲನ್ನು ಎಳೆದುಕೊಳ್ಳುವುದಕ್ಕೆ. ರಸವತ್ತಾದ ಸನ್ನಿವೇಶಗಳಿಲ್ಲದ ನಾಟಕ, ಗಾಡಿ ಎಳೆಯುವ ಗೊಡ್ಡು ಹಸುವಿನಂತೆ ಎನ್ನುತ್ತಾರೆ....' ಮುಂದೆ ಹಾಗೆಯೇ ಆಲೋಚಿಸುತ್ತಾ ಅವರು 'ಹೂವು ಹಣ್ಣುಗಳ ಕಾಲದಲ್ಲಿ ಮರಗಳ ಗುಣ ತಿಳಿಯುವಂತೆ ಮನುಷ್ಯರ ಯೋಗ್ಯತೆ ತಿಳಿಯಬೇಕಾದರೂ ಅವರಿಗೆ ಕಷ್ಟ ಸುಖ ಕೋಪತಾಪಗಳು ಉಂಟಾದಾಗಲೇ' ಎನ್ನುತ್ತಾರೆ.

ವತ್ಸರಾಜನಿಗೆ ಪದ್ಮಾವತಿಯನ್ನು ಕೊಟ್ಟು ಮದುವೆಯಾಗುವ ಸಂದರ್ಭ ಅವರ ಮೆಚ್ಚುಗಗೆ ಪಾತ್ರವಾದ ಹಲವು ಸನ್ನಿವೇಶಗಳಲ್ಲಿ ಒಂದು. ವಾಸವದತ್ತೆ ಪದ್ಮಾವತಿಯರು ಅರ್ಧ ಹಾಸ್ಯದಿಂದ ಮದುವೆಯ ಮಾತನ್ನಾಡುತ್ತಿರುವಂತೆಯೇ ಧಾತ್ರಿಯು ಬಂದು "ರಾಜಪುತ್ರಿಗೆ ಜಯವಾಗಲಿ! ಭರ್ತೃದಾರಿಕೆ, ಆಗಲೆ ನಿನ್ನನ್ನು ಕೊಟ್ಟಾಯಿತು!" ಎನ್ನುವಳು. ವತ್ಸರಾಜನ ಕ್ಷೇಮಚಿಂತನೆ ಮಾಡುತ್ತ, ಪದ್ಮಾವತಿಯನ್ನು ವಿವಾಹವಾಗುವಲ್ಲಿ ಅವನ ಆತುರ ಅಷ್ಟಿಲ್ಲವೆಂಬುದನ್ನು ಕಂಡು ವಾಸವದತ್ತೆ ಸಮಾಧಾನಪಟ್ಟಳೆಂದು ಹೇಳಿ, ಅಷ್ಟರಲ್ಲಿ ಶುಭಮುಹೂರ್ತ ಈಗಲೇ ಇರುವುದು ವಿವಾಹ ಮಹೋತ್ಸವವು ಕೂಡಲೇ ನಡೆದುಹೋಗಬೇಕೆಂದು ಮಹಾರಾಣಿಯವರ ಆಜ್ಞೆಯೆಂದು ಚೇಟಿ ತ್ವರೆಪಡಿಸಿದ್ದನ್ನು ಕಂಡು ವಿಮರ್ಶಕರು, 'ಮದುವೆಗಳು ಇಷ್ಟು ಚಿಟಿಕೆ ಚಪ್ಪರವಾಗಿಬಿಟ್ಟರೆ ಹೆಣ್ಣುಹೆತ್ತವರು ಬದುಕಿಕೊಂಡಾರು! ಆದರೆ ಇದು ನಡೆಯುವುದು ನಾಟಕದಲ್ಲಿ ಮಾತ್ರ, ವಿಶೇಷವಾಗಿ ಭಾಸನ ಪೌರೋಹಿತ್ಯದಲ್ಲಿ ಮಾತ್ರ!' ಎನ್ನುತ್ತಾರೆ. ಇಲ್ಲಿ ನಮ್ಮ ಸಮಾಜದ ಮದುವೆಯ ಅವಾಂತರ, ಕನ್ಯಾಪಿತೃಗಳ ಪರಿಪಾಟಲು ನಮ್ಮ ಮನೋನೇತ್ರಗಳ ಎದುರು ಪ್ರತ್ಯಕ್ಷವಾಗುತ್ತದೆ. ಅರಮನೆಯ ಈ ಸೋಜಿಗದಲ್ಲಿ ನಮಗೆ ಪ್ರೀತಿ ಇಮ್ಮಡಿಸುತ್ತದೆ.

ಅಲ್ಲಿಂದ ಮುಂದೆ ಶ್ರೀ ಕೃಷ್ಣಶಾಸ್ತ್ರಿಗಳು 'ಮಾಲೆಗಾಗಿ ಆತುರವೇ ಹೊರತು ಮದುವೆಯ ವರ್ಣನೆಯೇ ಇಲ್ಲ. ಮದುವೆ ಆಗಿಯೇ ಇರಬೇಕು. ಅದನ್ನು ಅರಿಯದವರು ಯಾರು?' ಎನ್ನುತ್ತಾರೆ. ಗಂಡು ಹೆಣ್ಣುಗಳೂ, ಸನ್ನಿವೇಶ ಸಂದರ್ಭಗಳೂ ದೇಶಕಾಲಗಳೂ ಬೇಕೇ ಹೊರತು ಮದುವೆ ಯಾವಾಗಲೂ ಒಂದೇ ಅಲ್ಲವೆ? ಎಂದು ನಾವು ಯೋಚಿಸುತ್ತಿರುವಂತೆಯೇ–'ಎರಡನೆಯ ಮದುವೆಯೆಂದು ಎಲ್ಲಾ ಆತುರದಲ್ಲಿ ನಡೆದುಹೋಯಿತೇನೊ' ಎನ್ನುತ್ತಾರೆ. ಈ ಮಾತು ವತ್ಸರಾಜನ ನಿರುತ್ಸಾಹವನ್ನು ಊಹಿಸಲು ಸಹಾಯಕವಾಗುತ್ತದೆ. ಲೋಕದಲ್ಲಿ ಎರಡನೆಯ ಸಂಬಂಧ ನಿರುತ್ಸಾಹದಿಂದ ಕೂಡಿರುತ್ತದೆಯಾದರೂ ಇಲ್ಲಿ ಎರಡು ಮೂರು ನಾಲ್ಕು ಸಂಬಂಧಗಳು ರೂಡಿಯಲ್ಲಿರುತ್ತ ವಾಸವದತ್ತೆಯಲ್ಲಿ ಅವನ ಅಳಿಸಲಾರದ ಪ್ರೇಮ ಎದ್ದುಕಾಣುತ್ತದೆ.

ಸ್ವಪ್ನಾಂಕದಲ್ಲಿ ಪದ್ಮಾವತಿಗೆ ತಲೆನೋವು ಎಂಬ ವೃತ್ತಾಂತವನ್ನು ಕೇಳಿ ವತ್ಸರಾಜ 'ಅಪಾಯಶಂಕೆ'ಯಿಂದ ಕಳವಳ ಪಡುತ್ತಾನೆ. 'ಒಂದು ಸಾರಿ ಕೈ ನೊಂದವನಾದ್ದರಿಂದ ಹೀಗೆ ಆತಂಕ ಪಡುತ್ತಾನೆ' ಎಂಬುದು ನಮ್ಮ ಎ.ಆರ್.ಕೃ. ಅವರ ಅಭಿಪ್ರಾಯ. ಲೋಕದ ಜನ ಇಂತಹ ಸನ್ನಿವೇಶಗಳಲ್ಲಿ ತೋರ್ಪಡಿಸುವ ಭ್ರಾಂತಿ, ಮೋಹಪರವಶತೆ ಈ ಮಾತಿನಿಂದ ನಮ್ಮ ಅನುಭವ ಸಾಧ್ಯವಾಗುತ್ತದೆ.

ಭಾಸನ ಸಂವಿಧಾನಕೌಶಲವನ್ನು ಸನ್ನಿವೇಶ ಕಲ್ಪನಾಚಾತುರ್ಯವನ್ನು ವಿಮರ್ಶಿಸುತ್ತ ಶ್ರೀ ಎ.ಆರ್.ಕೃ. ಅವರು 'ಮನೆಯಲ್ಲಿ ಇರುವ ಒಂದೆರಡು

ಸಾಮಗ್ರಿಗಳಿಂದಲೇ, ಮೂರು ನಾಲ್ಕು ಪಾತ್ರೆಗಳಲ್ಲಿಯೇ, ಹತ್ತಾರು ರುಚಿರುಚಿಯಾದ ಅಡಿಗೆ ಮಾಡಬಲ್ಲ ನಿಪುಣೆಯಾದ ಗೃಹಿಣಿಯಂತೆ, ಕವಿಯು ಮುಂದಿರುವ ಒಂದೆರಡು ಪಾತ್ರಗಳಲ್ಲಿಯೇ, ಹಳೆಯ ಕಥಾಸಾಮಗ್ರಿಗಳಿಂದಲೇ ಸುಂದರವಾಗಿ ಕಂಗೊಳಿಸುವ ಮನೋಹರವಾದ ರಸ ಪದಾರ್ಥಗಳನ್ನು ಸೃಷ್ಟಿಸಿದ್ದಾನೆ' ಎನ್ನುತ್ತಾರೆ. ಈ ಉಪಮೆಯನ್ನು ಅನುಮೋದಿಸದ ಉದ್ಧರಿಸದ ವಿಮರ್ಶಕರಿಲ್ಲ. ಇದು ನಿಜಕೂ ಹೃದ್ಯವಾದ ಸಾಮತಿ. ಕವಿಯಾದವನಿಗೆ ಕೃತಿರಚನೆಯಲ್ಲಿ ಎಂತಹ ಸಂಯಮಶೀಲತೆ ಇರಬೇಕು, ಉಚಿತಾನುಚಿತಜ್ಞಾನವಿರಬೇಕು, ರಸಪರಿಪೋಷಣೆಗೆ ಭಾವ ವಿಭಾವಗಳನ್ನು ಬಳಸುವಲ್ಲಿ ಎಂತಹ ಹಾಳತವಿರಬೇಕು ಎಂಬ ಭಾವವನ್ನು 'ನಿಪುಣೆಯಾದ ಗೃಹಿಣಿ' ಎಂಬ ಮಾತಿನಲ್ಲಿ ಸೂಚಿಸುತ್ತಾರೆ.

ಪ್ರತಿಮಾನಾಟಕವನ್ನು ವಿಮರ್ಶಿಸುವಾಗ ಶ್ರೀ ಕೃಷ್ಣಶಾಸ್ತ್ರಿಗಳ ಸಹೃದಯತೆ ಮೇರೆವರಿದಿದೆ. ಅಲ್ಲಿ ರಾಮ ಲಕ್ಷ್ಮಣ ಸೀತೆಯರನ್ನು ಶೃಂಗಿಬೇರಪುರದಲ್ಲಿಳಿಸಿ ಸುಮಂತ್ರನು ಹಿಂದಿರುಗಿ ಬಂದು ದುಃಖಾರ್ತನಾದ ದಶರಥನನ್ನು ಕಾಣುವ ಸಂದರ್ಭ. ಕಾಡಿಗೆ ಅವರು ಹೊರಟ ಸಮಯದಲ್ಲಿ ಅವರ ಮುಖದರ್ಶನ ಮಾಡಲವಕಾಶವಿಲ್ಲದೆ ನೊಂದು ದೀನನಾದ ದಶರಥ ಇಲ್ಲಿ ಅವರ ಸಂದೇಶವೇನು ಎಂದು ಕೇಳುವನು. ಅವರು "ಶೃಂಗಿಬೇರಪುರದಲ್ಲಿ ರಥದಿಂದ ಇಳಿದು ಅಯೋಧ್ಯಾಭಿಮುಖರಾಗಿ ನಿಂತು ಎಲ್ಲರೂ ಬಿನ್ನವಿಸಲು ಆರಂಭಿಸಿದರು. ಬಹಳ ಹೊತ್ತು ಯೋಚಿಸಿ, ಏನನ್ನೋ ಹೇಳಬೇಕೆಂದು ಪ್ರಯತ್ನ ಮಾಡಿದರು; ತುಟಿಗಳು ಅಲುಗಿದುವು; ಕಣ್ಣೀರು ಬಂದು ಕೊರಲ ಸಿರೆ ಬಿಗಿಯಿತು; ಮಾತೇಹೊರಡಲಿಲ್ಲ. ಆದ್ದರಿಂದ ಏನನ್ನೂ ಹೇಳದೆಯೇ ಮುಂದಕ್ಕೆ ಹೊರಟು ಹೋದರು." ಈ ಸಂದರ್ಭವನ್ನು ವಿಮರ್ಶಿಸುತ್ತ ಅವರು ಭಾಸನು 'ಬರಿಯ ಕೈಯಲ್ಲಿ ಬಣ್ಣ ಕಟ್ಟಿಬಿಟ್ಟಿದ್ದಾನೆ' ಎನ್ನುವರು. ಎಷ್ಟು ಮಾತನ್ನು ಹೇಗೆ ಹೇಳಿತಾನೆ ಈ ಸಂದರ್ಭದ ರಸಪೋಷಣೆಯನ್ನು ಇನ್ನೂ ಚೆನ್ನಾಗಿ ಮಾಡಬಹುದು. ಇದು ಅಭಿರಾಮತರವಾದ ಅಶ್ರುತ ಸಂದೇಶ. ಮಾತು ಬೆಳ್ಳಿ, ಮೌನ ಬಂಗಾರ ಎಂದು ತಲೆದೂಗಿದ್ದಾರೆ. ಮೌನದಲ್ಲಿ ತುಂಬಿನಿಂತ ಭಾವ ಸರೋವರಕ್ಕೆ ವಿಮರ್ಶಕನ ಚಕಾರವಿಲ್ಲ.

ಪಂಚರಾತ್ರದಲ್ಲಿ ಭೀಷ್ಮ ಮತ್ತು ದ್ರೋಣರ ಪಾತ್ರಗಳನ್ನು ತೂಗುತ್ತ, 'ಭೀಷ್ಮರು ಮಹಾಭಾರತದ ಅಗಾಧ ಸಂಸಾರವನ್ನು ನಡೆಸಬಲ್ಲ ಸಮರ್ಥರು. ಅಂತಹ ಸಂಸಾರದ ಯಜಮಾನನಿಗೆ ಇರಬೇಕಾದ ತಾಳ್ಮೆ ದೂರಾಲೋಚನೆ ಗೌರವ ಘನತೆ ಗಾಂಭೀರ್ಯಗಳನ್ನುಳ್ಳವರು. ಇಂಥಿಂಥವರ ಯೋಗ್ಯತೆ ಇಷ್ಟಿಷ್ಟೇಯೆ, ಹೀಗೆ ಹೀಗೆ ಕಾರ್ಯವು ಆರಂಭವಾದರೆ ಹೀಗೆ ಹೀಗೆ ಮುಗಿಯುತ್ತದೆಂದು ಅರಿತ ಸೂಕ್ಷ್ಮದರ್ಶಿಗಳು. ನಿಸ್ಪೃಷ್ಟ ಬುದ್ಧಿಗಳು. ವೀರಕ್ಷತ್ರಿಯರಾದರೂ ಧರ್ಮಪ್ರಿಯರಾದ ಉಪಶಾಂತರು' ಎಂದು ಹೇಳಿ ಅನಂತರ ದ್ರೋಣಾಚಾರ್ಯರನ್ನು ವಿಮರ್ಶಿಸುತ್ತ 'ಅವರೂ ಭೀಷ್ಮರ ಪಂಕ್ತಿಗೆ ಸೇರತಕ್ಕವರೇ; ಆದರೂ ಬ್ರಾಹ್ಮಣರ ಋಜುಬುದ್ಧಿ

ಯುಳ್ಳವರು, ಮೃದುಹೃದಯವುಳ್ಳವರು; ಪಾಂಡವರ ಕಷ್ಟವನ್ನು ನೆನೆದು ಹೆಂಗರುಳಿನಿಂದ ಗೞಗೞನೆ ಅತ್ತುಬಿಟ್ಟವರು. ಹೀಗೆ, ಸಂತೋಷವಾದಾಗಲೂ ಅದನ್ನು ಸುಲಭವಾಗಿ ಪ್ರಕಾಶಮಾಡಿ ಬಿಡತಕ್ಕವರು. ಆಜೀವ ಬ್ರಹ್ಮಚರ್ಯದಿಂದ ತನುಮನಗಳ ಮೇಲೆ ಅದ್ಭುತ ಸಂಯಮವನ್ನುಳ್ಳ ಭೀಷ್ಮರಂತೆ ಉಪಶಾಂತರಲ್ಲ. ಆದರೆ ತೇಜಸ್ವಿಯಾದ ಬ್ರಾಹ್ಮಣ. ಅನ್ಯಾಯ ಅವಮಾನಗಳನ್ನು ತಡೆಯುತಕ್ಕವರಲ್ಲ' ಎನ್ನುವರು. ಲೋಕದಲ್ಲಿ ಅವರವರು ಕೈಕೊಂಡ ವೃತ್ತಿ ಮಾನವರ ಸ್ವಭಾವದ ಮೇಲೆ ಎಂತಹ ಪರಿಣಾಮವನ್ನು ಬೀರುತ್ತದೆ. ಅವರ ಜೀವನದ ರೀತಿ ಅವರ ಮಾನಸಶಕ್ತಿಯನ್ನು ಹೇಗೆ ರೂಪಿಸುತ್ತದೆ ಎಂಬುದನ್ನು ಕಂಡವರು ಈ ಕವಿ ವಿಮರ್ಶಕರಿಬ್ಬರ ಮಾತಿಗೂ ಎದುರಾಡುವುದಿಲ್ಲ.

ಎ.ಆರ್.ಕೃ. ಅವರ ವಿಮರ್ಶೆಯ ಪುಟ ಪುಟಗಳಲ್ಲಿ ಇಂತಹ ನೂರಾರು ಮಾತು, ಸಾಮತಿಗಳು ಸಿಗುತ್ತವೆ. ಅವರ ವಿಮರ್ಶೆಯ ಜಾಡು ಮನೋಜ್ಞವೂ ಮಾರ್ಗದರ್ಶಕವೂ ಆದುದು. ಮಹಾಕವಿಗಳ ಭಾವಸಂಪತ್ತನ್ನು ಹಂಚಿಕೊಳ್ಳಲು ಈ ಮಾರ್ಗ ಸಹಕಾರಿ ಈ ದಾರಿಯಲ್ಲಿ ಸಾಗಿ ನಾವು ಅವರು ಸೂಚಿಸದೆ ಬಿಟ್ಟ ಒಂದು ಪ್ರಸಂಗದ ರಸಸ್ಥಾನವನ್ನು ಪರಿಶೀಲಿಸಬಹುದಾದರೆ ಭಾಸನ ಪಂಚರಾತ್ರ ನಾಟಕದಲ್ಲಿ ಭೀಮಸೇನನು ಸಾಮಾನ್ಯನಾದ ಪದಾತಿಯ ವೇಷದಲ್ಲಿ ನಿರಾಯುಧನಾಗಿ ಅಭಿಮನ್ಯುವನ್ನು ಸೆರೆಹಿಡಿದವನಂತೆ ಆಲಂಗಿಸಿ ಎತ್ತಿಕೊಂಡು ವಿರಾಟನ ಅರಮನೆಗೆ ಬಂದು ಬಿಡುತ್ತಾನೆ. ಯಾವತ್ತಿಗೂ ಶೌರ್ಯಪಕ್ಷಪಾತಿಯಾದ ಅರ್ಜುನನು ಮರೆಯಲ್ಲಿ ಭೀಮನನ್ನು ಕುರಿತು 'ಏಕೆ ಹೀಗೆ ಮಾಡಿದೆ? ತೇಜಸ್ವಿಯಾದ ಪ್ರಖ್ಯಾತವೀರನಾದ ಅರ್ಜುನನ ಮಗನಿಗೆ ಮೊದಲ ಯುದ್ಧದಲ್ಲೇ ಸೋಲಾಯಿತು ಎಂದು ಎಲ್ಲರೂ ಭಾವಿಸುವಂತಾಗುವುದಲ್ಲ. ಪತಿಯನ್ನೂ ಪುತ್ರನ್ನೂ ಅಗಲಿ ಸುಭದ್ರ ನೊಂದಾಳು. ಆ ಕಿಶೋರನ ಅಭಿಮಾನಕ್ಕೆ ಎಂತಹ ಪೆಟ್ಟು' ಎಂದರೆ ಭೀಮಸೇನನು 'ಅದೆಲ್ಲ ಸರಿ, ವೈರಿಗಳ ಮಧ್ಯೆ ಮಗುವನ್ನು ಬಿಟ್ಟಿರುವುದೆ? ಅಲ್ಲದೆ ಬಹುಕಾಲದಿಂದ ವನವಾಸ ದುಃಖದಲ್ಲಿ ನೊಂದ ದ್ರೌಪದಿ ಮಗುವನ್ನು ನೋಡಿ ಸ್ವಲ್ಪ ಸಮಾಧಾನಗೊಂಡಾಳೆಂದು ಭಾವಿಸಿ ಕರೆತಂದೆ' ಎನ್ನುತ್ತಾನೆ.

ಜಟ್ಟಿಯಂತೆ ಒರಟನಾಗಿ ಕಾಣುವ ಭೀಮನಲ್ಲಿ ಎಂತಹ ಮೃದು ಹೃದಯ! ದ್ರೌಪದಿಗಾಗಿ ಮರುಗುವವನು, ಅವಳ ಕಷ್ಟಕ್ಕೆ ಆಗುವವನು, ಅವಳ ಪ್ರತಿಜ್ಞೆಗಳನ್ನು ನಡೆಸುವವನು ಅವನೊಬ್ಬನೇ ಸರಿ. ಹೀಗೆ ವ್ಯಾಸಮಹಾಕವಿಯ ಪಾತ್ರಗಳಿಗೆ ಪೂರಕವಾಗುವಂತೆ ತನ್ನ ನಾಟಕದ ಪಾತ್ರಗಳನ್ನು ಸೃಷ್ಟಿಸಿ ಅವರುಗಳ ರಹಸ್ಯವನ್ನು ತನ್ನ ಪ್ರತಿಭಾಸಂಪನ್ನತೆಯಿಂದ ಮಿಂಚಿನ ವೇಗದಲ್ಲಿ ಹೊಳೆಯಿಸುವ ಶಕ್ತಿ ಭಾಸನಿಗಲ್ಲದೆ ಮತ್ತಾರಿಗೆ?

ಎ. ಆರ್. ಕೃ. ಅವರು ಹೀಗೆ ತಮ್ಮ ಲೋಕಾನುಭವದ ಬೀಗದಕೈಯಿಂದ ಕವಿಗಳ ಅಂತರಂಗವನ್ನು ತೆರೆಯುತ್ತಾರೆ; ಆ ರಸಲೋಕವನ್ನು ಕಾಣಿಸುತ್ತಾರೆ.

# ೩೦-ಕ ನಿಘಂಟಿಗೆ ಶಾಸ್ತ್ರಿಗಳ ಸೇವೆ

....ಇಂಗ್ಲಿಷ್-ಕನ್ನಡ ಡಿಕ್ಷನೆರಿ ಕಮಿಟಿಯಲ್ಲಿ ೧೯೩೩ ರಿಂದ ೧೯೪೬ರವರೆಗೆ ಸುಮಾರು ೧೩ ವರ್ಷಗಳ ಕಾಲ ಶಾಸ್ತ್ರಿಗಳೊಡನೆ ಕೆಲಸಮಾಡುವ ಸುಯೋಗವು ನನಗೆ ಒದಗಿತ್ತು. ಆಗ ಕಮಿಟಿಯ ಸದಸ್ಯರೆಲ್ಲರೂ ತಿಂಗಳಿಗೆ ಒಂದು ಅಥವಾ ಎರಡು ಬಾರಿ ಸೇರಿ ಡಿಕ್ಷನರಿಯ ಕರಡುಗಳಲ್ಲಿ ಉಪಯೋಗಿಸಿದ್ದ ಮಾತುಗಳು ಸರ್ವಸಮಂಜಸವಾಗಿರುವುವೇ ಇಲ್ಲವೇ ಎಂಬುದನ್ನು ವಿಮರ್ಶಿಸುತ್ತಿದ್ದೆವು. ಈ ಭಾಗದಲ್ಲಿ ಅಂತಿಮ ತೀರ್ಮಾನಕ್ಕೆ ಬರುವ ವಿಚಾರದಲ್ಲಿ ಸದಸ್ಯರ ಪೈಕಿ ಸಂಸ್ಕೃತ ಭಾಷೆಯಲ್ಲಿ ಹೆಚ್ಚು ಪರಿಶ್ರಮಹೊಂದಿದ್ದ ಶಾಸ್ತ್ರಿಗಳು ಪ್ರಧಾನ ಪಾತ್ರವಹಿಸಿ ಕೇವಲ ಸೌಹಾರ್ದ ಸಾಮರಸ್ಯ ಭಾವಗಳಿಂದ ನಮ್ಮೆಲ್ಲರಿಗೂ ಹೆಚ್ಚಿನ ಸಹಾಯ ನೀಡುತ್ತಿದ್ದರು....ಡಿಕ್ಷನರಿ ಕಮಿಟಿಯ ಸದಸ್ಯರುಗಳ ಪೈಕಿ ನಾಲ್ವರಿಗೆ ಮೈಸೂರು ಶ್ರೀಮನ್ಮಹಾರಾಜರವರಿಂದ 'ರಾಜಸೇವಾಸಕ್ತ' ಎಂಬ ಪ್ರಶಸ್ತಿಯು ಲಭ್ಯವಾಯಿತೆನ್ನುವುದು ಕನ್ನಡ ಸಾಹಿತಿಗಳೆಲ್ಲರಿಗೂ ಗೊತ್ತಿರುವ ಸಂಗತಿಯೇ. ಇದೇ ರೀತಿಯ ಸನ್ಮಾನವು ಡಿಕ್ಷನರಿ ಕಮಿಟಿಯಲ್ಲಿ ಪ್ರಧಾನ ಪಾತ್ರವಹಿಸಿದ್ದ ಶಾಸ್ತ್ರಿಗಳಿಗೂ ದೊರೆಯಬೇಕಾಗಿತ್ತು. ಆದರೆ ಅಷ್ಟರಲ್ಲಿ ಭಾರತದ ಸ್ವಾತಂತ್ರ್ಯವು ಲಭಿಸಿದ್ದರಿಂದ ಇಂಥ ಪ್ರಶಸ್ತಿ ಕೊಡುವುದನ್ನು ನಿಲ್ಲಿಸಿದ ಪ್ರಯುಕ್ತ ಅವರಿಗೆ ಪ್ರಶಸ್ತಿ ದೊರೆಯದೆ ಹೋಯಿತು. ಆದರೂ ಅವರ ಸಾಹಿತ್ಯಸೇವೆಯು ಮಾತ್ರ ಚಿರಸ್ಥಾಯಿಯಾಗಿರುವುದರಲ್ಲಿ ಸಂಶಯವಿರಲಾರದು....

—ಡಿ. ಸಿ. ಸುಬ್ಬರಾಯಪ್ಪ

('ಜೀವನ', ಆಗಸ್ಟ್-೧೯೫೨)



ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟು ಸಂಪಾದಕ ಸಮಿತಿ ಮತ್ತು ಸಿಬ್ಬಂದಿಯೊಡನೆ



ಶಾಸ್ತ್ರಿಗಳು ಹೈದರಾಬಾದ್ ಸಮ್ಮೇಳನದಲ್ಲಿ ಅಧ್ಯಕ್ಷ ಭಾಷಣ ಮಾಡುತ್ತಿರುವುದು
ಪಕ್ಕದಲ್ಲಿ 'ಶ್ರೀ' ಅವರನ್ನೂ ಕಾಣಬಹುದು (೧೯೪೧)

[ಸೌಜನ್ಯ : ಪಿ. ವೈದ್ಯ]

ಗೊರೂರು ರಾಮಸ್ವಾಮಿ ಅಯ್ಯಂಗಾರ್

# ಕೃಷ್ಣಶಾಸ್ತ್ರಿಗಳ ಮಾರ್ಗ

ಡಾಕ್ಟರ್ ಅಂಬಳೆ ಕೃಷ್ಣಶಾಸ್ತ್ರಿಗಳು, ಕನ್ನಡ ಸಾರಸ್ವತಲೋಕದ ಅಮೂಲ್ಯ ಸಂಪತ್ತು. ಅವರು ಕನ್ನಡ ಇಂಗ್ಲಿಷ್ ಸಂಸ್ಕೃತ ಮೂರು ಭಾಷೆಗಳಲ್ಲಿಯೂ ಉದ್ದಾಮ ಪಂಡಿತರು. ವಂಗಭಾಷೆಯಲ್ಲಿ ಪ್ರೌಢಿಮೆಯನ್ನೂ ತಮಿಳುಭಾಷಾ ಜ್ಞಾನವನ್ನೂ ಸಂಪಾದಿಸಿದ್ದರು. ಭಾಷಾಶಾಸ್ತ್ರ, ಧ್ವನಿಶಾಸ್ತ್ರಗಳ ಶಾಸ್ತ್ರೀಯ ಗಾಢ ಪರಿಚಯವನ್ನು ಹೊಂದಿದ್ದರು. ಮೂವತ್ತು ವರ್ಷಗಳ ಕಾಲ ವಿಶ್ವವಿದ್ಯಾಲಯ:ದಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಅಧ್ಯಯನವನ್ನೂ ಮಾಡಿಕೊಳ್ಳುತ್ತಾ, ಅಸಂಖ್ಯಾತ ಶಿಷ್ಯರನ್ನು ದೇಶ ಮತ್ತು ನುಡಿಯ ಸೇವೆಗೆ ಸಿದ್ಧಗೊಳಿಸಿದರು. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ನಿವೃತ್ತರಾದ ಮೇಲೆಯೂ ಸಹ, ಸುಮಾರು ಇಪ್ಪತ್ತು ವರ್ಷಗಳ ಕಾಲ, ಸತತವಾಗಿ ಸಾಹಿತ್ಯ ರಚನೆಯಲ್ಲಿ ತೊಡಗಿದ್ದರು. ಅವರ ಹೆಸರನ್ನು ಕೇಳದಿದ್ದ ಕನ್ನಡಿಗನೇ ಇಲ್ಲವೆನ್ನಬಹುದು. ಅವರು ಒಳ್ಳೆಯ ವಿಮರ್ಶಕರು. ಹೊಸ ಸಾಹಿತ್ಯ ಹಳೆಯ ಸಾಹಿತ್ಯಗಳ ಮಧುರ ಮಿಲನವಾಗಿ, ಹಳೆಯದರಲ್ಲಿರುವ ಗಟ್ಟಿಯನ್ನೂ ತಿರುಳನ್ನೂ ಹೊಸದರಲ್ಲಿಯ ಚೈತನ್ಯವನ್ನೂ ನಾವೀನ್ಯವನ್ನೂ ಬಲ್ಲವರಾಗಿದ್ದರು. "ನಾನು ನವೀನ ಕನ್ನಡಿಗನೂ ಹೌದು; ಪ್ರಾಚೀನ ಸಂಸ್ಕೃತ ಪ್ರೇಮಿಯೂ ಹೌದು" ಎಂದು ಅವರೇ ಹೇಳಿಕೊಂಡಿದ್ದಾರೆ. ಭಾಸಕವಿ, ಸಂಸ್ಕೃತ ನಾಟಕ, ಬಂಕಿಂಚಂದ್ರ ಇವೂ ಇತರ ಪ್ರೌಢಲೇಖನಗಳೂ ಅವರ ನಿಖರವಾದ ವಿಮರ್ಶಾಬುದ್ಧಿಗೂ ನಿಷ್ಕೃಷ್ಟ ಜ್ಞಾನ, ಅಪಾರ ಪಾಂಡಿತ್ಯ ಅಧ್ಯಯನ ಪ್ರೌಢಿಮೆಗೂ ಸಾಕ್ಷಿಗಳಾಗಿವೆ. ಹಾಗೆಯೇ ವಚನಭಾರತ, ಕಥಾಮೃತ, ಶ್ರೀಪತಿಯ ಕಥೆಗಳು ಇವು ಅವರ ಸರಳವೂ ಮನೋಜ್ಞವೂ ರಸಪೂರ್ಣವೂ ಚೈತನ್ಯದಾಯಕವೂ ಆದ ಗದ್ಯಶೈಲಿಗೆ ಉದಾಹರಣೆಯಾಗಿವೆ. ಕನ್ನಡಗದ್ಯ ಮಾಡಲಾರದ ಕೆಲಸ ಯಾವುದೂ ಇಲ್ಲ ಎನ್ನುವುದಕ್ಕೆ ಇವರ ವಚನಭಾರತವೇ ಸಾಕು. ಹಳೆಯ ಕಥೆಯೇ ಆದರೂ ಮತ್ತೆ ಮತ್ತೆ ಓದೋಣ ಎನಿಸುವಂತಿದೆ ಅದರ ಶೈಲಿ. ಶ್ರೀರಾಮಕೃಷ್ಣಪರಮಹಂಸ, ವಿವೇಕಾನಂದ ಇವರ ಆಧ್ಯಾತ್ಮಪ್ರಭಾವಕ್ಕೆ ಸಿಲುಕಿದ ಶಾಸ್ತ್ರಿಗಳು, ಆ ಸಂತರು

ಮತ್ತು ಅವರ ಅನುಯಾಯಿಗಳನ್ನು ಸಹ ಕುರಿತು, ಪುಸ್ತಕಗಳನ್ನು ಬರೆದಿದ್ದಾರೆ. ವಂಗ ಭಾಷೆಯ ಅವರ ಪಾಂಡಿತ್ಯ ಬಂಕಿಂಚಂದ್ರ, ರವೀಂದ್ರನಾಥಠಾಕೂರರ ಕೃತಿಗಳು ಇವನ್ನು ಕುರಿತು ಅವರು ಬರೆದಿರುವ ಪ್ರೌಢಗ್ರಂಥಗಳಲ್ಲಿ ಪ್ರಕಟವಾಗಿದೆ. ಹೀಗೆ ಸರ್ವತೋಮುಖವಾದ ಪ್ರತಿಭೆಯುಳ್ಳ ಅಪೂರ್ವವ್ಯಕ್ತಿ, ಶ್ರೀಮಾನ್ ಶಾಸ್ತ್ರಿಗಳು. ಇಹಲೋಕಯಾತ್ರೆಯನ್ನು ಮುಗಿಸಿ ಹೋದುದರಿಂದ ಕನ್ನಡನಾಡು ರಿಕ್ತವಾಗಿದೆ. ಆದರೂ ಇಂಥ ಒಬ್ಬ ಅಸಾಮಾನ್ಯವ್ಯಕ್ತಿ ತಕ್ಕಷ್ಟು ದೀರ್ಘಕಾಲ ನಮ್ಮ ನಡುವೆ ಇದ್ದು, ಈ ಕ್ಷೇತ್ರವನ್ನು ದುಡಿದು ಹಸನುಗೊಳಿಸಿ ಇಲ್ಲಿ ಫಲ ಬಿಡುವುದರ ಸೂಚನೆಯನ್ನೂ ನೋಡಿ, ಮುಂದಲ ಜನಾಂಗಕ್ಕೆ ಆದರ್ಶರಾಗಿ ಬಾಳಿದರಲ್ಲಾ ಎಂಬ ಸಮಾಧಾನದಿಂದ ನಾಡು, ಈ ಅರಕೆಯನ್ನು ಸಹಿಸಿಕೊಳ್ಳ ಬೇಕಾಗಿದೆ.

ಶ್ರೀಮಾನ್ ಶಾಸ್ತ್ರಿಗಳು ತಮ್ಮ ಜೀವಮಾನವನ್ನೆಲ್ಲ, ಜೇನುಹುಳು ಮಧು ವನ್ನು ಸಂಗ್ರಹಿಸುವಂತೆ ಜ್ಞಾನಾರ್ಜನೆ, ಜ್ಞಾನಪ್ರಚಾರ ಮತ್ತು ಜ್ಞಾನವಿತರಣೆ ಗಾಗಿ ವಿನಿಯೋಗಿಸಿದರು. ಒಂದು ದೃಷ್ಟಿಯಲ್ಲಿ ಅವರದು ಸಾಹಸಮಯ ಜೀವನವೇ. ಬಾಲ್ಯ ವಿದ್ಯಾಭ್ಯಾಸ, ಬಾಲಪಾಠ ನಡೆದುದು, ಸಂಸ್ಕೃತದಲ್ಲಿ ಅವರ ತಂದೆಯವರಾದ ಶ್ರೀಮಾನ್ ರಾಮಕೃಷ್ಣಶಾಸ್ತ್ರಿಗಳಲ್ಲಿ. ರಾಮಕೃಷ್ಣಶಾಸ್ತ್ರಿಗಳು ಆ ಕಾಲದ ಸಂಸ್ಕೃತ ವಿದ್ವಾಂಸರಲ್ಲಿ ಅಗ್ರಗಣ್ಯರಾಗಿದ್ದರು. ಅವರು ಮಹಾರಾಜ ಸಂಸ್ಕೃತ ಪಾಠಶಾಲೆಯಲ್ಲಿ ವ್ಯಾಕರಣದ ಪ್ರಾಧ್ಯಾಪಕರಾಗಿದ್ದರು. ಅವರ ಮನೆಯ ವಾತಾವರಣವೆಲ್ಲ ಸಂಸ್ಕೃತ ವಿದ್ವತ್ಮಯ, ಕಂಬ ಕಂಬಗಳೂ ರಾಮಶಬ್ದವನ್ನು ಹೇಳುತ್ತಿದ್ದವು. ಕೃಷ್ಣಶಾಸ್ತ್ರಿಗಳ ತಂದೆಯವರು ನಾಲ್ಕು ಐದು ವರುಷ ವಯಸ್ಸಿನ ತಮ್ಮ ಮಗನನ್ನು, ಸಂಸ್ಕೃತ ಪಾಠಶಾಲೆಗೆ ತಮ್ಮ ಜತೆ ಕರೆದುಕೊಂಡು ಹೋಗು ತ್ತಿದ್ದರು. ಅಲ್ಲಿ ಇತರ ವಿದ್ಯಾರ್ಥಿಗಳ ಜೊತೆಯಲ್ಲಿ ಈ ಬಾಲಕನಿಗೂ ಸಂಸ್ಕೃತಶ್ಲೋಕ, ಅಮರ, ಪಾಣಿನಿಸೂತ್ರಗಳು ಬಾಯಿಪಾಠವಾದುವು. ತಂದೆಯವರೇ ಕನ್ನಡವನ್ನೂ ಹೇಳಿಕೊಟ್ಟರು. ರಘುವಂಶ, ಕುಮಾರಸಂಭವ ಚಂಪು ರಾಮಾಯಣದ ಸ್ವಲ್ಪಭಾಗ, ಇಷ್ಟು ಆಗುವುದರೊಳಗಾಗಿ ಅವರ ತಾಯಿ ಸ್ವರ್ಗಸ್ಥರಾದರು. ಅನಂತರ ಕೆಲವು ಕಾಲ ಹಳ್ಳಿಯಲ್ಲಿ ದಿಕ್ಕೆಟ್ಟು ತಬ್ಬಲಿಯಾಗಿ ತಿರುಗಿ, ಲೌಕಿಕ ವಿದ್ಯೆಗಾಗಿ ಹೈಸ್ಕೂಲು ಸೇರಿ, ಕೆಲವು ಕಾಲ ಪೂರ್ತಾಶುಲ್ಕಮಾಫಿ, ಕೆಲವು ಕಾಲ ಅರ್ಧಮಾಫಿ, ಕೆಲವು ಕಾಲ ಪೂರ್ತಾಶುಲ್ಕತೆತ್ತು ಮೆಟ್ರಿಕುಲೇಶನ್ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಅವರ ಬುದ್ಧಿ, ತೀಕ್ಷ್ಣವಾಗಿತ್ತು. ಅವರಿಗೆ ಹೆಚ್ಚು ಅಂಕಗಳೂ ಬರುತ್ತಿದ್ದವು. ಅಲ್ಲದೆ ಆಗ ವಿಜ್ಞಾನಕ್ಕೆ ಪ್ರಾಧಾನ್ಯ ಹೆಚ್ಚಾಗುತ್ತಿತ್ತು. ವಿಜ್ಞಾನದ ಕಾಲೇಜು ಬೆಂಗಳೂರು ಸೆಂಟ್ರಲ್ ಕಾಲೇಜು; ಅಲ್ಲಿ ಹೋಗಿ ಇಂಟರ್ ಮೀಡಿಯೇಟ್‌ಗೆ ಸೇರಬೇಕೆಂಬುದು ಶಾಸ್ತ್ರಿಗಳ ಉದ್ದೇಶವಾಗಿತ್ತು. ಅವರಿಗೆ ವಿಜ್ಞಾನದ ವಿಷಯದಲ್ಲಿ ಸ್ವಾಭಾವಿಕ ವಾಗಿ ಅಭಿರುಚಿ ಇತ್ತು. ಅವರಿಗೆ ಚಿಕ್ಕವಯಸ್ಸಿನಲ್ಲಿಯೇ "ಸಾಹಿತ್ಯ,

ಸುಳ್ಳಿನ ಮೇಲೆ ಕಟ್ಟಿದ ಗಾಳಿಗೋಪುರ ವಿಜ್ಞಾನ, ಸತ್ಯದ ಮೇಲೆ ಕಟ್ಟಿದ ಸೌಧ" ಎಂದು ವಿಜ್ಞಾನದ ಮೇಲೆ ಒಂದು ಪಕ್ಷಪಾತ ಬಂದುಬಿಟ್ಟಿತ್ತು. ಆದರೆ ಸಂಸ್ಕೃತ ವ್ಯಾಕರಣ ಪ್ರಾಧ್ಯಾಪಕರಾದ ಅವರ ತಂದೆಯವರಿಗೆ ಅವರು ತಮ್ಮ ಶಾಸ್ತ್ರದಲ್ಲಿ ಅದ್ವಿತೀಯ ಪಂಡಿತರಾಗಿದ್ದರೂ, ಆಗಿನ ಸಂಸ್ಕೃತ ವಿದ್ವಾಂಸರಿಗೆ ಸಂಬಳವೇ ಅತಿ ಕಡಿಮೆ ಇದ್ದುದರಿಂದ, ಮಗನನ್ನು ವಿಜ್ಞಾನ ಕಾಲೇಜಿಗೆ ಸೇರಿಸಲು ಶಕ್ತಿ ಇರಲಿಲ್ಲ. ಆದುದರಿಂದ ಕೃಷ್ಣಶಾಸ್ತ್ರಿಗಳು, ಮೈಸೂರು ಕಾಲೇಜನ್ನು ಸೇರಿದರು. ಆದರೆ ಅಲ್ಲಿಯೂ ಆಗ ಚರಿತ್ರೆಯ ಪಠ್ಯಪುಸ್ತಕಗಳನ್ನು ಕೊಳ್ಳಲು ಬೇಕಾಗಿದ್ದ ಮೂವತ್ತು ರೂಪಾಯಿಗಳನ್ನು ಒದಗಿಸಲು ಅವರ ತಂದೆಯವರಿಗೆ ಸಾಧ್ಯವಾಗದುದರಿಂದ ಅವರು "ಅಷ್ಟು ದುಡ್ಡನ್ನು ಎಲ್ಲಿಂದ ತರುವುದು ಬೇಕಾದರೆ ಸಂಸ್ಕೃತವನ್ನೋ ಕನ್ನಡವನ್ನೋ ತೆಗೆದುಕೊ ನನ್ನಲ್ಲಿರುವ ಪುಸ್ತಕಗಳನ್ನೇ ಕೊಡುತ್ತೇನೆ" ಎಂದರು. (ಒಬ್ಬ ಇಂಟರ್ ಮೀಡಿಯೇಟ್ ವಿದ್ಯಾರ್ಥಿಗೆ ಪಠ್ಯಪುಸ್ತಕ ಕೊಳ್ಳಲು ಮೂವತ್ತು ರೂಪಾಯಿ ಇಲ್ಲದುದರಿಂದ, ತನ್ನ ವ್ಯಾಸಂಗ ವಿಷಯವನ್ನೇ ಬದಲಾಯಿಸಬೇಕಾಯಿತು !) ಕೊನೆಗೆ ಶಾಸ್ತ್ರಿಗಳು ಕನ್ನಡವನ್ನು ತೆಗೆದುಕೊಂಡು, ಮೈಸೂರು ಕಾಲೇಜಿನಿಂದ ಬಿ. ಎ. ಮಾಡಿಕೊಂಡರು. ಸಂಸ್ಕೃತವನ್ನೂ, ಪಂಡಿತರ ಸಹಾಯದಿಂದ ಸ್ವಂತವಾಗಿಯೇ ಅಭ್ಯಾಸಮಾಡಿ ಉತ್ತಮ ಪಾಂಡಿತ್ಯವನ್ನು ಸಂಪಾದಿಸಿಕೊಂಡರು. ಮೈಸೂರಿನಲ್ಲಿ ಆಗ ಎಂ. ಎ. ಪರೀಕ್ಷೆ ಇರಲಿಲ್ಲ. ಅದಕ್ಕೆ ಮದರಾಸಿಗೆ ಹೋಗಬೇಕಾಗಿತ್ತು. ಶಾಸ್ತ್ರಿಗಳಿಗೆ ಅದಕ್ಕೆ ಬೇಕಾದ ಆರ್ಥಿಕ ಬಲವಿರಲಿಲ್ಲ. ಯಾವುದೋ ಒಂದು ವರ್ಷ–ಯಾರಿಗೆ ಅನುಕೂಲವಾಗಲೆಂದೋ ಏನೋ–ಮದರಾಸು ಎಂ. ಎ. ಪರೀಕ್ಷೆಗೆ ಸ್ವಂತವ್ಯಾಸಂಗದಿಂದ ಹೋಗಬಹುದೆಂದು ಅವಕಾಶ ಕೊಟ್ಟರು. ಆ ಅವಕಾಶವನ್ನು ಉಪಯೋಗಿಸಿಕೊಂಡು, ಶಾಸ್ತ್ರಿಗಳು, ಸಂಸ್ಕೃತ ಕನ್ನಡ ಎರಡರಲ್ಲಿಯೂ ಎಂ. ಎ. ಪದವೀಧರರಾದರು. ಅದು ಅವರ ಅದೃಷ್ಟವೆಂದೂ ಹೇಳಬೇಕು. ಅವಕಾಶ ಸಿಕ್ಕಿದ ಆ ಒಂದೇ ವರುಷದಲ್ಲಿ ಎರಡು (ಸಂಸ್ಕೃತ–ಕನ್ನಡ) ವಿಷಯಗಳಲ್ಲಿಯೂ ಎಂ. ಎ. ಪರೀಕ್ಷೆ ಕೊಟ್ಟು ತೇರ್ಗಡೆಯಾಗುವಷ್ಟು ಅವರು ಸಿದ್ಧರಾಗಿದ್ದುದು ಅವರ ವಿಶಾಲ ಪಾಂಡಿತ್ಯಕ್ಕೆ ಉದಾಹರಣೆ.

ಶಾಸ್ತ್ರಿಗಳ ವಿದ್ಯಾರ್ಜನೆಯ ಈ ಇತಿಹಾಸವೇ ಸಾಕು—ಅವರ ಕೆಚ್ಚೆದೆ, ವಿದ್ಯಾಪ್ರೇಮ, ಜ್ಞಾನಪಿಪಾಸೆ, ದೊರೆತುದನ್ನು ಅಂಗೀಕರಿಸಿ ಅದರ ಮೂಲಕವೇ ತನ್ನ ಆದರ್ಶವನ್ನು ಸಾಧಿಸುವ ಆತ್ಮಪ್ರತ್ಯಯ ಇವನ್ನು ಸೂಚಿಸಲು. ಅಳ್ಳೆದೆಯವರಾಗಿದ್ದರೆ, ಯಾವುದೋ ಒಂದು ಮಟ್ಟದಲ್ಲಿ–ವಿಜ್ಞಾನಕ್ಕೆ ಹೋಗಲು ಅವಕಾಶವಾಗದಾಗ ಅಥವಾ ಚರಿತ್ರೆಯನ್ನು ತೆಗೆದುಕೊಳ್ಳಲು ಸಹ ಅವಕಾಶವಾಗದಾಗ ಅಥವಾ ತನ್ನ ಸಹಪಾಠಿಗಳೆಲ್ಲ ತಮಗೆ ಬೇಕಾದ ವಿಷಯವನ್ನು ತೆಗೆದುಕೊಂಡು ಪರೀಕ್ಷೆ ಕೊಡಲು ಅನುಕೂಲವಿದ್ದರೂ ತಾನು ಮಾತ್ರ ಪುಸ್ತಕಕೊಳ್ಳಲೂ ಸಹ

೩೦ ರೂ ಇಲ್ಲದೆ, ದೊರೆತ ವಿಷಯವನ್ನೇ ಅನಿವಾರ್ಯವಾಗಿ ಆರಿಸಿಕೊಳ್ಳಬೇಕಾದಾಗ, ಇಲ್ಲಿ ವ್ಯಾಸಂಗವನ್ನೇ ಬಿಡುತ್ತಿದ್ದರು; ಅಥವಾ ಜೀವಮಾನವೆಲ್ಲ ಅತೃಪ್ತರಾಗಿ ಸಿಡಕು ಮೋರೆ ಹಾಕಿಕೊಂಡು ಎಲ್ಲ ಆದರ್ಶವನ್ನೂ ಕಳೆದುಕೊಂಡು ನಿರುತ್ಸಾಹಿಗಳಾಗಿ ಬಿಡುತ್ತಿದ್ದರು. ಆದರೆ ಶಾಸ್ತ್ರಿಗಳು ಗಟ್ಟಿಕುಳ; ಸುಲಭವಾಗಿ ಸೋಲುವವರಲ್ಲ. "ಹೆಳವನಾಗಿದ್ದರೂ ನಾನು ನರ್ತನ ಮಾಡಬೇಕೆನ್ನುವಿಯಾ? ಮೂಗನಾಗಿದ್ದರೂ ಹಾಡಬೇಕೆನ್ನುವಿಯಾ? ಆಗಲಿ ನಿನ್ನ ಸವಾಲನ್ನು ಅಂಗೀಕರಿಸುತ್ತೇನೆ" ಎಂದು ವಿಧಿಗೆ ನುಡಿದು ಕನ್ನಡದ ಕಣಕ್ಕೆ ಇಳಿದರು. ಕನ್ನಡಿಗರ ಅದೃಷ್ಟ ಕುಲಾಯಿಸಿತು. "ಕ್ರಿಯಾಸಿದ್ಧಿಃ ಸತ್ವೇ ಭವತಿ ಮಹತಾಂ ನೋಪಕರಣೇ" (ಶಕ್ತರಿಗೆ ಕ್ರಿಯಾಸಿದ್ಧಿಯಾಗುವುದು ತಮ್ಮ ಸತ್ವದಿಂದ, ಉಪಕರಣಗಳಿಂದಲ್ಲ). ಇಷ್ಟು ಕಷ್ಟದಿಂದ ಪದವೀಧರರಾದರೂ, ಶಾಸ್ತ್ರಿಗಳಿಗೆ ಪ್ರಾರಂಭದಲ್ಲಿ ಸರ್ಕಾರಿ ನೌಕರಿ, ಸುಲಭವಾಗಿ ದೊರಕಲಿಲ್ಲ. ಕನ್ನಡದ ಸೇವೆ ಮಾಡಬೇಕೆಂದು ಅವರಿಗೆ ತೀವ್ರ ಆಸೆಯಿದ್ದರೂ, ಶಿಕ್ಷಣ ಇಲಾಖೆ, ವಿದ್ಯಾ ಇಲಾಖೆ ಕಾಲೇಜು ಎಲ್ಲಿಯೂ ಅವರಿಗೆ ನೌಕರಿ ದೊರೆಯದುದರಿಂದ, ಅವರು ಕೆಲವು ತಿಂಗಳು ಡಿಸ್ಟ್ರಿಕ್ಟ್ ಆಫೀಸಿನಲ್ಲಿ ತಿಂಗಳಿಗೆ ೩೫ ರೂ. ಸಂಬಳದ ಮೇಲೆ ನೌಕರಿಗೆ ಸೇರಿದರು. ಅನಂತರ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಪ್ರಭಾವದಿಂದ ಸೆಂಟ್ರಲ್ ಕಾಲೇಜಿನಲ್ಲಿ ತಿಂಗಳಿಗೆ ೫೦ ರೂ ಸಂಬಳದ ಮೇಲೆ ಕನ್ನಡ ಉಪಾಧ್ಯಾಯರಾದರು. ಅಲ್ಲಿಯೂ ತಿಂಗಳು ತಿಂಗಳಿಗೆ ಸಂಬಳ ಬರದೆ ಆರು ತಿಂಗಳ ಸಂಬಳ ಒಟ್ಟಾಗಿ ಬಂತು. ಶಾಸ್ತ್ರಿಗಳು ಸಾಲಮಾಡಿ ಜೀವಿಸಬೇಕಾಯಿತು. ಹೀಗಾದರೂ ಶಾಸ್ತ್ರಿಗಳು ಕನ್ನಡ ಉಪಾಧ್ಯಾಯರಾದುದು ಕನ್ನಡದ ಅದೃಷ್ಟ. ಸ್ವತಃ ಬಿ. ಎಂ. ಶ್ರೀಕಂಠಯ್ಯನವರೇ, ಮಹಾರಾಜಾ ಕಾಲೇಜಿನ ಉಪಾಧ್ಯಾಯ ವಿಯಲ್‌ವರ ಸಹಾಯವಿಲ್ಲದಿದ್ದರೆ, ಲಾಯರ್ ಆಗಬೇಕೆಂದಿದ್ದರಂತೆ. ಶಾಸ್ತ್ರಿಗಳೇ "ಇದು ನಮ್ಮಂಥವರ ಅದೃಷ್ಟ. ಕನ್ನಡದ ಅದೃಷ್ಟ" ಎನ್ನುತ್ತಾರೆ.

ಗರಡಿಸಾಧಕ, ದಿನದಿನವೂ ವ್ಯಾಯಾಮಮಾಡುತ್ತಾ, ತನ್ನ ಸಾಹಸವನ್ನು ತೋರಿಸಬೇಕಾದ ದಿನಕ್ಕೆ ಸಿದ್ಧವಾಗುವಂತೆ ಈ ಎಲ್ಲ ಕಷ್ಟಕಾರ್ಪಣ್ಯಗಳೂ ಸಾಧನೆಗಳೂ ಶಾಸ್ತ್ರಿಗಳ ಕಾರ್ಯಶಕ್ತಿಯನ್ನು ಇಮ್ಮಡಿಸಿದವೇ ಹೊರತು ಕುಗ್ಗಿಸಲಿಲ್ಲ. ಅವರು ಸೆಂಟ್ರಲ್ ಕಾಲೇಜಿಗೆ ಕನ್ನಡದ ಉಪಾಧ್ಯಾಯರಾಗಿ ಹೋದಾಗ ಕನ್ನಡದ ಸ್ಥಿತಿ ತುಂಬ ಹೀನವಾಗಿತ್ತು. "ಅದು ಮೈಸೂರು ವಿಶ್ವವಿದ್ಯಾಲಯ ಹುಟ್ಟಿದ ಹೊಸದು. ವಿದ್ಯಾರ್ಥಿಗಳು ಅದರ ಪರೀಕ್ಷೆಗಳಿಗೆ ಕೂರುವ ಕಾಲ ಇನ್ನೂ ಬಂದಿರಲಿಲ್ಲ. ಮದರಾಸು ವಿಶ್ವವಿದ್ಯಾಲಯದ ಇಂಟರ್‌ಮೀಡಿಯೇಟ್ ಪರೀಕ್ಷೆಗೆ, ಕನ್ನಡ ಪ್ರಬಂಧಪತ್ರಿಕೆಯಲ್ಲಿ ಇಂಗ್ಲಿಷ್ ಪಠ್ಯಪುಸ್ತಕದ ಮೇಲೆ ಒಂದು ಪ್ರಶ್ನೆ ಬರುತ್ತಿತ್ತು. ಅದನ್ನು ಅದುವರೆಗೆ ಇಂಗ್ಲಿಷ್ ಉಪಾಧ್ಯಾಯರು ತೆಗೆದುಕೊಳ್ಳುತ್ತಿರಲಿಲ್ಲ. ಕನ್ನಡದವರಿಗೆ ಸಾಧ್ಯವಿರಲಿಲ್ಲ. ಇಂತಹ ಸ್ಥಿತಿಯಲ್ಲಿ, ಕನ್ನಡ ಇಂಗ್ಲಿಷ್

ಎರಡನ್ನೂ ಬಲ್ಲವರಾದ ಶಾಸ್ತ್ರಿಗಳು, ಇಂಗ್ಲಿಷ್ ಪಠ್ಯಪುಸ್ತಕವನ್ನು ಇಂಗ್ಲಿಷ್ ಉಪಾಧ್ಯಾಯನಂತೆ, ವಿದ್ಯಾರ್ಥಿಯಂತೆ ವ್ಯಾಸಂಗಮಾಡಿ, ಅದರ ಸಾರಾಂಶವನ್ನು ಬರೆದುಕೊಟ್ಟು, ಕನ್ನಡ ಪ್ರಬಂಧವನ್ನು ಬರೆದು ಹೇಳಿ ಹುಡುಗರನ್ನು ತಯಾರು ಮಾಡಿದರು. ಆಗ ಕನ್ನಡ ಉಪಾಧ್ಯಾಯರ ಸ್ಥಿತಿಯೂ ಕೆಲಸವೂ ಬಹಳ ಕಷ್ಟಕರವಾಗಿತ್ತು. ಪರಕೀಯರ ಆಳ್ವಿಕೆಯಲ್ಲಿ ಕನ್ನಡಕ್ಕಾಗಲೀ ಕನ್ನಡ ಮುನಿಶಿಗಳಿಗಾಗಲೀ ಮರ್ಯಾದೆ ಇರಲಿಲ್ಲ. ಕನ್ನಡ ತನ್ನ ಮನೆಯಲ್ಲಿಯೇ ಕೊನೆಯದಾಸಿಯಂತೆ ಮೂಲೆಗುಂಪಾಗಿ ಬಿದ್ದಿತ್ತು. ಅದುವರೆಗೆ ಉದ್ದಾಮಪಂಡಿತರು ಕನ್ನಡದಲ್ಲಿ ಪಾಠ ಹೇಳುತ್ತಿದ್ದರೂ, ಇಂಗ್ಲಿಷ್ ಪಠ್ಯಪುಸ್ತಕದ ಪ್ರಶ್ನೆಯನ್ನು ಕನ್ನಡಪ್ರಬಂಧಕ್ಕೆ ಇಡುತ್ತಿದ್ದ ಅಸ್ವಾಭಾವಿಕಪರಿಸ್ಥಿತಿಯಿಂದ, ಆ ಪಂಡಿತರು ಎಷ್ಟೇ ಪ್ರಾಜ್ಞರಾದರೂ ಪಾಠ ಹೇಳಲು ಅಸಮರ್ಥರಾಗಿ ವಿದ್ಯಾರ್ಥಿಗಳ ಗೇಲಿಗೆ ತುತ್ತಾಗುತ್ತಿದ್ದರು. ಕನ್ನಡದ ತರಗತಿಯಲ್ಲಿ ದೊಡ್ಡಲಗ್ಗೆಹತ್ತಿದಂತೆ ಗದ್ದಲವಾಗಿ ಉಪಾಧ್ಯಾಯರು, ಇಂಗ್ಲಿಷ್‌ಪ್ರೇಮಿ ವಿದ್ಯಾರ್ಥಿಗಳ ತಿರಸ್ಕಾರ, ಅನಾದರ, ಅಪಹಾಸ್ಯಗಳಿಗೆ ಗುರಿಯಾಗಿ ಇತರ ತರಗತಿಗಳಲ್ಲಿ ಸಹ, ಉಪಾಧ್ಯಾಯರು ಪಾಠಗಳನ್ನು ನಡೆಸಲು ಕಷ್ಟವಾಗುತ್ತಿತ್ತು. ಶಾಸ್ತ್ರಿಗಳು ತಾವು ಉಪಾಧ್ಯಾಯರಾದ ಪ್ರಾರಂಭದಲ್ಲಿ ಈ ಅಧ್ವಾನವನ್ನು ಸರಿಪಡಿಸಿ, ಕನ್ನಡ ಉಪಾಧ್ಯಾಯರೂ ಇತರ ಉಪಾಧ್ಯಾಯರಂತೆ ಪಾಠಮಾಡಬಲ್ಲರು, ಕನ್ನಡದಲ್ಲಿಯೂ ಕಲಿಯುವುದು ಬಹಳ ಇದೆ; ಇದು ಸೊಗಸಾದ ಭಾಷೆ; ನಮ್ಮ ಗೌರವ ಮನ್ನಣೆ ವ್ಯಾಸಂಗಕ್ಕೆ ಅರ್ಹವಾದ ಭಾಷೆ ಎಂದು ವಿದ್ಯಾರ್ಥಿಗಳಲ್ಲಿ ಒಂದೆರಡು ವರುಷಗಳಲ್ಲಿಯೇ ಅಭಿಮಾನವನ್ನು ಹುಟ್ಟಿಸಿದರು. ಹಾಗೆ ಇಂಗ್ಲಿಷನ್ನೂ ಬಲ್ಲವರಾಗಿ ಆ ಗರಡಿಯ ಪಟ್ಟುಗಳನ್ನೂ ಉಪಯೋಗಿಸುತ್ತಾ ಕನ್ನಡ ಪಾಠಮಾಡಲು ಮೊದಲುಮಾಡಿದ ಉಪಾಧ್ಯಾಯರಲ್ಲಿ ಶಾಸ್ತ್ರಿಗಳು ಅಗ್ರಗಣ್ಯರು. ಆತ್ಮಪ್ರತ್ಯಯವೂ ಪಾಂಡಿತ್ಯವೂ ಬಹುಭಾಷಾಜ್ಞಾನವೂ ಇದ್ದ ಶಾಸ್ತ್ರಿಗಳು, ಸಂಬಳ ತಮಗೆ ಕಡಿಮೆಯಾದರೂ, ತಮಗಿಂತ ಹತ್ತರಷ್ಟು ಹೆಚ್ಚು ಸಂಬಳ ತೆಗೆದುಕೊಳ್ಳುತ್ತಿದ್ದ ಇಂಗ್ಲಿಷ್, ವಿಜ್ಞಾನ ವೇದಾಂತ ಉಪಾಧ್ಯಾಯರುಗಳಂತೆ ಧೈರ್ಯವಾಗಿ ತಲೆ ಎತ್ತಿಕೊಂಡು ತರಗತಿಗೆ ಹೋಗುತ್ತಿದ್ದರು. ಆಗಿನ ಕಾಲದಲ್ಲಿ ಅವರ ವಿಷಯದಲ್ಲಿ ಒಂದು ದಂತಕಥೆ ಪ್ರಚಾರದಲ್ಲಿತ್ತು (ನಾನು ಅವರ ವಿದ್ಯಾರ್ಥಿಯಲ್ಲವಾಗಿ ಅವರ ವಿದ್ಯಾರ್ಥಿಗಳಾದ ಶ್ರೀ ಎಸ್. ವಿ. ರಂಗಣ್ಣನವರೂ, ಪದ್ಮಶ್ರೀ ಸಿ. ಕೆ. ವೆಂಕಟರಾಮಯ್ಯನವರೂ ಈ ಸಂಗತಿಯ ಸತ್ಯಾಸತ್ಯತೆಯನ್ನು ಕುರಿತು ಹೇಳಬಹುದು). ಸಂಗತಿ ಸತ್ಯವಿರಲಿ ಅಥವಾ ಬೇರೆ ಇರಲಿ ಶಾಸ್ತ್ರಿಗಳ ಶಕ್ತಿಸಾಮರ್ಥ್ಯಗಳ ವಿಷಯದಲ್ಲಿ ಜನರಲ್ಲಿ ಆಗ ಯಾವ ಭಾವನೆ ಇದ್ದಿತೆಂಬುದನ್ನು ಇದು ತೋರಿಸುತ್ತದೆ. ಆ ಕಥೆ ಹೀಗೆ: ಶಾಸ್ತ್ರಿಗಳು ಮೊದಲ ದಿವಸವೇ ತರಗತಿಗೆ "ಸೂಟ್" ಧರಿಸಿಕೊಂಡು ಟಿಪ್‌ಟಾಪ್ ಆಗಿ ಬಂದರು. ಕನ್ನಡ ಪಂಡಿತರು ಸೂಟ್ ಹಾಕಿಕೊಂಡು ಆವರೆಗೆ ಬಂದಿರಲಿಲ್ಲ. ಯಾವಾಗಲೂ

ಸೂಟನ್ನೇ ಧರಿಸುತ್ತಿದ್ದ ಮತ್ತೊಬ್ಬ ಉಪಾಧ್ಯಾಯರು "ಇದೇನು ಕನ್ನಡ ಪಂಡಿತರಿಗೆ ಇಂಗ್ಲಿಷ್ ಸೂಟ್ ?" ಎಂದು ಕೇಳಿದರಂತೆ. ಶಾಸ್ತ್ರಿಗಳು "ಸೂಟು ಮಾತ್ರವೇ ಅಲ್ಲ. ಪಾಠವನ್ನೂ ಇಂಗ್ಲೀಷ್ ಪಾಠದಂತೆಯೇ ಮಾಡುತ್ತೇನೆ" ಎಂದರಂತೆ. ಹೀಗೆ ಶಾಸ್ತ್ರಿಗಳು ಬಹುಬೇಗ ಸೆಂಟ್ರಲ್ ಕಾಲೇಜಿನಲ್ಲಿ ವಿದ್ಯಾರ್ಥಿಗಳೆಲ್ಲರ ಪ್ರೇಮಾದರಗಳಿಗೆ ಪಾತ್ರರಾದರು.

ವಿದ್ಯಾರ್ಥಿಗಳ ಉತ್ಸಾಹವನ್ನು ಶಾಸ್ತ್ರಿಗಳು ಕನ್ನಡದ ಕೆಲಸಕ್ಕೆ ಉಪಯೋಗಿಸಿಕೊಂಡರು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಕರ್ಣಾಟಕಸಂಘವೆಂಬುದನ್ನು ಸ್ಥಾಪಿಸಿದರು. ಸರಿಯಾದ ಉಪಾಧ್ಯಾಯರ ನೇತೃತ್ವವೂ ಪ್ರೋತ್ಸಾಹವೂ ಬೋಧನೆಯೂ ದೊರೆತುದರಿಂದ, ವಿದ್ಯಾರ್ಥಿಗಳು ತಮ್ಮ ಪಠ್ಯಪುಸ್ತಕಗಳ ಮೇಲೆಯೂ ಇತರ ವಿಷಯಗಳ ಮೇಲೆಯೂ ಉತ್ತಮವಾದ ವಿಮರ್ಶಾತ್ಮಕವಾದ ಪ್ರಬಂಧಗಳನ್ನು ಬರೆಯತೊಡಗಿದರು. ಅವರು ಅವುಗಳನ್ನು ತಮ್ಮ ಪರೀಕ್ಷೆಯ ವಿಷಯಕ್ಕಾಗಿಯೇ ಬರೆಯುತ್ತಿದ್ದರೂ, ಅವುಗಳಲ್ಲಿ ಸಾರ್ವಕಾಲಿಕವಾದ ಮೌಲ್ಯವಿದ್ದುದರಿಂದ ಆ ಪ್ರಬಂಧಗಳನ್ನೆಲ್ಲ ಪ್ರಕಟಿಸಿದರೆ, ಕನ್ನಡದ ಜನತೆಯಲ್ಲಿ ಜಾಗ್ರತಿಯೂ ಜ್ಞಾನಪ್ರಚಾರವೂ ಆಗುವುದೆಂಬುದನ್ನು ಅರಿತು, ಶಾಸ್ತ್ರಿಗಳು ಆ ಉದ್ದೇಶಕ್ಕಾಗಿಯೇ ಪ್ರಬುದ್ಧ ಕರ್ಣಾಟಕವೆಂಬ ಹೆಸರಿನ ಒಂದು ತ್ರೈಮಾಸಿಕವನ್ನು ಪ್ರಾರಂಭಿಸಿದರು.

ಶಾಸ್ತ್ರಿಗಳು ಮಾಡಿದುದು ಬಹಳ ಸಾಹಸದಕಾರ್ಯ. ಅವರು ಧನಿಕರಾಗಿರಲಿಲ್ಲ. ಬರುತ್ತಿದ್ದ ಸಂಬಳವೂ ಅತಿ ಕಡಿಮೆ. ಕೈತುಂಬ, ಪಾಠವನ್ನು ಹೇಳಬೇಕಾದ ಕೆಲಸವಿರುವಾಗ, ಒಂದು ನಿಯತ ಕಾಲಿಕಪತ್ರಿಕೆಯನ್ನು ಹೊರಡಿಸುವುದೆಂದರೆ ಸಾಮಾನ್ಯವಾದ ವಿಷಯವಲ್ಲ. ಅದುವರೆಗೆ, ಯಾವ ಕನ್ನಡಪತ್ರಿಕೆಯೂ ಅಭ್ಯುದಯ ಹೊಂದಿರಲಿಲ್ಲ. ಎಲ್ಲವೂ ಪ್ರಾರಂಭವಾಗಿ ಕೆಲವುಕಾಲ ನಡೆದು ಧನಾಭಾವದಿಂದ ಕೊರಗುತ್ತಾ ಜೀವನ್ಮೃತವಾಗಿದ್ದವು. ಇಂತಹ ಪರಿಸ್ಥಿತಿಯಲ್ಲಿ ಒಬ್ಬ ಉಪಾಧ್ಯಾಯ, ವಿಜ್ಞಾನದ ಕೇಂದ್ರವಾದ ಸೆಂಟ್ರಲ್ ಕಾಲೇಜಿನಿಂದ—ಆಗ ಎಲ್ಲರೂ ತಿರಸ್ಕಾರದಿಂದ ಕಾಣುತ್ತಿದ್ದ ಕನ್ನಡಭಾಷೆಯಲ್ಲಿ—ಒಂದು ಪತ್ರಿಕೆಯನ್ನು ಹೊರಡಿಸಿದುದು ಹುಚ್ಚು ಧೈರ್ಯವಾಗಿತ್ತು. ಶಾಸ್ತ್ರಿಗಳ ಅನೇಕ ಹಿತೈಷಿಗಳು ಅವರನ್ನು ಎಚ್ಚರಿಸಲು ಪ್ರಯತ್ನಿಸಿದರು. ಕಾಲೇಜಿನ ಮುಖ್ಯೋಪಾಧ್ಯರಾದ ದಿ. ಶ್ರೀ ಎಸ್. ಎಸ್. ಸುಬ್ಬರಾಯರೇ "ಏನು ಕೃಷ್ಣಶಾಸ್ತ್ರೀ ಸಾಹಿತ್ಯಪರಿಷತ್ತಿನ ಕೈಯಲ್ಲಿ ಒಂದು ಒಳ್ಳೆಯ ಪತ್ರಿಕೆಯನ್ನು ನಡೆಸುವುದಕ್ಕಾಗಲಿಲ್ಲ. ನಿನ್ನ ಕೈಯಲ್ಲಾಗುತ್ತದೆಯೇ ?" ಎಂದು ಕೇಳಿದರು. ಆದರೆ ಶಾಸ್ತ್ರಿಗಳ ಕನ್ನಡ ಅಭಿಮಾನ, ಚೆನ್ನಾಗಿ ಆಲೋಚನೆಮಾಡಿ ಕೈಕೊಂಡ ತಮ್ಮ ನಿರ್ಣಯದಲ್ಲಿ ಅಚಲಶ್ರದ್ಧೆ, ನಲವತ್ತು ಪುಟ ವಿಷಯಗಳನ್ನು ಬರೆದು ಪ್ರಕಟಿಸಿ ಅದರ ಖರ್ಚನ್ನು ಅದರಿಂದಲೇ ಹುಟ್ಟಿಸಬಲ್ಲೆನೆಂಬ ನಂಬಿಕೆ—ಅವರೇ ಹೇಳುವಂತೆ ಒಂದು ಒರಟು

ಧೈರ್ಯ–ಇವು ಅವರನ್ನು ಮುಂದೂಡಿದವು. ಮದುವೆಮಾಡಿನೋಡು, ಮನೆಕಟ್ಟಿ ನೋಡು ಎಂಬ ಗಾದೆಯಂತೆ ಶಾಸ್ತ್ರಿಗಳು ಪತ್ರಿಕೆಯನ್ನೂ ನಡೆಸಿನೋಡಿದರು. ಕನ್ನಡಿಗರ ಸುದೈವದಿಂದ ಪ್ರಬುದ್ಧಕರ್ಣಾಟಕದ ಪ್ರಥಮಸಂಚಿಕೆ ಹೊರಬಂತು. ಶಾಸ್ತ್ರಿಗಳು ಪತ್ರಿಕೆಯನ್ನು ಒಂದು ವ್ರತನಿಷ್ಠೆಯಿಂದಲೆಂಬಂತೆ, ತಾವೇ ಹಾಕಿಕೊಂಡ ನಿಯಮವನ್ನು ಚಾಚೂತಪ್ಪದೆ ನಡೆಸಿದರು. ಬಹುಮಟ್ಟಿಗೆ ಶಾಶ್ವತವಾಗಿ ನಿಲ್ಲಬಹುದಾದ ಕಥೆ ಕಾದಂಬರಿಗಳು ವಿಮರ್ಶೆ ಉತ್ತಮಮಟ್ಟದ ವೈಜ್ಞಾನಿಕ ಲೇಖನಗಳು; ಶಾಸ್ತ್ರಿಗಳೇ ಬರೆಯುತ್ತಿದ್ದ–ಇಂದಿಗೂ ಓದಲರ್ಹವಾದ ಆಲೋಚನಾ ಪೂರ್ವಕವಾದ ಸಂಪಾದಕೀಯ ಟಿಪ್ಪಣಿಗಳು. ಇವುಗಳೆಲ್ಲವುಗಳ ವೈವಿಧ್ಯ ವೈಭವದಿಂದ ಪತ್ರಿಕೆ ಬಹುಬೇಗ, ವಾಚಕರ, ವಿದ್ವಾಂಸರ ದೃಷ್ಟಿಯನ್ನು ಸೆಳೆಯಿತು. ಶಾಸ್ತ್ರಿಗಳ ಅಭಿರುಚಿ, ವಿಮರ್ಶಾ ಗುಣಗಳು ಖಚಿತವಾದ ಒರೆಗಲ್ಲು ಆದುದರಿಂದ, ಖೋಟಾಲೋಹ, ಸಾಧಾರಣವಾಗಿ ಪತ್ರಿಕೆಯೊಳಕ್ಕೆ ನುಗ್ಗಿಬರಲು ಅವರು ಆಕಸ್ಮಿಕ ಅಜಾಗರೂಕತೆಯಿಂದ ಸಹ ಅವಕಾಶಕೊಡುತ್ತಿರಲಿಲ್ಲ. ಒಂದು ಸಲ ಅಲ್ಲ ನಾಲ್ಕುಸಲ ಅವರು ಬರಹಗಾರರಿಗೇ ಅವರ ಹಸ್ತಪ್ರತಿಯನ್ನು ಹಿಂದಕ್ಕೆ ಕೊಟ್ಟು ಕೊನೆಗೂ ಅವರ ಕೈಯಿಂದಲೇ ಅದನ್ನು ಸಮರ್ಪಕವಾಗಿ ತಿದ್ದಿಸಿ ಅಚ್ಚು ಹಾಕಿದ ಸಂದರ್ಭವುಂಟು. ಆ ವಿಷಯದಲ್ಲಿ ಅವರದು ಸ್ವಲ್ಪ ಸಿಡುಕುಮೋರೆಯ ನಿರ್ದಾಕ್ಷಿಣ್ಯ ಪ್ರಕೃತಿ ಎಂದು ತೋರಿದರೂ ಅವರ ಸಲಹೆಯಂತೆ ಲೇಖನ ಉತ್ತಮ ವಾದಾಗ, ತಮ್ಮ ಮೆಚ್ಚಿಕೆಯನ್ನು ಅತ್ಯಂತ ಘಂಟಾಘೋಷವಾಗಿ ಸಾವಿರ ಜನರೆದುರಿಗೆ ಹೇಳಿಬಿಡುತ್ತಿದ್ದರು. ಇದರಿಂದ ಲೇಖಕರಿಗೆ ಸಹ, ಶಾಸ್ತ್ರಿಗಳು ಹೀಗೆ ಪಟ್ಟುಹಿಡಿದುದರಿಂದಲೇ ಅಲ್ಲವೆ ನನ್ನ ಲೇಖನ ಇಂತಹ ಮಟ್ಟಕ್ಕೆ ಏರಿತು ಎಂಬ ಸಂತೋಷವೇ ಉಂಟಾಗುತ್ತಿದ್ದಿತೇ ಹೊರತು ಶಾಸ್ತ್ರಿಗಳ ಮೇಲೆ ಕೋಪ ವಾಗಲೀ ಅಸಮಾಧಾನವಾಗಲೀ ಉಂಟಾಗುತ್ತಿರಲಿಲ್ಲ. "ಒಟ್ಟಿನ ಮೇಲೆ ಲೇಖಕರು ಯಾರೂ ನನ್ನ ಉಳಿಯ ಏಟುಗಳಿಂದ, ಕತ್ತರಿಯ ಪ್ರಯೋಗಗಳಿಂದ ತಮ್ಮ ಲೇಖನಗಳು ವಿರೂಪಗೊಂಡವು ಎಂದು ಇಂದಿಗೂ ಆಕ್ಷೇಪಿಸಿಲ್ಲ" ಎಂದು ಶಾಸ್ತ್ರಿಗಳೇ ಹೇಳಿದ್ದಾರೆ. ಹಾಗೂ ಒಂದುವೇಳೆ ಲೇಖಕರಿಗೆ ಅಸಮಾಧಾನವಾದರೂ ಶಾಸ್ತ್ರಿಗಳು ತಮಗೆ ಸರಿಯೆಂದು ತೋರಿದ ಮಾರ್ಗವನ್ನು ಅನುಸರಿಸಿದ್ದುದರಿಂದ, ಆ ವಿಷಯವನ್ನು ಅಲ್ಲಿಗೇ ಬಿಟ್ಟು ನೆಮ್ಮದಿಯಿಂದಿರುತ್ತಿದ್ದರು. ಸ್ವಲ್ಪಕಾಲದೊಳಗಾಗಿ, ಒಂದು ಕಾಲೇಜು ವಿದ್ಯಾರ್ಥಿಗಳಿಗೆಂದು ಪ್ರಾರಂಭವಾದ ಪತ್ರಿಕೆ ನಾಡಿನ ಒಳ್ಳೆಯ ಬರಹಗಾರರನ್ನೆಲ್ಲ ಆಕರ್ಷಿಸಿತು. ಅದರಲ್ಲಿ ಲೇಖನ ಪ್ರಕಟವಾಗುವುದು, ಆ ಲೇಖನದ ಯೋಗ್ಯತೆಗೆ ಗುರುತು ಎಂದು ನಿಶ್ಚಿತವಾಗತೊಡಗಿತು. ಅನೇಕ ತರುಣ ಬರಹಗಾರರಿಗೆ ತಮ್ಮ ಲೇಖನ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾದೀತೇ ಎಂಬುದು ಆಸೆಯ ಗುರಿಯಾಗಿತ್ತು. ಶಾಸ್ತ್ರಿಗಳ ಪ್ರೇರಣೆಯಿಂದ ಇಂಗ್ಲಿಷ್‌ನಲ್ಲಿ ವಿಷಯಗಳನ್ನು ತಿಳಿದ ಅನೇಕ ವಿದ್ವಾಂಸರು ಅವುಗಳನ್ನು ಕನ್ನಡದಲ್ಲಿ ಬರೆದುಕೊಡ

ತೊಡಗಿದರು. ಆದರೂ ಸಹ ಕೀರ್ತಿಕಾಮಿಗಳಾದ ಕೆಲವರು 'ಕನ್ನಡಪಲ್ಲಿ ಯಾಕೆ ಬರೆಯಬೇಕು. ಬರೆದರೆ ಯಾರು ನೋಡುತ್ತಾರೆ? ನಮಗೆ ಏನು ಬರುತ್ತದೆ? ಇಂಗ್ಲಿಷಿನಲ್ಲಿಯೇ ಬರೆದರೆ ನಮಗೆ ಅಂತರ್‌ರಾಷ್ಟ್ರೀಯ ಖ್ಯಾತಿ ಬರುತ್ತದೆ' ಎಂದು ಮೂಗು ಮುರಿದದ್ದುಂಟು. ಅಂಥವರಿಗೆ ಶಾಸ್ತ್ರಿಗಳು ತಮ್ಮ ಸ್ವಾಭಾವಿಕ ನಿರ್ದಾಕ್ಷಿಣ್ಯ ಗಡಸುತನದಿಂದ ಇದು 'ನಮ್ಮ ಬಡ ತಂದೆತಾಯಿಯರ, ಮಕ್ಕಳು ಮರಿಗಳ ಹೊಟ್ಟೆತುಂಬಿಸುವುದರಲ್ಲೇ ನಮ್ಮ ಐಶ್ವರ್ಯವನ್ನು ಕಳೆದರೆ ನಮಗೆ ಬಿರುದುಬಾವಲಿಗಳು ಬರುವುದು ಹೇಗೆ?' ಎಂದು ಕೇಳಿದಂತಾಗುತ್ತದೆ ಎಂದು ಪ್ರತ್ಯುತ್ತರವಿತ್ತದ್ದುಂಟು. ಪ್ರಬುದ್ಧ ಕರ್ಣಾಟಕ ನಾಡಿನ ಎಲ್ಲ ಕಡೆಯಿಂದಲೂ ವಿದ್ವಾಂಸರನ್ನು ಆಕರ್ಷಿಸಿ ಒಂದುಗೂಡಿಸಿ, ರಾಜಕೀಯವಾಗಿ ಇನ್ನೂ ಏಕತಂತ್ರವಾಗದಿದ್ದರೂ, ಭಾವೈಕ್ಯವನ್ನು ಸಂಪಾದಿಸಲು ಬಹುಮಟ್ಟಿಗೆ ಕಾರಣವಾಯಿತು.

ಶ್ರೀಮಾನ್ ಕೃಷ್ಣಶಾಸ್ತ್ರಿಗಳ ಲೌಕಿಕ ವ್ಯವಹಾರಜ್ಞಾನ, ದಕ್ಷತೆಗಳು ಸಹ, ಅವರ ವಿದ್ವತ್ ಪ್ರೌಢಿಮೆ, ಶಾಸ್ತ್ರಜ್ಞಾನ ವಿಮರ್ಶಾ ಕುಶಲತೆಗೆ ಅನುಗುಣ ವಾಗಿದ್ದವು. ಯಾವ ಕಾರ್ಯವೂ ನಷ್ಟದಲ್ಲಿಯಾಗಲೀ ಅಥವಾ ಬರಿಯ ದಾನ ದ್ರವ್ಯಗಳಿಂದಾಗಲೀ ನಡೆದರೆ ಹೆಚ್ಚುಕಾಲ ನಡೆಯಲಾರದೆಂಬುದನ್ನು ಅರಿತ ಅವರು ಪ್ರಬುದ್ಧ ಕರ್ಣಾಟಕ ಆರ್ಥಿಕವಾದ ಸ್ವಾವಲಂಬಿಯಾಗುವಂತೆ ಶ್ರಮಿಸಿ ದರು. ಉತ್ತಮ ಲೇಖನಗಳನ್ನು ಸಂಪಾದಿಸಲು ಅವರು ಹೇಗೆ ಯಾವಾಗಲೂ ಎಚ್ಚರಿಕೆಯಿಂದಿದ್ದರೋ ಹಾಗೆಯೇ ಮುದ್ರಣ ಮುಂತಾದುವುಗಳಲ್ಲಿ ವೆಚ್ಚವನ್ನು ತಗ್ಗಿಸಲು ಹಗಲಿರುಳೂ ಯೋಚಿಸುತ್ತಿದ್ದರು. ಮುದ್ರಣದ ಕರಡು ಪ್ರತಿಗಳನ್ನೆಲ್ಲ ತಾವೇ ತಿದ್ದುತ್ತಿದ್ದರು. ಪ್ರಬುದ್ಧ ಕರ್ಣಾಟಕ ಡೆಮ್ಮಿಯ ಆಕಾರದಲ್ಲಿದ್ದರೂ ಅದರಿಂದ ಪುನರ್ ಮುದ್ರಿತ ಪ್ರತಿಗಳನ್ನು ಕ್ರೌನ್ ಆಕಾರದಲ್ಲಿ ತೆಗೆದು, ಪುಸ್ತಕ ಗಳನ್ನು ಸಹ ಮಾಡಿ ಆ ಪುಸ್ತಕಗಳ ಆಸೆಯನ್ನು ತೋರಿಸಿ ಚಂದಾದಾರರನ್ನು ಆಕರ್ಷಿಸುತ್ತಿದ್ದರು. ಇಂಗ್ಲಿಷ್ ಗೀತೆಗಳು ಗದಾಯುದ್ಧ ನಾಟಕ, ಅಶ್ವತ್ಥಾಮನ್, ಪಾರಸಿಕರು, ವಸಂತಕುಸುಮಾಂಜಲಿ, ನಿವೇದನ, ಉಮರನ ಒಸಗೆ, ಸುಬ್ಬಣ್ಣ, ಮೈಸೂರು ದೇಶದ ವಾಸ್ತುಶಿಲ್ಪ, ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ, ನಾಗರಿಕ—ಮುಂತಾದುವೆಲ್ಲ ಹೀಗೆ ಪ್ರಕಟವಾದ ಗ್ರಂಥಗಳು. ಮುಂದೆ, ಅವುಗಳೆಲ್ಲ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಪ್ರಕಟನೆಗಳೂ ಆಗಿ, ಆ ಸಂಘ ಇನ್ನೂ ಹೆಚ್ಚಾಗಿ ಗ್ರಂಥ ಪ್ರಕಾಶನ ಮಾಡಲು ಸಹಾಯಕವಾಯಿತು. ಶಾಸ್ತ್ರಿಗಳು ಹೀಗೆ ಬೆಂಗಳೂರು ಕರ್ಣಾಟಕ ಸಂಘಕ್ಕೆ ಒಂದು ನಿಧಿಯನ್ನು ಒದಗಿಸಿ ಕೊಟ್ಟರು. (ಅನಂತರ ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಅಧ್ಯಾಪಕರಾಗಿ ಬಂದ ಶ್ರೀ ಜಿ. ಪಿ. ರಾಜರತ್ನಂ ಅವರು ಗುರುಗಳ ಮೇಲುಪಂಕ್ತಿಯನ್ನು ಇನ್ನೂ ಹೆಚ್ಚಿಸಿದ್ದಾರೆ.) ಬಿಡಿಬಿಡಿಯಾಗಿಯೂ ಪುಸ್ತಕಗಳ ಮಾರಾಟದಿಂದ ಸ್ವಲ್ಪ ಹಣ

ದೊರೆಯುತ್ತಿದ್ದಿತು. ಶಾಸ್ತ್ರಿಗಳು, ಬೈಸಿಕಲ್ ಮೇಲೆ ಅಲೆದು ಮುದ್ರಣಾಲಯ ಗಳಲ್ಲಿಯೇ ಸಂಜೆಯೆಲ್ಲ ಕುಳಿತು, ನಾಲ್ಕೇ ರೂಪಾಯಿ ಸಂಬಳದ ಅಷ್ಟೇನೂ ಪ್ರಾಮಾಣಿಕನಲ್ಲದ ಒಬ್ಬ ಸೇವಕನನ್ನಿಟ್ಟುಕೊಂಡು ಪತ್ರಿಕೆಗೆ ನಷ್ಟವಾಗದಂತೆ ಕೆಲಸ ನಿರ್ವಹಿಸಿಬಿಟ್ಟರು. ಪ್ರಾರಂಭದ ವರ್ಷಗಳಲ್ಲಿ ಅವರೂ ವೆಂಕಣ್ಣಯ್ಯ ನವರೂ ಸಂಚಿಕೆಗಳನ್ನು ಮನೆಮನೆಗೆ ತೆಗೆದುಕೊಂಡು ಹೋಗಿ ಕೊಟ್ಟು, ವರ್ಷವೆಲ್ಲ ಕಾದು ಕೊನೆಗೆ ಚಂದಾ ಕೇಳಿ ಈಗ ಬಾ ಆಗ ಬಾ ಎನ್ನಿಸಿಕೊಂಡು ಮಾರವಾಡಿ, ನಕ್ಷತ್ರಿಕ ಎನ್ನಿಸಿಕೊಂಡು ದುಡ್ಡು ಸಂಪಾದನೆ ಮಾಡಿದರು. ಪ್ರಬುದ್ಧ ಕರ್ಣಾಟಕ ತ್ರೈಮಾಸಿಕವಾಗಿ ಉತ್ತಮ ದರ್ಜೆಯ ಶುದ್ಧ ಅಭಿರುಚಿಯುಳ್ಳವರು ಮಾತ್ರವೇ ಓದುತ್ತಿದ್ದುದರಿಂದ, ಚಂದಾದಾರರ ಸಂಖ್ಯೆ ಕಡಿಮೆಯಾಗಿದ್ದು, ಪತ್ರಿಕೆಗೆ ಮುಖ್ಯ ಆಸರೆಯಾದ ಜಾಹೀರಾತುಗಳೂ ಸಿಕ್ಕುತ್ತಿರಲಿಲ್ಲ. ಸಿಕ್ಕಿದರೂ ಅವುಗಳಿಂದ ಬರುತ್ತಿದ್ದ ಆದಾಯ ತುಂಬಾ ಕಡಿಮೆಯಾಗಿತ್ತು. ಆದುದರಿಂದ ಒಂದು ಸಂದರ್ಭ ದಲ್ಲಿ ಹೊರತು, ಉಳಿದ ಕಾಲವನ್ನೆಲ್ಲ "ಸುಖ ಕೆಟ್ಟರೂ ವ್ರತವಾಗಲೀ ಇರಲಿ" ಎಂದು ಜಾಹೀರಾತು ಇಲ್ಲದೆಯೆ ನಿರ್ವಹಿಸಿದರು. (ಪ್ರಬುದ್ಧ ಕರ್ಣಾಟಕವನ್ನು ವಿಶ್ವವಿದ್ಯಾನಿಲಯ ವಹಿಸಿಕೊಂಡಾಗ, ಅದರಿಂದ ಲಾಭವಿಲ್ಲದಿದ್ದರೂ ಅತಿಯಾಗಿ ನಷ್ಟವಾಗುತ್ತಿಲ್ಲ ಎಂಬುದೂ ಒಂದು ಕಾರಣವಾಗಿತ್ತು.) ಈ ಎಲ್ಲ ಸಾಹಸ ದಲ್ಲಿಯೂ ಎ. ಆರ್. ಕೃ. ಮತ್ತು ವೆಂಕಣ್ಣಯ್ಯ ಸಹಯೋಗ ಏಕದೇಹ ನ್ಯಾಯ ದಿಂದ ವರ್ತಿಸಿದರು. ಅನೇಕ ರೀತಿಯಿಂದ ಪರಸ್ಪರ ವಿರುದ್ಧ ಸ್ವಭಾವವುಳ್ಳವ ರಾದರೂ, ಒಬ್ಬರಿಗೆ ಒಬ್ಬರು ಪೋಷಕವಾಗಿ ಪೂರಕವಾಗಿ ಕನ್ನಡಕ್ಕಾಗಿ ದುಡಿದರು. "ವೆಂಕಣ್ಣಯ್ಯ ಕೃಷ್ಣಶಾಸ್ತ್ರಿಗಳ ಈ ಸಹಯೋಗ ವ್ಯವಸಾಯವನ್ನು ಎಷ್ಟು ಹೊಗಳಿದರೂ ಸಾಲದೆಂದು ನನ್ನ ತಿಳುವಳಿಕೆ. ಸ್ವಭಾವದಿಂದ ಈ ಇಬ್ಬರು ಒಂದು ತೆರನಲ್ಲ. ಒಬ್ಬರು ಮೌನದಿಂದ, ಒಬ್ಬರು ಮಾತಿನಿಂದ ಮನಸ್ಸನ್ನು ವ್ಯಕ್ತಪಡಿಸುವರು. ಒಬ್ಬರು ಸೌಮ್ಯದ ಮೂರ್ತಿ. ಮತ್ತೊಬ್ಬರು ಸಹಜವಾದ ರಸಭಾವಗಳಿಗೆ ಜೀವನದಲ್ಲಿ ಎಡೆಕೊಡುವವರು. ಒಬ್ಬರು ಸುಲಭವಾಗಿ ಹಗುರವಾಗಿ ಕೆಲಸ ನಡೆಸುವವರು; ಒಬ್ಬರು ಹಗಲಿರುಳೆನ್ನದೆ ಹೊತ್ತುಗೊತ್ತಿಲ್ಲದೆ ಮೈ ಮುರಿದು ದುಡಿಯುವವರು. ಸಾಮಾನ್ಯವಾಗಿ ಇಂತಹ ಇಬ್ಬರು ಇವರಂತೆ ಗೆಳೆಯರಾಗಿರುವುದು ಅಪೂರ್ವವೆನ್ನಬೇಕು. ಆದರೆ ಕನ್ನಡದ ಪುಣ್ಯದಿಂದ ಇವರಿಬ್ಬರಿಗೂ ಚಿಕ್ಕಂದು ಜೊತೆಯಾಗಿ ಕನ್ನಡ ದೀಕ್ಷೆ ಬಂದಿತು. ಇಬ್ಬರೂ ಶುದ್ಧಚೇತನರು, ಇಬ್ಬರೂ ಋಜುಸ್ವಭಾವದವರು; ಇಬ್ಬರೂ ಕಾರ್ಯತತ್ಪರರು; ಇಬ್ಬರೂ ಸೇವಾನಿಷ್ಠರು. ರೀತಿ ಬೇರೆಯಾಗಿದ್ದರೂ ಇಬ್ಬರ ಗುರಿ ಒಂದೇ ಆಗಿ ಇಬ್ಬರೂ ಒಂದೇ ದಾರಿ ನಡೆಯಬೇಕಾಯಿತು; ಒಂದು ಗುರಿಯ ಸಾಧನೆಯಲ್ಲಿ ಈ ಇಬ್ಬರ ಬಾಳು ಒಂದಾಗಿ ಬೆರೆಯಿತು. ಈ ಯಮಳ ಜೀವನ ಹೊಸಗನ್ನಡದ ಅಶ್ವಿನೀ ದೇವತೆ ಆಯಿತು" (ಶ್ರೀಮಾನ್‌ಮಾಸ್ತಿ).

ಶ್ರೀಮಾನ್ ಕೃಷ್ಣಶಾಸ್ತ್ರಿಗಳಿಗೆ ನನ್ನಲ್ಲಿದ್ದ ವಾತ್ಸಲ್ಯ, ನನ್ನ ಬರವಣಿಗೆಯನ್ನು ಕುರಿತು ಅವರ ಪ್ರೀತಿ ಇವುಗಳನ್ನು ಕುರಿತು ನಾಲ್ಕು ಮಾತುಗಳನ್ನು ಹೇಳಿದರೆ ವಾಚಕರು ಮನ್ನಿಸಬೇಕೆಂದು ಕೋರುತ್ತೇನೆ. ನನಗೆ ಪ್ರಬುದ್ಧ ಕರ್ಣಾಟಕದಲ್ಲಿ, ನನಗೆ ಬುದ್ಧಿ ಬಂದಾಗಿನಿಂದಲೂ ಮೆಚ್ಚಿಕೆ. ಕೆಲವು ವರುಷಗಳನಂತರ, ಆ ಮೆಚ್ಚಿಕೆ ಅದರಲ್ಲಿ ಒಂದಾದರೂ ಲೇಖನ ಬರೆಯಬೇಕೆಂಬ ಆಸೆಯಾಗಿ ಪರಿವರ್ತಿತವಾಗಿತ್ತು. ಆದರೆ ಆ ಆಸೆ ೧೯೩೦ರ ವರೆಗೆ ಕೈಗೂಡುವ ಸೂಚನೆ ತೋರಿರಲಿಲ್ಲ. ಸುಮಾರು ೧೯೩೦ರಲ್ಲಿ ನಾನು ಹಳ್ಳಿಯ ಚಿತ್ರಗಳೆಂಬ ನನ್ನ ಪ್ರಥಮ ಪುಸ್ತಕವನ್ನು ಬರೆದೆ. ಅದು ಸಾಹಿತ್ಯಕ್ಷೇತ್ರದಲ್ಲಿ ಒಂದು ನೂತನ ಮಾದರಿಯಾದುದರಿಂದ ನಾನು ಅಧೈರ್ಯದಿಂದಲೇ ಹೆಜ್ಜೆ ಇಡುತ್ತಿದ್ದೆ. ಆ ಪುಸ್ತಕ ನನಗೆ ಅನೇಕ ಸನ್ಮಿತ್ರರ ಹಿರಿಯರ ಮತ್ತು ಹಿತೈಷಿಗಳ ಸ್ನೇಹವನ್ನು ತಂದಿತು. ನನ್ನ ಯೋಗ್ಯತೆಗೆ ಮೀರಿದ ಪ್ರೋತ್ಸಾಹ, ಮೆಚ್ಚಿಕೆ, ಹೊಗಳಿಕೆ ಇವುಗಳ ಭಾರದಲ್ಲಿ ಕುಸಿದ ನನಗೆ ಸ್ವಲ್ಪ ಭಯವೂ ತುಂಬ ಸಂಕೋಚವೂ ಉಂಟಾಗಿತ್ತು. ನನಗೆ ಆ ವೇಳೆಗೆ ಅನೇಕ ಸಾಹಿತಿಗಳ ಪರಿಚಯವಾಗಿದ್ದರೂ ಶ್ರೀಮಾನ್ ಕೃಷ್ಣಶಾಸ್ತ್ರಿಗಳ ಪರಿಚಯವಾಗಿರಲಿಲ್ಲ. ಅವರದು ಗಡಸುಸ್ವಭಾವ, ಕಠಿಣವಿಮರ್ಶಕರು, ನಿರ್ದಾಕ್ಷಿಣ್ಯಪರರು; ಬಡಪಟ್ಟಿಗೆ ಯಾವುದನ್ನೂ ಒಪ್ಪುವವರಲ್ಲ ಎಂದೆಲ್ಲ ಕೇಳಿದ್ದೆ. ಅಂತಹ ಉದ್ದಾಮ ಕಠಿಣ ವಿದ್ವಾಂಸರ ಕೈಗೆ ಹೋದರೆ ನನ್ನ ಹಳ್ಳಿಯ ಪಿಳ್ಳಂಗೋವಿಯ ಗತಿಯೇನೊ? ಎಂಬ ಭಯ ನನ್ನನ್ನು ಕಾಡುತ್ತಿತ್ತು. ಆಗ ನನ್ನ ಪ್ರಿಯಮಿತ್ರರೂ, ಪ್ರಕಾಶಕರೂ, ಅನೇಕ ಉತ್ತಮ ಕನ್ನಡ ಗ್ರಂಥಗಳ ಮತ್ತು ಬಾಲಪ್ರಪಂಚದ ಪ್ರಕಾಶಕರೂ ಆದ ಶ್ರೀಮಾನ್ ನಿಟ್ಟೂರು ಶ್ರೀನಿವಾಸರಾಯರು ಒಂದು ದಿವಸ "ವಿದ್ಯಾರ್ಥಿದೆಸೆ ಮುಗಿದಮೇಲೆ ಈಗ ನನಗೂ ಸೆಂಟ್ರಲ್ ಕಾಲೇಜಿಗೂ ಇರುವ ಸಂಪರ್ಕ ಪ್ರಬುದ್ಧ ಕರ್ಣಾಟಕ ಮತ್ತು ಸೆಂಟ್ರಲ್ ಕಾಲೇಜು ಕ್ಯಾಂಟೀನ್ ಈ ಎರಡು. ನಾನು ಆಗಾಗ್ಗೆ ಹೋಗಿ, ಆ ಸಂಪರ್ಕವನ್ನು ಪುನರುಜ್ಜೀವಿಸಿಕೊಳ್ಳುತ್ತಿರುತ್ತೇನೆ, ಬನ್ನಿ" ಎಂದು ಕರೆದುಕೊಂಡು ಹೋದರು. ಅಂದು ಪ್ರಥಮಬಾರಿಗೆ ನನಗೆ ಶ್ರೀ ಕೃಷ್ಣಶಾಸ್ತ್ರಿಗಳ ಪರಿಚಯ, ಸಂಪರ್ಕವುಂಟಾಯಿತು. ಶಾಸ್ತ್ರಿಗಳು ತುಂಬಾ ಪ್ರೀತ್ಯಾದರಗಳಿಂದ ನನ್ನನ್ನು ಮಾತನಾಡಿಸಿದರು. ನನ್ನ ಪುಸ್ತಕಕ್ಕೆ ಮೆಚ್ಚಿಕೆ ಸೂಚಿಸಿದರು. ನಾನು ಸಾಬರಮತಿ ಆಶ್ರಮದಲ್ಲಿದ್ದುದು, ಗುಜರಾತ್ ವಿದ್ಯಾಪೀಠದಲ್ಲಿದ್ದುದು, ಶಾಂತಿನಿಕೇತನದಲ್ಲಿದ್ದುದು, ಗಾಂಧಿಯವರ ಪ್ರವಾಸ ಕಾಲದಲ್ಲಿ ಅವರ ಜೊತೆ ಇದ್ದುದು—ಇದನ್ನೆಲ್ಲ ಬಹಳ ಶ್ರದ್ಧೆಯಿಂದ ಕೇಳಿದರು. ರವೀಂದ್ರನಾಥಠಾಕೂರರಲ್ಲಿ ಅವರಿಗೆ ತುಂಬ ಗೌರವ ಮತ್ತು ಪ್ರೇಮ. ಮಹಾತ್ಮಾ ಗಾಂಧಿಯವರಲ್ಲಿಯೂ ತುಂಬ ಗೌರವ ಮತ್ತು ಮೆಚ್ಚಿಕೆ. ಗಾಂಧೀಯವರ ಸಾನ್ನಿಧ್ಯ ನಿಕಟಪರಿಚಯದ ಅನುಭವವನ್ನು ನಾನು ಹೇಳಿದುದನ್ನು ಅವರು ತುಂಬಾ ಆಸಕ್ತಿಯಿಂದ ಕೇಳಿ "ಹೇಳಿ, ಹೇಳಿ; ಇನ್ನೂ ಹೇಳಿ. ಅದೇ ಒಂದು ಪ್ರಪಂಚ.

ನೀವು ಎಷ್ಟು ಹೇಳಿದರೂ ಗಾಂಧಿಯವರ ಸಂಗತಿಗಳನ್ನು ಇನ್ನೂ ಇನ್ನೂ ಕೇಳಬೇಕೆನಿಸುತ್ತಿದೆ. ಅದೇ ಒಂದು ನೂತನ ಪ್ರಪಂಚ" ಎಂದರು. ಅಂದು ನನ್ನ ಮೇಲೆ ಶಾಸ್ತ್ರಿಗಳು ಇಟ್ಟ ಪ್ರೀತಿ ತೋರಿಸಿದ ವಾತ್ಸಲ್ಯ ಒಂದೇ ಸಮನಾಗಿ ಅವರ ಜೀವನದ ಅಂತ್ಯಕಾಲದವರೆಗೆ ಮಧ್ಯಾಹ್ನದ ನಂತರದ ನೆರಳಿನಂತೆ ಹೆಚ್ಚುತ್ತಲೇ ಹೋಯಿತು. ಶ್ರೀ ನಿಟ್ಟೂರು ಶ್ರೀನಿವಾಸರಾಯರು ಅವರ ಹತ್ತಿರವೂ ವಿನೋದವಾಗಿ "ಕ್ಯಾಂಟೀನ್ ಇಲ್ಲಿಯೇ ಇದೆಯೋ" ಎಂದು ನೋಡುವುದಕ್ಕೆ ಬಂದೆವು ಎಂದು ಹೇಳಿದರು. ಆ ಕಾಲದಲ್ಲಿ ನಾನು ೧೦-೧೨ ವರುಷಗಳು ಬೆಂಗಳೂರಿನಲ್ಲಿಯೇ ಇದ್ದೆ. ನನ್ನನ್ನು ಹೆಚ್ಚುಕಾಲ ಕಾಣದಿದ್ದಲ್ಲಿ ಶಾಸ್ತ್ರಿಗಳು "ನಿಮ್ಮ ಕ್ಯಾಂಟೀನ್ ನೋಡಲು ಬರುವುದಿಲ್ಲವೆ ?" ಎಂದು ಆಹ್ವಾನಿಸುತ್ತಿದ್ದರು.

ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘವು, ಬರಿಯ ವಿದ್ಯಾರ್ಥಿಗಳಿಗಷ್ಟೇ ಸಂಬಂಧಪಟ್ಟುದಾಗಿರಲಿಲ್ಲ. ಸಂಘಟನೆಯಂತೆ ವಿದ್ಯಾರ್ಥಿಗಳು ಅದರ ಸಸದ್ಯರಾಗಿದ್ದುದು ನಿಶ್ಚಯ. ಆದರೆ ಆ ಸಂಘ, ಬೆಂಗಳೂರು ಸಾರ್ವಜನಿಕರ ಸಂಘವೂ ಆಗಿತ್ತು. ಸಾರ್ವಜನಿಕರು ಆ ಸಂಘದಲ್ಲಿಯೂ ವಿದ್ಯಾರ್ಥಿಗಳ ಚಟುವಟಿಕೆಗಳಲ್ಲಿಯೂ ತುಂಬ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದ ಸಭೆ (ಉಪನ್ಯಾಸ) ಬೆಂಗಳೂರಿನ ಪ್ರಮುಖ ಸಾರ್ವಜನಿಕ ಸಮಾರಂಭದ ಪೈಕಿ ಒಂದು ಆಗಿತ್ತು. ಕನ್ನಡದ ಅನೇಕ ವಿದ್ವಾಂಸರು—ಇತರ ಕಡೆಗಳಿಂದ ಬಂದವರೂ ಸಹ—ಉಪನ್ಯಾಸಕರಾಗಿ ಆಹ್ವಾನಿತರಾಗುತ್ತಿದ್ದರು. ವಿದ್ಯಾರ್ಥಿಗಳಷ್ಟೇ ಅಧಿಕ ಸಂಖ್ಯೆಯಲ್ಲಿ, ಕುತೂಹಲಿಗಳಾದ ಮತ್ತು ವಿದ್ಯಾ ಪಕ್ಷಪಾತಿಗಳಾದ ಸಾರ್ವಜನಿಕರೂ ಸಭಾಭವನದಲ್ಲಿ ಕಿಕ್ಕಿರಿದು ತುಂಬುತ್ತಿದ್ದರು. ಶ್ರೀಮಾನ್ ಕೃಷ್ಣಶಾಸ್ತ್ರಿಗಳು ವಿದ್ಯಾರ್ಥಿಗಳಲ್ಲದ ಅನೇಕಮಂದಿ ಕನ್ನಡಾಭಿಮಾನಿಗಳನ್ನೂ ಮಿತ್ರರನ್ನೂ ಸಹಾಯಕ ಸದಸ್ಯರನ್ನಾಗಿ ಕರ್ಣಾಟಕ ಸಂಘಕ್ಕೆ ಸೇರಿಸಿಕೊಂಡಿದ್ದರು. ಅವರು ಸಂಘಕ್ಕೆ ತಿಂಗಳಿಗೆ ಇಷ್ಟು ಎಂದು ಸಹಾಯದ್ರವ್ಯವನ್ನು ಕೊಡುತ್ತಿದ್ದರು. ನಾನೂ ತಿಂಗಳಿಗೆ ಒಂದು ರೂಪಾಯಿ (ದೊಡ್ಡ ಮೊತ್ತ !) ಕೊಡುತ್ತಿದ್ದ ಸಹಾಯಕ ಸದಸ್ಯನಾಗಿದ್ದೆ. ಅಂದಿನ ಕಾಲದಲ್ಲಿ ಕರ್ಣಾಟಕ ಸಂಘಕ್ಕೆ ದುಡ್ಡು ಎಷ್ಟು ಕಡಿಮೆಯಾದರೂ, ಜನವನ್ನು ಸಂಘಟಿಸಿ ಕನ್ನಡದ ಕೆಲಸವನ್ನು ಚುರುಕುಗೊಳಿಸಬೇಕು ಎಂಬ ಆಸೆಯಿಂದಲೇ ಶಾಸ್ತ್ರಿಗಳು ಸಾರ್ವಜನಿಕರೊಂದಿಗೆ ಹೀಗೆ ಸಂಘದ ಕೆಲಸಕ್ಕಾಗಿ ಸಂಪರ್ಕವನ್ನೇರ್ಪಡಿಸಿಕೊಂಡಿದ್ದರು.

೧೯೩೧ನೆ ಸಂವತ್ಸರವಿರಬಹುದು, ಬೆಂಗಳೂರಿನ ಕರ್ಣಾಟಕ ಸಂಘದಲ್ಲಿ ನಾನೂ ಒಂದು ಉಪನ್ಯಾಸ ಮಾಡಬೇಕೆಂದು ಶಾಸ್ತ್ರಿಗಳು ನನಗೆ ಅಪ್ಪಣೆ ಮಾಡಿದರು. ನಾನು ತುಂಬ ಅಧೈರ್ಯದಿಂದ ಹಿಂದೆಗೆದೆ. ಆ ಸಂಘದಲ್ಲಿ ಉಪನ್ಯಾಸ ಮಾಡುತ್ತಿದ್ದ ಮತ್ತು ಕೇಳಲು ಬರುತ್ತಿದ್ದ ವಿದ್ವಾಂಸಮಂಡಲಿಯನ್ನು ನಾನು

ನೋಡಿದ್ದೆ. ಬಿ.ಎಸ್‌ಸಿ., ಬಿ.ಎ., ವಿದ್ಯಾರ್ಥಿಗಳನ್ನು ಕಂಡರೂ ನನಗೆ ಗಾಬರಿಯೇ ಇತ್ತು. ಆದರೂ ಶಾಸ್ತ್ರಿಗಳು "ವಿದ್ಯಾರ್ಥಿಗಳು ನಿಮ್ಮನ್ನು ನೋಡಬೇಕೆನ್ನುತ್ತಾರೆ. ನೀವು ಬಂದೇತೀರಬೇಕು. ಕರೆದುಕೊಂಡು ಬರುತ್ತೇನೆಂದು ಹೇಳಿಬಿಟ್ಟಿದ್ದೇನೆ" ಎಂದರು. ನಾನು ಸಿರುಪಾಯನಾಗಿ "ನಾನು ಬಂದು ಏನು ಹೇಳಲಿ? ನನಗೆ ಏನೂ ತೋಚುವುದೇ ಇಲ್ಲವಲ್ಲ" ಎಂದೆ. ಶಾಸ್ತ್ರಿಗಳು "ಬಾಯಿಗೆ ಬಂದದ್ದು ಹೇಳಿ" ಎಂದರು. ಅನಂತರ "ಆ ದಿನ ರಥೋತ್ಸವ ನವರಾತ್ರಿ ಸಂಕ್ರಾಂತಿ ಯುಗಾದಿ ಸುಗ್ಗಿಯಕಾಲದಲ್ಲಿ ಹೆಣ್ಣುಮಕ್ಕಳ ಉಯ್ಯಾಲೆ ಜೋಕಾಲೆ, ಆಂಜನೇಯ ರಂಗಕ್ಕೆ ಬಂದದ್ದು, ಓಕಳಿಯಾಟ, ಸೀತಮ್ಮ ಮರವೇರಿದುದು (ಇದೊಂದು ಹಳ್ಳಿಹಾಡು) ನನ್ನೊಂದಿಗೆ ಹೇಳುತ್ತಿರುತ್ತೀರಲ್ಲ ಅದನ್ನೆಲ್ಲ ಹೇಳಿ. ಗಾಂಧಿಯವರ ಸಂಗತಿಗಳು ಶಾಂತಿನಿಕೇತನದ ಸ್ವಾರಸ್ಯಗಳು ಯಾವುದು ಬೇಕಾದರೂ ಹೇಳಿ" ಎಂದುಬಿಟ್ಟರು. ನಾಲ್ಕಾರು ದಿನಗಳಲ್ಲಿ ಅಚ್ಚಾದ ಕರೆಯೋಲೆ ನನ್ನ ಕೈಗೆ ಬಂದಿತು. ಹಳ್ಳಿಯ ಹಬ್ಬಗಳ ಮೇಲೆ ನನ್ನ ಉಪನ್ಯಾಸ ಎಂದಿತ್ತು. ಶ್ರೀಮಾನ್ ಡಿ. ವಿ. ಗುಂಡಪ್ಪನವರು ಅಧ್ಯಕ್ಷತೆ ವಹಿಸುವವರಾಗಿದ್ದರು. ನನ್ನ ಮೈ ಬೆವತಿತು, ಶರಟು ಒದ್ದೆಯಾಯಿತು. ನಿಜವಾಗಿಯೂ ಎಲ್ಲಿಗಾದರೂ ಓಡಿಬಿಡೋಣ ಎನ್ನಿಸಿತು. ವಿದ್ವಾಂಸರ ಎದುರಿಗೆ, ನಾನು ಬಾಯಿಗೆಬಂದಂತೆ ಬುರುಡೆ ಬಿಡುತ್ತಿದ್ದ ಕಂತೆಪುರಾಣಗಳ ಶಿರಚ್ಛೇದವಾಗುವುದರಲ್ಲಿತ್ತು. ನಾನು ಹಿಂದೆ, ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದಲ್ಲಿ ಭಾಷಣಮಾಡಲು ತುಂಬ ಆಸೆಯಿಂದ ಬಯಸಿ ಅದಕ್ಕೆ ಸಮನಾದ ಮರ್ಯಾದೆಯೇ ಯಾವುದೂ ಇಲ್ಲವೆಂದೂ ಭಾವಿಸಿದ್ದುದುಂಟು. ಆದರೆ ಪಟದೊಳಗೆ ಸೊಗಸಾಗಿ ಕಾಣುತ್ತಿರುವ ಹುಲಿಯ ಹಲ್ಲು ಮೀಸೆಗಳನ್ನು ಆದರದಿಂದ ಕೈಯಲ್ಲಿ ಸವರುತ್ತಿರುವಾಗ ಹುಲಿಯು ಜೀವಗೊಂಡು ಘರ್ಜಿಸಿ ನಮ್ಮಮೇಲೆ ನೆಗೆಯಲು ಬಂದರೆ ಹೇಗೆ ನಡುಗುತ್ತೇವೆಯೋ ಹಾಗಾಯಿತು ನನ್ನ ಸ್ಥಿತಿ, ಉಪನ್ಯಾಸ ನಿಜವಾಗಿ ನನ್ನ ಕೊರಳಿಗೆ ಕಟ್ಟಿದಾಗ. ಉಪನ್ಯಾಸವನ್ನು ಬರೆದುಕೊಂಡುಹೋಗಿ ಓದಿಬಿಡೋಣ ಎಂದು ಯೋಚಿಸಿದೆ. ಕಾಗದ ಕಡ್ಡಿ ಹಿಡಿದುಕೊಂಡಾಗ ಅದೂ ಸಾಗಲಿಲ್ಲ.

ಏತೇಹಿ ಸಮುಪಾಸೀನಾ ವಿಹಗಾ ಜಲ ಚಾರಿಣಃ
ನಾವಗಾಹಂತಿ ಸಲಿಲಮಪ್ರಗಲ್ಭಾ ಇವಾಹವಮ್

(ಹೇಡಿಗಳು ರಣರಂಗವನ್ನು ಪ್ರವೇಶಿಸುವುದಕ್ಕೆ ಭಯಪಡುವಂತೆ ಜಲಚರ ಪಕ್ಷಿಗಳು, ನೀರೊಳಗೆ ಮುಳುಗಲಂಜಿ ದಡದಲ್ಲಿ ಎಳೆಯ ಬಿಸಿಲನ್ನು ಕಾಯಿಸುತ್ತಿರುವುವು. ರಾಮಾಯಣ ೩–೧೬) ನನ್ನ ಸ್ಥಿತಿ ಹಾಗಾಗಿತ್ತು. ನಾನು ಉಳಿದಿದ್ದ ದಿನಗಳನ್ನು ಮುಳ್ಳಿನಮೇಲೆ ಕಳೆದು, ಉಪನ್ಯಾಸದ ಸಂಜೆ, ಐದೂವರೆ ಗಂಟೆಗೆ ಕಾರ್ಯದರ್ಶಿಗಳೊಡನೆ (ಅವರ ಹೆಸರು ಗುಂಡುರಾವ್ ಅಥವಾ ಗೋವಿಂದರಾವ್ ಸರಿಯಾಗಿ

ಜ್ಞಾಪಕವಿಲ್ಲ) ಸೆಂಟ್ರಲ್ ಕಾಲೇಜಿಗೆ ಹೋದೆ. ವಿದ್ಯಾರ್ಥಿಗಳಲ್ಲದೆ ಇನ್ನೂ ಅನೇಕ ಹಿರಿಯರು ಅಲ್ಲಿ ಬಂದಿದ್ದುದನ್ನು ನೋಡಿ ನನ್ನ ಭಯ, ಇನ್ನೂ ಹೆಚ್ಚಾಯಿತು. ಸಭಾಂಗಣದ್ವಾರದಲ್ಲಿ ಶ್ರೀಮಾನ್ ಎಂ. ಆರ್. ಶ್ರೀನಿವಾಸ ಮೂರ್ತಿಗಳು ನಿಂತಿದ್ದರು. ನಾನು ಹೆದರಿದ್ದುದು ಅವರಿಗೆ ಸ್ಪಷ್ಟವಾಗಿ ಗೊತ್ತಾಯಿತು. ನನ್ನ ಬೆನ್ನು ತಟ್ಟುವ ಉದ್ದೇಶದಿಂದ "ನಾನು ಏನುಮಾಡಿದರೂ ಇವತ್ತು ನಗಬಾರದು ಅಂತ ಮಾಡಿದೀನಿ. ನಗಿಸಿದರೆ ನೀವು ಸರಿ!" ಎಂದು ಹೇಳಿದರು. ಅಧ್ಯಕ್ಷ ಡಿ.ವಿ.ಜಿ. ನಗೆಮೊಗದಿಂದ ನನ್ನ ಭಯವನ್ನು ನಿವಾರಣೆ ಮಾಡಿದರು. ಅಂತೂ ಉಪನ್ಯಾಸ, ಸಹಿಸಲು ಶಕ್ಯವಾಗಿ ನಡೆಯಿತೆಂದು ನನ್ನ ನೆನಪು. ನನ್ನ ದೃಷ್ಟಿ, ಮುಂದಲ ಸಾಲಿನಲ್ಲಿಯೇ ಕುಳಿತಿದ್ದ ಎಂ. ಆರ್. ಶ್ರೀನಿವಾಸಮೂರ್ತಿಯವರ ಮೇಲೂ ಅವರು ಹೇಳಿದ ಮಾತಿನಮೇಲೆಯೂ ಇತ್ತು. ಸಭಾಭವನ, ಅಧ್ಯಕ್ಷರು ಶ್ರೋತೃಗಳು ಎಲ್ಲರನ್ನೂ ನಾನು ಮರೆತು ನನ್ನ ಭಾಷಣವನ್ನು ಶ್ರೀನಿವಾಸಮೂರ್ತಿಗಳಿಗೇ ಬಿಗಿದೆ. ಸಭೆ ಆದನಂತರ ಅವರು "ಅಂತೂ ಈ ದಿನ ನನ್ನ ಪ್ರತಿಜ್ಞೆ ಭಂಗವಾಗಿಹೋಯಿತು" ಎಂದು ಹೇಳಿದರು. ಎಂ. ಆರ್. ಶ್ರೀನಿವಾಸಮೂರ್ತಿಗಳು ಆ ಸವಾಲನ್ನು ನನಗೆ ಹಾಕದೆಹೋಗಿದ್ದ ಪಕ್ಷದಲ್ಲಿ, ನಾನು ಖಂಡಿತ ಉಪನ್ಯಾಸದ ಕೊಳ್ಳದಿಂದ ಸುರಕ್ಷಿತವಾಗಿ ಪಾರಾಗುತ್ತಿರ ಲಿಲ್ಲ. ನನ್ನ ಮುಖಹೇಡಿತನವನ್ನು ನಿವಾರಿಸುವುದಕ್ಕಾಗಿಯೂ ನನಗೆ ಧೈರ್ಯವನ್ನು ಕೊಡುವುದಕ್ಕಾಗಿಯೂ ಶ್ರೀಮಾನ್ ಶಾಸ್ತ್ರಿಗಳು ಅಷ್ಟನ್ನೂ ಮಾಡಿದರು. ಆದಾದ ಮರುವರುಷವೂ ಸಹ ಸೆಂಟ್ರಲ್ ಕಾಲೇಜಿನಲ್ಲಿ ನನ್ನ ಮತ್ತೊಂದು ಭಾಷಣವನ್ನು ಅವರು ಏರ್ಪಡಿಸಿದರು (ಆದರ ವಿಸ್ತೃತರೂಪವು ಈಚೆಗೆ ಹಳ್ಳಿಯಬಾಳು ಎಂಬ ಹೆಸರಿನಿಂದ ಪ್ರಕಟವಾಗಿದೆ). ಆ ದಿವಸ, ನನ್ನ ಜತೆಯಲ್ಲಿ ಇಬ್ಬರು ತರುಣ ಕವಿಗಳ ಕಾವ್ಯವಾಚನವೂ ಸಹ ಏರ್ಪಾಡಾಗಿತ್ತು. ಅವರಲ್ಲಿ ಒಬ್ಬರು ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು. ಹೊಸ ಕವಿಗಳನ್ನು ಪ್ರೋತ್ಸಾಹಿಸುವುದು ಶಾಸ್ತ್ರಿಗಳಿಗೆ ಯಾವಾಗಲೂ ಒಂದು ಸಂತೋಷದ ಕಾರ್ಯವಾಗಿತ್ತು. ಆ ದಿವಸದ ಸಮಾರಂಭವೂ ಅದೇ ಉದ್ದೇಶದಿಂದ ಏರ್ಪಡಿಸಿದುದಾಗಿತ್ತು. ಇಬ್ಬರು ಕವಿಗಳೂ ಶ್ರೋತೃಗಳಿಂದ (ಮತ್ತೊಬ್ಬರ ಹೆಸರನ್ನು ಮರೆತಿದ್ದೇನೆ) ಕರತಾಡನ ಛೀಅರ್‌ಗಳನ್ನು ಗಳಿಸಿದುದು ನೆನಪಿದೆ.

ಅನಂತರ ನಾನು ಪ್ರಬುದ್ಧ ಕರ್ಣಾಟಕಕ್ಕೆ ಲೇಖನಗಳನ್ನು ಬರೆಯತೊಡ ಗಿದೆ. ಶ್ರೀಮಾನ್ ಕೃಷ್ಣಶಾಸ್ತ್ರಿಗಳ ಪ್ರೋತ್ಸಾಹದಿಂದ ನಾನು ಮೊದಲೇ ಬರೆಯ ತೊಡಗಿದ್ದರೂ, ಪತ್ರಿಕೆ ವಿಶ್ವವಿದ್ಯಾಲಯಕ್ಕೆ ಹೋಗುವ ತರುಣದಲ್ಲಿ ನನ್ನ ಲೇಖನ ಗಳು ಅವರ ಕೈಯಲ್ಲಿದ್ದುವೆಂದು ಜ್ಞಾಪಕ. ಆಗ ಮೈಸೂರಿನಲ್ಲಿ ಶ್ರೀಮಾನ್ ವೆಂಕಣ್ಣಯ್ಯನವರೂ ಬೆಂಗಳೂರಿನಲ್ಲಿ ಶ್ರೀ ಕೃಷ್ಣಶಾಸ್ತ್ರಿಗಳೂ ಪ್ರಬುದ್ಧ ಕರ್ಣಾಟಕ ಕ್ಕಾಗಿ ಕೆಲಸಮಾಡುತ್ತಿದ್ದರು. ಆ ಕಾಲದಲ್ಲಿ ನಾನು ಪ್ರಬುದ್ಧ ಕರ್ಣಾಟಕಕ್ಕೆ

ಸ್ವಲ್ಪ ಹೆಚ್ಚಾಗಿಯೇ ಲೇಖನಗಳನ್ನು ಬರೆಯುತ್ತಿದ್ದೆ. ಒಂದು ಸಲ ಶಾಸ್ತ್ರಿಗಳು ವಿನೋದವಾಗಿ ನನ್ನೊಂದಿಗೆ "You are bread for ಪ್ರಬುದ್ಧ ಕರ್ಣಾಟಕ ಎಂದು ವೆಂಕಣ್ಣಯ್ಯ ಹೇಳುತ್ತಾನೆ. ಚಟ್ನಿ ಉಪ್ಪಿನಕಾಯಿ ಬಾಳಕ ಪಾಯಸ ಹಪ್ಪಳ ಚಿರೋಟಿ ಯಾರದುಬೇಕಾದರೂ ಇರಬಹುದು. ಅನ್ನವಂತೂ ಬೇಕೇ ಬೇಕಷ್ಟೆ" ಎಂದರು. ನನ್ನ ಕೃತಿಗಳು ಇನ್ನೂ ಉತ್ತಮವಾಗಬೇಕೆಂಬ ಉದ್ದೇಶ ದಿಂದಲೂ ಅವರು ಹಾಗೆ ಹೇಳಿರಬಹುದು. ನನ್ನ ಬೆನ್ನು ತಟ್ಟುವುದಕ್ಕಾಗಿ ಅವರು ಒಂದೊಂದು ಸಲ "ಕಂಪಾಸಿಟರ್‌ಗಳಲ್ಲಿ ನಿಮ್ಮ ಹಸ್ತಪ್ರತಿಗಾಗಿ ಸ್ಪರ್ಧೆಯಾಗಿ ನಾಮುಂದು ತಾಮುಂದು ಎಂದು ತೆಗೆದುಕೊಳ್ಳುತ್ತಾರೆ" ಎನ್ನುತ್ತಿದ್ದರು. ಆಗ ನನ್ನ ಬರವಣಿಗೆ (ಕೈ ಬರಹ) ಬಹಳ ಚೆನ್ನಾಗಿತ್ತು. ಶಾಸ್ತ್ರಿಗಳೂ ವಿನೋದಪ್ರಿಯರು "ಅದರ ಗುಣ ಅಷ್ಟೆ" ಎಂಬುದೂ ಅವರ ಅಭಿಪ್ರಾಯವಿರಬಹುದೆ? ಎಂದು ನಾನು ಯೋಚಿಸಿದುದೂ ಉಂಟು.

ಶ್ರೀಮಾನ್ ಕೃಷ್ಣಶಾಸ್ತ್ರಿಗಳದು ತುಂಬ ವಾತ್ಸಲ್ಯಪೂರ್ಣ ಸ್ವಭಾವ, ಅದಕ್ಕೂ ಅವರ ನಿಷ್ಪಕ್ಷಪಾತ ಕಠಿಣ ವಿಮರ್ಶೆಗೂ ಸಂಬಂಧವೇ ಇಲ್ಲ. ದಕ್ಷನಾದ ವಜ್ರಪರೀಕ್ಷಕ ಯಾರ ಮನಸ್ಸಾದರೂ ನೋಯುವುದೆಂದು ಅಂಜಿ, ದೋಷ ಪೂರ್ಣವಾದ ವಜ್ರವನ್ನು ನಿರ್ದೋಷ ವಜ್ರವೆಂದು ಹೇಳಿಯಾನೆ? ಹಾಗೆ ಹೇಳದ ಮಾತ್ರಕ್ಕೆ ಅವನು ಕಠಿಣ ಕ್ರೂರಿ ಒರಟ ಸಿಡುಕುಮೋರೆ ಎನ್ನಲು ಸಾಧ್ಯವೇ? ಕೃತಿ ಉತ್ತಮವಾಗಿರದಿದ್ದಲ್ಲಿ ಪ್ರಥಮಪ್ರಯತ್ನ, ವಿದ್ಯಾರ್ಥಿಯ ಅಭ್ಯಾಸ ಎಂಬ ಯಾವ ಮಾತೂ ಶಿಫಾರಸು ಆಗುತ್ತಿರಲಿಲ್ಲ. "ರಂಗಕ್ಕೆ ಬರಬೇಕಾದರೆ–ಯುದ್ಧ ರಂಗಕ್ಕಾಗಲೀ ನಾಟಕರಂಗಕ್ಕಾಗಲೀ—ನಿಷ್ಠುರವಾದ ಆಯ್ಕೆ" ಅಗತ್ಯ. ಆದರೆ ಲೇಖನವನ್ನು ತಿರಸ್ಕರಿಸಿದರೂ ಅಂಥವರಲ್ಲಿ ಶಾಸ್ತ್ರಿಗಳ ವಾತ್ಸಲ್ಯ ಕಡಿಮೆಯಾಗು ತ್ತಿರಲಿಲ್ಲ. ಆ ಕಾಠಿಣ್ಯವನ್ನು ಸರಿದೂಗಿಸುವುದಕ್ಕೋ ಎಂಬಂತೆ, ಭಾವನಾ ಪೂರ್ಣವಾದ ಅವರ ಮನಸ್ಸು, ಅದಕ್ಕೆ ಇಮ್ಮಡಿ ನೂರ್ಮಡಿ ಉದಾರವಾಗುತ್ತಿತ್ತು. ಅವರನ್ನು ಸುಮ್ಮನೆ ಕಾಲೇಜಿನಲ್ಲಿ ನೋಡಿದವರಿಗೆ ಅವರ ಹೃದಯದ ದಯಾಗುಣ ಗೊತ್ತಾಗುತ್ತಿರಲಿಲ್ಲ. ಸುಮಾರು ೧೯೩೩–೩೪ರಲ್ಲಿ ನನಗೂ ಶ್ರೀ ಎಲ್. ಗುಂಡಪ್ಪ ನವರಿಗೂ ಶ್ರೀ ಜಿ. ಪಿ. ರಾಜರತ್ನಂ ಅವರಿಗೂ ದೇವರಾಜ ಬಹದ್ದೂರ್ ಸಾಹಿತ್ಯ ಪಾರಿತೋಷಕ ದೊರಕಿತು. ಆಗ ಶಾಸ್ತ್ರಿಗಳ ಸಂತೋಷಕ್ಕೆ ಪಾರವೇ ಇರಲಿಲ್ಲ. ನೂತನ (ಆಗಿನ) ಲೇಖಕರಿಗೆ ಬಹುಮಾನ ದೊರೆತುದು ತಮ್ಮ ಮನೆಯ ಮಕ್ಕಳಿಗೆ ದೊರೆತಂತೆ ಅವರಿಗೆ ಸಂಭ್ರಮವುಂಟಾಗಿತ್ತು. "ಕವಿಗೆ ಕವಿ ಮುನಿವಂ" ಎಂಬ ಮಾತು, ಅವರಿಗೆ ಅನ್ವಯಿಸುತ್ತಿರಲಿಲ್ಲ. ಅವರು ನಾವು ಮೂವರನ್ನೂ ತಮ್ಮ ಮನೆಗೆ ಆಹ್ವಾನಿಸಿ ಸೊಗಸಾದ ಭೋಜನ ಏರ್ಪಡಿಸಿ ಸತ್ಕರಿಸಿದರು. ಅಗಲವಾದ ಬಾಳೆ ನುಣಿ ಎಲೆಗಳು, ಕುಳಿತುಕೊಳ್ಳಲು ಮಣೆಗಳು, ಸಂಪ್ರದಾಯಬದ್ಧವಾದ ರೀತಿಯಲ್ಲಿ ಸೊಗಸಾದ ಅಡಿಗೆ, ಬಡಿಸುವಿಕೆ, ಭಕ್ಷ್ಯಪಾಯಸ ಇವೆಲ್ಲ ಅವರ

ರಸಿಕತೆಗೂ ಭೋಗಕ್ಕೂ ಕುರುಹಾಗಿದ್ದವು. ನಮ್ಮ ಜತೆಯಲ್ಲಿ ಆಗ ಡಾ. ಪಿ. ಕೃಷ್ಣರಾಯರೂ ಆಹ್ವಾನಿತರಾಗಿದ್ದರು. ನಮ್ಮ ಜತೆಯಲ್ಲಿಯೇ ಊಟಕ್ಕೆ ಕುಳಿತ ಶಾಸ್ತ್ರಿಗಳು "ನಾನು ನಿಮಗೆ ಊಟ ಹಾಕುವುದೇ ಅಪರೂಪ, ಯಾಕೆ? ನಿತ್ಯ ಲೇಖಕರಿಗೆ ಪಾರಿತೋಷಕ ಕೊಡುವವರು ಯಾರು? ಆದುದರಿಂದ ಚೆನ್ನಾಗಿ ಸಂತೋಷವಾಗಿ ಊಟಮಾಡಿ" ಎಂದು ಬಲಾತ್ಕರಿಸಿದರು. ಅವರು ಭೋಗಿಗಳೂ ಹೌದು; ಅನಾಸಕ್ತರೂ ಹೌದು. ತಮ್ಮ ಸಂತೋಷವನ್ನೂ ವಾತ್ಸಲ್ಯವನ್ನೂ ತೋರಿಸಲು ಅವರು ತೆಗೆದುಕೊಂಡ ಅಷ್ಟೊಂದು ಶ್ರಮದಿಂದ ನಮಗೆ ಸಂಕೋಚ ವುಂಟಾದರೂ ಇಂತಹ ಸಹೃದಯ ಹಿರಿಯರ ಆಶೀರ್ವಾದಕ್ಕೆ ಪಾತ್ರರಾಗಿದ್ದೇವಲ್ಲ ಎಂಬ ಹೆಮ್ಮೆಯೂ ಉಂಟಾಯಿತು. ಹಳ್ಳಿಯಹಾಡು ಎಂಬ ನನ್ನ ಜಾನಪದ ಸಂಕಲನವನ್ನು ಪ್ರಬುದ್ಧ ಕರ್ಣಾಟಕದ ಚಂದಾದಾರರಿಗೆ ಕಾಣಿಕೆಯ ಗ್ರಂಥವಾಗಿ ಕೊಡಬಹುದೆಂದು ನಿಶ್ಚಯಿಸಿ ಹಸ್ತಪ್ರತಿಯನ್ನು ತಮಗೆ ಕೊಡುವಂತೆ ಶ್ರೀಮಾನ್ ಶಾಸ್ತ್ರಿಗಳು ಹೇಳಿದರು. ನಾನು ಅವರಿಗೆ ಹಸ್ತಪ್ರತಿ ಇದ್ದದ್ದನ್ನು ಇದ್ದಹಾಗೆಯೇ ಕೊಟ್ಟೆ. ಅವರು ಅದನ್ನು ಆಮೂಲಾಗ್ರವಾಗಿ ಓದಿ ಕೆಲವು ಸಲಹೆಗಳನ್ನು ಕೊಟ್ಟು, ಅದರ ದೃಷ್ಟಿಯಲ್ಲಿ ಹಸ್ತಪ್ರತಿಯನ್ನು ಮತ್ತೆ ತಿದ್ದುವಂತೆ ಹೇಳಿದರು. ಅನಂತರ ಆ ಹಸ್ತಪ್ರತಿಯನ್ನು ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಗೆ ಕೊಟ್ಟರು. ಅವರೂ ಸಹ, ಅದರಲ್ಲಿ ಇನ್ನೂ ಕೆಲವು ತಿದ್ದುಪಡಿಗಳನ್ನು ಮಾಡಿದರು. ಹೀಗೆ ಆ ಪುಸ್ತಕ ಬಹುಮಟ್ಟಿಗೆ ನಿರ್ದೋಷವಾಯಿತು. ಆದರೆ ಆ ಇಬ್ಬರು ವಿದ್ವಾಂಸರೂ ಹಳ್ಳಿಯಹಾಡುಗಳ ಮೂಲಸಾಹಿತ್ಯವನ್ನಾಗಲೀ ಮಾತುಗಳ ನ್ನಾಗಲೀ ತಿದ್ದುವುದಾಗಲೀ ಬದಲಾಯಿಸುವುದಾಗಲೀ ಮಾಡಲಿಲ್ಲ. ಮೂಲ ರೂಪವು ಇರುವಂತೆಯೇ ಇರಬೇಕು. ಆದರೆ ಮೂಲದ ತಪ್ಪು ಯಾವುದಿರ ಬಹುದು, ಹಾಡುಗಳನ್ನು ಹೇಳುವವರು ಮಾಡಿರುವ ತಪ್ಪುಗಳು ಯಾವುವಿರ ಬಹುದು, ಹಾಡುಗಳ ಅನುಕ್ರಮಣಿಕೆ ಯಾವುದಿರಬೇಕು, ಶೀರ್ಷಿಕೆ ಯಾವುದು, ಬಿಡಿಬಿಡಿಯಾದ ಹಾಡುಗಳನ್ನು ಹೇಗೆ ಜೋಡಿಸಬಹುದು—ಈ ಎಲ್ಲ ಸಲಹೆಗಳನ್ನು ಅವರು ನನಗೆ ಕೊಟ್ಟರು. ಕೊನೆಯಲ್ಲಿ "ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರೂ ಈ ಭಾಗದಲ್ಲಿ ಕೆಲಸಮಾಡಿದ್ದಾರೆ. ಅವರ ಕಣ್ಣಿನಮುಂದೆಯೂ ಇದನ್ನು ಹಾಯಿಸಿ" ಎಂದು ಹೇಳಿದರು. ಹಾಗೆಯೂ ಮಾಡಿದೆ. ಈ ಎಲ್ಲ ಪರಿಷ್ಕರಣಗಳಿಂದ ನಾನು ಒಬ್ಬನೇ ಮಾಡಿದ್ದರೆ ಹೇಗೋ ಅದರ ಹತ್ತರಷ್ಟು ಹೆಚ್ಚು ಶುದ್ಧವೂ ಉಪಯುಕ್ತವೂ ಆಯಿತು. ಆ ಹಸ್ತಪ್ರತಿ ಕೊನೆಯಲ್ಲಿ ಮುದ್ರಣಾಲಯದ ತೊಂದರೆಯಿಂದಾಗಿ ನಾನೇ ಆ ಗ್ರಂಥವನ್ನು ಮುದ್ರಿಸಬೇಕಾಯಿತು. ಆದರೆ ಅದರ ಯೋಗ್ಯತೆಗೂ ಉಪಯುಕ್ತತೆಗೂ ಆ ಮೂವರು ಮಹನೀಯರೂ ವಹಿಸಿದ ಶ್ರಮವೇ ಮುಖ್ಯಕಾರಣವಾಗಿತ್ತು. ಮೆರವಣಿಗೆ ಎಂಬ ನನ್ನ ಪುಸ್ತಕ ಪ್ರಕಟ ವಾದಾಗ ಶ್ರೀಮಾನ್ ಶಾಸ್ತ್ರಿಗಳು ತಮ್ಮ ಸಂತೋಷವನ್ನು ಹೀಗೆ ನನಗೆ ಬರೆದು

ವ್ಯಕ್ತಪಡಿಸಿದರು: "ನೀವು ಇದುವರೆಗೆ ಸಣ್ಣ ಸಣ್ಣ ತಟ್ಟೆಗಳಲ್ಲಿ ರುಚಿರುಚಿಯಾದ ತಿನಸುಗಳನ್ನು ಒದಗಿಸುತ್ತಿದ್ದೀರಿ. ಈಗ ಒಂದು ದೊಡ್ಡ ಬೋಗುಣಿಯ ತುಂಬ ಕೊಟ್ಟಿದ್ದೀರಿ. ಕೆಲವು ಪ್ರಸಂಗಗಳಂತೂ ಓದಿ ಓದಿದಷ್ಟೂ ಹೆಚ್ಚು ಹೆಚ್ಚು ರಸವತ್ತಾಗಿ ತೋರುತ್ತಿವೆ."

ಶ್ರೀಮಾನ್ ಕೃಷ್ಣಶಾಸ್ತ್ರಿಗಳದು ಸತತವಾದ ಜ್ಞಾನಾರ್ಜನೆ ಮತ್ತು ಕಾರ್ಯ ತತ್ಪರತೆ. ಅವರ ಕನ್ನಡ ಸಂಸ್ಕೃತಜ್ಞಾನ, ಬಹುಮಟ್ಟಿಗೆ ಅವರ ಸ್ವಂತ ವ್ಯಾಸಂಗದ ಫಲ. ಅವರು ಸಂಸ್ಕೃತ ಬಾಲಪಾಠವನ್ನಷ್ಟೇ ತಮ್ಮ ತಂದೆಯವರಿಂದ ಕಲಿತರು. ಅನಂತರ ಇಂಗ್ಲಿಷ್ ವ್ಯಾಸಂಗಕ್ಕೆ ತಿರುಗಿಕೊಂಡರು ಕನ್ನಡವನ್ನು ಕಲಿತುದೂ ಬಿ.ಎ.ಗಾಗಿ. ಆದರೆ ಅದು ಬರಿಯ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಮಾತ್ರ ಓದಿದ ವಿದ್ಯೆಯಾಗಲಿಲ್ಲ. ಅವರು ಹಳಗನ್ನಡದಲ್ಲಿ ನಿಸ್ಸೀಮ ಪಂಡಿತರು. ಹಳಗನ್ನಡದ ಎಲ್ಲ ಕಾವ್ಯಗಳನ್ನೂ ಅವರು ಓದಿದ್ದರು. ಕನ್ನಡದ ಮೂಲಕ ಸಂಸ್ಕೃತ ಸಂಸ್ಕೃತದ ಮೂಲಕ ಕನ್ನಡ ಹೀಗೆ ಎರಡನ್ನೂ ಬಿತ್ತರಿಸಿಕೊಂಡದು, ಎತ್ತರಿಸಿ ಕೊಂಡರು. ಉದ್ಯೋಗದಿಂದ ಅವರು ಪಂಡಿತರಾದರೂ ಸ್ವಂತ ಇಚ್ಛೆಯಿಂದ ವಿಜ್ಞಾನಿಗಳೂ ಸಂಶೋಧಕರೂ ವಿಮರ್ಶಕರೂ ಆದರು. ಅವರು ಬರೆದಿರುವ ಸಂಸ್ಕೃತ ನಾಟಕ, ವಚನಭಾರತ ಕಥಾಮೃತಗಳ ಮುನ್ನುಡಿಗಳು, ಬಂಕಿಂಚಂದ್ರ ಮುಂತಾದುವು ಅವರ ಸಂಶೋಧನಾ ಸಾಮರ್ಥ್ಯಕ್ಕೆ ಉದಾಹರಣೆಗಳು. ಅವರ ವಿಮರ್ಶೆ ತೀಕ್ಷ್ಣವಾದರೂ ಅದರ ಮೂಲದಲ್ಲಿ ಯೋಗ್ಯತೆಯನ್ನು ಕಂಡು ಹಿಡಿಯುವ ಅವರ ಅನ್ಯಾದೃಶವಾದ ಸಾಮರ್ಥ್ಯ, ಶುದ್ಧ ಅಭಿರುಚಿ ಇವುಗಳ ಪ್ರೇರಣೆ ಇದ್ದಿತೆಂಬುದು ವಿದ್ವಾಂಸರ ಮತ. ಇದಕ್ಕೆ ನನ್ನ ಅನುಭವಕ್ಕೆ ಬಂದ ಒಂದು ಉದಾಹರಣೆಯನ್ನು ಇಲ್ಲಿ ಹೇಳಬಹುದು. ಶ್ರೀಮಾನ್ ಕೃಷ್ಣಶಾಸ್ತ್ರಿಗಳು, ಕವಿವರ್ಯ ಕೆ. ವಿ. ಪುಟ್ಟಪ್ಪನವರ (ಡಾಕ್ಟರ್, ಪದ್ಮವಿಭೂಷಣ) ಒಂದು ಕೃತಿಯ ವಿಷಯದಲ್ಲಿ ವ್ಯಕ್ತಪಡಿಸಿದ ಪ್ರಶಂಸೆ ಮೆಚ್ಚಿಕೆ, ಅತಿಶಯೋಕ್ತಿ ಅತ್ಯುಕ್ತಿಯೆಂದೂ, ಅದನ್ನು (ಶ್ರೀಮಾನ್ ಕೆ. ವಿ. ಪುಟ್ಟಪ್ಪನವರ ಪುಸ್ತಕವನ್ನು) ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಶ್ರೇಷ್ಠ ಗ್ರಂಥಗಳಿಗೆ ಹೋಲಿಸಿರುವುದು ತುಂಬ ಅಳತೆಮೀರಿದ ಹೊಗಳಿಕೆಯೆಂದೂ, ಇದರಿಂದ ಆಧುನಿಕ ಬರಹಗಾರರ ತಲೆ ತಿರುಗಿಹೋಗುವುದೆಂದೂ ಒಬ್ಬ ವಿದ್ವಾಂಸರು (ಅವರೂ ಆಧುನಿಕರೇ) ಶ್ರೀಮಾನ್ ಡಿ. ವಿ. ಗುಂಡಪ್ಪನವರೊಂದಿಗೆ ದೂರಿದರು. ಅದಕ್ಕೆ ಡಿ. ವಿ ಜಿ. ಯವರು "ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಹಾಗೆ ಹೇಳಿದರೆ, ಅದಕ್ಕೆ ಗ್ರಂಥ ಅರ್ಹವಾದದ್ದಾಗಿರಬೇಕು. (He has a sure taste. He never is swayed by any prejudice in his judgement)" ಎಂದು ಉತ್ತರವಿತ್ತರು. ಪ್ರಬುದ್ಧ ಕರ್ಣಾಟಕದ ವಿಮರ್ಶೆ ಹೀಗೆ ನಿರ್ದುಷ್ಟವಾಗಿದ್ದುದರಿಂದಲೇ ಅದರಲ್ಲಿ ಬರುತ್ತಿದ್ದ ಅಭಿಪ್ರಾಯಗಳಿಗೂ ಲೇಖನಗಳಿಗೂ ವಿಮರ್ಶೆಗಳಿಗೂ ಕನ್ನಡ ನಾಡಿನಲ್ಲಿ ಅಂತಹ ಬೆಲೆ ಇತ್ತು.

ಇಂತಹ ವಿದ್ವಾಂಸರಾಗಿದ್ದರೂ ವಾದದಲ್ಲಿ ಸೋಲದವರಾಗಿದ್ದರೂ ಶ್ರೀಮಾನ್ ಕೃಷ್ಣಶಾಸ್ತ್ರಿಗಳು ತುಂಬ ವಿನಯಪರರಾಗಿದ್ದರು. ವಚನ ಭಾರತದಲ್ಲಿ ಒಂದು ಸಣ್ಣ ಕೈತಪ್ಪನ್ನು ಚಿಕ್ಕವಯಸ್ಸಿನ ಒಬ್ಬರು ತೋರಿಸಿದಾಗ, ಅವರು ತಮ್ಮ ತಪ್ಪನ್ನು ಕೂಡಲೇ ಬಹಿರಂಗವಾಗಿ ಒಪ್ಪಿಕೊಂಡು ಮುಂದಲ ಮುದ್ರಣದಲ್ಲಿ ಸರಿಪಡಿಸುವುದಾಗಿ ಹೇಳಿದರು. ನಾನು ಅವರ ವಚನ ಭಾರತವನ್ನು ಓದುತ್ತಿದ್ದಾಗ ಒಂದು ಪುಟದಲ್ಲಿ "ಭೀಮನಿಗೆ ಸಾವಿರ ಆನೆಗಳ ಬಲವೆಂದೂ" ಮತ್ತೊಂದು ಪುಟದಲ್ಲಿ "ಭೀಮನಿಗೆ ಹತ್ತು ಸಾವಿರ ಆನೆಗಳ ಬಲವೆಂದೂ" ಇದ್ದುದನ್ನು ಗಮನಿಸಿದೆ ನಾನು ಶಾಸ್ತ್ರಿಗಳಿಗೆ "ಏನು ಹೀಗೆ ಒಂದೊಂದು ಕಡೆ ಒಂದೊಂದು ತರಹ ಇದೆಯಲ್ಲ ಒಂದು ಪುಟದಲ್ಲಿ ಸಾವಿರ ಆನೆ ಬಲಶಾಲಿಯಾಗಿದ್ದ ಭೀಮ ಕಥೆ ನೂರಾರು ಪುಟ ಮುಂದುವರಿಯುವುದರೊಳಗೆ ಹತ್ತು ಸಾವಿರ ಆನೆಗಳಷ್ಟು ಬಲಿಷ್ಠ ನಾಗಿಬಿಟ್ಟನೆ? ಅಥವಾ ಇದು ಕೈತಪ್ಪೆ?" ಎಂದು ಬರೆದೆ. ಮೂರು ನಾಲ್ಕು ತಿಂಗಳಾದರೂ ನನ್ನ ಕಾಗದಕ್ಕೆ ಪ್ರತ್ಯುತ್ತರ ಬರಲಿಲ್ಲ. ಶಾಸ್ತ್ರಿಗಳೂ ವಿಷಯವನ್ನು ಮರೆತುಬಿಟ್ಟರೋ ಅಥವಾ ಕೈ ಬಿಟ್ಟರೋ ಎಂದು ಸುಮ್ಮನಾದೆ. ಒಂದು ದಿನ ಇದ್ದಕ್ಕಿದ್ದಂತೆ ಅವರಿಂದ ಕಾಗದ ಬಂದಿತು. "ನಾನು ಮತ್ತೆ ಮೂಲ ಭಾರತವನ್ನು ತಿರುವಿಹಾಕಬೇಕಾಯಿತು. ಅದರಲ್ಲಿಯೂ ನಾನು ಸಾವಿರ ಆನೆ ಎಂದು ಬರೆದಿರುವೆಡೆ ಸಾವಿರ ಆನೆ ಎಂದು ಇದೆ. ಹತ್ತು ಸಾವಿರ ಆನೆ ಎಂದು ಬರೆದಿರುವೆಡೆ ಹತ್ತು ಸಾವಿರ ಆನೆ ಎಂದಿದೆ. ನಾನೂ ಹಾಗೆಯೇ ಇಟ್ಟದ್ದೇನೆ" ಎಂದು ಬರೆದಿದ್ದರು. ತಮ್ಮ ಕೆಲಸದಲ್ಲಿ ಅವರು ಎಷ್ಟು ಶ್ರದ್ಧೆ ವಹಿಸುತ್ತಿದ್ದರೆಂಬುದಕ್ಕೆ ಇದೊಂದು ಉದಾಹರಣೆ. ಶಾಸ್ತ್ರಿಗಳು ವಿನಯ ಮತ್ತು ನ್ಯಾಯಕ್ಕೆ ಬಗ್ಗುತ್ತಿದ್ದರೆ ಹೊರತು ಆಟಾಟೋಪಗಳಿಗೆ ಸೊಪ್ಪು ಹಾಕುತ್ತಿರಲಿಲ್ಲ. ಹೇಳಬೇಕಾದ ಮಾತನ್ನು ಎದುರಾಳಿಗೆ ಆಯಾ ಘಳಿಗೆಯಲ್ಲಿಯೇ ಆಯಾ ಸಂದರ್ಭದಲ್ಲಿಯೇ ಹೇಳಿ ಬಿಡ ಬೇಕೇ ಹೊರತು ಅದನ್ನು ಮುಂದಕ್ಕೆ ಹಾಕಿ ಮೀನ ಮೇಷಮಾಡಿ, ಹೀಗೆ ಹೇಳಿದರೆ ಹೇಗೆ, ಹಾಗೆ ಹೇಳಿದರೆ ಹೇಗೆ? ಅವನ ಮನಸ್ಸು ನೋಯಬಹುದೆ? ಎಂದೆಲ್ಲ ಗುಣಾಕಾರ ಹಾಕುವುದು ಅವರ ಸ್ವಭಾವವಾಗಿರಲಿಲ್ಲ. ಅವರು ವಾದದಲ್ಲಿ ತುಂಬ ಗಟ್ಟಿಗರು, ವಾದದಲ್ಲಿ ಅವರನ್ನು ಸೋಲಿಸುವುದು ಸುಲಭವಲ್ಲ. ವಕ್ರೋಕ್ತಿ, ಕಟಕಿ, ವಿಡಂಬನೆ, ಸಕಾರಣವಾದ ನಿರ್ದುಷ್ಟವಾದ ಎದುರಿಸಲಾಗದ ವಾದಸರಣಿ ಎಲ್ಲವನ್ನೂ ಉಪಯೋಗಿಸಿ ಅವರು ಎದುರಾಳಿಯನ್ನು ಸದೆ ಬಡಿಯುತ್ತಿದ್ದರು. ಭಾಷಾವಿವಾದದ ಪ್ರಸಂಗದಲ್ಲಿ ಅವರ ಈ ಶಕ್ತಿ ಚೆನ್ನಾಗಿ ಪ್ರಕಾಶಿತವಾಯಿತು. ಒಬ್ಬರು ಶಾಸ್ತ್ರಿಗಳ ಭಾಷಣವನ್ನು "ತ್ರಿಕರಣಪೂರ್ವಕ ವಾಗಿ ಅಭಿನಂದಿಸಿ" ಅದರಲ್ಲಿರುವ ದೋಷಗಳೆಂದು ಕಂಡುದನ್ನು ತೆಗೆದರು. ಶಾಸ್ತ್ರಿಗಳು "ತಾವು ನನ್ನನ್ನು ತ್ರಿಕರಣಪೂರ್ವಕವಾಗಿ ಅಭಿನಂದಿಸಿಯೂ ನಾನು ನಿರೀಕ್ಷಿಸಿದಂತೆ ಅಭಿನಿಂದಿಸಿಯೂ .... ...." ಮುಂತಾಗಿ ಪ್ರಾರಂಭಿಸಿ ಸೂಕ್ತ

ಪ್ರತ್ಯುತ್ತರವನ್ನು ಕೊಟ್ಟರು. ಒಬ್ಬರು ಶಾಸ್ತ್ರಿಗಳನ್ನು "ನೀವು ಗಾಂಭೀರ್ಯಕ್ಕೆ ಸಲಾಮು ಹಾಕಿದಿರಿ" ಎಂದು ಹೇಳಿದಾಗ, ಶಾಸ್ತ್ರಿಗಳು "ಎಲ್ಲಿ ಮತ್ತೇನೂ ಪ್ರಯೋಜನಕ್ಕೆ ಬರುವುದಿಲ್ಲವೋ ಅಲ್ಲಿ ಹಾಕಿದ್ದೇನೆ" ಎಂದು ಉತ್ತರ ಕೊಟ್ಟರು. ಎದುರಾಳಿಗೆ ಆ ಮಾತು ಅರ್ಥವಾಯಿತೋ ಇಲ್ಲವೋ. ಮತ್ತೊಬ್ಬರು "ವಿನಯ ಔದಾರ್ಯಗಳು ನಿಮಗೆ ಸಹಜ" ಎಂದು ವ್ಯಂಗ್ಯವಾಗಿ ನುಡಿದಾಗ ಅವರು "ಆದರೆ ನ್ಯಾಯವಲ್ಲದುದನ್ನು ಕಂಡಾಗ ಅವು ಮಾಯವಾಗಿ ನಾನು ತಾಮಸ ಪ್ರಭುವಾಗುವುದೂ ಉಂಟೆಂಬುದನ್ನು ನನ್ನನ್ನು ಬಲ್ಲವರು, ಬಲ್ಲರು. ಸಾತ್ವಿಕಕ್ಕೆ ಸಾತ್ವಿಕ, ತಾಮಸಕ್ಕೆ ತಾಮಸ. ಇದು ಲೋಕಮಾನ್ಯ ತಿಳಕರ ರಾಜಕೀಯ ಸಿದ್ಧಾಂತದಂತೆ "ಶಠಂ ಪ್ರತಿಶಾಠ್ಯಂ" ಆದರೆ ಅಂತಹ ವೇಳೆಯಲ್ಲಿ ಅಚಾತುರ್ಯದಿಂದ ಯಾವನಾದರೂ ವ್ಯಕ್ತಿಗೆ ನೋವಾದರೆ ಶಾಸ್ತ್ರಿಗಳು ತಮ್ಮ ತಪ್ಪನ್ನು ಒಪ್ಪಿಕೊಳ್ಳುತ್ತಿದ್ದರು. ಉದಾಹರಣೆಗೆ ಹಿಂದೀ ಕನ್ನಡವಾದದಲ್ಲಿ ಒಂದು ಸಲ ಶಾಸ್ತ್ರಿಗಳು ಕನ್ನಡಿಗರನ್ನು ಹೀಗೆ ಎಚ್ಚರಿಸಿದರು: "ಕನ್ನಡಿಗರೇ ನೀವು ಮಾತ್ರ ನಿಮ್ಮ ಕನ್ನಡ ಅಭಿಮಾನವನ್ನು ಕಾಪಾಡಿಕೊಳ್ಳಿ. ಮೋಹಕ್ಕೆ ಸಿಲುಕಬೇಡಿ. ವಿಚಾರ ಮಾಡಿ. ನಿಮ್ಮ ಕನ್ನಡದ ಅಭಿಮಾನವೆಂಬ ಕಾಮಧೇನು ಎಚ್ಚರವಾಗಿದ್ದರೆ, ಬ್ರಹ್ಮದಂಡ ಮುಂದೆ ಇದ್ದರೆ ನಮ್ಮನ್ನು ಯಾವ ವಿಶ್ವಾಮಿತ್ರರ ಹಿಂದೀ ಪಡೆಯೂ ಏನೂ ಮಾಡಲಾರದು" ಸೊಗಸಾದ ಭಾವ. ಸೊಗಸಾದ ಮಾತು; ಕನ್ನಡ ಕಾಮಧೇನು; ಕನ್ನಡಾಭಿಮಾನವೇ ವಸಿಷ್ಠರ ಬ್ರಹ್ಮದಂಡ. ಅದಕ್ಕೆ ಎದುರಾಗಿರುವುದು ವಿಶ್ವಾಮಿತ್ರರ ಹಿಂದೀಪಡೆ. ಸ್ವಾಭಾವಿಕವಾದ ವಿಶ್ವಾಮಿತ್ರ ಬ್ರಹ್ಮಋಷಿಯಾಗಲು ಪ್ರಯತ್ನಿಸಿದ ಕಥೆ. (ಇದನ್ನು ಶಾಸ್ತ್ರಿಗಳು ಹೇಳಿದುದು ಇಂದಲ್ಲ ೧೯೪೧ ರಲ್ಲಿ). ಆಗ ಯಾರೋ ಒಬ್ಬರು ಶಾಸ್ತ್ರಿಗಳಿಗೆ "ವಿಶ್ವಾಮಿತ್ರರೆಂಬ ಒಬ್ಬ ಹಿಂದೀಪ್ರಚಾರಕರು ಇದ್ದಾರೆಂದೂ ಶಾಸ್ತ್ರಿಗಳ ಮಾತಿನಿಂದ ಅವರಿಗೆ ನೋವಾಗಿದೆಯೆಂದೂ" ಶಾಸ್ತ್ರಿಗಳ ಗಮನಕ್ಕೆ ತಂದರು. ಕೂಡಲೇ ಶಾಸ್ತ್ರಿಗಳು "ಅಂತಹ ಹೆಸರಿನ ಹಿಂದಿ ಪ್ರಚಾರಕರಿರುವುದು ನನಗೆ ಗೊತ್ತಿರಲಿಲ್ಲ. ನಾನು ಯಾವ ವ್ಯಕ್ತಿನಿಂದೆಯನ್ನೂ ಮಾಡುವವನಲ್ಲ. ಇದು ಅಚಾತುರ್ಯವಾಯಿತು" ಎಂದು ಒಪ್ಪಿದರು.

ತಮ್ಮ ಅಧಿಕಾರಾವಧಿಯಲ್ಲಿ ಶಾಸ್ತ್ರಿಗಳು ಉಪಾಧ್ಯಾಯರಾಗಿ, ಪ್ರಾಧ್ಯಾಪಕರಾಗಿ ಪ್ರಬುದ್ಧಕರ್ಣಾಟಕದ ಸಂಪಾದಕರಾಗಿ ಕನ್ನಡಸಂಘದ ಚಾಲಕರಾಗಿ, ಕನ್ನಡ ಪ್ರಕಟನ ಸಮಿತಿಯ ಅಧ್ಯಕ್ಷರಾಗಿ ಪರೀಕ್ಷಕರಾಗಿ, ಶಕ್ತಿಮೀರಿ ನಿರ್ವಂಚನೆಯಿಂದ ದುಡಿದಿದ್ದರು. ಕಾರ್ಯಮಾಡಿ ದಣಿದಿದ್ದಿರಬಹುದು. ಆದರೂ "ನಾನೂ ಸ್ವಂತ ಇಚ್ಛೆಯಿಂದ ಮಾಡಬೇಕಾದ ಕಾರ್ಯವೂ ಇದೆ" ಎಂದು ಅವರಿಗೆ ಅನಿಸಿರಬೇಕು. ಅವರು ನಿವೃತ್ತರಾದ ಪ್ರಾರಂಭದಲ್ಲಿ ಒಂದುದಿನ ನಾನು ಅವರನ್ನು "ರಿಟೈರ್ ಆಗಿಹೋಯಿತು. ಈಗ ಏನುಮಾಡ್ತೀರಿ ಸಾರ್?" ಎಂದು ಕೇಳಿದೆ.

ಶಾಸ್ತ್ರಿಗಳು "ರಿಟೈರೂ ಆಯಿತು ಟೈರೂ ಆಯಿತು. ಈಗ ಮನಸ್ಸುಬಂದದ್ದು ಮಾಡ್ತೇನೆ. ಬೇಕಾದ್ದು ಮಾಡತೇನೆ. ಬೇಕಾದ್ರೆ ಓದ್ತೇನೆ ಬೇಡವಾದರೆ ಮಲಗ್ತೇನೆ, ಕೇಳೋರ್‍ಯಾರು?" ಎಂದು ಉತ್ತರಕೊಟ್ಟರು. ಆದರೂ ಹೆಚ್ಚುಕಾಲ ಏನನ್ನೂ ಮಾಡದೆ ಕೂರಲಿಲ್ಲ.

> ಕುರ್ವನ್ನೇವೇಹ ಕರ್ಮಾಣಿ
> ಜಿಜೀವಿಷೇಚ್ಛತಂಸಮಾಃ
> ಏವಂ ತ್ವಯಿ ನಾನ್ಯಥೇತೋಽಸ್ತಿ
> ನಕರ್ಮಲಿಪ್ಯತೇ ನರೇ

"ಕೆಲಸಮಾಡುತ್ತಲೇ ನೂರುವರುಷ ಬೇಕಾದರೂ ಜೀವಿಸಿರಬಹುದು. ಹಾಗಿದ್ದರೆ ಕರ್ಮಲೇಪವಾಗದಿರುವುದಿಲ್ಲ." ಎಂಬ ಉಪನಿಷತ್ ನುಡಿಯಂತೆ ವಚನಭಾರತ, ಕಥಾಮೃತ ಬಂಕಿಂಚಂದ್ರ, ಠಾಕೂರರ ಉಪನ್ಯಾಸ ಭಾಷಾಂತರ ಎಲ್ಲ ಒಂದಾದಮೇಲೆ ಒಂದರಂತೆ ಬಂದವು. ಆಗಲೂ ಶಾಸ್ತ್ರಿಗಳು ಸತತೋದ್ಯೋಗಿಗಳೇ ಆಗಿದ್ದರು. ಒಂದುಸಲ ನನ್ನೊಂದಿಗೆ "ಕಾರ್ಯಮಾಡುವುದಕ್ಕೆ ತೊಡಗಿದರೆ ಮುಗಿಯುವವರೆಗೆ ಕನಿಷ್ಠಪಕ್ಷ ದಿನಕ್ಕೆ ಮೂರು ಅಚ್ಚಿನ ಪುಟಗಳಷ್ಟಾದರೂ ಬರೆಯುದಿರುವುದಿಲ್ಲ" ಎಂದು ಹೇಳಿದ್ದರು. 'ಸಾಹಿತ್ಯ ಅಕೆಡಮಿಯ ಪ್ರಶಸ್ತಿಯೂ ಬಂದಿತು. ಜೊತೆಗೆ ಉತ್ತಮವಾದ ಮುದ್ರಣಕ್ಕೆಂದು ಬಂಕಿಂಚಂದ್ರ ಗ್ರಂಥವನ್ನು ಪ್ರಕಟಿಸಿದ ಮುದ್ರಣಾಲಯದವರಿಗೆ (ಬಿ.ಬಿ.ಡಿ ಪವರ್‌ಪ್ರೆಸ್, ಬೆಂಗಳೂರು) ಭಾರತ ಸರ್ಕಾರದಿಂದ ಅತ್ಯುತ್ತಮ ಮುದ್ರಣಕ್ಕಾಗಿ ದೊರಕುವ ಬಹುಮಾನವೂ ಬಂದಿತು. ಮುದ್ರಣಕಾರರಿಗೆ ಆ ಬಹುಮಾನ ಬಂದುದರಿಂದ, ಅವರನ್ನು ಬೆಂಗಳೂರಿನ ಮುದ್ರಣ ಸಂಘದವರು, ಒಂದುಸಂಜೆ ಸತ್ಕರಿಸಿದರು. ಆ ಸತ್ಕಾರ ಕೂಟಕ್ಕೆ, ಶ್ರೀಮಾನ್ ಶಾಸ್ತ್ರಿಗಳೂ ಹೋಗಿದ್ದು, ಸಮಾರಂಭವನ್ನು ಮುಗಿಸಿಕೊಂಡು ಕೆಲವು ಮಿತ್ರರೊಂದಿಗೆ ಮೆಜಿಸ್ಟಿಕ್‌ಚೌಕದ ಕಡೆಗೆ ಕೆಂಪೇಗೌಡ ರಸ್ತೆಯಿಂದ ಬರುತ್ತಿದ್ದರು. ಅವರ ಮಡಿಸಿಕೊಂಡಿದ್ದ ಎಡ ಮೊಣಕೈಯಲ್ಲಿ ಎರಡು ಹಾರಗಳಿದ್ದವು. ಎದುರುಕಡೆಯಿಂದ ಆದಾರಿಯಲ್ಲಿ ಹೋಗುತ್ತಿದ್ದ ನಾನು ಅವರನ್ನು ವಂದಿಸಿದೆ. "ಬಂಕಿಂಚಂದ್ರ ಮುದ್ರಣಕಾರರಿಗೆ ಪ್ರಶಸ್ತಿಬಂತು" ಎಂದು ಹೇಳಿ ಒಂದು ಹಾರವನ್ನು ನನ್ನ ಕೈಗೆ ಕೊಟ್ಟರು. ನಾನು ಹಾರವನ್ನು ತೆಗೆದುಕೊಂಡು ನನ್ನ ಸಂತೋಷವನ್ನು ವ್ಯಕ್ತಪಡಿಸಿ "ಅಲ್ಲಸಾರ್; ಹಾರ ನನಗ್ಯಾಕೆ? ಈಹಾರ ತೆಗೆದುಕೊಂಡು ನಾನು ಏನುತಾನೇ ಮಾಡಲಿ? ಏನಾದರೂ ಸಿಹಿತಿಂಡಿಯೋ...." ಎಂದೆ. ಶಾಸ್ತ್ರಿಗಳು "ಮುದ್ರಣಕಾರರ ಸಂಘದಲ್ಲಿ ಸಿಹಿಗೂ ಏನೂ ಕಡಿಮೆ ಇರಲಿಲ್ಲ. ಎಲ್ಲ ಸಮೃದ್ಧವಾಗಿ ಸೊಗಸಾಗಿ ಮಾಡಿದ್ದರು. ನೀವಿಲ್ಲಿರುವುದು ಗೊತ್ತಿದ್ದರೆ ನಿಮಗೂ ಆಹ್ವಾನ ಬರುತ್ತಿತ್ತು" ಎಂದರು. ನನಗೇ

ಅದೃಷ್ಟವಿಲ್ಲ ಎಂದುಕೊಂಡು ನನ್ನದಾರಿ ಬದಲಾಯಿಸಿ ಅಪರಜತೆ ಮೆಜಸ್ಟಿಕ್ ಚೌಕಕ್ಕೇ ಮಾತನಾಡುತ್ತಾ ಹಿಂದಿರುಗಿದೆ. ಮರುದಿವಸವೋ ಅದರ ಮರು ದಿವಸವೋ ತಮ್ಮಮನೆಗೆ ಬರಬೇಕೆಂದು ಶಾಸ್ತ್ರಿಗಳು ನನಗೆ ಅಪ್ಪಣೆಮಾಡಿದರು. ಅದರಂತೆ ಆದಿನ ನಾನು ಸುಮಾರು ೪ ಗಂಟೆವೇಳೆಗೆ ಅವರ ಮನೆಗೆಹೋದೆ. ಸ್ವಲ್ಪಹೊತ್ತು ಮಾತನಾಡುತ್ತಿದ್ದನಂತರ ಶಾಸ್ತ್ರಿಗಳು "ಏಳಿ ಹೋಗಿಬರೋಣ" ಎಂದರು. ಎಲ್ಲಿಗೆ ಎಂಬುದು ನನಗೆ ಗೊತ್ತಾಗದಿದ್ದರೂ ಮಾತನಾಡದೆ ಹೊರಟೆ. ನಾಲ್ಕು ಹೆಜ್ಜೆ ನಡೆಯುವುದರೊಳಗೆ, ಶಾಸ್ತ್ರಿಗಳೇ ಒಂದು ಆಟೋರಿಕ್ಷಾವನ್ನು ನಿಲ್ಲಿಸಿ ಮೆಜಸ್ಟಿಕ್ ಚೌಕಕ್ಕೆ ಬಿಡುವಂತೆ ಹೇಳಿದರು. ಅಲ್ಲಿ ಬಂದು ಇಳಿದೆವು. ಶಾಸ್ತ್ರಿಗಳು "ನಿಮ್ಮ ಅದೃಷ್ಟ ಹೇಗಿದೆಯೋ ನೋಡೋಣ ಬನ್ನಿ" ಎಂದು ಮೆಜಸ್ಟಿಕ್ ಚೌಕದ ಹಿಂದೆ ಒಂದು ಅಡ್ಡಬೀದಿಗೆ ನಡೆದರು. ನಾನೂ ಅವರನ್ನು ಅನುಸರಿಸಿದೆ. ಒಂದು ಸಣ್ಣಮನೆಯ ಬಾಗಿಲಿನಲ್ಲಿ ಹೋಗಿ ನಿಂತೆವು. ಒಳಗೆ ಪಟ್ಟಸಾಲೆಯಲ್ಲಿ ಬೆಂಚಿನ ಮೇಲೆ ಒಬ್ಬ ಸುಮಾರು ೨೫–೨೬ ವರುಷದ ಯುವಕ ಕುಳಿತಿದ್ದ. ಅವನೂ ರಾಮಾನುಜಾಚಾರಿಯೆ. ಮುಖದಮೇಲೆ ಮೂರು ಲಾಂಛನವೂ ಸ್ಪಷ್ಟವಾಗಿ ಕಾಣುತ್ತಿತ್ತು. ಯುವಕ ಶುಭ್ರವಸ್ತ್ರವನ್ನುಟ್ಟು ಶ್ಲಕ್ಷಣವಾಗಿದ್ದ (ಇದು ನಮ್ಮ ಕಡೆ ಶ್ರೀವೈಷ್ಣವ ವೈದಿಕರು ಉಪಯೋಗಿಸುವ ಮಾತು. ಶುದ್ಧನಾಗಿಯೂ ಇದ್ದ, ಸಂಪ್ರದಾಯವಂತನೂ ಆಗಿದ್ದ ಎಂಬ ಭಾವ). ನಮ್ಮನ್ನು ನೋಡಿ ತುಂಬಾ ಮರ್ಯಾದೆಯಿಂದ ಎದ್ದು ಬೆಂಚಿನಮೇಲೆ ನಮ್ಮಿಬ್ಬರನ್ನೂ ಕೂರಿಸಿದ. ಶಾಸ್ತ್ರಿಗಳ ಮುಖದಲ್ಲಿ ತಮ್ಮ ನಿರೀಕ್ಷಣೆ ಸಫಲವಾಯಿತೆಂಬ ಭಾವವಿದ್ದುದು ನನಗೆ ಗೊತ್ತಾಯಿತು. ಯುವಕ ಒಳಕ್ಕೆಹೋಗಿ ಬೆಳ್ಳಿಯ ಚೊಂಬು ಲೋಟತಂದು, ಕೈತೊಳೆದುಕೊಳ್ಳಲು ಕೆಳಕ್ಕೆ ತಟ್ಟೆಹಿಡಿದ. ಕೈತೊಳೆದುಕೊಂಡೆವು. ಅನಂತರ ಒಳಕ್ಕೆಹೋಗಿ ಬಾಳೆಎಲೆಗಳಲ್ಲಿ ಇಬ್ಬರಿಗೂ ತಿಂಡಿತಂದುಕೊಟ್ಟ. ಶಾಸ್ತ್ರಿಗಳು ಕೈಯ್ಯಲ್ಲಿ ತೆಗೆದುಕೊಂಡು "ಇವನು ನಮ್ಮ ತಂದೆಯವರ ಸ್ನೇಹಿತರ ಮಗ. ಬಾಲ್ಯದಲ್ಲಿಯೇ ತಬ್ಬಲಿಯಾದ, ಕಾವ್ಯಾಂತ ಸಂಸ್ಕೃತಪಾಠವೂ ಆಗಿದೆ. ಅಲ್ಲಿಂದ ಮುಂದೆ ಹೋಗಲಿಲ್ಲ. ಆದರೆ ಬುದ್ಧಿವಂತ, ಹೇಗೋ ಒಂದುದಿನ ನನ್ನ ಕಣ್ಣಿಗೆ ಬಿದ್ದ. ಅಡಿಗೆಕೆಲಸದಲ್ಲಿ ಪರಿಶ್ರಮವಿದೆ ಎಂದು ಹೇಳಿದ. ಒಂದು ದಿವಸ ಸ್ನೇಹಿತರು ಮನೆಗೆ ಬಂದಾಗ ಇವನನ್ನು ಅಡಿಗೆಯಲ್ಲಿ ಸಹಾಯಕ್ಕೆ ಕರೆದೆ. 'ನಿನಗೆ ಯಾವ ಭಕ್ಷ್ಯ ಚೆನ್ನಾಗಿ ಮಾಡುವುದಕ್ಕೆ ಬರುತ್ತದೋ ಅದನ್ನು ಮಾಡು. ಪದಾರ್ಥಗಳಿಗೆ ಚೌಕಾಶಿ ಮಾಡಬೇಡ, ಕೈತೊರೆದುಹಾಕು' ಎಂದು ಹೇಳಿದೆ. ಆದಿವಸ ಇವನು ಬಹಳ ಸೊಗಸಾಗಿ ಅಡಿಗೆ ಮಾಡಿದ. ಅಂಥ ಬಾದಾಮಿಹಲ್ವ ನಾನು ಆವರೆಗೆ ತಿಂದೇ ಇರಲಿಲ್ಲ. ಅದೇ ಮೊದಲು. ಈಚೆಗೆ ಆಗಿಂದಾಗ್ಗೆ ನಾನು ಇವನ ಕೈಲಿ (ವಾರಕ್ಕೊಂದು ಸಲವಾದರೂ) ಬಾದಾಮಿಹಲ್ವ ಮಾಡಿಸಿ ತಿನ್ನುತ್ತೇನೆ. ಕೆಲವು ಸಮಯದಲ್ಲಿ ಮಾಡಿಸಿ ತೆಗೆದುಕೊಂಡುಹೋಗಿ ಮನೆಯಲ್ಲಿಯೂ ಇಟ್ಟುಕೊಂಡು

ತಿನ್ನುತ್ತೇನೆ. ಎಷ್ಟುದಿವಸ ಇಟ್ಟರೂ ಕೆಡುವುದಿಲ್ಲ. ನೀರಿನ ಅಂಶ ಸ್ವಲ್ಪವೂ ಇಲ್ಲ. ಎಲ್ಲ ಅವ್ವಲ್ ಲವಾಜಿಮೆ. ಕೆಡುವುದಕ್ಕೆ ಮುಂಚೆ ಮುಗಿದೇ ಹೋಗುತ್ತೆ. ಹಳೆಯ ಸ್ನೇಹಿತರ ಮಗನಾದುದರಿಂದ ಇವನಲ್ಲಿ ನನಗೇನೋ ಒಂದು ಪ್ರೀತಿ. ಅವನೂ ನನ್ನನ್ನು ಕಂಡರೆ ಹಾಗೆಯೆ ಇದ್ದಾನೆ" ಎಂದರು. ರಾಮಾನುಜಾಚಾರಿ ಕಿರುನಗೆ ನಗುತ್ತಾ ಶಾಸ್ತ್ರಿಗಳು ಹೇಳಿದುದಕ್ಕೆಲ್ಲ ಹೌದು ಎಂಬಂತೆ ತಲೆಯಲ್ಲಾಡಿಸುತ್ತಿದ್ದ. ಇಬ್ಬರೂ ಹಲ್ವ ತಿಂದೆವು. ಸೊಗಸಾದ ಬಾದಾಮಿಹಲ್ವ. ಒಂದೊಂದು ಎಲೆಯಲ್ಲಿ ಸುಮಾರು ಒಂದುವರೆ ದಪ್ಪನಿಂಬೆಹಣ್ಣಿನ ಗಾತ್ರಮಾತ್ರ. ಅದರ ರುಚಿಯೋ ಘಮವೋ! ಎಷ್ಟು ತಿಂದರೂ ಸಾಲದು ಎನ್ನುವಂತಿತ್ತು ಅದರ ಮಾಧುರ್ಯ. ಆದರೆ ತಿನ್ನುವುದಕ್ಕೆ ಆಗುತ್ತಿರಲಿಲ್ಲ. ಎಷ್ಟು ತಿಂದರೂ ತೃಪ್ತಿಯೇ ಇಲ್ಲ. ನಮ್ಮ ಕೈಯ್ಯಲ್ಲಿ ಇದ್ದಷ್ಟನ್ನು ತಿನ್ನುವುದರೊಳಗೆ ಸಾಕುಸಾಕಾಗಿ ಹೋಯಿತು. ಶಾಸ್ತ್ರಿಗಳು "ನೋಡಿ ಎಂಥವನನ್ನು ಕಂಡುಹಿಡಿದಿಟ್ಟಿದ್ದೇನೆ. ಇವನಿಗೂ ಯಾರೂ ಇಲ್ಲ. ಗುಂಡುಗೋವಿ. ಅಡಿಗೆಯಲ್ಲಿ ನಳಪಾಕ" ಎಂದರು. ಅನಂತರ ರಾಮಾನುಜಾಚಾರಿ ಎರಡು ದೊಡ್ಡ ಬೆಳ್ಳಿಯಲೋಟದಲ್ಲಿ ಘಮಘಮಿಸುವ ಸುಖೋಷ್ಣವಾದ ಬಾದಾಮಿ ಹಾಲನ್ನು ತಂದಿಟ್ಟ. ಅದರಲ್ಲಿಯೂ ಹಾಗೆಯೇ, ಬಾದಾಮಿ ದ್ರಾಕ್ಷಿ ಗುಟುಕು ಗುಟುಕಿಗೆ ಸಿಕ್ಕುತ್ತಿತ್ತು. ಕೇಸರಿಯ ಘಮಘಮ; ಕುಡಿದು ಕೈತೊಳೆದುಕೊಂಡು ಬೆಳ್ಳಿಚೊಂಬಿನ ನೀರಿನಿಂದ ಬಾಯಿಮುಕ್ಕಳಿಸಿಕೊಂಡು ಹೊರಕ್ಕೆ ಹೊರಟೆವು. ಸೊಗಸಾದ ತಿಂಡಿ ತಿಂದು ನನ್ನ ನಾಲಗೆ ಹರಿತವಾಗಿತ್ತು. ನಾನು ಹಲ್ವವನ್ನೂ ಬಾದಾಮಿಹಾಲನ್ನೂ ಶಾಸ್ತ್ರಿಗಳ ಗದ್ಯಶೈಲಿಗೆ ಹೋಲಿಸಿದೆ. ಇದು ನಳಪಾಕವಾದರೆ ಅದು ದ್ರಾಕ್ಷಾಪಾಕ ಎಂದೆ. ಹೋಲಿಕೆಯಿಂದ ಶಾಸ್ತ್ರಿಗಳಿಗೆ ಏನೂ ಅಸಮಾಧಾನವಾಗಲಿಲ್ಲ. ನಾನು ಶಾಸ್ತ್ರಿಗಳನ್ನೂ ಸೇರಿಸಿಕೊಂಡೇ ತುಂಬಾ ವಿನೋದದ ಮಾತುಗಳನ್ನಾಡಿದ್ದೆ. ಮಾತನಾಡುತ್ತಾ ಮಾರ್ಕೆಟ್‌ವರೆಗೆ ಬಂದೆವು. ಶಾಸ್ತ್ರಿಗಳು "ನಾನು ಯಾವತ್ತೂ ಇಷ್ಟೊಂದು ನಕ್ಕಿರಲಿಲ್ಲವಯ್ಯ. ಇವತ್ತು ಮಾತೂ ಬಹಳ ಹೆಚ್ಚಾಗಿ ಹೋಯಿತು" ಎಂದರು. ಅಲ್ಲಿಂದ ನಮ್ಮಿಬ್ಬರ ದಾರಿಯೂ ಬೇರೆಬೇರೆಯಾಗುವುದಾಗಿತ್ತು. ಶಾಸ್ತ್ರಿಗಳು ಆಟೋರಿಕ್ಷಾ ತೆಗೆದುಕೊಂಡು ತಮ್ಮ ದಾರಿ ಹಿಡಿದರು. ಅವರ ಗಾಡಿ ಮರೆಯಾಗುವವರೆಗೆ ನಾನು ಆ ಕಡೆಯೇ ನೋಡುತ್ತಿದ್ದೆ. ಎಂತಹ ಜೀವ, ಉದಾರ ಚೇತನ, ವಿದ್ವತ್‌ಖನಿ; ಹೊರನೋಟಕ್ಕೆ ಕೇವಲ ಸಾಮಾನ್ಯ; ಸ್ವಲ್ಪ ನಿಷೇಧಿಸುವ ಪ್ರಕೃತಿ ಸಹ. ಆದರೆ ಕಠಿಣವಾದ ಕಬ್ಬಿನ ಹೊರಮುಸುಕಿನ, ಒಳಗಿನ ಮೃದು ಮಧುರವಾದ ತಿರುಳಿನಂತೆ ಅರಿತವರೇ ಆ ಹೃದಯದ ಕೋಮಲತೆಯನ್ನು ಬಲ್ಲರು. ಸ್ವಾಭಾವಿಕವಾಗಿ ಉತ್ತಮವಸ್ತುಪ್ರಿಯರಾದ ಶ್ರೀ ಪು. ತಿ. ನರಸಿಂಹಾಚಾರ್ಯರೊಂದಿಗೆ ನಾನು, ಶಾಸ್ತ್ರಿಗಳು ನನಗೆ ಮಾಡಿದ ಆತಿಥ್ಯವನ್ನು ಕುರಿತು ಹೇಳಿದೆ. ಅವರದು ಯಾವಾಗಲೂ ತೀಕ್ಷ್ಣಬುದ್ಧಿ. ನಾವು, ಏನನ್ನು ನಿರೀಕ್ಷಿಸುತ್ತೇವೆಯೋ ಅವಕ್ಕೆ ವಿರೋಧವಾಗಿ ಏನನ್ನಾದರೂ ಹೇಳುವುದು ಅವರ ಪದ್ಧತಿ. ಅವರು

ನಗುತ್ತಾ "ಶಾಸ್ತ್ರಿಗಳು ಅಂಥ ತಾಖತ್ ಆಹಾರವನ್ನು ತೆಗೆದುಕೊಳ್ಳುತ್ತಿದ್ದುದ ರಿಂದಲೇ ನೋಡು ಹಾಗೆ ಪಟ್ಟುಹಿಡಿದು ಕುಳಿತು ಆರಾರು ತಿಂಗಳಿಗೆ ಒಂದೊಂದ ರಂತೆ ಅಂತಹ ಸತ್ವಪೂರ್ಣ ಕೃತಿಗಳನ್ನು ಬರೆದು ಬಿಡುತ್ತಾರೆ" ಎಂದರು. ಒಂದು ಗಳಿಗೆ ಬಿಟ್ಟು "ಅಯ್ಯ ನಾವೂ ಹೋಗಿ ಆ ಹಲ್ವ ತಿಂದು ಬರಬೇಕಯ್ಯ" ಎಂದರು. ನಾನು "ಅದು ಹೋಟಲಲ್ಲಪ್ಪ; ಆ ರಾಮಾನುಜಾಚಾರಿ ನಮಗೆ ಮಾಡಿಕೊಡು ತ್ತಾನೆಯೆ?" ಎಂದೆ. ಅವರು "ಶಾಸ್ತ್ರಿಗಳನ್ನೇ ಕರೆದುಕೊಂಡು ಹೋಗೋಣ. ಅವರೇನು ನಿಮಗೆ ಕೊಡಿಸೋದಿಲ್ಲ ಎಂದು ಹೇಳುತ್ತಾರೆಯೆ" ಎಂದರು....ಇನ್ನೆಲ್ಲಿ ನಾವು ಆ ರಾಮಾನುಜಾಚಾರಿಯನ್ನು ಕಾಣುತ್ತೇವೆ. ಕಂಡರೆ ತಾನೇ ಅವನು ನಮಗೆ ಅಂತಹ ಹಲ್ವ ಮಾಡಿಕೊಡುವನೆ? ಮಾಡಿಕೊಟ್ಟರೆ ತಾನೇ, ಅವನು ಅವ್ವಲ್ ಲವಾಜಿಮೆಯನ್ನು ಬಿಟ್ಟು ದುಯ್ಯಂ ಲವಾಜಿಮೆಯನ್ನು ಹಾಕಿದರೆ ಅದನ್ನು ಕಂಡುಹಿಡಿಯುವ ನಿಷ್ಕೃಷ್ಟವಾದ ಶಾಸ್ತ್ರಿಗಳಿಗಿದ್ದ ಪರೀಕ್ಷಣಶಕ್ತಿ ನಮಗೆ ಉಂಟಾಗುವುದೆ?

ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಪಂಡಿತರೂ ವಿದ್ವಾಂಸರೂ ಆದರೂ ಸ್ವಭಾವ ದಿಂದ ರಸಜ್ಞರು, ಕವಿಹೃದಯವುಳ್ಳವರು. ಜ್ಞಾನಕ್ಕೆ ದೀರ್ಘಸಾಧನೆ ಆವಶ್ಯಕ ವೆಂಬುದನ್ನು ಅವರು ಒಪ್ಪಿದರೂ ಯಾವಾಗಲೂ ಜ್ಞಾನಕ್ಕಿಂತ ಕಾವ್ಯಹೃದಯಕ್ಕೇ ಹೆಚ್ಚು ಪ್ರಾಧಾನ್ಯತೆಯನ್ನು ಕೊಡುತ್ತಿದ್ದರು. ಧಾರ್ಮಿಕ ಕಥೆಯಾದ ಮಹಾಭಾರತ ದಲ್ಲಿ ಸಹ ಅವರು ಕಾವ್ಯಗುಣವನ್ನೇ ಹೆಚ್ಚಾಗಿ ಮೆಚ್ಚಿದರು. "ಕೃತಂ ಮಯೇದಂ ಭಗವನ್ ಕಾವ್ಯಂ ಪರಮ ಪೂಜಿತಂ" ಎಂದೇ ವ್ಯಾಸರು ಬ್ರಹ್ಮನಿಗೆ ಹೇಳಿದರಂತೆ. ಅದು ಕಾವ್ಯವೇ ಹೌದು. ಪರಮಪೂಜಿತವಾದ ಕಾವ್ಯವೆಂಬುದರಲ್ಲಿಯೂ ಸಂದೇಹವಿಲ್ಲ. ಏಕೆಂದರೆ ಆ ವಸ್ತುವೈಚಿತ್ರ್ಯ, ಪಾತ್ರವೈವಿಧ್ಯ, ಭಾವಸಂಪತ್ತು, ರಸಪ್ರವಾಹ, ಜೀವನವಿಮರ್ಶೆಗಳನ್ನು ಮುಂದಿನ ಸಾಹಿತ್ಯದಲ್ಲಿ ಎಲ್ಲಿ ತರೋಣ? ಅದರಲ್ಲಿ ಕವಿಸಮಯ, ಚಮತ್ಕಾರ, ಛಂದೋವೈಚಿತ್ರ್ಯ ಅಲಂಕಾರಾತಿಶಯ ಇವು ಇಲ್ಲ. ಇವು ಬಂದು ಈಚಿನ ಕಾವ್ಯ ಕೃತಕವಾಯಿತೇ ಹೊರತು ಜೀವಂತವಾಗ ಲಿಲ್ಲ. ಭಾರತದಲ್ಲಿ ಅಲಂಕಾರಗಳೂ ವರ್ಣನೆಗಳೂ ಹಿತವಾಗಿ ಮಿತವಾಗಿ ಸಂದರ್ಭೋಚಿತವಾಗಿ ಬರುತ್ತವೆ. ಬಾಣನು ವ್ಯಾಸರನ್ನು "ಕವಿಬ್ರಹ್ಮ" ನೆಂದು ಹೊಗಳಿದ್ದಾನೆ. ಸರಸ್ವತೀ ನದಿಯಿಂದ ಪವಿತ್ರವಾದ ಭರತಖಂಡವು ಬ್ರಹ್ಮನಿಂದ ಸೃಷ್ಟವಾದಂತೆ ಅವರ ವಾಕ್ಪ್ರವಾಹದಿಂದ ಪವಿತ್ರವಾದ ಭಾರತವು ರಚಿತವಾಯಿ ತೆಂದು ತನ್ನ ಭಕ್ತಿಗೌರವಗಳನ್ನು ಸೂಚಿಸಿದ್ದಾನೆ. ಕ್ಷೇಮೇಂದ್ರನು ಹಾಗೆಯೇ ಅವರನ್ನು ಕವಿಬ್ರಹ್ಮನೆಂದು ಕರೆದು ಪೀಯೂಷರಸಸಾರನೆಂದು ಹೊಗಳಿದ್ದಾನೆ. ಪ್ರಸಿದ್ಧ ಆಲಂಕಾರಿಕನಾದ ಆನಂದವರ್ಧನನು ಮಹಾಭಾರತವು ಶಾಸ್ತ್ರ-ಕಾವ್ಯ ಛಾಯೆಯುಳ್ಳ ಗ್ರಂಥವಾದರೂ ಸಾರವತ್ತಾದ ಅರ್ಥವುಳ್ಳ ಉತ್ತಮ ಧ್ವನಿಕಾವ್ಯ ವೆಂದೂ ಅದರಲ್ಲಿ ಶಾಂತರಸವು ವ್ಯಂಗ್ಯಮಾರ್ಗದಿಂದ ಬಹು ಚೆನ್ನಾಗಿ ಪ್ರತಿಪಾದಿತ

ವಾಗಿದೆಯೆಂದೂ ಶ್ಲಾಘಿಸಿದ್ದಾನೆ. "ಸಂಸ್ಕೃತ ನಾಟಕ" ದಲ್ಲಿ ಸಹ ಶಾಸ್ತ್ರಿಗಳು ನಾಟಕಗಳ ಕಾವ್ಯಅಂಶಗಳನ್ನು ಬಹು ಚೆನ್ನಾಗಿ ಎತ್ತಿತೋರಿಸಿದ್ದಾರೆ.

ಶಾಸ್ತ್ರಿಗಳ ವಿಚಾರಸರಣಿ, ಬರಿಯ ಗೊಡ್ಡುಆಚಾರವೂ ಸತ್ವಹೀನ ಮಾಮೂಲು ವಾಕ್ಸರಣಿಯೂ ಅಲ್ಲ. ಅದು ಪ್ರಾಚೀನಸತ್ವ ಮತ್ತು ಆಧುನಿಕ ವ್ಯವಹಾರಕತೆಯ ಮಧುರಮಿಲನ. ಆಧುನಿಕ ಪ್ರಪಂಚಕ್ಕೆ ಮಹಾಭಾರತದ ಸಂದೇಶವನ್ನು ಕುರಿತು ಶಾಸ್ತ್ರಿಗಳು ಹೀಗೆ ಹೇಳುತ್ತಾರೆ. "ಆಧುನಿಕ ಮಾನವನ ದೃಷ್ಟಿಯೇ ಬದಲಾಗಬೇಕು. ಸಂಪತ್ತಿನ ಉತ್ಪತ್ತಿ ವಿತರಣೆಯಲ್ಲಿ ಕೃತಕತೆಯೂ ಏರುಪೇರುಗಳೂ ಇರುವನಕ ಈ ವಿಷಮಸ್ಥಿತಿ ಹೋಗುವಂತೆ ಕಾಣುವುದಿಲ್ಲ. ವ್ಯಾಪಾರಬುದ್ಧಿ ಹೋಗಿ 'ಧರ್ಮ' ಬುದ್ಧಿ ಹೆಚ್ಚಾಗಬೇಕು. ಬರಿಯ ದಾನ ಸಾಲದು. ದಾನವನ್ನು ಪ್ರಧಾನವಾಗಿ ಬೋಧಿಸುವ ಕ್ರೈಸ್ತಮತವು, ಯುದ್ಧವನ್ನು ನಿವಾರಿಸಿಲ್ಲ. ಕ್ರೈಸ್ತಮತೀಯರೇ. ಎರಡುಕಡೆಯೂ ಸೇರಿ 'ನಾಗರಿಕತೆಯನ್ನು ಉಳಿಸಿ ಉದ್ಧಾರಮಾಡುವುದಕ್ಕೋಸ್ಕರ' ಎರಡು ಮಹಾಯುದ್ಧಗಳನ್ನು ನಡೆಸಿದರು. ಇನ್ನೊಂದು ಮಹತ್ತರವಾದ ಯುದ್ಧಕ್ಕೆ ಸಿದ್ಧಮಾಡಿಕೊಳ್ಳುತ್ತಿದ್ದಾರೆ. ದಾನ ಭಿಕ್ಷಗಳಿಂದ ಬಡತನ ಭಾಗ್ಯಗಳ ಏರುಪೇರುಗಳು ಹೋಗಿ ಈ ಸಮಸ್ಯೆ ಬಗೆಹರಿಯುವುದಿಲ್ಲ. ಈ ವಿಧವಾದ ಧಾರ್ಮಿಕ ಹೃದಯಪರಿವರ್ತನೆಯೇ, ಬುದ್ಧಿಭಾವಗಳೇ 'ಅರ್ಥಕಾಮಗಳು ಧರ್ಮಕ್ಕೆ ವಿರೋಧವಾಗಿರಬಾರದು. ಅದಕ್ಕೆ ಅನುಸಾರವಾಗಿರಬೇಕು' ಎಂದು ಮಹಾಭಾರತ ಹೇಳುವುದಕ್ಕೆ ಅರ್ಥ."

ಶಾಸ್ತ್ರಿಗಳ ದೃಷ್ಟಿ, ಬರಿಯ ಅಂಧಾನುಕರಣವಲ್ಲ; ವಿವೇಕಪೂರಿತವಾದ ಧರ್ಮಾಚರಣೆ. "ಈಗ ಯಜ್ಞಯಾಗಾದಿಗಳು ನಿಂತೇಹೋಗಿದೆಯೆಂದು ಹೇಳಬಹುದು. ಈಗ ಉಳಿದಿರುವ ವೈದಿಕಪೂಜೆಯೆಂದರೆ ಸಂಧ್ಯಾವಂದನೆ ಬ್ರಹ್ಮ ಯಜ್ಞ ಇವಿಷ್ಟೇ. ಇವೂ ಹೋಗುತ್ತಿವೆ. ಹೆಂಗಸರಲ್ಲಿ ಕೃಷ್ಣ, ಶಿವ, ರಾಮ, ಅವರ ನಾನಾ ರೂಪಗಳು, ಅವತಾರಗಳು ಇವರ ಪೂಜೆಗಳು, ಹಬ್ಬಗಳು, ಮನೆಯಲ್ಲಿಯೂ ದೇವಾಲಯದಲ್ಲಿಯೂ ನಡೆಯುವ ಮೂರ್ತಿಪೂಜೆ; ವರ್ಷದ ಉದ್ದಕ್ಕೂ ಬರುವ ಪುರಾಣೋಕ್ತವಾದ ನಾನಾವ್ರತಗಳು. ಕಾಶಿ ರಾಮೇಶ್ವರ ಮುಂತಾದ ಸ್ಥಳಗಳಿಗೆ ಯಾತ್ರೆ ಹೋಗುವುದೂ ಇಷ್ಟೇ ಮುಖ್ಯವಾಗಿದೆ. ಇದು ಹಿಂದಿನ ಕಾಲದಷ್ಟು ಕಷ್ಟವಾಗಿಲ್ಲ. ಇಂದು ಪ್ರಯಾಣಸೌಕರ್ಯಗಳು ಬೇಕಾದಷ್ಟಿವೆ. ಆದ್ದರಿಂದ ಹಣವಂತರಿಗೆ ಸುಲಭಸಾಧ್ಯ, ಸುಖಕರ, ಸಂತೋಷದಾಯಕ. ಆದರೆ ಈ ಜಾತ್ರೆಗಳಲ್ಲಿಯೂ ಮೇಳಗಳಲ್ಲಿಯೂ ಅಸಾಧ್ಯವಾದ ಜನಸಂದಣಿ ಸೇರಿ, ನಾನಾವಿಧವಾದ ಕಷ್ಟನಷ್ಟಗಳೂ ಅನಾಹುತಗಳೂ ಆಗುವುದುಂಟು. ನಿತ್ಯಗಟ್ಟಲೆಯಲ್ಲಿಯೂ ಈ ಕ್ಷೇತ್ರಗಳಲ್ಲಿ ಪುಂಡರ ಮತ್ತು ಪುರೋಹಿತರ ಹಿಂಸೆ, ಅನೇಕರನ್ನು ಬೇಸರಪಡಿಸುತ್ತದೆ. ಇದನ್ನೆಲ್ಲಾ ನೋಡಿದರೆ ನಾವು ನಮ್ಮ ಹೃದಯದಲ್ಲಿ ಸರಳವಾಗಿ ಸುಲಭಗಮ್ಯವಾಗಿ ಇರುವುದನ್ನು ಮರೆತು ಅದನ್ನು ಎಲ್ಲಿಯೋ ತೊಳಲುತ್ತ

ಹುಡುಕುವಂತೆ ಕಾಣುತ್ತದೆ. ಕಾಳನ್ನು ಬಿಟ್ಟು ಜಳ್ಳನ್ನು ಹಿಡಿಯುವಂತೆ ತೋರುತ್ತದೆ. ನಾವು ಆಂತರಿಕವಾದ ಸಾತ್ವಿಕ ತಪಸ್ಸನ್ನು ಬಿಟ್ಟು ಬಾಹ್ಯವಾದ ಉತ್ಸವಾಡಂಬರವನ್ನು ಮೆಚ್ಚುತ್ತಿದ್ದೇವೆ. ದೇವಾಲಯಗಳಿಗೆ ಹೋದರೆ ಅಲ್ಲಿ ನೋಡಿ ಬೆರಗಾಗುವುದೇನು? ಬೆಳ್ಳಿ ಬಂಗಾರ ದೀಪ ಅಲಂಕಾರ ಗದ್ದಲ ಗುಂಪು ಇಷ್ಟೆ! ಆದ್ದರಿಂದ "ದೇಹೋ ದೇವಾಲಯ ಪ್ರೋಕ್ತಃ ಜೀವೋ ದೇವಸ್ಸನಾತನಃ" ಎಂಬುದನ್ನು ಜ್ಞಾಪಕದಲ್ಲಿಟ್ಟುಕೊಂಡು, ದಯೆ ಕ್ಷಮೆ ಅನಸೂಚಿ ಶೌಚ ಮುಂತಾದ ಆತ್ಮಗುಣಗಳನ್ನು ಅಭಿವೃದ್ಧಿಪಡಿಸಿಕೊಂಡು ಹೋಗುವುದು ಮೇಲು. ದೇವರ ಹೆಸರು ಹೇಳಿ ಯಾರನ್ನು ಪೂಜಿಸಿದರೂ ಹೇಗೆ ಪೂಜಿಸಿದರೂ ಏತರಿಂದ ಪೂಜಿಸಿದರೂ ಅದು ದೇವರಿಗೇ ಸಲ್ಲುತ್ತದೆ ಎಂದು ಹೇಳುವುದು ನಮ್ಮ ದೇಶದಲ್ಲಿಯೇ. ಇದನ್ನು ಜ್ಞಾಪಕದಲ್ಲಿಟ್ಟುಕೊಂಡು ಪರಮತಸಹಿಷ್ಣುತೆಯನ್ನು ಸಾರ್ವತ್ರಿಕವಾಗಿ ಮಾಡಿಕೊಳ್ಳಬೇಕು. ಧರ್ಮಾಚರಣೆಯು ಇರುವುದು ಮುಖ್ಯವಾಗಿ ಆತ್ಮೋದ್ಧಾರಕ್ಕಾದುದರಿಂದ ಅದನ್ನು ಸಾರ್ವಜನಿಕವಾಗಿ ಮಾಡುವುದಕ್ಕಿಂತ ಸ್ವಂತವಾಗಿ ತನ್ನ ತನ್ನಮಟ್ಟಿಗೆ ಇಟ್ಟುಕೊಳ್ಳುವುದು ಮೇಲು. ಇಂದಿನ ಕಾಲಕ್ಕೆ ಅದೇ ಆವಶ್ಯಕ ಎಂದು ಬೇಕಾದರೂ ಹೇಳಬಹುದು . . . . ದೇವಾಲಯ ಹೋದರೂ, ಧರ್ಮಾಧಿಕಾರಿಗಳು ಗುರುಗಳು ಹೋದರೂ ಮನುಷ್ಯನು ಧರ್ಮಾಕಾಂಕ್ಷೆಯನ್ನು ದೈವಾವಲಂಬನವನ್ನೂ ಭಕ್ತಿಯನ್ನೂ ಸುಲಭವಾಗಿ ಬಿಡುವುದಿಲ್ಲ. ಸಂಕಟ ಬಂದಾಗಲಾದರೂ ವೆಂಕಟರಮಣ ಎನ್ನುತ್ತಾನೆ. ಅವನವನ ಸಾಮರ್ಥ್ಯ ಸಂಸ್ಕಾರಗಳಿಗನುಸಾರವಾಗಿ ಧರ್ಮಾನುಷ್ಠಾನ ಮಾಡಿಕೊಂಡು ಹೋಗುವುದು--ಪೂರ್ತಾ ಬಿಡುವುದಕ್ಕಿಂತ ಉತ್ತಮ. ಕೊನೆಗೆ ಉಳಿಯುವುದು ನಾಮರೂಪಗಳಿರುವ ಯಾವ ದೇವರೂ ಅಲ್ಲ, ಯಾವ ಪವಿತ್ರ ಗ್ರಂಥವೂ ಅಲ್ಲ, ಅವುಗಳಲ್ಲಿ ಅಡಗಿರುವ ತತ್ವ; ಆತ್ಮಗುಣ. ವಿಶ್ವಸಾಧಾರಣವಾದ ಒಂದು ಧರ್ಮ, ಯಾವುದಾದರೂ ಆಗುವುದಾದರೆ ಅದರಲ್ಲಿ ಆತ್ಮಗುಣಗಳೇ ಪ್ರಧಾನವಾಗಬೇಕು" ಇದೇ ಮಹಾಭಾರತದ ಬೋಧನೆ.

ತಪಸ್ಸು ಎಂದರೇನು ಎಂಬುದನ್ನು ಶಾಸ್ತ್ರಿಗಳು ಹೀಗೆ ವಿವರಿಸುತ್ತಾರೆ: "ತಪಸ್ಸಿಗೆ ಒಬ್ಬೊಬ್ಬರು ಒಂದೊಂದು ಅರ್ಥ ಹೇಳುತ್ತಾರೆ. ಆದರೆ ಅದಕ್ಕೆ ಮುಖ್ಯವಾಗಿ, ಶ್ರಮಪಡುವುದು ಸಾಧನೆ ಮಾಡುವುದು ಎಂದು ಅರ್ಥ. ವ್ಯರ್ಥವಾಗಿ ಕ್ಲೇಶ ಪಡುವುದಲ್ಲ, ಅದರ ತತ್ವವಿಷ್ಟು—ದೇಹವನ್ನು ಕೊಬ್ಬಿಸಬಾರದು. ಹಾಗಾದರೆ ಗೊಬ್ಬರ ಹೆಚ್ಚಾದ ಪೈರಿನಂತಾಗುತ್ತದೆ. ಅಂಥ ಪೈರಿನಲ್ಲಿ ಹೊರವಾಗಿ ಎಲೆಬಿಡುತ್ತದೆ. ಹೂವು ಹಣ್ಣು ಸೊನ್ನೆ. ಹೀಗೆಂದು ದೇಹವನ್ನು ಒಣಗಿಸಬಾರದು. ಏಕೆಂದರೆ ಒಣಗಿದ ಪಯರಿನಲ್ಲಿ ಹಣ್ಣಿರಲಿ, ಎಲೆಯೂ ಹೋಗಿಬಿಡುತ್ತದೆ. ದೇಹವು ಲಘುವಾಗಿ ಆರೋಗ್ಯವಾಗಿರುವುದರ ಜೊತೆಗೆ ಬುದ್ಧಿಯು ಹರಿತವಾಗಿರಬೇಕು. ಬುದ್ಧಿ ಮದಡಾದರೆ ಅದರ ಹಿಂದಿರುವ ಆತ್ಮದ ದರ್ಶನವು

ಮುಂಕಾಗುತ್ತದೆ. ಆದ್ದರಿಂದ ಸಂತತವಾದ ದೇಹಶ್ರಮ ಬುದ್ಧಿಶ್ರಮಗಳು ಆವಶ್ಯಕ, ಅದೇ ತಪಸ್ಸು. ಆದುದರಿಂದ ಆಹಾರ ವಿಹಾರ ನಿದ್ರೆ ಎಚ್ಚರ ಕಾರ್ಯ ವಿಶ್ರಾಂತಿ ಇವು ಯುಕ್ತವಾಗಿರಬೇಕು. ಅತಿಗೆ ಹೋಗಬಾರದು. ಸಾವಿತ್ರಿ, ಮಾಡಿದ ತಪಸ್ಸು ಇದೇಯೆ. ಜೊತೆಗೆ ಧ್ಯಾನ ಉಪವಾಸ ಮತ್ತು ಹಿರಿಯರ ಸೇವೆ."

ಧರ್ಮವೆಂದರೆ ಏನು? ಶಾಸ್ತ್ರಿಗಳು ಹೀಗೆ ವಿವರಿಸುತ್ತಾರೆ: "ಧರ್ಮದಿಂದ ಬರುವುದು ಶಾಂತಿ, ಅದು ಯಾವ ಪ್ರಯೋಜನವನ್ನೂ ಗುರಿಯಾಗಿಟ್ಟುಕೊಂಡು ಮಾಡತಕ್ಕದ್ದಲ್ಲ. ಧರ್ಮವನ್ನು ಹಾಲು ಕರೆದುಕೊಳ್ಳುವುದಕ್ಕಾಗಿ ಸಾಕುವ ಹಸುವಿನಂತೆ ಭಾವಿಸಬಾರದು. ಆದರೆ ಸಾಮಾನ್ಯವಾಗಿ ನಾವು ಧರ್ಮದಲ್ಲಿದ್ದರೆ ಸುಖ ಲಭಿಸುತ್ತದೆ ಎಂಬ ಭಾವನೆಯಿದೆ. ದ್ರೌಪದಿಯು 'ಧರ್ಮ ಅಹಿಂಸೆ ಕ್ಷಮೆ ಋಜುತ್ವ ದಯೆ ಇವುಗಳಿಂದ ಮನುಷ್ಯನಿಗೆ ಎಂದೂ ಸಿರಿಬರುವುದಿಲ್ಲ' ಎಂದು ಗೊಣಗುತ್ತಾಳೆ. 'ಕೇವಲ ಧರ್ಮಾತ್ಮನಾದವನು ಎಂದೂ ರಾಜ್ಯವನ್ನಾಗಲೀ ಸಿರಿಯನ್ನಾಗಲೀ ಸಂಪತ್ತನ್ನಾಗಲೀ ಪಡೆದಿಲ್ಲ. ಲಾಭವಿಲ್ಲದ ವ್ಯಾಪಾರದಲ್ಲಿ ಯಾರು ತೊಡಗುತ್ತಾರೆ? ಅಂಥ ವ್ಯಾಪಾರ ಕತ್ತೆಯ ಮೈಯನ್ನು ತುರಿಸಿದಂತೆ!' ಎಂದು ಭೀಮನು ಆಕ್ಷೇಪಿಸುತ್ತಾನೆ.

"ಅಹಿಂಸೆ ಎಂದರೆ ಏನು. ಅದು ನಿರ್ವೀರ್ಯತೆ ಅಲ್ಲ. ಹಿಂಸೆ ಮಾಡದೆ ಇದ್ದರೇ ಸಾಲದು ಜೊತೆಗೆ ದಯೆಯನ್ನೂ ತೋರಬೇಕು. ಅದೇ ಮೊದಲನೆಯ ಆತ್ಮ ಗುಣ. ಆದರೆ ಮಹಾಭಾರತವು ಯುದ್ಧದ ಕಥೆ, ಯುದ್ಧವೆಂದರೆ ಕೊಲೆ. ಹದಿನೆಂಟು ದಿನದಲ್ಲಿ ಅಕ್ಷೋಹಿಣೀ ಸೇನೆ ಹೆಸರಿಲ್ಲದಂತೆ ನಾಶವಾಯಿತು. ರಕ್ತದ ಹೊಳೆ ಹರಿಯಿತು. ಅರ್ಜುನನು ಯುದ್ಧಮಾಡುವುದಿಲ್ಲವೆಂದರೂ ಕೃಷ್ಣನು "ಈ ನಿನ್ನ ಯತ್ನ ವ್ಯರ್ಥ. ಪ್ರಕೃತಿಯು ನಿನ್ನ ಕೈಯಿಂದ ಯುದ್ಧಮಾಡಿಸಿಯೇ ಮಾಡಿಸುತ್ತದೆ. ಯುದ್ಧಮಾಡದಿದ್ದರೆ ನಿನಗೆ ಕೆಟ್ಟಹೆಸರು ಬರುತ್ತೆ, ಪಾಪ ಬರುತ್ತದೆ" ಎಂದು ಬಗೆಬಗೆಯಾಗಿ ವಾದಿಸಿ ಅವನನ್ನು ಯುದ್ಧಕ್ಕೆ ಚೋದಿಸಿದನು; ಒಡಂಬಡಿಸಿದನು. ಧರ್ಮರಾಜನಂಥವನೂ ಯುದ್ಧಮಾಡಿದನು. ಕೊಲ್ಲುವಷ್ಟು ಜನರನ್ನು ಕೊಂದನು. ಅದಕ್ಕಾಗಿ ಅವರಿಗೆ ಬಂದುದು ವೀರಸ್ವರ್ಗ.

"ಅಹಿಂಸೆಯೆಂಬುದು ಅಪರಂಜಿಯ ಹಾಗೆ. ಶುದ್ಧ ಅಪರಂಜಿ ನಾಣ್ಯವಾಗುವುದಿಲ್ಲ ವ್ಯವಹಾರಕ್ಕೆ ಸಲ್ಲುವುದಿಲ್ಲ ಅದಕ್ಕೆ ಸ್ವಲ್ಪವಾದರೂ ಪೆಡಸಾದ ಕೆಚ್ಚನೆಯ ತಾಮ್ರ ಬೆರೆಯಬೇಕು. ಹಾಗೆಯೇ ರಾಜನಲ್ಲಿ ಸ್ವಲ್ಪ ಕಾಠಿಣ್ಯಬೇಕು. ರಾಜ ದಂಡವೇ ಧರ್ಮಾರ್ಥಗಳನ್ನೂ ಧನಧಾನ್ಯಗಳನ್ನೂ ರಕ್ಷಿಸತಕ್ಕದ್ದು. ದಂಡು, ಹೆದರಿಕೆಯಿಂದಲೇ ಜನರು ತೆಪ್ಪಗಿರುತ್ತಾರೆ. ದುಷ್ಟನಿಗ್ರಹಕ್ಕೆ ಕ್ರೌರ್ಯವೂ ಬೇಕದ ಹಿಂಸೆಯೂ ಬೇಕು. ಆ ಹಿಂಸೆ ಹಿಂಸೆಯಲ್ಲ, ಧರ್ಮ. ರಾಮರಾಜ್ಯದಲ್ಲಿಯೂ ರಾಕ್ಷಸಸಂಹಾರವಾಗಿಯೇ ಆಯಿತು. ಹಿಂಸಾಕಾರ್ಯಕ್ಕಿಂತಲೂ ಅದರ ಹಿಂದೆ

ಇರುವ ಉದ್ದೇಶವೇ ಪ್ರಧಾನ, ಅಹಿಂಸೆಯೆಂದರೆ ಕ್ರೌರ್ಯವಿಲ್ಲದಿರುವುದು ; ನಿಸ್ತೇಜತೆಯಲ್ಲ ತಮೋಗುಣವಲ್ಲ. ಎಷ್ಟಾದರೂ ತಗ್ಗಿಬಗ್ಗಿ ನಡೆಯುವುದಲ್ಲ, ತಗ್ಗುತ್ತ ಹೋದರೆ ನೆಲದೊಳಗೆ ಐಕ್ಯವಾಗುವುದೇ ಗತಿ ಕೈಲಾಗದ ಬಡಪಾಯಿಗೆ ಕೊನೆಗೆ ಆಗುವುದು ಅದೇಯೆ. ಕೈಯಲ್ಲಿ ಬಲವಿದ್ದು ತಾನೂ ಬದುಕಬೇಕೆಂಬ ಆಸೆಯುಳ್ಳವನು ಹೋರಾಡಿಯೇ ಹೋರಾಡುತ್ತಾನೆ. ಏಕೆಂದರೆ ಮನುಷ್ಯನು ಹಾತೊರೆಯುವುದು ಸುಖಕ್ಕೆ, ಸಾವಿಗಲ್ಲ. ದುಷ್ಟನಿಗೆ ಬಗ್ಗಿದರೆ ಅವನು ಸಮುದ್ರದ ಮುದುಕನಂತೆ ಕತ್ತು ಮಿಸುಕಿ ಕೊನೆಗೆ ಜೀವವನ್ನೇ ಹೀರುತ್ತಾನೆ. ಆಸೆಕೋರನಿಗೆ ಬಿಟ್ಟುಕೊಟ್ಟಷ್ಟೂ ಅವನ ಕೈಬಾಯಿಗಳು ದೊಡ್ಡವಾಗುತ್ತ ಹೋಗುತ್ತವೆ. ಎಂತಹ ಸಜ್ಜನನಾದರೂ ಅವನ ತಾಳ್ಮೆಗೂ ಅಹಿಂಸೆಗೂ ಒಂದು ಮಿತಿ ಇರುತ್ತದೆ. ಆದ್ದರಿಂದ ಹಿಂಸೆ ಆವಶ್ಯಕವಾಗುತ್ತದೆ.”

ದ್ರೌಪದಿಯ ಸ್ವಭಾವವನ್ನು ಶಾಸ್ತ್ರಿಗಳು ಹೀಗೆ ಚಿತ್ರಿಸಿದ್ದಾರೆ. “ ಪಾಂಡವರ ಜೊತೆಗೆ ಹೆಂಗಸರಲ್ಲಿ ದ್ರೌಪದಿಯೊಬ್ಬಳು ಸ್ವರ್ಗಕ್ಕೆ ಹೋದಳೆಂದು ತೋರುತ್ತದೆ. ಅವಳು ಯುದ್ಧದಲ್ಲಿ ಕಾದದೆ ಇದ್ದರೂ ಕಾದಿದವರನ್ನು ಉಸಿರಾಡುವುದಕ್ಕೆ ಅವಕಾಶವಿಲ್ಲದಂತೆ ಪ್ರೇರಿಸಿದವಳು, ಮೂದಲಿಸಿದವಳು, ಹಠಮಾಡಿದವಳು. ಅವಳು ಪಟ್ಟ ಕಷ್ಟನಿಷ್ಠುರಗಳೂ ಹಾಗೆಯೇ ಇದ್ದುವೆನ್ನೋಣ. ಕುಂತಿ ಕಷ್ಟಪಡಲಿಲ್ಲವೆ? ಅಂಬೆ ಅಂಬಿಕೆ ಅಂಬಾಲಿಕೆ ಕಷ್ಟಪಡಲಿಲ್ಲವೆ? ಆದರೆ ಅವರದು ಯಾರದ್ದೂ ಅಷ್ಟು ಆರ್ಭಟವಿಲ್ಲ. ಅವರು ಯಾರೂ ಅಷ್ಟು ರಾಜಸರಲ್ಲ. ‘ ಮಹಾಭಾರತದಲ್ಲಿ ಯಾರಾದರೂ ಗಂಡಸಿದ್ದರೆ ಅದು ದ್ರೌಪದಿ ! ’ ಎಂದು ಯಾರೋ ಒಬ್ಬರು ಹೇಳಿದ್ದಾರೆ. ಆದ್ದರಿಂದ ಅವಳು ಕಾದಿ ಮಡಿಯದೆ ಇದ್ದರೂ ಗಂಡಂದಿರ ಜೊತೆಯಲ್ಲಿ ವೀರಸ್ವರ್ಗವನ್ನು ಅನುಭವಿಸಿದಳೆಂದು ತೋರುತ್ತದೆ. ಮಿಕ್ಕ ಹೆಂಗಸರಿಗೆ ಬೆಂಕಿ, ಇಲ್ಲ ಕಾಡು ಇವೇ ಕೊನೆ.”

ನಡೆನುಡಿಯಂತೆ ಶೈಲಿಯಲ್ಲಿಯೂ ಗಾಂಭೀರ್ಯವಿರಬೇಕು. ಮನುಷ್ಯನ ವಸ್ತ್ರಭೂಷಣಗಳಂತೆ ಅವನ ಶೈಲಿಯಲ್ಲಿಯೂ ಅಚ್ಚುಕಟ್ಟು ಇರಬೇಕು. ಅಶ್ಲೀಲವಾದ ಶೈಲಿಯನ್ನು ಶಾಸ್ತ್ರಿಗಳು ಸರ್ವಥಾ ಒಪ್ಪುವುದಿಲ್ಲ. ಅವರೇ ಒಂದೆಡೆ “ ವಾಸ್ತವಾಂಶಗಳನ್ನು ಚಿತ್ರಿಸಬೇಕೆಂದು ನಡುಬೀದಿಯಲ್ಲಿ ಮಂಚವನ್ನು ಹಾಕಿಕೊಳ್ಳುವುದಕ್ಕಾಗುತ್ತದೆಯೇ ? ” ಎನ್ನುತ್ತಾರೆ. ಉದಾಹರಣೆಗಾಗಿ ಸಹ “ ಮಂಚವನ್ನು ಹಾಕಿಕೊಳ್ಳುವುದು ” ಎಂಬುದಕ್ಕಿಂತ ಬೇರೆ ಮಾತನ್ನು ಉಪಯೋಗಿಸಲು ಅವರಿಗೆ ಸಾಧ್ಯವಾಗಲಿಲ್ಲ. ಮತ್ತೊಂದು ಸಂದರ್ಭದಲ್ಲಿ “ ಕಲಿಸದೆ ಮೃಗಪಕ್ಷಿಗಳಿಗೆಲ್ಲ ಬರುವ ವಿದ್ಯವನ್ನು ಸಿಟಿಬಸ್‌ನಲ್ಲಿ ಪಾಠ ಹೇಳಿಕೊಡಬೇಕಾಗಿಲ್ಲ ” ಎಂದರು. ಅವರು ಒಂದೆಡೆ ಹೀಗೆ ಹೇಳುತ್ತಾರೆ. “ ವಿದ್ಯಾವಂತರಾಗಿ ವಿವೇಕ ಉಳ್ಳವರಾದರೆ ಎಂಥ ಗ್ರಂಥಗಳನ್ನು ಓದಿದರೂ ನಮ್ಮ ಬುದ್ಧಿ ನಮ್ಮ ಕೈಯಲ್ಲಿರುತ್ತದೆ; ಕೋಳಿಕು ಎಂದಿಗೂ ಬೆಳಕಾಗುವುದಿಲ್ಲ. ಹಂದಿಯನ್ನು ಹಸುವಿನಂತೆ ಯಾರು ಮನ್ನಿಸು

ತ್ತಾರೆ? ಹೊಲಸಿನಿಂದ ಅಸಹ್ಯವೇ. ಅನಿವಾರ್ಯವಾಗಿ ಅಭ್ಯಾಸವಾಗಿ ಅದನ್ನು ಮುಟ್ಟಿದರೂ ಸುಸಂಸ್ಕಾರವಿದ್ದರೆ ಜಯವು ಶುಚಿಗೇ ಹೊರತು ಅಶುಚಿಗಲ್ಲ. ಅಸಹ್ಯವೂ ಅಶ್ಲೀಲವೂ ಹಳೆಯ ಕಾವ್ಯಗಳಲ್ಲಿ ಇಲ್ಲವೆಂದಲ್ಲ. ಹಳೆಯ ಸಾಹಿತ್ಯದಲ್ಲಿಯೂ ಇದೆ. ಸಂಸ್ಕೃತದಲ್ಲಿದೆ ಕನ್ನಡದಲ್ಲಿದೆ. ಕಾಳಿದಾಸನಂಥವನೂ ಕುಮಾರಸಂಭವದ ಉತ್ತರಾರ್ಧದಲ್ಲಿ ವರ್ಣಿಸಿರುವ ಪಾರ್ವತೀಪರಮೇಶ್ವರರ ಸಂಭೋಗವು ಉಚಿತವೆ? ಅದನ್ನು ಅವನೇ ಬರೆದಿರಬಹುದೆ ಎಂಬ ಚರ್ಚೆ ಸುವಿದಿತವಾಗಿದೆ. ಇಂಥ ವಸ್ತುವಿನ ವಿವರ ವರ್ಣನೆಯಿಂದ ಬರೆಯುವವರಿಗೂ ಓದುವವರಿಗೂ ಒಂದು ವಿಧವಾದ ಚಾಪಲ್ಯತೃಪ್ತಿ, ಅದರಲ್ಲಿಯೂ ಭೋಗಸಾಮಗ್ರಿಗಳನ್ನು ಕಾಣದವರಿಗೆ."

ಶಾಸ್ತ್ರಿಗಳ ಇಂತಹ ವಾಕ್‌ಸರಣಿಯನ್ನು ಕೇಳಿ ಒಬ್ಬ ಮಿತ್ರರು. ಶಾಸ್ತ್ರಿಗಳನ್ನು "ನಿಮ್ಮದು ಗೊಡ್ಡಾಚಾರ" ಎಂದಾಗ ಶಾಸ್ತ್ರಿಗಳು ಹೀಗೆ ಉತ್ತರವಿತ್ತರು: "ನನ್ನ ಕಾವ್ಯಪಾಠಗಳನ್ನು ಕೇಳಿದ ತರುಣ ವಿದ್ಯಾರ್ಥಿಗಳಾರೂ ನನ್ನನ್ನು ಗೊಡ್ಡಾಚಾರದವನೆಂದಿಲ್ಲ. ವಿಲಾಸಿಗಳ ಕಣ್ಣಿಗೆ ನಾನು ಗೊಡ್ಡಾಗಿ ಕಾಣಬಹುದು. ವೈದಿಕ ಗೊಡ್ಡಿನಿಂದ ಸಮಾಜಕ್ಕೆ ಬಾಧಕವಿಲ್ಲ. ವಿಲಾಸಿಗಿಂತ ಕ್ಷೇಮ ಹೆಚ್ಚು. ವಿಷಯಾಭಿಲಾಷೆ ವಿಲಾಸಗಳು ತಾವಾಗಿ ಬರುತ್ತವೆ. ಅವನ್ನು ಕಾಲೇಜುಗಳಲ್ಲಿ ಕಲಿಸಿಕೊಡಬೇಕಾಗಿಲ್ಲ. ನಾನು ಧರ್ಮಶಾಸ್ತ್ರವನ್ನು ಶ್ರೀಮದ್ಗಂಭೀರವಾಗಿ ಪಾಠ ಹೇಳಿಕೊಡುವ ಉಪಾಧ್ಯಾಯ ಮಾತ್ರನೆಂದು ತಾವು ಭಾವಿಸಿಕೊಂಡಿರಬಹುದು. ಮಹಾರಾಜಾ ಕಾಲೇಜಿನ ವ್ಯಾಯಾಮಶಾಲೆಯ ಕಾರ್ಯದರ್ಶಿಯೆಂದೂ ಅಲ್ಲಿ ಯುವಕರ ಜೊತೆಗೂ ಕೈಲೂರಿ ಗರಡಿಯಲ್ಲಿ ಸಾಧನೆ ಮಾಡುತ್ತೇನೆಂದೂ ಅವರನ್ನು ವ್ಯಾಯಾಮದಲ್ಲಿ ತಿದ್ದಿ ಸ್ಪರ್ಧೆ ನಡೆಸಿ ಪರೀಕ್ಷಕನಾಗಿ ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದೇನೆಂದೂ ತಮಗೆ ತಿಳಿಯದು. ನಮ್ಮ ನಾಡಿನ ಪ್ರಾಯದ ಹುಡುಗರು ವ್ಯಾಸಂಗವನ್ನು ಅಲಕ್ಷಿಸಿ ರಾತ್ರಿ ಎಂಟು ಘಂಟೆಯವರೆಗೂ ಕಟ್ಟಡದ ಒಳಗೆ ದೀಪಹಚ್ಚಿಕೊಂಡು ಕುಳಿತು ದಚ್ಚಿಬಾರ ಬೆರಳುಬಿಲ್ಲೆಗಳನ್ನು ಆಡಿ ಕ್ರೀಡಾಸಮರ್ಥರಾಗಬೇಕೆ? ಬಯಲಿನಲ್ಲಿ ಆಡಿ ಅಖಾಡದಲ್ಲಿ ಕುಸ್ತಿಮಾಡಿ ಪೌರುಷಗಳಿಸಬೇಕೆ? ಈ ನನ್ನ ಮನೋವೃತ್ತಿಯನ್ನು ತಾವು Puritanism ಎನ್ನುವುದಾದರೆ (ಅದು ವ್ಯಂಗ್ಯವಾಗಲೀ ವಾಚ್ಯವಾಗಲೀ) ನನಗೆ ಸಂತೋಷವೇಯೆ."

ಶಾಸ್ತ್ರಿಗಳು ಕನ್ನಡದ ಉತ್ಕಟ ಅಭಿಮಾನಿಗಳು. ಕನ್ನಡ ಶಿಕ್ಷಣ ಮಾಧ್ಯಮ ಆಗಬೇಕು, ಆಡಳಿತ ಭಾಷೆಯಾಗಬೇಕು ಎಂದು ಅವರು ಉಪಾಧ್ಯಾಯರಾದಂದಿನಿಂದ ಹೇಳುತ್ತಲೇ ಬಂದಿದ್ದಾರೆ. ಅವರು ಮಾಡಿದ ಸಾಹಿತ್ಯಸೇವೆ ಚಟುವಟಿಕೆ ಎಲ್ಲದರ ಮೂಲದಲ್ಲಿದ್ದ ಗುರಿಯೂ ಅದೇಯೆ. ಆಂಗ್ಲೇಯರ ಆಳ್ವಿಕೆ ಇಲ್ಲಿ ಪ್ರಬಲವಾಗಿದ್ದ ಅಂದಿನ ಕಾಲದಿಂದಲೇ ಅವರು ಈ ವಾದವನ್ನು ನಿರ್ಭೀತಿಯಿಂದ ಘೋಷಿಸಿದ್ದಾರೆ. ಈ ವಿಷಯದಲ್ಲಿ ಅವರು ಯಾವ ದಾಕ್ಷಿಣ್ಯಕ್ಕೂ ಒಳಗಾಗಲಿಲ್ಲ. ಯಾರ ಅಸಮಧಾನವನ್ನೂ ಲಕ್ಷಿಸಲಿಲ್ಲ. ಖಂಡಿತವಾದಿಗಳಾದು

ದರಿಂದ ಅವರು, ಕನ್ನಡದಲ್ಲಿ ಪಾಠಗಳನ್ನು ನಡೆಸುವುದಕ್ಕೆ ಅಡಚಣೆಗಳಿವೆ ಎಂದವರನ್ನು "ವಿರೋಧಿಗಳು ಎದುರು ಪಕ್ಷದವರು" ಎಂದೇ ಸಂಬೋಧಿಸಿ ಬಿಟ್ಟರು. "ಕನ್ನಡ ದೇಶದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡದೆಹೋದರೆ ಮೆಕ್ಸಿಕೋ ದೇಶದವರೋ ನ್ಯೂಜಿಲ್ಯಾಂಡ್ ದೇಶದವರೋ ಕೊಡುತ್ತಾರೆಯೆ?.... ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಓದನ್ನು ನಿರ್ಬಂಧವಾಗಿ ಇರಿಸುತ್ತೇವೆಂದೂ ಅದು ಮೈಸೂರಿನ ಅಸಾಧಾರಣ ಧರ್ಮವೆಂದೂ ಹೇಳಿಕೊಂಡು ಹೋಂಟದ್ದೇನು? ಪರಿಣಾಮದಲ್ಲಿ ಆಗಿರುವುದೇನು? ಪಂಚ ಪಾಂಡವರು ಮಂಚದ ಕಾಲಿನ ಹಾಗೆ ಮೂರು ಜನ ಎಂದು ಹೇಳಿ ಎರಡು ತೋರಿಸಿ ಒಂದನ್ನು ಅದು ಒಂದೂ ಅಲ್ಲ ಸೊನ್ನೆಯೂ ಅಲ್ಲ–ಹಾಗೆ ಬರೆಯುವಂತೆ ಆಗಿದೆಯೆಲ್ಲ. ಭಾಷಾ ವ್ಯವಸ್ಥೆಯನ್ನು ಅನುಸರಿಸಿ ಹೊಸ ಹೊಸ ವಿದ್ಯಾಪೀಠಗಳು ಹುಟ್ಟುತ್ತಿರುವಾಗ ನಮ್ಮ ವಿಶ್ವವಿದ್ಯಾ ಲಯದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡದಿದ್ದರೆ ಅಸ್ವಾಭಾವಿಕವೂ ದೇಶಕಾಲ ವಿರುದ್ಧವೂ ಆಗುತ್ತದೆ." ನಮ್ಮ ನಾಡಿನ ಭಾಷಾ ಪ್ರಶ್ನೆಗೆ ಪರಿಹಾರಮಾರ್ಗ ವನ್ನು ಶಾಸ್ತ್ರಿಗಳು ಸೂಚಿಸುತ್ತಲೇ ಬಂದಿದ್ದಾರೆ. ಅವರ ಕನ್ನಡ ಭಾಷಾಭಿಮಾನ ಎಷ್ಟಿದ್ದಿತೆಂದರೆ ಬೆಳಗಾಂ ಕಾಂಗ್ರೆಸ್‌ನಲ್ಲಿ ದೇಶಭಕ್ತ ಗಂಗಾಧರರಾಯರು (ತಪ್ಪು ತಪ್ಪಾದ ಕನ್ನಡದಲ್ಲಿ) ಸ್ವಾಗತ ಭಾಷಣ ಮಾಡಿದಾಗ, ಶಾಸ್ತ್ರಿಗಳು "ಇದು ಕನ್ನಡ ಭಾಷೆಗೆ ಇಟ್ಟ ಕಿರೀಟವೆಂದು" ಆನಂದಿತರಾದರು. ಕನ್ನಡ ನಾಡೆಂದರೆ ಶಾಸ್ತ್ರಿಗಳಿಗೆ ಮೈನವಿರೇಳುವುದು. "ಕನ್ನಡ ನಾಡು ಮಿಕ್ಕ ಪ್ರಾಂತ್ಯಗಳಿಗಿಂತ ಎಂದೂ ಯಾವುದರಲ್ಲಿಯೂ ಹಿಂದೆ ಬಿದ್ದಿರಲಿಲ್ಲ. ಈಗ ವಿದ್ಯೆಯಲ್ಲಿ ಜ್ಞಾನದಲ್ಲಿ ಹಿಂದೆ ಬೀಳುತ್ತದೆಯೇ. ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯಾ ದೇಶದ ದಕ್ಷಿಣ ಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ನೀವು ಅದನ್ನು ಅಲಕ್ಷ್ಯ ಮಾಡಿದರೆ ಮಿಕ್ಕ ಯಾವ ದೇಶದ ಜನರೂ ಅದನ್ನು ಎತ್ತಿಹಿಡಿಯಲಾರರು. ಅದು ಹೋದರೆ ಹೋಗಲಿ ಎನ್ನುವ ಹಾಗಿದ್ದರೆ, ಈ ಕಡೆ ಬಂಗಾಳಾಕೊಲ್ಲಿ, ಆ ಕಡೆ ಅರಬ್ಬಿ ಸಮುದ್ರ ಇದೆ. ಗುಡಿಸಿ ಹಾಕಿಬಿಡಿ. ಇತರ ಭಾಷೆಗಳು ಒತ್ತಿಕೊಂಡು ಬರಲಿ."

ಇಂದಿನ ಭಾಷಾ ಸಮಸ್ಯೆಗೆ, ಶಾಸ್ತ್ರಿಗಳು ತಮ್ಮ, ಪರಿಹಾರ ಮಾರ್ಗವನ್ನು ೨೫ ವರುಷಗಳ ಹಿಂದೆಯೇ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಸೂಚಿಸಿದ್ದಾರೆ. "ಕನ್ನಡಿಗರಿಗೆ ಕನ್ನಡದಿಂದಲೇ ಭುಕ್ತಿ, ಕನ್ನಡದಿಂದಲೇ ಮುಕ್ತಿ. ತೈಲಧಾರೆ ಯಂತೆ ಕನ್ನಡದಲ್ಲಿ ಮನವಕೊಡು ಇಂಗ್ಲಿಷ್, ಸಂಸ್ಕೃತಾ ಎಂದು ಪ್ರಾರ್ಥಿಸ ಬೇಕು. ಕನ್ನಡವನ್ನು ಉಳಿಸಿಕೊಳ್ಳಿ ಎಂದು ಕನ್ನಡಿಗರಿಗೂ ಉಳಿಸಿಕೊಡಿ ಎಂದು ಇತರರಿಗೂ ಪ್ರಾರ್ಥನೆ ಮಾಡಬೇಕಾಗಿದೆ." ತಮಗೆ ಡಾಕ್ಟರೇಟ್ ಪದವಿ ಬಂದಾಗ ಶ್ರೀಮಾನ್ ಶಾಸ್ತ್ರಿಗಳು, ತಾವು ಸೇವೆ ಮಾಡಿದ ಮೈಸೂರು ವಿಶ್ವವಿದ್ಯಾ ಲಯದಿಂದ ಈ ಗೌರವ ದೊರೆಯಿತಲ್ಲ ಎಂದು ಸಂತೋಷಪಟ್ಟರು. ಕನ್ನಡದಲ್ಲಿ

ಭಾಷಣ ಮಾಡಿದರು. "ಇತರ ಭಾಷೆಗಳು ಬೇಡವೆಂದು ನಾನು ಹೇಳುವುದಿಲ್ಲ. ಭಾಷಾ ಸಾಹಿತ್ಯಗಳ ವಿದ್ಯಾರ್ಥಿಗಳಿಗೆ ಎಷ್ಟು ಭಾಷೆಗಳು ಬಂದರೂ ಬೇಕು. ಅದರಲ್ಲಿಯೂ ಸಂಸ್ಕೃತದಂತಹ ಭಾಷೆ ಅಗತ್ಯವಾಗಿ ಬೇಕು. ತುಂಬಾ ಬೇಕು. ಚೆನ್ನಾಗಿ ಬರಬೇಕು....ಹಿಂದಿಯ ಮೇಲೆ ನನಗೇನು ನಿಷ್ಕಾರಣ ದ್ವೇಷವಿಲ್ಲ. ಇಂಡಿಯಾ ದೇಶದಲ್ಲಿರುವ ೨೫೦ ಭಾಷೆಗಳಲ್ಲಿ ೨೪೯ರ ಮೇಲೆ ದ್ವೇಷವಿಲ್ಲ, ಅದರ ಮೇಲೇಕೆ?"

ಹೀಗೆ ಉದ್ದಾಮ ಪಂಡಿತರೂ ದಕ್ಷ ಉಪಾಧ್ಯಾಯರೂ ಶಿಷ್ಯವತ್ಸಲರೂ ಎಲ್ಲ ಸತ್ಕಾರ್ಯಗಳ ಪ್ರೋತ್ಸಾಹಕರೂ ಕನ್ನಡದ ಅವಿಶ್ರಾಂತ ಸೇವಕರೂ ಆದ ಶ್ರೀಮಾನ್ ಕೃಷ್ಣಶಾಸ್ತ್ರಿಗಳ ಸ್ಫೂರ್ತಿ ಮತ್ತು ಆದರ್ಶಗಳನ್ನು ಈ ಮುಂದಲ ಮಾರ್ಗದಲ್ಲಿ ನಾವು ಅನುಷ್ಠಾನಕ್ಕೆ ತರುವುದು ಅವರಿಗೆ ನಮ್ಮ ನಿಜವಾದ ಶ್ರದ್ಧಾಂಜಲಿಯಾಗುತ್ತದೆ: (೧) ಅವರು ಸ್ಥಾಪಿಸಿದ ಪ್ರಬುದ್ಧ ಕರ್ಣಾಟಕ ಪತ್ರಿಕೆಯನ್ನು ಇನ್ನೂ ಹೆಚ್ಚು ಉತ್ತಮವಾಗಿ ಪುಷ್ಟವಾಗಿ ಬೆಳೆಸುವುದು (೨) ವಿದ್ಯಾರ್ಥಿಗಳೆಲ್ಲ ಅದರ ಚಂದಾದಾರರಾಗುವುದು (೩) ವಿದ್ಯಾರ್ಥಿಗಳೂ ಉಪಾಧ್ಯಾಯರೂ ತಾವು ಆರಿಸಿಕೊಂಡ ವಿಷಯಗಳಲ್ಲಿ ಸಪ್ರಮಾಣವಾದ ಲೇಖನಗಳನ್ನು ಅದಕ್ಕಾಗಿ ಬರೆಯುವುದು (೪) ಕನ್ನಡಿಗರು ಕನ್ನಡಕ್ಕಾಗಿ ವೀರದೀಕ್ಷೆ ವಹಿಸುವುದು.

ಶ್ರೀಮಾನ್ ಶಾಸ್ತ್ರಿಗಳ ಈ ಉಪದೇಶ ನಮಗೆ ಮಾರ್ಗದರ್ಶಕವಾಗಲಿ.*

---

* ಈ ಲೇಖನದಲ್ಲಿ ನನ್ನ ವಿಷಯ ಬಂದಿರುವುದು ನನ್ನ ಪ್ರಶಸ್ತಿಗಾಗಿ ಅಲ್ಲ. ಶ್ರೀಮಾನ್ ಶಾಸ್ತ್ರಿಗಳ ಯೋಗ್ಯತೆ, ಗುಣೋತ್ಕರ್ಷಗಳನ್ನು ನಿರೂಪಿಸಲು, ಉದಾಹರಣೆಯಾಗಿ ಅನನ್ನು ಕೊಟ್ಟಿದೆ.

# ಶಾಸ್ತ್ರಿಗಳ ಉಪಮಾನಗಳು

....ಶ್ರೀ ಕೃಷ್ಣಶಾಸ್ತ್ರಿಗಳ ಪಾಠವೆಂದರೆ ಅದೊಂದು ರೀತಿಯ ಸೊಗಸು. ಆಗ ಅವರು ಕೊಡುವ ದೃಷ್ಟಾಂತಗಳು ಅವರು ಕಂಡ ಜೀವನದ ದೃಷ್ಟಿಯನ್ನು ಸೂಚಿಸುತ್ತಿದ್ದವು. ಅವರ ಉಪಮಾನಗಳು ಪೂರ್ವಕವಿ ಪ್ರಯೋಗಗಳಲ್ಲ; ಸಂಪ್ರದಾಯದ ಕವಿ ಸಮಯಗಳಲ್ಲ; ಅವರು ಕಂಡು ಅನುಭವಿಸಿದ ಸತ್ಯಗಳು. ಹೈದರಾಬಾದಿನಲ್ಲಿ ಅವರು ಮಾಡಿದ ಅಧ್ಯಕ್ಷ ಭಾಷಣಕ್ಕೆ ಬಂದ ವಿರೋಧಗಳಿಗೆ ಸಹನೆಯಿಂದ ಉತ್ತರಿಸಿದರು. ವಿರೋಧಿಗಳ ಲೇಖನದ ಕಟುವನ್ನು ಕಂಡು ಜಿಗುಪ್ಸೆಗೊಂಡ ನಾವು ಅವರನ್ನು ವಿರೋಧದ ಮಾತು ಅತಿ ಕಟುವಲ್ಲವೇ ಎಂದದ್ದಕ್ಕೆ ಅವರು "ಉಪ್ಪಿಟ್ಟಿನಲ್ಲಿ ಮೆಣಸಿನಕಾಯಿ ಇರುವಂತೆ ಅದು; ಉಪ್ಪಿಟ್ಟಿಗೆ ಮೆಣಸಿನಕಾಯಿ ಅಗತ್ಯ; ಆದರೆ ಅದನ್ನು ತಿನ್ನುವುದಕ್ಕೆ ಆಗುವುದಿಲ್ಲ ನಿಜ; ಉಪ್ಪಿಟ್ಟು ಬೇಕಾದರೆ ಮೆಣಸಿನಕಾಯಿ ತೆಗೆದು ಹಾಕಬೇಕು" ಎಂದರು. ಹೋಲಿಕೆ ಎಷ್ಟು ಸಮಂಜಸ; ಎಷ್ಟು ಸೂಕ್ತ. ಇಂಥ ಹೋಲಿಕೆಗಳು ಅವರ ಬರವಣಿಗೆಯಲ್ಲಿ, ಮಾತಿನಲ್ಲಿ ತುಂಬಿ ಬರುತ್ತವೆ....

—ಆರ್. ಎಸ್. ರಾಮರಾವ್

('ಜೀವನ', ಆಗಸ್ಟ್–೧೯೫೨)

ಡಿ. ಕೆ. ಭೀಮಸೇನರಾವ್

# ನೆನಪುಗಳು

ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದಿಂದ ೧೯೩೬ರಲ್ಲಿ ಬಿ.ಎ. ಪರೀಕ್ಷೆ ತೇರ್ಗಡೆಯಾಗಿ ಕನ್ನಡ ತೆಗೆದುಕೊಂಡು ಎಂ.ಎ. ಪರೀಕ್ಷೆ ಮಾಡಬೇಕೆಂಬ ಹಂಬಲದಿಂದ ಪ್ರಯತ್ನಕ್ಕೆ ತೊಡಗಿದೆ. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಆಗ ಕನ್ನಡದಲ್ಲಿ ಎಂ.ಎ. ಮಾಡಲು ಅವಕಾಶವಿರಲಿಲ್ಲ. ಅದಕ್ಕಾಗಿ ಬೇರೆ ವಿಶ್ವವಿದ್ಯಾಲಯದಲ್ಲಿ ವ್ಯಾಸಂಗವನ್ನು ಮುಂದುವರಿಸಲು ಪ್ರವೇಶ ಪಡೆಯ ಬೇಕಿತ್ತು. ಮದ್ರಾಸ್, ಬೊಂಬೈ ವಿ.ವಿ.ಗಳಲ್ಲಿ ಕನ್ನಡ ಎಂ.ಎ. ಪರೀಕ್ಷೆಗೆ ಕುಳಿತು ಕೊಳ್ಳಲು ಅವಕಾಶವಿದ್ದುದರಿಂದ ಆ ವಿಶ್ವವಿದ್ಯಾಲಯಗಳ ಅನುಮತಿಗಾಗಿ ಪ್ರಾರ್ಥಿಸಿಕೊಳ್ಳಲಾಯಿತು. ಮದ್ರಾಸ್ ವಿ.ವಿ., ಬಿ.ಎ, ಪರೀಕ್ಷೆಯಲ್ಲಿ ಉತ್ತೀರ್ಣ ರಾದ ತನ್ನ ವಿದ್ಯಾರ್ಥಿಗಳಿಗೆ ಮಾತ್ರ ಎಂ.ಎ.ಗೆ ಪ್ರವೇಶ ಕೊಡುವುದೆಂದೂ, ಬೊಂಬೈ ವಿ.ವಿ., ಉಸ್ಮಾನಿಯಾ ವಿ.ವಿ.ದ ಪರೀಕ್ಷೆಗಳನ್ನು ಮನ್ನಿಸುವುದಿಲ್ಲ ವಾದ್ದರಿಂದ ಅಲ್ಲಿಯ ವಿದ್ಯಾರ್ಥಿಗಳು ಬೊಂಬೈ ವಿ.ವಿ.ದ ಪರೀಕ್ಷೆಗಳಿಗೆ ಅನರ್ಹ ರೆಂಬುದಾಗಿ ಭಾವಿಸುವುದೆಂದೂ ತಿಳಿದು ಬಂದಿತು. ಇಂಥ ಬಿಕ್ಕಟ್ಟಿನ ಸಂದರ್ಭದಲ್ಲಿ ಹೈದರಾಬಾದಿನ ಕನ್ನಡದ ವಿದ್ಯಾರ್ಥಿ ದಿಙ್ಮೂಢನಾಗುವುದು ಸ್ವಾಭಾವಿಕವಾಗಿತ್ತು. ಮೈಸೂರಿನಲ್ಲಿಯಾದರೂ ಅವಕಾಶವುಂಟೇ ತಿಳಿದುಕೊಳ್ಳೋಣವೆಂದು ಮೈಸೂರಿನ ಕನ್ನಡ ಪ್ರಾಧ್ಯಾಪಕರಿಗೆ ಕನ್ನಡದಲ್ಲಿ ಕಾಗದ ಬರೆದೆ. ಆಗಿನ ಕಾಲದಲ್ಲಿ ಹೈದರಾ ಬಾದಿನವರಿಗೂ ಹೊರಗಣವರಿಗೂ ಹೆಚ್ಚು ಬಳಕೆಯಿರಲಿಲ್ಲವಾದ್ದರಿಂದ ಮೈಸೂರಿ ನಲ್ಲಿ ಕನ್ನಡದ ಪ್ರಾಧ್ಯಾಪಕರು ಯಾರೆಂಬುದು ನನಗೆ ಗೊತ್ತಿರಲಿಲ್ಲ. ಅದಕ್ಕಾಗಿ ಬರಿಯ ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾಲಯ, ಮೈಸೂರು ಎಂದು ಬರೆದು ಪತ್ರ ಹಾಕಿದೆ. ಅಪರಿಚಿತನೊಬ್ಬನು ಖಚಿತವಲ್ಲದ ಅನಿರ್ದಿಷ್ಟ ವಾದ ವಿಳಾಸಕ್ಕೆ ಕಾಗದ ಬರೆದು ಉತ್ತರವನ್ನು ನಿರೀಕ್ಷಿಸುವ ಧಾರ್ಷ್ಟ್ಯ ಮಾಡಿದ್ದೆ. ಉತ್ತರ ಕೊಡುವವರ ಕರ್ತವ್ಯಶೀಲತೆಯಿಂದ ನನ್ನ ಭಾಗ್ಯೋದಯದ ದ್ವಾರವು ತೆರೆಯಿತು. ನಾನು ನಿರೀಕ್ಷಿಸಿದ್ದಂತೆ ಅವಧಿಯೊಳಗಾಗಿ ಉತ್ತರ ಬಂದಿತು. ಸುದೀರ್ಘವಾದ ಉತ್ತರ, ಕಾಗದದ ಮೈತುಂಬ ಇಕ್ಕಡೆಗಳಲ್ಲಿ ಸುಂದರವಾದ

ಮುತ್ತುಕೋದಂತೆ ಅಕ್ಷರ—ಮೈಸೂರು ಕಡೆಯವರ ಅಕ್ಷರ ವಿನ್ಯಾಸಕ್ಕೂ ಹೈದರಾಬಾದಿನವರ ಅಕ್ಷರವಿನ್ಯಾಸಕ್ಕೂ ಅಲ್ಲಲ್ಲಿ ಸ್ವಲ್ಪ ವ್ಯತ್ಯಾಸವುಂಟು. ಕನ್ನಡದಲ್ಲಿ ಬರೆದ ಆ ಪತ್ರವನ್ನು ನೋಡಿಯೇ ನನಗೆ ಪರಮಾನಂದವಾಯಿತು. ಆಮೂಲಾಗ್ರವಾಗಿ ಓದಿದೆ, ಮತ್ತೊಮ್ಮೆ ಓದಿದೆ. ಮೈಸೂರು ವಿಶ್ವವಿದ್ಯಾಲಯದಲ್ಲಿ ಇನ್ನೂ (೧೯೨೬) ಕನ್ನಡ ಎಂ.ಎ. ತರಗತಿಯಿಲ್ಲವೆಂದೂ ಕನ್ನಡದ ಉನ್ನತ ವ್ಯಾಸಂಗಕ್ಕಾಗಿ ಹೈದರಾಬಾದಿನ ಕನ್ನಡಿಗನೊಬ್ಬನು ಹಾತೊರೆಯುತ್ತಿರುವುದು ಶ್ಲಾಘ್ಯವೆಂದೂ ಮುಂದಿನ ವರ್ಷ–೧೯೨೭ರಲ್ಲಿ ಕನ್ನಡದಲ್ಲಿ ಎಂ.ಎ. ತರಗತಿ ಆರಂಭವಾಗುವ ನಿರೀಕ್ಷೆಯಿದೆಯೆಂದೂ ಆಗ ಪ್ರಯತ್ನಮಾಡಬೇಕೆಂದೂ, ಭಗವಂತನು ನಿಮ್ಮ ಉದ್ದೇಶವನ್ನು ಈಡೇರಿಸಲಿ ಎಂದೂ ಆಶೀರ್ವದಿಸಿ ಬರೆದ ಪತ್ರವದು. ಜೊತೆಯಲ್ಲಿ ತಮ್ಮ ಕೈಯಲ್ಲಾಗುವ ಸಹಾಯ ಮಾಡುವ ಆಶ್ವಾಸನವನ್ನು ಕೊಡಲಾಗಿತ್ತು. ಆ ಪತ್ರಾವಲೋಕನದಿಂದ ನನ್ನ ಮನಸ್ಸಿಗೆ ನೆಮ್ಮದಿಯುಂಟಾಯಿತು. ಹೀಗೆ ಆಶೀರ್ವದಿಸಿ ಪತ್ರ ಬರೆದವರು ಪೂಜ್ಯ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳೆಂದು ಬೇರೆ ಹೇಳಬೇಕಾಗಿಲ್ಲ. ಹೈದರಾಬಾದಿನ ಕನ್ನಡಿಗರಿಗೆ ಮೈಸೂರಿಗೆ ಬರಲು ಮೊದಲು ಹೆದ್ದಾರಿ ತೋರಿದವರು ಪ್ರೊ. ಕೃಷ್ಣಶಾಸ್ತ್ರಿಗಳವರು. ಅದು ನನ್ನ ಮೇಲೆ ಮಾಡಿದ ದೊಡ್ಡ ಉಪಕಾರ, ಚಿರಸ್ಮರಣೀಯ.

ಒಂದು ವರ್ಷದವರೆಗೆ ಕಾಯುವುದು ನನಗೆ ತುಂಬ ದುರ್ಭರವಾಯಿತು. ಕನ್ನಡ ತರಗತಿಗಳು ಎಂದು ಆರಂಭವಾಗುವುವೋ, ಎಂದು ನಾನು ಕನ್ನಡದ ಎಂ.ಎ. ವಿದ್ಯಾರ್ಥಿಯಾಗುವೆನೋ ಎಂಬ ಮನಸ್ಸಿನ ಆತುರ ಅತ್ಯಧಿಕವಾಯಿತು. ಕಾಯುವುದು ಸಾಯುವುದಕ್ಕಿಂತಲೂ ಕಷ್ಟಕರ ಎಂಬುದು ಎಲ್ಲ ಉತ್ಕಟಾವಸ್ಥೆಗೂ ಅನ್ವಯಿಸುತ್ತದೆ. ೧೯೨೭ರ ಶಿಕ್ಷಣವರ್ಷದಿಂದ ಕನ್ನಡ ಎಂ.ಎ. ತರಗತಿ ಮಹಾರಾಜಾ ಕಾಲೇಜಿನಲ್ಲಿ ಆರಂಭವಾದ ಸಂಗತಿ ತಿಳಿದು ನನಗೆ ಅತ್ಯಧಿಕವಾದ ಸಂತೋಷವಾಯಿತು. ಪ್ರವೇಶಕ್ಕಾಗಿ ನಮ್ಮ ವಿಶ್ವವಿದ್ಯಾಲಯದಿಂದ ಮೈಸೂರು ವಿ. ವಿ. ಕ್ಕೆ ಬರೆದದ್ದಾಯಿತು. ಆದರೇನು, ಮೈ. ವಿ. ವಿದ್ಯಾಲಯವು ಉ. ವಿ ವಿ.ದ ಪರೀಕ್ಷೆಗಳನ್ನು ಮನ್ನಿಸುವುದಿಲ್ಲವೆಂದೂ ಅಲ್ಲಿನ ಪದವೀಧರರಿಗೆ ತಮ್ಮಲ್ಲಿ ಪ್ರವೇಶಾವಕಾಶವಿಲ್ಲವೆಂದೂ ಉತ್ತರಬಂದಿತು. ನನ್ನ ಆಶೆ ಆಕಾಂಕ್ಷೆಗಳೆಲ್ಲವೂ ಒಮ್ಮೆಗೆಯೇ ಉಡುಗಿ ಹೋದುವು. ಕನ್ನಡದ ಕೇಂದ್ರವಾದ ಮೈಸೂರೇ ಕನ್ನಡದ ಉನ್ನತ ವ್ಯಾಸಂಗಕ್ಕಾಗಿ ಹೊರಗಣವರಿಗೆ ತನ್ನ ಬಾಗಿಲನ್ನು ಮುಚ್ಚಿಬಿಟ್ಟರೆ 'ಅನ್ಯಥಾ ಶರಣಂ ನಾಸ್ತಿ' ಆಗಿಬಿಟ್ಟಿತು ನಮ್ಮಂಥವರಿಗೆ. ನಾನು ನಮ್ಮ ವಿ ವಿ. ನಿಲಯದ ಅಧಿಕಾರಿಗಳನ್ನು ಕಂಡು ಸ್ವಯಂ ನಾನೇ ಮೈಸೂರಿಗೆ ಹೋಗಿ ಪ್ರಯತ್ನ ಮಾಡುವೆನೆಂದೂ ಅದಕ್ಕಾಗಿ ವಿ.ವಿ.ನಿಲಯದ ಅನುಮತಿಯಿದ್ದರೆ ಸಾಕೆಂದೂ ಪ್ರಾರ್ಥಿಸಿದೆನು. ಅದಕ್ಕವರು ಸಮ್ಮತಿಸಿದರು. ನಾನು ಹೈದರಾಬಾದಿನಿಂದ ಹೊರಟು ಬೆಂಗಳೂರು ಮೈಸೂರುಗಳಲ್ಲಿ ವಾಸಿಸುತ್ತಿದ್ದ ವಿಶ್ವವಿದ್ಯಾಲಯದ ಕಾರ್ಯ

ಮಂಡಳಿಯ (University council) ಸದಸ್ಯರನ್ನು ಕಂಡು ಅವರಿಗೆ ನಮ್ಮ ವಿಶ್ವವಿದ್ಯಾಲಯದ ವಿಚಾರವಾಗಿದ್ದ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಿ ಆಗಿನ ಉಪಕುಲಪತಿಗಳಾಗಿದ್ದ ಡಾ. ಬ್ರಜೇಂದ್ರನಾಥ ಶೀಲ್ ಅವರನ್ನು ಕಂಡು ಒಪ್ಪಿಸಿ ಮೈಸೂರು ವಿ.ವಿ.ನಿಲಯದಿಂದ ಪ್ರವೇಶಕ್ಕಾಗಿ ಅಂಗೀಕಾರ ಪಡೆವುದು ಭಗೀರಥ ಪ್ರಯತ್ನವಾಯಿತು. ಆ ಘಟನೆಯ ವಿವರಗಳನ್ನು ಇಲ್ಲಿ ಕೊಡುವುದು ಅಪ್ರಸ್ತುತ. ನನಗೆ ಪ್ರವೇಶ ಸಿಕ್ಕಿ ಕನ್ನಡ ಎಂ.ಎ. ತರಗತಿಯಲ್ಲಿ ಹೋಗಿ ಕುಳಿತುಕೊಂಡಾಗಲೇ ನಾನು ಮೊದಲಸಲ ನೋಡಿದ್ದು ಪ್ರೊ. ಕೃಷ್ಣಶಾಸ್ತ್ರಿಗಳವರನ್ನು. ಅವರನ್ನು ಎಂದಿಗೆ ನೋಡುವೆನೋ, ಮೈಸೂರಿಗೆ ಬರಲು ಮೊದಲು ನನಗೆ ಪ್ರಚೋದನೆಯನ್ನಿತ್ತ ಪುಣ್ಯಾತ್ಮರ ದರ್ಶನಲಾಭ ನನಗೆ ಎಂದಿಗೆ ದೊರೆವುದೋ ಎಂದು ಪರಿತಪಿಸುತ್ತಿದ್ದ ನನಗೆ ಅವರ ದರ್ಶನದಿಂದ ಆಪ್ಯಾಯನ ವುಂಟಾಯಿತು.

ಮೊದಲ ಸಲದ ಕನ್ನಡ ಎಂ.ಎ. ತರಗತಿಗೆ ಹೊರಗಣವರೊಬ್ಬರು ಬಂದುದರಿಂದ ಪ್ರೊ. ಕೃಷ್ಣಶಾಸ್ತ್ರಿಗಳಿಗೂ ಸಂತೋಷವಾಯಿತು. ತಮ್ಮ ಪ್ರೇರಣೆ ಸಫಲವಾದುದೂ ಈ ಸಂತೋಷಕ್ಕೊಂದು ಕಾರಣವಾಗಿರಬೇಕು. ಪ್ರೊ. ಕೃಷ್ಣಶಾಸ್ತ್ರಿಗಳವರು ಆರಂಭದಲ್ಲಿ ವಾರಕ್ಕೊಂದೆರಡು ಗಂಟೆಗಳಷ್ಟು ಕಾಲ ಪಾಠಪ್ರವಚನ ಮಾಡುತ್ತಿದ್ದರು. ಉಳಿದ ಕಾಲವೆಲ್ಲ ಪೂಜ್ಯ ಗುರುಗಳು ಗೌರವ ಪ್ರಾಧ್ಯಾಪಕರು ಬಿ. ಎಂ. ಶ್ರೀಕಂಠಯ್ಯನವರದು. ಕನ್ನಡದ ಪ್ರೊಫೆಸರ್ ಆಗ ಪೂಜ್ಯ ಟಿ. ಎಸ್. ವೆಂಕಣ್ಣಯ್ಯನವರು ಮಹಾರಾಜಾ ಕಾಲೇಜಿಗೆ ದಯಮಾಡಿಸಿದರು. ಪ್ರೊ. ಕೃಷ್ಣಶಾಸ್ತ್ರಿಗಳವರ ಅಡಿದಾವರೆಗಳಲ್ಲಿ ಪಾಠಕಲಿವ ಪ್ರಸಂಗ ಪ್ರಾಪ್ತವಾದದ್ದು ನನ್ನ ಭಾಗ್ಯ ವಿಶೇಷವೇ ಸರಿ.

೧೯೨೭ರ ಜುಲೈಯಿಂದ ೧೯೨೯ರ ಮಾರ್ಚ್‌ವರೆಗೆ ಮೈಸೂರಿನಲ್ಲಿ ಕಳೆದ ಕನ್ನಡದ ಅಧ್ಯಯನ ಕಾಲ ನನ್ನ ಜೀವನದಲ್ಲಿ ಎಂದೂ ಮರೆಯಲಾಗದ ಕಾಲ. ಕನ್ನಡ ಎಂ.ಎ. ತರಗತಿಯಲ್ಲಿ ನನ್ನ ಪುಣ್ಯ ವಿಶೇಷದಿಂದ ಸಹಪಾಠಿಗಳಾಗಿದ್ದ ವಿದ್ಯಾರ್ಥಿಗಳು ಶ್ರೀಗಳಾದ ಕೆ. ವಿ. ಪುಟ್ಟಪ್ಪ, ಡಿ. ಎಲ್. ನರಸಿಂಹಾಚಾರ್ಯ, ಕೆ. ವೆಂಕಟರಾಮಪ್ಪ ಮುಂತಾದವರು. ಜೊತೆಗೆ ಶ್ರೀ ಟಿ. ಎನ್. ಶ್ರೀಕಂಠಯ್ಯ ತರಗತಿಗೆ ಬರುತ್ತಿದ್ದರು. ಒಬ್ಬೊಬ್ಬರ ಹೃದಯಾಕಾಶದಲ್ಲಿ ಅನರ್ಘ್ಯವಾದ ಕನ್ನಡದ ಕೃತಿ ರತ್ನಗಳು ಅಮೂರ್ತ ಸ್ಥಿತಿಯಲ್ಲಿ ಹುದುಗಿಕೊಂಡ್ಡಿದವು. ಅವುಗಳಿಗೆ ಮೂರ್ತ ಸ್ವರೂಪವನ್ನು ಕೊಟ್ಟು ಪ್ರಕಟವಾಗುವಂತೆ ಮಾಡಿದ ಕುಶಲ ಕರ್ಮಿಗಳು ಮೂವರು ಪ್ರಾಧ್ಯಾಪಕರು. ಪ್ರೊ. ಬಿ. ಎಮ್. ಎಸ್. ಅವರು, ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು, ಪ್ರೊ. ಕೃಷ್ಣಶಾಸ್ತ್ರಿಗಳು. ತಕ್ಕ ಗುರುಗಳಿಗೆ ತಕ್ಕ ಶಿಷ್ಯರು. ಈ ಎರಡು ವರ್ಷಗಳ ಅವಧಿಯಲ್ಲಿ ಉತ್ಕೃಷ್ಟವಾದ ಎರಡು ಗ್ರಂಥಗಳು ಪ್ರಕಟವಾದುವು. ಒಂದು ರನ್ನ ಕವಿ ಪ್ರಶಸ್ತಿ, ಮತ್ತೊಂದು ಕನ್ನಡ

ಕೈಪಿಡಿ–ಎರಡೂ ವಿಶಿಷ್ಟ ಗುಣೋಪೇತವಾದ ಗ್ರಂಥಗಳು. ರನ್ನಕವಿ ಪ್ರಶಸ್ತಿ ವಿಮರ್ಶನ ಗ್ರಂಥ. ಕನ್ನಡ ಕವಿಯ ಗುಣದೋಷಗಳನ್ನು ಹೇಗೆ ತಂದುಕೊಳ್ಳಬೇಕೆಂದನ್ನು ತಿಳಿಯಲು ನವೀನ ದೃಷ್ಟಿಯನ್ನು ತಂದುಕೊಟ್ಟ ಗ್ರಂಥ. ಪಳಗಿದ ಕೆಲವು ಜನ ವಿದ್ವಾಂಸರ ವಿಮರ್ಶನ ಲೇಖನಗಳ ಜೊತೆಗೆ ವಿದ್ಯಾರ್ಥಿಗಳಾಗಿದ್ದವರ ಲೇಖನಗಳೂ ಅದರಲ್ಲಿ ಪ್ರಕಟವಾದುವು. ಪ್ರೊ. ಕೃಷ್ಣಶಾಸ್ತ್ರಿಗಳವರ ಲೇಖನವಂತೂ ನನ್ನ ಮನಸ್ಸನ್ನು ಚೆನ್ನಾಗಿ ಹಿಡಿಯಿತು. ವಿಮರ್ಶಕ ದೃಷ್ಟಿ ಪದ ಪ್ರಯೋಗ, ವಾಕ್ಯರಚನೆ, ಸೊಗಸಾದ ಶೈಲಿ ಒಟ್ಟನಲ್ಲಿ ಅಂಥ ಬರವಣಿಗೆ ನನ್ನದನ್ನಾಗಿ ಮಾಡಿಕೊಳ್ಳಬೇಕೆಂಬಂತಾಯಿತು. ಬೇಡಿದ ಕಾಡೊಳ್ ಮಳೆಯಾಯ್ತು, ಪೈರನ್ನು ಬೆಳೆದುಕೊಳ್ಳುವುದು ಕರ್ಷಕನ ಕಾರ್ಯ. ಕೈಪಿಡಿಯಲ್ಲಿ ಬರೆದ ಅವರ ಅಲಂಕಾರ ಶಾಸ್ತ್ರ ವಿಷಯದ ಲೇಖನವಾದರೋ ವಿದ್ಯಾರ್ಥಿಗಳಿಗೆ ನಿಜವಾಗಿಯೂ ಕೈಪಿಡಿಯೇ. ಹಿಂದೆ ಅಂಥದು ಇರಲಿಲ್ಲ, ಮುಂದೆ ಬರುವುದು ಎಂದೋ ಎನಿಸಿತು. ಅಪರಿಚಿತವೂ ಕ್ಲಿಷ್ಟವೂ, ಅಬೋಧವೂ ಆದ ವಿಷಯವನ್ನು ಸುಪರಿಚಿತವೂ, ಸರಳವೂ ಸುಬೋಧವೂ ಆದ ದೃಷ್ಟಾಂತಗಳಿಂದ ನಿರೂಪಿಸುವಲ್ಲಿ ಪ್ರೊ. ಕೃಷ್ಣಶಾಸ್ತ್ರಿಗಳದು ಎತ್ತಿದ ಕೈ ಎಂಬುದು ಆ ಭಾಗದಿಂದ ವ್ಯಕ್ತವಾಗುತ್ತದೆ. ಕನ್ನಡದ ಉನ್ನತ ಶಿಕ್ಷಣ ಪಡೆವ ವಿದ್ಯಾರ್ಥಿಗಳಿಗೆ ಆಗಿನ ಕಾಲದಲ್ಲಿ ಅಂಥ ಬರೆವಣಿಗೆ ಭಗವದ್ದತ್ತವಾಗಿ ಬಂದ ವರಪ್ರಸಾದವಾಗಿ ಪರಿಣಮಿಸಿತು. ಈಗಂತೂ ಆ ಗ್ರಂಥ ವಿದ್ಯಾರ್ಥಿಗಳಿಗೆ ಮಾತ್ರವಲ್ಲ ಸಕಲ ವಿದ್ಯಾಭ್ಯಾಸಿಗಳಿಗೆ ತುಂಬ ಉಪಯುಕ್ತವಾದ, ಅನಿವಾರ್ಯವಾದ ಗ್ರಂಥವಾಗಿದೆಯೆಂಬುದು ಸರ್ವ ವಿದಿತವಾದ ಸಂಗತಿ. ಹೊಸಗನ್ನಡದ ಗದ್ಯ ಶೈಲಿಯನ್ನು ರೂಪಿಸುವಲ್ಲಿ ಪ್ರಥಮತಃ ಮಾರ್ಗದರ್ಶಕರಾದವರಲ್ಲಿ ಅವರೂ ಒಬ್ಬರು ಎಂಬುದು ನಿರ್ವಿವಾದ ವಿಷಯ. ಬೆಂಗಳೂರಿಗೆ ಹೋದ ಮೇಲೆ ಪ್ರಬುದ್ಧ ಕರ್ಣಾಟಕದ ಭಾರವನ್ನೆಲ್ಲ ತಮ್ಮ ತಲೆಯ ಮೇಲೆ ಹೊತ್ತುಕೊಂಡು, ಅದನ್ನು ಕನ್ನಡಿಗರ ಸ್ವತ್ತನ್ನಾಗಿ ಮಾಡಿದ ಕೀರ್ತಿ ಪ್ರೊ. ಕೃಷ್ಣಶಾಸ್ತ್ರಿಗಳವರಿಗೆ ಸಲ್ಲುತ್ತದೆ. ಕೃಷ್ಣಶಾಸ್ತ್ರಿಗಳೆಂದರೆ ಪ್ರಬುದ್ಧ ಕರ್ಣಾಟಕ, ಪ್ರಬುದ್ಧ ಕರ್ಣಾಟಕವೆಂದರೆ ಕೃಷ್ಣಶಾಸ್ತ್ರಿಗಳೆಂದಾಗಿ ಬಿಟ್ಟಿತು.

ವಿಜ್ಞಾನದ ಬೋಧೆಯೇ ಪ್ರಧಾನವಾಗಿ ಇದ್ದ ಬೆಂಗಳೂರಿನ ಕಾಲೇಜಿನಲ್ಲಿ ಪ್ರೊ. ಕೃಷ್ಣಶಾಸ್ತ್ರಿಗಳು ಕನ್ನಡದ ವಿಚಾರವಾಗಿ ಪ್ರೇಮಾದರಗಳನ್ನು ಹುಟ್ಟಿಸಿ ಅಭಿಮಾನವನ್ನು ಕೆರಳಿಸಿ ವಿದ್ಯಾರ್ಥಿಗಳನ್ನು ಕನ್ನಡದತ್ತ ಸೆಳೆದದ್ದು ಸಾಮಾನ್ಯವಾದ ಕಾರ್ಯವಲ್ಲ. ಕನ್ನಡ ಸತ್ತ್ವಶಾಲಿಯಾದ ಭಾಷೆ, ಸರ್ವೋಪಯುಕ್ತವಾಗಿ ಪ್ರಯೋಗಿಸಲು ಅರ್ಹವಾದ ಭಾಷೆಯೆಂಬ ತಿಳಿವಳಿಕೆಯನ್ನುಂಟು ಮಾಡಲು ಪ್ರೊ. ಕೃಷ್ಣಶಾಸ್ತ್ರಿಗಳು ತುಂಬ ಹೆಣಗಿದರು. ಈ ಕಾರ್ಯದಲ್ಲಿ ಯಶಸ್ವಿಗಳೂ ಆದರು.

ಪ್ರೊ. ಟಿ. ಎಸ್. ವೆಂಕಣ್ಣಯ್ಯನವರ ಅಕಾಲದೈವಾಧೀನಾನಂತರ ಮಹಾರಾಜಾ ಕಾಲೇಜಿನಲ್ಲಿ ಅವರ ಪೀಠವನ್ನಲಂಕರಿಸಿ ಕನ್ನಡದ ಸ್ಥಾನಮಾನವನ್ನು ಸುಭದ್ರಗೊಳಿಸಿ ಅದರ ಅಂತಸ್ತನ್ನು ಮೇಲಕ್ಕೆತ್ತಿ ಪ್ರೊ. ಕೃಷ್ಣಶಾಸ್ತ್ರಿಗಳು

ವಂದ್ಯರೂ, ಸರ್ವಸ್ತುತ್ಯರೂ ಆದರು. ಸಂಸ್ಕೃತವೆಂದರೆ ಸಂಸ್ಕೃತ, ಕನ್ನಡ ವೆಂದರೆ ಕನ್ನಡ–ಹೀಗೆ ಕನ್ನಡದ ದ್ರೋಣಾಚಾರ್ಯರಾಗಿ ಕನ್ನಡಕ್ಕೆ ಗೌರವವನ್ನು ತಂದುಕೊಟ್ಟರು. ಆಳವಾದ ಪಾಂಡಿತ್ಯ ಪರಿಶುದ್ಧವಾದ ಬರೆವಣಿಗೆ, ಪರಿಷ್ಕಾರ ವಾದ ವಿಮರ್ಶನ ಶಕ್ತಿ, ಶಕ್ತಿಯುತವಾದ ನಿರೂಪಣೆಗಳಿಂದ ವಿದ್ಯಾರ್ಥಿಗಳಲ್ಲಿ ಕನ್ನಡದ ಕೆಚ್ಚನ್ನು ಮೂಡಿಸಿದರು ಪ್ರೊ. ಕೃಷ್ಣಶಾಸ್ತ್ರಿಗಳು ತಮ್ಮ ಪ್ರಾಧ್ಯಾಪಕ ವೃತ್ತಿಯ ಕಾಲದಲ್ಲಿ. ಅವರು ಬರಿಯ ಸಂಬಳದ ಉಪಾಧ್ಯಾಯರಲ್ಲ, ಧ್ಯೇಯದ ಉಪಾಧ್ಯಾಯರು. ಅವರು ನಿವೃತ್ತರಾಗುವ ಕಾಲದಲ್ಲಿ ಮುಂದಿನವರಿಗೆ ಬಿಟ್ಟ ಸಾರ ಸರ್ವಸ್ವವೆಂದರೆ ಕನ್ನಡವು ಮುಂದೆ ಬರಬೇಕೆಂಬ ಧ್ಯೇಯೋಪಾಸನೆ.

ಪ್ರೊ. ಕೃಷ್ಣಶಾಸ್ತ್ರಿಗಳು ಕನ್ನಡದ ವ್ಯಾಸಂಗಕ್ಕೆ ತೋರಿದ ಮಾರ್ಗ, ನಾಡು ನುಡಿಗಳಿಗೆ ಸಲ್ಲಿಸಿದ ಸೇವೆ–ಇವುಗಳ ಋಣಭಾರವನ್ನು ಸ್ವಲ್ಪಮಟ್ಟಿಗಾದರೂ ತೀರಿ ಸಲು ಸಾಧ್ಯವಾದೀತೇ ಎಂದು ಭಾವಿಸಿ ಹೈದರಾಬಾದಿನ ಕನ್ನಡದ ಜನತೆ ಅವರನ್ನು ಕನ್ನಡ ಸಾಹಿತ್ಯಸಮ್ಮೇಳನದ ಅಧ್ಯಕ್ಷರನ್ನಾಗಿ ಆಹ್ವಾನಿಸಿ ಗೌರವ ವನ್ನು ಪ್ರದರ್ಶಿಸಿತು. ಹೈದರಾಬಾದಿನಲ್ಲಿ ನಡೆದ ಕನ್ನಡ ಸಾಹಿತ್ಯಸಮ್ಮೇಲನ ಐತಿಹಾಸಿಕ ದೃಷ್ಟಿಯಿಂದ ಎಷ್ಟರ ಮಟ್ಟಿಗೆ ಮಹತ್ವಪೂರ್ಣವಾಗಿದೆ ಎಂಬುದು ಪರಿಷತ್ತಿನ ಚರಿತ್ರೆಯಲ್ಲಿ ಸುಪ್ರಸಿದ್ಧವಾದ ಘಟ್ಟವಾಗಿದೆ. ಉರ್ದುವೇ ಪ್ರಧಾನ ವಾಗಿದ್ದ ಈ ಭಾಗದಲ್ಲಿ ಕನ್ನಡದ ಕಹಳೆಯನ್ನು ಮೊಳಗಿಸಿ ಕನ್ನಡದ ಶಕ್ತಿ, ಸಂಪತ್ತುಗಳನ್ನು ಕೇವಲ ಕನ್ನಡಿಗರಿಗಷ್ಟೇ ಅಲ್ಲದೆ, ಅನ್ಯಭಾಷಾಭಿಜ್ಞರಿಗೂ ವೇದ್ಯವಾಗುವಂತೆ ಮಾಡಿ ಕೀರ್ತಿ ಭಾಗಿಗಳಾದರು ಪ್ರೊ. ಕೃಷ್ಣಶಾಸ್ತ್ರಿಗಳವರು. ಅಂದಿನ ಅಧ್ಯಕ್ಷರ ಭಾಷಣ ಕನ್ನಡಕ್ಕೂ ಇತರ ಭಾಷೆಗಳಿಗೂ ಇರಬೇಕಾದ ಸಂಬಂಧವನ್ನು ಕುರಿತು ಕೂಲಂಕಷವಾಗಿ ಎಳೆಎಳೆಯಾಗಿ ಬಿಡಿಸಿ ವಿವೇಚಿಸಿ ದ್ದಾಗಿದೆ. ಈಗಿನ ಕಾಲದಲ್ಲಿ ಮತ್ತೊಮ್ಮೆ ಆ ಭಾಷಣವನ್ನು ಓದಬೇಕು. ಅದರಲ್ಲಿ ಹುದುಗಿರುವ ದೂರದೃಷ್ಟಿಯ ಅನುಭವ ಈಗಲಾದರೂ ಆದೀತು. ಕನ್ನಡದ ಮೇಲಿನ ಪರಿಶುದ್ಧವಾದ ಅಭಿಮಾನದಿಂದ ಹೊರಹೊಮ್ಮಿದ ಆ ಭಾಷಣದ ಒಂದೊಂದು ಅಕ್ಷರದಲ್ಲಿಯೂ ಪ್ರೊ. ಕೃಷ್ಣಶಾಸ್ತ್ರಿಗಳ ಸದಭಿಮಾನವು ತುಂಬಿ ತುಳುಕುತ್ತಿದೆ ಎಂದರೆ ಅತಿಶಯೋಕ್ತಿ ಆಗದು. ಅದು ಯಾವ ಭಾಷೆಯ ಮೇಲಿನ ಅಸೂಯೆ, ಅನಾದರದಿಂದ ಉದ್ಗರಿಸಿದ್ದಲ್ಲ; ಪ್ರೊ. ಶಾಸ್ತ್ರಿಗಳವರ ತುಂಬು ಆತ್ಮ ಪ್ರತ್ಯಯದಿಂದ ಅಧಿಕಾರಯುಕ್ತವಾಗಿ ನಿರರ್ಗಳವಾಗಿ ಪ್ರವಹಿಸಿದ್ದು.

ಕನ್ನಡದ ಗಣ್ಯರಾದ ಸಾಹಿತಿಗಳೂ, ವಿದ್ವಾಂಸರುಗಳೂ ಅಭಿಮಾನಿಗಳೂ ಕನ್ನಡನಾಡಿನ ಮೂಲೆಮೂಲೆಯಿಂದ ಈ ಸಮ್ಮೇಲನಕ್ಕೆ ಆಗಮಿಸಿದ್ದರು. ಹೈದರಾಬಾದಿನ ಜನತೆ ಅವರೆಲ್ಲರನ್ನು ಕಣ್ತುಂಬನೋಡಿ ತಣಿಯಿತು, ನಲಿದಾಡಿತು ಸಮ್ಮೇಲನಾಧ್ಯಕ್ಷರಾಗಿಯೂ ಸೌಜನ್ಯಮೂರ್ತಿಯಾಗಿದ್ದ ಪ್ರೊ. ಕೃಷ್ಣಶಾಸ್ತ್ರಿಗಳ. ನಿಜವಾಗಿಯೂ ಸಮ್ಮೇಲನದ ಅಧ್ಯಕ್ಷಪೀಠಕ್ಕೆ ಕಲಶಪ್ರಾಯರಾಗಿದ್ದರು. ಅಧ್ಯಕ್ಷರು ಉಳಿದುಕೊಂಡಿದ್ದ ಬೀಡಾರದಿಂದ ಮೆರೆವಣಿಗೆಯ ಮೂಲಕ

ಸಭಾಂಗಣಕ್ಕೆ ಕಾರಿನಲ್ಲಿ ಕರೆದುಕೊಂಡು ಹೋಗುವ ಏರ್ಪಾಡಾಗಿತ್ತು. ಪುಷ್ಪಮಾಲಾಂಕೃತರಾಗಿ ತುಂಬ ವೈಭವದೊಡನೆ ಅಧ್ಯಕ್ಷರೂ ಪ್ರಮುಖರಾದ ಸಾಹಿತಿಗಳೂ ಕಾರಿನ ಹತ್ತಿರ ಬಂದರು. ಪ್ರೊ. ಬಿ. ಎಮ್. ಶ್ರೀಕಂಠಯ್ಯನವರು ತುಂಬ ವಾತ್ಸಲ್ಯದಿಂದ ಅಧ್ಯಕ್ಷರನ್ನು ಮೊದಲು ಕಾರಿನಲ್ಲಿ ಕುಳಿತುಕೊಳ್ಳಲು ಹೇಳಿದರು. ಅಧ್ಯಕ್ಷರು ಕೂಡಲೇ "ತಾವು ಮೊದಲು ದಯಮಾಡಿಸಬೇಕು. Lead kindly light" ಎಂದು ನುಡಿದರು. ನೆರೆದ ಜನಸಮುದಾಯ ಹರ್ಷೋದ್ಗಾರಮಾಡಿ, ಚಪ್ಪಾಳೆ ತಟ್ಟಿದರು. ಪ್ರೊ. ಬಿ. ಎಮ್. ಶ್ರೀಕಂಠಯ್ಯನವರು ಕುಳಿತಮೇಲೆ ತಾವು ಕುಳಿತರು. ಎಂಥ ಸೌಜನ್ಯ, ಗುರುಗಳಲ್ಲಿ ಎಂಥ ಗೌರವ.

ಅಧ್ಯಕ್ಷರೂ ಪ್ರಮುಖ ಸಾಹಿತಿಗಳೂ ನನ್ನ ಅಲ್ಪ ಆತಿಥ್ಯವನ್ನು ದೊಡ್ಡ ಮನಸ್ಸಿನಿಂದ ಸ್ವೀಕರಿಸಿ ನನ್ನನ್ನು ಧನ್ಯನನ್ನಾಗಿ ಮಾಡಿದರು. ಶಾಸ್ತ್ರಿಗಳು ಮೈಸೂರಿಗೆ ತೆರಳಿದಮೇಲೆ ಆ ಸಂದರ್ಭದ ಸ್ಮರಣಾರ್ಥವಾಗಿ ತಮ್ಮ ಗ್ರಂಥವನ್ನು ಕಳಿಸಿ ಆಶೀರ್ವದಿಸಿದರು.

ಒಂದು ಸಂದರ್ಭವನ್ನು ಹೇಳಿ ಈ ಸಂಸ್ಮರಣ ಲೇಖನವನ್ನು ಮುಗಿಸುತ್ತೇನೆ. ಮದ್ರಾಸು ವಿ. ವಿ. ನಿಲಯದವರು ಕನ್ನಡದ ಪರೀಕ್ಷೆಗಳ ಪರೀಕ್ಷಾ ಸಮಿತಿಗೆ ಪ್ರೊ. ಕೃಷ್ಣಶಾಸ್ತ್ರಿಗಳನ್ನು ಅಧ್ಯಕ್ಷರನ್ನಾಗಿ ನೇಮಿಸಿದ್ದರು. ನಾನೂ ಸಮಿತಿಯ ಒಬ್ಬ ಸದಸ್ಯ. ಪ್ರಶ್ನಪತ್ರಿಕೆಗಳ ವಿತರಣೆಯನ್ನು ಕುರಿತು ಪ್ರಾರ್ಥಿಸಿ ಪ್ರೊ. ಶಾಸ್ತ್ರಿಗಳವರಿಗೆ ಒಂದು ಕಾಗದ ಬರೆದೆ. ತಕ್ಷಣ ಉತ್ತರ ಬಂದಿತು. 'ನಾನು ಈಗ ಅಧಿಕಾರದಿಂದ ನಿವೃತ್ತನಾಗಿದ್ದೇನೆ. ನನಗೂ ವಿ. ವಿ. ನಿಲಯಗಳ ಪರೀಕ್ಷೆಗಳಿಗೂ ಸಂಬಂಧವಿಲ್ಲ. ಅದನ್ನು ಮದ್ರಾಸಿಗೆ ತಿಳಿಸಿದ್ದೇನೆ. ಅಲ್ಲಿಂದ ನಿಮಗೂ ಕಾಗದ ಬರಬಹುದು'—ಎಂದು ಒಕ್ಕಣಿಸಿದ್ದರು. ಇದು ಪ್ರೊ. ಕೃಷ್ಣಶಾಸ್ತ್ರಿಗಳವರ ನಿಸ್ಪೃಹವಾದ ಪ್ರಜ್ಞೆ. ಯಾರು ಯಾವ ಕೆಲಸವನ್ನು ಮಾಡಬೇಕೋ ಅವರೇ ಆ ಕೆಲಸವನ್ನು ಮಾಡಬೇಕು. ಅಧಿಕಾರದಿಂದ ನಿವೃತ್ತರಾದಮೇಲೆ ಆ ಅಧಿಕಾರಕ್ಕೆ ಸಂಬಂಧ ಪಡದವರು ಆ ಕೆಲಸ ಮಾಡಬಾರದೆಂಬುದು ಅವರ ಅಭಿಪ್ರಾಯವಾಗಿತ್ತು. ಪಾಂಡಿತ್ಯಬೇರೆ, ಅಧಿಕಾರ ನಿಮಿತ್ತ ಕಾರ್ಯಬೇರೆ, ಎಂದು ಭಾವಿಸಿದ್ದರು. ಹೀಗೆ ತಿಳಿದವರು ಬಹಳ ವಿರಳ.

ಸಾಮಾನ್ಯವಾಗಿ ನಿವೃತ್ತರಾದಮೇಲೆ ನಿರಾಶರಾಗುವುದುಂಟು. ಶ್ರೀ ಶಾಸ್ತ್ರಿಗಳವರು ಹಾಗಲ್ಲ. ನಿವೃತ್ತರಾದಮೇಲೆಯೇ ಅವರು ಮತ್ತಷ್ಟು ಉತ್ಸಾಹಶಾಲಿಗಳಾದರು. ಈ ಅವಧಿಯಲ್ಲಿ ಮೂರು ಉತ್ಕೃಷ್ಟ ಗ್ರಂಥಗಳನ್ನು ಬರೆದು ಕನ್ನಡದ ಸಾರಸ್ವತ ಸಂಪತ್ತನ್ನು ಬೆಳೆಸಿದರು. ಸಾಹಿತ್ಯ ಅಕಾಡಮಿ ಅವರಿಗೆ ಗೌರವವನ್ನು ಸಲ್ಲಿಸಿತು, ತನ್ನ ಹೆಸರನ್ನು ಸಾರ್ಥಕಮಾಡಿಕೊಂಡಿತು. ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳವರು ತುಂಬುಜೀವನವನ್ನು ಬಾಳಿ ಕನ್ನಡಿಗರಾಗಿ ಜನ್ಮವೆತ್ತಿದ್ದುದಕ್ಕೆ ಕನ್ನಡ ತಾಯಿಯ ಪಾದಾರವಿಂದಗಳಲ್ಲಿ ನಿರ್ವಂಚನೆಯಿಂದ ಸೇವೆಯನ್ನು ಸಮರ್ಪಿಸಿ ಭಗವಂತನ ಸನ್ನಿಧಾನವನ್ನು ಪಡೆದು ಧನ್ಯರಾದರು.

ಡಾ. ಎಚ್. ನರಸಿಂಹಯ್ಯ

# ಎ. ಆರ್. ಕೃಷ್ಣಶಾಸ್ತ್ರಿಗಳು : ಒಂದು ನೆನಪು

ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಫೆಬ್ರವರಿ ಒಂದನೆಯ ತಾರೀಕು ದಿವಂಗತರಾದರೆಂಬ ದುಃಖದ ಸುದ್ದಿಯು ಸ್ನೇಹಿತರಿಂದ ಮೊನ್ನೆ ತಾನೇ ತಿಳಿಯಿತು. ಮೈಸೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿ ನಿವೃತ್ತರಾದಮೇಲೆ ಎರಡು ವರ್ಷಗಳ ಕಾಲ ನ್ಯಾಷನಲ್ ಕಾಲೇಜಿನಲ್ಲಿ ಸುಮಾರು ೧೪-೧೫ ವರ್ಷಗಳ ಹಿಂದೆ ಗೌರವ ಕನ್ನಡ ಪ್ರಾಧ್ಯಾಪಕರಾಗಿದ್ದರು. ಅವರು ಅಕ್ಷರಶಃ ಗೌರವ ಪ್ರಾಧ್ಯಾಪಕರಾಗಿದ್ದರು. ಅಂದರೆ ಅವರು ಕಾಲೇಜಿನಲ್ಲಿ ಮಾಡಿದ ತಮ್ಮ ಕೆಲಸಕ್ಕೆ ಗೌರವಧನ (Honararium)ವನ್ನು ಪಡೆಯಲಿಲ್ಲ–ನಿರಾಕರಿಸಿದರು. ಅವರದು ನಿಸ್ವಾರ್ಥಸೇವೆ. ನಮ್ಮ ವಿದ್ಯಾರ್ಥಿಗಳಿಗೆ ಅವರಲ್ಲಿ ಅಪಾರ ಗೌರವವಿತ್ತು. ಎರಡು ವರ್ಷ ನಮ್ಮ ಕಾಲೇಜಿನಲ್ಲಿ ಪಾಠ ಮಾಡಿದ ಮೇಲೆ ನಮ್ಮ ಕಾಲೇಜಿನಿಂದಲೂ 'ನಿವೃತ್ತ' ರಾದರು. ಅದಾದ ಒಂದೆರಡು ವರ್ಷಕ್ಕೆ ಅವರು ಮಾಡಿದ ಸೇವೆಗೆ ನಮ್ಮ ಕೃತಜ್ಞತೆಯನ್ನು ಅರ್ಪಿಸುವ ಸಲುವಾಗಿ ಅವರ ಭಾವಚಿತ್ರವನ್ನು ಕಾಲೇಜಿನಲ್ಲಿ ಅನಾವರಣ ಮಾಡಬೇಕೆಂದು ನಿಶ್ಚಯಿಸಿದೆವು. ನಾನು ಅವರ ಮನೆಗೆ ಹೋಗಿ ಎಲ್ಲಾ ವಿಷಯವನ್ನೂ ವಿಶದವಾಗಿ ವಿವರಿಸಿ ಅವರ ಭಾವಚಿತ್ರ ತೆಗೆಯಲು ಅನುಮತಿ ಕೊಡಬೇಕೆಂದೂ, ಇಲ್ಲದೆ ಹೋದರೆ ಅವರ ಭಾವಚಿತ್ರದ ಒಂದು ಪ್ರತಿ ಕೊಡಬೇಕೆಂದೂ ಅವರಲ್ಲಿ ವಿನಂತಿ ಮಾಡಿಕೊಂಡೆ. ಅದಕ್ಕವರು "ಎಲ್ಲಾದರೂ ಉಂಟೆ? ನಾನು ಮಾಡಿದ ಕೆಲಸ ಅಷ್ಟರಲ್ಲಿಯೇ ಇದೆ, ನನ್ನ ತೃಪ್ತಿಗಾಗಿ ಮಾಡಿದೆ. ಫೋಟೋ-ಗೀಟೋ ಎಲ್ಲಾ ಆಗೋದಿಲ್ಲ" ಅಂತ ಕಟ್ಟುನಿಟ್ಟಾಗಿ ಹೇಳಿದರು. ಸ್ವಲ್ಪ ಒತ್ತಾಯಪಡಿಸಿದೆ. ಆಗ ಅವರು "ನರಸಿಂಹಯ್ಯ, ನೀವು ಆ ಎರಡು ವರ್ಷಗಳಲ್ಲಿ ನನ್ನ ವಿಷಯ ತಿಳಿದಿರಬೇಕು. ಭಾವಚಿತ್ರದ ವಿಷಯ ಮಾತನಾಡಬೇಡಿ" ಅಂದರು. "ನಮಸ್ಕಾರ ಸಾರ್, ಬರ್ತೀನಿ" ಎಂದು ಹೇಳಿ ನಿರಾಶೆಯಿಂದ ವಾಪಸಾದೆ. "ಆಗ ನಾನು ಕಾಲೇಜಿನಲ್ಲಿ ಒಬ್ಬ ಉಪಾಧ್ಯಾಯನಾಗಿದ್ದೆ. ಏನು ಇವರು ನಿರ್ದಾಕ್ಷಿಣ್ಯವಾಗಿ ಹೀಗೆ ಹೇಳಿಬಿಟ್ಟರಲ್ಲಾ" ಎಂದು ಅದೇ ಯೋಚನೆ ಮಾಡುತ್ತಿದ್ದೆ.

ಅದಾದ ಮೇಲೆ ೧೫-೨೦ ದಿನಗಳಿಗೆ ಪುನಃ ಅವರ ಮನೆಗೆ ಹೋದೆ.

"ಬನ್ನಿ, ಕುಳಿತುಕೊಳ್ಳಿ. ಏನು ಬಂದಿರಿ?" ಎಂದು ಕೇಳಿದರು.

"ಅದೇ ವಿಷಯಕ್ಕೆ ಪುನಃ ಬಂದಿದ್ದೇನೆ ಸಾರ್" ಎಂದೆ.

"ಏನು, ಪುನಃ ನನ್ನ ಫೋಟೋ ಕೇಳೋದಿಕ್ಕೆ ಬಂದಿರಾ? ಹೋದ ಸಲವೇ ಹೇಳಿದೆನಲ್ಲಪ್ಪಾ. ಖಂಡಿತವಾಗಿಯೂ ಆಗೋದಿಲ್ಲಾ ಅಂತ. ಏಕೆ ಹೀಗೆ ಚೌಕಾಶಿ ಮಾಡುತ್ತೀರಿ? ಅದೆಲ್ಲಾ ಸಾಧ್ಯವೇ ಇಲ್ಲ" ಎಂದು ಗಡುಸಾಗಿ ಹೇಳಿದರು. ನನ್ನ ಹಿಂದಿನ ವಿವರಣೆಯ ಪುನಃಪಠಣದಿಂದ ಏನೂ ಉಪಯೋಗ ಆಗಲಿಲ್ಲ. ಅವರ ಅನುಮತಿ ಬೇಡಿ ವಾಪಸಾದೆ. ಅವರು ಏನು ಖಡಾಖಂಡಿತ ವಾಗಿ ಮುಖ ಗಂಟುಹಾಕಿಕೊಂಡು ಮಾತನಾಡಿದರೂ ಅವರ ಹೃದಯ ಒಳ್ಳೆಯದು ಎಂಬ ವಿಷಯ ನನಗೆ ಅವರು ನಮ್ಮ ಕಾಲೇಜಿನಲ್ಲಿದ್ದ ಎರಡು ವರ್ಷಗಳಲ್ಲಿ ಚೆನ್ನಾಗಿ ತಿಳಿದಿದ್ದಿತು. ಅವರು ಸ್ವಲ್ಪ ಕಟುವಾಗಿ ಮಾತನಾಡಿ ಭಾವಚಿತ್ರವನ್ನು ನಿರಾಕರಿಸಿದ್ದರಿಂದ ನನಗೆ ನಿರಾಶೆಯಾಯಿತೇ ವಿನಾ ಮನಸ್ಸಿಗೆ ನೋವೇನೂ ಆಗಲಿಲ್ಲ. ಒಂದೆರಡು ವಾರಗಳಾದಮೇಲೆ ಪುನಃ ಅವರ ಮನೆಗೆ ಹೋದೆ. ಅದೇ ಆದರದಿಂದ ಆಹ್ವಾನಿಸಿ ಕುಳಿತುಕೊಳ್ಳಲು ಹೇಳಿ ಬಂದ ಉದ್ದೇಶವನ್ನು ಕೇಳಿದರು.

"ಹಿಂದಿನ ಉದ್ದೇಶವೇ ಸಾರ್" ಎಂದು ಹೇಳಿದೆ.

ಕೆಲವು ಸೆಕೆಂಡುಗಳು ನನ್ನನ್ನೇ ನೋಡಿ ಏನೂ ಮಾತನಾಡದೆ ಇನ್ನೊಂದು ಕೊಠಡಿಯ ಒಳಕ್ಕೆ ಹೋದರು. ಐದು-ಹತ್ತು ನಿಮಿಷಗಳಾದಮೇಲೆ ತಮ್ಮ ಭಾವಚಿತ್ರದ ಒಂದು ಪ್ರತಿಯನ್ನು ಕೈಯಲ್ಲಿ ಹಿಡಿದುಕೊಂಡು ವಾಪಸು ಬಂದು,

"ನಾನೇ ಮೊಂಡು ಅಂತ ತಿಳಿದುಕೊಂಡಿದ್ದೆ. ನೀವು ನನಗಿಂತ ಮೊಂಡು. ತೆಗೆದುಕೊಳ್ಳಿ ಈ ಚಿತ್ರ, ಅನಾವರಣ ಮಾಡಿ, ಏನು ಬೇಕಾದರೂ ಮಾಡಿ" ಎಂದು ಹೇಳಿ ಆ ತಮ್ಮ ಚಿತ್ರವನ್ನು ನನ್ನ ಕೈಗೆ ಕೊಟ್ಟರು. ನನಗೆ ತುಂಬಾ ಸಂತೋಷವಾಯಿತು. ನಗುನಗುತ್ತಾ ಧನ್ಯವಾದಗಳನ್ನು ಹೇಳಿ ಅವರಿಗೆ ಕಷ್ಟ ಕೊಟ್ಟಿದ್ದಕ್ಕಾಗಿ ಕ್ಷಮೆ ಬೇಡಿ ವಾಪಸಾದೆ.

ಅದಾದ ಮೇಲೆ ಸ್ವಲ್ಪ ದಿನಗಳಿಗೆ ಅನಾವರಣ ಮಹೋತ್ಸವದ ಆಹ್ವಾನ ಪತ್ರವನ್ನು ತೆಗೆದುಕೊಂಡು ಹೋಗಿ ಖಂಡಿತಾ ಬರಬೇಕೆಂದು ಒತ್ತಾಯಪೂರ್ವಕ ವಾಗಿ ಕೇಳಿದೆ. "ಎಂದೆಂದಿಗೂ ನಾನು ಆ ಉತ್ಸವಕ್ಕೆ ಬರುವುದಿಲ್ಲ" ಎಂದು ಹೇಳಿದರು. ಕೊನೆಗೆ ಅವರು ಬರಲೇ ಇಲ್ಲ.

ಅವರ ಮನೆ ನಮ್ಮ ಕಾಲೇಜಿಗೆ ತುಂಬಾ ಸಮೀಪದಲ್ಲಿದೆ. ಆಗಾಗ ಬೀದಿ ಯಲ್ಲಿ ಅವರನ್ನು ಭೇಟಿ ಮಾಡುತ್ತಿದ್ದೆ. ನಮ್ಮ ಕಾಲೇಜಿನ ಮೇಲೆ ತುಂಬಾ ವಿಶ್ವಾಸ. ಅವರು ಮಿತಭಾಷಿಗಳು. ಒಂದೆರಡು ವಾಕ್ಯಗಳಲ್ಲಿ ನಮ್ಮ ಕಾಲೇಜಿನ ಉನ್ನತಿಯನ್ನು ಪ್ರಶಂಸಿಸುತ್ತಿದ್ದರು. ಸುಮಾರು ೩-೪ ವರ್ಷಗಳ ಹಿಂದೆ ಎಂದು

ಕಾಣುತ್ತದೆ. ಸಮೀಪದ ಒಂದು ಕಾಲುದಾರಿಯಲ್ಲಿ ಒಂದು ಸಂಜೆ ಹೋಗುತ್ತಿದ್ದಾಗ ಅವರನ್ನು ಸಂಧಿಸಿದೆ.

"ನಮಸ್ಕಾರ ಸಾರ್, ಚೆನ್ನಾಗಿದ್ದೀರಾ" ಅಂದೆ.

"ಓ, ಏನೋ ಇದ್ದೀನಪ್ಪಾ" ಎಂದು ಹೇಳಿದವರು "ನರಸಿಂಹಯ್ಯ ಸ್ಕೂಲು ಕಾಲೇಜಿನಲ್ಲಿ ನಿಮ್ಮ ದ್ವಿತೀಯ ಭಾಷೆ ಯಾವುದು ?" ಎಂದು ಕೇಳಿದರು.

"ಸಂಸ್ಕೃತ ಸಾರ್" ಅಂದೆ.

"ಓ ಹಾಗೋ. ಎಲ್ಲಾದರೂ ನೀವು ಶಂಕರಾಚಾರ್ಯರ ಭಜಗೋವಿಂದ ಶ್ಲೋಕ ಓದಿದ್ದೀರಾ–ಕೇಳಿದ್ದೀರಾ ?" ಎಂಬುದಾಗಿ ಪ್ರಶ್ನಿಸಿದರು.

"ಕೇಳಿದ್ದೀನಿ. ಐದಾರು ಶ್ಲೋಕಗಳು ಸುಮಾರಾಗಿ ಚೆನ್ನಾಗಿ ಗೊತ್ತು."

"ಯಾವತ್ಪವನೋ ನಿವಸತಿ ದೇಹೇ
ತಾವತ್‌ಪೃಚ್ಛತಿ ಕುಶಲಂ ಗೇಹೇ
ಗತವತಿ ವಾಯೌ ದೇಹಾಪಾಯೇ
ಭಾರ್ಯಾ ಬಿಭ್ಯತಿ ತಸ್ಮಿನ್ ಕಾಯೇ

ಈ ಶ್ಲೋಕ ನಿಮಗೆ ಗೊತ್ತೋ ?" ಎಂದು ಕೇಳಿದರು. ಅದೃಷ್ಟವಶಾತ್ ಆ ಶ್ಲೋಕ ಗೊತ್ತಿತ್ತು.

"ಗೊತ್ತು ಸಾರ್. ಸರಳವಾದ ಶ್ಲೋಕ. ಅದರ ಅರ್ಥಕೂಡ ಸಾಮಾನ್ಯವಾಗಿ ಗೊತ್ತಿದೆ" ಅಂದೆ.

[ಅದರ ಸಾರಾಂಶ ಹೀಗಿದೆ: ಎಲ್ಲಿಯ ತನಕ ಮನುಷ್ಯ ಬದುಕಿರುತ್ತಾನೋ ಅಲ್ಲಿಯ ತನಕ ಆತನ ಯೋಗಕ್ಷೇಮವನ್ನು ವಿಚಾರಿಸುತ್ತಾರೆ. ಸತ್ತಮೇಲೆ ಆ ದೇಹವನ್ನು ನೋಡಿ ಆತನ ಹೆಂಡತಿಯೂ ಹೆದರುತ್ತಾಳೆ.]

"ಅಷ್ಟೇನಪ್ಪಾ ಈ ಜೀವನ" ಎಂದು ಹೇಳಿ ಲಾಲ್‌ಬಾಗ್ ಕಡೆ ವಾಕಿಂಗ್ ಹೋದರು. ಅವರು ಎಂದೂ ಹಾಗೆ ಮಾತನಾಡಿರಲಿಲ್ಲ. ಅವರ ಮಾತುಗಳು, ಅವರಿಂದ ಹೇಳಲ್ಪಟ್ಟ ಆ ಶ್ಲೋಕ ನನ್ನ ಮೇಲೆ ಬಹು ಪರಿಣಾಮವನ್ನುಂಟು ಮಾಡಿದವು. ಪದೇ ಪದೇ ನನ್ನ ಮನಸ್ಸಿಗೆ ಆ ಸಂದರ್ಭ ಜ್ಞಾಪಕಕ್ಕೆ ಬರುತ್ತಿತ್ತು.

ಅವರನ್ನು ಕೊನೆಯ ಸಲ ನೋಡಿದ್ದು ಸುಮಾರು ಒಂದೂವರೆ ವರ್ಷದ ಹಿಂದೆ. ಆಗ ಅವರು ಒಂದು ಸಣ್ಣ ಅಪಘಾತಕ್ಕೆ ಒಳಗಾಗಿ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು. ನಾನು ಅವರನ್ನು ನೋಡಲು ಹೋದಾಗ ಆ ಅಪಘಾತದ ವಿವರಗಳನ್ನೆಲ್ಲಾ ಹೇಳಿದರು. ವಾಪಸು ಹೋಗಲು ನಾನು ಸಿದ್ಧನಾದಾಗ

"ತುಂಬಾ Thanks ಬಂದಿದ್ದಕ್ಕೆ" ಅಂದರು.

"Thanks ಏನು ಸಾರ್. ಬಂದದ್ದು ನನ್ನ ಧರ್ಮ" ಅಂದೆ.

ಅವರು "ಹಾಗೆಲ್ಲಾ ಹೇಳೋದಕ್ಕೆ ಆಗುವುದಿಲ್ಲ. ಎಷ್ಟೋ ಸಲ 'Out of sight is out of mind' ಆಗಬಹುದು ಎಂದರು."

ಅವರು ಜ್ಞಾಪಿಸಿದ ಭಜಗೋವಿಂದದ ಶ್ಲೋಕ ಮತ್ತು ಅವರ ಆ ಇಂಗ್ಲಿಷ್ ಹೇಳಿಕೆ ಆಗಾಗ ಮನಸ್ಸಿಗೆ ಬರುತ್ತಲೇ ಇರುತ್ತವೆ. ಅವರು ಶ್ರೇಷ್ಠ ಸಾಹಿತಿಗಳು ಎಂಬುದು ಎಲ್ಲರಿಗೂ ತಿಳಿದ ವಿಷಯ. ಕಟ್ಟುನಿಟ್ಟಾದ ಮನುಷ್ಯರಾದರೂ ತುಂಬಾ ಸಹೃದಯರು, ಸರಳಜೀವಿಗಳು. ಇಂಥವರಿಗೆ ಸದ್ಗತಿ ಸಿಗದೆ ಹೋದರೆ ಇನ್ನು ಯಾರಿಗೆ ಸಿಗುತ್ತದೆ?

ಟಿ. ವಿ. ವೆಂಕಟಾಚಲ ಶಾಸ್ತ್ರೀ

# ಕವಿಜಿಹ್ವಾಬಂಧನಂ

ಕೆಲವು ವ್ಯಾಕರಣ ಮತ್ತು ಛಂದಸ್ಸಿನ ಅಂಶಗಳನ್ನು ಪ್ರಸ್ತಾಪಿಸಿಯೂ ಪ್ರಧಾನವಾಗಿ ಅಲಂಕಾರ ಶಾಸ್ತ್ರ ಗ್ರಂಥವಾಗಿರುವ 'ಕವಿರಾಜ ಮಾರ್ಗ' (ಸು. ೮೫೦) ವನ್ನೂ[1], ಕೃತಿ ಕೃತಿಕರ್ತೃ ಕೃತಿರಚನಾಕಾಲ ಇತ್ಯಾದಿಗಳ ದೃಷ್ಟಿಯಿಂದ ಅನಿಶ್ಚಿತವೂ ವಿವಾದಾಸ್ಪದವೂ ಆಗಿರುವ 'ಗುಣಗಾಂಕೀಯು' (ಸು. ೮೪೪–೮೮೮) ವನ್ನೂ ಬಿಟ್ಟರೆ[2], ಕನ್ನಡದಲ್ಲಿ ರಚಿತವಾಗಿರುವಂತೆ ತಿಳಿದುಬಂದಿರುವ ಪ್ರಾಚೀನ ಛಂದೋಗ್ರಂಥಗಳು ಎಂದರೆ ೧ನೆಯ ನಾಗವರ್ಮನ (ಸು. ೯೯೦) 'ಛಂದೋಂಬುಧಿ', ೨ನೆಯ ನಾಗವರ್ಮನ (ಸು. ೧೧೪೫) 'ಛಂದೋವಿಚಿತಿ'[3], ಈಶ್ವರ ಕವಿಯ (ಸು. ೧೫೦೦) 'ಕವಿಜಿಹ್ವಾಬಂಧನಂ', ಗುಣಚಂದ್ರನ (ಸು. ೧೬೫೦) 'ಛಂದಸ್ಸಾರ'[4], ಶಾಲ್ಯದ ಕೃಷ್ಣರಾಜನ (ಸು. ೧೭೪೮) 'ಷಟ್ಪ್ರತ್ಯಯ'[5], ಅಜ್ಞಾತಕರ್ತೃಕವಾದ (ಸು. ೧೭೭೫) 'ವೃತ್ತರತ್ನಾಕರ ಟೀಕೆ'[6], ನಂದಿಯ (ಸು. ೧೮೦೦) 'ನಂದಿಛಂದಸ್ಸು'[7]....ಎಂಬವು ಮಾತ್ರವೇ ಆಗಿವೆ. ತೆಲುಗು

---

[1] ಕವಿರಾ.ದಲ್ಲಿ ಪ್ರಸ್ತಾಪಿಸಿರುವ ಛಂದಸ್ಸಿನ ಅಂಶಗಳು: ಯತಿವಿಚಾರ (೧–೭೧~೭೭), ಛಂದೋಭಂಗ (೧–೯೨~೯೪), ಗುರುಲಘುದೋಷಗಳು (೧–೧೨೬~೧೩೦), ಪ್ರಾಸವಿಚಾರ (೨–೨೦~೪೫; ೩–೨೩೨~೨೩೬ ವ.)

[2] ಕಾವ್ಯಾವಲೋಕನಂ (೧೯೩೯), Introduction p. xix.

[3] ಅದೇ. ಪ. ೯೬೫

[4] Annals of Oriental Research, Madras Vol. VII.

[5] ಕರ್ಣಾಟಕ ಕವಿಚರಿತೆ, ಸಂ III, ಪು. ೧೨೨, ೧೨೪.

[6] ಅದೇ. ಪು. ೩೨೦.

[7] ಸಂ: ಮಂ. ಆ. ರಾಮಾನುಜಯ್ಯಂಗಾರ್ಯ, ಕಾವ್ಯ ಕಲಾನಿಧಿ, ಸಂ. ೨೭ (೧೯೦೯). ಗ್ರಂಥಕರ್ತೃ ನಂದಿ ಎಂಬುವನಿರಬಹುದು ಎಂಬುದಾಗಿ ಸಂಪಾದಕರು ಊಹಿಸಿದ್ದಾರೆ. ಶ್ರೀ ಆರ್. ಎಸ್. ಪಂಚಮುಖಿಯವರು ಕೊಲ್ಲಿಪಾಕೆಯ ವೀರಭದ್ರಕವಿ ಎಂದು ಹೇಳಿದ್ದಾರೆ (ಕವಿಜಿ., ಉ. xxv). ಅವರು ನೋಡಿರುವ ಗ್ರಂಥದ ಕಾಗದದ ಪ್ರತಿ ಇದಕ್ಕೆ ಆಧಾರ

ಮುಂತಾದ ಬೇರೆ ಭಾಷೆಗಳ ರಚನೆಗಳೊಡನೆ ಹೋಲಿಸಿದರೆ ಕನ್ನಡದಲ್ಲಿ ಛಂದೋ ಗ್ರಂಥಗಳ ಸಂಖ್ಯೆ ತೀರ ಕಡಮೆಯೆಂದು ಹೇಳಬೇಕಾಗುತ್ತದೆ.

'ಛಂದೋಂಬುಧಿ'ಯ ಬಳಿಕ ಛಂದಸ್ಸಿನ ಪರಿಶೀಲನೆಗೆ ದೊರೆಯುವುದೇಂದರೆ 'ಕವಿಜಿಹ್ವಾಬಂಧನ'ವೇ. ಈಗ ಈ ಕೃತಿಯ ಮೂರು ಮುದ್ರಣಗಳು ದೊರೆಯುತ್ತವೆ. ಪಂಡಿತ ಎಚ್. ಶೇಷಯ್ಯಂಗಾರ್ಯರು ಮೈಸೂರಿನಿಂದ ದೊರಕಿಸಿಕೊಂಡ ಮೂರು ಅಸಮಗ್ರ ಪ್ರತಿಗಳ ಆಧಾರದ ಮೇಲೆ ಮೊದಲ ಬಾರಿಗೆ ಇದನ್ನು ಪರಿಷ್ಕರಿಸಿ ಮದ್ರಾಸಿನ Annals of Oriental Research ಪತ್ರಿಕೆಯಲ್ಲಿ ೧೯೩೯ರಲ್ಲಿ (ಸಂ. III, IV) ಪ್ರಕಟಿಸಿದರು. ಬಳಿಕ ವಿದ್ಯಾರತ್ನ ಆರ್. ಎಸ್. ಪಂಚಮುಖಿ ಎಂ.ಎ., ಅವರು ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಹಸ್ತಲಿಖಿತ ಗ್ರಂಥ ಸಂಗ್ರಹಾಲಯದ ಒಂದು ಸಮಗ್ರ ಪ್ರತಿಯನ್ನು ಮುಖ್ಯವಾಗಿರಿಸಿಕೊಂಡು, ಬೇರೆ ಐದು ಅಸಮಗ್ರ ಪ್ರತಿಗಳ ಸಹಾಯದಿಂದ ಗ್ರಂಥವನ್ನು ಸಂಪಾದಿಸಿ ಅದೇ ಸಂಸ್ಥೆಯ ಪ್ರಕಟನೆಯಾಗಿ ೧೯೫೦ರಲ್ಲಿ ಪ್ರಕಟಿಸಿದರು. ಇದಾದ ಬಳಿಕ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ಬೆಂಗಳೂರಿನಲ್ಲಿ ತಮಗೆ ದೊರೆತ ಈ ಗ್ರಂಥದ ಓಲೆಯ ಪ್ರತಿಯೊಂದನ್ನು ಮುಖ್ಯವಾಗಿಟ್ಟುಕೊಂಡು ಮುದ್ರಿತ ಪ್ರತಿಗಳಿಂದ ಅಲ್ಲಲ್ಲಿ ಅಲ್ಪ ಸಹಾಯವನ್ನು ಮಾತ್ರ ಪಡೆದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆಯಾಗಿ ೧೯೫೭ರಲ್ಲಿ ಪ್ರಕಟಿಸಿದರು.

ಮದ್ರಾಸು ಪ್ರತಿಯ ಸಂಪಾದಕರು ತಮ್ಮ ಪರಿಷ್ಕರಣದ ಬಗೆಗೆ ಬರೆಯುತ್ತ "ಈ ಮೂರು ಪ್ರತಿಗಳನ್ನು ಒಟ್ಟುಗೂಡಿಸುವುದರಿಂದ ಲಬ್ಧವಾದ ಗ್ರಂಥಾವಯವವನ್ನು ಒಂದು ಕ್ರಮಕ್ಕೆ ತಂದು ಪ್ರಕೃತ ಗ್ರಂಥರೂಪದಲ್ಲಿ ಮುದ್ರಿಸಿದೆ" ಎಂದಿರುವುದರಿಂದ ಅವರ ಪರಿಷ್ಕರಣವು ಎಷ್ಟರಮಟ್ಟಿಗೆ ಅಸಮರ್ಪಕವಾಗಿದೆಯೆಂಬುದು ತೋರದಿರದು. ತಾಳಪತ್ರಗಳ ಅಸ್ತವ್ಯಸ್ತತೆಯಿಂದ ಪದ್ಯಗಳ ಅನುಕ್ರಮ ಕೆಟ್ಟಿರುವುದು, ಬೇರೆ ಗ್ರಂಥಗಳ ಪದ್ಯಗಳು ಹಲವಾರು ಸೇರಿಕೊಂಡಿರುವುದು, ಗ್ರಂಥಾತಿರಿಕ್ತವಾದ ಲಕ್ಷಣವಿಷಯಗಳು ಎಡೆಪಡೆದಿರುವುದು, ಲಿಪಿಕಾರ ಸ್ಖಾಲಿತ್ಯಗಳು–ಈ ಮೊದಲಾದವುಗಳಿಂದ ಮೂಲಕೃತಿಯ ಸ್ವರೂಪ ಹದಗೆಟ್ಟುಹೋಗಿದೆ. ಇವನ್ನು ಸಂಪಾದಕರು ಸರಿಪಡಿಸಲು ತಕ್ಕಮಟ್ಟಿಗೆ ಯತ್ನಿಸಿದ್ದರೂ, ಅಶುದ್ಧಗಳೂ ಪ್ರಕ್ಷೇಪಗಳೂ ಇನ್ನೂ ಉಳಿದಿದ್ದು ಊಹಾಪಾಠಗಳೂ ಅಧಿಕವಾಗಿದ್ದು ಒಟ್ಟಿನಲ್ಲಿ ಮೂಲಗ್ರಂಥದ ಗೊತ್ತುಹತ್ತದಾಗಿದೆ. ಇನ್ನು ಧಾರವಾಡದ ಪ್ರತಿಯ ವಿಚಾರ. ಇಲ್ಲಿಯೂ ಮುಖ್ಯ ಪ್ರತಿಯನ್ನೊಳಗೊಂಡು ಯಾವೊಂದು ಪ್ರತಿಯೂ ಮೂಲ

---

ವಾಗಿರಬಹುದು. ಪಂಡಿತ ಎಚ್. ಶೇಷ ಅಯ್ಯಂಗಾರ್ ಅವರು ಈಶ್ವರ ಕವಿಯೇ ಇದರ ಕರ್ತೃವಾಗಿರಬೇಕೆಂದೂ 'ನಂದಿ ಛಂದಸ್ಸು' 'ಕವಿಜಿಹ್ವಾಬಂಧನ'ದ ಗ್ರಂಥಭಾಗವೇ ಆಗಿರಬಹುದೆಂದೂ ಕೆಲವು ಆಂತರಿಕ ಪ್ರಮಾಣಗಳಿಂದ ಊಹಿಸಿರುತ್ತಾರೆ (AOR. Vol. V–pt. I, p 15–18). ಆದರೆ ಇದು ಅಸಂಭವವೆಂದು ತೋರುತ್ತದೆ.

ಪ್ರತಿಯನ್ನು ಚೆನ್ನಾಗಿ ಪ್ರತಿಬಿಂಬಿಸುವ ಹಾಗಿಲ್ಲ. ಭಾಷೆ ವ್ಯಾಕರಣ ಛಂದಸ್ಸು ಮುಂತಾದವುಗಳ ದೃಷ್ಟಿಯಿಂದ ಸ್ಖಾಲಿತ್ಯಗಳು ಹೇರಳವಾಗಿದ್ದು ಪದ್ಯಪಾಠವು ಹಲವೆಡೆಗಳಲ್ಲಿ ವಿಪರ್ಯಸ್ತವಾಗಿರುವಂತೆ ತೋರುತ್ತದೆ. ನಿಚ್ಚಳವಾಗಿರುವ ಲಿಪಿಕಾರ ಸ್ಖಾಲಿತ್ಯಗಳನ್ನು ಕೂಡ ತಿದ್ದದೆ ಬಿಟ್ಟಿದೆ. 'ಕವಿರಾಜ ಮಾರ್ಗ' ಮೊದಲಾದವುಗಳ ಪದ್ಯಗಳು ಅವೂ ಮೂಲಪಾಠಕ್ಕೆ ಸೇರಿದವೆಂಬ ಭ್ರಾಂತಿಯನ್ನು ಉಂಟುಮಾಡುವ ಹಾಗೆ ಕೃತಿ ಶರೀರದಲ್ಲಿ ಸೇರಿ ಹೋಗಿವೆ. ಒಟ್ಟಿನಲ್ಲಿ ಈಯೆರಡರಲ್ಲಿಯೂ ಅಭ್ಯಾಸಿಗಳ ಪಂಡಿತರ ಟಿಪ್ಪಣಿಕಾರರ ಕವಿಜನಾನುಕಾರಿಗಳ ಮತ್ತು ಪ್ರತಿಕಾರರ ಬಗೆಬಗೆಯ ಕೈವಾಡಗಳು ಬೆರೆತು ಕವಿಜಿ.,ದ ಮೂಲ ಪಾಠವು ಹಲವು ರೀತಿಗಳಲ್ಲಿ ಅಸ್ತವ್ಯಸ್ತವಾಗಿದೆ. ಈ ಯೆರಡರಿಂದಲೂ ಕವಿಜ.,ದ ವಿಸ್ತೃತ ಪಾಠ ಸ್ವರೂಪವನ್ನೂ ಅದನ್ನು ಅಭ್ಯಾಸಿಗಳೂ ಇತರರೂ ಬಳಸಿಕೊಂಡ ಬಗೆಯನ್ನೂ ಅರಿತುಕೊಳ್ಳಬಹುದಾಗಿದೆಯಲ್ಲದೆ ಮೂಲಪ್ರತಿಯ ಹೊಲಬು ಗಾಣುವುದು ದುಸ್ಸಾಧ್ಯವೇ ಆಗಿದೆ. ಪ್ರಕೃತ ಗ್ರಂಥದ ವಿಮರ್ಶಕರಿಗೂ ಸಂಪಾದ ಕರಿಗೂ ದೊರೆತಿರುವ ಪ್ರತಿಗಳು ಒಂದರಿಂದೊಂದು ಭಿನ್ನವಾಗಿರುವುದು ಅವರವರ ಹೇಳಿಕೆಗಳಿಂದಲೇ ತಿಳಿದುಬಂದಿರುವುದರಿಂದ ಸಂಪಾದಕೀಯ ಕ್ಲೇಶಸಹಜವೂ ಆಗಿದೆ.

ಬೆಂಗಳೂರು ಪ್ರತಿಯ ವಿಚಾರವನ್ನೀಗ ನೋಡಬಹುದು. ಪದ್ಯಗಳ ಭಾಷೆ ಛಂದಸ್ಸು ಅನ್ವಯ ಅನುಕ್ರಮ ಮೊದಲಾದವುಗಳ ದೃಷ್ಟಿಯಿಂದ ಆದಷ್ಟುಮಟ್ಟಿಗೆ ಸುಬೋಧವೂ ಗ್ರಂಥಾಂತರಗಳ ಪದ್ಯಗಳಾಗಲಿ ಗ್ರಂಥಾತಿರಿಕ್ತ ವಿಷಯ ವಿವರಣೆ ಗಳಾಗಲಿ ಬಲುಮಟ್ಟಿಗೆ ಬೆರಕೆಯಾಗದೆ ಸ್ವಯಂಪೂರ್ಣವೂ ಆಗಿರುವ ಗ್ರಂಥಶರೀರ ವನ್ನು -ಇಲ್ಲಿ ನಾವು ಕಾಣಬಹುದಾಗಿದೆ. ಅದೃಷ್ಟವಶದಿಂದ ಸಂಪಾದಕರಿಗೆ ದೊರೆತ ಓಲೆಯ ಪ್ರತಿ ಪ್ರಾಯಃ ವ್ಯುತ್ಪನ್ನನಾದೊಬ್ಬ ಲಿಪಿಕಾರನ ಲಿಖಿತವಾಗಿದ್ದು, ಮುದ್ರಿತ ಪ್ರತಿಗಳೊಡನೆ ಅದನ್ನು ಹೋಲಿಸಿ ನೋಡಿದಾಗ ಅದೇ ಕವಿಜಿ.ದ ಮೂಲ ಪಾಠವಾಗಿರಬೇಕೆಂದು ಸಕಾರಣವಾಗಿ ಅವರಿಗೆ ತೋರಿಬಂದಿತು. ಆದ್ದ ರಿಂದ ಉಪಯುಕ್ತವೂ ಪರಿಷ್ಕೃತವೂ ಮೂಲಪ್ರತಿಗೆ ಸಮೀಪತರವೂ ಆದ ಕವಿಜಿ.ದ ಮುದ್ರಣವನ್ನು ಹೊರತಂದ ಕೀರ್ತಿಗೆ ಅವರು ಭಾಜನರಾಗಿದ್ದಾರೆ. "ಬೇರೆ ಹಸ್ತ ಪ್ರತಿಗಳು ಸಿಕ್ಕಿದರೆ ಅವುಗಳನ್ನು ಉಪಯೋಗಿಸಿ ಇನ್ನೂ ಪರಿಷ್ಕರಿಸುವುದಕ್ಕೆ ಅವಕಾಶವಿದೆ" ಎಂದು ಅವರು ಹೇಳಿರುವುದು[8] ಯುಕ್ತವೂ ಸೂಕ್ತವೂ ಆಗಿದೆ.

ಪ್ರೊ. ಎ. ಆರ್. ಕೃ. ಅವರ ಪರಿಷ್ಕರಣವನ್ನೇ ಮುಖ್ಯವಾಗಿ ಬಳಸಿಕೊಂಡು ಕವಿಚರಿತ್ರೆ ಮತ್ತು ಕೃತಿಗೆ ಸಂಬಂಧಿಸಿದ ಕೆಲವಂಶಗಳನ್ನು ಇಲ್ಲಿ ವಿವೇಚಿಸಿದೆ. ಈ ಸಂಬಂಧವಾದ ಅನೇಕ ವಿಷಯುಗಳು ಅನಿಶ್ಚಿತವೂ ವಿವಾದಾಸ್ಪದವೂ ಆಗಿರು

---

[8] ಕವಿಜಿ., (೧೯೫೨), ಪೀಠಿಕೆ, ಪು. ix.

ವುದು ಸುವಿದಿತವೇ ಆಗಿದೆ. ಗ್ರಂಥದ ಹೆಸರು 'ಕವಿಜಿಹ್ವಾಬಂಧನಂ' ಎನ್ನುವುದರ ಬಗೆಗೆ, ಕವಿಯ ಬಿರುದು ಅಭಿನವ ಕೇಶಿರಾಜ (ಅಥವಾ ಅದರ ಪರ್ಯಾಯ ರೂಪಗಳು) ಎನ್ನುವುದರ ಬಗೆಗೆ ಮೂರೂ ಪರಿಷ್ಕರಣಗಳಲ್ಲಿ ದೃಢವಾದ ಸಾಕ್ಷ್ಯಗಳಿವೆ. ಮುಪ್ರತಿ ಥಾಪ್ರತಿಗಳೆರಡರಲ್ಲಿಯೂ ಕವಿಯ ಹೆಸರು 'ಈಶ್ವರ' ಮತ್ತು 'ಈಶ' ಎಂಬ ಎರಡು ರೀತಿಯಾಗಿಯೂ ಇದೆ; ಬೆಂ ಪ್ರತಿಯಲ್ಲಾದರೋ 'ಈಶ' ಎಂದು ಮಾತ್ರ ಹೇಳಿದೆ. ಈಶ=ಈಶ್ವರ ಎಂದು ಗ್ರಹಿಸುವುದರಿಂದ ತಪ್ಪೇನಿಲ್ಲ. ಗ್ರಂಥಕ್ಕೆ 'ಛಂದೋಂಬುರಾಶಿ' (<ಛಂದೋಂಬುಧಿ) ಎಂಬುದು ನಾಮಾಂತರವೆಂದೂ, ಗ್ರಂಥಕರ್ತೃವಿನ ತಂದೆ ಕಚ್ಚುಟೇಶ (ಕಚ್ಛಪೇಶ) ಎಂದೂ, ಬಾಣ ನಾಗವರ್ಮ ಫಣಿವರ್ಮ ಎಂಬವು ಗ್ರಂಥಕರ್ತೃವಿನ ಬೇರೆ ಹೆಸರುಗಳೆಂದೂ, 'ಅಷ್ಟಭಾಷಾ ಕವಿವರ' ಎಂಬುದು ಕೂಡ ಕವಿಯ ಬಿರುದೆಂದೂ—ಕೆಲವು ತ್ರುಟಿತ ಪ್ರತಿಗಳಲ್ಲಿರುವ ಉಲ್ಲೇಖಗಳನ್ನು ಆಧರಿಸಿ ಕವಿಚರಿತೆಕಾರರು ಮೊದಲಾಗಿ ಕೆಲವರು ಭಾವಿಸಿರುತ್ತಾರೆ. ಆದರೆ ಹೀಗೆ ಉಲ್ಲೇಖವಿರುವ ಪ್ರತಿಗಳೆಲ್ಲ ಒಂದು ಗುಂಪಿಗೆ ಸೇರಿರುವ ಪ್ರತಿಗಳೆಂಬುದು ಮು. ಥಾ. ಪ್ರತಿಗಳ ಸಂಪಾದಕರ ಸೂಚನೆಗಳಿಂದಾಗಿ ತಿಳಿಯುವುದರಿಂದ ಇವನ್ನು ನಾವು ಲಕ್ಷಿಸಬೇಕಾದುದಿಲ್ಲ. ಅಲ್ಲದೆ ಪ್ರತಿಗಳ ಆಧಾರವನ್ನು ಲಕ್ಷಿಸದೆಯೇ ಇವು ಭ್ರಾಂತಿಪೂರ್ವಕವಾದ ಹೇಳಿಕೆಗಳೆಂದು ಸಾಧಿಸುವುದು ಕಷ್ಟವೂ ಅಲ್ಲ. ಪ್ರೊ. ಎ. ಆರ್. ಕೃ. ಅವರು ತಮ್ಮ ಗ್ರಂಥದ ಪೀಠಿಕೆಯಲ್ಲಿ ಈ ಭ್ರಾಂತಿಯನ್ನು ಸಮರ್ಪಕವಾಗಿ ಪರಿಹರಿಸಿದ್ದಾರೆ.[9]

ಈಶ್ವರ ಕವಿಯ ಕಾಲದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದು ಅದರ ನಿರ್ಣಯಕ್ಕೆ ಇನ್ನೂ ಖಚಿತವಾದ ಆಧಾರಗಳು ದೊರೆಯಬೇಕಾಗಿವೆ. ಕವಿಚರಿತೆಕಾರರು ಮತ್ತು ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು ಸು ೧೫೦೦,ಎಂದೂ[10] ರೆ. ಎಫ್. ಕಿಟ್ಟೆಲ್ ಅವರು ೧೬ನೆಯ ಶ. ದ ಆದಿ ಎಂದೂ,[11] ಪ್ರೊ. ಎಚ್. ಚೆನ್ನಕೇಶವ ಅಯ್ಯಂಗಾರ್ ಅವರು ಸು. ೧೭೦೦ ಅಥವಾ ಅದರಿಂದೀಚೆಯೆಂದೂ,[12] ಪಂಡಿತ ಎಚ್. ಶೇಷಯ್ಯಂಗಾರ್ ಅವರು ಸು. ೧೭೫೦ ಎಂದೂ,[13] ಶ್ರೀ ಆರ್. ಎಸ್. ಪಂಚಮುಖಿಯವರು ಸು. ೧೪೦೦ ಎಂದೂ[14] ಮುಂತಾಗಿ ಅಭಿಪ್ರಾಯಗಳು ವ್ಯಕ್ತವಾಗಿವೆ. ಇವುಗಳಲ್ಲಿ ಕಡೆಯ ಅಭಿಪ್ರಾಯ ಕೆಲವು ಸ್ಪಷ್ಟವಾದ ಸೂಚನೆಗಳನ್ನು ಒಳಗೊಂಡಿದೆ. 'ಅಭಿನವ ಕೇಶಿರಾಜ'ನೆಂದು ತನ್ನನ್ನು ಕರೆದುಕೊಂಡಿರುವುದರಿಂದ ಕ್ರಿ. ಶ. ಸು. ೧೨೫೦–೬೦ರಿಂದೀಚೆಗೆ ಇದ್ದನೆಂಬುದು ಸ್ಪಷ್ಟ.

---

[9] ಅದೇ. ಪು. ix–x.

[10] ಕಕಚ., II, ಪು. 150 ; ಕವಿಜಿ,, (೧೯೫೨), ಪು. x.

[11] ಛಂದೋಂಬುಧಿ (ಮಂಗಳೂರು, ೧೮೭೫), ಇಂಗ್ಲಿಷ್ ಉಪೋದ್ಘಾತ, ಪು. ೬೧.

[12-13] AOR, Vol. III–Part 2, Preface, Vol. V–Part 1, p 18.

[14] ಕವಿಜಿ., (೧೯೫೦), ಪು, ix.

ಎಷ್ಟು ಈಚೆಗೆ ಎಂಬುದೇ ಪ್ರಶ್ನೆ. ವಡಿ ಸಂಖ್ಯೆಯ ನಿರ್ದೇಶನವಿರುವ ಒಂದು ಪದ್ಯದ (ಕವಿಜಿ., ೨–೨೦) ಆಧಾರದ ಮೇಲೆ, ತೆಲುಗು ಛಂದಶ್ಶಾಸ್ತ್ರಕಾರರಾದ ವಿನ್ನಕೋಟ ಪೆದ್ದನ (೧೩–೧೪ನೆಯ ಶ.) ಮತ್ತು ಅನಂತ ಕವಿ (ಈತನ 'ರಸಾಭರಣಮು' ಗ್ರಂಥದ ರಚನಾಕಾಲ: ೧೪೩೪–೩೫) ಇವರ ನಡುವಣ ಕಾಲದಲ್ಲಿ, ಎಂದರೆ ೧೫ನೆಯ ಶತಮಾನದ ಮಧ್ಯಭಾಗದಲ್ಲಿ, ಬಾಳಿರಬೇಕು– ಎಂಬುದಾಗಿ ಶ್ರೀ ಪಂಚಮುಖಿಯವರು ಅಭಿಪ್ರಾಯಪಟ್ಟಿರುತ್ತಾರೆ.[15] ವಿನ್ನಕೋಟ ಪೆದ್ದನನು ಸು. ೧೪೦೨/೧೪೦೭ ರಲ್ಲಿದ್ದಂತೆ ಈಚೆಗೆ ತಿಳಿದಿರುವುದರಿಂದ,[16] ಈಶ್ವರ ಕವಿ ೧೪೦೦ರಿಂದ ೧೪೩೫ರ ಒಳಗೆ, ಎಂದರೆ ೧೫ನೆಯ ಶ. ದ ಪೂರ್ವಾರ್ಧದಲ್ಲಿ ತನ್ನ ಗ್ರಂಥವನ್ನು ಬರೆದಿರಬಹುದು. ಬೇರೆ ಬೇರೆ ಲಕ್ಷಣಗ್ರಂಥಗಳಲ್ಲಿ ವಡಿ ಸಂಖ್ಯೆಯನ್ನು ಬೇರೆ ಬೇರೆಯಾಗಿ ಹೇಳಿರುವುದರಿಂದ, ಈಶ್ವರನು ಹೇಳಿರುವ ವಡಿ ಸಂಖ್ಯೆಯು (೨೦) ಯಾವ ಗ್ರಂಥದಲ್ಲಿ ನಿರ್ದೇಶಿತವಾಗಿದೆಯೆಂಬುದು ತಿಳಿಯದಿರುವುದರಿಂದ, ಮೇಲಿನ ಸೂಚನೆಯನ್ನು ಪ್ರಬಲವಾದ ಕಾರಣವೆಂದು ಪರಿಗಣಿಸಲಾಗದು.

ಕವಿಯ ಮತದ ವಿಚಾರವಾಗಿಯೂ ವಿದ್ವಾಂಸರಲ್ಲಿ ಭಿನ್ನಮತಗಳಿವೆ. ಕವಿಚರಿತೆಕಾರರು ಈತನು ಬ್ರಾಹ್ಮಣ ಕವಿಯಿರಬಹುದೆಂದೂ, ಮ. ಧಾ. ಪ್ರತಿಗಳ ಸಂಪಾದಕರು ವೀರಶೈವ ಕವಿಯೆಂದೂ, ಬೆಂ. ಪ್ರತಿಯ ಸಂಪಾದಕರು 'ವೀರಶೈವನೋ ಶೈವಬ್ರಾಹ್ಮಣನೋ ನಿರ್ಧರಿಸುವುದಕ್ಕೆ ಸಾಕಾದಷ್ಟು ಆಧಾರವಿಲ್ಲ' ಎಂದೂ ಬರೆದಿರುತ್ತಾರೆ. ಕವಿಚರಿತೆಕಾರರು ಕಾರಣಗಳನ್ನೇನೂ ಕೊಟ್ಟಿಲ್ಲ. ಮ. ಪ್ರತಿಕಾರರು ಗ್ರಂಥದಲ್ಲಿ ಪ್ರಾಸವಿಶೇಷಾದಿಗಳಿಗೆ ಕೊಟ್ಟಿರುವ ಲಕ್ಷ್ಯಗಳಿಂದ ಕವಿಯು ವೀರಶೈವನೆಂಬುದಾಗಿ ಗ್ರಹಿಸಿರುತ್ತಾರೆ; ಆದರೆ ಅವುಗಳಲ್ಲಿ ವೀರಶೈವ ಧರ್ಮದ ವಿಶಿಷ್ಟಾಂಶಗಳೇನೂ ಗೋಚರಿಸುವುದಿಲ್ಲ. ಧಾ. ಪ್ರತಿಕಾರರು ಮುಖ್ಯವಾಗಿ 'ಅಷ್ಟಸಿದ್ಧಿಕಡೆಯಾದ ನವಾವರಣಾದಿ ದೇವಿ. . .' (೧–೩) ಎಂಬ ಪದ್ಯಭಾಗದಿಂದ ಕವಿಯು ವೀರಶೈವನಿರಬೇಕೆಂದು ಭಾವಿಸುತ್ತಾರೆ. ಈ ಪದ್ಯ ಬೆಂ. ಪ್ರತಿಯಲ್ಲಿಲ್ಲದಿರುವುದರಿಂದ ಇದು ಖಚಿತ ಪ್ರಮಾಣವಾಗದು. ಆದರೆ ಕೃತಿಯನ್ನು ಒಟ್ಟು ನೋಟದಲ್ಲಿ ನೋಡಿದಾಗ ವೀರಶೈವ ವಾಙ್ಮಯದ ಪುನರುಜ್ಜೀವನ ಕಾಲದಲ್ಲಿ ಕೃತಿ ರಚನೆಮಾಡಿದ ವೀರಶೈವ ಕವಿಯಿರಬಹುದೆಂಬ ಭಾವನೆಗೆ ಆಸ್ಪದವಿರುವುದನ್ನು ಒಪ್ಪಬೇಕು.

ಗ್ರಂಥಾದಿಯ ಪದ್ಯದಲ್ಲಿ 'ನಿಡುವಣಿಗೊಡೆಯಂ ಕಲ್ಲಿನಾಥಾಖ್ಯಲಿಂಗಂ' ಎಂದಿರುವುದರಿಂದ, ಕವಿಯು ಬಿಜಾಪುರಜಿಲ್ಲೆಯ ನಿಡೋಣಿ (<ನಿಡುವಣಿ)

---

15 ಕವಿಜಿ., ಉ., ಪು. viii.

16 ವಿದ್ವಾನ್. ರಾವೂರಿ ದೊರಸಾಮಿಶರ್ಮ : ತೆಲುಗುಭಾಷಲೋ ಛಂದೋರೀತುಲು, ಪು. ೩೯೩.

ಯುವನ್ನೋ ಅಥವಾ ಹಾಸನ ಡಿಸ್ಟ್ರಿಕ್ಟಿನ ನಿಡುವಾಸಿಯುವನೋ ಆಗಿರಬೇಕೆಂಬುದಾಗಿ ಭಾವಿಸಲಾಗಿದೆ. ಥಾ. ಪ್ರತಿಕಾರರು ಮೊದಲಿನದನ್ನೂ ಬೆಂ. ಪ್ರತಿಕಾರರು ಈ ಯೆರಡನ್ನೂ ಸೂಚಿಸಿರುತ್ತಾರೆ. ಆದರೆ ಕಲ್ಲಿನಾಥೇಶ್ವರ ದೇವಾಲಯುವಿದ್ದ ಅಥವಾ ಇರುವ ನಿಡುವಣಿಯೊಂದರ ಗೊತ್ತು ದೊರೆತಾಗ ಮಾತ್ರವೇ ಈ ವಿಷಯುದಲ್ಲಿ ನಿರ್ಣಯು ಸಾಧ್ಯವಿದೆ.

'ಕವಿಜಿಹ್ವಾಬಂಧನ'ದಲ್ಲಿ ನಾಲ್ಕು ಆಶ್ವಾಸಗಳಿವೆ. ಗಣಗಳ ಸ್ವರೂಪ, ಅವುಗಳ ವಿಚಾರವಾಗಿರುವ ಬಗೆಬಗೆಯ ನಂಬಿಕೆಗಳು, ಅವುಗಳ ವಿವಿಧ ಯೋಜನೆಯ ಫಲಾಫಲಗಳು–ಇವು ಪ್ರಥಮಾಶ್ವಾಸದಲ್ಲಿಯೂ, ಪ್ರಾಸದ ಸ್ವರೂಪ, ಅವುಗಳ ಭೇದಗಳು ಮತ್ತು ವಡಿಯ ಸ್ವರೂಪ, ಅವುಗಳ ಭೇದಗಳು–ಇವು ದ್ವಿತೀಯಾಶ್ವಾಸದಲ್ಲಿಯೂ, ವರ್ಣಗಳ ಸ್ವರೂಪ, ಅವುಗಳ ವಿಚಾರವಾಗಿರುವ ಬಗೆಬಗೆಯ ನಂಬಿಕೆಗಳು, ಶುಭಾಶುಭ ಪದಪ್ರಯೋಗಗಳು–ಇವು ತೃತೀಯಾಶ್ವಾಸ ದಲ್ಲಿಯೂ, ಭಾಷೆಗೆ ಸಂಬಂಧಿಸಿ ಕನ್ನಡದ ಬಗೆಗಳು, ಅಲಂಕಾರಕ್ಕೆ ಸಂಬಂಧಿಸಿ ರಸಭಾವಾದಿಗಳು, ವ್ಯಾಕರಣಕ್ಕೆ ಸಂಬಂಧಿಸಿ ಸಂಧಿ ಸಮಾಸಾದಿಗಳು, ಸ್ಮರತಂತ್ರಕ್ಕೆ ಸಂಬಂಧಿಸಿ ಕಾಮಾಸ್ತ್ರಗಳು ಮೋಹಭೇದಗಳು–ಚತುರ್ಥಾಶ್ವಾಸದಲ್ಲಿಯೂ ಮುಖ್ಯ ವಿಷಯಗಳಾಗಿ ನಿರೂಪಿತವಾಗಿವೆ. ವಿಷಯ ನಿರೂಪಣೆಯಲ್ಲಿ ಇವು ಅಂಥ ಅಚ್ಚು ಕಟ್ಟಾದ ವಿಭಜನಾಕ್ರಮವಾಗಲಿ ಸಾಮಂಜಸ್ಯವಾಗಲಿ ಕಂಡುಬರುವುದಿಲ್ಲ. ಕವಿಗೆ ಸಂಕ್ಷೇಪದ ಕೌಶಲಕ್ಕಿಂತಲೂ ಸಂಗ್ರಹಣೆಯ ಆತುರ ವಿಶೇಷವಾಗಿ ಕಾಣುತ್ತದೆ. ಖಚಿತವಾದ ಶಾಸ್ತ್ರದೃಷ್ಟಿ ಅದಕ್ಕೆ ಆವಶ್ಯಕವಾದ ವ್ಯುತ್ಪತ್ತಿ ಕವಿಗೆ ಇದ್ದಂತೆ ತೋರುವುದಿಲ್ಲ. ದಿಟವಾಗಿ ೩ನೆಯ ಆಶ್ವಾಸ ಮೊದಲನೆಯ ಆಶ್ವಾಸವಾಗಿ ಬರಬೇಕಾಗಿದ್ದಿತು. ೧ನೆಯ ಆಶ್ವಾಸದ ೩೯ ರಿಂದ ೪೬ರ ವರೆಗಿನ ಪದ್ಯಗಳು ಅದೇ ಆಶ್ವಾಸದಲ್ಲಿ ೨೦ನೆಯ ಪದ್ಯವಾದ ಮೇಲೆ ಬರುವುದು ಉಚಿತವಾಗಿದ್ದಿತು. ೨ನೆಯ ಆಶ್ವಾಸದಲ್ಲಿ ಪ್ರಾಸವಡಿಗಳ ವಿಚಾರದ ನಡುವೆ ಯತಿಯ ಪ್ರಸ್ತಾಪ ವಿರಬಹುದಾಗಿದ್ದಿತು; ಇಲ್ಲಿಗೆ ಸೀಸಪದ್ಯದ ಲಕ್ಷಣ ಅನಗತ್ಯವಾಗಿದ್ದಿತು. ೩ನೆಯ ಆಶ್ವಾಸದಲ್ಲಿ ಪದ್ಯಗಳ ಅನುಕ್ರಮ ಅಷ್ಟು ಸರಿಯಾಗಿಲ್ಲ. ೪ನೆಯ ಆಶ್ವಾಸದಲ್ಲಿಯು ನಾನಾ ಸಂಗತಿಗಳಲ್ಲಿ ಯಾವುದೊಂದೂ ವಿಶದವಾಗಿ ನಿರೂಪಿತವಾಗಿರದೆ ಅಪ್ರಮುಖ ವಾದ ಸಂಗತಿಗಳು ಹರಕು ಮುರುಕಾಗಿ ಸೂಚಿತವಾಗಿವೆ. ಹೀಗಿದ್ದು ಕೂಡ ಒಂದೆರಡು ಪದ್ಯಗಳು (೩–೧೩, ೪–೧೨, ೧೩) ಬಂಧದಲ್ಲಿಯೂ ಭಾವದಲ್ಲಿಯೂ ಉತ್ತಮವಾದ ರಚನೆಗಳಾಗಿವೆ.

ಕವಿಜಿ.ದ ಮೊದಲ ಮೂರು ಆಶ್ವಾಸಗಳಲ್ಲಿ ಪ್ರಧಾನವಾಗಿ ಛಂದಶ್ಶಾಸ್ತ್ರದ ಸಂಜ್ಞಾಪ್ರಕರಣಕ್ಕೆ ಸಂಬಂಧಿಸಿದ ಹಲವು ವಿಷಯುಗಳು ತಕ್ಕಷ್ಟು ವಿವರವಾಗಿ ಬಂದಿರುವುದರಿಂದ, ಅದನ್ನು ಕನ್ನಡದಲ್ಲಿಯ ಛಂದೋಗ್ರಂಥಗಳ ಲೆಕ್ಕಕ್ಕೆ ಸೇರಿಸ ಬಹುದಾಗಿದೆ. ಆದರೆ ಕನ್ನಡ ಛಂದಸ್ಸಿನಲ್ಲಿ ಆವಶ್ಯಕವೂ ಉಪಯುಕ್ತವೂ ಆದ

ವೃತ್ತಲಕ್ಷಣಾದಿಯಾದ ಬೇರೆ ವಿವರಗಳಾವುವೂ ಇಲ್ಲಿ ನಿರೂಪಿತವಾಗಿಲ್ಲದಿರುವುದ ರಿಂದ ಪ್ರಾಯೋಗಿಕ ಛಂದಸ್ಸಿನ ದೃಷ್ಟಿಯಿಂದ ಈ ಗ್ರಂಥ ಅನುಪಯುಕ್ತವೇ ಸರಿ. ಛಂದೋಂಬುಧಿಯೊಡನಿಟ್ಟು ಹೋಲಿಸಿದರೆ ವಿಷಯ ಮತ್ತು ನಿರೂಪಣ ವಿಧಾನದಲ್ಲಿ ಇದರ ರೀತಿ ಬೇರೆಯಾಗಿಯೇ ತೋರುವುದಲ್ಲದೆ ಆ ಮಟ್ಟಿಗೆ ವೈಶಿಷ್ಟ್ಯಯುತವಾಗಿ ಗಣನೀಯವಾಗಿಯೂ ಇದೆ. ಈ ವಿಭಿನ್ನತೆಗೆ ಮುಖ್ಯವಾದ ಕಾರಣವೆಂದರೆ ಈ ಗ್ರಂಥವು ತೆಲುಗು ಛಂದೋಗ್ರಂಥಗಳ ಮಾದರಿಯಲ್ಲಿ ರಚಿತವಾಗಿರುವುದೇ ಆಗಿದೆ. ಭೀಮಕವಿ ಅನಂತಾಮಾತ್ಯ ಮೊದಲಾದವರ ತೆಲುಗು ಛಂದೋಗ್ರಂಥಗಳಲ್ಲಿ ಛಂದಸ್ಸನ್ನು ಪ್ರಧಾನವಾಗಿ ಕುರಿತಿದ್ದರೂ ವ್ಯಾಕರಣ ಅಲಂಕಾರ ಮುಂತಾದ ಇತರ ವಿಷಯಗಳನ್ನು ಅಷ್ಟಿಷ್ಟು ತಪ್ಪದೆ ಹೇಳಿರುವುದು ಕಂಡುಬರುತ್ತದೆ. ಛಂದೋಂಬುಧಿಯು ಕೇವಲ ಛಂದಸ್ಸನ್ನು ಮಾತ್ರ ಕುರಿತಿರುವುದೂ, ೨ನೆಯ ನಾಗವರ್ಮನು 'ಕಾವ್ಯಾವಲೋಕನ'ದಲ್ಲಿ ವ್ಯಾಕರಣ ಅಲಂಕಾರಗಳನ್ನು ಏಕತ್ರ ಹೇಳಿದ್ದರೂ 'ಛಂದೋವಿಚಿತಿ'ಯನ್ನು ಬೇರೆಯಾಗಿಯೇ ಗ್ರಥಿಸಿರಬೇಕೆಂದು ತೋರುವುದೂ ನೋಡಿದರೆ ಈಶ್ವರಕವಿಯು ಆಂಧ್ರಲಾಕ್ಷಣಿಕ ಮಾರ್ಗವನ್ನು ಅನುಸರಿಸಿ ತನ್ನ ಗ್ರಂಥವನ್ನು ಬರೆದಿರಬೇಕೆಂದು ತೋರುತ್ತದೆ. ವೇಮುಲವಾಡ ಭೀಮಕವಿಯ 'ಕವಿಜನಾಶ್ರಯಮು' ಮೊದಲಾದ ತೆಲುಗು ಛಂದೋಗ್ರಂಥಗಳ ಪ್ರತಿಪಾದನರೀತಿಯನ್ನೂ ವಿವರಗಳನ್ನೂ ಒಳಗೊಂಡಿರುವುದು, ತೆಲುಗಿಗೆ ವಿಶಿಷ್ಟವಾದ ವಡಿಯ ಸ್ವರೂಪ ಮತ್ತು ಅವುಗಳ ಭೇದಗಳನ್ನು 'ಆಂಧ್ರಮಾರ್ಗ' ದಲ್ಲಿರುವಂತೆ ವಿವರಿಸಿರುವುದು, ಸೀಸಪದ್ಯದ ಲಕ್ಷಣವನ್ನು ಅಲ್ಲಿಯ ಲಕ್ಷಣಕ್ಕನು ಸಾರವಾಗಿ ತಿಳಿಸಿರುವುದು–ಈ ಕಾರಣಗಳಿಂದ ಹಾಗೆ ಭಾವಿಸುವುದು ಸಾಧ್ಯ. ಆದರೆ ಪತ್ನಿಯನ್ನುದ್ದೇಶಿಸಿ ಗ್ರಂಥವನ್ನು ಹೇಳಿರುವುದು, ಗಣಾಕ್ಷರಗಳಿಗೆ ಧಾತ್ರ್ಯಾದಿ ಸಂಜ್ಞೆಗಳನ್ನು ಕೊಟ್ಟಿರುವುದು, ಪ್ರಾಸಭೇದಗಳನ್ನು ಛಂದೋಂಬುಧಿಗೆ ಅನುಸಾರ ವಾಗಿ ಹೇಳಿರುವುದು ಮತ್ತು ಆ ಸಂಬಂಧವಾಗಿ ಅಲ್ಲಿಯ ಪದ್ಯಗಳನ್ನೇ ಉದ್ಧರಿಸಿ ರುವುದು–ಈ ಕಾರಣಗಳಿಂದ ಈಶ್ವರಕವಿ ಛಂದೋಂಬುಧಿಯನ್ನೂ ನೋಡಿರಬಹು ದೆಂದು ಭಾವಿಸಬಹುದು. ಹಾಗೆಯೇ 'ಅಭಿನವ ಕೇಶಿರಾಜ' ಎಂಬ ನಚ್ಚಿನ ಬಿರುದನ್ನು ಧರಿಸಿರುವುದರಿಂದಲೂ 'ಶಬ್ದಮಣಿದರ್ಪಣ'ದ ಎರಡು ಸೂತ್ರಗಳನ್ನು (೨–೪೦, ೪೪) ಯಥಾನುವಾದ ಮಾಡಿರುವುದರಿಂದಲೂ ಆ ಗ್ರಂಥವೂ ಆತನಿಗೆ ಪರಿಚಿತವೇ ಇರಬಹುದು. ಆದರೆ ಹೀಗೆಯೇ 'ಕವಿರಾಜಮಾರ್ಗ'ವನ್ನು ಕೂಡ ಬಳಸಿಕೊಂಡನೇ ಇಲ್ಲವೇ ಎಂಬುದನ್ನು ತಿಳಿಯುವುದಕ್ಕೆ ತಕ್ಕ ಆಧಾರಗಳಿಲ್ಲ.

ಭೀಮಣ ಮುಖ್ಯರು ನಿರ್ದೇಶಿಸಿರುವ ಸ್ಥಳಗಳಲ್ಲಿ ವಡಿಯು ಬರುತ್ತದೆಂದು ಒಂದು ಪದ್ಯದಲ್ಲಿ ಹೇಳಿರುವುದರಿಂದ (೨–೨೦), ಈಶ್ವರಕವಿಗೆ 'ಕವಿಜನಾಶ್ರ ಯಮು' ಮತ್ತು ಅದರೀಚೆಯ ಕೆಲವು ಛಂದೋಗ್ರಂಥಗಳ ಪರಿಚಯವಿದ್ದಿರ ಬೇಕೆಂದು ತಿಳಿಯುತ್ತದೆ. ಹೋಲಿಸಿ ನೋಡಿದರೆ, ಕವಿಜ, ಮತ್ತು ಕವಿಜಿ,

ಇವುಗಳ ನಡುವೆ ಕೆಲವು ಕಡೆ ಸ್ಪಷ್ಟವಾದ ಹೋಲಿಕೆಗಳು ಕಾಣುತ್ತವೆ. ಮೂಲವನ್ನು ಅನುವಾದಿಸಿದಂತೆ ತೋರುವ ನಿದರ್ಶನಗಳು ಕಡಮೆ; ಹೆಚ್ಚಿನ ಕಡೆಗಳಲ್ಲಿ ಪದ್ಯದ ಚೌಕಟ್ಟಿನಲ್ಲಿ ಕಾಣುವಷ್ಟು ಮಟ್ಟಿನ ಅನುಸರಣೆ, ವಿಷಯ ಪ್ರತಿಪಾದನೆಯಲ್ಲಿಲ್ಲ. ಇಲ್ಲೆಲ್ಲ ಬೇರೆ ಗ್ರಂಥಗಳನ್ನು ಅನುಸರಿಸಿರಬಹುದೆಂದು ಹೇಳಬೇಕಾಗುವುದು.

'ಕವಿಜನಾಶ್ರಯಮು' (ಸು. ೧೦೮೭–೧೧೫೦) ಮತ್ತು 'ಕವಿಜಿಹ್ವಾಬಂಧನ' ಈ ಎರಡರಲ್ಲಿ ಹೋಲಿಕೆಗಳೇನಿದ್ದರೂ ಸಂಜ್ಞಾಪ್ರಕರಣಗಳಲ್ಲಿಯೇ ದೊರೆಯಬೇಕಾಗಿದೆ. ಕೆಲವು ಉದಾಹರಣೆಗಳನ್ನು ನೋಡಬಹುದು :[17]

| | ಕವಿಜನಾಶ್ರಯಮು | ಕವಿಜಿಹ್ವಾಬಂಧನ |
|---|---|---|
| ೧. | ..."ಕರ್ತ ಮಂಡಲಮೇಲುನ್" (ಸಂ. ೪೧) | "....ಕಾವ್ಯಕರ್ತರ್ಗೆ ರಾಜ್ಯವನಾಳ್ಗುಂ" (೧-೩೧) |
| ೨. | ...."ಭೀಕರಂಪು ರಣಮೊನರಿಂಚುನ್" (ಸಂ. ೪೯) | "....ಘೋರರಣಮಂ ಮಾಳ್ಕುಂ" (೧-೫೫) |
| ೩. | ಸಭಲಂ ಜೆಪ್ಪಿನ ವಿಭವಮು<br>ರಭಲಂ ಜೆಪ್ಪಿನನು ಜೆಟ್ಟ ರಯುಮುನ ವಚ್ಚುನ್ ।<br>ಶುಭಮುಗು ರಯಲಂ ಜೆಪ್ಪಿನ<br>ನುಭಯಮು ವರ್ಧಿಲ್ಲುನಂದು<br>ರುತ್ತಮಚರಿತಾ । (ಸಂ. ೪೬) | ಸಭಗಣಮೆರಡಿರೆ ಶುಭದಂ<br>ರಭಗಣ ಮಿಡಲಶುಭ ಹಾನಿ ರಯಗಣ ಮಿಡೆ ತಾಂ ।<br>ಶುಭಮಕ್ಕುಂ ಜಯಗಣಗಳೊ<br>ಳುಭಯಕ್ಕಂ ಹಾನಿಯಕ್ಕುಕೇಳ್ ಕಮಲಮುಖೀ ॥[18]<br>(೧-೨೬) |
| ೪. | ಅಗಿನಿಗಣಂಬುನ ಕಿರುದೆಸ<br>ಸಗಣಮುತೋ ಗೂರ್ಚಿ ಚೆಪ್ಪ ಸತ್ಕವಿ-ಮದಿಲೋ ।<br>ನಗಿಯ್ಯೆನ ದಿಟ್ಟಯ್ಯೆನನು<br>ಬಗನಮು ಗಾಕುಂಡ ಕಮಲ ಭವುಡೋ ಶಿವುಡೋ ॥<br>(ಸಂ. ೫೦) | ಅಗಿನಿಗಣದೆಡಬಲಂಗಳೊ<br>ಳಗಣಿತಮೆನೆ ವಾಯುಗಣಮನಿಡೆ ಪದಪದ್ಯ ।<br>ಕ್ಕೊಗೆಗುಂ ಮರಣಂ ಪತಿಗಂ<br>ಬಗೆಯಲ್ವಿಧಿ ವಿಷ್ಣುರುದ್ರರಾರುಂ ಕಾಯರ್ ॥<br>(೧-೨೮) |

---

[17] ಸಂ. ಜಯಂತಿ ರಾಮಯ್ಯ : ಕವಿಜನಾಶ್ರಯಮು (೧೯೩೨)-ಈ ಪ್ರತಿಯನ್ನು ಬಳಸಿದೆ.

[18] ಈ ಪದ್ಯದಲ್ಲಿ ಕೆಲವುಮಟ್ಟಿಗೆ ವೈದೃಶ್ಯವೂ ಇರಬಹುದು : ಹೆಚ್ಚು ವಿಷಯವನ್ನೂ ಕುರಿತಿದೆ.

೫. ಏಗಣಮು ಗದಿಸೆ ನಗಣಂ
ಬಾಗಣಮು ಸಮಸ್ತಮಂಗಳಾ
ವಾಪ್ತಂ ಬೈ
ರಾಗಿಲ್ಲು ನಿನುಮು ಪರುಸಪು
ಯೋಗಂಬುನ ಬಸಿಡಿವನ್ನೆ ನೂನಿನ-
ಕರಣಿನ್ ‖[19]
(ಸಂ. ೫೧)

ಪರುಸಂ ಸೋಂಕಿದ ಕರ್ಬುನ
ದಿರುವುಂ ಪೊಸತಪ್ಪನಿಸುನಿಯಪ್ಪಂತಕ್ಕುಂ
ಸುರಗಣದ ಮುಂದೆ ದುಷ್ಪೋ
ತ್ಕರಗಣಮಿಡೆ ಶುಭಮದಕ್ಕು
ಘುಟಕುಚಯುಗಳೇ ‖
(೧-೩೮)

'ಆಂಧ್ರಶಬ್ದಚಿಂತಾಮಣಿ' (ಸು. ೧೦೨೨-೬೩), 'ಅಥರ್ವಣಚ್ಛಂದಮು' (೧೨ನೆಯ ಶ.), 'ಕವಿವಾಗ್ಬಂಧನಮು' (ತಿಕ್ಕನಕೃತ), 'ಲಕ್ಷಣ ದೀಪಿಕ' (೧೩೮೫-೧೪೪೫), 'ಕಾವ್ಯಾಲಂಕಾರ ಚೂಡಾಮಣಿ' (೧೪೦೨-೧೪೦೭), 'ಕವಿಗಜಾಂಕುಶಮು' (೧೪೧೦-೧೪೬೦), 'ಛಂದೋದರ್ಪಣಮು' (೧೪೩೫), 'ಕವಿಸರ್ಪಗಾರುಡಮು' (೧೪೮೦-೧೫೩೦), 'ಕವಿಚಿಂತಾಮಣಿ' ೧೪೮೦-೧೫೨೦), 'ಲಕ್ಷಣಸಾರಸಂಗ್ರಹಮು' (೧೫೫೦)—ಮೊದಲಾದ ಕೆಲವು ತೆಲುಗು ಲಕ್ಷಣಗ್ರಂಥಗಳಲ್ಲಿ ವರ್ಣಗಳ ಸ್ವರೂಪ, ವರ್ಣ ಮತ್ತು ಗಣಗಳ ವಿಚಾರವಾದ ನಂಬಿಕೆಗಳು ಶುಭಾಶುಭ ಫಲಗಳು ಮೊದಲಾದ ವಿಷಯಗಳು ನಿರೂಪಿತವಾಗಿರುವಂತೆ ತಿಳಿಯುವುದರಿಂದ,[20] ಈಶ್ವರ ಕವಿಯ ಕಾಲದಲ್ಲಿಯೇ ರಚಿತವಾದವು ಕೆಲವಿರುವುದರಿಂದ, ಇವುಗಳಿಂದಲೂ ಕೆಲವು ವಿಷಯಗಳನ್ನು ಎತ್ತಿಕೊಂಡಿರಬಹುದು. ವಿನ್ನಕೋಟ ಪೆದ್ದನನ 'ಕಾವ್ಯಾಲಂಕಾರ ಚೂಡಾಮಣಿ', ಅನಂತಕವಿಯ 'ಛಂದೋದರ್ಪಣಮು', ಚಿತ್ರಕವಿ ಪೆದ್ದನನ 'ಲಕ್ಷಣಸಾರ ಸಂಗ್ರಹಮು'—ಇವುಗಳೊಡನೆ ತುಲನೆಮಾಡಿ ನೋಡಿದ್ದರಲ್ಲಿ, ಸಂಗತಿಗಳ ಸಾದೃಶ್ಯ ಅಲ್ಲಲ್ಲಿ ಕಂಡುಬಂದರೂ ಅವುಗಳನ್ನು ನೇರವಾಗಿ ಅನುವಾದಿಸಿರುವನೆಂದೂ ಅನುಸರಿಸಿರುವನೆಂದೂ ತಿಳಿಯುವುದಕ್ಕೆ ತಕ್ಕ ಪ್ರಮಾಣಗಳು ದೊರೆಯಲಿಲ್ಲ. ಈ ಮೇಲಿನ ಕೆಲವು ಕೃತಿಗಳು ಮುದ್ರಿತವಿವೆ, ಕೆಲವು ಅಮುದ್ರಿತವಿವೆ. ಇವಲ್ಲದ ಕೆಲವು ಕೃತಿಗಳಿಗೆ ಕಾಲ ಮತ್ತು ಕರ್ತೃಗಳ ವಿಚಾರ ಸರಿಯಾಗಿ ತಿಳಿಯದು. ಹೀಗಿರುವಾಗ ಈಶ್ವರಕವಿ ಯಾವ ಕೃತಿ ಅಥವಾ ಕೃತಿಗಳನ್ನು ಅನುಸರಿಸಿರುವನು ಎಂಬುದರ ಪರಿಶೀಲನೆ ಮುಂದೆ ಆಗಬೇಕಾಗಿದೆ. ತೆಲುಗಿನಲ್ಲಿ ಕಾಕುನೂರಿ ಅಪ್ಪಕವಿ ವಿರಚಿತವಾದ ಪ್ರಸಿದ್ಧ ಲಕ್ಷಣಗ್ರಂಥವಾದ 'ಅಪ್ಪಕವೀಯಮು' ಶಾ.ಶ. ೧೫೭೮-(ಕ್ರಿ.ಶ.೧೬೫೬) ರಲ್ಲಿ ರಚಿತವಾಗಿರುವಂತೆ ಖಚಿತವಾಗಿ ಅದೇ ಗ್ರಂಥದಲ್ಲಿ ಆಧಾರವಿರುವುದರಿಂದ[21]

---

19 ಇಲ್ಲಿಯ ಪದ್ಯಗಳ ಮತ್ತು ಪದ್ಯಭಾಗಗಳಲ್ಲಿಯ ಉಚಿತಸ್ಥಳಗಳಲ್ಲಿ ಅರ್ಧಾನುಸ್ವಾರಗಳನ್ನು ಯೋಜಿಸಿಕೊಳ್ಳಬೇಕು.

20 ತೆಲುಗು ಭಾಷಲೋ ಛಂದೋರೀತುಲು, ಪು. 392–395.

21 'ಅಪ್ಪಕವೀಯಮು', ವಾವಿಳ್ಳ ಮುದ್ರಣ (೧೯೬೭), ಪೀಠಿಕ, ಪ. ೯೭.

ಬಲುಮಟ್ಟಿಗೆ ಆತನಿಗೆ ಪೂರ್ವದಲ್ಲಿದ್ದಿರಬಹುದಾದ ಈಶ್ವರಕವಿ ಅದನ್ನು ನೋಡಿರ ಬಹುದೆಂದು ಭಾವಿಸುವುದು ಸರಿಯಾಗದು. ಅಲ್ಲದೆ ಹೋಲಿಸಿ ನೋಡಿದರೆ ಸಾಮ್ಯಗಳಿಗಿಂತ ವೈಷಮ್ಯಗಳೇ ಮಿಗಿಲಾಗಿ ಗೋಚರವಾಗುತ್ತವೆ (ಉದಾ : ಗಣಾಧಿ ದೇವತೆಗಳು, ಕುಲ ಮತ್ತು ವರ್ಣಾದಿಗಳು ಇವನ್ನು ನೋಡಬಹುದು.)

ಈಶ್ವರಕವಿ ತನ್ನ ಗ್ರಂಥರಚನೆಗಾಗಿ ಸಂಸ್ಕೃತ ಗ್ರಂಥಗಳು ಯಾವುವನ್ನಾ ದರೂ ನೋಡಿರಬಹುದೇ ?–ಎಂಬುದು ಕೂಡ ಪರಿಶೀಲನಾರ್ಹವಾದುದು. ಪಿಂಗಲ ಜಯದೇವಾದಿ ಪೂರ್ವಾಚಾರ್ಯರ ಗ್ರಂಥಗಳಲ್ಲಿ ಈಶ್ವರಕವಿಯ ಗ್ರಂಥದಲ್ಲಿರುವಂತಹ ವಿಷಯವಿವೇಚನೆಯೇ ಕಂಡುಬರುವುದಿಲ್ಲ ಎಂಬುದರಿಂದಾಗಿ ಆ ಸಾಧ್ಯತೆ ಕಡಮೆ. ಆದರೆ ಅರ್ವಾಚೀನಕಾಲದ ಸಂಸ್ಕೃತ ಛಂದೋಗ್ರಂಥಗಳಲ್ಲಿ ಇಂತಹುದಕ್ಕೆ ಅವಕಾಶ ದೊರೆತಿರುವಂತೆ ಕಾಣುತ್ತದೆ. ಅಮುದ್ರಿತವೂ ಅಸಮಗ್ರವೂ ಆದ, ಅಜ್ಞಾತಕಾಲ ಕರ್ತೃಕವೂ ಆದ 'ಕವಿಕಂಠಪಾಶ' ದೊಡನೆ ಕವಿಜಿ, ವನ್ನು ಹೋಲಿಸಿದಾಗ ಹೋಲಿಕೆಗೆ ಹೆಚ್ಚು ವಿಷಯ ಕಂಡುಬಂದಿಲ್ಲ. ಮುಪ್ರತಿಯ ಸಂಪಾದಕರು ಸ್ವಲ್ಪ ಮಟ್ಟಿಗೆ ಇದನ್ನು ಗುರುತಿಸುವ ಪ್ರಯತ್ನಮಾಡಿದ್ದಾರೆ.[22] ಈಯೆರಡು ಗ್ರಂಥಗಳ ನಾಮಸಾಮ್ಯವು ಹಾಗಿರಲಿ, ಕವಿಜಿ., ದ ಪ್ರತ್ಯಂತರಗಳಲ್ಲಿ ಈ ಗ್ರಂಥದ ಶ್ಲೋಕ ಗಳನ್ನು ಅನುವಾದಿಸಿರುವ ಹಾಗೆ ಕೆಲವೆಡೆ ತೋರುತ್ತದೆ.[23] ಆದರೆ ಆ ಪದ್ಯಗಳನ್ನು ಬೆಂ. ಪ್ರತಿಯ ಸಮಾನವಿಷಯಗಳ ಪದ್ಯಗಳೊಡನೆ ಹೋಲಿಸಿದರೆ ಅವೆರಡರಲ್ಲಿಯ ಪದ್ಯಗಳು ತೀರ ಬೇರೆ ಬೇರೆಯೆಂಬಂತೆ ತೋರುತ್ತವೆ. ಈ ಕಾರಣದಿಂದ ಕವಿಜಿ.,ವು 'ಕವಿಕಂಠಪಾಶ' ವನ್ನು ಎಷ್ಟರಮಟ್ಟಿಗೆ ಅನುಸರಿಸಿದೆಯೆಂದು ತಿಳಿಯುವುದಕ್ಕೆ ಸಾಧ್ಯವಿಲ್ಲ. ಇದಕ್ಕಿಂತ ಮುಖ್ಯವಾದದ್ದೆಂದರೆ 'ಕವಿಕಂಠಪಾಶ'ದ ಕಾಲವೇ ಅನಿರ್ಣೀತವಾಗಿದೆ. ಕವಿಜಿ., ದಲ್ಲಿ ಗಣಾಷ್ಟಕವು ಶಿವನ ಅಷ್ಟತನುಗಳೆಂದು ಹೇಳುವ 'ಧರೆ ಜಲವನಲಾನಿಲ....' (೧-೧೮) ಎಂಬ ಪದ್ಯವು ಕವಿಕಂ.,ದ 'ಭೂಜಲ ವಹ್ನಿಸಮೀರಣ....' (೯ ಶ್ಲೋ.) ಎಂಬ ಶ್ಲೋಕದ ಅನುವಾದವಿದ್ದರೂ ಇರ ಬಹುದು. ಸಂಸ್ಕೃತ ಗ್ರಂಥವು ಪೂರ್ತಿ ದೊರೆತು ಅದರ ಚರಿತ್ರೆ ಸರಿಯಾಗಿ ತಿಳಿದಾಗ ಹೆಚ್ಚು ಸಂಗತಿಗಳು ಹೊರಪಡುವುದು ಸಾಧ್ಯ.

ಈಗ 'ಕವಿಜಿಹ್ವಾಬಂಧನ'ದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳ ಬಗೆಗೆ, ಕೆಲವಂಶಗಳ ಮಟ್ಟಿಗೆ, ಪರಿಶೀಲಿಸಬಹುದು. ಗ್ರಂಥದ ಪ್ರಥಮಾಶ್ವಾಸವು ಗಣ ವಿವೇಕವನ್ನು ಕುರಿತದ್ದಾಗಿದೆ. ಮರ, ಮತ, ಯಸ, ಯರ, ಯತ, ಜಸ, ತಯ, ಸರಸ, ರಭ, ಜಯ, ತಮ, ತನ, ರರ, ಸಸ, ಜಜ, ತತ, ಭಜ, ಭಸ, ಭತ, ಜಯಸ–ಈ ರೀತಿಯಾದ ಗಣವಿನ್ಯಾಸದಿಂದ ಯಾವುದೇ ವೃತ್ತವನ್ನು ಆರಂಭ ಮಾಡಿದರೆ ಕೃತಿಕರ್ತೃವಿಗೆ ಅದರಿಂದ ನಾನಾರೀತಿಯ ಅಶುಭಗಳುಂಟಾಗುತ್ತವೆ

---

[22]–[23] Aor vol. IV–Part I 50–51 ; ಅದೇ, P. 54–55.

ಯೆಂದೂ, ಮಜ, ಮಸ, ಯಮ, ಯಜ, ಸಮ, ಸಭ, ರಯ, ಜಸ, ತಜ, ತರ, ರಜರ, ಭತ, ಭಮ, ಜತ, ಜಮ, ನ ಮತ್ತು ಇತರ ಯಾವುದೇ ಗಣ–ಈ ರೀತಿ ಯಾದ ಗಣವಿನ್ಯಾಸದಿಂದ ಯಾವುದೇ ವೃತ್ತವನ್ನು ಆರಂಭಮಾಡಿದರೆ ಕೃತಿ ಕರ್ತೃವಿಗೆ ನಾನಾರೀತಿಯ ಶುಭಗಳುಂಟಾಗುತ್ತವೆಯೆಂದೂ ನಿರೂಪಿಸಲಾಗಿದೆ. ಕಾವ್ಯಾದಿಯಲ್ಲಿಯ ಪ್ರಥಮ ಪದ್ಯದ ಮೊದಲೆರಡು ಗಣಗಳಿಗೆ ಮಾತ್ರ ಈ ವಿಧಿ ನಿಷೇಧಗಳು ಅನ್ವಯಿಸುವುದೆಂಬುದಾಗಿ ತೆಲಗು ವಿದ್ವಾಂಸರು 'ಆಂಧ್ರ ಶಬ್ದ ಚಿಂತಾಮಣಿ' ಮುಂತಾದ ಲಕ್ಷಣಗ್ರಂಥಗಳ ಉಲ್ಲೇಖಗಳ ಮೂಲಕವಾಗಿ ಭಾವಿಸಿರುತ್ತಾರೆ.[24] ಕವಿಜಿ.,ದಲ್ಲಿ ಗಣ ವಿವೇಕ ನಿರೂಪಣದಲ್ಲಿ ಹೀಗೆ ತಿಳಿಯು ವುದಕ್ಕೆ ತಕ್ಕ ಸೂಚನೆಗಳಿಲ್ಲವಾದರೂ, ತೃತೀಯಾಶ್ವಾಸದಲ್ಲಿ ಇದೇ ರೀತಿಯ ಬೇರೆ ಕೆಲವು ನಿಷೇಧಗಳನ್ನು ಸೂಚಿಸುವಾಗ "ನಾಂದೀಪದದೊಳ್" "ಪಲ್ಲವಿಪದದೊಳ್" ಎಂದಿರುವುದರಿಂದ,[25] ಹಾಗೆ ಭಾವಿಸುವುದಕ್ಕೆ ಅವಕಾಶವಿದೆ. 'ನಂದಿ ಛಂದಸ್ಸಿ' ನಲ್ಲಿ "ಪಲ್ಲವದೊಳ್ ಪದದೊಳ್" ಎಂದಿರುವಲ್ಲಿಯೂ[26] ಕೃತಿಯ ಆರಂಭ ಪದ್ಯ ವನ್ನೆ ಕುರಿತಿರುವಂತೆ ತೋರುತ್ತದೆ. ಈ ರೀತಿಯಾದ ನಂಬಿಕೆಗಳನ್ನಿಟ್ಟುಕೊಂಡು ದೇಶ ಭಾಷಾಕವಿಗಳಾಗಲಿ ಸಂಸ್ಕೃತ ಕವಿಗಳಾಗಲಿ ಕೃತಿರಚನೆಗೆ ತೊಡಗುತ್ತಿದ್ದರೇ ಎಂಬುದು ವಿಚಾರಾರ್ಹವಾಗಿದೆ. ಶುಭಫಲಾವಹವಾದ ಗಣವಿನ್ಯಾಸವನ್ನುಳ್ಳ ರಚನೆಗಳನ್ನು ನಾವು ಅಷ್ಟಾಗಿ ಗಮನಿಸಬೇಕಾದುದಿಲ್ಲ; ಕೃತಿಕರ್ತೃವಿಗೆ ಮತ್ತು ಕೃತಿಭರ್ತೃವಿಗೆ ನಾನಾರೀತಿಯ ಕೇಡುಗಳನ್ನೂ ದುರ್ಮರಣವನ್ನೂ ತರುವುದೆಂದು ಭಾವಿಸಲಾಗಿರುವ ಗಣಯೋಜನೆಗಳ ರಚನೆಗಳನ್ನಷ್ಟೇ ಪರಿಶೀಲಿಸಿದರೆ ಸಾಕು. ಸಂಸ್ಕೃತದಲ್ಲಿ ಭರತ ಪಿಂಗಲ ಜಯದೇವಾದ್ಯರಾದ ಪೂರ್ವಾಚಾರ್ಯರೂ ಕನ್ನಡದಲ್ಲಿ ನಾಗವರ್ಮನೂ ತಂತಮ್ಮ ಗ್ರಂಥಗಳಲ್ಲಿ ಇಂತಹ ನಿಷಿದ್ಧ ಗಣಯೋಜನೆಗಳಿಂದ ತೊಡಗುವ ಹಲವಾರು ವೃತ್ತಗಳನ್ನು ಲಕ್ಷಣಿಸಿರುತ್ತಾರೆ. ಜಲೋದ್ಧತಗತಿ, ಪೃಥ್ವೀ, ಇಂದ್ರವಜ್ರಾ, ಲಯಗ್ರಾಹಿ, ಇಂದ್ರವಂಶಾ, ಸ್ರಗ್ವಿಣೀ, ತೋಟಕ, ಮಾಣವಕ, ಸಾಂದ್ರಪದ, ವನಮಯೂರ, ಲಲಿತವೃತ್ತ–ಮುಂತಾದ ಅನೇಕ್ಕೋ ವೃತ್ತಗಳನ್ನು ಉದಾಹರಿಸಬಹುದು. ಇವನ್ನು ಕನ್ನಡ ಕವಿಗಳು ಕೃತಿಯ ಆರಂಭ ಪದ್ಯಕ್ಕೆ ಬಳಸಲಿಲ್ಲ ಎಂದಿಟ್ಟುಕೊಳ್ಳಬಹುದು; ಆದರೆ ನಿಷಿದ್ಧಗಣಗಳ ವ್ಯೂಹದಲ್ಲಿ ಮೊದಲಲ್ಲೆ ಉಕ್ತವಾಗಿರುವ ಮಗಣ ರಗಣಗಳಿಂದ ತೊಡಗುವುದಾದ ಸ್ರಗ್ಧರೆ ಯಾದರೋ ಕನ್ನಡ ಕಾವ್ಯಪ್ರಪಂಚದಲ್ಲಿ ಚಿರಪರಿಚಿತವಾದ ವೃತ್ತಗಳಲ್ಲಿ ಒಂದಾಗಿದ್ದು ಅದೇ ಹಲವು ಕನ್ನಡ ಕಾವ್ಯಗಳ ಆರಂಭಪದ್ಯದಲ್ಲಿ ಪ್ರಯೋಗವಾಗಿದೆ. ನಾಗವರ್ಮ I, ರನ್ನ, ನೇಮಿಚಂದ್ರ, ಕಮಲಭವ, ಹರಿಹರ, ಸೋಮರಾಜ,

---

24 ತೆಲುಗು ಭಾಷಲೋ ಛಂದೋರೀತುಲು, ಪು. ೪೮–೪೯.

25 ಸಂ. ಎ. ಆರ್. ಕೃ: ಕವಿಜಿ., ೩–೩೧, ೩೩.

26 ಸಂ. ಮಂ. ಅ. ರಾ: ನಂದಿ ಛಂದಸ್ಸು, ಪು. ೩೨.

ಷಡಕ್ಷರಿ—ಮೊದಲಾದ ಹಲವರ ಕಾವ್ಯಗಳನ್ನು ಉದಾಹರಿಸಬಹುದು. ಆದ್ದರಿಂದ ಶುಭಾಶುಭಗಣ ವಿವೇಚನೆಯ ವಿಧಿನಿಷೇಧಗಳ ಕಟ್ಟಳೆಯೊಂದು ಸಾಂಪ್ರದಾಯಿಕ ವಾಗಿ ಯಾವುದೇ ಭಾಷೆಯಲ್ಲಿ ಎಷ್ಟೇ ನಿಷ್ಠುರವಾಗಿ ನಿರೂಪಿತವಾಗಿದ್ದರೂ[27] ಕನ್ನಡ ಕವಿಗಳು ಅದನ್ನು ಲಕ್ಷಿಸಲಿಲ್ಲ ಎಂಬುದು ನಿಶ್ಚಯ. ಅದಿರಲಿ, 'ವದತೋ ವ್ಯಾಘಾತವಮ್' ಎಂಬಂತೆ ಶಾಸ್ತ್ರಕರ್ತನಾದ ಕವಿಜಿ, ಕರ್ತೃವಾದ ಈಶ್ವರ ಕವಿಯೇ ತನ್ನ ಗ್ರಂಥವನ್ನು ಸ್ರಗ್ಧರಾ ವೃತ್ತದಿಂದ ಮೊದಲುಮಾಡಿದ್ದಾನೆ, ಎಂದಮೇಲೆ ಈ ವಿಧಿನಿಷೇಧಗಳು ಔಪಚಾರಿಕವೆಂದಂತಾಯಿತು! ಇದರಿಂದಾಗಿಯೇ ಏನೋ ಪಿಂಗಲ ಜಯದೇವ ಜಯಕೀರ್ತಿ ಮೊದಲಾದವರು, ಆದ್ಯರಾದವರು, ಇದರ ಗೊಡವೆಗೇ ಹೋಗಿಲ್ಲದಿರಬಹುದು.[28] ಇದು ಹೇಗಿದ್ದರೂ, ಇಂತಿಂತಹ ಗಣ ಯೋಜನೆಗಳು ಇಂತಿಂತಹ ಫಲಗಳನ್ನು ಕೊಡುತ್ತವೆಯೆಂಬುದಕ್ಕೆ ಆಧಾರ ಗಳೇನೋ, ಇಂಥ ನಂಬಿಕೆಗಳು ಹೇಗೆ ಹುಟ್ಟಿಕೊಂಡವೋ, ಹೇಗೆ ಲಕ್ಷಣ ಗ್ರಂಥ ಗಳಲ್ಲಿ ಪ್ರಚಲಿತವಾದುವೋ, ಕವಿಗಳು ಇವಕ್ಕೆ ಎಷ್ಟರಮಟ್ಟಿಗೆ ಬೆಲೆಕೊಟ್ಟರೋ— ಇವನ್ನು ಸರಿಯಾಗಿ ವಿವರಿಸುವುದು ಕಷ್ಟ. ಛಂದೋಗ್ರಂಥಗಳಲ್ಲಿ ವೃತ್ತ ಪಾದಾದಿಯ ಶುಭಾಶುಭ ಗಣಯೋಜನೆಗಳು ಇಂಥವೆಂಬ ವಿಷಯದಲ್ಲಿ ಕೆಲವೊಮ್ಮೆ ಸಮಾನತೆಯಿದ್ದರೆ, ಮತ್ತೆ ಕೆಲವೊಮ್ಮೆ ವ್ಯತ್ಯಾಸಗಳೂ ವೈಪರೀತ್ಯಗಳೂ ಗೋಚರ ವಾಗುವುದರಿಂದ ಇಂತಹ ನಂಬಿಕೆಗಳಿಗೆ ಭದ್ರವಾದ ತಳಹದಿಯಿದ್ದಂತೆ ತೋರುವು ದಿಲ್ಲ. ಈ ಮಾತು ಗಣದೈವತಗಳು ಕುಲಗಳು ವರ್ಣಗಳು ಮುಂತಾದವುಗಳಿಗೂ ಅನ್ವಯಿಸುತ್ತದೆ.

ದ್ವಿತೀಯಾಶ್ವಾಸದಲ್ಲಿ ಮುಖ್ಯವಾಗಿ ಪ್ರಾಸ ಮತ್ತು ವಡಿಗಳ ವಿಚಾರವನ್ನು ಪ್ರಸ್ತಾಪಿಸಿದೆ. ಹರಿ ಕರಿ ಮೊದಲಾದ ಷಟ್ಪ್ರಾಸಭೇದಗಳನ್ನು ನಾಗವರ್ಮನನ್ನು ಅನುಸರಿಸಿ ಹೆಸರಿಸಿದ್ದರೂ, ಅವುಗಳನ್ನು ಲಕ್ಷ್ಯಲಕ್ಷಣಯುತವಾಗಿ ವಿವರಿಸಿರುವ ಪದ್ಯಗಳನ್ನು ಸ್ವಂತವಾಗಿ ಬರೆದಿರುವಂತೆ ತೋರುತ್ತದೆ. ಆದರೆ ಇಲ್ಲಿಯ ಪದ್ಯಗಳ ಶೈಲಿ ಮತ್ತು ಲಕ್ಷ್ಯಲಕ್ಷಣವಿಮಿಶ್ರವಿಧಾನ ಇವು ಕವಿರಾಜಮಾರ್ಗ ಛಂದೋಂಬುಧಿ ಗಳನ್ನು ಹೋಲದೆ ತೆಲುಗಿನ 'ಕವಿಜನಾಶ್ರಯಮು' ಎಂಬುದರೊಡನೆ ಚೆನ್ನಾಗಿ ಹೋಲುವುದರಿಂದ ಅದನ್ನು ಅನುಕರಿಸಿರುವನೆಂದು ಹೇಳಬಹುದು. ಕವಿಜಿ.,ದಲ್ಲಿ

---

[27] ಮಗಣರಗಣ ಯೋಜನೆಯ ಪದ್ಯದಿಂದ (ಸ್ರಗ್ಧರೆಯಿಂದ) ಕೃತಿಯನ್ನು ಆರಂಭಿ ಸಿದುದರಿಂದಾಗಿ ನನ್ನಿಚೋಡನು ಹತನಾದನೆಂದು 'ಅಥರ್ವಣಚ್ಛಂದಮು' (೧೨ನೆಯ ಶತಮಾನ) ಹೇಳುತ್ತದೆ (ನೋ. ತೆ. ಛಂ. ರೀ., ಪು. ೪೯)

[28] ಸಂಸ್ಕೃತದಲ್ಲಿ ಸಾಹಿತ್ಯ ಚಂದ್ರೋದಯ, ಅಲಂಕಾರ ಚೂಡಾಮಣಿ, ಚಮತ್ಕಾರ ಚಂದ್ರಿಕ, ಛಂದೋಕೌಸ್ತುಭ–ಮೊದಲಾದ ಗ್ರಂಥಗಳಲ್ಲಿ, ಪ್ರಾಯಃ ಈಚಿನ ಕಾಲದವುಗಳಲ್ಲಿ, ವರ್ಣಗಣಾದಿಗಳನ್ನು ಕುರಿತ ನಂಬಿಕೆಗಳನ್ನು ಕುರಿತಿರುವಂತೆ ತಿಳಿದಿದೆ (ನೋ. ತೆ. ಛಂ. ರೀ. ಪು. ೪೯; ಪಿಂಗಲನ ಛಂದಶ್ಶಾಸ್ತ್ರ)

ಹರಿಕರಿ ಮೊದಲಾದ ಷಟ್ಪ್ರಾಸಭೇದಗಳನ್ನೇ ಅಲ್ಲದೆ ಇನ್ನೂ ಏಳು ಭೇದಗಳನ್ನು ಇದೇ ರೀತಿಯಲ್ಲಿ ಲಕ್ಷಣಿಸಿದೆ. ಇವುಗಳಲ್ಲಿ ಯುಗ್ಮವರ್ಣಪ್ರಾಸ, ತ್ರ್ಯಕ್ಷರಪ್ರಾಸ, ಅನುಪ್ರಾಸ, ಅಂತ್ಯಪ್ರಾಸ–ಎಂಬವು 'ಕವಿರಾಜಮಾರ್ಗ' ಮೂಲವಾಗಿ ಬಂದಿರ ಬಹುದೇನೊ? ಅಲ್ಪಪ್ರಾಣಪ್ರಾಸ, ಮಹಾಪ್ರಾಣಪ್ರಾಸ ಮಿತ್ರಾಕ್ಷರಪ್ರಾಸ–ಎಂಬವು ಕನ್ನಡ ಅಥವಾ ತೆಲುಗುಭಾಷೆಯ ಛಂದೋಗ್ರಂಥಗಳಲ್ಲಿ ಅನುಕ್ತವಾಗಿರುವುದರಿಂದ ಅವನ್ನು ಈಶ್ವರಕವಿಯೇ ಸ್ವತಃ ಕಲ್ಪಿಸಿರಬಹುದು. ಯುಗ್ಮವರ್ಣಾದಿ ಚತುಃಪ್ರಾಸಗಳ ಹೊರತು ಉಳಿದವುಗಳ ವಿವರಣೆ ದ್ವಿತೀಯಾಕ್ಷರಪ್ರಾಸದಲ್ಲಿ ಕಂಡುಬರುವ ವರ್ಣವಿನ್ಯಾಸಗಳ ವೈವಿಧ್ಯವನ್ನು ಸೂತ್ರಬದ್ಧವಾಗಿ ತಿಳಿಸುವ ಪ್ರಯತ್ನಗಳೆನ್ನಬಹುದು. ಭೀಮಾದ್ಯರು ತೆಲುಗು ಛಂದೋಗ್ರಂಥಗಳಲ್ಲಿ ಹೇಳಿರುವ ಪ್ರಾಸಭೇದಗಳ ಹೆಸರುಗಳೂ ನೃಪತುಂಗಾದ್ಯರು ತಂತಮ್ಮ ಕನ್ನಡ ಲಕ್ಷಣ ಗ್ರಂಥಗಳಲ್ಲಿ ಹೇಳಿರುವ ಪ್ರಾಸಭೇದಗಳೂ ಅವುಗಳ ಹೆಸರುಗಳೂ ಸಾಮಾನ್ಯವಾಗಿ ಬೇರೆ ಬೇರೆಯಾಗಿರುವುದರಿಂದ ದ್ವಿತೀಯಾಕ್ಷರ ಪ್ರಾಸವಿವರಣೆಯಲ್ಲಿ ಎರಡರದೂ ಸ್ವತಂತ್ರ ಮಾರ್ಗವಾಗಿದೆ. ಕನ್ನಡದಲ್ಲಿ ಪ್ರಾಸವಿವಕ್ಷೆ ಹೆಚ್ಚು ವಿಶದವಾಗಿದ್ದು, ಈಶ್ವರಕವಿ ಕನ್ನಡ ಛಂದೋಗ್ರಂಥಕರ್ತೃಗಳ ಮಾರ್ಗವನ್ನು ಅನುಸರಿಸಿದ್ದಾನೆ.

ಇನ್ನು ವಡಿಯ ವಿಚಾರವನ್ನು ನೋಡಬಹುದು. ವಡಿಯೆಂಬುದು ತೆಲುಗು ಛಂದಸ್ಸಿನ ವಿಷಯವಲ್ಲದೆ ಕನ್ನಡ ಛಂದಸ್ಸಿಗೆ ಸೇರಿದುದಲ್ಲವೆಂದೂ ಆಂಧ್ರ ಮಾರ್ಗವು ಕಾಣಿಸಿರುವಷ್ಟು ವಿಷಯುವನ್ನು ತಾನು ಹೇಳುವುದಾಗಿಯೂ ಈಶ್ವರ ಕವಿಯ ಸಂಕಲ್ಪವಾಗಿದೆ. ಪಾದಾದಿಯ ಅದ್ಯಕ್ಷರ ಅಥವಾ ಅದರ ಸಮಾನಾಕ್ಷರ ಅದೇ ಪಾದದಲ್ಲಿ ಯತಿ ಬರುವ ಗಣ ಮುಗಿಯುತ್ತಲೇ ಬರುವುದಾದರೆ ಅದು ವಡಿಯೆನಿಸುವುದು. ಇದು ನಿಯಮದ ಸಾಮಾನ್ಯವಿವರಣೆ. ಈಶ್ವರಕವಿ ೨೦ ತೆರದ ವಡಿಗಳಿವೆಯೆಂದೂ, ಅವುಗಳಲ್ಲಿ ಐದು ಪ್ರಮುಖವಾದುವೆಂದೂ ಅವು ಭೀಮಣಾದಿಗಳು ನಿರ್ದೇಶಿಸಿರುವ ಸ್ಥಾನಗಳಲ್ಲಿ ನಿಯತವಾಗಿ ಬರುವುವೆಂದೂ ಮೊದಲು ಹೇಳಿ, ಅನಂತರ ಆ ಭೇದಗಳನ್ನು ಹೆಸರಿಸಿದ್ದಾನೆ. ಅವನ್ನು ಸೀಸ ಮತ್ತು ಕಂದ ವೃತ್ತಗಳಲ್ಲಿ ಬಳಸಲಾಗುವುದು ಎಂಬುದನ್ನು ಸೂಚಿಸಿರುತ್ತಾನೆ. ಆವನು ಬರೆದಿರುವ ವಡಿ ವಿಚಾರವಾದ ವಿವರಣೆಗಳಿಗೆಲ್ಲ ತೆಲುಗು ಛಂದೋ ಗ್ರಂಥಗಳ ವಿವರಣೆಗಳೇ ಮೂಲವಾಗಿರುವುದು ಸ್ಪಷ್ಟವಾದ ವಿಷಯುವಾದ್ದರಿಂದ, ಅಲ್ಲಿ ಇಲ್ಲದ್ದನ್ನು ತಾನೇನೂ ಹೇಳಿಲ್ಲವಾದ್ದರಿಂದ, ವಡಿಯೆಂಬ ಛಂದೋನಿಯಮ ಕನ್ನಡದಲ್ಲಿ ಲಾಕ್ಷಣಿಕರಿಂದ ಲಕ್ಷಣಿಸಲ್ಪಟ್ಟಿಲ್ಲವೆಂದೂ ಕವಿಗಳಿಂದ ಪಾಲಿಸಲ್ಪಟ್ಟಿಲ್ಲ ವೆಂದೂ ಆತನ ಅಭಿಮತವಾಗಿರುವಂತೆ ನಾವು ಗ್ರಹಿಸಬಹುದು. ಈಶ್ವರಕವಿಯು ತೆಲುಗು ಛಂದಸ್ಸಿಗನುಸಾರವಾಗಿ ತೆಲುಗು ಕಾವ್ಯಗಳಲ್ಲಿ ಕಂಡುಬಂದಿರುವಂತೆ ಈ ವಿಷಯುವನ್ನು ಹೇಳಿರುವನಲ್ಲದೆ, ತೆಲುಗು ಛಂದೋಗ್ರಂಥಗಳಲ್ಲಿಯ ವಿಸ್ತಾರ ವಾದ ಪ್ರತಿಪಾದನೆಯ ಅತಿ ಮುಖ್ಯಾಂಶಗಳನ್ನಷ್ಟೆ ಸ್ಥೂಲವಾಗಿ ನಿರೂಪಿಸಿರುವ

ನಲ್ಲದೆ, ಕನ್ನಡಕ್ಕೆ ಸಂಬಂಧಿಸಿದಂತೆ ಏನನ್ನೂ ಹೇಳಿಲ್ಲ. ತನ್ನ ಗ್ರಂಥವನ್ನು ತೆಲುಗು ಛಂದೋಗ್ರಂಥಗಳ ಮಾದರಿಯಲ್ಲಿ ಬರೆದಿರುವುದರಿಂದ ಅಲ್ಲಿಗೆ ಆವಶ್ಯಕವಾದ ನಿಯಮವನ್ನು ಇಲ್ಲಿಯೂ ಪ್ರಸ್ತಾಪಿಸಿರುತ್ತಾನೆ, ಅಷ್ಟೆ.

ಕನ್ನಡ ಕಾವ್ಯಗಳಲ್ಲಿ ಪ್ರಾಸ–ಯತಿ–ವಡಿ ಇವುಗಳ ಸ್ಥಾನಮಾನಗಳೇನು, ಲಾಕ್ಷಣಿಕರು ಇವುಗಳ ಬಗೆಗೆ ತಳೆದಿರುವ ಅಭಿಪ್ರಾಯಗಳೇನು–ಎಂಬವುಗಳ ಬಗೆಗೆ ಮ.ಪ್ರತಿ ಧಾ.ಪ್ರತಿಗಳ ಸಂಪಾದಕರು ಕೆಲಮಟ್ಟಿಗೆ ವಿವರವಾಗಿಯೆ ಚರ್ಚಿಸಿರುತ್ತಾರೆ. ಇಲ್ಲಿ ಅಷ್ಟು ವಿವರವಾದ ಸಮಾಲೋಚನೆಗೆ ಅವಕಾಶವಿಲ್ಲ. ಕೆಲವಂಶಗಳನ್ನಷ್ಟೆ ಇಲ್ಲಿ ಪುನರಾಲೋಕನ ಮಾಡಿದೆ.

ಕನ್ನಡದಲ್ಲಿ ಆದಿಪ್ರಾಸವೆಂಬುದು ಕಾವ್ಯೋಪಯುಕ್ತಗಳಾಗುವ ಸರ್ವವಿಧ ಪದ್ಯಜಾತಿಗಳಿಗೂ ಅನುಲ್ಲಂಘ್ಯವಾದ ನಿಯಮ. ಇದನ್ನು ನೃಪತುಂಗ ನಾಗವರ್ಮಾದಿ ಲಾಕ್ಷಣಿಕರೆಲ್ಲ ಖಚಿತವಾಗಿ ಒಪ್ಪಿಕೊಂಡಿದ್ದಾರೆ. ಸಂಸ್ಕೃತ ಲಾಕ್ಷಣಿಕರಲ್ಲಿಯೇ ಕೆಲವರು ನಿಯತತೆಯ ಕಡೆಗೆ ಕೆಲವರು ಐಚ್ಛಿಕತೆಯ ಕಡೆಗೆ ಒಲವು ತೋರಿ, ಯತಿ ಪಾಲನೆಯ ವಿಷಯದಲ್ಲಿ ಸ್ವಾತಂತ್ರ್ಯವನ್ನು ವ್ಯಕ್ತಪಡಿಸಿದರು. ಈ ಸ್ವಾತಂತ್ರ್ಯದ ಪರಿಣಾಮವಾಗಿಯೇ ಸಂಸ್ಕೃತಕಾವ್ಯಪದ್ಧತಿಯಲ್ಲಿ ಕೆಲವು ವೃತ್ತಗಳಿಗೆ ಯತಿಯು ನಿರ್ದೇಶಿತವಾಗಿರುವುದೂ ಕೆಲವಲ್ಲಿ ಅನಿರ್ದೇಶಿತವಾಗಿರುವುದೂ ಕಾಣುತ್ತದೆ; ಎಂದಮೇಲೆ ಯತಿಯ ನಿಯಮ ಇಲ್ಲಿಯೇ ಐಚ್ಛಿಕವೆಂದಾಯಿತು. ತೆಲುಗು ಲಾಕ್ಷಣಿಕರೂ ಕವಿಗಳೂ ಪ್ರಾಸದಂತೆ ಯತಿಯನ್ನು ಪಾಲಿಸುವುದರಲ್ಲಿಯೂ ನಿಯಮಬದ್ಧತೆಗೆ ಮನಸ್ಸೊಪ್ಪಿ ನಿಯತತೆಯನ್ನು ಸ್ಥಾಪಿಸಿಬಿಟ್ಟರು. ಪದ್ಯದ ಶ್ರವಣಸುಭಗತೆಯನ್ನು ಹೆಚ್ಚಿಸುವುದೆಂದು ವಡಿಯೆಂಬ ಪ್ರಾಸ ವಿಶೇಷವನ್ನು ಯತಿ ಸ್ಥಾನದಲ್ಲಿ ಹೊಸದಾಗಿ ರೂಢಿಸಿದರು. ಇದು ಸಂಸ್ಕೃತದಲ್ಲಿ ಕಾಣಿಸದಿರುವ ತೆಲುಗಿಗೆ ವಿಶಿಷ್ಟವಾಗಿರುವ ಒಂದು ಶಬ್ದಾಲಂಕಾರವಿಶೇಷವಾಗಿದ್ದು ಕಾಲಕ್ರಮದಲ್ಲಿ ತನ್ನ ನಿಯತತೆಯಿಂದಾಗಿ ಒಂದು ಛಂದೋವಿಶೇಷವೂ ಆಗಿ ಪರಿಣಮಿಸಿತು. ಇದರ ಪರಿಣಾಮವಾಗಿ ತೆಲುಗು ಕಾವ್ಯಗಳ ಪದ್ಯಶಿಲ್ಪದಲ್ಲಿ ಪ್ರಾಸ–ಯತಿ–ವಡಿ ಎಂಬವು ನಿಯತವಾದ ಛಂದೋನಿಯಮಗಳಾಗಿ ನಿತ್ಯವಾದುದನ್ನೂ, ತೆಲುಗು ಲಾಕ್ಷಣಿಕರು ಅವುಗಳ ಸ್ವರೂಪ ಮತ್ತು ಪ್ರಭೇದಗಳನ್ನು ವಿಸ್ತಾರವಾಗಿ ನಿರೂಪಿಸತೊಡಗಿದುದನ್ನೂ ಕಾಣುತ್ತೇವೆ. ಆದರೆ ಕನ್ನಡದಲ್ಲಿ ಹೀಗಾಗಲಿಲ್ಲ. ಪ್ರಾಕೃತಭಾಷಾಸಾಹಿತ್ಯಗಳಿಂದ ಪ್ರಭಾವಿತರೂ ಪ್ರಾಕೃತ ಭಾಷಾಸಾಹಿತ್ಯಗಳಲ್ಲಿ ಕೋವಿದರೂ ಆಗಿದ್ದ ಜೈನಕವಿಸಮುದಾಯವು ಕನ್ನಡದಲ್ಲಿ ಆದ್ಯಕಾವ್ಯಪ್ರವರ್ತಕರಾದುದರಿಂದ ಅವರು ಬೆದಂಡೆ–ಚತ್ತಾಣಗಳಂತಹ ಕನ್ನಡದ ವಿಶಿಷ್ಟಕಾವ್ಯಪ್ರಕಾರಗಳ ಕಾಲದಿಂದಲೇ ಕೆಲವು ಸಂಸ್ಕೃತ ಕವಿ–ಲಾಕ್ಷಣಿಕರ ಹಾಗೆಯೇ ಯತಿ ನಿಯಮವನ್ನು ಐಚ್ಛಿಕವಾಗಿ ಪಾಲಿಸುತ್ತಿದ್ದು, ಬರುಬರುತ್ತ ಶೈಥಿಲ್ಯವು ಬೆಳೆದು, ನೃಪತುಂಗ ನಾಗವರ್ಮಾದಿಗಳ ಕಾಲಕ್ಕೆ

ಅವರ ಗಮನವನ್ನು ಸೆಳೆಯುವಷ್ಟು ನಿಯಮದ ಸಡಿಲತೆ ಹೆಚ್ಚಾಯಿತು. ಅವರು ಸಂಸ್ಕೃತಶಾಸ್ತ್ರಸಂಪ್ರದಾಯವನ್ನು ಅನುಸರಿಸಿದವರಾದುದರಿಂದ, ಶಾಸ್ತ್ರಕಾರರಾದುದರಿಂದ ಪ್ರಸಿದ್ಧವಾದೊಂದು ಕವಿತ್ವನಿಯಮವನ್ನು ಶಿಥಿಲ ಗೊಳಿಸುವುದನ್ನು ಸಹಜವಾಗಿ ಅವರು ಒಪ್ಪಲಾರರು. ಕನ್ನಡದಲ್ಲಿ ಕವಿಗಳು ವಹಿಸುತ್ತಿದ್ದ ಯತಿಯುಲ್ಲಂಘನೆಯ ಸ್ವಾತಂತ್ರ್ಯವನ್ನು ಒಪ್ಪುವುದು ಅವರಿಗೆ ಸರಿಕಾಣಲಿಲ್ಲ, ಒಪ್ಪದಿರುವುದೂ ಸಾಧ್ಯವಿರಲಿಲ್ಲ. ನೃಪತುಂಗನು ಖಂಡಪ್ರಾಸ (=ದ್ವಿತೀಯಾಕ್ಷರಪ್ರಾಸ) ವನ್ನು ದೇಸೀಯಪದ್ಯಲಕ್ಷಣವೆಂದು (ಅಥವಾ ಮನೋಹರವೆಂದು) ಪದ್ಯದಲ್ಲಿ ನಿಯತವಾಗಿಟ್ಟುಕೊಳ್ಳತೊಡಗಿ, ನಿಯತಯತಿಯ ಕಟ್ಟನ್ನು ಮೀರುವುದು ದೋಷವೇ ಆದರೂ, ಯತಿಯಿಲ್ಲದಿದ್ದರೂ ಕೂಡ ರಚನೆಯು ಸೊಗಸುತ್ತದೆ ಎಂದುಕೊಂಡು ಅದನ್ನು ಮೀರಿಬಿಟ್ಟರು—ಎಂದು ಮೊದಲು ಹೇಳಿದ್ದಾನೆ. ಯತಿವಿಲಂಘನವು ದೋಷವೆಂದೇ ಇಲ್ಲಿ ಆತನ ಗ್ರಹಿಕೆ. ಆದರೆ ಮುಂದಿನ ಪದ್ಯದಲ್ಲಿಯೇ, ಹಾಗೆ ಯತಿಯನ್ನು ಮೀರಿರುವ ಕವಿಜನರ ಪ್ರಯೋಗ ಗಳಲ್ಲಿ ಕೂಡ ಯತಿಯಿಲ್ಲದೆಯೂ ಆ ರಚನೆಗಳು ಒಂದು ರೀತಿ ಸರಸಸುಂದರವಾ ಗಿಯೇ ಇರುವುದನ್ನು ತೆರೆದ ಮನಸ್ಸಿನಿಂದ ಒಪ್ಪಿಕೊಂಡಿದ್ದಾನೆ. ಮುಂದುವರಿದು, ಆರ್ಯೆ ಮತ್ತು ಕಂದಗಳಲ್ಲಿ ಆಲಸ್ಯಪಡದೆ ಸಾಧ್ಯವಾದಮಟ್ಟಿಗೆ ಯತಿಯನ್ನು ಪಾಲಿಸುವುದಾಗಲಿ ಎಂದು ಅಪೇಕ್ಷಿಸಿದ್ದಾನೆ; ಕಟ್ಟಳೆಯಾಗಿ ವಿಧಿಸದೆ ಒಪ್ಪುವಹಾಗೆ ಸಲಹೆಮಾಡಿದ್ದಾನೆ.[29] ತನ್ನ ಕಟ್ಟಳೆಗೆ ತಾನೇ ಬದ್ಧನಾಗಿ ಎಂಬಂತೆ ತನ್ನ ಗ್ರಂಥದಲ್ಲಿ ಕಂದಪದ್ಯಗಳಲ್ಲಿ ನಿಯತಯತಿಯನ್ನು ಪ್ರಾಯಃ ತಪ್ಪದೆ ಪಾಲಿಸಿಯೂ ಇದ್ದಾನೆ. ಈ ವಿಷಯದಲ್ಲಿ ಅವನ ನಿಲವು ಮತ್ತು ಒಲವು ಇದರಿಂದ ಸ್ಪಷ್ಟವಾಗಿಯೇ ವ್ಯಕ್ತವಾದಂತಾಗಿದೆ. ೧ನೆಯ ನಾಗವರ್ಮನು 'ಛಂದೋಂಬುಧಿ'ಯಲ್ಲಿ ಯತಿ ಯನ್ನು ಕುರಿತು ಬರೆಯುವಾಗ, ಯತಿಭಂಗವಾದರೆ ಕವಿತಾಭಿಮಾನವು ಶೋಭಿಸುವುದಿಲ್ಲ ಎಂದು ನುಡಿದು ಯತಿ ನಿಯತವೇ ಐಚ್ಛಿಕವೇ ಎಂಬುದರ ಬಗೆಗೆ ಸಂಸ್ಕೃತ ಲಾಕ್ಷಣಿಕರಲ್ಲಿರುವ ಅಭಿಪ್ರಾಯ ಭೇದವನ್ನು ಸೂಚಿಸಿರುತ್ತಾನೆ.[30] ನಿಯತಯತಿಯ ಪಾಲನೆಯ ಬಗೆಗೆ ಈತನೂ ನೃಪತುಂಗನಂತೆ ತನ್ನ ಒಲವನ್ನು ತೋರಿದ್ದಾನೆ; ಸೂತ್ರೋದಾಹರಣೆಗಳಲ್ಲಿ ಮಾತ್ರ ಐಚ್ಛಿಕವಾಗಿ ಯತಿಯನ್ನು ಪಾಲಿಸಿದ್ದಾನೆ. ಸಂಸ್ಕೃತವೃತ್ತಗಳಲ್ಲಿ ಬಲುಮಟ್ಟಿಗೆ ಯತಿಸ್ಥಾನವನ್ನು ಸೂಚಿಸಿಯೂ ಎಷ್ಟೋಕಡೆಗಳಲ್ಲಿ ಆಯಾವೃತ್ತಗಳಲ್ಲಿಯೇ ಅವುಗಳ ಪಾಲನೆಯಾಗದಿರುವುದೂ ಯತಿಸ್ಥಾನದ ಸೂಚನೆಗಳಲ್ಲಿ ಛಂದೋಂಬುಧಿಗೂ ಇತರ ಛಂದೋಗ್ರಂಥಗಳಿಗೂ ಅಲ್ಲಲ್ಲಿ ಪರಸ್ಪರ ವ್ಯತ್ಯಾಸಗಳಿರುವುದೂ ವಿಚಾರಾರ್ಹವಾಗಿದೆ. ೨ನೆಯ

---

29 'ಕವಿರಾಜಮಾರ್ಗಂ' (ಮದ್ರಾಸು, 1930), (೧–೬೧–೬೭)

30 'ಛಂದೋಂಬುಧಿ' (ಮದ್ರಾಸು, 1946), (೧–೪೫, ೪೬)

ನಾಗವರ್ಮನು ಕೂಡ 'ಕಾವ್ಯಾವಲೋಕನ'ದಲ್ಲಿ ಪದ್ಯಪಾದಗಳ ನಿಯತಸ್ಥಾನ ದಲ್ಲಿ ಉಂಟಾದ ವಿರಾಮವು ಯತಿಯೆಂದೂ, ಅದು ತಪ್ಪುವುದು ಯತಿಭಂಗವೆಂದೂ ಆದರೆ ಹಾಗೆ ತಪ್ಪುವುದು ಸಮಾಸವಿಭಾಗದಲ್ಲಿ ನಿರ್ದೋಷವೆಂದೂ ಹೇಳಿ, ಯತಿ ನಿಯಮವು ಪಾಲಿತವಾದೊಂದು ಕಂದವನ್ನೂ ವೃತ್ತವನ್ನೂ ಉದಾಹರಿಸಿದ್ದಾನೆ. ಒಂದುಕಡೆ ಯತಿಭಂಗವನ್ನು ವಾಕ್ಯದೋಷಗಳಲ್ಲಿ ಒಂದಾಗಿ ಗಣಿಸಿಯೂ ಇದ್ದಾನೆ.[31] ಇದಕ್ಕೆ ದಂಡಿ ಭಾಮಹರ ಉಕ್ತಿಗಳೇ ಮೂಲವಾದರೂ, ತನ್ನ ಮಟ್ಟಿಗೆ ನಿಯತಯತಿಪಾಲನೆಯನ್ನೊಪ್ಪಿದ್ದಾನೆ.

ಪಂಪಾದಿ ಪೂರ್ವಕವಿಗಳ ಪ್ರಯೋಗಗಳನ್ನು ಪರೀಕ್ಷಿಸಿ ನೋಡಿದರೆ ನಿರ್ದಿಷ್ಟ ಸ್ಥಾನಗಳಲ್ಲಿ ನಿಯತಯತಿಯು ಸಾಮಾನ್ಯವಾಗಿ ಕಂದಪದ್ಯಗಳಲ್ಲಿ ಪಾಲಿತವಾಗಿರು ವುದೂ, ತಪ್ಪುತಡೆಗಳಿದ್ದರೂ ವೃತ್ತಾದಿಗಳಲ್ಲಿಯೂ ಬಲುಮಟ್ಟಿಗೆ ಪಾಲಿತವಾಗಿರು ವುದೂ ಕಂಡುಬರುತ್ತದೆ. ಕೆಲವೆಡೆಗಳಲ್ಲಿ 'ಯತಿಭಂಗ'ದೋಷವು ಬರಬಹುದು; ವೃತ್ತಕಂದಗಳ ನಿರ್ದಿಷ್ಟಸ್ಥಾನಗಳಲ್ಲಿ ಪೂರ್ತಿಯಾಗಿ ಇಲ್ಲದೆಯೂ ಹೋಗಬಹುದು. ಆದರೆ ಕನ್ನಡ ಕವಿಗಳು ನೃಪತುಂಗನು ಬಯಸಿದಂತೆ ಯತಿನಿಯಮವನ್ನು ಸಾಧ್ಯವಿದ್ದಮಟ್ಟಿಗೆ ಪಾಲಿಸಿದ್ದಾರೆಂದೂ, ಪೂರ್ತಿಯಾಗಿ ತಿರಸ್ಕರಿಸಲಿಲ್ಲವೆಂದೂ, ಐಚ್ಛಿಕವಾಗಿಟ್ಟುಕೊಂಡು ಪುರಸ್ಕರಿಸಿದರೆಂದೂ ತಿಳಿಯುವುದೇ ಸರಿಯಾದ ನಿರ್ಣಯ ವೆಂದು ತೋರುತ್ತದೆ.

ವಡಿಯ ವಿಚಾರವಾಗಿ ಕೆಲವಂಶಗಳನ್ನು ಈಗ ನೋಡಬಹುದು. ಈಶ್ವರ ಕವಿಗೆ ಮೊದಲಿನ ಲಾಕ್ಷಣಿಕರಾರೂ ಈ ಪ್ರಾಸವಿಶೇಷವೆನ್ನಬಹುದಾದ ವಡಿಯ ಅವಸ್ಥಾನವನ್ನು ಕುರಿತು ಎಷ್ಟು ಮಾತ್ರವೂ ಪ್ರಸ್ತಾಪಿಸಿಲ್ಲ. ತೆಲುಗು ಲಾಕ್ಷಣಿಕ ರಾದರೋ ಆದ್ಯರಿಂದ ಮೊದಲುಗೊಂಡು ಎಲ್ಲರೂ ಯತಿವಿಶೇಷವಾಗಿಯೂ ಯತಿಪರ್ಯಾಯವಾಗಿಯೂ ಗಣಿಸಿ ವಡಿಯನ್ನೂ ಅದರ ಹಲವು ಪ್ರಭೇದಗಳನ್ನೂ ವಿಶೇಷವಾದ ಆಸಕ್ತಿಯಿಂದ ವಿಪುಲವಾಗಿ ಪ್ರತಿಪಾದಿಸಿರುತ್ತಾರೆ. ಆದ್ಯರಲ್ಲಿ ೫-೧೦ ಭೇದಗಳಾಗಿ ಎಡೆಪಡೆದದ್ದು ಅದ್ಯತನರ ಕಾಲದಲ್ಲಿ ೫೦ ಭೇದಗಳಾಗಿ ಹಬ್ಬಿ ಹರಡಿಕೊಂಡಿತು.[32] ಪ್ರಾಚೀನಕಾಲದಿಂದ ತೆಲುಗು ಕಾವ್ಯಪದ್ಧತಿಯಲ್ಲಿ ಯತಿ-ವಡಿಗಳೆರಡೂ ನಿಯತವಾಗಿ ಪಾಲಿತವಾಗುತ್ತಿದ್ದುದರ ಪ್ರಬಲ ಪರಿಣಾಮ ವನ್ನೇ ಇದು ಹೇಳುತ್ತದೆ. ಕನ್ನಡದಲ್ಲಿ ಯತಿ ವಿಚಾರದಲ್ಲಿಯೇ ಒಂದು ರೀತಿಯ ಶೈಥಿಲ್ಯ ಒಂದುರೀತಿಯ ಮಧ್ಯಮಾರ್ಗ ಏರ್ಪಟ್ಟಿರುವುದು ಸುವಿದಿತವಾಗಿದೆ. ಹೀಗಿರಬೇಕಾದರೆ ಯತಿಸ್ಥಾನದ ವಿಶೇಷ ಛಂದೋನಿಯಮವಾದ ವಡಿಗೆ ನೆಲೆ

---

31 'ಕಾವ್ಯಾವಲೋಕನಂ' (ಮೈಸೂರು, 1939), (ಪ. ೪೭೯-೪೮೧; ೪೮೫)

32 ವಿವಿಧ ಲಕ್ಷಣಗ್ರಂಥಗಳಲ್ಲಿ ವಡಿವಿಭೇದಗಳ ಪಟ್ಟಿಕೆಗೆ ನೋಡಿ: 'ತೆಲುಗು ಭಾಷಲೋ ಛಂದೋರೀತುಲು' (ಮದರಾಸು, ೧೯೬೨), ಪು. ೨೨೪.

ದೊರೆಯುವುದು ಹೇಗೆ? ಸಂಸ್ಕೃತೇತರ ಪದ್ಯಬಂಧ ಲಕ್ಷಣವಾದ ವಡಿಯ ಅವಸ್ಥಾನವೇ ಕನ್ನಡ ಕವಿಗಳಿಗೆ ಅಪರಿಚಿತವೂ ಅಪ್ರಯುಕ್ತವೂ ಆಗಿದ್ದುದರಿಂದ ನೃಪತುಂಗಾದ್ಯರಾರೂ ಅದನ್ನು ಪ್ರಸ್ತಾಪಿಸಲಿಲ್ಲ. ಯತಿಯ ವಿಚಾರದಲ್ಲಿ ನಾವು ನೋಡಿದಂತೆ, ವಡಿಯ ನಿಯಮವನ್ನು ಅನಿಯತವಾಗಿಯಾದರೂ ಕನ್ನಡ ಕವಿಗಳು ಪಾಲಿಸುತ್ತಿದ್ದ ಪಕ್ಷದಲ್ಲಿ, ಅದರ ಲಕ್ಷಣವನ್ನು ವಿವರಿಸದೆ ಆ ಪ್ರಕ್ರಿಯೆಯನ್ನು ಉಲ್ಲೇಖಿಸದೆ ಶಾಸ್ತ್ರಕಾರರು ಸುಮ್ಮನಿರುತ್ತಿರಲಿಲ್ಲ. ಪಂಪಾದಿ ಪೂರ್ವಕವಿಗಳ ಪದ್ಯಪಾದಗಳಲ್ಲಿಯ ಯತಿಸ್ಥಾನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಎಲ್ಲಿಯೂ ಅವರು ತೆಲುಗು ಲಾಕ್ಷಣಿಕರು ವಿವರಿಸಿರುವಂಥ ರೀತಿಯ ವಡಿಯನ್ನು ಪಾಲಿಸಿರುವ ಹಾಗೆ ತೋರುವುದಿಲ್ಲ. ಆದರೆ, ಶ್ರೀಮಾನ್ ಸಿ. ನಾರಾಯಣರಾಯರು ಮತ್ತು ಅವರನ್ನು ಅನುಮೋದಿಸುತ್ತ ಶ್ರೀಮಾನ್ ಆರ್. ಎಸ್. ಪಂಚಮುಖಿಯವರು, ಕವಿರತ್ನತ್ರಯರು ಮತ್ತು ಇತರ ಪೂರ್ವಕವಿಗಳು ಅನೇಕ ಪದ್ಯಗಳಲ್ಲಿ ವಡಿಯನ್ನು ಪಾಲಿಸಿದ್ದಾರೆಂದು ಕೆಲವು ಉದಾಹರಣೆಗಳನ್ನು ಎತ್ತಿ ತೋರಿಸುವುದರ ಮೂಲಕ ಅಭಿಪ್ರಾಯ ಪಟ್ಟಿರುತ್ತಾರೆ.[33] ಅಧಿಕಸಂಖ್ಯೆಯ ಪೂರ್ತಿ ಪದ್ಯಗಳನ್ನು ಎತ್ತಿಕೊಡಬಹುದೆಂಬುದರಿಂದ ಇದು ಆಕಸ್ಮಿಕವಾಗಿರಲಾರದು ಎಂದು ಡಾ. ಸಿ. ನಾರಾಯಣರಾಯರು ಅಭಿಪ್ರಾಯಪಟ್ಟಿದ್ದರೆ, "....ಪ್ರಾಚೀನ ಕವಿಗಳ ಪದ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ತೆಲಗು ವಡಿಗಳ ಪ್ರಭೇದಗಳನ್ನು ಕನ್ನಡ ಕವಿಗಳು ಅರಿತಿದ್ದರೆಂದು ಗೊತ್ತಾಗುತ್ತದೆ...." ಎಂದು ಮುಂತಾಗಿ ಶ್ರೀ ಪಂಚಮುಖಿಯವರು ಹೇಳಿದ್ದಾರೆ. ಆದರೆ ಡಾ. ಸಿ. ನಾರಾಯಣರಾಯರಂತಲ್ಲದೆ, ಇವರು ಕವಿರತ್ನತ್ರಯರ ಕೃತಿಗಳಲ್ಲಿ ವಡಿಯಕ್ಷರವಿರುವ ಕೆಲವು ಪದ್ಯಗಳನ್ನು ತೋರಿಸಿಯೂ "ಈ ವಡಿಯು ಉದ್ದೇಶಪೂರ್ವಕವಾಗಿ ಉಪಯೋಗಿಸಲ್ಪಟ್ಟಿದೆಯೋ ಆಕಸ್ಮಿಕವಾಗಿದೆಯೋ ಹೇಳಲಿಕ್ಕಾಗದಿದ್ದರೂ...." ಎಂದು ಮುಂತಾಗಿ ಬರೆದಿರುವಲ್ಲಿ[34] ಕೊಂಚಮಟ್ಟಿನ ಸಂಶಯವನ್ನು ಇರಿಸಿಕೊಂಡಿರುವುದು ಗಮನಿಸುವಂಥದಾಗಿದೆ. ಈ ವಿದ್ವಾಂಸರಿಬ್ಬರೂ ವಡಿಯ ಉದಾಹರಣೆಗಳೆಂದು ಉದ್ಧರಿಸಿರುವ ಪದ್ಯಗಳಲ್ಲಿರುವ ಅಕ್ಷರ ಸಾಮ್ಯವನ್ನು ಅಲ್ಲಗಳೆಯದೆ, ಒಂದೆರಡು ಸಂಗತಿಗಳನ್ನಿಲ್ಲಿ ಹೇಳಬಹುದಾಗಿದೆ. ಪದ್ಯಬಂಧದಲ್ಲಿ ವಡಿಯನ್ನು ನಿಯತವಾಗಿ ಪಾಲಿಸಲು ಅನುಕೂಲಿಸುವಂತೆ ಅದರಲ್ಲಿ ಏರ್ಪಡಿಸಿಕೊಂಡ ವಿವಿಧ ಪ್ರಭೇದಗಳ ಸೌಲಭ್ಯದಿಂದಾಗಿ ಅವುಗಳ ವ್ಯಾಪಕತೆಯಿಂದಾಗಿ ಕನ್ನಡ ಕವಿಗಳ ಕೆಲವು ಪದ್ಯಗಳಲ್ಲಿ ಅಲ್ಲಲ್ಲಿ ಒಂದಲ್ಲ ಒಂದು ರೀತಿಯ ವಡಿಯನ್ನು ನಾವು ಎದುರುಗೊಳ್ಳಬಹುದಾಗಿದೆ. ಇದರ ಹೊರತು ತೆಲುಗಿನ ಕಾವ್ಯಪದ್ಧತಿಯಲ್ಲಿ ನಿಯಮಬದ್ಧವಾಗಿ ನಿಯತವಾಗಿ ಪಾಲಿಸುವ ವಡಿಯನ್ನು ನಾವು ಕನ್ನಡ ಕಾವ್ಯಪದ್ಧತಿಯಲ್ಲಿ ಕಾಣಲಾರೆವು.

---

33-34 ಸಂ: ಆರ್. ಎಸ್. ಪಂಚಮುಖಿ : ಕವಿಜಿ, ಉಪೋದ್ಘಾತ, ಪು. xxvii-xxix

ಅಂತಹುದೊಂದು ನಿಯಮವಿದ್ದುದಾದರೆ, ಅದನ್ನು ಶಿಥಿಲವಾಗಿಯಾದರೂ ಕನ್ನಡ ಕವಿಗಳು ಪಾಲಿಸುತ್ತಿದ್ದುದಾದರೆ, ಕನ್ನಡ ಲಾಕ್ಷಣಿಕರು ಅದನ್ನು ಪ್ರಸ್ತಾಪಿಸದೆ ಹೋಗುತ್ತಿರಲಿಲ್ಲವೆಂದು ತೋರುತ್ತದೆ. ೧೨ನೆಯ ಶತಾಬ್ದದವನಾದ ಭೀಮಕವಿ ತೆಲುಗಿನಲ್ಲಿ ಹತ್ತು ವಡಿಭೇದಗಳನ್ನು ಮಾತ್ರ ಹೇಳಿರುವುದರಿಂದ ಆತನಕಾಲಕ್ಕೆ ಅಷ್ಟು ಮಾತ್ರವೇ ಪ್ರಚಾರದಲ್ಲಿದ್ದಿರಬೇಕು. ನಮ್ಮ ಕವಿರತ್ನತ್ರಯವು ೧೦–೧೧ ನೆಯ ಶತಾಬ್ದದವರಾದುದರಿಂದ ಅವರ ಕಾವ್ಯಗಳಲ್ಲಿ ವಡಿಯ ಅರ್ವಾಚೀನ ಪ್ರಭೇದಗಳ ಪ್ರಯೋಗಗಳನ್ನು ಹುಡುಕಿ ನೋಡುವುದು ಸರಿಯಾಗದು. ಈ ಕಾರಣದಿಂದ, ಒಂದು ಪಕ್ಷ ಕನ್ನಡ ಕವಿಗಳಿಗೆ ವಡಿಯ ಪರಿಚಯವಿದ್ದಿತೆಂದು ಭಾವಿಸಿದರೂ, ಅವರು ತಮ್ಮ ಕೃತಿಗಳಲ್ಲಿ ಪಾಲಿಸಿದರೆಂದು ಒಪ್ಪುವುದು ಸಾಧ್ಯವಾಗದು. ಪಂಪಾದ್ಯರ ಉದಾಹೃತ ಪದ್ಯಗಳಲ್ಲಿ ಕಾಣಿಸಿಕೊಂಡಿರುವ ವಡಿಯ ರೂಪದ ಅಕ್ಷರ ಸಾಮ್ಯವು ಆಕಸ್ಮಿಕವೇ ಹೊರತು ಉದ್ದೇಶಪೂರ್ವಕವಲ್ಲ ಎಂದು ಹೇಳಬಹುದು.

ಕನ್ನಡ ಸಾಹಿತ್ಯ ಲೋಕಕ್ಕೆ ವಡಿಯನಿಯಮದ ಪ್ರಥಮ ಪರಿಚಯವನ್ನು ಮಾಡಿಸಿದವನು ಈಶ್ವರ ಕವಿ. ಆತನಾದರೂ ಲಕ್ಷ್ಯಲಕ್ಷಣ ವಿಧಾನದಲ್ಲಿ ವಡಿನಿಯಮವನ್ನು ಪ್ರಸ್ತಾಪಿಸುವಾಗಷ್ಟೇ ತತ್ಸಂಬಂಧವಾದ ಕಂದಪದ್ಯಗಳಲ್ಲಿ ಆವಶ್ಯಕವಾಗಿಯೂ ಉದ್ದೇಶ ಪೂರ್ವಕವಾಗಿಯೂ ವಡಿಯನ್ನಿಟ್ಟಿರುತ್ತಾನಲ್ಲದೆ, ತನ್ನ ಕೃತಿಯ ಬೇರೆ ಪದ್ಯಗಳಲ್ಲಿ ಅದನ್ನು ಗಮನಿಸಿಯೇ ಇಲ್ಲ. ಈಚೆಗೆ ಕನಕದಾಸರು (ಸು. ೧೫೫೦) ತಮ್ಮ ಸಾಂಗತ್ಯ ಛಂದಸ್ಸಿನ 'ಮೋಹನ ತರಂಗಿಣಿ'ಯ ಮೊದಲಲ್ಲಿ "ವಡಿ ಪ್ರಾಸಗು(ಗ)ಣನೇಮವುಚಿತಾರ್ಥ ಲಕ್ಷಣ। ವಿಡಿಕಿಲ್ಲದಿಹ ಭಾವಚಿತ್ರ॥ ನುಡಿ ತಪ್ಪಿದೊಡೆ ತಿದ್ದುವುದೆನ್ನಯ ಸಂ। ಗಡಿಗರು ಸಲೆ ಬಲ್ಲವರು॥" (೧–೧೯) ಎಂಬುದಾಗಿ ಹೇಳಿದ್ದಾರೆ. ಈ ಪದ್ಯದಲ್ಲಿ ಸ್ಥೂಲವಾಗಿ ಯತಿ–ವಡಿ ಎಂದು ಭಾವಿಸಿರುವುದು ಅಸಂಭವವಲ್ಲ; ತೆಲುಗಿನಲ್ಲಿಯೇ ಅವನ್ನು ಪರ್ಯಾಯವಾಗಿ ತಿಳಿದಿರುವುದುಂಟು. ಹಾಗಿಲ್ಲದ ಪಕ್ಷದಲ್ಲಿ, ಈ ಹೇಳಿಕೆ ಪರೀಕ್ಷೆಗೆ ಯೋಗ್ಯವಾದದು. ವಡಿ ಪ್ರಾಸ ಮುಂತಾದ ಕೆಲವು ಕೃತಿಲಕ್ಷಣಗಳಿಗೆ ಅನುಸಾರವಾಗಿ ತಾನು ತನ್ನ ಕೃತಿಯನ್ನು ರಚಿಸಿರುವುದಾಗಿಯೂ ಅವುಗಳಲ್ಲಿ ದೋಷಗಳಿದ್ದರೆ ಸಹೃದಯರಾದವರು ತಿದ್ದಿಕೊಳ್ಳಬೇಕೆಂಬುದಾಗಿಯೂ ಕವಿಯು ವಿನಯಪೂರ್ವಕವಾಗಿ ಇಲ್ಲಿ ಕೇಳಿಕೊಂಡಿದ್ದಾನೆ––ಎಂಬುದು ಇಲ್ಲಿ ಸಹಜವಾಗಿ ತೋರುವ ಅರ್ಥ. ತನ್ನ ಕೃತಿಯು ಸರ್ವಲಕ್ಷಣ ಲಕ್ಷಿತವಾಗಿರಬೇಕೆಂಬ ತನ್ನ ಅಪೇಕ್ಷೆಯನ್ನೂ ವಿಮರ್ಶಕರ ನಿರೀಕ್ಷೆಯನ್ನೂ ಕವಿಯು ಈ ಮೂಲಕವಾಗಿ ಔಪಚಾರಿಕವಾಗಿ ಸಾಧಾರಣರೀತಿಯಿಂದ ಹೇಳಿರಲೂ ಬಹುದು. ಮೇಲಿನ ಮಾತಿನಿಂದ ವಡಿಯೆಂಬ ಛಂದೋನಿಯಮವನ್ನೂ ತೆಲುಗು ಕಾವ್ಯಗಳಲ್ಲಿ ಆದರ ಪ್ರಯೋಗ ವೈಖರಿಯನ್ನೂ ಕವಿ ತಿಳಿದವನಾಗಿರಬೇಕೆಂದು ಊಹಿಸಬಹುದು; ಆದರೆ ಆ ನಿಯಮವನ್ನು ನಿಷ್ಠೆಯಿಂದ ಪಾಲಿಸುವ

ಸಂಕಲ್ಪ ಮಾಡಿದ್ದಾನೆ ಎಂದು ದೃಢವಾಗಿ ಪರಿಗ್ರಹಿಸುವುದು ಸಾಧ್ಯವಿಲ್ಲ. ತೆಲುಗಿನಲ್ಲಿ ಸೀಸಪದ್ಯ ಆಟವೆಲದಿ ತೇಟಗೀತ ಮೊದಲಾದ ದೇಸೀಯ ಪದ್ಯ ಜಾತಿಗಳಿಗೂ ವಡಿನಿಯಮವನ್ನು ಹೇಳಿದೆ; ಕವಿಗಳು ಅದನ್ನು ತಪ್ಪದೆ ಪಾಲಿಸಿದ್ದಾರೆ. ಕನ್ನಡದಲ್ಲಿ ದೇಸೀಯ ಪದ್ಯಜಾತಿಗಳಿಗೆ ಕ್ವಚಿತ್ತಾಗಿ ಹೊರತು ಯತಿಯನ್ನೆ ಹೇಳಿಲ್ಲ. ಸಾಂಗತ್ಯವಂತೂ ಆ ಗುಂಪಿಗೆ ಹೊಸದಾಗಿ ಸೇರಿದ್ದು. ಪದ್ಯಾರ್ಧದ ಕೊನೆಗಳಲ್ಲಿ ನಿರ್ದಿಷ್ಟಯತಿ, ಅನುಕೂಲವಿದ್ದಂತೆ ಅರ್ಥಯತಿ ಅಥವಾ ಗಣಯತಿ ಎಂದು ನಾವು ಕಲ್ಪಿಸಿಕೊಳ್ಳಬಹುದು. ತೆಲುಗಿನ ದೇಶ್ಯಪದ್ಯಜಾತಿಗಳಲ್ಲಿ ಸಮ ಗಣಸಂಖ್ಯೆಯ ಪದ್ಯಗಳಲ್ಲಿ ೨ ಗಣಗಳಾದ ಮೇಲೆಯೂ, ವಿಷಮದಲ್ಲಿ ೩:೨ ಪ್ರಮಾಣ ರೀತಿಯಲ್ಲಿಯೂ ವಡಿಯು ಅನುವೃತ್ತವಾಗುವುದು ಸಾಮಾನ್ಯವೆಂದು ತಿಳಿದಿದೆ. ಅದಕ್ಕೆ ಅನುಸಾರವಾಗಿ 'ಮೋಹನ ತರಂಗಿಣಿ'ಯ ಪದ್ಯಗಳನ್ನು ಪರಿಶೀಲಿಸಿದರೆ ವಡಿನಿಯಮವು ಅವುಗಳಲ್ಲಿ ಪಾಲಿತವಾಗಿಲ್ಲವೆಂದು ಹೇಳಬಹುದು. ಬೇರಾವುದಾದರೂ ಸ್ವಯಂಚಾಲಿತ ವಿಧಿಯಂತೆಯೂ ಅದು ಕಾಣಿಸಿಕೊಳ್ಳುವುದಿಲ್ಲ. ಆದರೆ ಆತನು ವಡಿನಿಯಮವನ್ನು ಬಲ್ಲವನಿರಬಹುದು, ತೆಲುಗಿನಲ್ಲಿರುವಂತೆ ನಿಯತವಾಗಿರಿಸಿಕೊಳ್ಳದೆ, ಕನ್ನಡದಲ್ಲಿಯ ಯತಿನಿಯಮದಂತೆ ಐಚ್ಛಿಕವಾಗಿ ಇರಿಸಿಕೊಂಡಿರಬಹುದು, ಅನುಪ್ರಾಸ ವಿಶೇಷವಾಗಿರುವ ಅದನ್ನು ಪದ್ಯಬಂಧದಲ್ಲಿ ಸೊಗಸಿಗಾಗಿ ಶ್ರಾವ್ಯತೆಗಾಗಿ ಒಂದು ಅಲಂಕಾರವೆಂಬ ರೀತಿಯಲ್ಲಿ ಅಪೂರ್ವವಾಗಿ ಬಳಸಿರಬಹುದು–ಎಂದು ಪದ್ಯದಲ್ಲಿ ಭಾವಿಸುವುದು ಸರಿಯೆಂದು ತೋರುತ್ತದೆ. ಸು. ೧೫–೧೬ನೆಯ ಶತಮಾನದ ಕೃತಿಯೆಂದು ತರ್ಕಿಸಲಾಗಿರುವ ರಾಘವಾಂಕನ ಹೆಸರಿನಲ್ಲಿರುವ 'ದೇವಾಂಗ ದಾಸಿಮಯ್ಯನ ಪುರಾಣ'ದಲ್ಲಿ[35] ಕೂಡ ವಡಿಯನ್ನು ಪಾಲಿಸಿರುವಂತೆ ಅಭಿಪ್ರಾಯವಾಗುವ ಹೇಳಿಕೆಯಿದೆ. "ಹದಿನೆಂಟು ಲಘುವ ನೀತಿಯ ರಸಭಾವ ಕುತುಕದಿ ಪ್ರಾಸಗಣಯತಿವಡಿಯಾ"–ಎಂಬುದೇ ಆ ಮಾತು ಈ ಮಾತಿನ ಧೋರಣೆಯೂ 'ಮೋಹನ ತರಂಗಿಣಿ'ಯಲ್ಲಿಯ ಮಾತಿನ ಧೋರಣೆಯಂತೆಯೇ ಇರುವುದು ಸ್ಪಷ್ಟ. ಇದೂ ಸಾಂಗತ್ಯದ ಕೃತಿಯೇ. ಈ ಗ್ರಂಥದ ಕೆಲವು ಉದಾಹೃತ ಪದ್ಯಗಳನ್ನಷ್ಟೆ ಪರೀಕ್ಷಿಸಿ ಹೇಳುವುದಾದರೆ, 'ಮೋಹನ ತರಂಗಿಣಿ'ಯನ್ನು ಕುರಿತು ಮೇಲೆ ಹೇಳಿರುವ ವಿಚಾರವೇ ಇಲ್ಲಿಗೂ ಒಪ್ಪುತ್ತದೆ.

ಸುಮಾರು. ೧೬೫೦ರ ಗುಣಚಂದ್ರನ ಛಂದಸ್ಸಾರದಲ್ಲಿ ವಡಿಯ ಪ್ರಸ್ತಾಪವಿದೆಯೆಂದು ತಿಳಿಯುತ್ತದೆ.[36] ನಂದಿಯು ನಂದಿ ಛಂದಸ್ಸಿನಲ್ಲಿ (ಸು. ೧೮೦೦) ವಡಿಯೆಂದು ಹೆಸರು ಹೇಳದೆ ಅದರ ಲಕ್ಷಣವನ್ನು ಕೃತಿಯ ಮೊದಲ ಭಾಗದಲ್ಲಿ

---

[35] ಸಂ: ಡಿ. ಎಲ್. ನರಸಿಂಹಾಚಾರ್, ಎಂ. ಎ. 'ಸಿದ್ಧರಾಮಚರಿತೆಯ ಸಂಗ್ರಹ', ಪೀಠಿಕೆ, ಪು. Viii–ix

[36] ಮುದ್ರಿತ ಕೃತಿ ಕೈಗೆ ದೊರೆಯದೆ, ಇದರ ವಿಚಾರವನ್ನು ಇಲ್ಲಿ ಚರ್ಚಿಸಲಾಗಿಲ್ಲ.

(ಅಂಶ ೨೪) ಸೂಚಿಸಿ, ಅಲ್ಲಿಯೇ ಕೊಟ್ಟಿರುವ ಪ್ರಾಸದ ಉದಾಹರಣೆಯ ಕಂದಗಳಲ್ಲಿ ಬಲುಮಟ್ಟಿಗೆ ಪಾಲಿಸಿರುವುದು ಕಂಡುಬರುತ್ತದೆ. ಅಲ್ಲದೆ ಕೃತಿಯ ಕೊನೆಯ ಭಾಗದಲ್ಲಿ (ಪ. ೩೨) ಪ್ರಾಸ ಮತ್ತು ವಡಿಗಳ ಲಕ್ಷಣವನ್ನು ಮತ್ತೆ ಕುರಿತಿದ್ದಾನೆ. "ಪ್ರಾಸವೆನಲ್ಕೆರಡನೆಯದು। ಬಾಸುರ ತರದಾದಿ ವರ್ಣ ವಡಿ ಮೇದಿನಿಯೊಳ್॥ ಪ್ರಾಸವದು ಚರಣಕೆಲ್ಲಕೆ। ಲಾಸವು ಕೇಳ್ ವಡಿಯು ಪಾದಪಾದಕೆ ಸಖಿಯೇ॥" –ಎಂಬ ಈ ನಿರ್ವಚನವು "ಚರಣಾದ್ಯಕ್ಷರಮೇ ವಡಿ। ಚರಣಂಬು ದ್ವಿತೀಯ ವರ್ಣಸಮತಿಯೆ ಪ್ರಾಸಂ॥ ಬರಯುಗ ಬ್ರಾಸಂ ಬೊಕ್ಕಟಿ। ಬರಣಂಬುಲವಳ್ಲು ವೇಱೆ ಜಗತಿಂ ಜೆಲ್ಲುನ್" ಎಂಬ 'ಕವಿಜನಾಶ್ರಯಮು'ವಿನ ನಿರ್ವಚನಕ್ಕೆ (ಸಂ. ೬೧) ಅನುಗಣವಾಗಿ ಇಲ್ಲವೆ ಅಂತಹ ಇತರರ ನಿರೂಪಣೆಗೆ ಅನುಗುಣವಾಗಿ ಹೇಳಿದುದಾಗಿದೆ. ಈತನು ಈಶ್ವರ ಕವಿಯನ್ನು ನೋಡಿರುವ ಸಂಭವವಿದೆ. ಈಗ ಭಾವಿಸಿರುವಂತೆ ಈತನು ತೆಲುಗು ಪ್ರಾಂತದೊಳಗಿದ್ದ ಕೊಲ್ಲಿಪಾಕೆಯವನೆಂಬುದು ನಿಶ್ಚಯವಾದರೆ, ಈತನು ತನ್ನ ಗ್ರಂಥದಲ್ಲಿಯ ವೃತ್ತಕಂದಗಳಲ್ಲೆಲ್ಲ ನಿಯತವಾಗಿ ವಡಿನಿಯಮವನ್ನು ಪಾಲಿಸಿರುವುದಕ್ಕೆ ಆತನ ತೆಲುಗು ಭಾಷಾ ಸಾಹಿತ್ಯಗಳ ಪರಿಜ್ಞಾನವೇ ಕಾರಣವೆಂದು ತಿಳಿಯಲಾಸ್ಪದವಾಗುತ್ತದೆ. ಗ್ರಂಥ ಶರೀರದಲ್ಲಿ ಸರ್ವತ್ರ ನಿಯತವಾಗಿ ವಡಿ ನಿಯಮವನ್ನು ಪಾಲಿಸಿರುವ ಏಕೈಕ ಶಾಸ್ತ್ರಕಾರ ನೆಂಚರೆ ನಂದಿ ಛಂದಸ್ಸಿನ ಕರ್ತೃ ಎಂದು ಹೇಳಬಹುದು. ಕನ್ನಡದಲ್ಲಿ ವಡಿಯ ಸ್ವರೂಪವನ್ನರಿಯಲು ನಂದಿಯೇ ಕಾಮಧೇನು!

ಈವರೆಗಿನ ಯತಿ–ವಡಿಗಳ ಸಮಾಲೋಚನೆ ಸ್ಥೂಲ ಸಾಮಾನ್ಯ ರೀತಿಯದೆಂದೂ ಇವುಗಳ ಬಗೆಗೆ ಹೆಚ್ಚಿನ ಪರಿಶೋಧನೆಯ ಅಗತ್ಯವೂ ಪ್ರಯೋಜನವೂ ಉಂಟೆಂದು ಸೂಚಿಸಿ,[37] ಕವಿಜಿ.,ದ ತೃತೀಯಾಶ್ವಾಸದ ವಿಷಯಗಳ ಕಡೆಗೆ ಹೊರಳಬಹುದು.

ವರ್ಣಗಳ ಸ್ವರೂಪ ಮುಂತಾದವುಗಳನ್ನು ಇಲ್ಲಿ ಹೇಳಿದೆ. ಗಣಗಳ ವಿಚಾರದಲ್ಲಿ ಹೇಳಿದಂತಹ ನಂಬಿಕೆಗಳನ್ನೇ ಫಲಾಫಲಗಳನ್ನೇ ವರ್ಣಗಳ ವಿಚಾರದಲ್ಲಿಯೂ ಹೇಳಿದೆ. ಲೋಕಕ್ಕೆ ಉಪಕಾರವಾಗುವಂತೆ ಕವಿತೆಗೆ ಅಗತ್ಯವಾದ ಲಕ್ಷಣ ವಿಚಾರವನ್ನು ಈ ಮೂಲಕವಾಗಿ ತಾನು ನಿರೂಪಿಸುತ್ತಿರುವೆನೆಂದು ಕವಿಯ ಪ್ರಕಟನೆ; ಭೂವಲಯದ ಜನರರಿಯುವಂತೆ ವಾಗ್ವಧೂವರದನೂ ಭಾವಜ್ಞನೂ ಆದ, ರಸಿಕ ರಂಜಿತನೂ ಕೋವಿದ ಸದ್ವಂಶಸೂ ಆದ ಅಭಿನವ ಕೇಶಿರಾಜನು

---

[37] ಕವಿಜನಪ್ರಿಯವೂ ತಕ್ಕಮಟ್ಟಿಗೆ ಪ್ರಸಿದ್ಧವೂ ಆಗಿರುವ 'ಲಲಿತವೃತ್ತ' ಅಥವಾ 'ಲಯಗ್ರಾಹಿ' ಎಂಬ ಮಾಲಾವೃತ್ತಭೇದವಾಗಿರುವ ವರ್ಣವೃತ್ತವೊಂದರಲ್ಲಿ ತೆಲುಗು ಲಕ್ಷಣ ಗ್ರಂಥಗಳಲ್ಲಿ ಉಕ್ತವಾಗಿರುವ 'ಪ್ರಾಸಯತಿ' ಎಂಬ ರೀತಿಯ ವಡಿ ವಿಭೇದವು ಬಲುಮಟ್ಟಿಗೆ ನಿಮಿತವಾಗಿಯೇ ಪ್ರಾಚೀನ ಕಾಲದಿಂದಲೂ ಬಳಕೆಯಾಗಿರುವ ಹಾಗೆ ತೋರುತ್ತದೆ. ಇದರ ಉಗಮ ಮತ್ತು ಸ್ವರೂಪವನ್ನು ಪ್ರತ್ಯೇಕವಾಗಿಯೇ ಪರಿಶೀಲಿರುವ ಅಗತ್ಯವಿದೆ.

ಹೇಳಿದನೆಂಬುದಾಗಿ ಅಭಿಮಾನ ಪೂರ್ವಕವಾದ ಘೋಷಣೆ. ಆತನು ಕೊಟ್ಟಿರುವ ಕವಿತೆಯ ನಿಯಮ ನಿಬಂಧನೆಗಳೆಂಬುದು ಕವಿಗೆ ಜಿಹ್ವಾಬಂಧನವೇ ಸರಿ! ಇಲ್ಲಿಯ ವಿಷಯಗಳಾದರೂ ಸಂಸ್ಕೃತ ತೆಲುಗು ಲಕ್ಷಣ ಗ್ರಂಥಗಳಿಂದ ಎತ್ತಿಕೊಂಡವೇ ಆಗಿರಬಹುದಲ್ಲದೆ ಕಲ್ಪಿತಗಳಾಗಿರವು. ಇಲ್ಲಿ ಅಕ್ಷರೋತ್ಪತ್ತಿ ಶಬ್ದೋತ್ಪತ್ತಿಗಳನ್ನು ಕುರಿತ ಎರಡು ಪದ್ಯಗಳು (೧–೪೦, ೪೪) ಶಬ್ದಮಣಿದರ್ಪಣದಿಂದ ನೇರವಾಗಿ ಎತ್ತಿಕೊಂಡವು; ಇವು ಪ್ರಕ್ಷೇಪಗಳಾಗಿರದೆ ಮೂಲಗ್ರಂಥಕ್ಕೆ ಸೇರಿದವಾಗಿರಬಹುದು.

ಚತುರ್ಥಾಶ್ವಾಸದಲ್ಲಿ ಕನ್ನಡದ ಬಗೆಗಳನ್ನು ಮೊದಲು ಪ್ರಸಂಗಿಸಲಾಗಿದೆ. ಕನ್ನಡದಲ್ಲಿ ೧೨೦೦ ಭೇದಗಳುಂಟೆಂದೂ ಅವುಗಳಲ್ಲಿ ಕವಿತ್ವ ಮಾಡುವವರು ಐದನ್ನು ಮುಖ್ಯವಾಗಿ ತಿಳಿಯಬೇಕೆಂಬುದಾಗಿ ಹೇಳಿದ್ದಾನೆ. ಒಳುಗನ್ನಡ ಬೆಳುಗನ್ನಡ ಮೊದಲಾದ ಆ ಐದು ಭೇದಗಳೇ ಅಲ್ಲದೆ ಬೇರೆ ಕೆಲವನ್ನು ಕೂಡ ಹೇಳಿದೆ. ಇವುಗಳಲ್ಲಿ ಕೆಲವು ಯುಕ್ತವೂ ಗ್ರಾಹವೂ ಆಗಿದ್ದರೆ ಮತ್ತೆ ಕೆಲವು ವಿಚಾರಾರ್ಹವಾಗಿವೆ. ಇವು ಲಾಕ್ಷಣಿಕನಾಗಿ ತಾನೆ ಕಲ್ಪಿಸಿದ್ದಿರಬಹುದು. ಇಲ್ಲಿ ಬಂದಿರುವ ಅಲಂಕಾರ ಮತ್ತು ವ್ಯಾಕರಣ ಸಂಬಧವಾದ ವಿವರಗಳ ನಿರೂಪಣೆಯಂತೂ ಅಸಮರ್ಪಕವಾಗಿದೆ. ಕುಕವಿ ನಿಂದೆಯ ಎರಡು ಪದ್ಯಗಳು ಮಾರ್ಮಿಕವೂ ಸುಂದರವೂ ಆಗಿದೆ. ಒಂದು ಕಟ್ಟುನಿಟ್ಟಿಲ್ಲದೆ ವ್ಯಾಕರಣದ ಒಂದೆರಡು ಸಂಗತಿಗಳನ್ನು ತೇಲಿಕೆಯಾಗಿ ಹೇಳಿರುವುದನ್ನು ನೋಡಿ ಕವಿಯ 'ಅಭಿನವ ಕೇಶಿರಾಜ' ಎಂಬ ಬಿರುದಿನ ಸಾರ್ಥಕ್ಯವನ್ನು ಅಳೆಯಹೋಗುವುದು ಹಾಸ್ಯಾಸ್ಪದವಾದೀತು! ಈಶ್ವರ ಕವಿಯು ಧರಿಸಿರುವ ಬಿರುದು ಕೇಶಿರಾಜನ ಮತ್ತು ಆತನ ವ್ಯಾಕರಣದ ಜನಪ್ರಿಯತೆಯನ್ನಷ್ಟೆ ಸೂಚಿಸುತ್ತದೆ ಎನ್ನಬಹುದು. ಇಲ್ಲಿಯ ಕಾಮಶಾಸ್ತ್ರ ಸಂಬಂಧಿಯಾದ ವಿವರಗಳಿಗೆ ಯಾವುದಾದರೂ ಸಂಸ್ಕೃತ ಸ್ಮರತಂತ್ರ ಮೂಲವಾಗಿರಬಹುದು.

# ಶಾಸ್ತ್ರಿಗಳಿಗೇಕೆ ಆವರಣ?

ಈ ದಿನ ನನ್ನ ಸ್ನೇಹಿತರಾದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳ ಛಾಯಾಚಿತ್ರ ಅನಾವರಣವನ್ನು ಬಹಳ ಸಂತೋಷದಿಂದ ಮಾಡುತ್ತೇನೆ. ಈ ಸಭಾಮಂದಿರದಲ್ಲಿ ಶ್ರೀಮಾನ್ ಶಾಸ್ತ್ರಿಗಳ ಮುಖಕ್ಕೆ ಹಾಕಿರುವ ಆವರಣವನ್ನು ನೋಡಿ ನನಗೆ ಒಂದು ರೀತಿಯಲ್ಲಿ ಆಶ್ಚರ್ಯವಾಗಿದೆ. ಅವರು ಎಂದೂ ಮುಸುಕಿನಲ್ಲಿ ಸೇರಿಕೊಂಡು ಕೆಲಸಮಾಡಿದವರಲ್ಲ. ಅವರು ತಮ್ಮ ಕಾರ್ಯಕಲಾಪಗಳನ್ನೆಲ್ಲಾ ಒಳ್ಳೆಯ ಹಗಲಿನಲ್ಲಿ ಪೇಟೆಯ ಚೌಕಗಳಲ್ಲಿ ಸಾವಿರಾರು ಜನ ನೋಡುವಂತೆ ಬಹಿರಂಗವಾಗಿ ಮಾಡಿದವರು. ಮುಸುಕಿನ ಏಟುಗಳನ್ನು ಸಹ ಕೊಟ್ಟವರಲ್ಲ; ತಮ್ಮ ಪ್ರತಿವಾದಿಗಳಿಗಾಗಲಿ, ಪ್ರತಿಕಕ್ಷಿಗಾಗಲಿ ಗದಾಪ್ರಹಾರಗಳನ್ನು ಮುಚ್ಚುಮರೆಯಿಲ್ಲದೆ ಕೊಟ್ಟವರು ಅವರು. ಆವರಣವನ್ನು ಹಾಕಿಕೊಂಡು ಹೋದವರು ಎಂದರೆ ಶ್ರೀಮಾನ್ ಶಾಸ್ತ್ರಿಗಳಿಗೆ ಎದುರು ನಿಂತು ಯುದ್ಧಕ್ಕೆ ತೊಡಗಿದವರು. ಆದ್ದರಿಂದ ನನ್ನ ಸ್ನೇಹಿತರಿಗೆ ಅನುಚಿತವಾದ ಈ ಮುಖಾವರಣವನ್ನು ತಮ್ಮೆಲ್ಲರ ಅನುಮತಿಯ ನಿರೀಕ್ಷಣೆಯ ಮೇಲೆ ತೆಗೆದುಹಾಕುತ್ತೇನೆ. ಕರ್ಣಾಟಕ ಸಂಘದ ಆಶ್ರಯದಲ್ಲಿ ಸೇರಿರುವ ಈ ಮಹಾಸಭೆಯನ್ನು ಶ್ರೀಮಾನ್ ಶಾಸ್ತ್ರಿಗಳೂ ನೋಡಲಿ, ಈ ಮಹಾಸಭೆಯೂ ಅವರನ್ನು ನೋಡಿ ಹರ್ಷಿಸಲಿ.

—ಎಂ. ಆರ್. ಶ್ರೀನಿವಾಸಮೂರ್ತಿ

('ಕನ್ನಡ ನುಡಿ', ಫೆಬ್ರವರಿ–೫೩)

ಸ. ಸ. ಮಾಳವಾಡ

# ಪರಿಶುದ್ಧ, ಪರಿಪಕ್ವ ಜೀವಿ ಕೃಷ್ಣಶಾಸ್ತ್ರಿಗಳು

•

## ೧. ಹಿರಿಯ ಜೀವನ

ಬೆಲೆಯುಳ್ಳ ವಸ್ತುಗಳು ಕಳ್ಳಪೇಟೆಯನ್ನು ಸೇರಿರುವ ಈ ದಿನಗಳಲ್ಲಿ ಒಳ್ಳೆಯ ವಸ್ತುವೊಂದು ಮುಕ್ತಮಾರುಕಟ್ಟೆಯಲ್ಲಿ ಎಲ್ಲರಿಗೂ ಸುಲಭಸಾಧ್ಯವಾದರೆ ನಮ್ಮ ಆನಂದಕ್ಕೆ ಪಾರವಿಲ್ಲ. ಕುಸುಮವು ಕೋಮಲ; ವಜ್ರವು ಕಠಿನ. ಅದದರ ಗುಣ ಅದಕ್ಕೆ. ಕುಸುಮದ ಕೋಮಲತೆಗೆ ವಜ್ರದ ಭದ್ರತೆಯೂ ಸೇರಿದರೆ ಅದರ ಹಿರಿಮೆಯೇ ಹಿರಿಮೆ. ನಿರ್ದಾಕ್ಷಿಣ್ಯ ಅಭಿಪ್ರಾಯ ನಿರೂಪಣೆಯೊಂದಿಗೆ ಇತರರ ಮನವನ್ನು ನೋಯಿಸಬಾರದೆಂಬ ಮನೋಭಾವವೂ ಸೇರಿಕೊಂಡರೆ ಬಂಗಾರಕ್ಕೆ ಕುಂದಣ ಸೇರಿದಂತೆಯೇ. ನಿಸ್ಪೃಹತೆಯೊಂದಿಗೆ ಅಂತಃಕರಣದ ಸ್ವಭಾವವನ್ನು ಕಾಣುವದು ಸುಲಭವಲ್ಲ. ಹೆಂಗರುಳಿನೊಂದಿಗೆ ಕೆಚ್ಚೆದೆಯೂ ಹಾಗೆಯೇ. ವೈದುಷ್ಯದ ಆತ್ಮಾಭಿಮಾನದೊಂದಿಗೆ ಮಾಧುರ್ಯದ ಹೊಂದಿಕೆಯೂ ಅಂತೆಯೇ. ಏಕೋ ಏನೋ, ಒಂದೊಂದು ಗುಣದೊಂದಿಗೆ ಒಂದೊಂದು ದೋಷ ಸೇರಿಕೊಳ್ಳು ವದು ಸಾಮಾನ್ಯ ನಿಯಮವೆಂದು ತೋರುತ್ತದೆ. ಆಯಾ ದೋಷಗಳನ್ನುಳಿದು ಗುಣಗಳ ಗಟ್ಟಿಯಂತಿದ್ದ ವ್ಯಕ್ತಿ ಅಚ್ಚುಮೆಚ್ಚಾಗಿರುವದು ಸಹಜವೇ ಸರಿ. ಇಂತಹ ಹಿರಿಮೆ-ಗರಿಮೆಗಳುಳ್ಳ ವ್ಯಕ್ತಿಗಳನ್ನು ನಾವು ಜೀವನದಲ್ಲಿ ಅಪರೂಪವಾಗಿ ಕಾಣು ತ್ತೇವೆ. ಇಂತಹ ಒಂದು ಜೀವನವನ್ನು ಕನ್ನಡ ಸಾಹಿತ್ಯಪ್ರಪಂಚದಲ್ಲಿ ಕಾಣುವ ಭಾಗ್ಯ ನಮ್ಮದಾಗಿದೆ.

ಸಂಸಾರದ ಅನುಭವದ ಪರಿಪಕ್ವತೆಯೊಂದಿಗೆ ಪಾಂಡಿತ್ಯದ ಆಳವೂ ಸೇರಿದರೆ ಅಂತಹ ಜೀವನ, ಯೋಗ್ಯತಾಸಂಪನ್ನವಾಗುತ್ತದೆ. ಅಂತಹ ವ್ಯಕ್ತಿಯು ನ್ಯಾಯ ಬುದ್ಧಿ, ಸಮತೂಕ, ರಸಿಕತೆ, ಗಾಂಭೀರ್ಯ ಇವುಗಳನ್ನು ಮೈಗೂಡಿಸಿಕೊಂಡರೆ ಆ ವ್ಯಕ್ತಿತ್ವ ಉದಾತ್ತವಾಗುತ್ತದೆ. ಜೀವನದ ಕಹಿ ಅನುಭವವೆಂಬ ಬೆಂಕಿಯಲ್ಲಿ ಕುದಿದು ತತ್ವದರ್ಶನದಿಂದ ಪರಿಶುದ್ಧವಾದ ವ್ಯಕ್ತಿಯ ಬಾಳು ಚೊಕ್ಕ ಚಿನ್ನದಂ ತಾಗುತ್ತದೆ. ಅಂತಹ ವ್ಯಕ್ತಿಯ ಗುಣವನ್ನು ಗ್ರಹಿಸಿ ಗೌರವ ಸಲ್ಲಿಸಹೊರಡುವದು ಮಾನವನು ಒಂದು ಒಳ್ಳೆಯ ಗುಣವನ್ನು ಪ್ರದರ್ಶಿಸಿದಂತೆ.

ಆವುದೊಂದು ಒಳ್ಳೆಯ ಮಾತಿಗೂ ಅಪಾರ್ಥ ಕಲ್ಪಿಸುವದು ಲೋಕ ಸ್ವಭಾವವೆಂದು ತೋರುತ್ತದೆ. ಹಿಂದೆ 'ಶ್ರೀ' ಅವರು ಕನ್ನಡದ ಬಗೆಗೆ ಹೆಚ್ಚಿನ ಗೌರವ ಅಭಿಮಾನಗಳನ್ನು ತೋರಿದಾಗ ಅವರಿಗೆ ಸಂಸ್ಕೃತ ಅಭ್ಯಾಸ ಸಾಲದು, ಎಂಬ ಆರೋಪವೂ ತಲೆದೋರಿತು. ಆದರೆ ಹೈದರಾಬಾದದ ಸಾಹಿತ್ಯ ಸಮ್ಮೇಲನಾಧ್ಯಕ್ಷರ ಭಾಷಣದಲ್ಲಿ ಕನ್ನಡದ ಬಗೆಗೆ ಗೌರವ ಅಭಿಮಾನಗಳನ್ನು ಸ್ಪಷ್ಟವಾಗಿ ಪ್ರಕಟಿಸಿದಾಗ ಅಂತಹ ಆಕ್ಷೇಪಣೆಗೆ ತೊಡಗುವವರು ಹಿಂಜರಿಯು ಬೇಕಾಯಿತು. ಏಕೆಂದರೆ ಆ ಸಮ್ಮೇಲನಾಧ್ಯಕ್ಷರ ಸಂಸ್ಕೃತ ಭಾಷಾಪಾಂಡಿತ್ಯದ ಹಿರಿಮೆಯನ್ನು ಯಾರೂ ಶಂಕಿಸುವಂತಿರಲಿಲ್ಲ. ಸಂಸ್ಕೃತದ ಆಳವಾದ ಅಭ್ಯಾಸ ವಿರುವವರಿಗೆ ಇಂಗ್ಲಿಷ ಭಾಷೆಯ ಬಗೆಗೆ ಅನಾದರವಿರುತ್ತದೆಂದು ಹೇಳಲಾಗುತ್ತಿದೆ. ಆದರೆ ಹೈದರಾಬಾದ ಸಾಹಿತ್ಯ ಸಮ್ಮೇಲನಾಧ್ಯಕ್ಷರು ಇಂಗ್ಲಿಷ ಭಾಷೆಯ ಸ್ಥಾನ ಮಾನಗಳನ್ನು ಕುರಿತು ಆಡಿರುವ ಮಾತುಗಳನ್ನು ಹೇಳಲು ಇಂಗ್ಲಿಷ ಸಾಹಿತ್ಯದ ಪಾಠ ಹೇಳುವ ಪ್ರಾಧ್ಯಾಪಕರೂ ಕೂಡ ಹಿಂಜರಿಯಬಹುದು. ಪ್ರಾಚೀನ ಸಾಂಪ್ರದಾಯಕ ಪಾಂಡಿತ್ಯದ ಆಳವನ್ನು ಪಡೆದವರಿಗೆ ಆಧುನಿಕ ದೃಷ್ಟಿಯು ಅಗಲವಿರುವುದಿಲ್ಲವೆಂಬ ಮಾತೂ ಇದೆ. ಆದರೆ ಈ ಮಾತೂ ಇಲ್ಲಿ ಗೆಲ್ಲಲಾರದು. 'ಕಥಾಸರಿತ್ಸಾಗರ'ದ ಸಂಗ್ರಹವಾದ 'ಕಥಾಮೃತ'ವೆಂಬ ಕನ್ನಡ ಕೃತಿಯು ಪೀಠಿಕೆಯಲ್ಲಿ ಕಂಡುಬರುವ ದೃಷ್ಟಿ, ವೈಶಾಲ್ಯಗಳನ್ನು ನೋಡಬೇಕು. ಹಳೆಯ ಪದ್ಧತಿಯಲ್ಲಿ ಸಂಸ್ಕೃತ ಓದಿ, ಕನ್ನಡ ಪಾಠ ಹೇಳುವ ವೃತ್ತಿಯನ್ನು ವಹಿಸಿಕೊಂಡವ ರೊಬ್ಬರು ರಚಿಸಿದ ಕೃತಿಯದು ಎಂಬುದನ್ನು ಗಮನಿಸಬೇಕು. ಕಥಾಲೇಖಕರೆ 'ಸಂಸ್ಕೃತ ನಾಟಕ'ವೆಂಬ ಕನ್ನಡ ಭಾಷೆಯ ಚಿಕ್ಕ ಕೃತಿಯಲ್ಲಿ ಹುದುಗಿಸಿದ ಪಾಂಡಿತ್ಯದ ವೈಶಾಲ್ಯವನ್ನು ನೋಡಬಹುದು. 'ಕಥಾಸಂಗ್ರಹ'ದ ಪೀಠಿಕೆ ಯಲ್ಲಿಯ ಜೀವನದರ್ಶನದಿಂದ ಲೇಖಕರ ವ್ಯಕ್ತಿತ್ವವನ್ನು ಸಹಜವಾಗಿ ಗುರುತಿಸ ಬಹುದಾಗಿದೆ:

> "ನಮ್ಮ ಆವರಣವನ್ನು ನಾವು ಬದಲಾಯಿಸಿಕೊಳ್ಳಬಲ್ಲೆವೇ,
> ಕಲ್ಲು ಮುಳ್ಳುಗಳು ಮೆತ್ತಗಾಗುತ್ತವೆಯೇ . . . ಚಿರತೆಯ ಮೈಮೇಲಿನ
> ಚುಕ್ಕೆಗಳು ತೊಳೆದರೆ ಹೋಗುತ್ತವೆಯೇ . . . ಹೀನ ಸುಳಿ ಬೋಳಿ
> ಸಿದರೆ ಹೋದಿತೇ ? ಹುಲಿ ಕರಡಿಗಳಿಗೆ ಹಸು ಎಮ್ಮೆಗಳೆಂದಾರೆ? . . .
> ಕಲ್ಲು ಮುಳ್ಳುಗಳು ಕಠಿಣವೇಸೇ. ಹುಲಿ ಕರಡಿಗಳು ಕ್ರೂರವೇಯೇ."

ಜೀವನದಲ್ಲಿ ಕೆಚ್ಚೆದೆಯಿಂದ ಹೋರಾಡಿದನಂತರವೂ ಅನುಲ್ಲಂಘನೀಯ ನಿಯತಿಯನ್ನು ಗುರುತಿಸಿದ ನುಡಿಗಳಿವು. ಇದರಾಚೆಗೆ ಕಂಡುಕೊಂಡ ಸತ್ಯ ದರ್ಶನವಿಂತಿದೆ: "ಒಟ್ಟಿನ ಮೇಲೆ ಸಂಸಾರವು ಕುಸುಮಶಯ್ಯೆಯಲ್ಲ, ನಮ್ಮ ಕೈಯಲ್ಲೇ ಎಲ್ಲವೂ ಇಲ್ಲ. ಪ್ರತಿಯೊಬ್ಬರಿಗೂ ಅವರ ಚಿಂತೆ ಕಷ್ಟಗಳು ಇರುತ್ತವೆ.

ವಿವೇಕವಾಗಿ ನಡೆದುಕೊಂಡರೆ ಇದ್ದಮಟ್ಟಿಗೆ ಸುಖವಾಗಿರಬಹುದು. ಸನ್ಮಾರ್ಗ ದಲ್ಲಿದ್ದರೆ ದೇವರು ಹೇಗೋ ಕಡೆಹಾಯಿಸುತ್ತಾನೆ." ಇಂತಹ ಸತ್ಯದರ್ಶನದಿಂದಲೇ ಬಾಳಿನ ವಿಷಮತೆಯನ್ನು ಮರೆಯಲು ಸಾಧ್ಯವಿದೆ. ಅದು ಬೇಕು, ಇದು ಬೇಕು; ಅದು ಇಲ್ಲ, ಇದು ಇಲ್ಲ, ಎಂಬ ಗೊಣಗಾಟದಿಂದ ಏನು ತಾನೇ ಪ್ರಯೋಜನ? ಆದರೂ ತುಂಬದ ಕೊಡ ತುಳುಕುವಂತೆ ಮಾನವನ ಗೊಣಗಾಟ ನಡದೇ ಇದೆ. ತುಂಬಿದ ಕೊಡ ಸ್ತಿಮಿತಕ್ಕೆ ಬರುವಂತೆ ಮನಸ್ಸು ಪರಿಪಾಕಗೊಂಡಾಗ ಇಂತಹ ಗೊಣಗಾಟ ನಿಲ್ಲುತ್ತದೆ. ನಿಲ್ಲಬೇಕೆಂದು ಇತರರಿಗೆ ಬೋಧಿಸಲು ಸಮರ್ಥ ವಾಗುತ್ತದೆ. ಇದರ ನಿದರ್ಶನ ಈ ನುಡಿಗಳಲ್ಲಿವೆ:

"ಮೈಯೆಲ್ಲಾ ಕಾಣುವಂಥ ನವಿರುಬಟ್ಟೆಯಿಲ್ಲವೆ? ಅದೇ ಬೇಡ, ನಾರು ಬಟ್ಟೆಯಿದ್ದರೆ ಅದೇ ಆಯಿತು . . . ಆಯುಷ್ಕರ್ಮಶಾಲೆಯಿಲ್ಲವೇ? ಅದೇ ಬೇಡ, ಗಡ್ಡ ಮೀಸೆ ಬೆಳೆಯಲಿ; ಜುಟ್ಟು ಜಟೆಯಾಗಲಿ! ರೆಸ್ಟೋರೆಂಟುಗಳೂ ಹೊಟೆಲು ಗಳೂ ಇಲ್ಲವೇ? ಅದೇ ಬೇಡ, ಗೆಡ್ಡೆಯೋ ಗೆಣಸೋ, ಹಣ್ಣೋ ಹಂಪಲೋ ಏನು ಸಿಕ್ಕಿದರೆ ಅದೇ ಆಯಿತು. ಕಾರು ವಾಹನ ಟಾರು ರಸ್ತೆಗಳಿಲ್ಲವೇ? ಅದೇ ಬೇಡ, ಕಾಲೂ ಕಾಲುದಾರಿಯೂ ಸಾಕು! ಮನೆ ತುಂಬ ಎಲ್ಲೆಂದರೆ ಅಲ್ಲಿ ಪುಷ್ಪಗಳೂ ನಲ್ಲಿಯೂ ಇಲ್ಲವೇ? ಅದೇ ಬೇಡ, ಹೊಳೆಯೂ ಕೆರೆಯೂ ಇರುತ್ತದಲ್ಲ! ಸೌಧ ಗಳಿಲ್ಲವೇ? ಅದೇ ಬೇಡ, ಗುಡಿಸಲೇ ಆಯಿತು. ಹುಲಿ ಕರಡಿ ಹಾವುಗಳಿರು ತ್ತವೆಯೇ? ಇರಲಿ. ಅವಕ್ಕೂ ಹೊಟ್ಟೆ ತುಂಬಲಿ! ಇವುಗಳ ಮಧ್ಯೆ ಇದ್ದುಕೊಂಡು ಜ್ಞಾನವೋ ಅಜ್ಞಾನವೋ, ಶಾಂತಿಯೋ, ಪಾಂತಿಯೋ ನಮ್ಮ ಪಾಲಿಗೆ ಬಂದ ದ್ದನ್ನು ಬಾಯಿಮುಚ್ಚಿಕೊಂಡು ಅನುಭವಿಸಿ ಒಂದು ದಿನ ಕಂತೆ ಒಗೆದುಬಿಟ್ಟರೆ ಸರಿ! ಅಲ್ಲಿಗೆ ಕಥೆ ಮುಗಿಯಿತು."

ಗಡ್ಡ ಮೀಸೆ ಜುಟ್ಟು ಬಿಟ್ಟುಕೊಂಡು ಜಿಂಕೆಯ ಚರ್ಮ ಧರಿಸಿ ಗೆಡ್ಡೆಗೆಣಸು ತಿನ್ನುತ್ತಿರುವ ಸನ್ಯಾಸಿಯ ಮಾತುಗಳಲ್ಲ ಇವು. ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿ 'ನಮ್ಮ ಹೊಸ ಸಾಹಿತ್ಯದ ಅಶ್ವಿನೀದೇವತೆ' ಗಳಲ್ಲೊಬ್ಬರಾಗಿ ಹೆಣ್ಣುಮಕ್ಕಳ ತಂದೆಯಾಗಿ ಮಕ್ಕಳು, ಮೊಮ್ಮಕ್ಕಳ ಮಧ್ಯದಲ್ಲಿ ನಲಿಯುತ್ತಿರುವ ಸಂಸಾರಿಗಳೊಬ್ಬರ ನುಡಿಗಳಿವು. ಅವರು ಸೇವಾ ನಿವೃತ್ತರಾಗುವುದಕ್ಕೆ ಕೊಂಚ ಮೊದಲು ನಾನವರನ್ನು ಕಂಡಾಗ ನಡೆದ ನಮ್ಮ ಸಂಭಾಷಣೆಯ ಒಂದು ತುಣುಕು ಸ್ಪಷ್ಟವಾಗಿ ನನ್ನ ಸ್ಮರಣೆಯಲ್ಲಿ ಉಳಿದಿದೆ.

"ಸೇವಾ ನಿವೃತ್ತರಾದಮೇಲೆ ನೀವು ಏನು ಮಾಡಬೇಕೆಂದ್ದೀರಿ"?

"ಏನೋಪ್ಪ, ಭಗವಂತ ಏನು ಮಾಡಿಸುವನೋ ನೋಡಬೇಕು. ನನ್ನ ಮಟ್ಟಿಗೆ ಹೇಳುವದಾದರೆ ಸ್ವೇಚ್ಛೆಯಾಗಿ ತಿನ್ನುವದು, ತಿರುಗುವದು, ಮನಸ್ಸಿಗೆ ಬಂದದ್ದನ್ನು ಓದುವದು, ಬರೆಯುವದು ಎಂದುಕೊಂಡಿದ್ದೇನೆ."

ಇವುಗಳಲ್ಲಿ ಮೊದಲಿನ ಎರಡರ ವಿಷಯ ಅಷ್ಟೊಂದು ನಮಗೆ ತಿಳಿಯದು.

ಕೊನೆಯ ಎರಡರ ಫಲದ ಸವಿಯನ್ನು ಕನ್ನಡ ವಾಚಕರು ಸವಿಯುತ್ತಿದ್ದಾರೆ. ಮಕ್ಕಳು ಮಹಿಳೆಯರಲ್ಲಿ ಕನ್ನಡದ ಮೂಲಕ ಜ್ಞಾನವನ್ನು ಹರಡುವಲ್ಲಿ ಮನೋವಿಕಾಸ ಗ್ರೈಯ್ಯುವಲ್ಲಿ 'ವಚನಭಾರತ' 'ಕಥಾಮೃತ' ಎಂಬ ಹಿರಿಯ ಹೊತ್ತಿಗೆಗಳು ವಿಪುಲವಾದ ಸಾಧನವನ್ನೊದಗಿಸಿವೆ. ಆ ಕಥಾಮೃತದ ಪೀಠಿಕೆಯಿಂದಲೇ ಮೇಲ್ಕಂಡ ಮಾತುಗಳನ್ನು ಆಯ್ದುಕೊಳ್ಳಲಾಗಿದೆ. ಇನ್ನೂ ಕೆಲವು ಸೂಕ್ತಿಗಳ ರುಚಿ ನೋಡಬಹುದು.

"ಮಾತನಾಡುವದರಿಂದ ಪರಹಿಂಸೆಯಾಗುತ್ತಿದ್ದರೆ ಮುಚ್ಚುಮರೆಯೇ ಗುಣ, ಮೌನವೇ ಭೂಷಣ."

"ಕಲ್ಲನ್ನು ತೇಯುವದರಿಂದ ಮೇಲ್ಭಾಗಕ್ಕೆ ಹೊಳಪುಬರುತ್ತದೆ. ಅದು ಮೃದುವಾಗುವದಿಲ್ಲ."

"ವಿದ್ಯೆಯ ನಿಜವಾದ ಫಲ ಸಂಸ್ಕೃತಿ. ಆದರಿಂದ ವಿನಯವುಂಟಾಗಿ, ಮನಸ್ಸು ಮೃದುವಾಗಿ, ಪರರ ಕಷ್ಟದಲ್ಲಿ ಮರುಗಿ, ಕರಗಿ ಸಹಾನುಭೂತಿಯನ್ನು ತೋರುವಂತಾಗಬೇಕು, ಸುಖದಲ್ಲಿ ಸಹನೆ, ಸಂತೋಷ ಬರುವಂತಾಗಬೇಕು."

"ಖೂನಿಮಾಡಿ ಗಲ್ಲಿಗೆ ಹಾಕಿಸಿಕೊಳ್ಳುವ ಹಿಂದಿನ ದಿನ ಗೀತಾ ಪಾರಾಯಣ ಮಾಡುತ್ತ ಜಾಗರಣೆ ಮಾಡಿದರೆ ಏನು ಪ್ರಯೋಜನ"?

"ಮನಸ್ಸು ಮೃದುವಾಗದೆ, ಮಧುರವಾಗದೆ, ದಯಾರ್ದ್ರವಾಗಲಾರದೆ ಹೋದರೆ ಯಾವ ಧರ್ಮ ಕರ್ಮದಿಂದ ತಾನೇ ಏನು ಪ್ರಯೋಜನ . . . . . . ಆತ್ಮಗುಣವೇ ಧರ್ಮದ ಸಾರ."

"ಮದುವೆಯಲ್ಲಿ ಸುಖವಿಲ್ಲದೆ ಇಲ್ಲ . . . . ಆದರೆ ಅದು ಲಾಟರಿ. ಅದೃಷ್ಟ ಪರೀಕ್ಷೆ."

ಈ ಬಗೆಯ ವಾಣಿಯನ್ನು ಮೆಲಕು ಹಾಕಿದಷ್ಟೂ ಹಿತವೇ. ಮುಚ್ಚುಮರೆಯಿಲ್ಲದೆ ಮಾತನಾಡುವದು ಅನಿವಾರ್ಯವಾದ ಕರ್ತವ್ಯವಾಗಿರುವಾಗ ಕನ್ನಡ–ಹಿಂದಿ—ಇಂಗ್ಲಿಷ್ ಭಾಷೆಗಳ ಪರಸ್ಪರ ಸ್ಥಾನವನ್ನು ಕುರಿತ ಅಭಿಪ್ರಾಯವನ್ನು ಹೈದರಾಬಾದದ ಅಧ್ಯಕ್ಷ ಭಾಷಣದಲ್ಲಿ ಹೇಳಿಯಾಯಿತು. ಪರಹಿಂಸೆಯನ್ನು ತಡೆಯಲು ಮೌನಧರಿಸಿದ ಉದಾಹರಣೆಗಳು ಖಾಸಗಿ ಜೀವನದಲ್ಲಿ ಕಂಡುಬಂದಿವೆ. ಅನಿವಾರ್ಯವಾದಾಗ 'ಖಂಡ–ತುಂಡ' ಅಭಿಪ್ರಾಯ ನಿರೂಪಿಸಿಯೂ ಆಗಿದೆ. ಸುಪ್ರಸಿದ್ಧ ಹಲವರಲ್ಲಿ ಒಬ್ಬರನ್ನು ಒಂದು ಅಧಿಕಾರಸ್ಥಾನಕ್ಕೆ ನೇಮಕಮಾಡುವ ಕಾರ್ಯಕ್ಕೆಂದು ಒಂದು ದೊಡ್ಡ ಸಂಸ್ಥೆಯ ಕರೆ ಬಂದಾಗ ಅದನ್ನು ನಿರಾಕರಿಸಿದ್ದು, 'ಮೌನವೇ ಭೂಷಣ' ಎಂಬ ಮಾತಿಗೆ ನಿದರ್ಶನ.

'ಧರ್ಮದಸಾರ', 'ಆತ್ಮಗುಣ', 'ವಿದ್ಯೆಯ ನಿಜವಾದ ಫಲ ಸಂಸ್ಕೃತಿ' ಎಂಬ ಉಕ್ತಿಗಳನ್ನು ಮೈಗೂಡಿಸಿಕೊಂಡ ವ್ಯಕ್ತಿತ್ವದಲ್ಲಿ ಗಾಂಭೀರ್ಯವಿದೆ, ಸಿಹಿಯಿದೆ, ಮೃದು ಮಧುರ, ದಯಾರ್ದ್ರಮನಸ್ಸಿದೆ. ಪರರ ಕಷ್ಟದಲ್ಲಿ ಮರುಗುವ ಸಹಾನು

ಭೂತಿಯಿದೆ, ಜೀವನದ ಒಲವು ಚೆಲುವುಗಳನ್ನು ಓರೆ ಕೋರೆಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ, ಸುಂದರವಾಗಿ ನಿರೂಪಿಸಿದ 'ಶ್ರೀಪತಿಯ ಕಥೆಗಳು' ಎಂಬ ಪುಸ್ತಕದಲ್ಲಿಯೂ ಇಂತಹ ವ್ಯಕ್ತಿತ್ವ ಎದ್ದು ಕಾಣುತ್ತಿದೆ. ಗಂಭೀರ ತತ್ವ, ಸರಸ ನಗೆಗಾರಿಕೆ ಇವುಗಳನ್ನು ಹೊರಹೊಮ್ಮಿ ತೋರುವ ಅಲ್ಲಿಯ ಕಥೆಗಳಿಂದ ಲೇಖಕರ ವ್ಯಕ್ತಿತ್ವವು ಎತ್ತರವಾದ ಮಟ್ಟದ್ದೆಂದು ಸ್ಪಷ್ಟವಾಗುತ್ತದೆ. ಕಥಾಸಂಗ್ರಹದ ಪೀಠಿಕೆಯಲ್ಲಿ ನಿರೂಪಿತವಾದ ಜೀವನದರ್ಶನ ಆ ಸಣ್ಣ ಕಥೆಗಳಲ್ಲಿಯೂ ಹುದುಗಿದೆ. ಗಡ್ಡ, ಮೀಸೆ ಜುಟ್ಟು ಬೆಳಸಿದ ಸನ್ಯಾಸಿಯ ಜೀವನದಿಂದ ಕಂಡ ಬೆಳಕೂ ಅಲ್ಲಿದೆ. ಹಸನಾದ, ಬೆಲೆಯುಳ್ಳ, ರಸವತ್ತಾದ ಜೀವನದ ಚಿತ್ರಣ ಬೇಕಿದ್ದರೆ 'ಶ್ರೀಪತಿಯ ಕಥೆಗಳ'ನ್ನು ಓದಬೇಕು. ಅಂತಹ ಜೀವನವನ್ನೇ ನೋಡಬೇಕಿದ್ದರೆ ಆ ಕಥೆಗಳ ಲೇಖಕರನ್ನು ಕಾಣಬೇಕು. ಜೀವ ಕುದಿ-ಕುದಿದು ಒಂದು ಸಂಸ್ಕಾರ ಪಡೆಯುತ್ತದೆ, ಎಂಬ ಮಾತನ್ನು ಆ ಕಥಾ ಸಂಗ್ರಹದ ಮುನ್ನುಡಿಯಲ್ಲಿ ಹೇಳಲಾಗಿದೆ. ಆ ಮಾತಿನ ನೆನಹಿಗಾಗಿಯೇ ಆ ಕಥಾಸಂಗ್ರಹ ಪ್ರಕಟವಾಗಿದೆ. ಅದರ ಮುನ್ನುಡಿಯಲ್ಲಿಯೆ ಬೆಲೆಯುಳ್ಳ ಮಾತುಗಳು ಗ್ರಂಥಕರ್ತರ ಸಂಸ್ಕಾರವು ಎಷ್ಟು ಹಿರಿದಾದುದೆಂಬುದನ್ನು ತೋರಿಸುತ್ತಿವೆ.

ಮಾನವನ ಜೀವನವು ದೇವನ ಲೀಲೆಯೆಂಬ ಅರ್ಥವತ್ತಾದ ಸಂದೇಶವನ್ನು ಇಲ್ಲಿ ನಾವು ಕಾಣುತ್ತೇವೆ. ಪರಿಪಾಕಗೊಂಡ ಜೀವನದ ಅಂತರಾಳದಿಂದ ಹೊರಹೊಮ್ಮಿದ ನುಡಿಗಳಿವು. ಇವುಗಳಲ್ಲಿ ನೈರಾಶ್ಯವಾದವನ್ನು ಕಾಣುವವರೂ ಇದ್ದಿರಬೇಕು. ಇಂತಹರಿಗೆ ಕಥಾಮೃತದ ಪೀಠಿಕೆಯಲ್ಲಿ ಉತ್ತರವನ್ನು ಕೊಡಲಾಗಿದೆ. ಶ್ರೀಪತಿಯ ಕಥೆಗಳಲ್ಲಿಯ ಜೀವನ ಚಿತ್ರವು ನಿರಾಶೆಯನ್ನು ಚಿತ್ರಿಸುವದಿಲ್ಲ. ರಸವಂತಿಕೆಯನ್ನೇ ಹೊರಹೊಮ್ಮಿಸುತ್ತದೆ. 'ಅತ್ತೆ' 'ಊಟದಲ್ಲಿ ಉಪಚಾರ' ಎಂಬ ಚಿತ್ರಗಳಲ್ಲಿ ಅಪ್ರಿಯ ಸಂಗತಿಗಳನ್ನು ಎಷ್ಟು ರಸವತ್ತಾಗಿ ನಿರೂಪಿಸಲಾಗಿದೆಯೆಂಬುದನ್ನು ನೋಡಬೇಕು. ಕಹಿಯಲ್ಲಿಯೂ ಸಿಹಿಯನ್ನು ಕಾಣುವುದಕ್ಕೆ, ಕಾಣಿಸುವುದಕ್ಕೆ ಉತ್ತಮ ಸಂಸ್ಕಾರಬೇಕು.

'ಕಥಾಮೃತ', 'ಶ್ರೀಪತಿಯ ಕಥೆಗಳು' ಇವುಗಳ ಪೀಠಿಕೆಯ ಮಾತುಗಳಲ್ಲಿ ನಿರಾಶೆಯ ಧ್ವನಿ ಹೊರಹೊಮ್ಮಿದಂತೆ ಕೆಲವರಿಗೆ ತೋರಬಹುದು. ಆದರೆ ಅವುಗಳ ಲೇಖಕರ ಜೀವನದಲ್ಲಿ ರಸಿಕತೆಯನ್ನು ಅವರೊಂದಿಗೆ ಸಂಪರ್ಕ ಪಡೆದ ಎಲ್ಲರೂ ಕಂಡಿದ್ದಾರೆ. ಗಾಂಭೀರ್ಯದೊಂದಿಗೆ ಕೂಡಿದ ಮೃದುಹಾಸ್ಯ ಆ ಜೀವನದ ಸೂತ್ರವಾಗಿದೆ. ವಿಶ್ವವಿದ್ಯಾಲಯದ ಉಚ್ಚ ಪರೀಕ್ಷೆಗಳಿಗಾಗಿ ೧೦-೧೨ ಪ್ರಶ್ನೆ ಪತ್ರಿಕೆಗಳನ್ನು ತಯಾರಿಸುವ ಗಡಿಬಿಡಿಯ ಸಂದರ್ಭದಲ್ಲಿಯೂ ರಸಬಾಳೆ-ಹಣ್ಣಿನ ಸವಿಯನ್ನು ಕುರಿತು ಸರಸ ಸಲ್ಲಾಪ ನಡದೇಇರುತ್ತದೆ. ರಸಬಾಳೆಹಣ್ಣು, ಹಲ್ವಾ ಬೋಂಡಾಗಳ ವ್ಯವಸ್ಥೆಯನ್ನು ವಿವರವಾಗಿಯೇ ಜಾಗರೂಕವಾಗಿಯೇ ನಡೆಯಿಸಲಾಗುತ್ತದೆ. ಮುನಿಸು, ಮುಖ ಮುದುಡಿಕೊಳ್ಳುವದು—ಇವುಗಳಿಗೆ ಕಾರಣ

ವಿದ್ದಾಗಲೂ ಲೀಲಾಜಾಲವಾಗಿಯೇ ಸರಸವನ್ನು ಮೆರೆಯಿಸುವ ಸನ್ನಿವೇಶಗಳನ್ನೇ ಕಲ್ಪಿಸಲಾಗುತ್ತದೆ. ಮನಸ್ಸು ಹದಗೊಂಡಲ್ಲದೆ ಇದು ಹೇಗೆ ಸಾಧ್ಯವಾದೀತು?

ಬಾಳಿನಲ್ಲಿ ಕಹಿಯೇನೋ ಇದೆ. ಅದನ್ನು ಮತ್ತೆಮತ್ತೆ ಪ್ರದರ್ಶಿಸುವದರಿಂದ ಇಲ್ಲವೇ ಹೆಚ್ಚಿಸುವದರಿಂದ ಪ್ರಯೋಜನವೇನು? ಬಾಳಿನಲ್ಲಿಯ ಕಹಿಯನ್ನು ತಮ್ಮ ಜೀವನಕ್ಕೆ ಉತ್ತಮ ಸಂಸ್ಕಾರವನ್ನು ಒದಗಿಸುವ ಬಗೆಯಲ್ಲಿ ಉಪಯೋಗಿಸಿ ಕೊಳ್ಳಬೇಕು. ಬೆಂಕಿಯಲ್ಲಿ ಕುದಿದು ಸುವಾಸನೆಯನ್ನೇ ಹರಡುವ ಸಾಂಬ್ರಾಣಿ ಯಂತೆ (ಧೂಪದಂತೆ) ಬಾಳನ್ನು ನಡೆಯಿಸಬೇಕು. ಹಾಗಿರುವದನ್ನೇ ನಾವು 'ಹಿರಿಯ ಜೀವನ'ವೆಂದು ಹೇಳುವದು. ಈ ಮೊದಲು ಉಲ್ಲೇಖಿಸಿದ ನುಡಿಗಳು ಅವುಗಳ ಲೇಖಕರು ಇದಕ್ಕೆ ನಿದರ್ಶನವಾಗಿದ್ದಾರೆ. ಇಂತಹ ನುಡಿಗಳಿಂದ, ಜೀವನದಿಂದ, ಕನ್ನಡಿಗರು ಬೆಳಕು ಪಡೆದುಕೊಳ್ಳಬಹುದಾಗಿದೆ. ಅಂತಹ ಬೆಳಕನ್ನು ನೀಡುವ 'ಹಿರಿಯ ಜೀವನ'ಕ್ಕೆ ನಮಸ್ಕಾರ.

—೧೯೫೨

*　　*　　*　　*

ಮೇಲ್ಕಂಡ ಲೇಖನವನ್ನು ನಾನು ೧೯೫೨ರಲ್ಲಿ ಬರೆದು ಪ್ರಕಟಿಸಿದ್ದೆ. ಅಂದರೆ ಈ ಲೇಖನವು ಸಾಂಪ್ರದಾಯಿಕವಾದ ಮರಣೋತ್ತರ ಪ್ರಶಸ್ತಿಯಲ್ಲ; ಸೌಜನ್ಯಕ್ಕಾಗಿ ರೂಪು ಪಡೆದ ಹೊಗಳಿಕೆಯಲ್ಲ. ಬಾಳನ್ನು ಕುರಿತ ಪ್ರೊ ಎ. ಆರ್. ಕೃಷ್ಣಶಾಸ್ತ್ರಿಗಳ ದೃಷ್ಟಿಕೋನವನ್ನು ಸನಿಹದಿಂದ ಅರಿತುಕೊಂಡು ಅವರೊಂದಿಗೆ ಚರ್ಚಿಸುವ, ಅವರ ಸಾಹಿತ್ಯಕೃತಿಗಳ ಸಂದೇಶವನ್ನು ಸೂಕ್ಷ್ಮವಾಗಿ ಅವಲೋಕಿಸುವ ಮೂಲಕ -ಸಹಜವಾಗಿ ಹೊರಹೊಮ್ಮಿದ ಚಿತ್ರಣವಿದು. ಎ. ಆರ್. ಕೃ. ಅವರ ಬಾಳಿನ ವಿವೇಕ, ಉದಾತ್ತ ಮೌಲ್ಯಗಳಿಂದಾಗಿ ಬಹುಕಾಲ ಹಿಂದೆಯೆ ಅವರ ಬಗೆಗೆ ನನ್ನಲ್ಲಿ ಮೆಚ್ಚುಗೆಯು ರೂಢವಾಗಿತ್ತು.

ಮೇಲ್ಕಂಡ ಲೇಖನದಲ್ಲಿ ಚರಿತ್ರನಾಯಕರ ಹೆಸರನ್ನು ಒಮ್ಮೆಯೂ ಬಳಸಲಿಲ್ಲ. ವ್ಯಕ್ತಿಯ ಹೆಸರಿಗಿಂತ ವ್ಯಕ್ತಿದರ್ಶನ ಮಹತ್ವದ್ದೆಂಬ ಕಾರಣಕ್ಕಾಗಿ ಹಾಗೆ ಮಾಡಲಾಯಿತು. ವಿದ್ವತ್ತು, ವಿವೇಕ, ವಿಶ್ವಾಸಗಳ ತ್ರಿವೇಣೀ ಸಂಗಮ ವಾಗಿದ್ದ ಪ್ರೊ. ಕೃಷ್ಣಶಾಸ್ತ್ರಿಗಳು ನಮ್ಮಿಂದ ಕಣ್ಮರೆಯಾಗಿರುವಾಗ ಅವರ ಹೆಸರನ್ನು ಗೌರವ-ಸಂತಾಪಗಳೊಂದಿಗೆ ಸ್ಮರಿಸಿಕೊಳ್ಳಬೇಕಾಗಿದೆ.

## ೨. ಜೀವನಸಂಧ್ಯೆ

ಅಹಂಕಾರ ತುಷ್ಟಿಯ ಹಂಬಲವು ಜೀವನಸಂಧ್ಯೆಯಲ್ಲಿ ಹೆಚ್ಚು ತೀವ್ರ ವಾಗುವಂತೆ ತೋರುತ್ತದೆ. ನಿವೃತ್ತ ಜೀವನದಲ್ಲಿ ತನ್ನ ಹಿಂದಿನ ಹೆಗ್ಗಳಿಕೆಯನ್ನು ಹೇಳಿಕೊಳ್ಳುವ, ಸಾಧ್ಯವಾದ ಕಡೆ ತನ್ನನ್ನು ತಾನೆ ಮೆರೆಯಿಸಿಕೊಳ್ಳುವ ಪ್ರವೃತ್ತಿ ಹೆಚ್ಚಾಗುವುದುಂಟು. ಪ್ರೊ. ಕೃಷ್ಣಶಾಸ್ತ್ರಿಗಳು ಇದಕ್ಕೆ ಅಪವಾದವಾಗಿದ್ದರು.

ಮೈಸೂರು ವಿದ್ಯಾಪೀಠದಲ್ಲಿ ಗುರುವಿನಗುರು ಪರಮಗುರು, ಆಗಿದ್ದ ಅವರಿಗೆ ಅನೇಕ ಗೌರವದ ಸ್ಥಾನಗಳು ದೊರೆಯುವ ಸಂದರ್ಭಗಳು ಸಾಕಷ್ಟಿದ್ದವು. ಆದರೆ ಅವರು ಅವುಗಳ ಬಗೆಗೆ ಆಸ್ಥೆ ತೋರಲಿಲ್ಲ. ತಾವಾಗಿಯೇ ಬಂದ ಸ್ಥಾನಗಳನ್ನು ಅವರು ಒಪ್ಪಿಕೊಳ್ಳುತ್ತಿರಲಿಲ್ಲ. ಯಾವುದೊಂದು ಸ್ಥಾನವನ್ನು ತಾವು ವಹಿಸಿಕೊಂಡರೆ ಇತರ ಕಿರಿಯರು ಅಂತಹ ಸ್ಥಾನದಿಂದ ವಂಚಿತರಾಗುವರೆಂಬುದೂ ಅವರ ಮನೋಭಾವವಾಗಿತ್ತು. ಅಧಿಕಾರ ಪಡೆದ 'ನವಿರು ಬಟ್ಟೆ' ಸೇವಾ ನಿವೃತ್ತಿಯ 'ನಾರುಬಟ್ಟೆ' ಇವೆರಡನ್ನೂ ಅವರು ಸಮತಾಭಾವದಿಂದಲೇ ಕಂಡರು. ಅಲ್ಲದೆ ಸೇವಾನಿವೃತ್ತಿಯಲ್ಲಿ 'ನಾರುಬಟ್ಟೆ'ಯೇ ಸರಿಯೆಂದು ಅವರು ಭಾವಿಸಿದರು. ಔಚಿತ್ಯ ಅವರ ಬಾಳಿನ ಒಂದು ಪ್ರಮುಖ ಅಂಶವಾಗಿದೆ.

ಪ್ರೊ. ಕೃಷ್ಣಶಾಸ್ತ್ರಿಗಳ ನಿವೃತಿಯ ತರುವಾಯದ ಬಾಳನ್ನು ಕುರಿತು ಕುವೆಂಪು ಹೇಳಿದ್ದಾರೆ: "....ನೌಕರಿಯಿಂದ ನಿವೃತ್ತರಾಗುವುದೆಂದರೆ ಹಲವರ ಪಾಲಿಗೆ ಅದೊಂದು ವಿಷಾದದ ಘಟನೆ—ಸಂಬಳ ಕಡಮೆಯಾಗುತ್ತದೆ, ಅಧಿಕಾರ ನಿಂತು ಹೋಗುತ್ತದೆ, ಮನ್ನಣೆ ನೊಟಕಾಗುತ್ತದೆ. ಆದ್ದರಿಂದಲೆ, ಅನೇಕರು ನಿವೃತ್ತರಾದ ಮೇಲೆ ಹೊಸ ನೌಕರಿಯನ್ನು ಹುಡುಕುತ್ತಾ ಹೋಗುತ್ತಾರೆ; ಕೆಲವು ಜನ ರಾಜಕೀಯಕ್ಕೆ ಕೂಡ ಇಳಿಯುತ್ತಾರೆ. ಶ್ರೀ ಕೃಷ್ಣಶಾಸ್ತ್ರಿಗಳು ಈ ಜಾತಿಯವರಲ್ಲ. ಅವರು ಹೆಸರಿಗೆ ಮಾತ್ರ ನಿವೃತ್ತರು............ಅವರ ಕಾರ್ಯಕ್ರಮ ಯಥಾಪ್ರಕಾರವಾಗಿದೆ.........ಅವರು ಕೃತಿರಚನಾಕಾರ್ಯದಲ್ಲಿ ತೊಡಗಿದ್ದಾರೆ........ಹೀಗೆ ನಿವೃತ್ತಿಯ ತರುವಾಯದ ಬಾಳನ್ನು ಇಷ್ಟು ಸಾರ್ಥಕವಾಗಿ, ಸಮರ್ಪಕವಾಗಿ ಬಳಸಿಕೊಂಡವರು ಅಪೂರ್ವ." ಪ್ರೊ. ಕೃಷ್ಣಶಾಸ್ತ್ರಿಗಳ ಬಾಳು ಸಮರ್ಪಕ ಎನ್ನುವುದು ಹಲವಾರು ವಿಧವಾಗಿ ಖಚಿತವಾಗಿದೆ.

ಜೀವನ ಸಂಧ್ಯೆಯಲ್ಲಿ ಅವರು ಪ್ರಸನ್ನ ಗಂಭೀರವಾಗಿ ಬಾಳಿದರು. ಬಾಳಿನ ಅರ್ಥವನ್ನು ಅವರು ಸರಿಯಾಗಿ ಗ್ರಹಿಸಿಕೊಂಡಿದ್ದರು. ಬಾಳಿನ ಬಗೆಗೆ ಸಮರ್ಪಕವಾದ ತಾತ್ವಿಕ ದೃಷ್ಟಿಯನ್ನು ಎಂದಿನಿಂದಲೂ ರೂಢಿಸಿಕೊಂಡಿದ್ದರು. ಅಂತೆಯೆ ಅವರು ಮನದ ಸ್ತಿಮಿತವನ್ನು ಕಾಯ್ದುಕೊಳ್ಳಲು ಸಮರ್ಥರಾದರು. ಅವರ ಜೀವನವು ಅಧ್ಯಯನ–ಚಿಂತನೆ ಅರ್ಚನೆಗಳಿಗೆ ಮೀಸಲಾಗಿತ್ತು ಜೀವನ ಸಂಧ್ಯೆಯಲ್ಲಿ ಪ್ರಸನ್ನ ಗಂಭೀರ ನಿಲುವೆಯನ್ನು ಕಾಯ್ದುಕೊಂಡ ಪ್ರೊ. ಕೃಷ್ಣಶಾಸ್ತ್ರಿಗಳ ಜೀವನ ಸ್ಫೂರ್ತಿಪ್ರದವಾಗಿದೆ.

ಸೇವಾನಿವೃತ್ತಿಯ ಅವಧಿಯಲ್ಲಿ ಅವರನ್ನು ಯಾವುದೇ ಸಾರ್ವಜನಿಕ ರಂಗದಲ್ಲಿ ಕಾಣಲಾಗುತ್ತಿರಲಿಲ್ಲ. ಸಾರ್ವಜನಿಕ ಸೇವೆಯ ಬಗೆಗೆ ರೂಢವಾಗಿರುವ ಅಗ್ಗದ ಕಲ್ಪನೆಯನ್ನೂ ಅವರು ಒಪ್ಪುತ್ತಿರಲಿಲ್ಲ. ಅವರ ಸಮರ್ಪಕ ಮತ್ತು ಗಂಭೀರ ಚಿತ್ತವೃತ್ತಿಗೆ ಇಂದಿನ ಅಗ್ಗದ ಸಾರ್ವಜನಿಕ ರಂಗಗಳು ಹಿಡಿಸುತ್ತಿರಲಿಲ್ಲ. ತಮ್ಮ ವಿರಾಮದ ಸದುಪಯೋಗ ಮಾಡಿಕೊಳ್ಳುವುದು ಹೇಗೆಂಬುದು ಅವರಿಗೆ ಚೆನ್ನಾಗಿ ತಿಳಿದಿತ್ತು.

ಮೈಸೂರು ವಿದ್ಯಾಪೀಠವು ಅವರಿಗೆ ಗೌರವಪರ ಡಾಕ್ಟರೇಟ್ ಡಿಗ್ರಿಯನ್ನು ಅರ್ಪಿಸುವ ಸಂದರ್ಭದಲ್ಲಿ ಮಾತ್ರ ಅವರು ಉಪಸ್ಥಿತರಾಗಿದ್ದು ಮೌಲಿಕವಾದ ಸಮರ್ಪಕವಾದ ಉಪನ್ಯಾಸವನ್ನಿತ್ತರು. ಅವರ ಆತ್ಮಾಭಿಮಾನ, ದೇಶಾಭಿಮಾನ, ಅವರ ಪರಿಪಕ್ವ ಜ್ಞಾನ ಅನುಭವಗಳಿಗೆ ಅನುಗುಣವಾಗುವಂತೆ ಅವರ ವಾಣಿ ಹೊರ ಹೊಮ್ಮಿಬಂದಿತು. ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಪ್ರದಾನ ಸಮಾರಂಭ ದೆಹಲಿಯಲ್ಲಿ ಸಂಭ್ರಮದಿಂದ ನಡೆಯಿತು. ಆದರೆ ಪ್ರಶಸ್ತಿವಿಜೇತರಾದ ಕೃಷ್ಣಶಾಸ್ತ್ರಿಗಳು ಅಲ್ಲಿಗೆ ಹೋಗಲಾಗಲಿಲ್ಲ. ಅವರಿರುವಲ್ಲಿಗೇ ಆ ಪ್ರಶಸ್ತಿಪ್ರದಾನದ ಸಂಕೇತ ಬಂದಿತೆಂದು ತೋರುತ್ತದೆ.

ಬಂಗಾಳಿ ಕಾದಂಬರಿಕಾರ 'ಬಂಕಿಮಚಂದ್ರ' ಎಂಬ ಅವರ ಗ್ರಂಥ ಅವರಿಗೆ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ತಂದಿತು. ಆ ಕೃತಿಯು ಅವರ ಕೀರ್ತಿ ಕಲಶಮಾತ್ರವಲ್ಲ, ಆಧುನಿಕ ಕನ್ನಡ ಸಾಹಿತ್ಯದ ಹಿರಿಮೆಯ ಸಂಕೇತವೂ ಆಗಿದೆ. ಆಧುನಿಕ ಕನ್ನಡ ಸಾಹಿತ್ಯವು ವಂಗ ಸಾಹಿತ್ಯದಿಂದ ಕೆಲವು ಕೊಡುಗೆಗಳನ್ನು ಪಡೆದಿದೆ. ಡಾ. ಕೃಷ್ಣಶಾಸ್ತ್ರಿಗಳ 'ಬಂಕಿಮಚಂದ್ರ' ಎಂಬ ಗ್ರಂಥವು ಬಂಗಾಲ ಸಾಹಿತ್ಯಕ್ಕೆ ಕನ್ನಡವು ಸಲ್ಲಿಸಿದ ಶ್ರೇಷ್ಠ ಕಾಣಿಕೆಯಾಗಿದೆ. ಈ ಗ್ರಂಥವು ಬಂಕಿಮ ಚಂದ್ರನ ಸಮಗ್ರ ವಾಙ್ಮಯವನ್ನು ಕುರಿತು ಪ್ರಗಲ್ಭ ವಿಮರ್ಶಾಕೃತಿಯಾಗಿದೆ. ಕೃಷ್ಣಶಾಸ್ತ್ರಿಗಳು ಈ ಗ್ರಂಥರಚನೆಗಾಗಿ ಬಂಕಿಮಚಂದ್ರನ ಬಗೆಗೆ ದೊರೆಯುವ ವಿಪುಲವಾದ ಸಾಮಗ್ರಿಯನ್ನೆಲ್ಲ ಪರಿಶೀಲಿಸಿದ್ದಾರೆ. ಬಂಗಾಲಿ ಭಾಷೆಯ ಮೂಲ ಕೃತಿಗಳನ್ನು ಓದಿ ರಸಗ್ರಹಣಮಾಡಿದ್ದಾರೆ. ಬಂಕಿಮನ ಎಲ್ಲ ಕೃತಿಗಳ ಪರಿಚಯ, ಹಿನ್ನೆಲೆ, ಅವನ ವ್ಯಕ್ತಿತ್ವ ಸಂದೇಶಗಳನ್ನು ಸ್ಫುಟವಾಗಿ ಸುಂದರವಾಗಿ ಮೂಡಿಸಿದ್ದಾರೆ. ಬಂಕಿಮನನ್ನು ಕುರಿತು ಇದುವರೆಗೆ ಪ್ರಕಟವಾದ ವಿಮರ್ಶಾ ಗ್ರಂಥಗಳಿಗಿಂತ ಒಂದು ತೂಕ ಹೆಚ್ಚಾಗುವ ಬಗೆಯಲ್ಲಿ ಕೃಷ್ಣಶಾಸ್ತ್ರಿಗಳ ಕೃತಿಯು ರೂಪುಗೊಂಡಿದೆ.

ಬಂಕಿಮನನ್ನು ಕೃಷ್ಣಶಾಸ್ತ್ರಿಗಳು ಮೆಚ್ಚಿಕೊಳ್ಳುವುದಕ್ಕೆ ಅವರಿಬ್ಬರಲ್ಲಿಯ ಕೆಲವು ಸಮಾನ ಅಂಶಗಳೂ ಕಾರಣವೆಂದು ತೋರುತ್ತಿದೆ. ಜನತೆ ಬೇರೆ ಭಾಷೆಗಳ ಮೋಹಕ್ಕೆ ಒಳಗಾದಾಗ ಅವರಿಬ್ಬರೂ ತಂತಮ್ಮ ಮಾತೃಭಾಷೆಗೆ ಗೌರವದ ಸ್ಥಾನವನ್ನು ತಂದುಕೊಟ್ಟರು; ತಮ್ಮೆಲ್ಲ ಶಕ್ತಿಯನ್ನು ಆ ದಿಸೆಯಲ್ಲಿ ವಿನಿಯೋಗಿಸಿದರು. "ಬಂಕಿಮನು ಆಜೀವ ವಿದ್ಯಾರ್ಥಿ; ಅವನ ಜೀವನವೆಲ್ಲಾ ವ್ಯಾಸಂಗಮಯ"— ಈ ಉಕ್ತಿಯು ಕೃಷ್ಣಶಾಸ್ತ್ರಿಗಳಿಗೂ ಅನ್ವಯಿಸುತ್ತಿದೆ. ಬಂಕಿಮನನ್ನು ಕುರಿತು "ಪ್ರತಿಭೆಯ ವರಪುತ್ರ. ಒಂದೆ ಧಾರೆಯಲ್ಲಿ....ಪಂಡಿತ, ನವಸೃಷ್ಟಿಕುಶಲನಾದ ಶಿಲ್ಪಿ, ಭಕ್ತಿ ಪ್ರಣವನಾದ ದಾರ್ಶನಿಕ,....ದೇಶಪ್ರೇಮಿ, ಧೀರ ಶ್ರದ್ಧಾಶೀಲ........" ಎಂಬ ಇನ್ನೊಂದು ಉಕ್ತಿಯೂ ಕೃಷ್ಣಶಾಸ್ತ್ರಿಗಳಿಗೆ ಅನ್ವಯಿಸುವಂತಿದೆ.

ಹೈದರಾಬಾದ ಸಾಹಿತ್ಯ ಸಮ್ಮೇಲನದ ಅಧ್ಯಕ್ಷೀಯ ಭಾಷಣದಲ್ಲಿ ಪ್ರೊ. ಕೃಷ್ಣಶಾಸ್ತ್ರಿಗಳು ಹಿಂದೀ ಭಾಷೆಯು ಹಿಂದಿಯೇತರ ಭಾಷಿತರಿಗೆ ಅನಾವಶ್ಯಕವಾದ

ಹೊರೆಯಾಗಬಾರದೆಂಬುದನ್ನು ಯುಕ್ತಿಯುಕ್ತವಾಗಿ ಪ್ರತಿಪಾದಿಸಿದ್ದರು. ಆದರೆ 'ಮೇಸ್ಟ್ರು' ಹೇಳಿದ ಈ ಮಾತನ್ನು ನಮ್ಮ 'ಮಂತ್ರಿ'ಗಳು ಆಗಲೇ ಗಮನಕ್ಕೆ ತಂದುಕೊಳ್ಳಲಿಲ್ಲ. ಹಾಗೆ ಆಗಿದ್ದರೆ ಭಾಷಾಸಮಸ್ಯೆಯನ್ನು ಕುರಿತ ಇಂದಿನ ವಿಕೃತ ಸನ್ನಿವೇಶವನ್ನು ತಪ್ಪಿಸಬಹುದಾಗಿತ್ತು. ಆ ಅಧ್ಯಕ್ಷೀಯ ಭಾಷಣದಲ್ಲಿ ಭಾಷೆಗಳ ವ್ಯಾಸಂಗದ ಬಗೆಗೆ ಸಮುಚಿತವಾದ ಮಾರ್ಗದರ್ಶನವಿದೆ. 'ಬಂಕಿಮ ಚಂದ್ರ' ಗ್ರಂಥರಚನೆಯ ಹಿನ್ನೆಲೆಯಲ್ಲಿ ಮಾತೃಭಾಷೆಗೆ ಗೌರವದ ಸ್ಥಾನ ಸಲ್ಲಬೇಕೆನ್ನುವ ಸಮುಚಿತ ದೃಷ್ಟಿಯಿದೆ. ನಮ್ಮ ನಾಡಿನಲ್ಲಿಯೇ ಕನ್ನಡಕ್ಕೆ ಗೌರವದ ಸ್ಥಾನ ದೊರೆಯದಿರುವುದನ್ನು ಕಂಡು ಕೃಷ್ಣಶಾಸ್ತ್ರಿಗಳು ಕೊರಗುತ್ತಿದ್ದರು. ಆದರೆ ಮನಸ್ಸನ್ನು ಕಹಿಮಾಡಿಕೊಂಡಿರಲಿಲ್ಲ. ಮನಸ್ಸನ್ನು ಕಹಿಮಾಡಿಕೊಳ್ಳು ವುದರಿಂದ ಏನೂ ಪ್ರಯೋಜನವಿಲ್ಲವೆಂಬುದನ್ನು ಅವರು ಅರಿತುಕೊಂಡಿದ್ದರು.

ಬಾಳಿನಲ್ಲಿ ನೋವಿನ ಅನುಭವವು ಎಲ್ಲರಿಗೂ ಇದ್ದೇಯಿದೆ. ಆದರೆ ಇಂತಹ ಅನುಭವವೂ ಮನಸ್ಸನ್ನು ಹದಕ್ಕೆ ತರುವಲ್ಲಿ ನೆರವಾಗುತ್ತದೆ. ಕೃಷ್ಣಶಾಸ್ತ್ರಿಗಳ ಮನಸ್ಸು ಹದಗೊಂಡಿತ್ತು. ಸುತ್ತಣ ಬಾಳಿನ ನಿರೀಕ್ಷಣೆಯಿಂದ, ಗ್ರಂಥವ್ಯಾಸಂಗ ದಿಂದ ಅವರು ಈ ದಿಸೆಯಲ್ಲಿ ಸ್ಪಷ್ಟವಾದ ತಾತ್ತ್ವಿಕ ನಿಲುವೆುಯನ್ನು ತಳೆದಿದ್ದರು. ಅಂತೆಯೆ ಅವರು ತಮ್ಮ ಜೀವನಸಂಧ್ಯೆಯಲ್ಲಿ ದೇಹಾಲಸ್ಯದ ಮತ್ತು ಇನ್ನಿತರ ನೋವನ್ನು ಪ್ರಸನ್ನತೆಯಿಂದಲೇ ಎದುರಿಸಿದರು. ಮೇಲ್ಕಂಡ ಲೇಖನದಲ್ಲಿ ಅವರ ಒಂದು ಮಾತು ಬಂದಿದೆ:

"ನಮ್ಮ ಪಾಲಿಗೆ ಬಂದದ್ದನ್ನು ಬಾಯಿಮುಚ್ಚಿಕೊಂಡು ಅನುಭವಿಸಿ ಒಂದು ದಿನ ಕಂತೆ ಒಗೆದುಬಿಟ್ಟರೆ ಸರಿ. ಅಲ್ಲಿಗೆ ಕಥೆ ಮುಗಿಯಿತು."

ಇಂತಹ ಮಾತುಗಳನ್ನು ಲೇಖನದಲ್ಲಿ, ಉಪನ್ಯಾಸದಲ್ಲಿ ಬಳಸುವುದು ಸುಲಭ. ಆದರೆ ಆ ನಿಲುವೆುಯನ್ನು ಬಾಳಿನಲ್ಲಿ ರೂಢಿಸಿಕೊಳ್ಳುವವರು ವಿರಳ. ಅಂತಹ ವಿರಳ ಮಾನವರ ಗುಂಪಿಗೆ ಸೇರಿದವರು ಕೃಷ್ಣಶಾಸ್ತ್ರಿಗಳು. ಈಗ ಅವರ ಭೌತಿಕ ಜೀವನದ 'ಕಥೆ ಮುಗಿಯಿತು'. ಆದರೆ ಅವರ ಸ್ಫೂರ್ತಿ, ಪ್ರಭಾವ, ಉದಾತ್ತ ಮೌಲ್ಯಗಳ ಕತೆ ಮುಗಿಯದಂತಹುದು.

‘ ಶಶಿತನಯ ’

# ಎ. ಆರ್. ಕೃಷ್ಣಶಾಸ್ತ್ರಿಗಳಿಗೆ

ನಿಮ್ಮ ವಿದ್ಯೆಯ ಗರಿಮೆ, ನಿಮ್ಮ ಹೃದಯದ ಹಿರಿಮೆ,
ನೆನೆದಷ್ಟು ಬೆಳೆಸಿ ನಿಲ್ಲುವುವು ಮಹಿಮೆ ತಮ್ಮ;
ನಿಮ್ಮ ನುಡಿ ‘ ನಾವೆಲ್ಲ ವಿದ್ಯಾರ್ಥಿಗಳೆ ’ ತಮ್ಮ,
ಎಂಬುದನು ಧೇನಿಸಿದರು ಸಾಕು ಬಹುದು ಬಲ್ಮೆ.
ಹೃದಯ ಬುಗ್ಗೆಯದು ಉಕ್ಕಂದವಾಗಿ ಹರಿವುದು
ತಾ ‘ ಅಹಂಕರೋತಿ ಪೃಥಾಭಿಮಾನ ’ ನೆನೆದು.
ನಿಮ್ಮ ಧೃತಿ, ನಿಮ್ಮ ಕೃತಿ, ಅಲ್ಲ ಬರಿಚಮತ್ಕೃತಿ,
ಶಾರದೆಗೆ ಮಂದಿರವ ಕಟ್ಟಲದು ನಿಂತ ಯತಿ.
ವಿದ್ವಾಂಸ ನಿಪುಣಮತಿಯ ಕಲೆಗಾರ ‘ **ಶ್ರೀಪತಿ** ’:
ನಿಮ್ಮ ಕತೆ, ಕಥಾಮೃತ, ವಚನಭಾರತ, ವಿತತಿ
ಭಾಷಣs ಲೇಖನs ಭಾಸನs ಚರಿತತತಿ,
ಸಂಸ್ಕೃತs ನಾಟಕ ಅಲಂಕಾರ ನಿವಹವಿತಿ
ಒಂದೊಂದು ಕಮನೀಯ ದೇದೀಪ್ಯ ಶಿಲ್ಪಕೃತಿ;
ಭುವಿಯಿಂದ ಕೈಲಾಸಕೂ ಏರಿಸಿತು ಕೀರ್ತಿ !

ಕೆ. ವೆಂಕಟರಾಮಪ್ಪ

# ಮಾರ್ಗದರ್ಶಿ

ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರು ಸಂಸ್ಕೃತದಲ್ಲಿ ವಿಶೇಷ ಪರಿಶ್ರಮ ನಡೆಸಿ ಗಣ್ಯವಾದ ಪಾಂಡಿತ್ಯವನ್ನು ಪಡೆದುಕೊಂಡಿದ್ದರು. ಅವರ ತಂದೆಯವರು ಮೈಸೂರಿನ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಹಿರಿಯ ಪ್ರಾಧ್ಯಾಪಕರಾಗಿದ್ದ ಪ್ರಸಿದ್ಧ ವ್ಯಾಕರಣ ವಿದ್ವಾಂಸರು. ಅವರು ತಮ್ಮ ಮಗನಿಗೆ ಬಾಲ್ಯದಲ್ಲಿಯೇ ಪಾಣಿನಿಯ ವ್ಯಾಕರಣ ಸೂತ್ರಗಳನ್ನು ಬಾಯಿಪಾಠವಾಗಿ ಹೇಳಿಕೊಟ್ಟಿದ್ದರಂತೆ! ಶ್ರೀ ಕೃಷ್ಣಶಾಸ್ತ್ರಿಗಳು ಆ ಕಾಲದಲ್ಲಿ ಅಪೇಕ್ಷಿಸಿದ್ದರೆ ಸಂಸ್ಕೃತ ಉಪಾಧ್ಯಾಯರೇ ಆಗಬಹುದಾಗಿತ್ತೋ ಏನೊ! ಆದರೆ ಅವರು ಕನ್ನಡಕ್ಕೆ ಒಲಿದರು; ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಉಪಾಧ್ಯಾಯರಾಗಿ ಕೆಲಸಕ್ಕೆ ಸೇರಿದರು.

ವಿಜ್ಞಾನವೇ ಪ್ರಧಾನಬೋಧನಾ ವಿಷಯವಾದ ಸೆಂಟ್ರಲ್ ಕಾಲೇಜಿನಲ್ಲಿ ಅಂದಿನ ಕಾಲದಲ್ಲಿ ಕನ್ನಡಕ್ಕೆ ಯಾವ ಪ್ರಾಶಸ್ತ್ಯವೂ ಇರಲಿಲ್ಲ. ಕನ್ನಡ ಉಪಾಧ್ಯಾಯರಿಗೆ ಹೆಚ್ಚಿನ ಪುರಸ್ಕಾರವಾಗಲೀ ಮನ್ನಣೆಯಾಗಲಿ ಇರದಿದ್ದ ಕಾಲ ಅದು. ಅಂಥ ದಿನಗಳಲ್ಲಿ ಶ್ರೀ ಶಾಸ್ತ್ರಿಗಳು ಕನ್ನಡ ಉಪಾಧ್ಯಾಯರಾಗಿ ಕೆಲಸಕ್ಕೆ ತೊಡಗಿ ವಿಜ್ಞಾನದ ವಿದ್ಯಾರ್ಥಿಗಳಿಗೇ ಕನ್ನಡದ ಉತ್ಸಾಹ ತುಂಬಿದರು. ಶ್ರೀ ಶಾಸ್ತ್ರಿಗಳಿಂದ ಸ್ಫೂರ್ತಿ ಪಡೆದ ಅಂದಿನ ತರುಣ ವಿದ್ಯಾರ್ಥಿಗಳು ಸೆಂಟ್ರಲ್ ಕಾಲೇಜಿನಲ್ಲಿ ಒಂದು 'ಕರ್ಣಾಟಕ ಸಂಘ'ವನ್ನು ಸ್ಥಾಪಿಸಿದರು. ಶ್ರೀ ಕೃಷ್ಣ ಶಾಸ್ತ್ರಿಗಳು ತಾವು ಹಿಂದೆ ನಿಂತು ವಿದ್ಯಾರ್ಥಿಗಳನ್ನೇ ಮುಂದೆ ಬಿಟ್ಟು ಅವರಿಂದ ಕನ್ನಡದ ಕೆಲಸವಮಾಡಿಸಿ ಮಾರ್ಗದರ್ಶನ ನೀಡಿ ಆ ತರುಣರ ಭಕ್ತಿ ಗೌರವಗಳಿಗೆ ಪಾತ್ರರಾದರು. ಆ ಕಾಲದ ವಿದ್ಯಾರ್ಥಿಗಳು ಕಾಲೇಜುಬಿಟ್ಟು ಬಹಳ ಕಾಲವಾದ ಮೇಲೆ ತಮ್ಮ ಈ ಪ್ರಿಯಗುರುಗಳ ಸಂದರ್ಶನ ಲಭಿಸಿದಾಗ ತೋರುತ್ತಿದ್ದ ಭಕ್ತಿ, ಆದರ, ಗೌರವ, ಪ್ರೀತಿ ಉತ್ಸಾಹ, ಸಡಗರಗಳನ್ನು ವರ್ಣಿಸಲು ಶಕ್ಯವಲ್ಲ.

ಕರ್ಣಾಟಕ ಸಂಘವು 'ಪ್ರಬುದ್ಧ ಕರ್ಣಾಟಕ'ವನ್ನು ಹೊರಡಿಸುವ ಸಂಕಲ್ಪ ಮಾಡಿದಾಗ ಅದರ ಸಂಪಾದಕತ್ವ ಶ್ರೀ ಶಾಸ್ತ್ರಿಗಳ ಪಾಲಿಗೇ ಬಂತು. ಆ ಹೊರೆ ಯನ್ನು ಅವರು ಪ್ರೀತಿಯಿಂದ ಹೊತ್ತುಕೊಂಡು ಪತ್ರಿಕೆಯ ಕೆಲಸವನ್ನು ಬಹಳ

ಅಕ್ಕರೆಯಿಂದ ಮಾಡಿದರು. ಅವರಿಗೆ ಮೈಸೂರಿಗೆ ವರ್ಗವಾದರೂ ಪತ್ರಿಕೆಯ ಹೊಣೆ ತಪ್ಪಲಿಲ್ಲ. ಅನೇಕ ವರ್ಷಗಳಕಾಲ ಪ್ರಬುದ್ಧ ಕರ್ಣಾಟಕ ಮೈಸೂರಿನಲ್ಲಿ ಅಚ್ಚಾಗಿ ಬೆಂಗಳೂರಿನಲ್ಲಿ ಪ್ರಕಟವಾಗುತ್ತಿತ್ತು. ೧೯೩೮ರಲ್ಲಿ ಶ್ರೀ ಶಾಸ್ತ್ರಿಗಳು ಮತ್ತೆ ಬೆಂಗಳೂರಿಗೆ ವರ್ಗಪಟ್ಟು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡದ ಪ್ರಾಧ್ಯಾಪಕ ರಾಗಿ ನಿಂತು ಕರ್ಣಾಟಕ ಸಂಘ ಮತ್ತು ಪ್ರಬುದ್ಧ ಕರ್ಣಾಟಕಗಳ ಯೋಗಕ್ಷೇಮ ವನ್ನು ವಹಿಸಿಕೊಂಡರು. ಪತ್ರಿಕೆಗೆ ಬೇಕಾದ ಲೇಖನಗಳನ್ನು ಸಂಗ್ರಹಿಸುವುದರಿಂದ ತೊಡಗಿ ಪತ್ರಿಕೆಯನ್ನು ಚಂದಾದಾರರಿಗೆ ತಲುಪಿಸುವವರೆಗೆ ಎಲ್ಲ ಕೆಲಸಗಳನ್ನೂ ಶಾಸ್ತ್ರಿಗಳು ಸ್ವಂತವಾಗಿ ಮಾಡುತ್ತಿದ್ದುದುಂಟು. ಅವರ ಬೈಸಿಕಲ್ ಪ್ರಬುದ್ಧ ಕರ್ಣಾಟಕದ ಕೈಂಕರ್ಯದಲ್ಲಿ ಸವೆಯಿತೆಂದು ಹೇಳಿದರೆ ಅತಿಶಯೋಕ್ತಿಯೇನೂ ಆಗದು. ಅಚ್ಚಾದ ಹಲವು ಫಾರಮ್ಮುಗಳನ್ನು ಬೇರೆ ಬೇರೆ ಮುದ್ರಣಾಲಯಗಳಿಂದ ಹೊತ್ತು ಶ್ರೀಮಲ್ಯರ ಬಿ. ಬಿ. ಡಿ. ಪ್ರೆಸ್ಸಿಗೆ ಸಾಗಿಸುವುದು, ಪತ್ರಿಕೆಯ ಭಾಂಗಿ ಗಳನ್ನು ಅಂಚೆ ಕಛೇರಿಗೆ ಸಾಗಿಸುವುದು ಮುಂತಾದ ಹಲವು ಕೆಲಸಗಳನ್ನು ಆ ಬೈಸಿಕಲ್ ಮಾಡಿತು! ಚಂದಾದಾರರನ್ನು ಸೇರಿಸುವುದು, ಅವರಿಂದ ಚಂದಾ ಹಣವನ್ನು ವಸೂಲುಮಾಡುವುದು, ಚಂದಾದಾರರ ವಿಳಾಸಗಳನ್ನು ಬರೆಯುವುದು, ಅಂಚೆ ಚೀಟಿ ಹಚ್ಚುವುದು—ಯಾವ ಕೆಲಸವನ್ನೂ ಶ್ರೀ ಕೃಷ್ಣಶಾಸ್ತ್ರಿಗಳು ಕೀಳೆಂದು ಭಾವಿಸಲಿಲ್ಲ; ಎಲ್ಲ ಕೆಲಸಗಳನ್ನೂ ಮಾಡಿ ಪ್ರಬುದ್ಧ ಕರ್ಣಾಟಕದ ಚೇತನ ಸ್ವರೂಪರಾಗಿದ್ದರು.

ವಿದ್ಯಾರ್ಥಿಗಳ ಉತ್ಸಾಹಾತಿಶಯದಿಂದ ಜನ್ಮತಾಳಿ ಅವರ ಧಾರಾಳವಾದ ನೆರವಿನಿಂದಲೇ ನಡೆದುಬಂದ 'ಪ್ರಬುದ್ಧ ಕರ್ಣಾಟಕ'ವನ್ನು ಮೈಸೂರು ವಿಶ್ವ ವಿದ್ಯಾಲಯದ ಪತ್ರಿಕೆಯಾಗಿ ಬೆಳಗಬೇಕೆಂದೂ ಹಾಗೆ ಮಾಡಿದರೆ ಅದನ್ನು ಇನ್ನೂ ಚೆನ್ನಾಗಿ ನಡೆಸಲು ಸಾಧ್ಯವಾಗಬಹುದೆಂದೂ ಅಂದಿನ ಕನ್ನಡ ಪ್ರಾಧ್ಯಾಪಕರೂ ವಿಶ್ವವಿದ್ಯಾನಿಲಯದ ಅಧಿಕಾರಿಗಳೂ ಅಭಿಪ್ರಾಯಪಡಲು ಶ್ರೀ ಶಾಸ್ತ್ರಿಗಳು ೧೯೩೩ರ ಸುಮಾರಿನಲ್ಲಿ 'ಪ್ರಬುದ್ಧ ಕರ್ಣಾಟಕ'ವನ್ನು 'ದುಡಿಯುವ ಮಗನನ್ನು ದತ್ತು ಕೊಟ್ಟ ಹಾಗೆ' ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿಬಿಟ್ಟರು. ಪತ್ರಿಕೆಯ ಚಂದಾ, ಜಾಹೀರಾತುಗಳ ಹಣ, ವಿದ್ಯಾಇಲಾಖೆಯವರು ನೀಡುತ್ತಿದ್ದ ಸಹಾಯ ಧನ, ಇವೆಲ್ಲ ಕರ್ಣಾಟಕ ಸಂಘಕ್ಕೆ ತಪ್ಪಿಹೋದರೂ ಲೆಕ್ಕಿಸದೆ ಪತ್ರಿಕೆಯ ಹಿತ ವೊಂದನ್ನೇ ಗಮನದಲ್ಲಿಟ್ಟು ಶಾಸ್ತ್ರಿಗಳು ಪತ್ರಿಕೆಯನ್ನು ಕೊಟ್ಟುಬಿಟ್ಟರು. ಆದರೆ ಮತ್ತೆ ಕೆಲವೇ ವರ್ಷಗಳಲ್ಲಿ ಅವರು ಮೈಸೂರಿಗೆ ಕನ್ನಡ ಪ್ರಾಧ್ಯಾಪಕರಾಗಿ ಬಂದು ಪ್ರಬುದ್ಧಕರ್ಣಾಟಕದ ಸಂಪಾದಕತ್ವವನ್ನು ಮತ್ತೆ ವಹಿಸಿಕೊಳ್ಳಬೇಕಾಯಿತು. ಅವರು ಉದ್ಯೋಗದಿಂದ ನಿವೃತ್ತರಾಗುವತನಕವೂ ಆ ಕೆಲಸವನ್ನು ನಿರ್ವಹಿ ಸಿದರು. 'ಪ್ರಬುದ್ಧ ಕರ್ಣಾಟಕ' ಶ್ರೀ ಕೃಷ್ಣಶಾಸ್ತ್ರಿಗಳ ವಾಙ್ಮಯ ತಪಸ್ಸಿನ ಫಲ. ಅದು ಅವರೇ ಹುಟ್ಟಿಹಾಕಿ ಬೆಳೆಸಿದ ಗಿಡ. ಅನೇಕ ಹೊಸ ಬರಹಗಾರರ ಪಾಲಿಗೆ

ಅದು ಕಲ್ಪವೃಕ್ಷವಾಯಿತು. ಹಲವು ಗ್ರಂಥಗಳು ಆ ಪತ್ರಿಕೆಯಲ್ಲಿ ಮೊದಲು ಬೆಳಕು ಕಂಡವು. ಆಧುನಿಕ ಕನ್ನಡ ಸಾಹಿತ್ಯದ ಬಹುಮುಖವಾದ ಅಭಿವೃದ್ಧಿಯಲ್ಲಿ ಪ್ರಬುದ್ಧ ಕರ್ಣಾಟಕದ ಪಾತ್ರ ಮಹತ್ವಪೂರ್ಣವಾದುದು. ಕಥೆ, ಕವನ, ನಾಟಕ ಮೊದಲಾದುವೇ ಅಲ್ಲದೆ ಶಾಸ್ತ್ರ, ಸಂಶೋಧನೆ, ಆಧುನಿಕವಿಜ್ಞಾನ, ಚರಿತ್ರೆ ಮುಂತಾದುವುಗಳಿಗೆ ಸಂಬಂಧಪಟ್ಟ ಅನೇಕ ಲೇಖನಗಳು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಿತವಾದುವು. ಅದರ ಮೊದಲ ಸಂಪಾದಕರಾದ ಶ್ರೀ ಶಾಸ್ತ್ರಿಗಳು ತಮ್ಮ ಮಿತ್ರರನ್ನೂ ಶಿಷ್ಯರನ್ನೂ ಕನ್ನಡದಲ್ಲಿ ಲೇಖನ ವ್ಯವಸಾಯಕ್ಕೆ ತೊಡಗುವಂತೆ ಹುರಿದುಂಬಿಸಿದುದೇ ಅಲ್ಲದೆ, ತಾವೂ ನಿರಂತರವಾಗಿ ಬರೆದರು. ಹಾಗೆ ಪತ್ರಿಕೆಯಲ್ಲಿ ಪ್ರಕಟಿಸಿದ ಅವರ ಅನೇಕ ಲೇಖನಗಳು ಈಗ ಒಂದು ಬೃಹತ್ಸಂಪುಟವನ್ನು ತುಂಬಿವೆ.

ಕನ್ನಡದ ಮೂಲಕ ವಿಜ್ಞಾನಪಾಠ ಸುತರಾಂ ಸಾಧ್ಯವೇ ಇಲ್ಲವೆಂದು ಹುಟ್ಟ ಕನ್ನಡಿಗರೇ ನಿರ್ಣಯಿಸಿಕೊಂಡಿದ್ದ ಆ ಕಾಲದಲ್ಲಿ ಶ್ರೀ ಕೃಷ್ಣಶಾಸ್ತ್ರಿಗಳು ಸೆಂಟ್ರಲ್ ಕಾಲೇಜಿನ ಅನೇಕ ವಿಜ್ಞಾನಪಂಡಿತರನ್ನು ಒಲಿಸಿಕೊಂಡು ಅವರಿಂದ ಕರ್ಣಾಟಕ ಸಂಘದಲ್ಲಿ ಅನೇಕ ಭಾಷಣಗಳನ್ನು ಮಾಡಿಸಿದರು. 'ಪಿಂಗಾಣಿ ಕೈಗಾರಿಕೆ' 'ಸಸ್ಯಜೀವನದ ಸ್ವಾರಸ್ಯಗಳು' 'ಬೆಳಕು' 'ಶಬ್ದದ ಅಲೆಗಳು' 'ರಕ್ತ ಸಂಯೋಜನೆ' ಮೊದಲಾದ ವಿಜ್ಞಾನೋಪನ್ಯಾಸಗಳ ನೆನಪು ಅಂದಿನ ಶ್ರೋತೃಗಳ ಮನಸ್ಸಿನಲ್ಲಿ ಇಂದಿಗೂ ಹಸುರಾಗಿಯೇ ಇರುವುದೆಂದು ನನ್ನ ನಂಬಿಕೆ. ಶ್ರೀ ಪಿ. ಶ್ರೀನಿವಾಸರಾಯರು 'ಸಂಬಂಧ ಸಿದ್ಧಾಂತ'ವನ್ನು ಕುರಿತು ಮಾಡಿದ ಕನ್ನಡ ಉಪನ್ಯಾಸವನ್ನು ಮರೆಯಬಹುದೆ? ಅಂದು ಅಧ್ಯಕ್ಷತೆ ವಹಿಸಿದ್ದ ಭೌತಶಾಸ್ತ್ರ ಪ್ರಧಾನಪ್ರಾಧ್ಯಾಪಕರಾಗಿದ್ದ ರಾವ್‌ಬಹದ್ದೂರ್ ಬಿ. ವೆಂಕಟೇಶಾಚಾರ್ಯರು ಯಾವ ಪೂರ್ವ ಸಿದ್ಧತೆಯೂ ಇಲ್ಲದೆ ಮಹಾ ಜಟಿಲವಾದ ಆ ವಿಜ್ಞಾನ ವಿಚಾರವನ್ನು ಕುರಿತು ಅತ್ಯಂತ ಸರಳವಾದ ರೀತಿಯಲ್ಲಿ ಶ್ರೋತೃಗಳ ಮನಮುಟ್ಟುವಂತೆ ಶುದ್ಧ ಕನ್ನಡದಲ್ಲಿ ವ್ಯಾಖ್ಯಾನಮಾಡಿದ ವೈಖರಿ ಎಲ್ಲರ ಮೆಚ್ಚುಗೆಯನ್ನು ಪಡೆಯಿತು. 'ಸಂಬಂಧ ಸಿದ್ಧಾಂತ' ಎಂಬುದಕ್ಕಿಂತ 'ಸಾಪೇಕ್ಷ ಸಿದ್ಧಾಂತ' ಎಂಬುದೇ ಸರಿಯೆಂದು ಅಂದು ಅವರೇ ತಮ್ಮ ಅಧ್ಯಕ್ಷ ಭಾಷಣದಲ್ಲಿ ಸೂಚಿಸಿದರು. ಶಾಸ್ತ್ರ ವಶವಾಗಿದ್ದರೆ ಅದನ್ನು ಸ್ವಭಾಷೆಯಲ್ಲಿ ಹೇಳುವುದು ಕಷ್ಟವಲ್ಲವೆಂಬುದನ್ನು ಅವರ ಆ ಪ್ರವಚನ ಸಿದ್ಧಾಂತಮಾಡಿ ತೋರಿಸಿತು. ಶ್ರೀ ಕೃಷ್ಣಶಾಸ್ತ್ರಿಗಳವರು ಏರ್ಪಡಿಸಿ ನಡೆಸಿದ ಈ ವಿಜ್ಞಾನೋಪನ್ಯಾಸಮಾಲೆ ಕನ್ನಡ ವಿಜ್ಞಾನೋಪದೇಶಕ್ಕೆ ಅನುಪಯುಕ್ತವೆಂಬ ಕಲ್ಪನೆಯನ್ನು ಸುಳ್ಳಾಗಿಸಿತು; ಕನ್ನಡದ ಹಿರಿಮೆಯನ್ನು ಸ್ಥಾಪಿಸಿತು.

ಶ್ರೀ ಕೃಷ್ಣಶಾಸ್ತ್ರಿಗಳ ಪಾಠಕ್ರಮದ ಸೊಗಸನ್ನು ನಾನು ಹೆಚ್ಚಿಗೆ ಪ್ರಸ್ತಾಪಿಸುವುದು ಅನಾವಶ್ಯಕ. ಏಕೆಂದರೆ ಅವರ ಶಿಷ್ಯರಾದ ಪುಣ್ಯಶಾಲಿಗಳಿಗೆಲ್ಲ ಅದು ಅನುಭವ ವೇದ್ಯವಾಗಿದೆ. ಆ ಭಾಗ್ಯಲಭಿಸಿದವರಿಗೆ ನಾನು ಅದನ್ನು ಮಾತಿನಿಂದ

ಚಿತ್ರಿಸಲು ಸಮರ್ಥನಲ್ಲ. ಅವರ ಪಾಠ ಒಂದು ಅಪೂರ್ವ ರಸದೂಟ. ಅದು ಅನುಭವೈಕವೇದ್ಯವಾದ ಒಂದು ಆನಂದ. ಕನ್ನಡ ಸಾಹಿತ್ಯ ಸಾಗರದಲ್ಲಿನ ಮುತ್ತುರತ್ನಗಳನ್ನೆಲ್ಲ ಎತ್ತಿತಂದು ತೋರಿಸಿ ವಿದ್ಯಾರ್ಥಿಗಳಿಗೆ ಅವುಗಳ ದಿವ್ಯ ಕಾಂತಿಯ ಅನುಭವ ಮಾಡಿಕೊಟ್ಟರು. ಅವರ ಶಿಷ್ಯ ವಾತ್ಸಲ್ಯವನ್ನು ಎಷ್ಟು ಹೊಗಳಿದರೂ ಸ್ವಲ್ಪವೇ. ಅನೇಕವೇಳೆ ಅವರ ಮಾತು ಗಡುಸಾಗಿ, ಪೆಡಸಾಗಿ ತೋರಿದರೂ ಅವರ ಮನಸ್ಸು ಮಾತ್ರ ಬಹಳ ಮೃದು. ಸಜ್ಜನರ ಹೃದಯವು ನವನೀತ ಕೋಮಲವೆಂದು ಹೇಳುವುದು ವಾಡಿಕೆ. ಆದರೆ ಅದು ಸರಿಯಲ್ಲ. ಏಕೆಂದರೆ ಬೆಣ್ಣೆ ತನಗೇ ಬಿಸಿ ತಾಕಿದರೆ ಮಾತ್ರ ಕರಗುತ್ತದೆ. ಸಜ್ಜನರ ಹೃದಯ ವಾದರೋ ದೇಹಕ್ಕಾದ ತಾಪದಿಂದಲೇ ಕರಗಿ ನೀರಾಗುತ್ತದೆ! ಈ ಸೂಕ್ತಿ ಶ್ರೀ ಶಾಸ್ತ್ರಿಗಳ ಮನೋಧರ್ಮದ ಯಥಾರ್ಥ ವರ್ಣನೆ! ಅವರು ಎಲ್ಲ ಕಾಲಗಳಲ್ಲಿ ಶಿಷ್ಯರ ಅಭ್ಯುದಯವನ್ನೇ ಕೋರಿದರು. ಪರೀಕ್ಷಕರಾಗಿ ಅಭ್ಯರ್ಥಿಗಳ ಉತ್ತರಗಳಿಗೆ ಬೆಲೆ ಕಟ್ಟುವಾಗಲೂ ಶ್ರೀ ಶಾಸ್ತ್ರಿಗಳು ಧಾರಾಳಿಗಳು. ಪಾಸು ಫೇಲುಗಳ ಅಂಚಿನಲ್ಲಿ ತೊಳಲಾಡುವ ಅಭ್ಯರ್ಥಿಗಳ ವಿಷಯದಲ್ಲಿ ಅವರಿಗೆ ಕರುಣೆ. ಮೊದಲ ದರ್ಜೆಯ ಉತ್ತರ ಪತ್ರಿಕೆ ಕಂಡಾಗ ಶಾಸ್ತ್ರಿಗಳಿಗೆ ಬಹಳ ಮೆಚ್ಚಿಗೆ, ಆನಂದ! ಅವರು ಎಂದೂ **Red and Blood Pencil** ಬಳಸಿದವರಲ್ಲ. ಅವರ ಕರುಣೆ ನಿರ್ವ್ಯಾಜವಾದದ್ದು.

ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಗಳಾಗಿ ಸೇರಿ ಶ್ರೀ ಶಾಸ್ತ್ರಿಗಳ ಪಾಠದ ಪ್ರಯೋಜನವನ್ನು ಪಡೆದವರು ಹಲವರು. ಅವರು ರಚಿಸಿದ ಗ್ರಂಥಗಳನ್ನು ಓದಿ ಆ ಮೂಲಕ ಜ್ಞಾನ ಲಾಭ ಹೊಂದುವ ಕನ್ನಡಿಗರು ಅಸಂಖ್ಯಾತರು. ಮುಂದಿನ ಪೀಳಿಗೆಗಳವರಿಗೂ ಅವರ ಗ್ರಂಥಗಳು ಬದುಕಿನದಾರಿ ದೀಪಗಳಾಗಿ ಬೆಳಗುವುವು. ಶ್ರೀಕೃಷ್ಣದ್ವೈಪಾಯನರು ಹದಿನೆಂಟುಪರ್ವಗಳಷ್ಟು ವಿಸ್ತಾರವಾಗಿ ಬರೆದು ಮಹಾ ಭಾರಾವತಾರವೆಂದು ಹೆಸರಿಟ್ಟ ಲಕ್ಷ ಶ್ಲೋಕಗಳನ್ನೊಳಗೊಂಡ ಆ ದೇವಭಾಷೆಯ ಮೇರುಕೃತಿಯನ್ನು ಕನ್ನಡ ಓದಬಲ್ಲವರಿಗೆಲ್ಲ ಸುಲಭವಾಗಿ ತಿಳಿಯುವಂತೆ ತಿಳಿಗನ್ನಡದಲ್ಲಿ ಬರೆದ ಯಶಸ್ಸು ಶ್ರೀ ಕೃಷ್ಣಶಾಸ್ತ್ರಿಗಳದು. ಅವರ 'ವಚನ ಭಾರತ' ಇಂದು ಲೋಕಪ್ರಿಯವಾಗಿದೆ. ಆ ಮಹಾಕಥೆಯ ಅಂದ ಕೊಂಚವೂ ತಗ್ಗದಂತೆ ಕುಗ್ಗದಂತೆ ಮುದ್ದಾಗಿ ಬರೆದು ಅಚ್ಚುಕಟ್ಟಾಗಿ ಪ್ರಕಟಿಸಿ ಅಗ್ಗದ ಬೆಲೆಗೆ ಕೊಟ್ಟು ಶ್ರೀ ಶಾಸ್ತ್ರಿಗಳು ಕನ್ನಡ ಜನರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇದಲ್ಲದೆ ಪುಟ್ಟಮಕ್ಕಳಿಗಾಗಿ ಅವರು 'ನಿರ್ಮಲ ಭಾರತೀ' ಎಂಬ ಹೆಸರಿನಲ್ಲಿ ಒಂದು ಸಣ್ಣ ಭಾರತವನ್ನೂ ರಚಿಸಿದ್ದಾರೆ.

ಪಾಠ, ಪತ್ರಿಕೋದ್ಯಮ, ಗ್ರಂಥರಚನೆ, ಶಿಷ್ಯೋದ್ಧಾರ, ಕರ್ಣಾಟಕ ಸಂಘದ ಸಾಂಸ್ಕೃತಿಕ ಚಟುವಟಿಕೆ—ಎಲ್ಲ ಕ್ಷೇತ್ರಗಳಲ್ಲಿಯೂ ಶ್ರೀ ಕೃಷ್ಣಶಾಸ್ತ್ರಿಗಳು ಕನ್ನಡದ ಮಮತೆಯಿಂದ ದುಡಿದರು. ಪ್ರತಿಫಲದ ಯೋಚನೆಯನ್ನೇ ನೋಡದೇ ಉತ್ಸಾಹ ದಿಂದ ದುಡಿದು ಇತರರಿಗೆ ಮಾರ್ಗದರ್ಶಕರಾದರು. ಸಾರ್ಥಕ ಜೀವನವನ್ನು

ನಡೆಸಿ ಜೀವನದಲ್ಲಿ ಹಲವು ದುಃಖಗಳನ್ನು ಅನುಭವಿಸಿ ನೊಂದರೂ ಎದೆಗುಂದದೆ, ಧರ್ಮಪರಾಯಣರಾಗಿ ಆಚಾರನಿಷ್ಠರಾಗಿ ಬಾಳಿ ಪರಿಣತ ವಯಸ್ಸಿನಲ್ಲಿ ಅನಾಯಾಸ ಮರಣಹೊಂದಿದ ಶ್ರೀ ಕೃಷ್ಣಶಾಸ್ತ್ರಿಗಳು ಧನ್ಯಾತ್ಮರು, ಪುಣ್ಯಜೀವಿಗಳು. ಆ ಸುಕೃತಾತ್ಮರಿಗೆ ಸದ್ಗತಿ ಲಭಿಸುವುದು ದೊಡ್ಡ ಸಂಗತಿಯಲ್ಲಿ. ಬದುಕಿನಲ್ಲಿ ಅವರು ಕನ್ನಡದ ಮೇಲ್ಮೆಗಾಗಿ ನಿರಂತರವಾಗಿ ಶ್ರಮಿಸಿದರು. ಅವರ ಶಿಷ್ಯರು, ಭಕ್ತರು ಮಿತ್ರರು ಕನ್ನಡದ ತೇರನ್ನು ಮುಂದಕ್ಕೆ ಎಳೆದರೆ ವೈಕುಂಠದಿಂದ ನೋಡಿ ಶ್ರೀ ಶಾಸ್ತ್ರಿಗಳು ಸಂತೋಷಪಟ್ಟು ಹರಸುತ್ತಾರೆ. ಅವರು ನಾವು ಮಾಡುವ ಕನ್ನಡ ಕೈಂಕರ್ಯವನ್ನು ಪ್ರೀತಿಯಿಂದ ಗಮನಿಸುತ್ತಿರುವರೆಂದೇ ನನ್ನ ನಂಬಿಕೆ.

# ಶಾಸ್ತ್ರಿಗಳ ಕುಲುಮೆ

...ದೈಹಿಕವಾಗಿ ಕೃಷ್ಣಶಾಸ್ತ್ರಿಗಳದು ಆಕರ್ಷಣೀಯವಾದ ವ್ಯಕ್ತಿತ್ವವೇನಲ್ಲ ಆದರೆ ಕನ್ನಡ ನವೋದಯ ಇತಿಹಾಸದಲ್ಲಿ ಅವರ ವ್ಯಕ್ತಿತ್ವ ತುಂಬ ದೃಢವಾದುದು ; ಅನುಕರಣೀಯವಾದುದು. ಕೃಷ್ಣಶಾಸ್ತ್ರಿಗಳು ಕಟ್ಟಿದ ಕರ್ಣಾಟಕಸಂಘ ಅದರ ಮರಿಗಳು, ಅವರು ಆರಂಭಿಸಿದ 'ಪ್ರಬುದ್ಧ ಕರ್ಣಾಟಕ' ಪತ್ರಿಕೆ ಕನ್ನಡಿಗರಲ್ಲಿ ಕನ್ನಡತನದ ಪ್ರಜ್ಞೆಯನ್ನು ಬೆಳೆಸುವಲ್ಲಿ ಅಪಾರ ಕೆಲಸಮಾಡಿದವು. ಕೃಷ್ಣಶಾಸ್ತ್ರಿಗಳ ದೂರದರ್ಶಿತ್ವ, ಕರ್ತವ್ಯನಿಷ್ಠೆಗಳಿಗೆ ಈ ಯೋಜನೆಗಳು ನಿತ್ಯಸಾಕ್ಷಿಯಾದವು. ಕನ್ನಡಿಗರ ಜಡಜೀವನಕ್ಕೆ ಅವು ಚೇತನ ತುಂಬಿದವು. ಹೊಸಲೋಕವೊಂದನ್ನು ತೆರೆದು ತೋರಿದವು.

ಸ್ವಯಂ ಲೇಖಕರಾದ ಅವರು ಅನೇಕ ಲೇಖಕರಿಗೆ ನಾನಾ ಬಗೆಯಾಗಿ ಪ್ರೋತ್ಸಾಹ ಕೊಟ್ಟರು. ಆರ್ಥಿಕ ಬೆಂಬಲ ನೀಡಿದರು. ತೊದಲುನುಡಿಗಳನ್ನು ಸಹನೆಯಿಂದ ತಿದ್ದಿದರು ; ಅವನ್ನು ಪ್ರಕಟಿಸಿದರು. ಸಿದ್ಧಿ ಪ್ರಸಿದ್ಧಿಗಳನ್ನು ಪಡೆದಿರುವ ಇಂದಿನ ಎಷ್ಟೋ ಜನ ಲೇಖಕರು ಕನ್ನಡಕ್ಕೆ ಕೃಷ್ಣಶಾಸ್ತ್ರಿಗಳ ಕೊಡುಗೆಯಾಗಿದ್ದಾರೆ. ಅನೇಕರ ಆ ಪ್ರತಿಭೆಯನ್ನು ಕೃಷ್ಣಶಾಸ್ತ್ರಿಗಳು ಗುರುತಿಸದೆ ಹೋಗಿದ್ದರೆ, ಅದನ್ನು ಬೆಳಕಿಗೆ ತರಲು ಪ್ರಯತ್ನಿಸದಿದ್ದರೆ ಹೊಸಗನ್ನಡ ಸಾಹಿತ್ಯ ಇಂದಿನಷ್ಟು ಸಂಪದ್ಯುಕ್ತವಾಗುತ್ತಿರಲಿಲ್ಲ. ಅದೆಷ್ಟೋ ಜನ ಲೇಖಕರ ಪ್ರತಿಭೆಯನ್ನು ಒಂದು ಸ್ವರೂಪಕ್ಕೆ ತರುವಲ್ಲಿ 'ಪ್ರಬುದ್ಧ ಕರ್ಣಾಟಕದ'ದ ತಿದಿಯನ್ನು ಕೃಷ್ಣಶಾಸ್ತ್ರಿಗಳು ಬೇಸರವಿಲ್ಲದೆ ಒತ್ತಿದರು. ಅವರ ಕುಲುಮೆಯಲ್ಲಿ ಆಯುಧಗಳು ಮಾತ್ರವಲ್ಲದೆ ಆಭರಣಗಳೂ ಸಿದ್ಧವಾದವು...

—ಡಾ. ಹಾ. ಮಾ. ನಾಯಕ

('ಕನ್ನಡಪ್ರಭ': ಫೆಬ್ರವರಿ ೧೨, ೬೮)

ಬಿ. ಎಸ್. ರುಕ್ಕಮ್ಮ

# ನಿರ್ಮಲ ಭಾರತೀ

ನಿರ್ಮಲಾ, ಭಾರತೀ ಎಂಬ ಇಬ್ಬರು ಪುಟ್ಟ ಮೊಮ್ಮಕ್ಕಳ ನೆಪದಲ್ಲಿ ಕನ್ನಡ ನಾಡಿನ ಮಕ್ಕಳಿಗೆ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ಕೊಟ್ಟ ಅನನ್ಯವಾದ, ಆಶೀರ್ವಾದ ಪೂರ್ವಕವಾದ ಉಡುಗೊರೆ ಇದು. ಅವರು, "ತಿಳಿಯಾದ ಮಾತಿನಲ್ಲಿ ಭಾರತವನ್ನು ಹೇಳಬೇಕು ಎಂದು ಉದ್ದೇಶ ಪಟ್ಟಿದೇನೆ. ಎಷ್ಟು ಸಾರ್ಥಕ ವಾಯಿತೊ ಓದುವ ಮಕ್ಕಳು ಹೇಳಬೇಕು"—ಎಂದು ತಮ್ಮ ವಿನಯವನ್ನು ಮೆರೆ ದಿದ್ದಾರೆ. ಅನುಪಮವಾದ ಸತ್ವದಿಂದಲೂ, ಸರ್ವದಾ ಚಿಮ್ಮುತ್ತಿರುವ ತಣಿಯದ ಕುತೂಹಲದಿಂದಲೂ, ಹಚ್ಚಹಸಿರಾದ ಚುರುಕಾದ ಮನದಿಂದಲೂ ಕೂಡಿದ ಮಕ್ಕಳಿಗೆ, ಈ ಪುಟ್ಟ ಭಾರತ ಅತ್ಯಂತ ಅವಶ್ಯವಾದ ಕೊಡುಗೆ. ಎಳೆಯರ ಆತ್ಮದ ಹಸಿವನ್ನು ತಣಿಸಲು, ಅವರನ್ನು ಭಾರತದ ಮಕ್ಕಳನ್ನಾಗಿಯೇ ಉಳಿಸಲು, ಉತ್ತಮವಾದ ಸಂಸ್ಕಾರವನ್ನು ಅವರಲ್ಲಿ ಉಂಟುಮಾಡಲು ಇದು ಪರಮಸಮರ್ಪಕವಾದ ಗ್ರಂಥ. ಕನ್ನಡದಲ್ಲಿ ಮಕ್ಕಳಿಗೆ ತಕ್ಕ ಸಾಹಿತ್ಯವೇ ಇಲ್ಲ, ಇರುವುದು ಸಾಲದು ಎಂಬ ಮಾತುಗಳನ್ನು ಆಡುತ್ತಿರುತ್ತೇವೆ. ಅವರಿಗಾಗಿ ವಿಜ್ಞಾನವನ್ನೂ, ಕಥೆಗಳನ್ನೂ, ಪುರಾಣ ಪಂಚತಂತ್ರವನ್ನು, ಜಾತಕ ಕಥೆಗಳನ್ನೂ ಹೇಳಿದ್ದೇವೆ. ಮಕ್ಕಳನ್ನು ಅಚ್ಚ ಭಾರತೀಯರಾಗಿ ಬೆಳೆಸಲು, ನಮ್ಮ ಸಂಸ್ಕೃತಿಯನ್ನು ಕಾಪಿಟ್ಟುಕೊಳ್ಳಲು ನಾವು ಅವರಿಗೆ ಭಾರತ ರಾಮಾಯಣ ಗಳನ್ನು ಹೇಳಬೇಕು. ಪ್ರೀತಿಯಿಂದ, ಅಕ್ಕರೆಯಿಂದ ಅವರ ಮನವನ್ನರಿತು ಅದಕ್ಕೆ ತಕ್ಕಂತೆ ಹೇಳಬೇಕು. ಯಾವ ಕೆಲಸವನ್ನೂ ಸಮರ್ಪಕವಾಗಿಯೇ ಮಾಡುವ ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಇದನ್ನು ಅತ್ಯಂತ ಮನೋಜ್ಞವಾಗಿ ನಿರ್ವಹಿಸಿದ್ದಾರೆ.

ವ್ಯಾಸ ಮಹರ್ಷಿಗಳು ರಚಿಸಿದ ಸಂಸ್ಕೃತ ಮಹಾಭಾರತದಲ್ಲಿ, ಶ್ರೀ ಎ. ಆರ್. ಕೃ. ಅವರು ತಿಮಿಂಗಿಲದಂತೆ ಈಜಾಡಿದ್ದಾರೆ. ಭಾರತದ ಹಲವು ಪಾಠಗಳನ್ನೂ ಕ್ಷೇಮೇಂದ್ರನ ಭಾರತ ಕಥಾಮಂಜರಿಯನ್ನೂ, ಶ್ರೀ ಸುಕ್ತಂಕರ್ ಅವರು ಸಂಪಾದಿಸಿದ ಭಾರತ ಗ್ರಂಥವನ್ನೂ ಅವರು ಅವಗಾಹಿಸಿದ್ದಾರೆ. ಕನ್ನಡ

ಭಾಷೆಯಲ್ಲಿ, ತೆಲುಗಿನಲ್ಲಿ, ಪ್ರಚಲಿತವಾಗಿರುವ ಭಾರತವನ್ನು ಅವರು ಆಮೂಲಾಗ್ರವಾಗಿ ಪರಿಶೀಲಿಸಿದ್ದಾರೆ. ನೂರು ಬಗೆಯಲ್ಲಿ ಆಲೋಚಿಸಿ, ಈ ಸಮಸ್ತ ಸಾಮಗ್ರಿಯನ್ನು ಪರಿಷ್ಕರಿಸಿಕೊಂಡು ಕನ್ನಡ ಜನತೆಗೆ ಸುಪ್ರಸಿದ್ಧವಾದ ವಚನ ಭಾರತವನ್ನೂ ಬರೆದಿದ್ದಾರೆ. ಇಂತಹ ವಿದ್ವತ್ಪೂರ್ಣವಾದ 'ಅವರ ಮನಸ್ಸು, ಪ್ರೌಢವಾದ ಅವರ ಲೇಖನಿ, ಸ್ಥೂಲ ರೇಖೆಗಳಲ್ಲಿ ಹೇಳಲ್ಪಟ್ಟ ಸರಳವಾದ ಮಕ್ಕಳ ಮಹಾಭಾರತ ಅಥವಾ ನಿರ್ಮಲ ಭಾರತಿಯ ರಚನೆಗೆ ಅನುವಾಯಿತು ಎಂದರೆ ಅದು ಆಶ್ಚರ್ಯಕರವಾದ ಸಂಗತಿ. ಸಾಗರದಲ್ಲಿ ಲೀಲೆಯಿಂದ ವಿಹರಿಸುವ ತಿಮಿಂಗಿಲ ತನ್ನ ಬೃಹದ್ಗಾತ್ರವನ್ನು ಸಂಯಮಿಸಿಕೊಂಡು ತೊರೆಯಲ್ಲಿ ಈಜಲು ಹೊರಟ ಹಾಗೆ! ತಿಮಿಂಗಿಲಕ್ಕೆ ಅಲ್ಲಿ ಸೋಲಾದೀತು; ಶ್ರೀ ಕೃಷ್ಣಶಾಸ್ತ್ರಿಗಳಿಗೆ ಇಲ್ಲಿ ಪರಾಭವವಿಲ್ಲ.

ವಚನ ಭಾರತದ ಹಲವು ಸನ್ನಿವೇಶಗಳನ್ನು ನಿರ್ಮಲ ಭಾರತಿಯ ಅದೇ ಸನ್ನಿವೇಶಗಳೊಡನೆ ಹೋಲಿಸಿ, ಬಾಲಸಾಹಿತ್ಯ ರಚನೆಯಲ್ಲಿ ಶ್ರೀಮಾನ್ ಕೃಷ್ಣಶಾಸ್ತ್ರಿಗಳ ಸಿದ್ಧಿಯನ್ನು, ಪರಿಪಕ್ವವಾದ ವಿವೇಚನೆಯನ್ನು ಅರಿಯಬಹುದು.

ಕೌರವರೂ ಪಾಂಡವರೂ ಬಾಲಕರಾಗಿದ್ದಾಗಿನ ಒಂದು ಸನ್ನಿವೇಶ: ದ್ರೋಣಾಚಾರ್ಯರು ಅವರಿಗೆ ಶರಸಂಧಾನವನ್ನು ಕಲಿಸುತ್ತಿದ್ದಾರೆ. ವೃಕ್ಷದ ಮೇಲೊಂದು ಬಣ್ಣದ ಹಕ್ಕಿಯನ್ನು ಕಟ್ಟಿ, ಬಾಲಕರ ಮನವನ್ನು ಪರೀಕ್ಷಿಸುತ್ತಿದ್ದಾರೆ. ವಚನ ಭಾರತದಲ್ಲಿ ಈ ಸನ್ನಿವೇಶ ವಿವರವಾಗಿದೆ. ಬಾಣವನ್ನು ಬಿಲ್ಲಿನಲ್ಲಿ ಹೂಡಿನಿಂತ ಯುಧಿಷ್ಠಿರನೇ ಮುಂತಾದ ರಾಜಕುವರರನ್ನು ದ್ರೋಣರು ಒಬ್ಬೊಬ್ಬರನ್ನಾಗಿ ಪರೀಕ್ಷಿಸುತ್ತಾರೆ. ಎಲ್ಲರೂ ಹಕ್ಕಿ, ಅದನ್ನಿಟ್ಟ ಮರ, ಸುತ್ತಣ ಬಾಲಕರು ಉಪದೇಶ ಮಾಡುವ ದ್ರೋಣಾಚಾರ್ಯರು ಎಲ್ಲರನ್ನೂ ನೋಡುತ್ತಿದ್ದೇವೆ ಎಂದರು. ಸ್ವಲ್ಪ ಹೊತ್ತು ಬಿಟ್ಟು ಕೇಳುವಾಗ ಅದೇ ಉತ್ತರವನ್ನು ಹೇಳುತ್ತಾರೆಯೆ ಹೊರತು ಬೇರೆ ಇಲ್ಲ. ಅವರ ಮನ ಏಕಾಗ್ರವಾಗಿಲ್ಲವೆಂದು ಬೇಸರಗೊಂಡು ದ್ರೋಣರು ಅವರನ್ನೆಲ್ಲ ಹಿಂದಕ್ಕೆ ಕಳಿಸಿಬಿಡುತ್ತಾರೆ. ಅರ್ಜುನನು ಮಾತ್ರ 'ಪಕ್ಷಿ ಕಾಣುತ್ತದೆ, ಉಳಿದುದೇನೂ ಕಾಣುತ್ತಿಲ್ಲ'ವೆಂದಾಗ ಆಚಾರ್ಯರು ತೃಪ್ತಿಗೊಂಡು ಸ್ವಲ್ಪ ಹೊತ್ತು ಬಿಟ್ಟು ಪುನಃ ಕೇಳುತ್ತಾರೆ. ಆಗ ಅರ್ಜುನ 'ಹಕ್ಕಿಯ ತಲೆ ಮಾತ್ರ ಕಾಣುವುದು ಇನ್ನೇನೂ ಕಾಣುವುದಿಲ್ಲ' ಎನ್ನುತ್ತಾನೆ. ಇದೀಗ ಏಕಾಗ್ರತೆ ಎಂದು ತಲೆದೂಗಿ ದ್ರೋಣಾಚಾರ್ಯರು ಬಾಣಬಿಡಲು ಅಪ್ಪಣೆ ಕೊಟ್ಟರು. ಹರಿತವಾದ ಬಾಣದ ಒಂದೇ ಏಟಿಗೆ ಪಕ್ಷಿಯ ತಲೆ ಹರಿದು ನೆಲಕ್ಕೆ ಬಿದ್ದಿತು.

ನಿರ್ಮಲ ಭಾರತಿಯಲ್ಲಿ ಅದೇ ಸನ್ನಿವೇಶ ಹೀಗೆ ವರ್ಣಿಸಲ್ಪಟ್ಟಿದೆ: "ಅವರಿಗೆ ಅರ್ಜುನನನ್ನು ಕಂಡರೆ ತುಂಬ ಪ್ರೀತಿ; ಏಕೆಂದರೆ ಅವನು ಬಾಣಬಿಡುವುದರಲ್ಲಿ ಅಷ್ಟು ಗಟ್ಟಿಗ; ಒಂದು ದಿನ ದ್ರೋಣನು ಹುಡುಗರನ್ನೆಲ್ಲಾ ಗುರಿಯಿಟ್ಟು ಹೊಡೆಯುವುದರಲ್ಲಿ ಪರೀಕ್ಷೆ ಮಾಡಿದನು. ಒಂದು ಮರದ ಮೇಲೆ ಒಂದು ಬಣ್ಣದ

ಹಕ್ಕಿಯನ್ನು ಕಟ್ಟಿ ಒಬ್ಬೊಬ್ಬರನ್ನಾಗಿ ಕರೆದು ಗುರಿಯಿಟ್ಟು ನೋಡಿ ಎಂದು ಹೇಳಿದನು. ಅವರು ನೇರವಾಗಿ ಗುರಿಯಿಡಲಾರದೆ ಹೋದರು. ಅರ್ಜುನ ನೊಬ್ಬನು ಮಾತ್ರ ಚೆನ್ನಾಗಿ ಗುರಿಯಿಟ್ಟನು. ಅವನಿಗೆ ಅದರ ತಲೆಯೊಂದೇ ಕಾಣುತ್ತಿತ್ತು. ಇನ್ನೇನೂ ಕಾಣುತ್ತಿರಲಿಲ್ಲ; ಆಗ ಬಾಣ ಹೊಡೆಯಲು ಅದು ಕೆಳಗೆ ಬಿತ್ತು."

ಮೇಲಿನ ಗದ್ಯಭಾಗದಲ್ಲಿ ಸರಳತೆ ಎದ್ದು ಕಾಣುತ್ತದೆ. ಸಣ್ಣ ಸಣ್ಣ ವಾಕ್ಯಗಳು, ವಿಶದವಾಗಿ ಕಥೆಯನ್ನೂ ಹೇಳುವ ವಿಧಾನಗಳನ್ನೂ ಗಮನಿಸ ಬಹುದು. ಮಕ್ಕಳಲ್ಲಿ ಕಲ್ಪನಾಶಕ್ತಿ ಜಾಗೃತವಾಗಿರುತ್ತದೆ. ಅವರು ನೇರವಾಗಿ ಗುರಿಯಿಡುವುದೆಂದರೇನು? ಬಣ್ಣದ ಹಕ್ಕಿಯ ತಲೆ ಮಾತ್ರ ಕಂಡಿತೇಕೆ ಎಂಬ ವಿಚಾರವನ್ನು ಕಲ್ಪಿಸಿಕೊಳ್ಳಬಲ್ಲರು. ಕಥೆ ಹೇಳುವಾಗ ಅಲ್ಲಿ ಅವರ ಕಲ್ಪನೆಯ ವಿಹಾರಕ್ಕೆ ಅವಕಾಶಮಾಡಿಕೊಡಬೇಕು. ಮಣ್ಣ ಬೊಂಬೆಗಳಿಗೆ ಹೇಳಿದಂತೆ ಎಲ್ಲವನ್ನೂ ಸಾದ್ಯಾಂತವಾಗಿ ವರ್ಣಿಸಿಬಿಟ್ಟರೆ ಅವರು ಮಂಕಾಗಿ ಬೇಸರಗೊಂಡು ಚಡಪಡಿಸುತ್ತಾರೆ.

ಬಕಾಸುರ ವಧೆಯ ಸಂದರ್ಭದಲ್ಲಿ ವಚನಭಾರತ ಧರ್ಮ ಜಿಜ್ಞಾಸೆಯನ್ನು ಒಳಗೊಂಡಿದೆ. ಬಕಾಸುರನಿಗೆ ಆಹಾರವಾಗುವ ಸರದಿ ಒಬ್ಬ ಬ್ರಾಹ್ಮಣನಿಗೆ ಬಂದಿರುತ್ತದೆ. ಅವನ ಸಂಸಾರವೆಲ್ಲ ಅದಕ್ಕಾಗಿ ಹತಾಶೆಯಿಂದ ಕೊರಗುತ್ತಿರುತ್ತದೆ. ವಂಶೋದ್ಧಾರಕ್ಕಾಗಿ ಮಗನನ್ನು ಉಳಿಸಿಕೊಂಡು ಅವನನ್ನು ಕಾದಿಡಲು ತಂದೆ ಇರಬೇಕೆಂದೂ, ಅಸುರನಿಗೆ ಆಹಾರವಾಗಿ ತಾವು ಹೋಗುತ್ತೇವೆ ಎಂದು ಹೆಂಡತಿಯೂ ಮಗಳು ಒಮ್ಮೊಮ್ಮೆ ವಾದಿಸುತ್ತಾರೆ. ಆದರೆ ಗೃಹಸ್ಥನಿಗೆ ಇದು ಒಪ್ಪಿಗೆಯಿಲ್ಲ. ಹೆಂಡತಿಯನ್ನು ಕೊಲ್ಲಿಸಿ ಬಾಳುವುದೆ? ಅದು ಧರ್ಮವೂ ಅಲ್ಲ ಪ್ರಿಯವೂ ಅಲ್ಲ. ಕನ್ಯೆಯನ್ನು ಸಾವಿಗೀಡುಮಾಡಿ ಬದುಕಿಕೊಳ್ಳಲು ಯಾವ ತಂದೆತಾಯಂದಿರು ಆಶಿಸುತ್ತಾರೆ? ಮನೆಯ ಯಜಮಾನನು ಹೋದರೆ ಅವನ ಸಂಸಾರ ದುಃಖಿತವೂ ಅನಾಥವೂ ಆಗುತ್ತದೆ. ಆದರೂ ಇನ್ನೊಬ್ಬರನ್ನು ಸಾವಿಗೀಡುಮಾಡಲು ಅವರು ಒಪ್ಪುವುದಿಲ್ಲ. ಅವರ ಮನೆಯಲ್ಲಿ ಬ್ರಾಹ್ಮಣ ವೇಶದಲ್ಲಿ ಬಂದು ಅತಿಥಿಗಳಾಗಿ ನೆಲೆಸಿರುವ ಐದುಮಕ್ಕಳ ತಾಯಿಯಾದ ಬ್ರಾಹ್ಮಣಿತಿ (ಕುಂತಿ) 'ನಿಮಗಾದರೆ ಒಬ್ಬನೇ ಮಗ, ನನಗಾದರೋ ಐದು ಜನರಿದ್ದಾರೆ ಅವರಲ್ಲಿ ಒಬ್ಬನನ್ನು ಕಳಿಸುತ್ತೇನೆ' ಎಂದಾಗ ಬ್ರಾಹ್ಮಣನು ಆಗದು ಬ್ರಹ್ಮಹತ್ಯವೂ ಆತ್ಮಹತ್ಯವೂ ಎರಡೂ ದೋಷವೇ. ನನ್ನನ್ನು ನಿರ್ಬಂಧದಿಂದ ಇತರರು ಕೊಂದರೆ ಅದರಲ್ಲಿ ನನ್ನ ದೋಷವಿಲ್ಲ ಎಂದು ತೀರ್ಮಾನಿಸುತ್ತಾನೆ. ಬ್ರಾಹ್ಮಣರು ಹಕ್ಕಿಗಳಂತೆ ಮನಸ್ಸು ಬಂದೆಡೆ ತಿರುಗುತ್ತ ತಮ್ಮ ಗುಣಾತಿಶಯದಿಂದ ಬದುಕುವವರು. ಒಳ್ಳೆಯ ರಾಜನ ಆಶ್ರಯ ಸಿಗದಿದ್ದರೆ ಅದು ಅವರ ದುರದೃಷ್ಟವೇ ಸರಿ ಎನ್ನುತ್ತಾನೆ. ಎಂತಹ ಆಪತ್ಕಾಲದಲ್ಲಿಯೂ ನಿಂದ್ಯವಾದ, ಕ್ರೂರವಾದ

ಕೆಲಸ ಮಾಡಬಾರದು ಎಂದು ಆಪದ್ಧರ್ಮವನ್ನು ಬಲ್ಲ ದೊಡ್ಡವರ ಹೇಳಿಕೆ ಎಂದು ವಿವೇಚಿಸುತ್ತಾನೆ. ಆಗ ಮನೆಯ ಚಿಕ್ಕ ಗಂಡುಮಗು ಒಂದು ಕಡ್ಡಿ ಹಿಡಿದು ಕೊಂಡು ಓಡಾಡಿ ಬಕಾಸುರನನ್ನು ನಾನು ಕೊಲ್ಲುತ್ತೇನೆಂದಾಗ ಎಲ್ಲರೂ ಅಂತಹ ದುಃಖದಲ್ಲಿಯೂ ನಸುನಗುತ್ತಾರೆ. ಕೊನೆಗೆ ಕುಂತಿ, ನನ್ನ ಮಗ ಮಂತ್ರಸಿದ್ಧಿ ಯುಳ್ಳವನು. ಬಕನನ್ನು ಕೊಂದುಹಾಕಿಯೇ ಬರುತ್ತಾನೆ, ನಂಬಿ, ಎಂದಾಗ ಅವರು ಒಪ್ಪುತ್ತಾರೆ.

ನಿರ್ಮಲ ಭಾರತಿಯಲ್ಲಿ ಈ ಪ್ರಸಂಗವನ್ನು ಸ್ಕೂಲರೀಡೆಗಳಲ್ಲಿ ಹೇಳಿ, ಧರ್ಮ ಜಿಜ್ಞಾಸೆಯನ್ನು ಕೈಬಿಡಲಾಗಿದೆ. ಭೀಮನ ಧೈರ್ಯ ಸಾಹಸಗಳ ವರ್ಣನೆ ವಿವರವಾಗಿದೆ. ಮಗುವಿನ ಮಾತು ಎಲ್ಲರ ನಗೆ ಇವುಗಳ ವರ್ಣನೆ ಇದೆ. ತಂದೆ ತಾಯಂದಿರ ಕಷ್ಟಸುಖಗಳಲ್ಲಿ ಮಕ್ಕಳು ಪಾಲ್ಗೊಳ್ಳಬಯಸುವರೆಂಬುದು ಇಲ್ಲಿ ಎಷ್ಟು ಚೆನ್ನಾಗಿ ವಿದಿತವಾಗುತ್ತದೆ! ಮಕ್ಕಳು ಬೆಳೆದಮೇಲೆ ಅವರಿಗೆ ಧರ್ಮವನ್ನು ಹೇಳಬೇಕೇ ವಿನಃ ಅನ್ಯಥಾ ಅಲ್ಲ. ಹಾಗೆಂದು ನೀತಿ ಕಥೆಗಳನ್ನಾಗಲೀ ಧರ್ಮ ದೃಷ್ಟಿಯನ್ನು ಬೆಳೆಸುವ ಸರಳವಾದ ಕಥೆಗಳನ್ನಾಗಲೀ ಹೇಳಬಾರದೆಂದಿಲ್ಲ. ನಿರ್ಮಲ ಭಾರತಿಯಲ್ಲಿ ಶ್ರೀಮಾನ್ ಕೃಷ್ಣಶಾಸ್ತ್ರಿಗಳು ಉಳಿಸಿಕೊಂಡಿರುವ ಉಪ ಕಥೆಗಳು ಈ ದೃಷ್ಟಿಯಿಂದ ಬಹು ಉಪಯುಕ್ತವಾದುವು.

ಋಷಿ ಮತ್ತು ನಾಯಿಯ ಕಥೆಯಲ್ಲಿ ಪ್ರಾಣಿಗಳ ಹುಟ್ಟುಗುಣ ಎನ್ನುವುದು ಬದಲಾಗತಕ್ಕದ್ದಲ್ಲ; ಮೇಲು ಮೇಲಿನ ತೋರಿಕೆಗೆ ಮರುಳಾಗಿ ಅವುಗಳನ್ನು ನಂಬಿ ಕೆಡಬಾರದೆಂಬ ಲೋಕಾನುಭವವನ್ನು ಹೃದ್ಯವಾಗಿ ನಿರೂಪಿಸಿದೆ.

ಮುಂಗುಸಿಯ ಮೈ ಚಿನ್ನವಾದ ಕಥೆಯಲ್ಲಿ ದಾನಧರ್ಮಗಳ ರಹಸ್ಯವನ್ನು ವರ್ಣಿಸುತ್ತ, ಧರ್ಮರಾಯನು ಯಜ್ಞದಲ್ಲಿ ಮಾಡಿದ ಅಪಾರವಾದ ದಾನಧರ್ಮ ಗಳಿಗಿಂತ ಬಡಬ್ರಾಹ್ಮಣನ ಸಂಸಾರವು ಹಸಿದಿದ್ದರೂ ಅತಿಥಿಯನ್ನು ಭಕ್ತಿಯಿಂದ ಪ್ರೀತಿಯಿಂದ ನಿರಾಳವಾದ ಮನದಿಂದ ಉಪಚರಿಸಿದುದು ಹೆಚ್ಚೆಂದು ವರ್ಣಿಸಿದೆ. ಬಿಲದಲ್ಲಿದ್ದ ಮುಂಗುಸಿ ಮೈ ಚಿನ್ನ ಮಾಡಿಕೊಳ್ಳುವ ನೆಪದಲ್ಲಿ ದಾನದ ಅಂತರಾರ್ಥ ವನ್ನು ಎತ್ತಿಹಿಡಿಯುತ್ತ ಚಾಪಲ್ಯದಿಂದ ಎಲ್ಲ ಯಾಗಗಳಲ್ಲೂ ಸುಳಿದಾಡುತ್ತದೆ.

ಕಾಶ್ಯಪನ ಕಥೆಯಲ್ಲಿ, ಸಾವುಕಾರನ ರಥದಿಂದ ಗಾಯಗೊಂಡ ಕಾಶ್ಯಪನು ದುಃಖಿತನಾಗಿ, ನಿರಾಶನಾಗಿ, ನಾನಿದ್ದು ಪ್ರಯೋಜನವೇನು? ಇಲ್ಲೇ ಸಾಯುತ್ತೇನೆ ಎಂದುಕೊಳ್ಳುತ್ತಾನೆ. ಆಗ ಇಂದ್ರನು ನರಿಯ ವೇಷದಲ್ಲಿ ಬಂದು, 'ಅಯ್ಯಾ ಬ್ರಾಹ್ಮಣ ಏಕೆ ದುಃಖ ಪಡುವೆ? ಕೈಕಾಲು, ಆರೋಗ್ಯವುಳ್ಳ ನೀವೇ ಹೀಗೆಂದರೆ ನಮ್ಮಂಥ ಪ್ರಾಣಿಗಳ ಪಾಡೇನು? ನೀನಾದರೆ ಬೇಕಾದ ಸೌಖ್ಯವನ್ನು ಉಂಟು ಮಾಡಿಕೊಳ್ಳಬಲ್ಲೆ' ಎಂದು ಬುದ್ಧಿ ಹೇಳುತ್ತಾನೆ. ಎಳೆಯರಲ್ಲಿ ಆತ್ಮವಿಶ್ವಾಸವನ್ನು, ಕಷ್ಟಸಹಿಷ್ಣುತೆಯನ್ನು, ಧೈರ್ಯವನ್ನು ಬೆಳೆಸಲು ಇದು ಸಹಕಾರಿಯಾದ ಕಥೆ.

ನಳದಮಯಂತಿ, ಸಾವಿತ್ರಿ ಸತ್ಯವಾನರ ಕಥೆಗಳು ಸುಂದರವಾಗಿ ಬಂದಿವೆ.

ಕೌಟುಂಬಿಕ ವಾತ್ಸಲ್ಯವನ್ನೂ, ಅನನ್ಯವಾದ ಪ್ರೇಮವನ್ನೂ ಅವು ಥಾಳಾದ ಬಣ್ಣದಲ್ಲಿ ಚಿತ್ರಿಸುತ್ತವೆ. ಸೂಕ್ಷ್ಮವಾದ ಒಳತೋಟಿಯಾಗಲಿ, ಜಟಿಲವಾದ ಸಮಸ್ಯೆಯ ನಿರೂಪಣೆಯಾಗಲಿ ಮಕ್ಕಳಿಗೆ ಒಗ್ಗದು. ಉದಾತ್ತ ಜೀವನಕ್ಕೆ ತಳಹದಿಯಾಗುವ ಭಾವನೆಗಳನ್ನು, ಚಿಂತನೆಗಳನ್ನು ಅವುಗಳ ಮೂಲರೂಪದಲ್ಲಿ ವಿಶದವಾಗಿ ಹೇಳಿದರೆ ಸಾಕು ; ಮಕ್ಕಳ ಮನದಲ್ಲಿ ಅವು ಬಣ್ಣಗೂಡಿಕೊಳ್ಳುತ್ತವೆ.

ಪುಸ್ತಕದಲ್ಲಿ ಅಲ್ಲಲ್ಲಿರುವ ಚಿತ್ರಗಳು ಅತ್ಯಂತ ಸುಂದರವೂ ಉಪಯುಕ್ತವೂ ಆದವು. ರೇಖಾ ಚಿತ್ರಗಳಲ್ಲಿ ಮಕ್ಕಳು ಬಣ್ಣ ತುಂಬಬೇಕೆಂಬ ಶ್ರೀಮಾನ್ ಕೃಷ್ಣಶಾಸ್ತ್ರಿಗಳ ಉದ್ದೇಶ ಮಕ್ಕಳ ಪಾಲಿಗೆ ಒಂದು ಹಬ್ಬವೇ ಸರಿ. ಎಳೆಯರ ಕಲ್ಪನೆಯ ಲೋಕಕ್ಕೆ ಚಿತ್ರಗಳ ಸಹಾಯದಿಂದ ಸ್ಪಷ್ಟತೆ ಬರುತ್ತದೆ.

ಅಧ್ಯಾಯಗಳ ಕೊನೆಯಲ್ಲಿ ಬರುವ ಕಹಳೆ, ಧನುಸ್ಸು, ಬತ್ತಳಿಕೆ, ಈಟಿ ಭಲ್ಲೆಯ ಮುಂತಾದುವುಗಳ ಚಿತ್ರಗಳು ಮಕ್ಕಳ ಕುತೂಹಲಕ್ಕೆ ತಕ್ಕ ಆಹಾರ. ಅಕ್ಷೌಹಿಣಿ ಅಂದರೆ ಎಷ್ಟು ? ಭೇರಿ ಅಂದರೆ ಹೇಗಿರುತ್ತದೆ? ಶರಭ ಅಂದರೆ ಎಂತಹ ಪ್ರಾಣಿ ಎಂದು ಅವರು ತಿಳಿದುಕೊಳ್ಳಲು, ಕಾಣಲು ಬಯಸುತ್ತಾರೆ.

ಒಟ್ಟಿನಲ್ಲಿ ಇದು ಮಕ್ಕಳ ಸಂತೋಷಕ್ಕೆ ಕಾರಣವಾಗುವ ಪುಸ್ತಕ. ದ್ವೇಷ ಅಸೂಯೆಗಳಿಂದ ದೂರವಾಗಿ, ಕೆಟ್ಟ ಚಾಳಿಗಳನ್ನು ತೊರೆದು ನಿರ್ಮಲವಾದ ಬದುಕನ್ನು ನಡೆಸುವಂತೆ ಮಕ್ಕಳನ್ನು ಈ ಗ್ರಂಥ ಪ್ರಚೋದಿಸುತ್ತದೆ.

ಮೂವತ್ತು ವರ್ಷಗಳಕಾಲ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತ ಆಳವಾದ ವಿದ್ವತ್ತನ್ನು ಸಂಪಾದಿಸಿದ ಶ್ರೀಮಾನ್ ಕೃಷ್ಣಶಾಸ್ತ್ರಿಗಳು ತಮ್ಮ ಷಷ್ಟಿ ಪೂರ್ತಿ ಶಾಂತಿಯ ವೇಳೆಗೆ, ನಾಡಿನ ಜನರಲ್ಲಿ ಪ್ರೀತಿಯಿಟ್ಟು 'ವಚನಭಾರತ'ವನ್ನು ರಚಿಸಿದರು. ಎಪ್ಪತ್ತನೆಯ ವಯಸ್ಸಿಗೆ ದೈವಾನುಗ್ರಹದಿಂದ ಅವರು ಮಕ್ಕಳಮೇಲೆ ಅಕ್ಕರೆಯಿಟ್ಟು 'ನಿರ್ಮಲ ಭಾರತೀ'ಯನ್ನು ರಚಿಸಿ ಕೃತಕೃತ್ಯರಾದರು. ಕನ್ನಡದ ಜನರಿಗೆ 'ವಚನ ಭಾರತ'ವಾಗಿ ಅವತರಿಸಿದ 'ವ್ಯಾಸ ಮಹಾಭಾರತ' ಬಾಲಕರಿಗಾಗಿ 'ನಿರ್ಮಲ ಭಾರತೀ'ಯಾಗಿ ಪರಿಣಮಿಸಿತು.

# ಪೂರ್ಣಕುಂಭ

ಅವರನ್ನು ಕುರಿತು ನನಗೆ ಹೊಳಕುವ ಮಟ್ಟಿಗೆ ಒಂದೇ ಮಾತಿನಲ್ಲಿ ಹೇಳುವುದಾದರೆ, ಅದೊಂದು ಪೂರ್ಣಕುಂಭ. ತುಂಬಿದ ಕೊಡಕ್ಕೆ ತುಳುಕಾಟವಿಲ್ಲ. ಅವರಲ್ಲಿ ಮಾತಾಟವಿಲ್ಲ, ಅಚ್ಚುಕೆಲಸ ತಾನೆ. ಅವರ ಭಾಷಣಗಳೂ ಲೇಖನಗಳೂ ಎಂಬ ಆ ಎರಡು ಸಂಪುಟಗಳು ಹಾಗೂ ಶ್ರೀಪತಿಯು ಕಥೆಗಳು ಎಂಬ ಕಥೆಗಳು ಬಹಳ ಸೊಗಸಾಗಿವೆ; ಅವುಗಳಲ್ಲಿ ತಿರುಳಿದೆ, ಹುರುಳಿವೆ, ಕನ್ನಡ ಸಾಹಿತ್ಯದಲ್ಲಿ ಅವು ನಗರ ಮಧ್ಯದಲ್ಲಿಯ ಮಿಂಚಿನ ದೀಪಗಳಂತೆ ಪ್ರಜ್ವಲವಾಗಿ ಇವೆಯಾದರೂ ಅವರ ಅನರ್ಘ್ಯವಾದ ವಚನಭಾರತವೂ ಕಥಾಮೃತವೂ ಇದನ್ನು ನೆನೆವಾಗ ಕಾಳಿದಾಸನ ರಘುವಂಶದಲ್ಲಿ ಶ್ರೀರಾಮಚಂದ್ರನು ವಿಭೀಷಣನನ್ನೂ ಆಂಜನೇಯನನ್ನೂ ಎರಡು ಕೀರ್ತಿಸ್ತಂಭಗಳಂತೆ ಸ್ಥಾಪಿಸಿದನು.....ಎಂಬ ಮಾತು ಪದೇ ಪದೇ ನೆನವರಿಸುತ್ತದೆ. ಆ ಎರಡು ಗ್ರಂಥಗಳು ಕನ್ನಡಸಾಹಿತ್ಯದಲ್ಲಿ ಶ್ರೀ ಶಾಸ್ತ್ರಿಯವರ ಕೀರ್ತಿಸ್ತಂಭಗಳಂತೆ ಸದಾಕಾಲ ಬಾಳತಕ್ಕಂಥವು. ಆದರೆ ಆ ವಚನಭಾರತಕ್ಕೆ ಎಣೆಯಾಗಿ ವಚನರಾಮಾಯಣವನ್ನು ಬರೆಯಲಾಗಲಿಲ್ಲವಲ್ಲಾ! ಎಂದು ಬಗೆವೊಂದಿಗೆ ಮನಸ್ಸು ಚುರು ಚುರಿಸುತ್ತದೆ......

—ಗೋವಿಂದ ಪೈ

(ಸೆಂಟ್ರಲ್ ಕಾಲೇಜಿನಲ್ಲಿ ೧೯೫೩ರಲ್ಲಿ ನಡೆದ ಶಾಸ್ತ್ರಿಗಳ
ಸನ್ಮಾನ ಸಮಾರಂಭಕ್ಕೆ ಕಳಿಸಿದ ಸಂದೇಶದಲ್ಲಿ)

ಮೂರ್ನಿ ನರಸಿಂಗರಾವ್

# ಪೂಜ್ಯ ಕೃಷ್ಣಶಾಸ್ತ್ರಿಗಳು

ಪೂಜ್ಯ ಎ. ಆರ್. ಕೃಷ್ಣಶಾಸ್ತ್ರಿಗಳು ನಾನು ಎಂ. ಎ. ವಿದ್ಯಾರ್ಥಿಯಾಗಿ ಮೈಸೂರಿಗೆ ಹೋಗಿದ್ದಾಗ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಅಸಿಸ್ಟೆಂಟ್ ಪ್ರೊಫೆಸರ್ ಆಗಿದ್ದರು. ನಾನು ಎಂ. ಎ. ಮುಗಿಸಿಕೊಂಡು ೧೯೩೬ರಲ್ಲಿ ನಮ್ಮೂರಿಗೆ ತಿರುಗುವವರೆಗೆ ಅವರು ಅಲ್ಲಿಯೆ ಇದ್ದರು. ನೇರವಾಗಿ ಅವರ ಪಾದದೆಡೆಯಲ್ಲಿ ಕುಳಿತು ಪಾಠ ಹೇಳಿಸಿಕೊಳ್ಳುವ ಪುಣ್ಯ ನನಗೆ ಲಭಿಸಲಿಲ್ಲ. ಆದರೆ ಪೂಜ್ಯ ಟಿ. ಎಸ್. ವೆಂಕಣ್ಣಯ್ಯನವರು ಮತ್ತು ಪೂಜ್ಯ ಎ. ಆರ್ ಕೃಷ್ಣ ಶಾಸ್ತ್ರಿಗಳು ಜೀವದ ಗೆಳೆಯರಾಗಿ "ಒಡಲೆರಡೊಂದೆಜೀವಮಿವರ್ಗೆಂಬುದ ನೆಂಬುದು ಲೋಕಂ" ಎನ್ನುವಷ್ಟು ಆಪ್ತರಾದುದರಿಂದ, ಪೂಜ್ಯ ವೆಂಕಣ್ಣಯ್ಯ ನವರು ಪೂಜ್ಯ ಕೃಷ್ಣಶಾಸ್ತ್ರಿಗಳಿಗೆ ನನ್ನ ಪರಿಚಯವನ್ನು ಮಾಡಿ ಕೊಟ್ಟುದುದರಿಂದ ವೆಂಕಣ್ಣಯ್ಯನವರ ಶಿಷ್ಯನೇನು, ನನ್ನ ಶಿಷ್ಯನೇನು ಎನ್ನುವಷ್ಟು ಆತ್ಮೀಯವಾಗಿ ನನ್ನನ್ನು ನೋಡಿಕೊಂಡರು. ನಾನು ಬೆಂಗಳೂರಿಗೆ ಹೋದಾಗಲೆಲ್ಲ ಪೂಜ್ಯ ಕೃಷ್ಣಶಾಸ್ತ್ರಿಗಳನ್ನು ಭೇಟಿಮಾಡುವುದು ನನ್ನ ಕರ್ತವ್ಯವೆಂದು ತಿಳಿದುಕೊಂಡಿದ್ದೆ. ಹೋದಾಗಲೆಲ್ಲ ಅವರ ವಿದ್ವತ್ ಪೂರ್ಣವೂ ಸರಸವೂ ಆದ ಸಂಭಾಷಣೆ ಹಬ್ಬದೂಟ ದಂತೆ ನನಗೆ ಅನಿಸುತ್ತಿತ್ತು. ಕೃಷ್ಣಶಾಸ್ತ್ರಿಗಳು ಮಹಾ ವಿದ್ವಾಂಸರು, ವಿಮರ್ಶನ ಕ್ಷೇತ್ರದಲ್ಲಿ ನಿಪುಣರು. ಅವರ ಅಧ್ಯಯನವು ತಲಸ್ಪರ್ಶಿಯಾದುದರಿಂದ ಅವರ ಮಾತಿನಲ್ಲಿ ಯಾವಾಗಲೂ ಖಚಿತವಾದ ಅಭಿಪ್ರಾಯವು ಸ್ಪಷ್ಟವಾಗಿ ಆದರೆ ಮೃದು ಮಧುರವಾಗಿ ಅಭಿವ್ಯಕ್ತವಾಗುತ್ತಿತ್ತು. ಸಾಹಿತ್ಯದ ಯಾವ ಅಂಶವನ್ನು ಕುರಿತು ಅವರೊಡನೆ ಚರ್ಚೆಮಾಡಿದರೂ ಹೊಸ ಬೆಳಕು ನಮಗೆ ಲಭಿಸುತ್ತಿತ್ತು. ಅವರ ಪ್ರತಿಭೆ ಪಾಂಡಿತ್ಯಗಳು ಓತ ಪ್ರೋತವಾಗಿ ಸಮ್ಮಿಳಿತವಾಗಿ ಅವರ ಅಭಿಪ್ರಾಯಕ್ಕೆ ಒಂದು ಗೌರವವನ್ನು ತಂದಿದ್ದುವು. ಅವರ ಗ್ರಂಥಗಳನ್ನು, ಭಾಷಣ ಮತ್ತು ಲೇಖನ ಮಾಲೆಗಳನ್ನು ಓದುವ ಕೇಳುವ ಪುಣ್ಯ ನನಗೆ ಕಿಂಚಿತ್ ಲಭಿಸಿದುದರಿಂದ ಮೇಲಿನ ಈ ಅಭಿಪ್ರಾಯವು ಅವುಗಳ ವಾಚನದಿಂದ ನನ್ನಲ್ಲಿ ಸ್ಥಿರಗೊಂಡಿತು.

೧೯೪೧ರಲ್ಲಿ ಹೈದರಾಬಾದಿನಲ್ಲಿ ನಡೆದ ಅಖಿಲ ಕರ್ನಾಟಕ ಸಾಹಿತ್ಯ

ಸಮ್ಮೇಳನಕ್ಕೆ ಪೂಜ್ಯ ಎ. ಆರ್. ಕೃ. ಅವರೆ ಅಧ್ಯಕ್ಷರಾಗಿ ಆಯ್ಕೆಯಾದರು. ಈ ಒಂದು ಕಾರಣದಿಂದ ಹೈದರಾಬಾದಿನ ನಿವಾಸಿಗಳೊಂದಿಗೆ ಒಂದು ವಿಶಿಷ್ಟ ಸಂಬಂಧ ಏರ್ಪಟ್ಟಿತು. ಸಮ್ಮೇಳನದ ಮೂರು ದಿನಗಳಲ್ಲಿ ಹೈದರಾಬಾದಿನಲ್ಲಿಯ ಅವರ ವಾಸದಿಂದ ಸಂಪರ್ಕವು ನಿಕಟವಾದುದರಿಂದ ಪೂಜ್ಯ ಕೃಷ್ಣಶಾಸ್ತ್ರಿಗಳು ಎಂಥ ಸಜ್ಜನರಾಗಿದ್ದರೆಂಬುದನ್ನು ಕಾಣಲು ನಮಗೆ ಅವಕಾಶ ದೊರಕಿತು. ಅವರು ನಿರಾಡಂಬರ ಜೀವಿ. ಅವರ ಶೀಲ ಸಂಪತ್ತು ನಮ್ಮನ್ನೆಲ್ಲರನ್ನು ಮುಗ್ಧರನ್ನಾಗಿ ಮಾಡಿತು. ಪೂಜ್ಯ ಕೃಷ್ಣಶಾಸ್ತ್ರಿಗಳು ಸ್ವಭಾವದಿಂದ ಎಷ್ಟು ಮೃದುವಾಗಿದ್ದರೊ, ಸತ್ಯದ ಉದ್ಘಾಟನೆಯಲ್ಲಿ ಅಷ್ಟೆ ನಿಷ್ಠುರರಾಗಿದ್ದರು. ಸಮ್ಮೇಳನದ ವೇದಿಕೆಯಿಂದ ಅವರು ಮಾಡಿದ ಭಾಷಣದಲ್ಲಿ 'ಹಿಂದಿ' ಭಾಷೆ ಹೇಗೆ ಕನ್ನಡದ ಸ್ಥಾನವನ್ನು ಆಕ್ರಮಿಸುತ್ತಿದೆಯೆಂಬುದನ್ನು ಸ್ಪಷ್ಟವಾದ ಶಬ್ದಗಳಲ್ಲಿ ಹೇಳಿ ಇದು ಕನ್ನಡಕ್ಕೆ ಅಪಕಾರಿ ಎಂದು ಉದ್ಘಾಟಿಸಿದರು. ಸಮ್ಮೇಳನವಾದ ಮೇಲೆ ಮೈಸೂರಿನಲ್ಲಿ ಕೆಲವು 'ಹಿಂದೀ'ಪ್ರೇಮಿಗಳು ಎಷ್ಟು ದೂರ ಹೋದರೆಂದರೆ ಅವರು ಎ. ಆರ್. ಕೃ. ಅವರನ್ನು ರಾಷ್ಟ್ರದ್ರೋಹಿಗಳಂತೆ ಕಂಡರು. ಪೂಜ್ಯ ಕೃಷ್ಣಶಾಸ್ತ್ರಿಗಳದು–ಶಾಲೆ ಕಲಾಶಾಲೆಗಳಲ್ಲಿ ವಿದ್ಯಾರ್ಥಿಗಳು ಕನ್ನಡದ ಬದಲು 'ಹಿಂದಿ'ಗೆ ಪ್ರಾಧಾನ್ಯ ಕೊಡುವುದಾದರೆ ಅದು ಮಾತೃ ಭಾಷೆಯ ಅಧ್ಯಯನಕ್ಕೆ ಅಡಚಣೆ ಮಾಡುವುದೆಂಬ ಖಚಿತವಾದ ಅಭಿಪ್ರಾಯವಾಗಿತ್ತು. ಯಾರ ದಬ್ಬಾಳಿಕೆಗೂ ಹೆದರದೆ ತಮ್ಮ ಈ ನಿಲುವನ್ನು ಕೊನೆಯವರೆಗೆ ಕಾಪಾಡಿದರು. ಇದರಿಂದ ಸ್ಪಷ್ಟವಾಗುವುದೇನೆಂದರೆ ಪೂಜ್ಯ ಕೃಷ್ಣಶಾಸ್ತ್ರಿಗಳು ಸ್ವಭಾವದಿಂದ ಕೋಮಲರಾದರೂ ಪ್ರಸಂಗ ಬಂದಾಗ ಸತ್ಯಾಂಶವನ್ನು ಪ್ರಕಟಿಸಲು ನಿಷ್ಠುರರಾಗಿದ್ದುದೆ. ಎಂದರೆ ಅವರು 'ವಜ್ರಾದಪಿ ಕಠೋರಾಣಿ ಮೃದೂನಿಕುಸುಮಾದಪಿ' ಎಂಬ ಉಕ್ತಿಗೆ ನಿದರ್ಶನರಾಗಿದ್ದರು.

ಇದೇ ಪ್ರಸಂಗದಲ್ಲಿ ಹೇಳುವುದಾದರೆ ಪೂಜ್ಯ ಕೃಷ್ಣಶಾಸ್ತ್ರಿಗಳ ವಾಕ್ಸರಣಿ ಯಾಗಲಿ ಅಥವಾ ಅವರ ಲೇಖನ ಪದ್ಧತಿಯಾಗಲಿ ಕೊನೆಯವರೆಗೆ ಇದೇ ರೀತಿಯಾಗಿ ಖಚಿತವೂ ಸುಸ್ಪಷ್ಟವೂ ಆಗಿದ್ದವೆಂದು ಹೇಳಬಹುದು. ವಿಷಯ ವೊಂದರ ಸರ್ವ ಅಂಶಗಳನ್ನು ಸಮಾಲೋಚಿಸಿ ಒಂದು ನಿಖರವಾದ ಅಭಿಪ್ರಾಯಕ್ಕೆ ತಲುಪಿದರೆಂದ ಮೇಲೆ ಅದನ್ನು ವ್ಯಕ್ತಮಾಡುವಲ್ಲಿ ಯಾವ ಸಂದೇಹವೂ ಅವರಿಗೆ ಇರುತ್ತಿರಲಿಲ್ಲ. ಹೀಗಾಗಿ ಅವರ ಅಭಿಪ್ರಾಯಕ್ಕೆ ಒಂದು ವಿಶೇಷ ಗೌರವ ಇರುತ್ತಿತ್ತು. ದಾಕ್ಷಿಣ್ಯಕ್ಕೆ ಸಿಕ್ಕಿ ತಮ್ಮ ನಿಜವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುವಲ್ಲಿ ಅವರು ಹಿಂದೆಗೆಯುತ್ತಿರಲಿಲ್ಲ. ಅವರಿಗೆ ಯಾವಾಗಲೂ ನಿಷ್ಪಕ್ಷಪಾತ ದೃಷ್ಟಿ ಇದ್ದುದರಿಂದ ಮತ್ತು ಹೇಳುವ ಮಾತನ್ನು ಕಠಿನವಾಗದೆ, ಖಚಿತವಾಗಿ ಹೇಳುವ ಸ್ವಭಾವವನ್ನು ಬೆಳೆಸಿಕೊಂಡು ಬಂದುದರಿಂದ ಇದು ಪೂಜ್ಯ ಕೃಷ್ಣಶಾಸ್ತ್ರಿಗಳ ಬಗೆಗೆ ಯಾರಲ್ಲೂ ಗೌರವವನ್ನು ಹುಟ್ಟಿಸುತ್ತಿತ್ತು.

ಪೂಜ್ಯ ಕೃಷ್ಣಶಾಸ್ತ್ರಿಗಳೊಡನೆ ನನಗೆ ಇದ್ದ ಇನ್ನೊಂದು ವಿಶಿಷ್ಟ ಸಂಬಂಧ

ವೆಂದರೆ ನನ್ನ "ನಡುಗನ್ನಡ"ಕ್ಕೆ ಮುನ್ನುಡಿಯನ್ನು ದಯಪಾಲಿಸಬೇಕೆಂದು ನಾನು ಕೇಳಿದಾಗ ಅವರು ತುಂಬುಮನಸ್ಸಿನಿಂದ ಅನುಗ್ರಹಿಸಲೊಪ್ಪಿ, ನಾನು ಮೈಸೂರಿನಲ್ಲಿ ಓದಿದವನಾದುದರಿಂದ ತಮಗೆ ಆತ್ಮೀಯನೆಂಬುದನ್ನು ಮುನ್ನುಡಿಯ ಮೊದಲಲ್ಲೆ ಸ್ಪಷ್ಟಪಡಿಸಿದರು. ಅಂಥ ಹಿರಿಯ ಮಹಾವಿದ್ವಾಂಸರ, ಶೀಲ ಸಂಪನ್ನರ, ಆತ್ಮೀಯತೆಯನ್ನು ಪಡೆಯುವ ಭಾಗ್ಯ ವ್ಯಕ್ತಿಜೀವನದ ಒಂದು ಮಹಾಸಿದ್ಧಿಯೆಂದು ನಾನು ಭಾವಿಸುವೆನು. ಅವರು ನನ್ನನ್ನು ಆತ್ಮೀಯನನ್ನಾಗಿ ಭಾವಿಸಿದುದು ಅವರ ದೊಡ್ಡತನವೇ ಹೊರತು ನನ್ನ ವೈಶಿಷ್ಟ್ಯವೇನಲ್ಲ. ಹೂವಿನ ಪುಣ್ಯದಿಂದ ನಾರೂ ಮುಡಿಸೇರುವಂತೆ, ಪಾಮರರಾದ ನಾವು ಇಂಥ ಹಿರಿಯರ ಆತ್ಮೀಯತೆಯಿಂದ ಪುನೀತರಾಗುತ್ತೇವೆ. ಈ ವಿಷಯವನ್ನು ಅಭಿವ್ಯಕ್ತಮಾಡಲು ಸ್ವಂತಕ್ಕೆ ಸಂಬಂಧಪಟ್ಟ ಈ ಮಾತುಗಳನ್ನು ಇಲ್ಲಿ ಹೇಳಬೇಕಾಯಿತು.

ಪೂಜ್ಯ ಕೃಷ್ಣಶಾಸ್ತ್ರಿಗಳ ಔದಾರ್ಯದ ಮೂಲಕ ನಾನು ನೇರವಾಗಿ ಕಲಾಶಾಲೆಯಲ್ಲಿ ಅವರ ವಿದ್ಯಾರ್ಥಿಯಾಗದಿದ್ದರೂ, ಅವರು ನನ್ನನ್ನು ಆ ವರ್ಗದಲ್ಲೆ ಸೇರಿಸಿಕೊಂಡುದು ನನ್ನ ಪುಣ್ಯವೆಂದು ಭಾವಿಸಿ, ಅವರ ಪುಣ್ಯ ಸ್ಮರಣೆಯಿಂದ ಈ ಶ್ರದ್ಧಾಂಜಲಿಯನ್ನು ಮುಗಿಸುವೆನು.

# ಶಾಸ್ತ್ರಿಗಳ ಸ್ನೇಹ

ಮಿತ್ರರನ್ನು ಸೆಳೆದಿಟ್ಟುಕೊಳ್ಳುವ ಆಕರ್ಷಣೆಯೊಂದು ಅವರಲ್ಲಿತ್ತೆಂದು ಕಾಣುತ್ತದೆ. ಅವರ ಮಿತ್ರರಾದವರೆಲ್ಲ ಅವರಲ್ಲಿ ಗೌರವ, ಸದ್ಭಾವನೆ ತೋರುವವರೇ. ನನ್ನ ಅವರ ಮಿತ್ರತ್ವ....ಐವತ್ತಮೂರು ವರ್ಷಗಳಷ್ಟು ಹಳತಾದುದು; ಬಹು ಗಾಢವಾದುದು. ನನ್ನ ಕಷ್ಟಸುಖಗಳಲ್ಲಿ ಶಾಸ್ತ್ರಿಗಳು ಭಾಗಿಯಾಗಿದ್ದಾರೆ. ಸುಖಕ್ಕಿಂತ ನನ್ನ ಕಷ್ಟಗಳನ್ನು ಅವರೂ ಹೆಚ್ಚಾಗಿ ಹಂಚಿಕೊಂಡಿದ್ದಾರೆ. ಇಂಗ್ಲಿಷಿನಲ್ಲಿ 'ಫೇರ್ ವೆದರ್ ಫ್ರೆಂಡ್‌ಷಿಪ್' ಎನ್ನುತ್ತಾರಲ್ಲ, ಅಂಥದಲ್ಲ ಅವರ ಸ್ನೇಹ. ದುಃಖಕ್ಕಾಗುವ, ಕಷ್ಟಕ್ಕೋಡಿ ಬರುವ ಮನುಷ್ಯ ಆತ. ನನ್ನ ತೀರ್ಥರೂಪರವರು ತೀರಿಕೊಂಡ ದಿನ ಅವರಾಡಿದ ಮಾತು ನಾನು ಹೇಗೆ ಮರೆಯಲಿ ಹೇಳಿ? ಸಾವು ಮಧ್ಯಾಹ್ನ ೪-೩೦ ರಲ್ಲಾಗಿತ್ತು. ಇದಾದ ಕೊಂಚ ಹೊತ್ತಿನಲ್ಲಿಯೇ ಶಾಸ್ತ್ರಿಗಳು ನಮ್ಮ ಮನೆಗೆ ಬಂದರು. "ಭುಜ ಕೊಡೋಕೆ ಬಂದಿದೀನಿ, ಮಡೀಲಿ" ಎಂದರು. ನಮ್ಮ ತಾಯಿ ಹೋದಾಗಲೂ ಅಷ್ಟೇ. ಕಷ್ಟಕಾಲಕ್ಕೆ ಹಾಜರು. ದೇಹಶ್ರಮ, ಗೌರವ-ಪ್ರತಿಷ್ಠೆ, ಸ್ಥಾನ-ಮಾನ, ಮರ್ಯಾದೆಯ ಗೋಜನ್ನೇ ಯೋಚಿಸಿದ್ದವರಲ್ಲ ಅವರು.

—ಡಿ. ವಿ. ಜಿ.

('ಕನ್ನಡ ಪ್ರಭ': ಫೆಬ್ರವರಿ ೩, ೬೮)

ಲೀಲಾ ಸುಬ್ರಹ್ಮಣ್ಯಂ

# 'ಅಣ್ಣಯ್ಯ'ನಿಗೆ ಕಂಬನಿಯ ಕಾಣಿಕೆ

"ಏನು ಕುಕ್ಕನಹಳ್ಳಿ ಕೆರೆ ಹತ್ತಿರವೇ ನಿಮ್ಮ ಮನೆ? ನಾನು ಅಲ್ಲಿ ವಾಕಿಂಗ್ ಬರುತ್ತಿದ್ದಾಗ ಪ್ರೊಫೆಸರ್ಸ್ ಕ್ವಾರ್ಟರ್ಸ್‌ಗಿಂತ ಪಶ್ಚಿಮಕ್ಕೆ ಸರಸ್ವತೀಪುರಂ ಕಡೆಗೆ ಒಂದು ಮನೆಯೂ ಇರಲಿಲ್ಲ."

"ಹೌದು ಅಣ್ಣಯ್ಯ, ನಿನಗೆ ಪ್ರಿಯವಾದ ಜಾಗ ನಮ್ಮ ಮನೆ ಹತ್ತಿರವೇ ಇದೆ. ನಿನ್ನ ಸ್ನೇಹಿತರೆಲ್ಲಾ 'ಹೇಗಿದ್ದಾರೆ ನಿಮ್ಮ ತಾತ, ಅಂತ ಕೇಳುತ್ತಿರುತ್ತಾರೆ" ಎಂದು ನಮ್ಮ ತಾತನಿಗೆ ಜನವರಿ ೧ನೇ ತಾರೀಖು ಹೇಳಿ ಬಂದೆ. ಮೈಸೂರಿಗೆ ಬರುತ್ತಾ ಬಸ್ಸಿನಲ್ಲಿ ನಮ್ಮವರೊಡನೆ "ನೋಡಿ ಅಣ್ಣಯ್ಯ ಈಗ ಸ್ವಲ್ಪ ಹುಷಾರಾಗಿದ್ದಾರೆ. 'ಪ್ರಬುದ್ಧ ಕರ್ನಾಟಕ'ದ ಚಿನ್ನದ ಹಬ್ಬದ ಹೊತ್ತಿಗೆ ನಮ್ಮ ಮನೆಗೆ ಕರೆದುಕೊಂಡು ಬರೋಣ ಎಂದು ಹೇಳಿದೆ."

ಆದರೆ ವಿಧಿ ಅದನ್ನು ಬೇರೆ ರೀತಿ ಮಾಡಿತು. ಫೆಬ್ರುವರಿ ೨ನೇ ತಾರೀಖು ಬೆಳಿಗ್ಗೆ ನನಗೆ ನನ್ನ ಅಣ್ಣಯ್ಯ ಇನ್ನಿಲ್ಲವೆಂದು ತಿಳಿದಾಗ ಬೆಂಗಳೂರಿಗೆ ಎಷ್ಟು ಹೊತ್ತಿಗೆ ತಲಪುತ್ತೇನೋ ಎಂದು ಅನ್ನಿಸಿತ್ತು.

ನಮ್ಮ ಮನೆಯಲ್ಲಿ ಎಲ್ಲರೂ ನಾನು ಚಿಕ್ಕವಳಾಗಿದ್ದಾಗ ತಾತನಿಗೆ ನಾನು ಕೊಡುತ್ತಿದ್ದ ಹಿಂಸೆಯನ್ನು ಎಷ್ಟೋ ಬಾರಿ ಹೇಳಿದ್ದರು. ಆದರೆ ನನಗೆ ನನ್ನ ತಾತನ ಜ್ಞಾಪಕ ಅವರು ಮೈಸೂರಿನಿಂದ ಬೆಂಗಳೂರಿಗೆ ಪ್ರತಿ ವಾರವೂ ಡಿಕ್ಷನರಿ ಮೀಟಿಂಗ್‌ಗೆ ಬರುತ್ತಿದ್ದುದು. ನಮಗೆ ನಮ್ಮ ತಾತ ಬರುವರೆಂದರೆ ಮದ್ದೂರು ವಡೆ, ಮಹಾರಾಜ ಕಾಲೇಜಿನ ಅಯ್ಯರ್ ಹೋಟಲಿನ ಜಾಮೂನು ಸಿಕ್ಕುತ್ತದೆ ಎಂಬುದು ಗ್ಯಾರಂಟಿ. ಅವರು ರೈಲಿನಿಂದ ಇಳಿದು ಸೀದಾ ಪರಿಷತ್ತಿಗೆ ಹೋಗಿ ಮೀಟಿಂಗ್ ಮುಗಿಯಿಸಿಕೊಂಡು ಸಾಯಂಕಾಲ ಸ್ನೇಹಿತರೊಂದಿಗೆ ಮನೆಗೆ ಬರುತ್ತಿದ್ದರು. ಆಗ ನಾವೆಲ್ಲಾ ಅವರನ್ನು ಮುತ್ತಿಗೆಹಾಕಿಕೊಳ್ಳುತ್ತಿದ್ದೆವು. ಪ್ರತಿಯೊಬ್ಬರಿಗೂ ನಿನಗೆ ಸಿಹಿ ಮಾವಿನಕಾಯಿ ಇಷ್ಟ, ನಿನಗೆ ಜಾಮೂನು ಇಷ್ಟ ಎಂದು ಹೇಳುತ್ತಾ ಅವರವರಿಗೆ ಪ್ರಿಯವಾದುದನ್ನು ತಂದು ಕೊಡುತ್ತಿದ್ದರು. ಆದರೆ ಆಗ ನಮಗೆ ಅವರು ಮಾಡುತ್ತಿದ್ದ ಕೆಲಸವೇನು ಅವರು ಎಂತಹ ಮಹತ್ವದ

ಕಾರ್ಯಕ್ಕಾಗಿ ಬರುತ್ತಿದ್ದರು ಎಂಬುದು ತಿಳಿದಿರಲಿಲ್ಲ. ಮೊನ್ನೆ ಅವರು ಸ್ವರ್ಗಸ್ಥರಾದ ಬಳಿಕ ಅವರ ಕಾಗದ ಪತ್ರಗಳ ಜೊತೆಗೆ ಮೊದಲನೆಯ ಡಿಕ್ಷನರಿ ಮೀಟಿಂಗ್‌ನ ಕಾರ್ಯಕಲಾಪದ ವರದಿ ಮತ್ತು ಪದಗಳ ಮೊದಲ ಪ್ರತಿಯನ್ನು ನೋಡಿದಾಗ ನನಗೆ ಹಿಂದಿನ ನೆನಪುಗಳು ಮನಃಪಟಲದ ಮೇಲೆ ಹಾದುಹೋದವು.

ಮತ್ತೊಂದು ನನ್ನ ಮನಸ್ಸಿನಲ್ಲಿ ಆಳವಾಗಿ ನೆನಪಿರುವುದು ಅವರು ಕುಕ್ಕನ ಹಳ್ಳಿ ಕೆರೆ ಏರಿ ಮೇಲೆ ಪ್ರತಿದಿನ ವಾಕಿಂಗ್ ಬರುತ್ತಿದ್ದದ್ದು. ಅವರಿಗೆ ಅದು ಬಹು ಪ್ರಿಯವಾದ ಜಾಗವಾಗಿತ್ತೆಂದು ತೋರುತ್ತದೆ. ಅದರ ಬಗ್ಗೆ 'ಶ್ರೀಪತಿಯ ಕಥೆಗಳ' ಮುನ್ನುಡಿಯಲ್ಲಿ ಹೇಳಿದ್ದಾರೆ. ನಾನು ಮೈಸೂರಿಗೆ ಸ್ಕೂಲು, ಕಾಲೇಜಿಗೆ ರಜ ಬಂದರೆ ಬರುತ್ತಿದ್ದೆ. ನಾನು ಮತ್ತು ಅವರ ಕಿರಿಯಮಗಳು ಶಾಂತಾ ಅವರ ಜೊತೆಗೆ ವಾಕಿಂಗ್ ಹೋಗುತ್ತಿದ್ದೆವು. ಆಗ ಕಥೆಯನ್ನು ಹೇಳುತ್ತಿದ್ದರು, ಇಲ್ಲವೇ ಕೆಲವು ಪುಸ್ತಕಗಳನ್ನು ಓದಿ ಎಂದು ಹೇಳುತ್ತಿದ್ದರು. ಅವರ ಪ್ರಭಾವದಿಂದಲೇ ಬಂಕಿಮಚಂದ್ರರ 'ವಿಷವೃಕ್ಷ', 'ಕೃಷ್ಣಕಾಂತನ ಉಯಿಲು', 'ಕೃಷ್ಣಚರಿತೆ' ಮುಂತಾದ ಕನ್ನಡ ಅನುವಾದಗಳನ್ನು ಪೂರ್ತಿ ಓದಿ ಸಂತೋಷಪಟ್ಟೆವು. ಅವರೇ ಕ್ಲಾಸಿನಲ್ಲಿ 'ವಿಷವೃಕ್ಷ' ಪಾಠ ಹೇಳಿಕೊಡುತ್ತಿದ್ದರಂತೆ. ಆ ಪುಸ್ತಕದ ಪ್ರತಿಪುಟದ ಮೇಲೆ ಪಾಠ ಹೇಳಲು ನಡೆಯಿಸಿದ ಪೂರ್ವಭಾವಿ ಟಿಪ್ಪಣಿಗಳನ್ನೆಲ್ಲಾ ಬರೆದಿದ್ದಾರೆ. ಅದನ್ನು ಓದಿ ಒಂದುದಿನ ಒಬ್ಬ ವಿದ್ಯಾರ್ಥಿಯನ್ನು ನಮ್ಮ ತಾತ ಅದನ್ನು ಹೇಗೆ ಪಾಠಮಾಡುತ್ತಾರೆ ಅಂತ ಕೇಳಿದೆ. ಆತನಂತೂ "ಪಾಠ ನಡೆಯುತ್ತಿದ್ದರೆ ನಮಗೆ ಹೊತ್ತುಹೋಗುವುದೇ ತಿಳಿಯುವುದಿಲ್ಲ; ಮೇಷ್ಟರೇ 'ಘಂಟೆ ಹೊಡೆಯಿತು ನೀವು ಹೋಗಬಹುದು, ಎಂದಾಗ ಎಚ್ಚರ" ಅಂತ ಹೇಳಿದ್ದರು. ನಮಗೂ ಮನೆಯಲ್ಲಿ ಇದೇ ರೀತಿ ಪ್ರಸಿದ್ಧ ಸಾಹಿತಿಗಳ ಪರಿಚಯ ಹಾಗೂ ಪ್ರಸಿದ್ಧ ಪುಸ್ತಕಗಳ ಪರಿಚಯ ವನ್ನು ಮಾಡಿಕೊಡುತ್ತಿದ್ದರು.

ನನ್ನ ತಾತನಿಗೆ ಮತ್ತೊಂದು ಪ್ರಿಯವಾದ ಮತ್ತು ಮುಖ್ಯವಾದ ನಿತ್ಯದ ಕೆಲಸ ದೇವರಪೂಜೆ. ಪೂಜೆಗೆ ಮನೆಯಲ್ಲಿ ಹೂಗಿಡಗಳನ್ನು ತಾವೇ ಬೆಳಸಿ ಬಾವಿಯಿಂದ ನೀರುಸೇದಿ ಅವುಗಳಿಗೆ ಹಾಕುತ್ತಿದ್ದರು. ಆಯಾ ಕಾಲಗಳಲ್ಲಿ ಮೈಸೂರಿನಲ್ಲಿ ಸಿಕ್ಕುವ ಒಳ್ಳೆ ದಂಡೆಯಾದ ಮಲ್ಲಿಗೆ, ಜಾಜಿ ಮುಂತಾದ ದೊಡ್ಡ ಹಾರ ದೇವರಿಗೆ ಅರ್ಪಿಸುವ ಪದ್ಧತಿ. 'ವಚನ ಭಾರತ' ಬರೆಯುವಾಗ ಒಳ್ಳೆ ಘಟನೆಗಳನ್ನು ಪುಸ್ತಕದಲ್ಲಿ ಬರೆದ ದಿವಸ ಮತ್ತು ಪ್ರತಿಯೊಂದು ಪರ್ವ ಮುಗಿದ ಮೇಲೆ ಬರೆದಿದ್ದುದನ್ನು ಇಟ್ಟು ಪೂಜೆ ಮಾಡಬೇಕೆಂಬುದು ಅವರ ಸಂಕಲ್ಪವಾಗಿತ್ತು. ಹಿಂದಿನ ದಿನವೇ ಮನೆಯಲ್ಲಿ ಕೊಬ್ಬರಿಸಕ್ಕರೆ ಮಾಡಿ ಎಂದು ಹೇಳಿರುತ್ತಿದ್ದರು. ಅದಕ್ಕೆ ಕೇಸರಿ, ಯಾಲಕ್ಕಿ, ಹುರಿಗಡಲೆ ಎಲ್ಲಾ ಹಾಕಬೇಕು. ತಾವೇ ಕುಳಿತು ಕಾಗದದ ಪೊಟ್ಟಣಕಟ್ಟಿ ಅದರ ತುಂಬಾ ಸಕ್ಕರೆ ಹಾಕಿ ಕಾಗದವನ್ನು ಮಡಿಸಿ ಒಂದುಪಿತ್ತಾಳೆ ಬಕೇಟಿಗೆ ತುಂಬಿ ಇರುವೆ ಬರದಂತೆ ಒಂದು ಗೂಟಕ್ಕೋ, ಮೊಳೆಗೋ

ತಗುಲಿಹಾಕಿರುತ್ತಿದ್ದರು. ಬೆಳಗ್ಗೆ ಶುಭ್ರವಾಗಿ ಮಡಿಉಟ್ಟು, ಗಂಧಾಕ್ಷತೆ ಇಟ್ಟು ಪೂಜೆಗೆ ಕುಳಿತು ಹೂವಿನಿಂದ ದೇವರನ್ನು ಅಲಂಕರಿಸುತ್ತಿದ್ದರು. ಈಗ ಅವರ ಕೋಣೆಯಲ್ಲಿ ಇರುವ ಸರಸ್ವತಿ ಮತ್ತು ಗೀತೆಯ ಫೋಟೋಗಳನ್ನು ಕಟ್ಟು ಹಾಕಿಸಿದುದು ಆಗಲೇ. ನಾವು ಸಹಾ ಪೂಜೆಮಾಡಿ, ಹಾಡುಹೇಳಿ ಬಂದವರಿಗೆ ಕೊಬ್ಬರಿ ಸಕ್ಕರೆ ಹಂಚುತ್ತಿದ್ದೆವು. ಎಲ್ಲರೂ ಸಕ್ಕರೆ ತಿಂದರೆ ಅವರಿಗೆ ಆಗುತ್ತಿದ್ದ ಆನಂದವನ್ನು ಹೇಗೆ ಬರೆಯಲಿ?

'ವಚನ ಭಾರತ'ದ ವಿರಾಟಪರ್ವ ಬರೆಯುತ್ತಿದ್ದಾಗ ಅಕಸ್ಮಾತ್ ಹಳೇ ಅಗ್ರಹಾರದ ಬಳಿ ಬರುತ್ತಿದ್ದಾಗ ಸೈಕಲ್ ಒಂದು ಕಲ್ಲಿಗೆ ತಗಲಿ ನಮ್ಮ ತಾತನಿಗೆ ಕೈ ಪೆಟ್ಟಾಗಿತ್ತು. ಅವರಿಗೆ ಒಂದು ವಾರ ಬರೆಯಲು ಆಗಲಿಲ್ಲ. ಆಗ ನಾನು ಕಾಲೇಜಿಗೆ ರಜವಿದ್ದುದರಿಂದ ಅವರ ಮನೆಯಲ್ಲೇ ಇದ್ದೆ. ಒಂದುದಿನ "ಲೀಲಾ ನೋಡು ನನಗೆ ಏನೋ ಹೇಳಬೇಕೆಂದು ಮನಸ್ಸಾಗಿದೆ. ಬರೆದುಕೋ. ತಪ್ಪಿಲ್ಲದೆ ಬರೆ. ಅಲ್ಪಪ್ರಾಣ, ಮಹಾಪ್ರಾಣ ಅರ್ಥವಾಗದಿದ್ದರೆ ಕೇಳಿ ಬರೆ" ಎಂದು ಹೇಳಿ ವಿರಾಟಪರ್ವದಲ್ಲಿ ದ್ರೌಪದಿ ಕೀಚಕನಿಂದ ಒದೆಸಿಕೊಂಡು ಅನಂತರದಲ್ಲಿ ಭೀಮ ಸೇನನನ್ನು ಕಾಣುವ ಭಾಗವನ್ನು ಹೇಳುತ್ತಿದ್ದರು. ನಾನು ಕತ್ತು ಬಗ್ಗಿಸಿಕೊಂಡು ಬರೆಯುತ್ತಿದ್ದೆ. "ದ್ರೌಪದಿ ತನ್ನ ಕೈಯನ್ನು ತೋರಿಸಿ 'ನೋಡು ಭೀಮಸೇನ! ಹೇಗೆ ಮರಗಟ್ಟಿ ಹೋಗಿವೆ!' .... ಎಂದು ಗೋಳಿಟ್ಟಳು. ಭೀಮಸೇನನು ಊದಿ ಜಡ್ಡುಕಟ್ಟಿದ್ದ ಅವಳ ಕೈಗಳನ್ನು ತನ್ನ ಕೆನ್ನೆಗಳ ಮೇಲಿಟ್ಟುಕೊಂಡು ಮಹಾ ವೀರನಾದರೂ ಗೋಳೊ ಎಂದು ಅತ್ತುಬಿಟ್ಟನು" ಅಂತ ಹೇಳುತ್ತಾ ಬಿಕ್ಕಿ ಬಿಕ್ಕಿ ಅಳುವ ಶಬ್ದ ಕೇಳಿಸಿತು. ನನಗೆ ಗಾಬರಿಯಾಗಿ "ಯಾಕೆ ಅಣ್ಣಯ್ಯ ಅಳುತ್ತಾ ಇದ್ದೀಯೆ"? ಅಂತ ಕೇಳಿದೆ. "ನೋಡಮ್ಮ, ಪಾಪ ಆ ದ್ರೌಪದಿ ಏನು ಪಾಪ ಮಾಡಿದ್ದಳು ಇದೆಲ್ಲಾ ಅನುಭವಿಸುವುದಕ್ಕೆ ಅಂತ ದುಃಖವಾಯಿತು. ಉತ್ತರ ರಾಮ ಚರಿತ್ರೆಯಲ್ಲಿ ಸೀತೆಯ ಪಾತ್ರವನ್ನು ಬರೆಯುವಾಗಲೂ ನನಗೆ ತುಂಬಾ ದುಃಖವಾಗಿ ಒಂದು ದಿವಸ ಮೂಕನಾಗಿಬಿಟ್ಟಿದ್ದೆ" ಎಂದು ಹೇಳಿದರು. ಅಂತಹ ಮೃದುಮನಸ್ಸು! ಇನ್ನೊಬ್ಬರಿಗಾಗಿ ಮರುಗಿ, ಜೀವನದ ಉದ್ದಕ್ಕೂ ಮಕ್ಕಳು, ಮೊಮ್ಮಕ್ಕಳಿಗೆ ಜೀವ ಸವೆಸಿದರು.

ಅವರ ಮೂರನೆಯ ಮಗಳು ಕಮಲುವಿನ ಅಕಾಲಮೃತ್ಯುವಿನಿಂದ ಅವರಿಗೆ ಮನಸ್ಸು ಬಹಳ ಕದಡಿತ್ತು. ಒಂದು ರೀತಿಯ ಅಶಾಂತಿ ಉಂಟಾಗಿತ್ತು. ಆಗ ಮೈಸೂರಿನ ಸೋಮೇಶ್ವರ ದೇವಸ್ಥಾನಕ್ಕೆ ದಿವಸವೂ ಹೋಗಿ ಸ್ವಲ್ಪಹೊತ್ತು ಇದ್ದು ಬರುತ್ತಿದ್ದರು. ನಾನು ಅವರ ಜೊತೆ ಹೋಗುತ್ತಿದ್ದೆ. ದಿನಾ ನನಗೆ ೧೦ ಲಲಿತಾ ಸಹಸ್ರನಾಮದ ಶ್ಲೋಕವನ್ನು ಹೇಳಿಕೊಡುತ್ತಿದ್ದರು. ತಪ್ಪಿಲ್ಲದೆ ಪುಸ್ತಕದಿಂದ ಓದಿಕೊಂಡು ಗಟ್ಟುಮಾಡಿ ಮಾರನೆಯ ದಿನ ಅವರ ಎದುರಿಗೆ ಹೇಳುತ್ತಿದ್ದೆ. ನನಗೆ ಕೊಟ್ಟಿರುವ ಈ ಅಮೂಲ್ಯ ಆಸ್ತಿಯನ್ನು, ಅದರಿಂದ ನಾನು ಪಡೆದಿರುವ

ಮನಶ್ಶಾಂತಿ, ಸ್ಥೈರ್ಯವನ್ನು ಅಳೆಯಲು ಅಸಾಧ್ಯ. ದಿನಾ ಈ ಸ್ತೋತ್ರವನ್ನು ಪಠಿಸುವಾಗ ನನ್ನ ತಾತನನ್ನು ಸ್ಮರಿಸುತ್ತೇನೆ. 'ವಚನ ಭಾರತ' ಬರೆದಮೇಲೆ ಅವರಿಗೂ ಮನಸ್ಸಿಗೆ ಬಹಳ ಶಾಂತಿ ಸಿಕ್ಕಿತ್ತು. ಆ ಒಂದು ಉತ್ಸಾಹವೇ ಅವರ 'ನಿರ್ಮಲ ಭಾರತಿ' ಪುಸ್ತಕ ಹೊರಬರಲು ಕಾರಣ. ಅಲ್ಲದೆ 'ವಚನಭಾರತ' ಬರೆಯುತ್ತಿರುವಾಗ ಪ್ರತಿದಿನ ಬರೆದ ಭಾಗವನ್ನು ನಮಗೆ ಓದಲು ಕೊಟ್ಟು "ಇದು ನಿಮಗೆ ಅರ್ಥವಾಗುವುದೇ?" ಎಂದು ಕೇಳುತ್ತಿದ್ದರು. ಬರೀ ವಿದ್ವಾಂಸರು ಮಾತ್ರ ಓದುವಂತೆ ಇರಬಾರದು ಅನ್ನುವ ಒಂದು ಧ್ಯೇಯವಿತ್ತು. ಹಾಗೆಯೇ ಅದನ್ನು ಸಾಧಿಸಿದರು. ಅಂತೆಯೇ ಮನೆಗೆಬಂದ ಹೆಂಗಸರು "ನಿಮ್ಮ 'ವಚನ ಭಾರತ' ಓದಿದೆ ಚೆನ್ನಾಗಿದೆ" ಅಂದರೆ "ಬಹಳ ಸಂತೋಷಾಮ್ಮ" ಎಂದು ಆನಂದಿಸಿದುದು ಉಂಟು. ಮನೆಗೆ ಬಂದು ಯಾರು 'ವಚನ ಭಾರತ' ಬೇಕೆಂದು ಕೇಳಿದರೂ ಇಲ್ಲ ಎಂದು ಹೇಳುತ್ತಿರಲಿಲ್ಲ. ಹಿರಿಯರಿಗೆ ಎಷ್ಟೋ ಜನ ಕೊಳ್ಳು ವುದಕ್ಕೆ ಆಗದೇ ಇದ್ದವರಿಗೆ ತಾವಾಗಿ ಅವರ ಮನೆಗೆ ಹೋಗಿ ಉಚಿತವಾಗಿ ಕೊಟ್ಟು ಬಂದಿದ್ದಾರೆ. ಒಮ್ಮೆ ತಮಗಿಂತಲೂ ಹಿರಿಯವರಾದ ಒಬ್ಬರಿಗೆ ಹೂ ಹಣ್ಣುಗಳ ಸಮೇತ 'ವಚನ ಭಾರತ'ದ ಒಂದು ಪ್ರತಿಯನ್ನು ಕೊಟ್ಟು ಅವರಿಂದ ಆಶೀರ್ವಾದ ಪಡೆದುಬಂದರು. ಯಾರಿಗಾದರೂ ಅಂಚೆಯ ಮೂಲಕ ಪ್ರತಿಯನ್ನು ಕಳುಹಿಸು ವಾಗ ಅಷ್ಟೇ ಮುತುವರ್ಜಿ ಇಟ್ಟು ತಾವೇ ಖುದ್ದಾಗಿ ಪ್ಯಾಕ್‌ಮಾಡಿ ಕಳುಹಿಸು ತ್ತಿದ್ದರು. ಎರಡನೆಯ ಆವೃತ್ತಿಯಲ್ಲಿ ಚಿತ್ರಗಳನ್ನು ಹಾಕಬೇಕಾದಾಗ ತಾವೇ ಶ್ರೀ ಪುರುಷೋತ್ತಮರಾಯರ ಮನೆಗೆ ಹೋಗಿ ಅವರಿಗೆ ಚಿತ್ರ ಬರೆಯಲು ವಿವರವಾಗಿ ನಿರ್ದೇಶನವನ್ನಿತ್ತು ಬರುತ್ತಿದ್ದರು. ಪುಸ್ತಕವನ್ನು ಅಂದವಾಗಿ ಮುದ್ರಿಸಿದ ಶ್ರೀ ಮಲ್ಯ ಅವರನ್ನು ಎಷ್ಟು ಹೊಗಳಿದರೂ ಸಾಲದು. ನಮಗೆಲ್ಲರಿಗೂ ದ್ವಿತೀಯ ಆವೃತಿಯ ಪ್ರತಿಯನ್ನು ತೋರಿಸಿ ಒಂದು ತಪ್ಪು ಹುಡುಕಿ ಒಂದು ತಪ್ಪಿಗೆ ಒಂದು ರೂಪಾಯಿ ಕೊಡುತ್ತೇನೆ ಅಂತ ಸವಾಲು ಹಾಕುತ್ತಿದ್ದರು.

ಅವರಿಗೆ ಎಷ್ಟೋ ಜನ "ಏನು ಶಾಸ್ತ್ರಿಗಳೇ ಕಾಶಿಗೆ, ರಾಮೇಶ್ವರಕ್ಕೆ ನೀವು ಹೋಗಿ ಬರಬಾರದೆ?" ಎಂದು ಎಷ್ಟೋ ವೇಳೆ ಕೇಳುತ್ತಿದ್ದರು. ಅವರು "ನನಗೆ ದೇವರು ಇಲ್ಲೇ ಇದ್ದಾನೆ, ಇದೇ ಸಾಕು" ಅನ್ನುತ್ತಿದ್ದರು. ಆಮೇಲೆ ಬಂದ ಹಲವರಿಗೆ ಅವರು "ನಾನು ಏಕೆ ಕಾಶಿಗೆ ಹೋಗಬೇಕು' ನನ್ನ ಮೊಮ್ಮಗಳು ನನಗಾಗಿ ಸ್ನಾನಮಾಡಿ ಪೂಜೆ ಸಲ್ಲಿಸಿದ್ದಾಳೆ. ಹಾಲುಖೋವ ತಂದುಕೊಟ್ಟು ಬಾಯಿ ಸಿಹಿ ಮಾಡಿದ್ದಾಳೆ" ಅಂತ ಹೇಳಿದ್ದುಂಟು. ಅಂತಹ ತೃಪ್ತಿಯನ್ನು ಅವರು ಇದ್ದಲ್ಲೇ ಪಡೆದುಕೊಂಡಿದ್ದರು.

ಕನ್ನಡಮ್ಮನ ಸೇವೆಯನ್ನು ನಿಷ್ಠೆಯಿಂದ ಮಾಡಿದ್ದರೂ ಎಂದೂ ನಮ್ಮೊಂದಿಗೆ ತಮ್ಮ ಕೆಲಸದ ಬಗ್ಗೆ ತಾವೇ ಹೆಮ್ಮೆಪಟ್ಟುಕೊಳ್ಳುತ್ತಿರಲಿಲ್ಲ. ಶ್ರೀ ಬಿ. ಎಂ. ಶ್ರೀಕಂಠಯ್ಯನವರನ್ನೂ, ಶ್ರೀ ವೆಂಕಣ್ಣಯ್ಯನವರನ್ನೂ ಆಗಾಗ್ಗೆ ಜ್ಞಾಪಿಸಿಕೊಳ್ಳು

ತ್ತಿದ್ದರು. ಶ್ರೀ ವೆಂಕಣ್ಣಯ್ಯನವರು ಬಂದಾಗ ಉಪಯೋಗಿಸುತ್ತಿದ್ದ ಹಾಸಿಗೆ ಹೊದ್ದಿಕೆಗಳಿಗೆ ಈಗಲೂ ವೆಂಕಣ್ಣಯ್ಯನವರ ಹಾಸಿಗೆ ಹೊದ್ದಿಕೆ ಅಂತಲೇ ಕರೆಯುತ್ತಿದ್ದರು.

ಹಿಂದೆ ಬೆಂಗಳೂರಿನಲ್ಲಿ ಶ್ರೀ ವೆಂಕಣ್ಣಯ್ಯನವರೂ, ನನ್ನ ತಾತನವರೂ ಒಟ್ಟಿಗೆ ಒಂದೇ ವಠಾರದಲ್ಲಿ ವಾಸಿಸುತ್ತಿದ್ದರಂತೆ. ನಮ್ಮ ತಾತನಿಗೆ ಬಂದ ಜ್ವರ ಆರದೆ ಒಂದು ದಿನ ಗಾಭರಿಯಾಗಿ ಎಲ್ಲರೂ ಅವರ ಜೀವದ ಆಸೆಯನ್ನು ಬಿಟ್ಟು ಅಳುತ್ತಾ ಕುಳಿತಿದ್ದರಂತೆ. ಆಗ ಶ್ರೀ ವೆಂಕಣ್ಣಯ್ಯನವರು ದೇವರ ಬಳಿಗೆ ಹೋಗಿ "ಸ್ವಾಮಿ ನಾನು ಇದುವರೆಗೆ ನನಗಾಗಿ ಒಂದೂ ನಿನ್ನನ್ನು ಕೇಳಲಿಲ್ಲ. ಇವತ್ತು ನನ್ನ ಕೃಷ್ಣನನ್ನು ನನಗಾಗಿ ಬದುಕಿಸು" ಎಂದು ಅಳುತ್ತಾ ತಲೆಬಗ್ಗಿಸಿ ಕೂತು ಬಿಟ್ಟರಂತೆ. ದೇವರು ಕಣ್ಣುಬಿಟ್ಟ. ಬೆಳಗ್ಗೆ ನಮ್ಮ ತಾತನವರಿಗೆ ಸ್ವಲ್ಪ ಸುಧಾರಿಸಿ ಕಣ್ಣುಬಿಟ್ಟರಂತೆ. ಇದನ್ನು ನಮಗೆ ನಮ್ಮ ತಾತನವರೇ ಹೇಳುತ್ತಿದ್ದರು. ಅಂತಹ ಪುಣ್ಯವಂತರ ಪುಣ್ಯದಿಂದಾಗಿ ನಮಗೆ ನಮ್ಮ ತಾತ ಉಳಿದರು. ನಮಗಾಗಿ ಹಗಲೂ, ರಾತ್ರಿ ಒಳ್ಳೆಯದನ್ನೇ ಮಾಡಿ, ಒಳ್ಳೆಯದನ್ನೇ ಕೋರುತ್ತಿದ್ದ ನಮ್ಮ ಮೆಚ್ಚಿನ ಅಣ್ಣಯ್ಯ ಕಡೆಯವರಿಗೂ ಅದೇ ಪ್ರೀತಿ ವಿಶ್ವಾಸವನ್ನು ಇತರರಿಗೂ ತೋರಿಸಿ ಮಾರ್ಗದರ್ಶಕರಾಗಿದ್ದಾರೆ.

ಆ ಪುಣ್ಯಜೀವಿಯ ಹೆಬ್ಬಯಕೆ ಏನು ಇತ್ತೆಂಬುದು ಒಬ್ಬರಿಗೂ ತಿಳಿಯಲಿಲ್ಲ. ತಾವು ಕನ್ನಡಕ್ಕೆ ಏನೂ ಮಾಡಿಲ್ಲ, ಮಾಡಿದ್ದು ಸಾಲದು, ಈಗ ನನಗಿಂತ ಚಿಕ್ಕವರು ಬೇಕಾದಷ್ಟು ಕೆಲಸಮಾಡಿದ್ದಾರೆ ಎಂದು ಸದಾ ಹೇಳುತ್ತಿದ್ದರು. ಹಾಗೆಂದು ಅವರಿಗಿಂತ ಹೆಚ್ಚು (ಅವರ ದೃಷ್ಟಿಯಲ್ಲಿ) ಕೆಲಸ ಮಾಡಿದವರ ಬಗ್ಗೆ ಎಂದೂ ಅಸೂಯೆ ವ್ಯಕ್ತಪಡಿಸಿದವರಲ್ಲ. ಶ್ರೀ ಕುವೆಂಪು ಅವರಿಗೆ ಪ್ರಶಸ್ತಿ ನೀಡಿದಾಗ ಓಡಾಡಲೂ ಆಗದೇ ಇದ್ದರೂ ಸಮಾರಂಭಕ್ಕೆ ಹೋಗಿ ಅವರಿಗೆ ಶುಭವನ್ನು ಕೋರಿ ಬಂದರು. ಈ ವರ್ಷ ಶ್ರೀ ಡಿ. ವಿ. ಜಿ. ಯವರಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿಬಂದ ಮೇಲೆ ಅವರ ಮನೆಗೆ ಹೋಗಿ ಅಭಿನಂದಿಸಿ ಬಂದರಂತೆ.

ಮೊಮ್ಮಕ್ಕಳಲ್ಲಿ ಎಲ್ಲರಿಗಿಂತ ಹಿರಿಯವಳಾಗಿ ಅವರನ್ನೂ ಅವರ ಕಾರ್ಯವನ್ನೂ ಮೆಚ್ಚುತ್ತಿದ್ದ ನನಗೆ ಅವರ ಸಂಪರ್ಕ ಅತ್ಯಂತ ನಿಕಟವಾದದ್ದು. ಈಗ ಪ್ರತ್ಯಕ್ಷವಾಗಿ ನನಗೆ ಅವರ ದೇಹ ಕಾಣುತ್ತಿಲ್ಲ; ಮಾತು ಕೇಳುತ್ತಿಲ್ಲ. ಆದರೂ ಅವರು ಸದಾ ನಮ್ಮೊಡನೆ ಇದ್ದಾರೆ, ಅವರ ಆಶೀರ್ವಾದ ಸದಾ ನನಗೆ ಇದೆ ಎಂದು ಭಾವಿಸಿ ಸಮಾಧಾನ ತಂದುಕೊಳ್ಳುತ್ತಿದ್ದೇನೆ. ಈ ಬಗೆಯ ಸಾವಿರ ನೆನಪುಗಳಿಂದ ನನ್ನ ಕಣ್ಣು ಮಂಜಾಗಿ ಮುಂದೆ ಏನು ಬರೆಯಲೂ ತೋರುತ್ತಿಲ್ಲ.

# ಅಶ್ವಿನೀದೇವತೆಗಳು

ವೆಂಕಣ್ಣಯ್ಯ, ಕೃಷ್ಣಶಾಸ್ತ್ರಿಗಳ ಈ ಸಹಯೋಗವ್ಯವಸಾಯವನ್ನು ಎಷ್ಟು ಹೊಗಳಿದರೂ ಸಾಲದೆಂದು ನನ್ನ ತಿಳುವಳಿಕೆ. ಸ್ವಭಾವದಿಂದ ಈ ಇಬ್ಬರು ಒಂದು ತೆರನಲ್ಲ. ಒಬ್ಬರು ಮೌನದಿಂದ ಒಬ್ಬರು ಮಾತಿನಿಂದ ಮನಸ್ಸನ್ನು ವ್ಯಕ್ತಪಡಿಸುವರು. ಒಬ್ಬರು ಸೌಮ್ಯದ ಮೂರ್ತಿ, ಮತ್ತೊಬ್ಬರು ಸಹಜವಾದ ರಸಭಾವಗಳಿಗೆ ಜೀವನದಲ್ಲಿ ಎಡೆಕೊಡುವವರು. ಒಬ್ಬರು ಸುಲಭವಾಗಿ ಹಗುರವಾಗಿ ಕೆಲಸ ನಡೆಸುವವರು. ಒಬ್ಬರು ಹಗಲಿರುಳೆನ್ನದೆ ಹೊತ್ತುಗೊತ್ತಿಲ್ಲದೆ ಮೈಮುರಿದು ದುಡಿಯುವವರು. ಸಾಮಾನ್ಯವಾಗಿ ಇಂತಹ ಇಬ್ಬರು ಇವರಂತೆ ಗೆಳೆಯರಾಗುವುದು ಅಪೂರ್ವವೆನ್ನಬೇಕು. ಆದರೆ ಕನ್ನಡದ ಪುಣ್ಯದಿಂದ ಇವರಿಬ್ಬರಿಗೂ ಚಿಕ್ಕಂದು ಜೊತೆಯಾಗಿ ಕನ್ನಡ ದೀಕ್ಷೆಬಂದಿತು. ಇಬ್ಬರೂ ಶುದ್ಧ ಚೇತನರು. ಇಬ್ಬರೂ ಋಜುಸ್ವಭಾವದವರು. ಇಬ್ಬರೂ ಕಾರ್ಯತತ್ಪರರು. ಇಬ್ಬರೂ ಸೇವಾನಿಷ್ಠರು. ರೀತಿ ಬೇರೆಯಾದರೂ ಇಬ್ಬರ ಗುರಿ ಒಂದೇ ಆಗಿ ಇಬ್ಬರೂ ಒಂದು ದಾರಿಯಲ್ಲಿ ನಡೆಯಬೇಕಾಯಿತು. ಒಂದು ಗುರಿಯ ಸಾಧನೆಯಲ್ಲಿ ಈ ಎರಡು ಬಾಳು ಒಂದಾಗಿ ಬೆರೆಯಿತು. ಈ ಯಮಳ ಜೀವನ ಹೊಸಗನ್ನಡದ ಅಶ್ವಿನೀದೇವತೆ ಆಯಿತು.

—ಮಾಸ್ತಿ ವೆಂಕಟೇಶ ಅಯ್ಯಂಗಾರ್

(‘ಪ್ರಬುದ್ಧ ಕರ್ಣಾಟಕ’ ೧೦೨—ಪು. ೩೨-೩)



'ಶ್ರೀ' ಅವರು ಮತ್ತು ಶಾಸ್ತ್ರಿಗಳು

[ಸೌಜನ್ಯ : ಪಿ. ವೈದ್ಯ]

ಟಿ. ವಿ. ಸುಬ್ರಹ್ಮಣ್ಯಂ

# ಎ. ಆರ್. ಕೃ.–ಹತ್ತಿರದಿಂದ

ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳ ನಿಧನದಿಂದ ಕನ್ನಡ ಸಾಹಿತ್ಯ, ಕನ್ನಡ ಜನ, ಒಬ್ಬ ನಿಷ್ಠಾವಂತ ವ್ಯಕ್ತಿಯನ್ನು ಕಳೆದುಕೊಂಡಿದ್ದಾರೆ. ಶ್ರೀ ಶಾಸ್ತ್ರಿಗಳ ಸಾಹಿತ್ಯ ರಚನೆ, ವ್ಯಾಸಂಗದಲ್ಲಿ ಎಷ್ಟರ ಮಟ್ಟಿನ ನಿಷ್ಠೆಯೋ ನಿತ್ಯಜೀವನದಲ್ಲೂ ಅಷ್ಟೇ. ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡು, ವೈಯಾಕರಣಿ ತಂದೆಯ ಕೈಕೆಳಗೆ ತಯಾರಾದವರಿಗೆ ವಿದ್ಯಾಭ್ಯಾಸ ಹಾಗೂ ಮನೆಗೆಲಸ ಎರಡೂ ಮೈಗೂಡಿಕೊಂಡು ಬಂದುವು. ಬಾಲ್ಯದಲ್ಲಿ ಈ ರೀತಿಯ ಜೀವನ ಅಪ್ರಿಯವಾಗಿರಬಹುದಾಗಿದ್ದರೂ ಆ ಕಟ್ಟುನಿಟ್ಟಿನ ಬದುಕು ದೊಡ್ಡವರಾದಮೇಲೆ ನಿತ್ಯಜೀವನಕ್ರಮವಾಗಿ ಮಾರ್ಪಟ್ಟಿತು.

ಬೆಳಗಿನ ಜಾವ ನಾಲ್ಕೂವರೆಗೇ ಎದ್ದು ಸ್ನಾನದ ಮನೆಯ ಒಲೆಹಚ್ಚಿ, ಅರ್ಧ ಮುಕ್ಕಾಲು ಗಂಟೆ ಚೆನ್ನಾಗಿ ವ್ಯಾಯಾಮ ಮಾಡುತ್ತಿದ್ದರು. ಸಾಮು ಮತ್ತು ಗದೆತಿರುಗಿಸುವುದು ಇವುಗಳಲ್ಲಿ ಅತ್ಯಾಸಕ್ತಿ. ಅನಂತರ ಐದೂವರೆಯಿಂದ ಒಂದು ಗಂಟೆ ನಡಿಗೆ. ಮುದುಕರಂತೆ ಅಥವಾ ಈಗಿನ ಕಾಲದ ಯುವಕರಂತೆ ಕಾಲೆಳೆದುಕೊಂಡು ನಡೆಯುತ್ತಿರಲಿಲ್ಲ. ಅವರದು ಗಂಡುಹೆಜ್ಜೆ. ನೀಳಕಾಯದ ಅವರ ಜೊತೆ ನಡೆಯುವುದೇ ಚಿಕ್ಕವರಿಗೆ ಒಂದು ವ್ಯಾಯಾಮ. ಒಂದು ಗಂಟೆ ಲಾಲ್‌ಬಾಗಿನಲ್ಲಿ ಚೆನ್ನಾಗಿ ತಿರುಗಾಡಿ ಮನೆಗೆ ಹಿಂತಿರುಗಿ, ಕಾಫಿಕುಡಿದು, ಬೆಳಗಿನ ಕನ್ನಡ ದಿನಪತ್ರಿಕೆಯನ್ನು ಓದುತ್ತಿದ್ದರು. ಆಮೇಲೆ ಸ್ನಾನ, ದೇವರ ಪೂಜೆ. ಪ್ರತಿದಿನವೂ ವಿಷ್ಣುಸಹಸ್ರನಾಮ, ಲಲಿತಾಸಹಸ್ರನಾಮದಿಂದ ದೇವರನ್ನು ಅರ್ಚಿಸುತ್ತಿದ್ದರು. ಬಣ್ಣಬಣ್ಣದ ಹೂಗಳಿಂದ ದೇವರಿಗೆ ಅಲಂಕಾರ. ಅನಂತರ ಭಾವಿಯಿಂದ ನೀರು ಸೇದಿಕೊಂಡು ತಮ್ಮ ಬಟ್ಟೆಯನ್ನು ಒಗೆದು ಒಣಹಾಕುತ್ತಿದ್ದರು. ಪುನಃ ನೀರು ಸೇದಿ ಎರಡೂ ಕೈಯಲ್ಲಿ ನೀರು ತುಂಬಿದ ಕೊಡ ಹಿಡಿದು ಗಿಡಗಳಿಗೆ ನೀರೆರೆಯುತ್ತಿದ್ದರು, ಹೂವಿನ ಗಿಡಗಳೆಂದರೆ ಅವರಿಗೆ ತುಂಬಾ ಮಮತೆ. ಎಚ್ಚರಿಕೆಯಿಂದ ಅವುಗಳನ್ನು ಬೆಳೆಸಿ ಅವುಗಳು ಹೂಬಿಟ್ಟಾಗ ನೋಡಿ ಹಿಗ್ಗುತ್ತಿದ್ದರು; ದೇವರಿಗೆ ಹೂ ಪೂಜೆಮಾಡಿ, ಮನೆಗೆ ಬಂದ ಹೆಣ್ಣುಮಕ್ಕಳಿಗೂ ಮುಡಿಯಲು ಕೊಡುತ್ತಿದ್ದರು. ಗುಲಾಬಿಯಗಿಡ, ಮಲ್ಲಿಗೆಗಿಡಗಳನ್ನು ಬೆಳೆಸು

ವುದರಲ್ಲಿ ಅನೇಕ ವಿವರಗಳನ್ನು ಕೊಡುತ್ತಿದ್ದರು. ಇಷ್ಟೆಲ್ಲಾ ಕೆಲಸ ಮಾಡುವ ವೇಳೆಗೆ ಒಂಬತ್ತು ಘಂಟೆಯಾಗಿರುತ್ತಿತ್ತು. ಕೆಲಸದಲ್ಲಿದ್ದಾಗ ಕಾಲೇಜಿಗೆ ಹೊರಟು, ತರಗತಿಗಳು ಆರಂಭವಾಗುವವರೆಗೆ ವ್ಯಾಸಂಗ ಮಾಡುತ್ತಿದ್ದರು. ನಿವೃತ್ತರಾದ ಮೇಲೆ ಈ ಸಮಯದಲ್ಲಿ ಮೊಮ್ಮಗಳನ್ನು ನೋಡಿ ಬರುತ್ತಿದ್ದರು. ಮೊಣಕೈಗೆ ಒಂದು ಚೀಲ ತಗುಲಿಸಿಕೊಂಡು ಬಲಗೈಯಲ್ಲಿ ಹಣದಚೀಲ ಹಿಡಿದು ಗಾಂಧಿ ಬಜಾರಿನಲ್ಲಿ ಹೋಗುತ್ತಿದ್ದುದು ಸಾಮಾನ್ಯ ನೋಟ. ಹನ್ನೊಂದು ಗಂಟೆಗೆ ಹಿಂದಿರುಗಿ ಊಟಮಾಡಿದನಂತರ ವಿರಾಮ. ಒಂದು ಮಧ್ಯಾಹ್ನವೂ ನಿದ್ದೆ ಮಾಡಿದವರಲ್ಲ. ಕೃಷ್ಣಾಜಿನದ ಮೇಲೆ ಮಲಗಿ ಹಾಗೆಯೇ ಎಚ್ಚರದಿಂದಿದ್ದು, ಜೋಂಪು ಹತ್ತಿದ ಕೂಡಲೇ ಎದ್ದು ತಿರುಗಾಡಿ ನಿದ್ರೆಯನ್ನು ಕಳೆಯುತ್ತಿದ್ದರು.

ಸಾಧಾರಣ ೧೨ರಿಂದ ೫ ಘಂಟೆವರೆಗೆ ವ್ಯಾಸಂಗ ಅಥವಾ ಬರಹ. ಮಧ್ಯೆ ಒಂದು ಸಲ ಕಾಫಿ; ಬಾಯಾಡಿಸಲು ಏನಾದರೂ ಇಟ್ಟುಕೊಂಡಿರುತ್ತಿದ್ದರು. ಯಾರಾದರೂ ಕಿರಿಯ ಲೇಖಕರು ಅವರಿಗೆ ಪುಸ್ತಕವನ್ನು ಕಳುಹಿಸಿದರೆ, ಅದು ತಲುಪಿದ ದಿನವೇ ಲೇಖಕರಿಗೆ ಕಾಗದ ಬರೆದು, ಒಂದು ವಾರದ ಒಳಗೆ ಪುಸ್ತಕ ವನ್ನು ಓದಿ ತಮ್ಮ ಅಭಿಪ್ರಾಯವನ್ನು ತಿಳಿಸುತ್ತಿದ್ದರು. ಯಾರೇ ಕಾಗದ ಬರೆಯಲಿ ಅದು ಅವರಿಗೆ ತಲುಪಿದ ದಿನವೇ ಉತ್ತರ ಬರೆಯುತ್ತಿದ್ದರು.

ಸಂಜೆ ಐದೂವರೆಯಿಂದ ಏಳೂವರೆವರೆಗೆ ನಡಿಗೆ, ಅಂಗಡಿಯಿಂದ ಸಾಮಾನು ತರುವುದು ಇತ್ಯಾದಿ. ರಾತ್ರಿ ಬೇಗ ಊಟಮಾಡಿ ಎಂಟೂವರೆ-ಒಂಬತ್ತು ಗಂಟೆಗೆಲ್ಲಾ ಮಲಗುತ್ತಿದ್ದರು.

ಯಾವ ಪುಸ್ತಕ ಅಥವಾ ಮಾಸಪತ್ರಿಕೆಯನ್ನೇ ಓದಲಿ ಕೈಯಲ್ಲಿ ಸೀಸದಕಡ್ಡಿ ಇದ್ದೇ ಇರುತ್ತಿತ್ತು. ಪುಟದ ಪರಿಸರದಲ್ಲಿ ತಮ್ಮ ಖಚಿತ ಅಭಿಪ್ರಾಯಗಳನ್ನು ಗುರುತಿಸುತ್ತಿದ್ದರು. ಅಚ್ಚಿನ ತಪ್ಪುಗಳನ್ನೂ, ಕಾಗುಣಿತವನ್ನೂ ತಿದ್ದಿ ಬರೆಯು ತ್ತಿದ್ದರು. ಸಂಸ್ಕೃತ ಸಾಹಿತ್ಯದ ಮೇಲೆ ಜರ್ಮನ್ ವಿದ್ವಾಂಸರ ಬರಹಗಳನ್ನು ಮೂಲದಲ್ಲೇ ಓದಲು ಜರ್ಮನ್ ಭಾಷೆಯನ್ನೂ ಕಲಿತಿದ್ದರು. ಜೊತೆಗೆ ಅವರ ಪ್ರಿಯ ಕಾದಂಬರಿಕಾರರಾಗಿದ್ದ ಬಂಕಿಮಚಂದ್ರರ ಬಂಗಾಳೀ ಭಾಷೆ. ಅವರ ಕೊಠಡಿಯಲ್ಲಿ ಸಹ ಗೀತೋಪದೇಶ, ಬಿ.ಎಂ.ಶ್ರೀ. ಮತ್ತು ಬಂಕಿಮಚಂದ್ರರ ಚಿತ್ರಗಳು ಗೋಡೆಯನ್ನು ಅಲಂಕರಿಸಿವೆ.

ಇತರ ಧರ್ಮಗ್ರಂಥಗಳನ್ನು ಅಭ್ಯಾಸ ಮಾಡಿದ್ದರೂ ಅವರ ಹಿಂದೂಧರ್ಮ ನಿಷ್ಠೆಗೆ ಒಂದು ಘಟನೆಯನ್ನು ಸ್ಮರಿಸಬಹುದು. ಒಂದು ದಿನ ಬೆಳಗ್ಗೆ ಎಂದಿನಂತೆ ಗಿಡಗಳಿಗೆ ನೀರೆರೆಯುತ್ತಿದ್ದಾಗ ಒಬ್ಬ ಯೂರೋಪಿಯನ್ ಮಿಷನರಿ ಮಹಿಳೆ ಬಂದು ಇಂಗ್ಲೀಷಿನಲ್ಲಿ 'ಈ ಮನೆಯ ಯಜಮಾನರನ್ನು ನಾನು ನೋಡಬಹುದೇ?' ಎಂದು ಕೇಳಿದಳು. ಅದಕ್ಕೆ ಉತ್ತರವಾಗಿ ಅವರು ಕೊಡಗಳನ್ನು ಕೆಳಗಿಟ್ಟು ಆಕೆಯ ಕಡೆ ನೋಡಿದರು. ಅವರಿಗೆ ಇಂಗ್ಲೀಷ್ ತಿಳಿಯದೆಂದೋ ಏನೋ ಆಕೆ

ತಮಿಳಿನಲ್ಲಿ 'ಮಾಸ್ಟರ್ ಎಂಗೆ?' ಎಂದಳು. ಅದಕ್ಕೆ ಶಾಸ್ತ್ರಿಗಳು ಸ್ವಚ್ಛ ಇಂಗ್ಲೀಷಿನಲ್ಲಿ "ನಾನೇ ಮನೆಯ ಯಜಮಾನ. ಏನಾಗಬೇಕು?" ಎಂದರು. ಆಗ ಆಕೆ ಏಸುಕ್ರಿಸ್ತನ ಬಗ್ಗೆ ಉಪದೇಶ ಆರಂಭಿಸಿದಳು. ಆಗ ಶಾಸ್ತ್ರಿಗಳು 'ನೋಡಿ, ನಮ್ಮ ಹಿಂದೂ ಪುರಾಣದಲ್ಲಿ ೩೩ ಕೋಟಿ ದೇವತೆಗಳಿದ್ದಾರೆ. ಈ ಸಂಖ್ಯೆಯನ್ನು ಹೆಚ್ಚಿಸುವ ಆಗತ್ಯ ನನಗೆ ತೋರಲಿಲ್ಲ' ಎಂದರು. ಆಕೆ ಮಾತು ಬದಲಾಯಿಸಿ, 'ನೋಡಿ ಇದು ಬೈಬಲ್. ಇದರಲ್ಲಿ ದೇವವಾಣಿಯಿದೆ . . .' ಎಂದು ವರ್ಣನೆ ಪ್ರಾರಂಭಿಸಿದಳು. ಶಾಸ್ತ್ರಿಗಳು 'ಅಮ್ಮಾ, ಬೈಬಲ್ಲನ್ನು ನಾನು ಏನಿಲ್ಲವೆಂದರೂ ಏಳೆಂಟುಬಾರಿ ಓದಿದೇನೆ. ಅರ್ಥಮಾಡಿಕೊಂಡಿದೇನೆ. ನನಗೂ ಬೈಬಲ್ಲಿಗೂ ಇವತ್ತಿನ ನಂಟಸ್ತಿಕೆಯಲ್ಲ–೩೦ ವರ್ಷದ ಗಂಟು' ಎಂದಾಗ, ಮಹಿಳೆ ಬಂದದಾರಿ ಹಿಡಿದಳು.

ವಿಶ್ವವಿದ್ಯಾನಿಲಯದಿಂದ ನಿವೃತ್ತರಾದ ಪ್ರಾಧ್ಯಾಪಕರನ್ನು ಗೌರವ ಪ್ರಾಧ್ಯಾಪಕರನ್ನಾಗಿ ನೇಮಿಸಿಕೊಂಡು ಅವರ ಸಲಹೆಯ ಲಾಭ ಪಡೆಯುವ ವ್ಯವಸ್ಥೆ ಬೆಂಗಳೂರು ನ್ಯಾಷನಲ್ ಕಾಲೇಜಿನಲ್ಲಿತ್ತು. ಅದರಂತೆ ೧೯೫೩-೧೯೫೭ರ ವರೆಗೆ ಪ್ರಾಧ್ಯಾಪಕರಾಗಿ ಪಾಠ ಹೇಳಿದರು. ಸೇರಿದ ಒಂದು ತಿಂಗಳನಂತರ ಕಾಲೇಜಿನ ಪ್ರಿನ್ಸಿಪಾಲರು ಇವರನ್ನು ಬರಹೇಳಿ, "ನೋಡಿ, ಶಾಸ್ತ್ರಿಗಳೇ, ಗೌರವ ಪ್ರಾಧ್ಯಾಪಕರಿಗೆ ತಿಂಗಳಿಗೆ ನೂರು ರೂಪಾಯಿ ಸಂಭಾವನೆ ಕೊಡುವ ಸಂಪ್ರದಾಯ ನಮ್ಮದು. ನಿಮ್ಮ ಬಗ್ಗೆಯೂ ಅಷ್ಟೇ. ಹೆಚ್ಚಿಗೆ ಕೊಡಲು ಶಕ್ತರಲ್ಲ" ಎಂದಾಗ ಶಾಸ್ತ್ರಿಗಳು "ನೀವು ನನಗೆ ಏಕೆ ಕೊಡಬೇಕು? ನಾಲ್ಕು ಜನರ ಹಣದ ಸಹಾಯದಿಂದ ನಡೆಯುವ ನಿಮ್ಮ ಸಂಸ್ಥೆಯಿಂದ ನನಗೆ ದುಡ್ಡು ಬೇಡ. ಏನೋ ತಿನ್ನಲು, ಉಣ್ಣಲು ದೇವರು ಒಂದಿಷ್ಟು ಕೊಟ್ಟಿದ್ದಾನೆ. ನನಗೆ ಅದರಲ್ಲೇ ತೃಪ್ತಿ" ಎಂದರು. ಇದು ನಿಜವಾಗಿ ವಿದ್ಯಾದಾನವೇ ಆಯಿತು.

ಹೀಗೆ ಗೌರವ ಪ್ರಾಧ್ಯಾಪಕರಾಗಿದ್ದಾಗ 'ಶ್ರೀ' ವಿರಚಿತ 'ಅಶ್ವತ್ಥಾಮನ್' ನಾಟಕವನ್ನು ಬೋಧಿಸುತ್ತಿದ್ದರು. ನಾಟಕವನ್ನು ವಿಮರ್ಶಿಸುತ್ತಾ ಒಂದು ದಿನ ನಾಟಕದ ನಾಯಕನ ಬಗ್ಗೆ ದೀರ್ಘವಾಗಿ ಪ್ರಸ್ತಾಪ ಮಾಡಿದರು. ಈಗಿನ ಕಾಲದಲ್ಲಿ ಡಿಗ್ರಿ ತರಗತಿಗಳ ವಿದ್ಯಾರ್ಥಿಗಳ ಪೈಕಿ ಉಪಾಧ್ಯಾಯರ ಭಾಷಣವನ್ನು ಕೇಳುತ್ತಾ ಟಿಪ್ಪಣಿ ಬರೆದುಕೊಳ್ಳುವವರು ಬಹಳ ಕಡಿಮೆ. ಅದನ್ನು ಅವರು ಗಮನಿಸಿದರು. ಮನೆಗೆ ಬಂದು ಆ ವಿಚಾರದಲ್ಲಿ ದೀರ್ಘಲೇಖನವನ್ನು ಬರೆದು ತಕ್ಷಣವೇ ಅಚ್ಚುಹಾಕಿಸಿ ಅದರ ಪ್ರತಿಯನ್ನು ಎಲ್ಲಾ ವಿದ್ಯಾರ್ಥಿಗಳಿಗೂ ಉಚಿತವಾಗಿ ಹಂಚಿದರು. ಈ ಅನಿರೀಕ್ಷಿತ ಕೊಡುಗೆಯಿಂದ ಹುಡುಗರು ಕುಣಿದಾಡಿದರು. ಈ ಪ್ರಸಂಗ ಅವರಿಗೆ ವಿದ್ಯಾರ್ಥಿಗಳಲ್ಲಿದ್ದ ವಾತ್ಸಲ್ಯಕ್ಕೆ ಸಾಕ್ಷಿ.

ವಿದ್ಯಾರ್ಥಿಗಳು ತಮ್ಮ ಬುದ್ಧಿಬಲವನ್ನು ವೃದ್ಧಿಸಿಕೊಳ್ಳುವುದರ ಜೊತೆಗೆ ದೇಹದಾರ್ಢ್ಯವನ್ನೂ ಹೆಚ್ಚಿಸಿಕೊಳ್ಳಬೇಕೆಂದು ಪದೇ ಪದೇ ಹೇಳುತ್ತಿದ್ದರು.

ಮೈಸೂರು ಜನರನ್ನು ಉತ್ತರಭಾರತದ ದೃಢಕಾಯರೊಂದಿಗೆ ಹೋಲಿಸಿ, ನಾವು ಬಲಿಷ್ಠರಾಗಿಲ್ಲದಿದ್ದರೆ ನಮ್ಮನ್ನು ಯಾರೂ ಗಣನೆಗೆ ತೆಗೆದುಕೊಳ್ಳುವುದಿಲ್ಲವೆಂದು ಎಚ್ಚರಿಸುತ್ತಿದ್ದರು. ಅವರು ಮೈಸೂರಿನಲ್ಲಿದ್ದಾಗ ಎರಡು ವರ್ಷಗಳ ಕಾಲ ವಿಶ್ವವಿದ್ಯಾಲಯದ ಗರಡಿಯ ಕಾರ್ಯನಿರ್ವಾಹಕರಾಗಿದ್ದು ಅದಕ್ಕೆ ಚೇತನ ನೀಡಿ, ಅದರ ಅಸ್ತಿತ್ವವನ್ನು ಇತರರ ಗಮನಕ್ಕೆ ತಂದು ಒಂದು ರೂಪಕೊಟ್ಟರು.

ಕನ್ನಡದ ಲೇಖಕರ ಬಗ್ಗೆ ಅವರಿಗಿದ್ದ ಉತ್ಕಟ ಅಭಿಮಾನಕ್ಕೆ ಒಂದು ಉದಾಹರಣೆ: ಕನ್ನಡದ ಪ್ರಸಿದ್ಧ ಕಾದಂಬರಿಕಾರ ಶ್ರೀ ಅ. ನ. ಕೃಷ್ಣರಾಯರಿಗೆ ಅವರು ನೂರು ಕಾದಂಬರಿಗಳನ್ನು ಬರೆದ ಬಗ್ಗೆ ಒಮ್ಮೆ ಬೆಂಗಳೂರಿನಲ್ಲಿ ಸನ್ಮಾನ ಏರ್ಪಾಡಾಗಿದ್ದಿತು. ಆದರೆ ಶಾಸ್ತ್ರಿಗಳಿಗೆ ಆ ವಯಸ್ಸಿನಲ್ಲಿ ಯಾವುದೇ ಸಮಾರಂಭಕ್ಕೆ ಹೋಗಿ ಕುಳಿತಿರುವುದೆಂದರೆ ದೇಹಕ್ಕೆ ತುಂಬಾ ಮುಜುಗರವಾಗುತ್ತಿತ್ತು. ಆದ್ದರಿಂದ ಸಮಾರಂಭಗಳಿಗೆ ಅವರು ಹೋಗುತ್ತಿರಲಿಲ್ಲ. ಅಂತಹುದರಲ್ಲಿ ಶಾಸ್ತ್ರಿಗಳು ಆ ಸಂಜೆ ತಾವು ಆ ಸನ್ಮಾನ ಸಮಾರಂಭಕ್ಕೆ ಹೋಗಲಾಗುವುದಿಲ್ಲವೆಂದು ಮನಗಂಡು ಮಧ್ಯಾಹ್ನ ಉರಿಬಿಸಿಲಿನಲ್ಲೇ ಅ. ನ. ಕೃ ರವರ ಮನೆಗೆ ಹೋದರು. ಅ. ನ. ಕೃ ರವರು ಆಶ್ಚರ್ಯದಿಂದ ಶಾಸ್ತ್ರಿಗಳನ್ನು ಒಳಗೆ ಕರೆದೊಯ್ದರು. ಆಗ ಶಾಸ್ತ್ರಿಗಳು, "ಅಪ್ಪಾ, ನೀವು ಕನ್ನಡದಲ್ಲಿ ಇದುವರೆಗೂ ಯಾರೂ ಮಾಡದಿದ್ದ ಕೆಲಸವನ್ನು ಮಾಡಿದ್ದೀರಿ. ಒಬ್ಬರೇ ಒಂದು ನೂರು ಕಾದಂಬರಿಗಳನ್ನೂ ಬರೆಯುವುದೆಂದರೆ ಅತ್ಯಂತ ಸಾಹಸದ ಮಾತು. ನೀವು ಅದನ್ನು ಸಾಧಿಸಿದ್ದೀರಿ. ಕನ್ನಡಕ್ಕೆ ನಿಮ್ಮಿಂದ ಇನ್ನೂ ಒಳ್ಳೆಯ ಕೃತಿಗಳು ಬರಲೆಂದು ದೇವರನ್ನು ಪ್ರಾರ್ಥಿಸುತ್ತೇನೆ" ಎಂದು 'ಬಂಕಿಮಚಂದ್ರ' ಗ್ರಂಥವನ್ನು ಆಶೀರ್ವಾದ ಪೂರ್ವಕವಾಗಿತ್ತರು. ಅನಿರ್ಬಂಧಿತ ಪ್ರಶಂಸೆಗೆ ಬೇರೆ ಉದಾಹರಣೆ ಬೇಕೆ?

ಮೈಸೂರು ವಿಶ್ವವಿದ್ಯಾನಿಲಯವು ಅವರಿಗೆ ೧೯೬೦ರಲ್ಲಿ ಗೌರವ ಡಾಕ್ಟರೇಟ್ ಪದವಿ ಕೊಟ್ಟಾಗ ತುಂಬಾ ಆನಂದಪಟ್ಟರು. 'ನಾನು ಓದಿ ನಾನು ಪಾಠ ಹೇಳಿದ ವಿದ್ಯಾಸಂಸ್ಥೆ ನನ್ನನ್ನು ಇಷ್ಟೊಂದು ಮಾನ್ಯಮಾಡಿತಲ್ಲಾ' ಎಂದು ಹೆಮ್ಮೆಪಟ್ಟರು. ಪದವೀದಾನ ಸಮಾರಂಭದಲ್ಲಿ ತಾವು ಒಂದೆರಡು ಮಾತು ಆಡಬೇಕೆಂದು ಮನಗಂಡು, ಪುಟ್ಟ ಭಾಷಣ ತಯಾರಿಸಿ, ಗುಟ್ಟಾಗಿ ಅಚ್ಚುಹಾಕಿಸಿ, ಪ್ರತಿಗಳನ್ನು ತಮ್ಮೊಂದಿಗೆ ಮೈಸೂರಿಗೆ ತಂದರು. ಮನೆಯಲ್ಲಿ ಯಾರಿಗೂ ಇದರ ಸುಳಿವು ಸಿಕ್ಕಿರಲಿಲ್ಲ.

ಸಮಾರಂಭದಲ್ಲಿ ತಮ್ಮ ಭಾಷಣದ ಸರದಿ ಬಂದಾಗ ತಮ್ಮ ಭಾಷಣದ ವಿಶೇಷ ಪ್ರತಿಯನ್ನು ಕುಲಪತಿಗಳ (ಶ್ರೀ ಜಯಚಾಮರಾಜ ಒಡೆಯರ್) ಮುಂದಿಟ್ಟು ಕನ್ನಡದಲ್ಲಿ ಮಾತನಾಡಲು ಆರಂಭಿಸಿದಾಗ ಸಭಿಕರು ಗುಜುಗುಂಪಲು ನಿಲ್ಲಿಸಿ ಕಿವಿಗಡಚಿಕ್ಕುವಂತೆ ಕರತಾಡನ ಮಾಡಿದುದೇ ಅಲ್ಲದೆ, ಅತ್ಯಂತ ನಿಶ್ಶಬ್ದದಿಂದ ಅವರ ಭಾಷಣವನ್ನು ಕೇಳಿ ಪುನಃ ಹರ್ಷೋದ್ಗಾರ ಮಾಡಿದರು.

'ಬಂಕಿಮಚಂದ್ರ' ಪುಸ್ತಕವನ್ನು ಬರೆದ ಮೇಲೆ ಅವರಿಗೆ ಹಳೆಯ ಸಾಲವನ್ನು ಬಡ್ಡಿ ಸಮೇತ ತೀರಿಸಿದಷ್ಟು ಆನಂದ! ಅದರ ಹೊರಕವಚದ ಮುದ್ರಣ ವಿನ್ಯಾಸ ಅವರದ್ದೇ. ಬಂಕಿಮಚಂದ್ರರ ಚಿತ್ರವನ್ನು ಮತ್ತು ಬಂಗಾಳಿಯಲ್ಲಿ ಅವರ ಸಹಿಯನ್ನು ಸಂಗ್ರಹಿಸಲು ಕಲ್ಕತ್ತೆಯ ಸಂಘ ಸಂಸ್ಥೆಗಳಿಗೆ ಬರೆದು ತುಂಬಾ ಶ್ರಮ ಪಟ್ಟರು. ಈ ಪುಸ್ತಕಕ್ಕೆ ಉತ್ತಮ ಮುದ್ರಣಕ್ಕಾಗಿ ಭಾರತ ಸರಕಾರದ ಬಹುಮಾನ ಬಂದಿದೆ. ಅನಂತರ ಪುಸ್ತಕಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ರಾಷ್ಟ್ರ ಪ್ರಶಸ್ತಿಯೂ ಬಂದಿತು. ಈ ಬಹುಮಾನ ವಿತರಣೆಯಲ್ಲಿ ಒಂದು ವಿಚಿತ್ರ ಘಟನೆ ನಡೆಯಿತು. ಆಗ ಶಾಸ್ತ್ರಿಗಳಿಗೆ ಮೈ, ಮನಸ್ಸು ಸ್ವಸ್ಥವಿರಲಿಲ್ಲ. ಎಲ್ಲದರಲ್ಲೂ ಏನೋ ಒಂದು ರೀತಿಯ ಉದಾಸೀನತೆ ಇತ್ತು—ಅವರ ಸಹಜ ಸ್ವಭಾವಕ್ಕೆ ವಿರುದ್ಧ ವಾಗಿ. ಎಲ್ಲರೂ ಅವರನ್ನು ದೆಹಲಿಗೆ ಹೋಗಿ ರಾಷ್ಟ್ರಾಧ್ಯಕ್ಷರಿಂದ ಬಹುಮಾನ ತೆಗೆದುಕೊಳ್ಳುವ ಅವಕಾಶವನ್ನು ಉಪಯೋಗಿಸಿಕೊಳ್ಳಿರೆಂದು ಎಷ್ಟು ಹೇಳಿದರೂ ದೇಹಾರೋಗ್ಯವಿಲ್ಲವೆಂದು ದೆಹಲಿಗೆ ಹೋಗಲು ನಿರಾಕರಿಸಿದರು. ದೆಹಲಿಯಲ್ಲಿನ ಪ್ರತಿಷ್ಠಿತ ಕನ್ನಡ ವ್ಯಕ್ತಿಗಳು, ಸಂಘಗಳು ಈ ಕನ್ನಡದ ಕಲಿಯನ್ನು ಆಮಂತ್ರಿಸಿ ಒತ್ತಾಯಪೂರ್ವಕವಾಗಿ ಕಾಗದ ಬರೆದರು. ಒಂದೇ ಹಟಹಿಡಿದು ಶಾಸ್ತ್ರಿಗಳು ಪ್ರಯಾಣಕ್ಕೆ ಒಪ್ಪಲಿಲ್ಲ. ಕಡೆಗೆ ಬೆಂಗಳೂರಿನಲ್ಲಿ ಒಂದು ಸಾರ್ವಜನಿಕ ಸಮಾರಂಭ ವನ್ನೇರ್ಪಡಿಸಿ ಬಹುಮಾನ ವಿತರಣೆ ಮಾಡಬೇಕೆಂದು ಸಾಹಿತ್ಯ ಅಕಾಡೆಮಿಯವರು ಕೇಳಿದಾಗ ಅದೂ ಬೇಡವೆಂದರು. ಮದ್ರಾಸ್ ಶಾಖಾ ಕಛೇರಿಯಿಂದ "ಕಡೆಗೆ ನಿಮ್ಮ ಮನೆಯಲ್ಲಾದರೂ ನಮ್ಮ ಖರ್ಚಿನಲ್ಲಿ ಒಂದು ಸಣ್ಣ ಸಮಾರಂಭ ಏರ್ಪಡಿಸುತ್ತೇವೆ" ಎಂದು ಬರೆದಾಗ, "ಬೇಡ ಅಂಚೆಯ ಮೂಲಕ ಬಹುಮಾನ ಕಳುಹಿಸಿ" ಎಂದು ಉತ್ತರ ಬರೆಯುವುದರಲ್ಲಿದ್ದರು. ಆಗ ಮನೆಯವರಾದ ನಾವು ಹಲವರು ನಿಂತು ಸಮಾರಂಭವನ್ನು ನಾವು ಏರ್ಪಡಿಸುತ್ತೇವೆ ಎಂದು ಭರವಸೆ ಯಿತ್ತರೂ 'ನೀವೆಲ್ಲಾ ಹುಡುಗರು. ನಿಮಗೇನು ತಿಳಿಯುತ್ತದೆ' ಎಂದು ಬಿಟ್ಟರು. ನಾವು ಇನ್ನೂ ಬಲವಂತಮಾಡಿದಾಗ 'ನೋಡು ಮನೆ ತುಂಬಾ ಧೂಳು. ಇಲ್ಲಿ ನೂರು ಜನ ಹೇಗೆ ಹಿಡಿಸುತ್ತಾರೆ? ಬಂದವರಿಗೆ ಕುಳಿತುಕೊಳ್ಳಲು ಕುರ್ಚಿ ಸಹ ಇಲ್ಲ. ಅವರಿಗೆ ಕಾಫಿ ಕೊಡಲು ಲೋಟಗಳಾದರೂ ಎಲ್ಲಿವೆ?' ಎಂದು ಬೇಜಾರಿ ನಿಂದ ಹೇಳಿದರು. ಕಡೆಗೆ ನಾವೆಲ್ಲಾ "ನೀವು ಯೋಚಿಸಬೇಡಿ ನಾವು ಸೋಫಾ, ಕುರ್ಚಿ, ಜಮಖಾನ, ಲೋಟಗಳು ಎಲ್ಲಾ ಬಾಡಿಗೆಗೆ ತಂದು, ಅಡಿಗೆಯವರಿಂದ ತಿಂಡಿಮಾಡಿಸಿ, ನಾವೇ ನಿಂತು ಎಲ್ಲರಿಗೂ ಕೊಡುತ್ತೇವೆ" ಎಂದಾಗ ಅವರಿಗೆ ನಮ್ಮ ಮಾತಿನಲ್ಲಿ ನಂಬಿಕೆಯಿರಲಿಲ್ಲ. ಕಡೆಗೆ ಒಪ್ಪಿಸಿ, ಮದ್ರಾಸಿಗೆ ತಂತಿ ಕೊಟ್ಟು ಎರಡು ದಿನದನಂತರದ ತಾರೀಖನ್ನು ಗೊತ್ತುಮಾಡಿ ಸಿದ್ಧತೆಗಳನ್ನು ನಡೆಸಿದೆವು. ದೊಡ್ಡ ಹಜಾರವನ್ನೇ ದಿವಾನಖಾನೆಯ ರೀತಿಯಲ್ಲಿ ಅಲಂಕರಿಸಿದೆವು. ಹಿಂದಿನ ದಿನ ಮದ್ರಾಸ್ ಶಾಖಾ ಕಛೇರಿಯ ಮುಖ್ಯಸ್ಥರು ಬಂದಿದ್ದಾಗ ಶಾಸ್ತ್ರಿಗಳು

“ಪೇಪರಿನವರನ್ನು ಕರೆಯಿಸಬೇಡಿ ಅವರಿಗೆಲ್ಲಾ ಕೂರಲು ಸ್ಥಳ ಇಲ್ಲ” ಎಂದರು. ಅವರು ಸುಮ್ಮನೆ ಹೂಂ ಎಂದರು. ಮಾರನೆಯದಿನ ಮುಖ್ಯವಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಸರಕಾರದ ಸಂಸ್ಕೃತಿ ಪ್ರಸಾರ ಶಾಖೆಯ ಡೈರೆಕ್ಟರರು ಮತ್ತು ಕೆಲವು ಪ್ರಮುಖ ಸಾಹಿತಿಗಳಿದ್ದರು. ಪತ್ರಿಕಾ ಪ್ರತಿನಿಧಿಗಳು ಸ್ಥಳ ಸಂಕೋಚದಿಂದ ನೆಲದ ಮೇಲೆ ಕೂಡಬೇಕಾಯಿತು. ಅವರು ನಗುಮುಖದಿಂದ ಅದನ್ನೆಲ್ಲಾ ಸಹಿಸಿಕೊಂಡರು. ಚಿಕ್ಕ ಉಪಾಹಾರದನಂತರ ಸಾಹಿತ್ಯ ಅಕಾಡೆಮಿಯ ಪ್ರದೇಶಿಕ ಶಾಖೆಯ ವಕ್ತಾರರು ಮಾತನಾಡಿ ಶ್ರೀ ಶಾಸ್ತ್ರಿಗಳ ಬರವಣಿಗೆಯನ್ನು ಹೊಗಳಿದರು. ಶಾಸ್ತ್ರಿಗಳು ಆ ವೇಳೆಗೆ ರವೀಂದ್ರನಾಥ ಠಾಕೂರರ ಬಂಗಾಳಿ ಬರಹಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದರು. ಅವರಿಗೆ ಬಂಗಾಳಿ ಭಾಷೆಯ ವ್ಯಾಕರಣ, ಪದಪ್ರಯೋಗ, ಅರ್ಥ ಇವುಗಳ ಬಗ್ಗೆ ಸಂದೇಹ ತೋರಿದಾಗ ಸಾಹಿತ್ಯ ಅಕಾಡೆಮಿ ಮುಖ್ಯಸ್ಥರಾಗಿದ್ದ ಕೃಷ್ಣಕೃಪಲಾನಿಯವರಿಗೆ ದೀರ್ಘ ಪತ್ರ ಬರೆಯುತ್ತಿದ್ದರಂತೆ. ಅದಕ್ಕೆ ಕೃಪಲಾನಿಯವರು ಇದುವರೆಗೂ ಯಾವ ಬಂಗಾಳಿ ವಿದ್ವಾಂಸನೂ ಕೇಳದ ಪ್ರಶ್ನೆಗಳನ್ನು ಈ ಕನ್ನಡದ ವಿದ್ವಾಂಸರು ಕೇಳುತ್ತಿದ್ದಾರಲ್ಲಾ ಎಂದು ಆಶ್ಚರ್ಯ ವ್ಯಕ್ತಪಡಿಸಿ, ಉತ್ತರ ಕೊಡಲು ತುಂಬಾ ಶ್ರಮ ಪಡುತ್ತಿದ್ದರಂತೆ. ಶಾಸ್ತ್ರಿಗಳು ಭಾಷೆ ಸಾಹಿತ್ಯವನ್ನು ಅಷ್ಟು ಆಳವಾಗಿ ಅಭ್ಯಾಸ ಮಾಡಿದ್ದರು. ಇದೇ ಮೊದಲಬಾರಿಗೆ ಸಾಹಿತ್ಯ ಅಕಾಡೆಮಿ, ಪ್ರಶಸ್ತಿ ವಿಜೇತರ ಮನೆಯ ಬಾಗಿಲಿಗೆ ಒಂದು ಲೇಖಕರನ್ನು ಸನ್ಮಾನಿಸಿದುದು. ಹತ್ತು ಗಂಟೆಗೆ ಸಮಾರಂಭ ಮುಗಿಯಿತು. ವಿಶ್ರಾಂತರಾದ ಮೇಲೆ ಕೋಟು, ಪೇಟಗಳನ್ನು ಸಾಮಾನ್ಯವಾಗಿ ಧರಿಸದೇ ಇದ್ದ ಶಾಸ್ತ್ರಿಗಳು ಅಂದು ತಮ್ಮ ಜರಿಪೇಟ, ಕೋಟನ್ನು ಧರಿಸಿದ್ದರು. ಕೆಲವರು ಚಿಕ್ಕವರು ಅವರನ್ನು ಆ ತೊಡಿಗೆಯಲ್ಲಿ ನೋಡಿ ತಮಾಷೆ ಮಾಡುತ್ತಿದ್ದರು. ಸಮಾರಂಭದ ನಂತರ ಸಾಮಾನುಗಳೆಲ್ಲವನ್ನೂ ತೆಗೆದಿಟ್ಟು ಊಟಮಾಡಿ ವಿಶ್ರಾಂತಿ ಪಡೆಯುತ್ತಿದ್ದೆವು. ಆಗ ಕಾರಿನಲ್ಲಿ ಭಾರತ ಚಲನಚಿತ್ರ ಶಾಖೆಯವರು ಬಂದು ಬೆಳಗಿನ ಸಮಾರಂಭದ ವಿಚಾರ ನಮಗೆ ತಿಳಿದಿರಲಿಲ್ಲ. ಈ ಉತ್ಸವದ ಬಗ್ಗೆ ನಾವು ಫಿಲಂ ತೆಗೆಯಲೇಬೇಕು ಎಂದರು. ನಾವೆಲ್ಲಾ ಮಾತಿಲ್ಲದೆ ಒಬ್ಬರ ಮುಖ ಒಬ್ಬರು ನೋಡಿದೆವು. ಆಗ ಅವರು “ನೀವು ಯೋಚಿಸಬೇಡಿ. ಚಿತ್ರದ ಷೂಟಿಂಗ್‌ಗೆ ಅಗತ್ಯವಾದಷ್ಟು ಮಾತ್ರ ಸಿದ್ಧತೆ ಮಾಡೋಣ. ಬೆಳಗಿನ ಹೂವಿನ ಹಾರಗಳು ಇವೆಯೇ ಎಂದು ಕೇಳಿದರು. ಪುನಃ ಸಂಸ್ಕೃತಿ ಪ್ರಸಾರ ಶಾಖೆಯ ಡೈರೆಕ್ಟರ್ ಮತ್ತೆ ಕೆಲವರನ್ನು ಕರೆತಂದು ಬೆಳಗಿನ ಉತ್ಸವದ ‘ನಾಟಕ’ ಆಡಿಸಿಯೇ ಬಿಟ್ಟರು. ದಿನದ ಗಲಾಟೆಯೆಲ್ಲಾ ಮುಗಿದ ಮೇಲೆ ಶಾಸ್ತ್ರಿಗಳು ನಮ್ಮ ಬೆನ್ನು ತಟ್ಟಿ ‘ಶುದ್ಧ ಹುಡುಗು ಪಾಳ್ಯ ಎಂದಿದ್ದೆ. ಎಲ್ಲಾ ಚೆನ್ನಾಗಿ ಸಿದ್ಧತೆ ಮಾಡಿದ್ದಿರಲ್ಲಾ !’ ಎಂದರು. ಆಗ ನಮ್ಮ ತಲೆ ತಾರೆಗಳನ್ನು ತಾಕುವಷ್ಟು ಎತ್ತರವಾಗಿತ್ತು.

ಸಾಹಿತ್ಯ ಅಕಾಡೆಮಿಯವರು ರವೀಂದ್ರನಾಥ ಠಾಕೂರರ ಪುಸ್ತಕಗಳ

ಆಯ್ದ ಭಾಗಗಳನ್ನು ಭಾರತದ ಇತರ ಭಾಷೆಗಳಿಗೆ ತರ್ಜುಮೆ ಮಾಡಿಸುವ ಕಾರ್ಯ ಕೈಕೊಂಡಾಗ ಕನ್ನಡದ ಪಾಲಿನ ಕೆಲಸ ಶಾಸ್ತ್ರಿಗಳ ಪಾಲಿಗೆ ಬಿತ್ತು. ಅವರು ಎಷ್ಟು ಬೇಡವೆಂದರೂ ದೆಹಲಿಯ ಹಲವು ಕನ್ನಡಿಗರು ಈ ಕೆಲಸ ಶಾಸ್ತ್ರಿಗಳಿಂದಲೇ ಆಗಬೇಕೆಂದು ಹಟಹಿಡಿದರು. ಭಾಷಾಂತರ ಕಾರ್ಯ ಸಾಗಿತು. ಚೊಕ್ಕವಾದ ಹಸ್ತಪ್ರತಿ ನಿರ್ದೇಶಿತ ದಿನದ ಒಳಗಾಗಿ ಅಕಾಡೆಮಿಯವರ ಕೈ ಸೇರುತ್ತಿದ್ದುದು ಕನ್ನಡದ ಪ್ರತಿ ಒಂದೇ. ಬೆಂಗಳೂರಿನ ರಾಮಕೃಷ್ಣಾಶ್ರಮದ ಬಂಗಾಳಿ ಸ್ವಾಮಿಯವರೊಬ್ಬರೊಂದಿಗೆ ಶಾಸ್ತ್ರಿಗಳು ಬಂಗಾಳಿ ಭಾಷಾತೊಡಕುಗಳನ್ನು ಚರ್ಚಿಸುತ್ತಿದ್ದರು. ಆಗ ಸ್ವಾಮಿಗಳು ಕಲ್ಕತ್ತಾಕ್ಕೆ ಮರಳಿ ಹೋಗುವ ಪ್ರಮೇಯ ಬಂದಿತು. ಅವರು ಹೋಗುವುದರೊಳಗೇ ಭಾಷಾಂತರ ಕಾರ್ಯ ಮುಗಿಸಬೇಕೆಂದು ಹಗಲಿರುಳೂ ಅವಿಶ್ರಾಂತವಾಗಿ ದುಡಿದುದು ಶಾಸ್ತ್ರಿಗಳ ಆರೋಗ್ಯಕ್ಕೆ ಮುಳುವಾಯಿತು. ಸಾಧಾರಣವಾಗಿ ಶಾಸ್ತ್ರಿಗಳು ಒಂದು ದಿನ ಕಾಹಿಲೆ ಮಲಗಿದವರಲ್ಲ. ವೃದ್ಧಾಪ್ಯದ ಜೊತೆಗೆ ಕಠಿನ ಕೆಲಸದ ಶ್ರಮವೂ ಸೇರಿ ಆಹಾರ ಪಚನ ಶಕ್ತಿ ಕುಂಠಿತವಾಯಿತು, ನಿದ್ರೆ ಬರುತ್ತಿರಲಿಲ್ಲ. ಇದರಿಂದ ಇರಸುಮುರಸು ಹೆಚ್ಚಾಗಿ ಅವರ ಚಿತ್ತ ಸ್ವಾಸ್ಥ್ಯವನ್ನು ಕಲಕಿತು. ಒಟ್ಟಿಗೇ ವೃದ್ಧಾಪ್ಯ ಮೇಲೆರಗಿ ಬಂದಂತೆ ಅವರನ್ನು ಈ ಕೋಟಲೆಗಳು ಕಾಡಿಸಿದುವು. ಇದರ ತಾಪ ಅಸಾಧ್ಯವಾಗಿ 'ನಿಬಂಧಮಾಲಾ' ಭಾಷಾಂತರವನ್ನು ಕಡೆಯ ಹತ್ತು ಪುಟಗಳಿರುವಾಗಲೇ ನಿಲ್ಲಿಸಿದರು. ಅಷ್ಟನ್ನು ಮಾತ್ರ ಬೇರೆಯವರು ಬರೆಯಬೇಕಾಯಿತು.

ಅದುವರೆವಿಗೂ ಗಟ್ಟಿಯಾಗಿದ್ದವರು ವೃದ್ಧಾಪ್ಯದ ಚಿಹ್ನೆಗಳನ್ನು ಕಾಹಿಲೆಯ ಚಿಹ್ನೆ ಎಂದು ಹೇಳಿ ಪರಿತಪಿಸುತ್ತಿದ್ದರು. ಆದರೆ ಕನ್ನಡದ ಸ್ಥಾನಮಾನದ ವಿಚಾರವಾಗಿಯೋ, ಮಹಾರಾಜಾ ಕಾಲೇಜಿನ ಬಗ್ಗೆಯೋ ಮಾತು ಬಂದರೆ ತಮ್ಮ ಎಲ್ಲಾ ಕೋಟಲೆಗಳನ್ನು ಮರೆತು ಉತ್ಸಾಹದಿಂದ ಮಾತನಾಡುತ್ತಿದ್ದರು, ಅದೊಂದು ಕ್ಷಣ ಮಾತ್ರ. ಮರುಕ್ಷಣದಲ್ಲಿ ಯಥಾಪ್ರಕಾರ ಅವರ ಅಸೌಖ್ಯದ ಮಾತೇ! ಬರೆಯುವುದನ್ನೆಲ್ಲಾ ನಿಲ್ಲಿಸಿದ್ದರೂ ಕಡೆಯ ದಿನಗಳವರೆಗೆ ಓದುವುದನ್ನು ಬಿಟ್ಟಿರಲಿಲ್ಲ. ಮನೆಗೆ ಬಂದವರು ಯಾರಾದರೂ 'ಹೇಗಿದ್ದೀರಿ!' ಎಂದಾಗ ತಮ್ಮ ವೃದ್ಧಾಪ್ಯದ (ಕಾಹಿಲೆ?) ಚಿಹ್ನೆಗಳನ್ನು ಕಳವಳದಿಂದ ಹೇಳುತ್ತಿದ್ದರು. ಎಲ್ಲಾ ತಜ್ಞ ವೈದ್ಯರಿಗೂ ತೋರಿಸಿ, ಎಲ್ಲಾರೀತಿಯ ದೇಹಪರೀಕ್ಷೆಗಳನ್ನು ಮಾಡಿದ ನಂತರ ತಜ್ಞರು ಅವರ ಅಸೌಖ್ಯವನ್ನು ಮಾನಸಿಕ ವೇದನೆ ಎಂದು ಹೇಳಿ ಬಿಕಾಂಪ್ಲೆಕ್ಸ್ ಟಾನಿಕ್ಕುಗಳನ್ನು ಕೊಡುತ್ತಿದ್ದರು. ಅದರಿಂದ ಶಾಸ್ತ್ರಿಗಳಿಗೆ ಏನೋ ಒಂದು ರೀತಿಯ ಅಸಮಾಧಾನ.

೧೯೬೭ರ ಡಿಸೆಂಬರ್ ತಿಂಗಳಲ್ಲಿ ಒಂದು ಅಪಘಾತದಿಂದ ತೊಡೆಯ ಮೂಳೆ ಮುರಿದಾಗ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಅವರಿಗೆ ಶಸ್ತ್ರಚಿಕಿತ್ಸೆಮಾಡಿ ಮೂಳೆಯನ್ನು ಸೇರಿಸಿ ರಿವೆಟ್ ಮಾಡಿದರು. ಆಗ ಅವರಿಗೆ ಅಂತಹ ಚಿಕಿತ್ಸೆಯನ್ನು ತಡೆಯಬಲ್ಲ

ಚೇತನವಿರುವುದನ್ನು ಕಂಡು ಡಾಕ್ಟರರಿಗೂ ಆಶ್ಚರ್ಯ. ಹಾಸಿಗೆಯಲ್ಲೇ ಆರು ತಿಂಗಳು ಕಳೆದ ನಂತರ ಎದ್ದು ಮೆಲ್ಲಗೆ ಓಡಾಡಿ ಎಂದು ಡಾಕ್ಟರರು ಸಲಹೆಕೊಟ್ಟರು. ಒಂದು ದಿನ ಅವರ ಮೊಮ್ಮಗಳು ಕಾಲೇಜಿನಿಂದ ಮನೆಗೆ ಹಿಂದಿರುಗಿದಾಗ, ತಾತ ತಮ್ಮ ರೂಮಿನಿಂದ ಬಂದು ವರಾಂಡದಲ್ಲಿ ಕುರ್ಚಿಯಲ್ಲಿ ಕುಳಿತಿದುದನ್ನು ನೋಡಿ ಅಚ್ಚರಿಗೊಂಡಳು. 'ಅಣ್ಣಯ್ಯಾ, ನಿನ್ನನ್ನು ಯಾರು ಕರೆದುಕೊಂಡು ಬಂದರು?' ಎಂದಾಗ, 'ನಾನೇ ಮೆಲ್ಲಗೆ ಗೋಡೆ ಹಿಡಿದು ನಡೆದು ಬಂದೆ. ಇದು ನನ್ನ ಎರಡನೆಯ ಬಾಲ್ಯ' ಎಂದು ನಗಿಸಿದರು. ಸ್ವಲ್ಪ ಓಡಾಡುವ ಹಾಗೆ ಆದಾಗ ಹಾಗೆಯೇ ಮೆಲ್ಲಗೆ ಹತ್ತಿರದ ಅಂಗಡಿಗೆ ಹೋಗಿ ಪೆಪ್ಪರ್ ಮಿಂಟ್, ದ್ರಾಕ್ಷಿ ಇವುಗಳನ್ನು ತಂದು ನಮಗೆ ಕಾಣದಂತೆ ತಿನ್ನುತ್ತಿದ್ದರು. ನೋಡಿದರೆ ನಾವು ಹಾಸ್ಯಮಾಡುವೆವೆಂದೋ, ಅಥವಾ ಮಗಳು ತಮ್ಮನ್ನು ಬಯ್ಯುವರೆಂದೋ ಇರಬೇಕು.

ಶ್ರೀ ಶಾಸ್ತ್ರಿಗಳು ತಮ್ಮ ಅರವತ್ತನೆಯ ವಯಸ್ಸಿನಲ್ಲಿ ಬರೆದ 'ವಚನ ಭಾರತ' ವೇ ಅವರ 'ಷಷ್ಠಿಪೂರ್ತಿಶಾಂತಿ'ಯ ಸಮಾರಂಭ. ಎಪ್ಪತ್ತನೆಯ ವಯಸ್ಸಿನಲ್ಲಿ 'ನಿರ್ಮಲ ಭಾರತಿ'ಯನ್ನು ಮಕ್ಕಳಿಗೆ ಅರ್ಪಿಸಿದ ಹಾಗೇ ಎಂಬತ್ತನೆಯ ವಯಸ್ಸಿನಲ್ಲಿ ಮರಿಮಕ್ಕಳಾದ ಸಂಧ್ಯಾ—ವಾಸುಕಿ ಇವರ ಹೆಸರಿನಲ್ಲಿ ಒಂದು ಪುಸ್ತಕ ಬರೆಯುವ ಯೋಚನೆಯನ್ನಿಟ್ಟುಕೊಂಡಿದ್ದರು. ಆದರೆ ಆ ಪುಣ್ಯ ಕನ್ನಡಿಗರಿಗೆ ಲಭಿಸಲಿಲ್ಲ.

ವಿದ್ವತ್ತು, ಪ್ರೀತ್ಯಾದರಗಳ ಆಗರವಾಗಿದ್ದ, ಕನ್ನಡದ ಕೆಚ್ಚೆದೆಯ ಸೇನಾನಿ ಇನ್ನಿಲ್ಲ. ಯಾವ ಸಮಯದಲ್ಲೇ ಅವರ ಮನೆಗೆ ಹೋಗಲಿ ನಮ್ಮನ್ನು ಕರೆದು ಕುಳ್ಳಿರಿಸಿ, ತಿನ್ನಲು ಏನಾದರೂ ಕೊಟ್ಟು, ಓದಲು ಯಾವುದಾದರೂ ಹೊಸ ಪುಸ್ತಕ ಕೊಟ್ಟು, ವಾತ್ಸಲ್ಯದಿಂದ ಮಾತನಾಡಿ, ಗೇಟಿನ ವರೆಗೂ ಬಂದು ನಮ್ಮನ್ನು ಬೀಳ್ಕೊಡುತ್ತಿದ್ದ "ಅಣ್ಣಯ್ಯ" ಇನ್ನಿಲ್ಲ. ಕನ್ನಡಕ್ಕಾಗಿ ನಾವು ನಿಷ್ಠೆಯಿಂದ ದುಡಿಯುವುದೇ ನಾವು ಶಾಸ್ತ್ರಿಗಳಿಗೆ ಸಲ್ಲಿಸಬಹುದಾದ ಉಚ್ಚಗೌರವ. "ಅವರು ಸ್ವರ್ಗಸ್ಥರಾಗಿದ್ದರೂ ಕೀರ್ತಿಶೇಷರಾಗಿ ನಮ್ಮಲ್ಲಿ ಇದ್ದೇ ಇರುತ್ತಾರೆ. ಅಚ್ಚ ಕಸ್ತೂರಿಯೂ, ಪಚ್ಚಕರ್ಪೂರವೂ ಕರಗಿ ಹೋದರೆ ಅದೃಶ್ಯವಾಗುವುವೇ ಹೊರತು ನಷ್ಟವಾದಂತಾಯಿತೇ?"

ರಂ. ಶ್ರೀ. ಮುಗಳಿ

# ಶ್ರೀಪತಿಯ ಕಥೆಗಳು

'ಅಕಾಲಮೃತ್ಯುವಿಗೆ ತುತ್ತಾದ ನನ್ನ ಮಗಳು ಕಮಲುವಿನ ನೋವು ಸಾವುಗಳ ಕುದಿನೆನಪಿಗಾಗಿ ಈ ಪುಸ್ತಕವನ್ನು ಪ್ರಕಟಿಸಿದ್ದೇನೆ' ಎಂದು ದಿವಂಗತ ಎ. ಆರ್. ಕೃಷ್ಣಶಾಸ್ತ್ರಿಗಳು ಈ ಕಥೆಗಳ ಪ್ರಕಟನೆಯ ಕಾಲಕ್ಕೆ ಬರೆದು ತಮ್ಮ ಕಂಬನಿಯ ತರ್ಪಣಮಾಡಿದರು, ಆ ಹತಭಾಗಿನಿಯಾದ ಮಗಳ ಕುದಿನೆನಪಿಗೆ ಅರ್ಪಣಮಾಡಿದರು. ಅವರ ಮುನ್ನುಡಿಯಲ್ಲಿ ಪ್ರಕಟನೆಗೆ ಕಾರಣವಾದ ಈ ಸಾಂಸಾರಿಕ ಘಟನೆಯ ಉಲ್ಲೇಖವಿದೆ; ಕೆರೆಯ ಏರಿಯಮೇಲೆ ಕುಳಿತಿರುವ ಬೈರಾಗಿಯ ಮುಂದೆ ಹೊಗೆಯಾಡುತ್ತಿರುವ ಸಾಂಬ್ರಾಣಿಯ ದೂಪದ ವರ್ಣನೆಯಿದೆ. 'ಭಗವಂತನ ಸೃಷ್ಟಿ ಚಿತ್ರವಿಚಿತ್ರವಾಗಿದೆ. ಅದರಲ್ಲಿ ಒಂದೊಂದು ಸ್ವರೂಪ ಒಂದೊಂದು ಬಗೆಯದು. ಅದು ಹೇಗೆ ಹಾಗಿದೆಯೋ, ಹಾಗಿರಬೇಕೋ, ಅವನಿಗೇ ಗೊತ್ತು' ಎಂದು ಮುಂತಾಗಿ ಲೇಖಕರ ಸ್ವಾನುಭವದಿಂದ ಮೂಡಿದ ಆಲೋಚನೆಗಳ ಮಾಲಿಕೆಯಿದೆ.

ಮನುಷ್ಯನು ತನ್ನ ಜೀವನದಲ್ಲಿ ಏನೇನೋ ಪಾಡುಪಡುತ್ತಾನೆ. ಎಲ್ಲವೂ ಸರಿಯಾಗಿದ್ದ ಬಾಳು ಅತಿವಿರಳವೆನ್ನಬೇಕು. ತಾನು ಪಟ್ಟಪಾಡು, ಕುದಿದ ಕಾವು ಫತಕ್ಕಾಗಿ ಎಂಬುದು ಇಂದಿಗೂ ಯಾವ ಸಾಮಾನ್ಯ ಮನುಷ್ಯನಿಗೂ ಅರ್ಥವಾಗಿಲ್ಲ. ಈ ರಹಸ್ಯಭೇದವನ್ನು ಮಾಡಹೋಗಿ ಕಂಗೆಟ್ಟವರೇ ಹೆಚ್ಚುಜನ. ಈ ಲೇಖಕರ ವಿಷಯವನ್ನೇ ನೋಡೋಣ. ಮಗಳು ಹುಟ್ಟಿದಳು, ಮುದ್ದಾಗಿ ಬೆಳೆದಳು, ತಾಯಿತಂದೆಗಳ ಕರುಳಿನ ಬಳ್ಳಿಗೆ ಬಿಟ್ಟ ಹೂವಾದಳು. ಇನ್ನೂ ಬೆಳೆಯುತ್ತಿರುವಾಗಲ ಅಕಾಲಮೃತ್ಯುವಿಗೆ ತುತ್ತಾದಳು! ಇದೇಕೆ ಹೀಗಾಯಿತು? ಇದನ್ನು ಹೇಗೆ ಸಹಿಸಬೇಕು? ಹೇಗೆ ಮರೆಯಬೇಕು? ಆದರೆ ಕಾಲ ಮುಂದೆ ಮುಂದೆ ಸಾಗುತ್ತದೆ. ನೆನಪುಮಾತ್ರ ಒಳಒಳಗೆ ಕುದಿಯುತ್ತಲೇ ಇರುತ್ತದೆ. ಈ ಕುದಿಯಲ್ಲಿ ಕಂಬನಿ ಕಾದು ಬಿಸಿಯಾಗಿ ಉಕ್ಕುತ್ತಲೇ ಇರುತ್ತದೆ. ಈ ಅನುಭವಕ್ಕೆ ಕುದಿನೆನಪು ಎಂಬುದು ಸೊಗಸಾದ ಪದ. ಸವಿನೆನಪು ಮಿತಿಮೀರಿದರೆ ಮನುಷ್ಯನ ತಲೆಕೆಡಬಹುದು. ಆದರೆ ಮನಸ್ಸು ಮಾಗಿದ ಅನುಭವದ ಹಿನ್ನೆಲೆಯಲ್ಲಿ

ಬಾಳಿನ ಮೋಹದಿಂದ ಸ್ವಲ್ಪ ಬಿಡಿಸಿಕೊಂಡು ನಿಂತರೆ ಒಂದುಬಗೆಯ ತಟಸ್ಥ ವೃತ್ತಿಗೆ, ಸ್ವೀಕಾರಕ್ಕೆ ಮತ್ತು ಶಾಂತಿಗೆ ಪ್ರೇರಕವಾಗಬಹುದು.

ಶ್ರೀಪತಿಯ ಕಥೆಗಳ ಲೇಖಕರಿಗೆ ಅವರ ಕುದಿನೆನಪಿನಲ್ಲಿ ಇಂಥ ಬಾಳ ತಿಳಿವು ಬೆಳೆದುಕೊಂಡು ಬಂದಿದೆ. ಈ ಕಥೆಗಳ ಸ್ವಾರಸ್ಯದ ಬಹುಭಾಗವು ಈ ಬಾಳತಿಳಿವಿನಲ್ಲಿದೆ. ಬಾಳತಿಳಿವು ಅಂದರೇನು? ಜೀವನದ ಜ್ಞಾನ, ಜೀವನದ ವಿವೇಕ, ಜೀವನದ ಜ್ಞಾನದಲ್ಲಿ ಲೋಕವ್ಯವಹಾರದ ಮತ್ತು ಮನುಷ್ಯಸ್ವಭಾವದ ನಿಕಟಪರಿಚಯವು ಅಡಕವಾಗುತ್ತದೆ. ಜೀವನದ ವಿವೇಕದಲ್ಲಿ ಆ ಜ್ಞಾನದ ಉಪಯೋಗದಿಂದ ಉಂಟಾದ ತಾಳ್ಮೆ—ಸಮತೂಕಗಳು ಒದಗುತ್ತವೆ. ಇವೆರಡೂ ಕೂಡಿ ಇರುವಲ್ಲಿ ಬಾಳಿನ ಸಮರ್ಪಕವಾದ ಚಿತ್ರವನ್ನು ಲೇಖಕರು ಕೊಡುತ್ತಾರೆ. ಬರೀಜೀವನದ ಜ್ಞಾನದಿಂದ ಒಂದು ಬಗೆಯ ತದ್ರೂಪ ಚಿತ್ರವು ಮೂಡಬಹುದು, ಒಮ್ಮೊಮ್ಮೆ ಬೆರಗುಗೊಳಿಸಲೂಬಹುದು. ಆದರೆ ಅದು ಕಾಗದದ ಹೂವಾದೀತು. ಬರೀ ಜೀವನವಿವೇಕದಿಂದ ಕೃತಿ ಪ್ರವಚನವಾಗಬಹುದು, ಸುಂದರ ಸೂಕ್ತಿಯಾಗಬಹುದು.

ಬಾಳಿನ ಕುದಿ ಮತ್ತು ತಿಳಿವು ಎರಡೂ ಸೇರಿಕೊಂಡು ಉಂಟುಮಾಡಿರುವ ಒಂದು ವಾಸ್ತವ ಮನೋಧರ್ಮವು ಶ್ರೀಪತಿಯ ಕಥೆಗಳ ವೈಶಿಷ್ಟ್ಯವಾಗಿರುತ್ತದೆ. ಕೆಲವು ಕಥೆಗಳಲ್ಲಿ ಅದು ಎದ್ದುಕಾಣುತ್ತದೆ, ಕೆಲವದರಲ್ಲಿ ಅಂದು ಹಿಂದೆ ನಿಂತುಕೊಂಡಿರುತ್ತದೆ. ಸಾಮಾನ್ಯವಾಗಿ ಈ ಕಥೆಗಳ ಕಥನರೀತಿ ತೀರ ನೇರ. ಆಧುನಿಕವೆನ್ನಬಹುದಾದ ಯಾವ ತಂತ್ರಕೌಶಲವೂ ಬಹುವಾಗಿ ಇಲ್ಲಿ ಕಾಣದೊರೆಯದು. ಆದರೆ ಒಳ್ಳೆಯ ಕಲೆಯಲ್ಲಿರಬೇಕಾದ ಸೆಳೆತಗಳೆಲ್ಲ ಇಲ್ಲಿ ಕಂಡುಬರುತ್ತವೆ.

'ನನ್ನ ಸ್ನೇಹಿತ' ಎಂಬ ಮೊದಲನೇ ಕತೆಯನ್ನು ನೋಡಿದರೆ, ಅದು ತೀರ ಸರಳರೀತಿಯಲ್ಲಿ ಆರಂಭವಾಗುತ್ತದೆ. ಬರಬರುತ್ತ ಕಿಟ್ಟಣ್ಣನ ಒಳಗುದಿಯ ಪರಿಚಯವಾಗುತ್ತದೆ. ಅವನಿಗೂ ಅವನ ಹೆಂಡತಿ ಲಕ್ಷ್ಮಮ್ಮನಿಗೂ ಸ್ವಭಾವದಲ್ಲಿ ಹೊಂದಿಕೆಯಿಲ್ಲ. ಅದೊಂದು ಇಜ್ಜೋಡು. ಇದರಿಂದ ಆಗಾಗ ವಾದ, ವಿರಸ. ಈ ವಿರಸದ ನೋವು ಹೆಚ್ಚಾಗುವಂತೆ ಕಿಟ್ಟುವಿನ ಎದೆಗೆ ಅಪೇಕ್ಷಾಭಂಗದ ಬರೆ ಬೇರೆ. ತನ್ನ ಸೋದರಮಾವನ ಮಗಳಾದ ಪುಟ್ಟುವನ್ನು ಅವನು ಮೆಚ್ಚಿಕೊಂಡಿದ್ದನು. ಅವಳನ್ನು ಮದುವೆಮಾಡಿಕೊಳ್ಳಬೇಕೆಂದು ಅವನಿಗೆ ಅಪೇಕ್ಷೆಯಿತ್ತು. ಮನೆಯಲ್ಲಿ ಅದು ಮೊದಲಿಂದಲೂ ನಿಷ್ಕರ್ಷೆಯಾದ ಮಾತಾಗಿತ್ತು. ಆದರೆ ಅದು ಪ್ರತ್ಯಕ್ಷವಾಗಿ ನೆರವೇರಲಿಲ್ಲ. ಕಿಟ್ಟುವಿಗೆ ಬೇರೆ ಮದುವೆಯಾಯಿತು, ಪುಟ್ಟುವಿಗೂ ಬೇರೆ ಮದುವೆಯಾಯಿತು. ಕೂಡಬೇಕೆಂದು ಬಯಸಿದವರು ಕೂಡಲಿಲ್ಲ, ಕೂಡಬಾರದವರು ಕೂಡಿದರು. ಪುಟ್ಟುವಿನ ಅತ್ತೆಮನೆಯೋ ಅಳಲಿನ ಆಗರ. ಇದ್ದುದು ಸಾಲದೇನೋ ಎನ್ನುವಂತೆ ಮದುವೆಯಾದ ಒಂದು ವರ್ಷದಲ್ಲಿ ಅವಳ ಗಂಡ ತೀರಿಕೊಂಡನು. ಇದನ್ನು ಕೇಳಿ ಕಿಟ್ಟಣ್ಣನು ಕಳವಳಪಟ್ಟನು. ಪತಿಯನ್ನು

ಕಳೆದುಕೊಂಡ ಪುಟ್ಟುವಿಗೆ ಒಂದು ಗಂಡುಮಗು ಹುಟ್ಟಿತು. ಅದಕ್ಕೆ ಕಿಟ್ಟಣ್ಣ ಎಂದೇ ಹೆಸರಿಟ್ಟರು. ಆಮೇಲೆ ಹಿರಿಯ ಕಿಟ್ಟಣ್ಣ ಕಿರಿಯ ಕಿಟ್ಟಣ್ಣನನ್ನು ದತ್ತು ತೆಗೆದುಕೊಂಡನು. ಕ್ರಮೇಣ ಪುಟ್ಟು ಮತ್ತು ಹಿರಿಯ ಕಿಟ್ಟಣ್ಣ ಇಬ್ಬರ ಆರೋಗ್ಯವೂ ಕೆಟ್ಟಿತು. ಇಬ್ಬರೂ ದೈವಾಧೀನರಾದರು. ಕಿರಿಯ ಕಿಟ್ಟಣ್ಣನೇ ದಟ್ಟವಾಗಿ ಕವಿದ ಮೋಡದಲ್ಲಿ ನುಸುಳಿರುವ ಕದಿರಾಗಿ ಉಳಿದು ಬೆಳೆದನು. ಈ ಕಥೆಯಲ್ಲಿ ವಾಸ್ತವ ಪ್ರಪಂಚದಲ್ಲಿ ವಿರಸದಾಂಪತ್ಯ ಹೇಗೆ ದುಃಖದ ಮಡು ವಾಗುತ್ತದೆ ಎಂಬುದನ್ನು ಸಮರ್ಪಕವಾಗಿ ಚಿತ್ರಿಸಲಾಗಿದೆ. ಸರಸವಾಗಬಹು ದಾಗಿದ್ದ ದಾಂಪತ್ಯ ವಿಧಿವಿಲಸನದಿಂದ ತಪ್ಪಿಹೋಗಿ ಒಂದು ದುಃಖದ ಮಡುವಿಗೆ ಇನ್ನೊಂದು ಸೇರಿಕೊಂಡು ಈ ಕಥೆಯಲ್ಲಿ ಕರುಣರಸವನ್ನು ಉಕ್ಕಿಸಿರುತ್ತದೆ. ಕಥನದಲ್ಲಿ, ಸಂಭಾಷಣೆಯಲ್ಲಿ ಮತ್ತು ದೇಸಿಯಲ್ಲಿ ವಾಸ್ತವತೆ ತುಂಬಿ ತುಳುಕಿರು ತ್ತದೆ. ಕ್ವಚಿತ್ತಾಗಿ ಯಾವುದೋ ಒಂದು ಸಂದರ್ಭ, ಆ ಸಂದರ್ಭದಲ್ಲಿಯ ಮಾತು ಅತಿರಂಜಿತವೆಂದು ತೋರಬಹುದು. ಉದಾಹರಣೆಗೆ, ಕಿಟ್ಟಣ್ಣನ ಕೊನೆಯ ಸಮಯ ಹತ್ತಿರಬಂದಾಗ 'ಹೂವು! ಹೂವು!' ಎನ್ನುವ ಅವನ ಮಾತು ಅವನ ಹೆಂಡತಿ-ಲಕ್ಷಮ್ಮನ ಕಿವಿಗೆ ಬೀಳಲು, ಅವಳು "ಹೂವೇ! ಹೂವು ಮಾಡಿಸಿ ಕೊಟ್ಟಿರಲ್ಲ! ಒಂದು ತಿಂಗಳ ಸಂಬಳಹಾಕಿದ್ದರೆ ಒಂದು ಒಳ್ಳೆಯ ಕೆಂಪಿನ ಹೂವು ಆಗುತ್ತಿತ್ತು; 'ಒಂದು ತಿಂಗಳ ಸಂಬಳ ಅದೊಂದಕ್ಕೆ ಹಾಕಿಬಿಟ್ಟರೆ ಉಪವಾಸ ವಿರೋಣವೇ?' ಎಂದು ಕೇಳಿದಿರಿ; ನೀವು ಮಾಡಿಸಿಕೊಟ್ಟಿರಿ, ನಾನು ಹಾಕಿ ಕೊಂಡೆ!" ಎಂದು ಮುಖತಿರಿವಿಕೊಂಡು ಹೊರಟುಹೋದಳು. ಅಂಥ ಸಂದರ್ಭ ದಲ್ಲಿ ಎಂಥ ಹೆಂಡತಿಯಿಂದಲೂ ಈ ಕಹಿಮಾತು ಬರಲಾರದು ಎಂದು ಯಾರಿಗಾದರೂ ಎನ್ನಿಸಿದರೆ ಅದು ಸ್ವಾಭಾವಿಕ. ಆದರೆ ದಂತಕಥೆಗಿಂತ ಸತ್ಯ ಹೆಚ್ಚು ವಿಚಿತ್ರ ಎನ್ನುವಂತೆ ವಿರಸದ ಪರಮಾವಧಿಯನ್ನು ಮುಟ್ಟಿದ ವ್ಯಕ್ತಿಗಳು ಇಂಥ ಸಮಯದಲ್ಲಿಯೂ ಒಮ್ಮೊಮ್ಮೆ ಕಟೂಕ್ತಿಯನ್ನು ಆಡುತ್ತಾರೆ. ಶ್ರೀಪತಿ ಈ ವಾಸ್ತವ ಸತ್ಯವನ್ನು ತಿಳಿದವನಾಗಿದ್ದನು. ಅದರ ನಿರೂಪಣೆಯಲ್ಲಿಯೆ ಈ ಕಥೆಯ ಕಲಾಗುಣವಿದೆ, ದುರಂತಛಾಯೆಯಿದೆ. ಕೊನೆಗೆ ಬಂದಿರುವ 'ಪರಿಶಿಷ್ಟ' ಮಾತ್ರ ತೇಪೆಹಚ್ಚಿದಂತಾಗಿದೆ, ದುರಂತದ ಪರಿಣಾಮವನ್ನು ಕುಗ್ಗಿಸುವಂತಿದೆ.

ಇತರ ಕಥೆಗಳಲ್ಲಿ ನಾಗರಪಂಚಮಿ, ಹುಚ್ಚೋ ಅಲ್ಲವೋ, ಬಂಗಲಿಯ ವಾಸ, ದೇವರು ಇದ್ದಾನೆ, ಗುರುಗಳ ಮಹಿಮೆ ಇವು 'ನನ್ನ ಸ್ನೇಹಿತ' ಕಥೆಯ ಹಾಗೆ ತಂತಮ್ಮ ರೀತಿಯಲ್ಲಿ ಲೇಖಕರು ಬಾಳಕುದಿಯಲ್ಲಿ ಪಡೆದ ತಿಳಿವನ್ನು ತಿಳಿಪಡಿಸು ತ್ತವೆ. 'ನಾಗರಪಂಚಮಿ'ಯಲ್ಲಿ ಅರಿಸಿನ ಕುಂಕುಮವೂ ಅದೃಷ್ಟವೂ ಇಲ್ಲದೆ ತರುಣ ವಿಧವೆಯಾದ ಶ್ರೀಪತಿಯ ತಂಗಿಯ ಕರುಣಕಥೆಯಿದೆ. ಅತ್ತಿಗೆ ನಾದಿನಿಯರ ವಿಸಂವಾದದ ಇರುಕಿನಲ್ಲಿ ಸಿಲುಕಿದ ಶ್ರೀಪತಿ–ಹೇಗೆ ವಿಚಿತ್ರವಾಗಿ ನಡೆಯುತ್ತಿದ್ದನು ಎಂಬುದನ್ನು ಸರಿಯಾಗಿ ವರ್ಣಿಸಲಾಗಿದೆ. 'ಹುಚ್ಚೋ ಅಲ್ಲವೋ' ಈ ಕಥೆಯಲ್ಲಿ,

ಯಾವನ ಜೊತೆಯೋ ಓಡಿಹೋದ ಹೆಂಡತಿ, ಮೇಲೆ ಬಡತನ, ಇದರಿಂದ ಜರ್ಜರಿತನಾಗಿ ಬರತರ್ಫ್ ಆದ ಒಬ್ಬ ಹಳ್ಳಿಯ ಸ್ಕೂಲುಮೇಷ್ಟರಿನ ಕೀಲುತಪ್ಪಿದ ಬಾಳಿನ ಚಿತ್ರವಿದೆ. 'ಬಂಗಲಿಯ ವಾಸ'ದಲ್ಲಿ ತನ್ನ ಭಾವನ ಮಗನನ್ನು ಕೊಂದು ಅವನ ಆಸ್ತಿಯನ್ನು ನುಂಗಿದವಳ ಮನೆಯಲ್ಲಿ ಅವನು ಭೂತವಾಗಿ ಹೇಗೆ ಕಾಡುತ್ತಿರುವನೆಂಬುದನ್ನು ಬಣ್ಣಿಸಲಾಗಿದೆ. ಕಥನಕುತೂಹಲ ದೃಷ್ಟಿಯಿಂದ ಈ ಸಂಗ್ರಹದಲ್ಲಿ ಇದು ಮೇಲಾದ ಕತೆಯೆನ್ನಲು ಅಡ್ಡಿಯಿಲ್ಲ. ಇತರ ಕಥೆಗಳಿಗಿಂತ ಹೆಚ್ಚಾಗಿ ಇದರಲ್ಲಿ ಆಧುನಿಕ ಸಣ್ಣಕತೆಯ ರೀತಿಯನ್ನು ಅನುಸರಿಸಲಾಗಿದೆ. ಆದರೆ ಈ ಅನುಸರಣೆ ಈ ಕಥಾವಸ್ತುವಿನ ಮೂಲಸ್ವರೂಪದಲ್ಲಿಯೆ ಇರುವ ರಹಸ್ಯಗರ್ಭಿತತೆಯಿಂದ ಪ್ರೇರಿತವಾಗಿದೆ, ಯಾವುದೋ ರೀತಿ ಅಥವಾ ತಂತ್ರವನ್ನು ಬಳಸಬೇಕೆಂಬ ಉದ್ದೇಶದಿಂದ ಅಲ್ಲ. ಬಾಡಿಗೆಗೆಂದು ದೊಡ್ಡಮನೆಯೊಂದು ತೆರವಾಗಿರುವುದು, ತೀರ ಸ್ವಲ್ಪ ಬಾಡಿಗೆಗೆ ಅದು ದೊರೆಯುತ್ತಿರುವುದು, 'ನೀವೇಹೋಗಿ ವಿಚಾರಿಸಿ' ಎಂದೂ ತಾವು ಜೊತೆಯಲ್ಲಿ ಬರದೆ ಯಾರೋ ಒಬ್ಬರು ಬಾಡಿಗೆಮನೆಯ ಶೋಧಕರಾಗಿ ಅಲೆದಾಡುತ್ತಿರುವ ಸರ್ಕಾರಿ ನೌಕರದಾರನಿಗೆ ಹೇಳುವುದು—ಈ ಕ್ರಮದಲ್ಲಿ ಈ ಕಥಾವಸ್ತುವಿನಲ್ಲಿಯ ಗೂಢರಹಸ್ಯವು ಸ್ವಲ್ಪಸ್ವಲ್ಪವಾಗಿ ಬಿಚ್ಚುತ್ತಿರುವ ಬಿಗಿದ ಮುಷ್ಟಿಯಂತೆ ಹೊರಬೀಳುತ್ತದೆ. ಈ ಸಂಗ್ರಹದಲ್ಲಿ ಮಾತ್ರವಲ್ಲ, ಕನ್ನಡ ಸಣ್ಣಕತೆಗಳ ವಿಶಾಲ ಪ್ರಪಂಚದಲ್ಲಿಯೂ ರಹಸ್ಯಾತ್ಮಕ ಕಥೆಗಳಲ್ಲಿ 'ಬಂಗಲಿಯ ವಾಸ'ವು ಮನ್ನಣೆಯ ಸ್ಥಾನವನ್ನು ಪಡೆಯಬಲ್ಲುದು.

'ಗುರುಗಳ ಮಹಿಮೆ' ಈ ಕಥೆಯಲ್ಲಿಯಂತೂ ನಾವು ಹಿಂದೆ ವಿವರಿಸಿದ ಬಾಳ ತಿಳಿವು ಪೂರ್ತಿಯಾಗಿ ಫಲಿಸಿರುತ್ತದೆ. ಎರಡುಭಾಗವಾಗಿ ಹಂಚಿಕೊಂಡಿರುವ ಈಕಥೆ, ಗುರುಗಳು ಮತ್ತು ಒಬ್ಬ ತಾಯಿ ಇವರ ಸಂಭಾಷಣೆಯ ರೂಪದಲ್ಲಿಯೆ ಬೆಳೆದುಕೊಂಡು ಹೋಗುತ್ತದೆ. ಆ ತಾಯಿಗೆ ಬರಿಯ ಹೆಣ್ಣುಮಕ್ಕಳೇ ಇದ್ದರು. ತನಗೆ ಒಂದಾದರೂ ಗಂಡುಮಗುವಾಗಲಿ ಎಂಬ ಅವಳ ಆಸೆ ಕೈಗೂಡಿರಲಿಲ್ಲ. ಕಡೆಯಮಗಳು, ಅಳಿಯ ಇವರನ್ನು ಮನೆಯಲ್ಲಿ ಇಟ್ಟುಕೊಂಡು ಅಳಿಯನನ್ನೇ ಆಕೆ ಮಗನಂತೆ ಕಂಡುಕೊಂಡಿದ್ದಳು. ಆದರೂ ಗಂಡುಸಂತಾನದ ಆಸೆ ಬಿಟ್ಟಿರಲಿಲ್ಲ. ಹೀಗಿರುವಾಗ ಗುರುಗಳೊಬ್ಬರು ಬೇಡಿದ್ದನ್ನೆಲ್ಲಾ ಕೊಡುತ್ತಾರೆಂದು ಕೇಳಿ ಅವರ ಸೇವೆಮಾಡಿ ತನಗೆ ಗಂಡುಮಗುವನ್ನು ಅನುಗ್ರಹಿಸಬೇಕೆಂದು ಆಕೆ ಹಟಹಿಡಿದಳು. ಎಷ್ಟು ಬೇಡವೆಂದರೂ ಕೇಳಲಿಲ್ಲ. ತನ್ನ ಹೊಟ್ಟೆಯಲ್ಲಿ ಗಂಡುಮಗುವಾಗುವುದಕ್ಕೆ ಬದಲು, ಆಕೆಯ ಮಗಳು ಒಂದು ಗಂಡುಮಗುವನ್ನು ಹೆತ್ತು ತೀರಿಹೋದಳು. ಅದನ್ನು ಸಾಕುವ ಭಾರವು ಅವಳಮೇಲೆ ಬಿತ್ತು. 'ನೀನು ಬೇಡಿಬಯಸಿದ ಗಂಡು ನಿನಗೆ ದೊರೆಯಿತು' ಎಂದು ಆಕೆಗೆ ಹೇಳಿ ಗುರುಗಳು ಸಮಾಧಾನ ಮಾಡಿದರು. ಇದು ಈ ಕಥೆಯ ತಾತ್ಪರ್ಯ. ಗಂಡುಮಗುವಿಲ್ಲ ಎಂಬ ಅರೆಕೊರೆಯಲ್ಲಿ ಈ ಕಥೆಯ ಕುದಿಯಿದೆ. ಈ ಕುದಿನೆನಪಿನಲ್ಲಿ ಬಾಳನ್ನು ನಡಸುತ್ತ

ಯಾವುದೋ ಒಂದು ಸಾಂತ್ವನದಿಂದ ಮಗಳು ಅಳಿಯಂದಿರ ಜೊತೆಗೆ ಆ ಹೆಂಗಸು ಬದುಕಿರುತ್ತಾಳೆ. ಆದರೆ ಗಂಡುಮಗುವಿಗಾಗಿ ಎದೆಗುದಿ ಎಲ್ಲಿ ಹೋಗುತ್ತದೆ? ಗುರುಗಳ ಶಕ್ತಿಸಾಮರ್ಥ್ಯದ ಸುದ್ದಿಯನ್ನು ಕೇಳಿದೊಡನೆ ಅದು ಉಕ್ಕಿಬರುತ್ತದೆ. ಅವರ ಸೇವೆಯನ್ನು ಮಾಡಿ ಆಕೆ ಇಷ್ಟಫಲವನ್ನು ಬೇಡುತ್ತಾಳೆ. ಗುರುಗಳು ಎಷ್ಟು ಪರಿಯಿಂದ ಹೇಳಿದರೂ ಅವಳಿಗೆ ಸಮಾಧಾನವಾಗಲಿಲ್ಲ. ಕೊನೆಗೆ ' ಈ ಬಟ್ಟಲಲ್ಲಿ ರುವ ಕುಂಕುಮ ಇಟ್ಟುಕೊಳ್ಳಿ. ಮುಂದಿನ ವರ್ಷ ಮಗನನ್ನೆತ್ತಿಕೊಂಡು ದೇವರ ದರ್ಶನಕ್ಕೆ ಬನ್ನಿ ' ಎಂದು ಗುರುಗಳು ಹೇಳಿಕಳಿಸುತ್ತಾರೆ. ಇಲ್ಲಿಗೆ ಒಂದುಭಾಗ ಮುಗಿಯುತ್ತದೆ. ಎರಡನೆಯ ಭಾಗದಲ್ಲಿ ಆಕೆ ಒಂದು ಮಗುವನ್ನೇನೊ ಎತ್ತಿ ಕೊಂಡು ಬರುತ್ತಾಳೆ. ಆದರೆ ಅದು ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದ ಆಕೆಯ ಮೊಮ್ಮಗ. ಈ ದುಃಖವನ್ನು ಅವಳು ಗುರುಗಳ ಮುಂದೆ ತೋಡಿಕೊಳ್ಳು ತ್ತಾಳೆ, ಗೋಗರೆಯುತ್ತಾಳೆ. ಗುರುಗಳು ಅವಳಿಗೆ ವಿವೇಕೋದಯವಾಗುವಂತೆ ಹಲವಾರು ಬಗೆಯಲ್ಲಿ ತಿಳಿಸಿಹೇಳುತ್ತಾರೆ. ಅವಳು ಕೊನೆಯವರೆಗೂ ತನ್ನ ಕರಕರೆಯನ್ನು ಬಿಡುವುದಿಲ್ಲ. ಕೊನೆಯಲ್ಲಿ ಗುರುಗಳು ' ನಾವು ಕೇಳಿಕೇಳಿದ್ದನ್ನೆಲ್ಲಾ ಕೊಟ್ಟುಬಿಡಲು, ಯಾರು ಅದನ್ನು ಸಿದ್ಧವಾಗಿ ಕೈಲಿ ಹಿಡಿದುಕೊಂಡು ಸೊಂಟ ಕಟ್ಟಿಕೊಂಡು ಆಜ್ಞಾಧಾರಕರಾಗಿ ನಿಂತುಕೊಂಡಿದ್ದಾರೆ ಅಂತ ಮಾಡಿಕೊಂಡಿ ದ್ದೀರಿ? ತಗೊಳ್ಳಿ, ಕುಂಕುಮ ಇಟ್ಟುಕೊಳ್ಳಿ ' ಎಂದು ಹೇಳಿ ಕಳಿಸುತ್ತಾರೆ. ಈ ರೀತಿ ಕಥೆ ಮುಗಿಯುತ್ತದೆ. ಇದರಲ್ಲಿಯ ಹೆಣ್ಣು, ಬಾಳಿನ ಗೋಳಿನ ಕುದಿಸೆನಪಿನಲ್ಲಿ ಅದ್ದಿತೆಗೆದ ಅತೃಪ್ತ ಮಾನವಕಾಮನೆಯ ಪ್ರತೀಕವಾಗಿದ್ದಾಳೆ. ಅವಳಿಗೆ ವಿವೇಕ ಕಲಿಸಲು ಪ್ರಯತ್ನಿಸಿದ ಗುರುಗಳು ಕತೆಗಾರರ ಬಾಳ ತಿಳಿವಿನ ಪ್ರತಿರೂಪವಾಗಿ ದ್ದಾರೆ. ಇನ್ನೊಂದು ದೃಷ್ಟಿಯಿಂದ, ಕತೆಗಾರರ ವೈಯಕ್ತಿಕ ಅನುಭವದಿಂದ ಕಂಡುಬಂದ ಅವರಲ್ಲಿಯ ಇಮ್ಮೊಗದ ಅಂತರಂಗವೇ ಈ ಕತೆಯ ರೂಪವನ್ನು ತಾಳಿರುವಂತಿದೆ.

ಇನ್ನುಳಿದ ಕಥೆಗಳಲ್ಲಿ ವಾಸ್ತವ ಜೀವನದ ಮತ್ತು ಮನುಷ್ಯವ್ಯಕ್ತಿಗಳ ಬೇರೆ ಬೇರೆ ಚಿತ್ರಗಳಿವೆ. ಜ್ಯೋತಿಷಕ್ಕೆ ಬಹುಮಾನ, ಶಾನುಭೋಗನ ಪುಣ್ಯ, ಅಗ್ಗದ ಮದುವೆ, ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ, ಭೀಮಣ್ಣನ ಬುದ್ಧಿವಂತಿಕೆ ಇವು ಈ ಸಂಗ್ರಹದಲ್ಲಿ ಮೆಚ್ಚತಕ್ಕ ಕಥೆಗಳು. ಇವುಗಳಲ್ಲಿ ಶ್ರೀಪತಿಯ ಲೋಕವ್ಯವಹಾರ ಜ್ಞಾನ, ಕಥನಕೌಶಲ ಇವು ಸ್ಫುಟವಾಗಿ ಮೂಡಿರುತ್ತವೆ. ಆದರೆ ಒಂದು ನಂಬಿಕೆ, ಒಂದು ವ್ಯಕ್ತಿಚಿತ್ರ, ಹಾಸ್ಯ, ವಿಡಂಬನೆ ಇವುಗಳಿಂದ ಇವು ನಮ್ಮನ್ನು ರಂಜಿಸು ತ್ತವೆಯೇ ಹೊರತು ಅಂತಃಕರಣದ ಆಳವನ್ನು ಮುಟ್ಟುವುದಿಲ್ಲ. ಬಾಳ ತಿಳಿವಿನ ಒಂದು ಅಂಗದ ಅಂಗವಣೆಗೆ ನೆರವಾಗುತ್ತವೆ ಮಾತ್ರ. 'ಅತ್ತೆ' ಮತ್ತು 'ಊಟದಲ್ಲಿ ಉಪಚಾರ' ಇವು ಸಣ್ಣಕತೆಗಳೆನ್ನುವುದಕ್ಕಿಂತ ಹೆಚ್ಚಾಗಿ ಸಂವಾದ ರೂಪದಲ್ಲಿರುವ ಸ್ವಭಾವರೇಖೆಗಳೆನ್ನಲು ತಕ್ಕವಾಗಿವೆ.

ಶ್ರೀಪತಿ ಬರೆದಿರುವ ಮುನ್ನುಡಿಯ ಕೊನೆಗೆ ಅರ್ಥಪೂರ್ಣವಾದ ಈ ವಾಕ್ಯವಿದೆ: 'ಈ ಜೀವ ಕುದಿಕುದಿದು ಪಡೆದ ಒಂದು ಸಂಸ್ಕಾರದ ಕುರುಹೇ ಆ ಚಿತ್ರ. ಅದರ ನೆನಪೇ ಈ ಪುಸ್ತಕ.' ಅರ್ಥವಿಸಲು ಬಾರದಂಥ ಅಗಾಧವಾದ ದುಃಖಸಾಗರದಲ್ಲಿ ಅದ್ದಿ ತೆಗೆದ ಜೀವದ ಕುದಿ, ಕುದಿನೆನಪಿನಲ್ಲಿ ಪಡೆದ ಸಂಸ್ಕಾರ, ಬಾಳ ತಿಳಿವು–ಇದೇ ಶ್ರೀಪತಿಯ ಕಥೆಗಳ ತಿರುಳು.

ಕೆ. ಶಾಂತಾ

# ವಚನಭಾರತದ ರಚನೆ

"ಮನುಷ್ಯರ ಕಣ್ಣಿಗೆ ಮರ ಸಿಡಿಯಿತು" ಎನ್ನುವ ಗಾದೆಯಂತೆ, ಹೈದರಾಬಾದ್ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷರಾಗಿ ಮೆರದಾಡಿ ಬಂದನಂತರ ಕೆಲವು ಕಾಲದಲ್ಲೇ ನಮ್ಮ ತಂದೆಯವರ ಸಂಸಾರ ತಲೆಕೆಳಗಾಯಿತು. ಅಷ್ಟು ಚೆನ್ನಾಗಿ ಓಡುತ್ತಿದ್ದ ಅವರ ರಥದ ಒಂದು ಗಾಲಿ ಕಳಚಿ ಬಿತ್ತು. ಅದು ನಮ್ಮ ಅಕ್ಕ ಕಮಲುವಿನ ಸಾವು ಆದರ ನೋವು. ಅಕಾಲ ಮರಣದ ದುರಂತ. ಇದು ನಮ್ಮ ತಂದೆಗೆ ಎಲ್ಲಾ ರೀತಿಯಿಂದಲೂ ನಿರಾಸೆ ಮೂಡಿಸಿತು.

ಆಗ ನನಗೆ ಒಂಭತ್ತು ವರ್ಷ. ನಮ್ಮ ತಂದೆ ಇನ್ನೇನು ಒಂದೆರಡು ವರ್ಷಗಳಲ್ಲಿ ನಿವೃತ್ತರಾಗುವುದರಲ್ಲಿದ್ದರು. ನಮ್ಮ ಅಕ್ಕನ ಅಗಲುವಿಕೆಯಿಂದ ನಮ್ಮ ತಂದೆ ಅರ್ಧ ಕುಗ್ಗಿದರು. ಅವರ ದುಃಖವನ್ನು ಅವರೇ ಬರೆದ "ಶ್ರೀಪತಿಯ ಕಥೆಗಳು" ಎಂಬ ಕಥಾಸಂಕಲನದ ಮುನ್ನುಡಿಯಲ್ಲಿ ತೋಡಿಕೊಂಡಿದ್ದಾರೆ.

ನಮ್ಮ ತಂದೆಯವರು ಕೇಳಿದ್ದರೆ Service extension ಕೊಡುತ್ತಿದ್ದರು, ಸರ್ಕಾರದವರು. ಆದರೆ ಅವರು ನ್ಯಾಯವಾಗಿ ಮಾಡಬೇಕಾಗಿದ್ದ ಇನ್ನೂ ಒಂದು ವರ್ಷದ ಕೆಲಸದಿಂದ ರಜ ತೆಗೆದುಕೊಂಡು ನಿವೃತ್ತರಾದರು. ಆ ಸಮಯದಲ್ಲಿ ತಿಳಿಯಾಗಿ ನಿಂತಿದ್ದ ನೀರನ್ನು ಕದಡಿ ರಾಡಿ ಮಾಡಿದಂತಿತ್ತು ಅವರ ಸಂಸಾರ. ನಮ್ಮ ತಂದೆಯವರದೊಂದು ತರಹ ಮೌನ ದುಃಖವಾದರೆ ನಮ್ಮ ತಾಯಿಯವರದೊಂದು ತರಹ ಗೋಳಾಟ. ಮಧ್ಯದಲ್ಲಿದ್ದ ನನಗೆ ಮಂಕುಹಿಡಿದಂತಾಗಿತ್ತು. ತತ್ರಾಪಿ ಆ ೩-೪ ವರ್ಷಗಳಂತೂ ಮನೆಯಲ್ಲಿ ಯಾರೂ ನಕ್ಕಿದ್ದೇ ನಾನು ಕಂಡಿರಲಿಲ್ಲ.

ಕಾಲಕ್ರಮೇಣ ಸ್ವಲ್ಪ ಶಾಂತಿ ಸಮಾಧಾನಗಳು ಬರತೊಡಗಿದವು. ಅಷ್ಟು ಹೊತ್ತಿಗೆ ವಯಸ್ಕರ ಶಿಕ್ಷಣ ಸಮಿತಿಯವರು ನಮ್ಮ ತಂದೆಯವರಿಗೆ ಜನಗಳಿಗೆ ಸುಲಭವಾಗಿ ಅರ್ಥವಾಗುವಂಥ ಭಾರತವನ್ನು ಬರೆದುಕೊಡಬೇಕೆಂದು ಕೇಳಿಕೊಂಡರು.

ಕನ್ನಡ ಜನಕ್ಕೆ, ಸುಲಭವಾಗಿ ಅರ್ಥ ಆಗುವಹಾಗೆ, ಎಲ್ಲಾ ಪರ್ವವನ್ನೂ

ಒಳಗೊಂಡಿರುವ ಭಾರತವನ್ನು ಬರೆದು, ಸುಲಭ ಬೆಲೆಗೆ ಒದಗಿಸಬೇಕೆಂದು ನಮ್ಮ ತಂದೆಯವರಿಗೂ ಬಹಳ ದಿನಗಳಿಂದ ಆಸೆ ಇತ್ತು ಆ ಕೆಲಸ ಆರಂಭಮಾಡಿದ ಮೇಲೆ ಅವರಿಗೆ ಸ್ವಲ್ಪ ಉತ್ಸಾಹ ಮೂಡಿತು.

ಕೆಲಸವನ್ನೇನೋ ಆರಂಭಮಾಡಿದರು. ಮೈಸೂರು ವಿಶ್ವವಿದ್ಯಾನಿಲಯದ ಲೈಬ್ರರಿಗೆ ಹೋಗಿ ಸಂಸ್ಕೃತದ ಮೂಲವನ್ನು ತಂದು ಮನೆಯಲ್ಲಿ ಒಂದಾಳೆತ್ತರ ಜೋಡಿಸಿದರು. ಮೊದಲು ಸಂಸ್ಕೃತದ ಮೂಲವನ್ನೆಲ್ಲಾ ಒಂದಾವರ್ತಿ ಓದಿ, ಪುನಃ ಸ್ವಲ್ಪಸ್ವಲ್ಪವಾಗಿ ಓದಿ, ಯಾವುದನ್ನು ಬಿಡಬೇಕು, ಯಾವುದನ್ನು ಸಂಕ್ಷೇಪ ಮಾಡಬೇಕು, ಯಾವುದನ್ನು ಪೂರ್ತಿ ಬರೆಯಬೇಕು ಎನ್ನುವುದನ್ನು ಯೋಚಿಸಿ ಕೊಂಡು ಬರೆಯುತ್ತಿದ್ದರು. ಅವರೇ ವಚನ ಭಾರತದ ಮುನ್ನುಡಿಯಲ್ಲಿ "ಕಬ್ಬಿನ ಜಲ್ಲೆಯಲ್ಲಿ ಬೇರು ಗರಿ ಗಿಣ್ಣುಗಳನ್ನು ಕತ್ತರಿಸಿಹಾಕಿ, ಸಿಪ್ಪೆಹೆರೆದು, ಸಿಗುರು ಕಳೆದು ಹೋಳುಮಾಡಿ, ಅದನ್ನು ಬಟ್ಟಲಲ್ಲಿ ತುಂಬಿಕೊಡುವಂಥದು; ಕಿತ್ತಲೆಯ ಹಣ್ಣಿನ ಸಿಪ್ಪೆ ಸುಲಿದು, ತೊಳೆಬಿಡಿಸಿ, ನಾರು ಬೀಜಗಳನ್ನು ತೆಗೆದುಹಾಕಿ, ಕುಸುಮವನ್ನು ಒಂದು ಅಡಕವಾದ ಬೆಳ್ಳಿಯ ತಟ್ಟೆಯಲ್ಲಿ ಜೋಡಿಸಿಡುವಂಥದು, ಇದು ನನ್ನ ಉದ್ದೇಶ" ಎಂದಿದ್ದಾರೆ. ವಚನ ಭಾರತ ಹಾಗೆ ಸುಲಲಿತವಾಗಿ ಸುಲಭವಾಗಿರಬೇಕೆಂದು ಅವರ ಇಷ್ಟ.

ಒಮ್ಮೆ ನಾನು ಕಾಲೇಜಿನಲ್ಲಿ ಓದುತ್ತಿದ್ದಾಗ ನಮ್ಮ ತಾಯಿ ಊರಲ್ಲಿರಲಿಲ್ಲ; ಮನೆಯಲ್ಲಿ ನಾನೂ ನಮ್ಮ ತಂದೆ ಇಬ್ಬರೇ. ಒಂದು ದಿನ ಕಾಲೇಜಿನಿಂದ ಮನೆಗೆ ಹಿಂತಿರುಗಿದಾಗ "ಶಾಂತೂ, ನಿನ್ನ ಮೇಜಿನಮೇಲೆ ವಚನಭಾರತ ಇಟ್ಟಿದೀನಿ ತೊಗೋ" ಎಂದರು; ಹೋಗಿ ನೋಡಿದೆ. ಒಂದು ಬೆಳ್ಳಿ ತಟ್ಟೆಯಲ್ಲಿ ನಾರು, ಬೀಜ, ಸಿಪ್ಪೆ ತೆಗೆದ ಸೊಗಸಾದ ಕಿತ್ತಳೆ ತೊಳೆ ತುಂಬಿ ಕುಳಿತಿತ್ತು. ನನಗೆ ಬಹಳ ಸಂತೋಷವಾಯಿತು. ಆ ಹಣ್ಣನ್ನು ತಿನ್ನುವುದಕ್ಕೆ ಕುಳಿತಾಗ, ಅದು ತಿನ್ನುವುದಕ್ಕೆ ಎಷ್ಟು ಸುಲಭವಾಗಿ, ಸವಿಯಾಗಿತ್ತೋ, "ವಚನ ಭಾರತ"ವೂ ಓದುವುದಕ್ಕೆ ಅಷ್ಟೇ ಸುಲಭವಾಗಿ ಸವಿಯಾಗಿರುವುದು ನೆನಪಿಗೆ ಬಂತು.

ನಮ್ಮ ತಂದೆಯವರು ಬರೆಯುವುದಕ್ಕೆ ಆರಂಭಮಾಡಿದರೆ ಎಲ್ಲೂ ನಿಲ್ಲಿಸು ತ್ತಿರಲಿಲ್ಲ, ಅಳಿಸುತ್ತಿರಲಿಲ್ಲ, ಹೊಡೆದುಹಾಕುತ್ತಿರಲಿಲ್ಲ, ನಿಲ್ಲಿಸಿ ಯೋಚಿಸುತ್ತಿರಲಿಲ್ಲ. ಎಂದೂ ಯಾವುದನ್ನೂ Rough Copy—Fair Copy ಎಂದು ಬರೆದವರೇ ಅಲ್ಲ. ಬರೆದರೆ ಅದು ಅಚ್ಚಿನ ಮನೆಗೆ ಹೋಗುವುದಕ್ಕೆ ಸಿದ್ಧವಾಗೇ ಇರುತ್ತಿತ್ತು. ಇದನ್ನು ನೋಡಿದಾಗ ಕುಮಾರವ್ಯಾಸನ "ಪದವಿಟ್ಟಳಿಪದೊಂದಗ್ಗಳಿಕೆ, ಬಳಸಿ ಬರೆಯಲು ಕಂಠಪತ್ರದ ಉಲುಹು ಕೆಡದಗ್ಗಳಿಕೆ" ಎಂಬ ಪಂಕ್ತಿ ಜ್ಞಾಪಕವಾಗುತ್ತಿತ್ತು.

ಅವರು "ವಚನ ಭಾರತ" ಬರೆಯುತ್ತಿದ್ದಾಗ ನಾನು ಹೈಸ್ಕೂಲು ವಿದ್ಯಾರ್ಥಿನಿ. ನನ್ನ ಜೊತೆಯಲ್ಲೇ ಬೆಳಗ್ಗೆ ಹತ್ತು ಗಂಟೆಗೆ ಊಟಮಾಡಿ, ನಾನು ಸ್ಕೂಲಿಗೆ ಹೋದಮೇಲೆ ಪುಸ್ತಕಗಳನ್ನು ಹರಡಿಕೊಂಡು ಕುಳಿತುಬಿಟ್ಟರೆ ಸಂಜೆ ನಾನು

ಸ್ಕೂಲಿನಿಂದ ಹಿಂತಿರುಗುವವರೆಗೂ ಬರೆಯುತ್ತಾ ಕುಳಿತಿರುತ್ತಿದ್ದರು. ನಾನು ಮನೆಗೆ ಬಂದರೆ ಅವರ ಕೆಲಸವೂ ನಿಲ್ಲುತ್ತಿತ್ತು. ಆಮೇಲೆ ಕೈಕಾಲು ತೊಳೆದು ಕೊಂಡು ಅರಮನೆಯ ಆವರಣದಲ್ಲಿರುವ ತ್ರಿಣೇಶ್ವರನಗುಡಿಗೆ ಪ್ರತಿನಿತ್ಯ ಹೋಗಿ ಬರುತ್ತಿದ್ದರು. ನಮ್ಮ ಮನೆ ಇದ್ದಿದ್ದು ಚಾಮರಾಜಪುರಂನಲ್ಲಿ. ಒಂದೊಂದು ದಿನ ನನ್ನನ್ನೂ ಕರೆದುಕೊಂಡು ಹೋಗುತ್ತಿದ್ದರು. ಅವರು ನಿವೃತ್ತರಾದ ದಿನದಿಂದ ಸಂಜೆಯುಹೊತ್ತು ಈ ದೇವಸ್ಥಾನಕ್ಕೆ ಹೋಗುವುದು ಒಂದೇಸಮ ೧೯೫೧ರ ವರೆಗೂ ನಡೆಯಿತು. ಆಮೇಲೆ ನಾವು ಬೆಂಗಳೂರಿಗೆ ಬಂದುಬಿಟ್ಟದ್ದರಿಂದ ನಿಂತುಹೋಯಿತು.

ತಮ್ಮ ಬರವಣಿಗೆ ಹೈಸ್ಕೂಲು ಮಟ್ಟದವರಿಗೆ ಅರ್ಥವಾಗುವಂತಿರ ಬೇಕೆಂಬುದು ಅವರ ಇಚ್ಛೆ. ಅದಕ್ಕೇ ನಾನು ಬಂದತಕ್ಷಣ ನನಗೆ ಓದುವುದಕ್ಕೆ ಅಂದಿನ ಬರವಣಿಗೆಯನ್ನು ಕೊಡುತ್ತಿದ್ದರು. ಇಲ್ಲದಿದ್ದರೆ ತಾವೇ ಓದುತ್ತಿದ್ದರು. ತಾವು ಓದುತ್ತಿದ್ದ ದಿನಗಳಲ್ಲಿ ಏನಾದರೂ ಕಷ್ಟದ ಪ್ರಕರಣಗಳು ಬಂದರೆ ಅತ್ತು ಬಿಡುತ್ತಿದ್ದರು.

ಪ್ರತಿನಿತ್ಯ ಓದಿಯಾದ ಮೇಲೆ "ಸುಲಭವಾಗಿ ಅರ್ಥ ಆಗುತ್ತದೆಯೆ?" ಎಂಬುದು ಅವರ ಪ್ರಶ್ನೆ. "ತುಂಬಾ ಚೆನ್ನಾಗಿದೆ ಅರ್ಥವಾಗುತ್ತದೆ" ಇದು ನನ್ನ ಉತ್ತರ. ನಿತ್ಯ ಇದೇ ಪ್ರಶ್ನೆ, ಇದೇ ಉತ್ತರ.

ಅವರಿಗೆ ದಿನದ ೨೪ ಗಂಟೆಗಳೂ ಭಾರತದ ಯೋಚನೆಯೇ; ರಾತ್ರಿ ಕಣ್ಣಿಗೆ ಆಯಾಸವಾದರೆ ಬರೆದುಕೊಳ್ಳುವಂತೆ ನನಗೆ ಹೇಳುತ್ತಿದ್ದರು.

"ವಚನ ಭಾರತ"ದ ಕಥಾವಿಭಾಗ ಒಂದು ತೂಕವಾದರೆ ಮುನ್ನುಡಿಯೇ ಒಂದು ತೂಕ. ಕಥಾಭಾಗಕ್ಕೆ ಎಷ್ಟು ಕಷ್ಟಪಟ್ಟಿದ್ದಾರೋ ಪೀಠಿಕೆಗೂ ಅಷ್ಟೇ ಕಷ್ಟ ಪಟ್ಟಿದ್ದಾರೆ. ಪೀಠಿಕೆ ಬರೆಯುವಾಗ, ನಿದ್ದೆಯಲ್ಲಾಗಲೀ, ಊಟದ ಮಧ್ಯ ದಲ್ಲಾಗಲೀ, ಯಾರ ಜೊತೆಯಲ್ಲೇ ಇರಲಿ, ವಚನ ಭಾರತಕ್ಕೆ ಸಂಬಂಧಪಟ್ಟ ವಿಷಯ ಜ್ಞಾಪಕಕ್ಕೆ ಬಂದರೆ ಸಾಕು ಅದನ್ನು ಅಷ್ಟಕ್ಕೇ ಬಿಟ್ಟು ಬರೆದುಬರುತ್ತಿದ್ದರು. ಆಮೇಲೆ ಆ ವಿಷಯ ಸಂಗ್ರಹಗಳನ್ನೆಲ್ಲಾ ಕತ್ತರಿಸಿ, ಎಲ್ಲೆಲ್ಲಿಗೆ ಬೇಕೋ ಅಲ್ಲಲ್ಲಿಗೆ ಅಂಟಿಸಿಕೊಳ್ಳುತ್ತಿದ್ದರು. ನಮಗೆಲ್ಲಾ "ಇದೇನು ಕಾಗದಗಳನ್ನೆಲ್ಲಾ ಹರಿದಿದ್ದು ಯಾಕೆ? ಪುನಃ ಗೋಂದುಹಾಕಿ ಒಂದಕ್ಕೊಂದು ಅಂಟಿಸಿದ್ದು ಯಾಕೇ?" ಎಂಬುದು ಅರ್ಥವಾಗುತ್ತಿರಲಿಲ್ಲ, ಕಡೆಗೆ ಕೇಳಿಯೇ ಬಿಟ್ಟೆ. ಅದಕ್ಕೆ ಅವರು "ಬರೆಯಬೇಕಾದ್ದೇ ಹಾಗಮ್ಮಾ, ವಿಷಯಗಳನ್ನು ಬರೆಯಬೇಕೆಂದಾಗ ಕುಳಿತರೆ ಬರೆಯುವುದಕ್ಕಾಗುವುದಿಲ್ಲ. ಜ್ಞಾಪಕ ಬಂದ ಬಂದ ಹಾಗೆ ಬರೆದುಕೊಳ್ಳಬೇಕು. ಆಮೇಲೆ ಅದನ್ನು ಎಲ್ಲೆಲ್ಲಿಗೆ ಬೇಕೋ ಅಲ್ಲಲ್ಲಿಗೆ ಸೇರಿಸಿಕೊಳ್ಳಬೇಕು ಎಂದರು." ಈಗ ನನಗೆ ಅದು ಎಷ್ಟು ಸಹಜ ಎನಿಸುತ್ತದೆ.

ಆ ಆರು ತಿಂಗಳು–'ವಚನ ಭಾರತ' ಬರೆದ ಕಾಲ–ಅವರ ಒಂದು ತಪಸ್ಸಿನ ಕಾಲ ಎನ್ನಬಹುದು. ಅರವತ್ತು ವಯಸ್ಸಿನ ವ್ಯಕ್ತಿ, ಬೆಳಗ್ಗೆ ಹನ್ನೊಂದು ಗಂಟೆ

ಯಿಂದ ಸಂಜೆ ಐದು ಗಂಟೆಯುವರೆಗೂ ಅದರಲ್ಲೇ ತಲ್ಲೀನರಾಗಿ ಬಿಡುತ್ತಿದ್ದರು. ಅದರಿಂದಲೇ ಆರು ತಿಂಗಳಲ್ಲಿ, ಆ ಸಂಸ್ಕೃತದ ಮೂಲವನ್ನು ಓದಿ, ಅದರ ರಸವನ್ನು ಹೀರಿ, ಯಾವ ವಿಷಯವನ್ನೂ ಬಿಡದೆ, ೧೮ ಪರ್ವಗಳನ್ನೂ ೫೦೦ ಪುಟಗಳಲ್ಲಿ ಸುಲಭ ಶೈಲಿಯಲ್ಲಿ ಬರೆಯುವುದು ಸಾಧ್ಯವಾಯಿತು. ಪ್ರತಿ ಪರ್ವ ಮುಗಿದಾಗಲೂ ಮನೆಯಲ್ಲಿ ಪೂಜೆ ಪುರಸ್ಕಾರಗಳು ನಡೆಯುತ್ತಿದ್ದವು.

ಪುಸ್ತಕ ಅಚ್ಚಾಗಿ ಬರುವ ಹೊತ್ತಿಗೆ ಅವರ ಅರವತ್ತನೆಯ ವರ್ಧಂತಿ ಬಂತು. ಯಾರು ಎಷ್ಟು ಹೇಳಿದರೂ ಷಷ್ಠಿ ಪೂರ್ತಿ ಶಾಂತಿಮಾಡಿಕೊಳ್ಳಲು ಒಪ್ಪದೆ, ಅಚ್ಚಾಗಿಬಂದ ವಚನ ಭಾರತದ ೧೦೮ ಪ್ರತಿಗಳನ್ನು ತಮ್ಮ ಇಷ್ಟರಿಗೆ, ಮಿತ್ರರಿಗೆ ಕೊಟ್ಟು. ಅವರಿಂದಲೂ, ಸರಸ್ವತೀ ದೇವಿಯಿಂದಲೂ ಆಶೀರ್ವಾದ ಪಡೆದರು. ಊಟ, ಉಪಚಾರಗಳ ಗೊಂದಲವಿಲ್ಲದೆ ಶಾಂತಿ ನಡೆಯಿತು. ಅವರಿಗೂ ಮನಸ್ಸಿಗೆ ಶಾಂತಿ ಸಮಾಧಾನ ಲಭಿಸಿತು. ಮನೆಯಲ್ಲಿ ಒಂದಾದಮೇಲೊಂದು ಮಕ್ಕಳ, ಮೊಮ್ಮಕ್ಕಳ ಶುಭಕಾರ್ಯಗಳು ನಡೆದವು.

ಒಮ್ಮೆ ಒಬ್ಬರು ವೃದ್ಧರು ನಮ್ಮ ತಂದೆಯವರಿಂದ ಒಂದು ವಚನ ಭಾರತದ ಪ್ರತಿಯನ್ನು ತೆಗೆದುಕೊಂಡುಹೋದರು. ಮತ್ತೊಮ್ಮೆ ಬಂದಾಗ ಅವರ ಕೈಲಿ ಹಣ್ಣಿನ ತಟ್ಟೆ ಇತ್ತು.—“ಇದೇನು ಸ್ವಾಮಿ?” ಎಂದರು ನಮ್ಮ ತಂದೆ. “ಅಂದು ನೀವು ವಚನ ಭಾರತ ಕೊಟ್ಟಿರಲ್ಲಾ ಅದನ್ನು ನನ್ನ ಮೊಮ್ಮಗಳಿಗೆ ಓದುವುದಕ್ಕೆ ಕೊಟ್ಟೆ. ಅದನ್ನು ಓದಿ ಮುಗಿಸುವಷ್ಟರಲ್ಲಿ ಅವಳಿಗೆ ವರ ಗೊತ್ತಾಯಿತು. ಇದಕ್ಕೆ ಹಿಂದೆ ವರಾನ್ವೇಷಣೆಗಾಗಿ ಬಹಳ ಕಷ್ಟಪಟ್ಟೆ. ಈಗ ತಾನಾಗೇ ಒದಗಿಬಂದಿದೆ. ಇದನ್ನು ಸ್ವೀಕರಿಸಿ ಆ ಹೆಣ್ಣುಮಗಳನ್ನು ಆಶೀರ್ವದಿಸಿ” ಎಂದರು. ನಮ್ಮ ತಂದೆ ಪುನಃ ಅವರಿಗೆ ಇನ್ನೊಂದು ವಚನ ಭಾರತವನ್ನಿತ್ತು “ನಿಮ್ಮ ಮೊಮ್ಮಗಳಿಗೆ ಕೊಡಿ” ಎಂದು ಆಶೀರ್ವದಿಸಿ ಕಳುಹಿಸಿದರು. ಹೀಗೆ ಎಷ್ಟೋ ಜನ ‘ವಚನ ಭಾರತ’ ಓದಿ ತಮ್ಮ ತಮ್ಮ ಕೆಲಸ ಆಯಿತು ಎಂದು ಬರುತ್ತಿದ್ದರು ಆಗುವುದು ಎಂಬ ನಂಬಿಕೆಯ ಮೇಲೆ ಓದುತ್ತಿದ್ದರು.

ನಮ್ಮ ತಂದೆಯವರ ಹುಟ್ಟಿದ ಹಬ್ಬ ಮಾಘ ಬಹುಳ ಸಪ್ತಮಿ. ವಚನ ಭಾರತ ಮೊದಲನೆಯ ಸಲ ಅಚ್ಚಾಗಿ ಮನೆಗೆ ಬಂದಿದ್ದು ಮಾಘ ಶುದ್ಧ ಪೂರ್ಣಿಮೆ. ವಚನಭಾರತ ಬಂದಾರಭ್ಯ ಮನೆಯಲ್ಲಿ ಮಾಘ ಶುದ್ಧ ಪೂರ್ಣಿಮೆಯಂದು ಬಹಳ ವಿಜೃಂಭಣೆಯಿಂದ ಪ್ರತಿವರ್ಷವೂ ಪೂಜೆ ನಡೆಯುತ್ತಿತ್ತು. ಆ ದಿನ ನಮ್ಮ ತಂದೆಯವರೇ ದೇವರ ಮನೆಯಲ್ಲಿ ‘ವಚನ ಭಾರತ’ದ ಕೆಲವು ಪ್ರತಿಗಳನ್ನು ಮಣೆಯ ಮೇಲೆ ಅಂದವಾಗಿ ಜೋಡಿಸಿ, ಮೇಲೆ ಸರಸ್ವತೀ ಪಟ, ಸರಸ್ವತೀ ವಿಗ್ರಹವನ್ನಿಟ್ಟು ನಾನಾ ಬಗೆಯ ಹೂವುಗಳಿಂದ ಅಲಂಕರಿಸುತ್ತಿದ್ದರು. ತಾವೇ ಸೀಮೇಸುಣ್ಣದಿಂದ ದೇವರ ಮುಂದೆ ನೆಲದಮೇಲೆ ಚಿತ್ರಗಳನ್ನು ಅಂದವಾಗಿ ಬಿಡಿಸಿ ಅರಿಸಿನ ಕುಂಕುಮಗಳಿಂದ ತುಂಬುತ್ತಿದ್ದರು.

ನನಗೆ ರಂಗೋಲಿ ಇಡುವುದನ್ನು ಹೇಳಿಕೊಟ್ಟವರು ಅವರೇ. ರಂಗೋಲಿ ಹೀಗೆ ತೆಗೆದುಕೊಳ್ಳಬೇಕು, ಹಾಗೆ ತೆಗೆದುಕೊಳ್ಳಬೇಕು, ಹಾಗೆ ಬಿಡಬೇಕು, ಹಾಗೆ ಬಿಟ್ಟರೆ ಎಳೆ ದಪ್ಪನಾಗಿ ಬರುತ್ತೆ, ದಾರದ ಎಳೆಯಂತೆ ಎಳೆ ಬರಬೇಕು, ಹಾಗೆ, ಹೀಗೆ ಎಂದು ಹೇಳಿಕೊಡುತ್ತಿದ್ದರು. ಒಮ್ಮೆ ಅಂಗಡಿಗೆ ಹೋಗಿ Graph Book ಒಂದು, ಹಸೆ ಪುಸ್ತಕ ಒಂದು ತಂದುಕೊಟ್ಟು "Graph Book ನಲ್ಲಿ ಚುಕ್ಕಿ ಇಡು. ಹಸೆಗೆ ಒಂದೇ ಸಮ ಚುಕ್ಕಿ ಇಡುವುದು ಅಭ್ಯಾಸವಾಗುತ್ತದೆ" ಎಂದರು.

ಅವರಿಗೆ ರಂಗೋಲಿಯ ಚಿತ್ತಾರ ಎಂದರೆ ತುಂಬಾ ಸಂತೋಷ; ಅಚ್ಚು ಮೆಚ್ಚು. ಒಮ್ಮೆ ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ದ್ರೋಣ, ದುರ್ಯೋಧನರ ಒಂದು ರಂಗೋಲಿ ಚಿತ್ರವನ್ನು ನೋಡಿ ಮೆಚ್ಚಿ ಅದರ ಒಂದು ಭಾವಚಿತ್ರವನ್ನು ತೆಗೆಸಿ ಅದನ್ನು ತಮ್ಮ ಭಾರತದಲ್ಲಿ ಚಿತ್ರವನ್ನಾಗಿ ಅಳವಡಿಸಿಕೊಂಡಿದ್ದಾರೆ.

ಅವರು ರಂಗೋಲಿ ಇಡುತ್ತಿದ್ದಾಗ, "ನಾನು ಇಡುತ್ತೇನೆ. ಬಣ್ಣದ ಬದಲು ಅರಿಸಿನ ಕುಂಕುಮ ಏಕೆ ತುಂಬುತ್ತೀ. ಬಣ್ಣದ ರಂಗೋಲಿಯನ್ನೇ ತುಂಬಿಸುತ್ತೇನೆ" ಎಂದರೆ "ಅರಿಸಿನ, ಕುಂಕುಮ, ಬಿಳಿಯರಂಗೋಲಿ, ಇದಕ್ಕಿಂತ ಬೇರೆ ಬಣ್ಣ ಉಂಟೇ? Colour Combination ಬೇಕೆ?" ಎನ್ನುತ್ತಿದ್ದರು.

ಮಾಘ ಶುದ್ಧ ಪೂರ್ಣಿಮೆಯಂದು ನಡೆಯುತ್ತಿದ್ದ ಪೂಜೆ ಮೈಸೂರಿನಲ್ಲಿ ಆರಂಭವಾಗಿ ನಮ್ಮ ತಂದೆ ಬದುಕಿರುವವರೆಗೂ ನಡೆಯುತ್ತಿತ್ತು. ಆ ದಿನದ ಚರಪು ನನ್ನ ಜವಾಬ್ದಾರಿಯಾಗಿತ್ತು.

೧೯೫೫ನೇ ಇಸವಿಯ ಹೊತ್ತಿಗೆ, ತಮ್ಮ ಸ್ವಗೃಹದಲ್ಲಿರಬೇಕೆಂದೂ, ಎಲ್ಲಾ ಮಕ್ಕಳು, ಮೊಮ್ಮಕ್ಕಳೂ, ಬಂಧುಗಳೂ, ಇಷ್ಟಮಿತ್ರರೂ ಎಲ್ಲರೂ ಬೆಂಗಳೂರಿನಲ್ಲಿರುವುದರಿಂದಲೂ, ಹಿತಕರವಾದ ವಾತಾವರಣಕ್ಕಾಗಿಯೂ ತಮ್ಮ ವಾಸವನ್ನು ಬದಲಾಯಿಸಿ ಮೈಸೂರಿನಿಂದ ಬೆಂಗಳೂರಿಗೆ ಬಂದರು.

'ವಚನ ಭಾರತ'ದ ಮೊದಲನೆಯ ಮುದ್ರಣ ಅಚ್ಚಾಗಿ ಬರುತ್ತಿದ್ದ ಹಾಗೇ ಖರ್ಚಾಗಿ ಹೋಯಿತು. ಪುನಃ ೧೯೫೩ರಲ್ಲಿ ಎರಡನೆಯ ಮುದ್ರಣವನ್ನು ಅಚ್ಚು ಹಾಕಿಸಿದರು. ಅದೇ ಬೆಲೆ ಜೊತೆಗೆ ೧೦–೧೨ ಚಿತ್ರಗಳು. ಮೊದಲನೆಯ ಮುದ್ರಣವಾದ ತರುಣದಲ್ಲೆ ನನಗೆ ಮದುವೆಯಾಯಿತು. ಎರಡನೆಯ ಮುದ್ರಣದ ಹೊತ್ತಿಗೆ ನನ್ನ ಮಗಳು ಹುಟ್ಟಿದಳು. ತಮ್ಮ 'ವಚನ ಭಾರತ'ದ ಸರಸ್ವತಿಯೇ ತಮ್ಮ ಮನೆಯಲ್ಲಿ ಮಗುವಾಗಿ ಹುಟ್ಟಿದ್ದಾಳೆಂದು ನಮ್ಮ ತಂದೆ ಸಂಭ್ರಮಪಟ್ಟರು. ಅವಳಿಗೆ "ಭಾರತೀ" ಎಂದೇ ಹೆಸರಿಟ್ಟರು. "ಇವಳು ನಮ್ಮ ಮನೆ ಸರಸ್ವತೀ" ಎಂದು ಎಲ್ಲರಿಗೂ ಹೇಳಿಕೊಳ್ಳುತ್ತಿದ್ದರು.

೧೯೫೩ರಿಂದ ೧೯೬೩ರ ವರೆಗೆ ಹತ್ತು ವರ್ಷಗಳ ಕಾಲ ನನ್ನ ಮಗಳ ಜೊತೆಯಲ್ಲಿ ತಾವೂ ಮಗುವಾಗೇ ಹೆಚ್ಚು ಕಡಿಮೆ ನಮ್ಮ ಮನೆಯಲ್ಲೇ ಇರುತ್ತಿದ್ದರು.

ನಮ್ಮ ಮನೆಗೂ ಅವರ ಮನೆಗೂ ಹತ್ತು ನಿಮಿಷಗಳ ನಡಿಗೆಯ ದೂರ.

ಬೆಳಿಗ್ಗೆ ಐದು ಗಂಟೆಗೆ ಎದ್ದರೆ ವ್ಯಾಯಾಮ, ಗಾಳೀ ಸವಾರಿ, ಮನೆಗೆಬಂದು ಕಾಫಿ, ಸ್ನಾನ, ಆಹ್ನಿಕ, ಪೂಜೆ ತೀರಿಸಿಕೊಂಡು ನಮ್ಮ ಮನೆಗೆ ಬಂದು ಭಾರತಿಯನ್ನು ತಮ್ಮ ಮನೆಗೆ ಕರೆದುಕೊಂಡು ಹೋಗುತ್ತಿದ್ದರು. ಮನೆಗೆ ಬಂದತಕ್ಷಣ ನಲ್ಲಿಯಲ್ಲಿ ನೀರಿದ್ದರೂ ಬಾವಿಯಿಂದ ಸೇದಿ ಬಟ್ಟೆ ಒಗೆದುಕೊಂಡು, ಆವರಣದಲ್ಲಿದ್ದ ಗಿಡಗಳಿಗೆಲ್ಲಾ ನೀರು ಸೇದಿಹಾಕಿ ಊಟಕ್ಕೆ ಏಳುತ್ತಿದ್ದರು. ಊಟ ಮಾಡಿದನಂತರ ಭಾರತಿಯ ಜೊತೆ ಆಟ. ಆಮೇಲೆ ಒಂದು ಗಂಟೆಗೆ ಅವಳನ್ನು ತೂಗಿ ಮಲಗಿಸಿ "ಬಂಗಾಳೀ ಕಾದಂಬರೀಕಾರ ಬಂಕಿಮಚಂದ್ರ"ವನ್ನು ಬರೆಯಲು ಕುಳಿತುಕೊಳ್ಳುತ್ತಿದ್ದರು. ಅವಳು ನಾಲ್ಕುಗಂಟೆಗೆ ಏಳುವಹೊತ್ತಿಗೆ ಅಂದಿನ ಬರೆವಣಿಗೆ ಮುಗಿದಿರುತ್ತಿತ್ತು. ಅವಳಿಗೆ ತಾವೇ ಕಾಫಿಯನ್ನೋ ಹಾಲನ್ನೋ ಕುಡಿಸಿಕೊಂಡು ನಮ್ಮ ಮನೆಗೆ ಬಂದರೆ ರಾತ್ರಿ ಎಂಟುಗಂಟೆಯ ತನಕ ನಮ್ಮ ಮನೆಯಲ್ಲೇ ಇರುತ್ತಿದ್ದರು. ಆಗ ಅವರು ನನಗೆ ಹೇಳದೇ ಇದ್ದ ವಿಷಯವೇ ಇಲ್ಲ. ಆ ಹತ್ತು ವರ್ಷಗಳು ಹತ್ತು ನಿಮಿಷಗಳಂತೆ ಕಳೆದು ಹೋದವು.

ಆಗ ನಮ್ಮ ಮಗಳು "ವಚನ ಭಾರತ"ವನ್ನು ಕೈಗೆತ್ತಿಕೊಂಡು "ಅಣ್ಣಯ್ಯಾ ಇದು ತುಂಬಾ ದೊಡ್ಡ ಪುಸ್ತಕ. ಸಣ್ಣ ಅಕ್ಷರ, ಚಿತ್ರ ಇಲ್ಲ. ನೀನೆ ಕಥೆ ಹೇಳಿಬಿಡು" ಎನ್ನುತ್ತಿದ್ದಳು. ಅವಳು ತಾನಾಗಿಯೇ ಓದಿಕೊಳ್ಳುವುದಕ್ಕೆ ಕಷ್ಟವಾಗುತ್ತಿತ್ತು. ಆಗ ಅವರಿಗೆ ಮಕ್ಕಳಿಗೆಂದೇ ಚಿತ್ರಮಯವಾದ, ದಪ್ಪ ಅಕ್ಷರದ, ಕಥೆಯ ರೂಪದಲ್ಲಿ ಒಂದು ಭಾರತವನ್ನು ಬರೆಯಬೇಕೆಂಬ ಭಾವನೆ ಮೂಡಿತು. ತಮ್ಮ ಇಬ್ಬರು ಮೊಮ್ಮಕ್ಕಳು ನಿರ್ಮಲಾ [ನಮ್ಮ ಅಕ್ಕನ ಮಗಳು] ಭಾರತೀ [ನನ್ನ ಮಗಳು] ಇವರ ಹೆಸರೂ ಆ ಪುಸ್ತಕಕ್ಕಿರಬೇಕೆಂದೂ, ಪುಸ್ತಕಕ್ಕೆ ಆ ಹೆಸರು ಸೂಕ್ತವೂ ಉಚಿತವೂ ಆಗಿರಬೇಕೆಂದೂ ಅದಕ್ಕೆ "ನಿರ್ಮಲ ಭಾರತಿ" ಎಂದು ಹೆಸರಿಟ್ಟು ಮಕ್ಕಳ ಸಚಿತ್ರ ಭಾರತವನ್ನು ೧೦೦ ಪುಟಗಳಲ್ಲಿ ತಯಾರು ಮಾಡಿದರು. ನಿರ್ಮಲ ಎಂದರೆ ತಿಳಿಯಾದ, ಭಾರತಿ ಎಂದರೆ ಮಾತು; ಎಲ್ಲರಿಗೂ ಅರ್ಥವಾಗುವಂತಹದು ಎಂದು.

"ವಚನ ಭಾರತ" ಮತ್ತು "ನಿರ್ಮಲ ಭಾರತಿ" ಹೀಗೆ ರಚನೆಯಾದವು.

ಪು. ತಿ. ನ.

# ಶ್ರೀ ಕೃಷ್ಣಶಾಸ್ತ್ರಿಗಳ ನೆನಪು

ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರನ್ನೂ ಶ್ರೀ ಟಿ. ಎಸ್. ವೆಂಕಣ್ಣಯ್ಯನವರನ್ನೂ ಶ್ರೀ. ಮಾಸ್ತಿ ಅವರು ಕನ್ನಡ ಸಾಹಿತ್ಯದ ಅಶ್ವಿನೀದೇವತೆಗಳೆಂದು ಕರೆದರು. ಇದು ಮೇಲುನೋಟಕ್ಕೆ ಸ್ವಲ್ಪ ಅತಿಶಯೋಕ್ತಿಯೇನೋ ಎನಿಸಬಹುದು. ಈ ದೇವತೆಗಳು ಚೆಲುವಿಕೆಗೂ ಚಿಕಿತ್ಸೆಗೂ ತುಂಬ ಪ್ರಸಿದ್ಧರು. ಶ್ರೀ ಕೃಷ್ಣಶಾಸ್ತ್ರಿಗಳವರ ಬರವಣಿಗೆಯನ್ನು ನೋಡಿದವರಿಗೆ ಕನ್ನಡ ಗದ್ಯ ತನ್ನ ದಿವ್ಯರಮ್ಯ ಸ್ವರೂಪವನ್ನು ಪಡೆದಿರುವ ಸಂಗತಿ ಗೋಚರಕ್ಕೆ ಬಾರದೆ ಇರದು. ಅವರು 'ಪ್ರಬುದ್ಧ ಕರ್ನಾಟಕ'ದಲ್ಲಿ ಬರೆಯುತ್ತಿದ್ದ ಸಂಪಾದಕ ಟೀಕೆ ಟಿಪ್ಪಣಿಗಳನ್ನೂ ಆಗಾಗ ಅಪೂರ್ವವಾಗಿಬರೆದು ಓದುತ್ತಿದ್ದ ಭಾಷಣಗಳನ್ನೂ ನೋಡಿದವರಿಗೆ ಅವರ ಮನಸ್ಸಿನ ಭೈಷಜ್ಯ ಅರಿವಾಗುತ್ತದೆ. ಪ್ರಾಯಶಃ ಹೊಯಿಸಳ ಕರ್ನಾಟಕರ ಕನ್ನಡ ನನಗೆ 'ದೊರೆ ಕನ್ನಡ' ಎನ್ನಿಸುತ್ತದೆ—(ನನಗೆ ಅವರ ಮಾತೂ ಬರವಣಿಗೆಯೂ ಹೆಚ್ಚು ಬಳಕೆ ಯಾಗಿರುವುದರಿಂದ ಅವರ ಭಾಷೆ ಬಹಳ 'ಹಾಳತ'ವಾಗಿದೆ ಎನ್ನಿಸಿರಬಹುದು). ಆದರೆ ಶ್ರೀ ಕೃಷ್ಣಶಾಸ್ತ್ರಿಗಳವರ ಬರವಣಿಗೆ ಈಗಿನ ಕನ್ನಡ ಗದ್ಯ ಲೇಖಕರಿಗೆ ಒಂದು ಮೇಲುಪಂಕ್ತಿಯಾಗಿದೆ. (ಆದರ ಸೊಗಡನ್ನು ಆಧುನಿಕರಲ್ಲಿ ಶ್ರೀ ಹಾ. ಮಾ. ನಾಯಕರು ತಮ್ಮ ಮನೋಹರವಾದ ಗದ್ಯ ಶೈಲಿಯಲ್ಲಿ ಈಗ ಹರಡುವಂತಿದೆ.) ಶ್ರೀ ಕೃಷ್ಣಶಾಸ್ತ್ರಿಯವರ ಶೈಲಿ ಸರಳ, ನಿಷ್ಕೃಷ್ಟ, ಮಿತ, ಪ್ರಗಲ್ಭ. ಆದಕ್ಕೆ ಮುರಿಯದ ಮುರುವುಂಟು, ಹೊಚ್ಚ ಹೊಸತನದ 'ಗರಿ'ಮೆಯುಂಟು. ಅದು ಎಲ್ಲೂ ಕುಂಟುವುದಿಲ್ಲ; ಚಟುಲಗತಿಯ ಚಪಲಾಶ್ವವನ್ನು-ಜಯಂತನೇರಿರುವ ಉಚ್ಚೈಃಶ್ರವಸ್ಸನ್ನು-ಹೋಲುತ್ತದೆ. ಭಾಷಾಂತರ ಮಾಡುವುದರಲ್ಲೂ ಅವರು ಅನುಕರಣೀಯರು.

ಒಂದು ರಾತ್ರಿ ನಾನು ಕೋಲಾರದಲ್ಲಿ ನನ್ನ ಮಿತ್ರರು ಪಂಡಿತ ಹೆಮ್ಮಿಗೆ ದೇಶಿಕಾಚಾರ್ಯರ ಮನೆಯಲ್ಲಿ ರಾತ್ರಿ ಮಲಗಲು ಹೋದಾಗ ಕೈಗೆ ಶ್ರೀ ಕೃಷ್ಣಶಾಸ್ತ್ರಿಗಳವರ 'ನಾಗ ಮಹಾಶಯ' ಎಂಬ ಪುಸ್ತಕ ಸಿಕ್ಕಿತು. ಅದೊಂದು ಬಂಗಾಳಿ ಪುಸ್ತಕದ ಭಾಷಾಂತರ. ಅದು ನಿದ್ರೆಬರಿಸಲಿ ಎಂದು ನನಗೆ ಭ್ರಮೆ.

ತದ್ವಿಪರೀತವಾಯಿತು; ಪುಸ್ತಕವನ್ನು ಪೂರ್ತಿ ಓದಿ ಮುಗಿಸುವವರೆಗೂ ಕೆಳಗಿಡ ಲಾಗಲಿಲ್ಲ, ಕಣ್ಣು ಗುಡ್ಡೆಗಳು ನೊಂದರೂ ಕಣ್ಣು ಮುಚ್ಚಲಾಗಲಿಲ್ಲ. ವಿಷಯ ಅಷ್ಟು ಮನೋಹರವಾಗಿತ್ತು. ಓದುತ್ತಿದ್ದುದು ಭಾಷಾಂತರವೆಂದೂ, ಅದು ಕನ್ನಡ ಭಾಷೆಯೆಂದೂ ನನಗೆ ತೋಚಲೇ ಒಲ್ಲದು. ಮನಸ್ಸು ನಗ್ನವಾಗಿ ಎಲ್ಲೋ ಯಾವುದೋ ದಿವ್ಯೈಕಾಂತ ಸ್ಥಲದಲ್ಲಿ ಕೂಡಿದಂತಿತ್ತು. ಆ ಪುಸ್ತಕವನ್ನು ಪುನಃ ಈಗ ಓದಿದೆ; ಅದೇ ಅನುಭವ ಮರುಕಳಿಸಿತು; ಕೃಷ್ಣಶಾಸ್ತ್ರಿಯವರ ಸ್ಮರಣೆ ತುಂಬಿ ಬಂದಿತು. ನಾಗಮಹಾಶಯನನ್ನು ಆತ ತುಂಬ ಮೆಚ್ಚಿಕೊಂಡಿರಬೇಕು. ಇಲ್ಲದಿದ್ದರೆ ಬರವಣಿಗೆ ಇಷ್ಟು ಹದವಾಗುತ್ತಿರಲಿಲ್ಲ. ಕೃಷ್ಣಶಾಸ್ತ್ರಿಗಳು ಮೇಲು ನೋಟಕ್ಕೆ ಹೇಗಾದರೂ ತೋರಲಿ, ಒಳಗೆ ಅತಿಮೃದು. ತಪಸ್ವಿಗಳಿಗೂ ಸಾಧು ಗಳಿಗೂ ನಿಷ್ಕಾಮವಂತರಿಗೂ ಒಲಿಯುವ ಹೃದಯ ಅವರದು.

ಅವರು 'ವಚನ ಭಾರತ' ಮತ್ತು 'ಕಥಾಮೃತ' ವನ್ನು ಬರೆದು ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ. 'ವಚನ ಭಾರತ' ಸಂಸ್ಕೃತ ಭಾರತದಿಂದ ಆಯ್ದ ಶ್ಲೋಕಗಳ ಭಾಷಾಂತರ, ಹೌದು. ಆದರೆ ಸಾರಸಂಗ್ರಹ ಅದು. ಶ್ಲೋಕಗಳನ್ನು ಆರಿಸುವುದರಲ್ಲಿ ತುಂಬ ಜಾಣ್ಮೆತೋರಿಸಿದ್ದಾರೆ,ರಸಿಕತೆಯನ್ನೂ ಉಚಿತಜ್ಞತೆಯನ್ನೂ ಮೆರೆದಿದ್ದಾರೆ. ಮೂಲದೊಡನೆ ಈ ಭಾಷಾಂತರವನ್ನು ಹೋಲಿಸಿ ನೋಡುವ ಅನೇಕ ಸಂದರ್ಭಗಳು ನನಗೆ ಅನಿಚ್ಛಿತವಾಗಿಯೇ ಒದಗಿ ಬಂದವು. ಹೋಲಿಸಿ ಬೆರಗು ಪಟ್ಟಿದ್ದೇನೆ. ಹಾಗೆಯೇ 'ಕಥಾಮೃತ' 'ಕಥಾಸರಿತ್ಸಾಗರ'ದ ಸಾರ ಸಂಗ್ರಹ ರೂಪವಾದ ಭಾಷಾಂತರ. ಮತ್ತೊಂದು ಪುಸ್ತಕ ನನಗೆ ಹಿಡಿಸಿದ್ದು ಅವರ 'ಶ್ರೀಪತಿಯ ಕಥೆಗಳು', ಅದರಲ್ಲೂ 'ಊಟದಲ್ಲಿ ಉಪಚಾರ' ಎಂಬ ಪ್ರಬಂಧ ಬಹು ಸ್ವಾರಸ್ಯವಾಗಿದೆ. ಶೈಲಿ ಅವರ ಸಹಜ ಸರಳ ಶೈಲಿಯಲ್ಲ; ಪ್ರೌಢವಾಗಿದೆ, ಅಲಂಕಾರಯುಕ್ತವಾಗಿದೆ. ಆದರೆ ಈ ಪ್ರೌಢಿಮೆಯೇ ಶೃಂಗಾರವೇ ಹಾಸ್ಯ ರಸಕ್ಕೆ ಪೋಷಕವಾಗಿ ಭೋಜನದ ಪರುಠವಣೆ ಬಾಯಿಗೆ ನೀರೂರಿಸುತ್ತದೆ. ಕೃಷ್ಣ ಶಾಸ್ತ್ರಿಗಳವರ ಮಹೋಪಮೆಗಳೆಲ್ಲ ಪ್ರಾಯಶಃ ಭೋಜನಕ್ಕೆ ಸಂಬಂಧ ಪಟ್ಟವು. ಅವರು ಊಟ ತಿಂಡಿಯ ವಿಚಾರದಲ್ಲಿ ತುಂಬ ರಸಿಕರು, ಉದಾರರು ಎಂದು ಕೇಳಿ ದ್ದೇನೆ. ಅವರಸಾಹಿತ್ಯದಲ್ಲಂತೂ ಇದರ ಪ್ರತಿಫಲನವಿದೆ. ಅವರ ಕಾಲ್ಪನಿಕ ಬರವಣಿಗೆಗಳ ಪೈಕಿ ಈ ಬರಹ ಅತ್ಯುತ್ತಮವಾದುದೆಂದು ನನ್ನೆಣಿಕೆ. ಐದು ಅಗ್ರದ ಬಾಳೆಲೆಗಳ ತುದಿಯಲ್ಲಿರುವ ದ್ರಾಕ್ಷಿಗೊಜ್ಜಿನದೊನ್ನೆಯನ್ನು ಎಳೆದುಕೊಳ್ಳಲು ಕಬ್ಬಿನ ಜಲ್ಲೆಯತುದಿಗೆ ಚಾಚುಗೈಯನ್ನು ಜೋಡಿಸಿಟ್ಟಿರುವ ಬಗೆ ತುಂಬ ಮೋಜಾಗಿದೆ. ನಾನೂ ಯಾವುದೋ ಒಂದು ಮಠದಲ್ಲಿ ಅಂಥ ಅಗ್ರ ಪಂಕ್ತಿಯ ಊಟಕ್ಕೆಹೋಗಿದ್ದೆ. ಅಗ್ರದ ಬಾಳೆಲೆಗಳು ಎರಡೇ ಇದ್ದವು, ಚಾಚುಗೈಯ ಕಬ್ಬಿನ ಜಲ್ಲೆಗಳು ಪಕ್ಕದಲ್ಲಿ ಕಾಣಲಿಲ್ಲ, ಅವುಗಳು ಅವಶ್ಯಕವೂ ಆಗಿರಲಿಲ್ಲ. ದೊನ್ನೆಗಳು ಕೈಗೇ ಎಟಕುವಷ್ಟು ದೂರದಲ್ಲಿದ್ದವು. ಕಾಲದ ಮಹಾತ್ಮ್ಯೆ. ಅಂತು ಕೃಷ್ಣಶಾಸ್ತ್ರಿಗಳ ಮನಸ್ಸಿನ ಸ್ವಾರಸ್ಯ

ವನ್ನು ಅರಿಯಬೇಕಾದರೆ ಈ ಪ್ರಬಂಧವನ್ನು ಕನ್ನಡ ರಸಿಕಕುಲ ಓದಬೇಕು-ಅದರ ಅನುಪಮ ಸ್ವಾರಸ್ಯಕ್ಕೆ ವರ್ಣನಾ ವೈಖರಿಗೆ ನಿಗೂಢ ವ್ಯಂಗ್ಯಕ್ಕೆ ಶೈಲಿಯಮನೋಜ್ಞತೆಗೆ. ಕೃಷ್ಣಶಾಸ್ತ್ರಿಗಳವರ ಗದ್ಯ ಕಲೆ ಇಲ್ಲಿ ತನ್ನ ಪರಾಕಾಷ್ಠೆಯನ್ನು ಕಂಡಿದೆ ಎನ್ನಬಹುದು.

ಅವರ ಪಾಠಪ್ರವಚನದ ಅರಿವು ನನಗೆ ಅಷ್ಟಾಗಿ ಇಲ್ಲ. ಅವರ ವೈಯಕ್ತಿಕ ಪರಿಚಯವೂ ನನಗೆ ಅಷ್ಟು ಗಾಢವಾದುದಲ್ಲ. ಆದರೆ ಪರಸ್ಪರ ಸದ್ಭಾವಕ್ಕೆ ಯಾವಕೊರತೆಯೂ ಇರಲಿಲ್ಲ. ಅವರ ಬರಹಗಳಿಂದ ನಾನು ತುಂಬ ಉಪಕೃತನಾಗಿದ್ದೇನೆ. ಕನ್ನಡಕ್ಕೆ ಅವರಿಂದಾದ ಕೊಡಿಗೆ ತುಂಬ ಹಿರಿಯದು, ಮಹಿಮೆಯುಳ್ಳದ್ದು. ಅವರ ಕನ್ನಡ ಪ್ರೇಮ ನಿಸ್ಸೀಮವಾದದ್ದು. ನಿಜವಾಗಿ ಅವರು ಆ ಭಾಷೆಯ ಜಡತೆಯನ್ನು ಬಿಡಿಸಿ ಆಧುನಿಕ ಯುಗಕ್ಕೆ ಒಗ್ಗುವಂತೆ ಪರಿಷ್ಕರಿಸಿ ಪುಷ್ಟಿಗೊಳಿಸಿ ಆದಕ್ಕೆ ಅಶ್ವಿನೀಯಮಳರಲ್ಲಿ ಒಬ್ಬರಾದರು. ಈ ಚಿರಸ್ಮರಣೀಯರಿಗೆ ನನ್ನ ವಿನಮ್ರ ಪ್ರಣಾಮವನ್ನು ಈ ಬರಹದ ಮೂಲಕ ಸಲ್ಲಿಸಲು ನನಗೆ ಅನುವು ದೊರೆತುದೊಂದು ಸುಯೋಗ.

# ಶಾಸ್ತ್ರಿಗಳ ಗದ್ಯ

...... ಒಂದೊಂದು ಮಾತೂ ಆಣಿಮುತ್ತು. ಒಂದು ಹೆಚ್ಚಿಲ್ಲ, ಒಂದು ಕಡಿಮೆ ಯಿಲ್ಲ, ಒಂದನ್ನು ತೆಗೆಯುವಂತಿಲ್ಲ, ಮತ್ತೊಂದನ್ನು ಸೇರಿಸುವಂತಿಲ್ಲ. ಅಂಥ ಕುಶಲ ಕಲೆಗಾರಿಕೆ ಇಲ್ಲಿದೆ.... ಅಕೃತಕತೆ ಮತ್ತು ನಿಖರತೆ ಎ. ಆರ್. ಕೃ. ಅವರ ಶೈಲಿಯ ಜೀವಾಳ. ಲೇಖಕರ ಆಲೋಚನೆಗಳು ಭಾವಗಳು ಸಂದೇಹಕ್ಕೆ ಆಸ್ಪದವಿಲ್ಲದಂತೆ ವಾಚಕನಿಗೆ ಅರ್ಥ ವಾಗುತ್ತವೆ. ಅವರ ಆಶಯ ಇವನ ಹೃದಯದಲ್ಲಿ ಸ್ಪಷ್ಟವಾಗಿ ಮೂಡುತ್ತದೆ. ಎಲ್ಲಿಯೂ ವಾಚಕ ತಿಣುಕ ಬೇಕಾಗಿಲ್ಲ. ಅವರ ವಾಕ್ಸಂಪತ್ತಿಯ ಫಲವಾಗಿ ಲಭಿಸಿದ ಸುಲಭ ಸ್ಪಷ್ಟ ಶೈಲಿಯೇ ಇದಕ್ಕೆ ಕಾರಣ. ಎಂಥ ತಾತ್ವಿಕ ವಿಷಯಗಳನ್ನಾದರೂ ಸುಲಭವಾಗಿ, ಆದರೆ ಗ್ರಾಮೀಣತೆಗೆ ಕುಸಿಯದಂತೆ, ಗಂಭೀರವಾಗಿ ಹೇಳುವ ಸಾಮರ್ಥ್ಯ ಅವರಿಗೆ ಸ್ವಾಭಾವಿಕವಾಗಿ ಲಭ್ಯವಾಗಿದೆ... ಅವರ ಶೈಲಿಯಲ್ಲಿ ತೂಕವಿದೆ, ನಯವಿದೆ, ಬನಿಯಿದೆ, ಸೊಗಸಿದೆ, ಲಾವಣ್ಯ ವಿದೆ; ಅದು ಸುಲಭ ಗ್ರಾಹ್ಯವಾದುದು, ಹೃದಯ ಸಂಸ್ಪರ್ಶಿಯಾದುದು. ಅದರ ಸಾಜ್ಯತೆಯಲ್ಲಿ ಸರ್ವರಿಗೂ ವಿಶ್ವಾಸವಿದೆ.

—ದೇ. ಜವರೇಗೌಡ
('ಅಭಿನಂದನೆ', ಪು. ೮೩–೮೫)

**ಕೆ. ಎಸ್. ಕೃಷ್ಣಮೂರ್ತಿ**

# ಗುರುಸ್ಮರಣೆ

ಆತ್ಮೀಯವಾಗಿ ವಿದ್ಯೆಯನ್ನು ಕಲಿಸಿ ಮಾರ್ಗದರ್ಶನಮಾಡಿ ವ್ಯಕ್ತಿತ್ವವನ್ನು ರೂಪಿಸಿದ ಪೂಜ್ಯಗುರುವರ್ಯರನ್ನು ಸ್ಮರಿಸಿಕೊಳ್ಳುವುದೇ ಒಂದು ಪುಣ್ಯ. ಅದರಲ್ಲೂ ಗುರುಗಳಾದ ಪೂಜ್ಯ ಎ. ಆರ್. ಕೃಷ್ಣಶಾಸ್ತ್ರಿಗಳವರನ್ನು ಸ್ಮರಿಸಿಕೊಂಡಾಗಲೆಲ್ಲ ಹೃದಯ ಹಚ್ಚಹಸಿರಾಗುವುದು. ಇಂದಿನ ಬೆಳೆಗೆ ಅಂದಿನ ಕೃಷಿಯೇ ಮೂಲವಾದುದರಿಂದ ಅಚ್ಚುಕಟ್ಟಾಗಿ ಶಿಸ್ತಿನಿಂದ ಕಾಲೇಜಿಗೆ ಬರುವ ಕೃಷ್ಣಶಾಸ್ತ್ರಿಗಳ ನಿಲವು ಇಂದೂ ಕಣ್ಣಿಗೆ ಕಟ್ಟಿದಂತೆ ಇದೆ. ಅಂದವಾಗಿ ತಲೆಯ ಮೇಲೆ ಮೆರೆಯುವ ಜರಿರುಮಾಲು, ಮುಚ್ಚುಕಾಲರಿನ ಕೋಟು, ಶುಭ್ರವಾದ ಕಚ್ಚೆಪಂಚೆ ಅವರ ವ್ಯಕ್ತಿತ್ವಕ್ಕೆ ಇಂಬುಕೊಡುತ್ತಿದ್ದವು. ಭಯಭಕ್ತಿಯ ಜತೆಗೆ ಆತ್ಮೀಯತೆಯಿಂದ ನೋಡಿದವರನ್ನು ಆಕರ್ಷಿಸುವ ಗಂಭೀರವದನ ಕೃಷ್ಣಶಾಸ್ತ್ರಿಗಳದು. ಬಳಿಗೆ ಬಂದವರನ್ನು ಪ್ರೀತಿ ಸೌಹಾರ್ದಗಳಿಂದ ಬರಮಾಡಿಕೊಂಡು ಮಾತನಾಡಿಸುವ ಅವರಲ್ಲಿ ನಮಗೆ ಹುಟ್ಟುತ್ತಿದ್ದುದು ವಿನಮ್ರಭಕ್ತಿ. ಶಿಸ್ತು ಮತ್ತು ನಿಯಮ ಅವರ ಜೀವನಾಡಿ. ನಿಯಮಿತ ವೇಳೆಗೆ ನಿರ್ದಿಷ್ಟ ಕೆಲಸಗಳಾಗಲೇ ಬೇಕು. ಅವರೂ ಹಾಗೆಯೇ ನಡೆಯುತ್ತಿದ್ದರು, ತಮ್ಮ ಶಿಷ್ಯರಿಂದಲೂ ಅದನ್ನೇ ನಿರೀಕ್ಷಿಸುತ್ತಿದ್ದರು.

ಮೈಸೂರಿನ ಮಹಾರಾಜರ ಕಾಲೇಜಿನಲ್ಲಿ ಕೃಷ್ಣಶಾಸ್ತ್ರಿಗಳು ಕನ್ನಡ ಪ್ರಾಧ್ಯಾಪಕರಾಗಿದ್ದಾಗ ಮೂರು ವರ್ಷಗಳ ಕಾಲ ಬಿ.ಎ. ಆನರ್ಸ್ ತರಗತಿಗಳಲ್ಲಿ ಅವರ ಪಾಠದ ರಸಾನುಭವವನ್ನು ಪಡೆದ ಸುಕೃತ ನನ್ನದು. ಕಾವ್ಯವೇ ಅಗಲಿ ಅಲಂಕಾರಶಾಸ್ತ್ರವೇ ಆಗಲಿ, ವ್ಯಾಕರಣವೇ ಆಗಲಿ, ಕನ್ನಡ ಭಾಷೆಯ ಇತಿಹಾಸವೇ ಆಗಲಿ ಯಾವುದನ್ನು ಪಾಠ ಹೇಳಿದರೂ ಸರಳತೆ, ಸ್ಪಷ್ಟತೆ, ಸ್ವಾನುಭವಗಳು ಎದ್ದುಕಾಣುತ್ತಿದ್ದುವು. ಅದರಲ್ಲೂ ಕನ್ನಡ ಭಾಷೆಯ ಇತಿಹಾಸದ ಪಾಠ ಇನ್ನೂ ನನ್ನ ನೆನಪಿನಲ್ಲಿ ಉಳಿದಿದೆ. ವಿಷಯ ಎಷ್ಟು ಜಟಿಲವಾದುದಾಗಿರಲಿ, ಗಹನವಾದುದಾಗಿರಲಿ ಅದನ್ನು ಸರಳವಾಗಿ ಶಾಸ್ತ್ರೀಯವಾದ ವಿಧಾನದಲ್ಲಿ ನಿರೂಪಿಸುತ್ತಿದ್ದುದು ಅವರ ಪಾಠದ ವೈಶಿಷ್ಟ್ಯ.

ತಮ್ಮ ಶಿಷ್ಯರಲ್ಲಿ ಅವರು ತೋರುತ್ತಿದ್ದ ಪ್ರೀತಿ ಅನ್ಯಾದೃಶವಾದುದು. ಶಿಷ್ಯರ ಕಷ್ಟಸುಖಗಳನ್ನು ವಿಚಾರಿಸಿ ಅವರಿಗೆ ಬೇಕಾದ ಸಹಾಯಮಾಡುವುದರಲ್ಲಿ ಮುಕ್ತಹಸ್ತರು, ಉದಾರ ಹೃದಯಿಗಳು. ಆದರೆ ಹಾಗೆ ಸಹಾಯಮಾಡಿದುದನ್ನು ಸ್ವಲ್ಪವಾಗಲಿ ತೋರಿಸಿಕೊಳ್ಳುತ್ತಿರಲಿಲ್ಲ. ಅಲ್ಲದೆ ಸಹಾಯ ಪಡೆದವರು ಪ್ರತ್ಯಕ್ಷವಾಗಿ ಅದನ್ನು ಪ್ರದರ್ಶಿಸಬೇಕು, ತಮ್ಮ ನಡೆನುಡಿಯಲ್ಲಿ ತೋರಿಸಿಕೊಳ್ಳಬೇಕು ಎಂದು ನಿರೀಕ್ಷಿಸಿದವರೂ ಅಲ್ಲ. ಅದನ್ನು ಅವರು ಮೆಚ್ಚುತ್ತಲೂ ಇರಲಿಲ್ಲ. ನಾನು ಕೂಡ ಪೂಜ್ಯಗುರುಗಳ ಕೃಪಾಕಟಾಕ್ಷಕ್ಕೆ ಒಳಗಾದವರಲ್ಲಿ ಒಬ್ಬ. ಮೊದಲನೆಯ ಆನರ್ಸ್ ತರಗತಿಗೆ ಸೇರಿದ ತರುಣದಲ್ಲಿ ನನ್ನ ವಿಚಾರಗಳನ್ನೆಲ್ಲ ವಿಚಾರಿಸಿ ತಿಳಿದುಕೊಂಡರು. ನನಗೆ ಅದರಿಂದ ಏನು ಉಪಕಾರವಾಗಬೇಕಾಗಿದ್ದಿತೋ ಅದನ್ನು ಅರಿತ ಪೂಜ್ಯಗುರುಗಳು ಆಯಾ ಸಮಯಕ್ಕೆ ಅದು ನನಗೆ ತಲಪುವಂತೆ ಏರ್ಪಡಿಸುತ್ತಿದ್ದರು. ಅವರನ್ನು ಪುನಃ ಸಹಾಯಬೇಡಬೇಕಾದ ಪ್ರಸಂಗ ಮೂರು ವರ್ಷಗಳಲ್ಲಿ ಒಮ್ಮೆಯಾದರೂ ಬರಲಿಲ್ಲ. ಸಹಾಯಮಾಡುವವರು ಉಪಕಾರಮಾಡುವವರು ಪೂಜ್ಯಕೃಷ್ಣಶಾಸ್ತ್ರಿಗಳ ಮಾದರಿಯನ್ನನುಸರಿಸಬೇಕು. ಉಪಕಾರಪಡೆಯುವವನಿಗೂ ಒಂದು ಅಭಿಮಾನ, ಒಂದು ಆತ್ಮಗೌರವವಿರುತ್ತದೆ. ಸ್ವಲ್ಪವೂ ಅದಕ್ಕೆ ಕುಂದು ಬರದಂತೆ ಆತನಿಗೆ ಸಹಾಯಮಾಡಬೇಕು ಎಂದು ಅರಿತವರು ಅವರು.

ಎ. ಆರ್. ಕೃಷ್ಣಶಾಸ್ತ್ರಿಗಳಿಗೆ ಕನ್ನಡದ ಮೇಲೆ ಕನ್ನಡದ ವಿದ್ಯಾರ್ಥಿಗಳ ಮೇಲೆ ಅನುಪಮ ಅಭಿಮಾನ. ಕನ್ನಡ ಆನರ್ಸ್ ಮತ್ತು ಎಂ.ಎ. ತರಗತಿಗಳಲ್ಲಿ ಕನ್ನಡವನ್ನು ಕಲಿಯುವವರು ಯಾವ ಒಂದು ವಿಷಯದಲ್ಲಿಯೂ ಇತರರಿಗೆ ಕಡಮೆಯಿರಬಾರದೆಂದು ಅವರು ಬಯಸುತ್ತಿದ್ದರು. ಹಾಗೇನಾದರೂ ಆದರೆ ಅವರಿಗೆ ಸ್ವಲ್ಪ ನೋವೇ ಆಗುತ್ತಿದ್ದಿತು. ನಾವು ಎರಡನೆಯ ಆನರ್ಸ್ ತರಗತಿಯಲ್ಲಿದ್ದಾಗ ನಡೆದ ಒಂದು ಘಟನೆ ಗಮನಾರ್ಹವಾಗಿದೆ. ಈಗ ಮಹಾರಾಜರ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಡಾ. ಜಿ. ವರದರಾಜರಾವ್ ಮತ್ತು ಸೆಕ್ರಟೇರಿಯಟ್‌ನಲ್ಲಿ ಸೂಪರಿಂಟೆಂಡೆಂಟ್ ಆಗಿರುವ ಶ್ರೀ. ಆರ್. ಎಸ್. ರಾಮರಾವ್ ಕನ್ನಡ ಆನರ್ಸ್‌ನಲ್ಲಿ ನನ್ನ ಸಹಪಾಠಿಗಳು. ಎರಡನೆಯ ಆನರ್ಸ್ ತರಗತಿಯ ಟರ್ಮ್ ಇನ್ನೇನು ಮುಗಿಯಬೇಕು. ಆ ವರ್ಷ ನಾವು ಇಂಗ್ಲಿಷ್, ಕನ್ನಡ ಮತ್ತು ಕರ್ಣಾಟಕದ ಚರಿತ್ರೆ ಮತ್ತು ಸಂಸ್ಕೃತಿ—ಈ ವಿಷಯಗಳ ಪರೀಕ್ಷೆ ಕೊಡಬೇಕಾಗಿದ್ದಿತು. ಕೊನೆಯ ಇಂಗ್ಲಿಷ್ ತರಗತಿಯಲ್ಲಿ ಪ್ರಿನ್ಸಿಪಾಲ್ ರೋಲೋರವರು ಮೊದಲನೆಯ ಟರ್ಮ್ ಪರೀಕ್ಷೆಯ ಇಂಗ್ಲಿಷ್ ಉತ್ತರ ಪತ್ರಿಕೆಗಳನ್ನು ಹಂಚಿದರು. ರೋಲೋರವರು ನಮಗೆ ನಾಟಕವನ್ನು ತೆಗೆದುಕೊಳ್ಳುತ್ತಿದ್ದರು. ನಾಟಕಗಳ ಅದರಲ್ಲೂ ಷೇಕ್ಸ್‌ಪಿಯರನ ನಾಟಕಗಳ ರೋಲೋರವರ ತರಗತಿಯೆಂದರೆ ವಿದ್ಯಾರ್ಥಿಗಳಿಗೆ ಹಬ್ಬ. ಷೇಕ್ಸ್‌ಪಿಯರನ ನಾಟಕಗಳ ಸೊಬಗು

ಸ್ವಾರಸ್ಯಗಳನ್ನು ಅನುಭವಿಸಿ ಆನಂದಿಸಬೇಕಾದರೆ ರೋಲೋರವರ ತರಗತಿಗಳಿಗೆ ಹೋಗಬೇಕು. ನೂರೈವತ್ತು ಜನ ವಿದ್ಯಾರ್ಥಿಗಳು ಕೂರುತ್ತಿದ್ದ ಸೀನಿಯರ್ ಬಿ.ಎ. ಹಾಲ್‌ನಲ್ಲಿ ಅವರ ತರಗತಿಯಲ್ಲಿ ಎಳ್ಳು ಸಿಡಿದರೂ ಕೇಳುವಷ್ಟು ನಿಶ್ಶಬ್ದ. ರೋಲೋರವರ ಇಂಗ್ಲಿಷ್ ತರಗತಿಗಳು ವಿದ್ಯಾರ್ಥಿಗಳಿಗೆ ರಸದೌತಣ. ಆದುದರಿಂದ ವಿದ್ಯಾರ್ಥಿಗಳೂ ವಿಶೇಷ ಆದರಾಭಿಮಾನಗಳಿಂದ ಇಂಗ್ಲಿಷನ್ನು ಅಭ್ಯಸಿಸುತ್ತಿದ್ದರು. ಕನ್ನಡದ ಆನರ್ಸ್‌ನ ವಿದ್ಯಾರ್ಥಿಗಳಾದ ನಾವು ಇದಕ್ಕೆ ಅಪವಾದವೇನೂ ಆಗಿರಲಿಲ್ಲ. ಆದರೆ ರೋಲೋರವರು ತಿದ್ದಿಕೊಟ್ಟ ಉತ್ತರ ಪತ್ರಿಕೆಗಳನ್ನು ನೋಡಿದಾಗ ನಮ್ಮ ನಿರೀಕ್ಷೆಗಿಂತ ಕಡಮೆ ಅಂಕಗಳು ಬಂದಿರುವುದನ್ನು ನೋಡಿ ನಮಗೆ ಮೊದಲಿದ್ದ ಉತ್ಸಾಹ ಇಳಿಯಿತು. ಹೀಗಿರುವಾಗಲೇ ನಮ್ಮ ಮೇಲೆ ಹಠಾತ್ತನೆ ಎರಗಿತು ಪ್ರಿನ್ಸಿಪಾಲರ ವಾಗ್ಝರಿ. ಅವರು ಅಂದು ತುಂಬಿದ ತರಗತಿಯಲ್ಲಿ ಹೇಳಿದ ಮಾತುಗಳು ಇಂದಿಗೂ ಕಿವಿಯಲ್ಲಿ ನಿನದಿಸುತ್ತಿವೆ: "You Votaries of Kannada, what is this antipathy towards English?" "ಕನ್ನಡದ ಭಕ್ತರೇ, ಇಂಗ್ಲಿಷಿನ ಬಗೆಗೆ ಈ ದ್ವೇಷವೇನು?" ಆಂಗ್ಲಾಭಿಮಾನ, ಟೀಕೆ, ನಿಂದೆ ಮೂರೂ ಮುಪ್ಪುರಿಗೊಂಡ ಅವರ ಮಾತು ನಮ್ಮನ್ನು ಭೂಮಿಗಿಳಿಸಿ ಬಿಟ್ಟಿತು. ಅಷ್ಟೇ ಅಲ್ಲ, ತರಗತಿಗೆ ಬರುವುದಕ್ಕೆ ಮೊದಲೇ ನಮ್ಮ ಇಂಗ್ಲಿಷ್ ಅಭ್ಯಾಸದ ಕೊರತೆಯ ವಿಚಾರವಾಗಿ ಪ್ರೊ. ಕೃಷ್ಣಶಾಸ್ತ್ರಿಗಳಿಗೆ ಒಂದು ಕಾಗದವನ್ನು ಬರೆದು ಕಳುಹಿಸಿದ್ದರು. ಇಂಗ್ಲಿಷ್ ತರಗತಿಯ ವಾಗ್ದಂಡನೆಯಿಂದ ಬಿಡುಗಡೆ ಹೊಂದಿ ಕನ್ನಡ ತರಗತಿಗೆ ಬಂದರೆ ಅಲ್ಲಿ ಕಾದಿತ್ತು ರೋಲೋರವರ ಕಾಗದದ ಪ್ರಸ್ತಾಪ. ಬಾಣಲೆಯಿಂದ ಬೆಂಕಿಗೆ ಎಂಬ ಆಂಗ್ಲ ಗಾದೆಯಂತಾಗಿತ್ತು ನಮ್ಮ ಸ್ಥಿತಿ. ಆದರೆ ಹಿಂದಿನ ತರಗತಿಯಲ್ಲಿ ಚಕಿತರಾದಂತೆ ಇಲ್ಲಿಯೂ ಕಾದಿತ್ತು ಒಂದು ಆಶ್ಚರ್ಯ. ಪೂಜ್ಯ ಗುರುಗಳು ಕೋಪಿಸಿಕೊಳ್ಳಲಿಲ್ಲ. ಕೆಲವೇ ದಿವಸಗಳಲ್ಲಿ ಪರೀಕ್ಷೆಯಿರುವಾಗ ನಮ್ಮನ್ನು ಧೈರ್ಯಗೆಡಿಸಲಿಲ್ಲ. ಹೇಗೆ ಅಭ್ಯಾಸ ಮಾಡಿ ಸಫಲರಾಗಬೇಕೆಂದು ತಿಳಿಸಿ ಧೈರ್ಯ ತುಂಬಿದರು. ಆದರೆ ಅದರ ಜತೆಗೇ ಒಂದು ಸತ್ಯವನ್ನು ಕಾಣಿಸಿದರು. ಒಂದು ಸಾಹಿತ್ಯವನ್ನು ಅಭ್ಯಾಸ ಮಾಡುವವನಿಗೆ ಇನ್ನೊಂದು ಸಾಹಿತ್ಯದ ಅಭ್ಯಾಸ ಕಷ್ಟವಾಗಲಾರದು, ಕಷ್ಟವಾಗಬಾರದು. ನಮ್ಮ ಸಾಹಿತ್ಯ ಪ್ರವಾಹ, ಸರ್ವಾಂಗ ಸುಂದರವಾಗಿ ಪರಿಪುಷ್ಟಿಗೊಳ್ಳಬೇಕಾದರೆ ಹೊರಗಿನ ಎಲ್ಲ ಶ್ರೇಷ್ಠಸಾಹಿತ್ಯಗಳ ರಸವಾಹಿನಿಯೂ ಅದಕ್ಕೆ ಸೇರಿಕೊಳ್ಳಬೇಕು. ಆಗ ನಮ್ಮ ಸಾಹಿತ್ಯ ಉನ್ನತವಾಗುತ್ತವೆ. ಭಾಷೆಭಾಷೆಗಳಿಗೆ ವೈಷಮ್ಯವಿಲ್ಲ. ಭಾಷೆಗಳ ಕಾರಣದಿಂದಾಗಿ ಘರ್ಷಣೆಗೆ ಅವಕಾಶವಿರಕೂಡದು. ಇಂದಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಘಟನೆಯನ್ನು ಪರಿಶೀಲಿಸಿದರೆ ನಮಗೆ ಮಾರ್ಗದರ್ಶನವಾದೀತು. ಇಂದು ಇಂಗ್ಲಿಷ್ ಬೇಕು ಎಂಬ ಕೂಗು ಎದ್ದಿದೆ. ಆದರೆ ಆ ಭಾಷೆಯ ಅಭ್ಯಾಸ ನಮ್ಮ ಇಂದಿನ ವಿದ್ಯಾರ್ಥಿಗಳಲ್ಲಿ ಹೇಗೆ ನಡೆದಿದೆ

ಎಂಬುದನ್ನು ನೋಡಿದರೆ ವಿಷಾದವಾಗದೆ ಇರದು. ನಾವು ಅಂದು ಇಂಗ್ಲಿಷ್ ಭಾಷೆಯನ್ನು ಅಭ್ಯಾಸಮಾಡುತ್ತಿದ್ದ ರೀತಿಯನ್ನು ಇಂದಿನ ವಿದ್ಯಾರ್ಥಿಗಳ ಇಂಗ್ಲಿಷ್ ಭಾಷಾಭ್ಯಾಸದ ರೀತಿಗೆ ಹೋಲಿಸಿದರೆ ಇದರ ಅರ್ಥವಾಗುವುದು. ಒಂದು ಇಂಗ್ಲಿಷ್ ಪಠ್ಯಪುಸ್ತಕವನ್ನು ತೆಗೆದುಕೊಂಡರೆ ಅದನ್ನು ಮೊದಲು ಒಂದು ಸಲ ಆಮೂಲಾಗ್ರವಾಗಿ ಓದಿ ಕಷ್ಟವಾದ ಪದಗಳ ಅರ್ಥವನ್ನು ಕೋಶದಲ್ಲಿ ನೋಡಿ ಗುರುತುಮಾಡಿಕೊಳ್ಳುತ್ತಿದ್ದೆವು. ಪಠ್ಯಪುಸ್ತಕದ ಪಾಠವನ್ನು ಅರ್ಥಮಾಡಿಕೊಂಡ ತರುವಾಯ ಆ ಪುಸ್ತಕದ ಮೇಲಿನ ವಿಮರ್ಶಾಗ್ರಂಥಗಳನ್ನು ಪುಸ್ತಕ ಭಂಡಾರದಲ್ಲಿ ಹುಡುಕಿ ತೆಗೆದುಕೊಂಡು ಅವುಗಳನ್ನು ಓದಿ ಟಿಪ್ಪಣಿಗಳನ್ನು ಮಾಡಿಕೊಳ್ಳುತ್ತಿದ್ದೆವು. ಜತೆಗೆ ತರಗತಿಯ ಟಿಪ್ಪಣಿಗಳನ್ನು ಉಪಯೋಗಿಸಿಕೊಂಡು ಉಪಯುಕ್ತವಾದ ಪ್ರಬಂಧಗಳನ್ನು ನಿರೂಪಿಸಿಕೊಳ್ಳುತ್ತಿದ್ದೆವು. ಕೇವಲ ಪರೀಕ್ಷಾ ದೃಷ್ಟಿಯಿಂದ ಆರಿಸಿದ ಪ್ರಬಂಧಗಳನ್ನು ಪೇಟೆಯಲ್ಲಿ ಸಿಗುವ ನೋಟ್ಸುಗಳಿಂದ ಸಿದ್ಧಪಡಿಸಿಕೊಳ್ಳುವ ಬಹುಜನ ವಿದ್ಯಾರ್ಥಿಗಳ ಈಗಿನ ಪದ್ಧತಿಗೂ ಇದಕ್ಕೂ ಎಷ್ಟು ವ್ಯತ್ಯಾಸವಿದೆ ಯೆಂಬುದನ್ನು ಪರಿಗಣಿಸಬಹುದು. ಇಷ್ಟೇ ಅಲ್ಲದೆ ಕನ್ನಡ ಸಾಹಿತ್ಯಾಭ್ಯಾಸಕ್ಕೆ ಸಹಾಯವಾಗುವ ಇಂಗ್ಲಿಷಿನ ವಿಮರ್ಶಾಗ್ರಂಥಗಳನ್ನೂ ಕಾವ್ಯನಾಟಕ ಮೊದ ಲಾದುವುಗಳನ್ನು ಓದಿ ನಮ್ಮ ಜ್ಞಾನಾಭಿವೃದ್ಧಿಮಾಡಿಕೊಳ್ಳುತ್ತಿದ್ದೆವು. ಇಷ್ಟೆಲ್ಲ ಇದ್ದರೂ ಪ್ರಿನ್ಸಿಪಾಲರ ಟೀಕೆ ನಮ್ಮ ಮೇಲೆ ಎರಗದೆ ಬಿಡಲಿಲ್ಲ. ಒಂದು ಭಾಷೆಯ ಸಾಹಿತ್ಯದ ಅಭ್ಯಾಸಕ್ಕೆ ಇನ್ನೊಂದು ಭಾಷೆಯ ಸಾಹಿತ್ಯವು ಸಹಾಯಮಾಡುತ್ತದೆ. ಸಾಹಿತ್ಯದ ಮೌಲ್ಯಮಾಪನ, ವಿಮರ್ಶೆ, ರಸಭಾವಾದಿಗಳ ವಿವೇಚನೆಗಳಿಗೆ ಸಂಬಂಧಿಸಿದ ಮೂಲತತ್ವಗಳು ಎಲ್ಲ ಭಾಷಾ ಸಾಹಿತ್ಯಗಳಿಗೂ ಒಂದೇ ಎಂಬುದನ್ನು ಪೂಜ್ಯಗುರುಗಳು ನಮಗೆ ತಿಳಿಸುತ್ತಿದ್ದರು. ಪ್ರಿನ್ಸಿಪಾಲರ ಮಾತು ನಮಗೆ ಮತ್ತೊಂದುಸಲ ಈ ಸತ್ಯವನ್ನು ನೆನಪುಮಾಡಿಕೊಟ್ಟಿತು.

ಪೂಜ್ಯಗುರುಗಳಾದ ಕೃಷ್ಣಶಾಸ್ತ್ರಿಗಳಲ್ಲಿ ನಾನು ಕಂಡ ಒಂದು ವಿಶೇಷ ವೆಂದರೆ ಅವರ ದೇಹದಾರ್ಢ್ಯ, ಆರೋಗ್ಯ ಮತ್ತು ಅದನ್ನು ಅವರು ಕಾಪಾಡಿ ಕೊಳ್ಳುತ್ತಿದ್ದ ರೀತಿ. ಇದು ನನಗೆ ಒಂದು ವಿಶೇಷಸಂದರ್ಭದಲ್ಲಿ ಪರಿಚಯ ವಾಯಿತು. ನಾನು ಆನರ್ಸ್ ತರಗತಿಯಲ್ಲಿ ಅಧ್ಯಯನ ಮಾಡುತ್ತಿದ್ದಾಗ ನನ್ನ ಆರೋಗ್ಯ ಕೊಂಚ ವ್ಯತ್ಯಾಸವಾಯಿತು. ಆರೋಗ್ಯವೆಂದೂ ಹೇಳಲಾಗದ ಅನಾರೋಗ್ಯವೆಂದೂ ಹೇಳಲಾಗದ ಒಂದು ತ್ರಿಶಂಕುಸ್ಥಿತಿಯಲ್ಲಿದ್ದೆ ನಾನು. ಬೆಳಗಿನ ಜಾವದ ಗಾಳಿಸಂಚಾರ ಆರೋಗ್ಯಕ್ಕೆ ಉತ್ತಮ ಎಂಬುದಾಗಿ ಮಿತ್ರ ರೊಬ್ಬರು ಸಲಹೆಮಾಡಿದರು. ಸರಿ, ಆ ನಿಮಿಷವೇ ನಿರ್ಧಾರಮಾಡಿದೆ. ಮಾರನೆಯ ದಿನ ಬೆಳಗಿನ ಜಾವ ಐದು ಗಂಟೆಗೇ ಎದ್ದು ವಿನೋಬಾ ರಸ್ತೆಯಲ್ಲಿ ಹೊರಟು ರಾಮಸ್ವಾಮಿ ಪಾರ್ಕ್‌ನಲ್ಲಿ ಮುಂದುವರಿಯುತ್ತಿದ್ದೇನೆ. ನನ್ನ ಎದುರುಗಡೆಯಿಂದ ಚುರುಕಾದ ನಡಿಗೆಯಲ್ಲಿ ಯಾರೋ ಬರುತ್ತಿದ್ದರು. ಎದುರುಬದರಾದಾಗ

ಇಬ್ಬರಿಗೂ ಆಶ್ಚರ್ಯ. ಗುರು ಶಿಷ್ಯರ ಅಪೂರ್ವ ಭೇಟಿ ಆ ಪ್ರಶಸ್ತವಾದ ಶಾಂತ ಪ್ರಸನ್ನ ವಾತಾವರಣದಲ್ಲಿ. ಮುಂದೆ ಪ್ರತಿದಿನ ಅದೇ ಹೊತ್ತಿಗೆ ಅದೇ ಸ್ಥಳದಲ್ಲಿ ಗುರು ಶಿಷ್ಯರ ಭೇಟಿ, ಮುಗುಳ್ನಗೆಯ ವಿನಿಮಯ, ನನಗೋ ಹೃದಯದಲ್ಲಿ ಚೈತನ್ಯದ ಸಂಚಾರ, ಆನಂದದ ರಸಬುಗ್ಗೆ, ಒಂದು ತಿಂಗಳಿನಲ್ಲಿ ನಾನು ಮೊದಲಿಗಿಂತಲೂ ಹೆಚ್ಚು ಆರೋಗ್ಯಶಾಲಿಯಾದೆ. ಮುಂಜಾನೆಯ ತಂಗಾಳಿಯ ಸಂಜೀವಿನಿಯ ಫಲವೋ ಇದು, ಗುರುಗಳ ಕೃಪಾರಸ ಪ್ರವಾಹಫಲವೋ. ಫಲ ಮಾತ್ರ ನನ್ನದು.

# ಭಾಷಾಮೈತ್ರಿಯ ಉಪಾಸಕ

....ಬಾಲ್ಯದಲ್ಲಿಯೇ ತಂದೆ ಕಲಿಸಿದ ಸಂಸ್ಕೃತ, ಅನಂತರ ಶಾಲಾ ಕಾಲೇಜುಗಳಲ್ಲಿ ಕಲಿತ ಇಂಗ್ಲಿಷು, ಮುಂದೆ ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಂದ ಕಲಿತ ಕನ್ನಡ, ಆ ಬಳಿಕ ತಾವೇ ಸ್ವಂತವಾಗಿ ಕಲಿತುಕೊಂಡ ಬಂಗಾಳಿ, ತಮಿಳು, ತೆಲುಗು, ಜರ್ಮನ್ ಇತ್ಯಾದಿಗಳಿಂದ ಶಾಸ್ತ್ರಿಗಳು ಭಾಷಾಮೈತ್ರಿಯ ಉಪಾಸಕರಾಗಿ ಬದುಕಿದರು. ಜನ್ಮದಿಂದಲೂ ಜ್ಞಾನದಿಂದಲೂ ಬ್ರಾಹ್ಮಣರಾದವರು ಆಚರಿಸಬೇಕಾದ ಷಟ್ಕರ್ಮಗಳಲ್ಲಿ ಆದ್ಯವೂ ಉಪಾದ್ಯವೂ ಆದ ಅಧ್ಯಯನ ಅಧ್ಯಾಪನಗಳಿಗೆ ಅವರ ಬದುಕು ಮೀಸಲಾಗಿತ್ತು. “ಅರಿವಿಗಿಹ ಕರ್ತವ್ಯ ಭಾರವನು ತಾನರಿತು... ಒಡಲ, ಜಾಣಿನ, ಜೀವಶಕ್ತಿಗಳನೆಲ್ಲವನು ಮುಡುಪುಕೊಟ್ಟು” ಕೃಷ್ಣಶಾಸ್ತ್ರಿಗಳು ಕನ್ನಡದ ಶ್ರೀರಾಮುನಿಗೆ ಭರತನಾದರು........

....ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳಿಗೆ ಪುಸ್ತಕವೆಂದರೆ ಪ್ರಾಣ. ಅವರಿಗೆ ಪುಸ್ತಕವೇ ಪೂಜೆ. ಅವರಿಗೆ ಪುಸ್ತಕವೆಲ್ಲ ಪೂಜೆ.

—ಜಿ. ಪಿ. ರಾಜರತ್ನಂ
(‘ಪ್ರಜಾವಾಣಿ’, ೪ ಫೆಬ್ರವರಿ ೧೯೬೮)

ಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ' 'ನ ಮೇ ದ್ವೇಷ್ಯೋಸ್ತಿ ನ ಪ್ರಿಯಃ' 'ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ' ಎಂಬ ಗೀತಾ ವಾಕ್ಯಗಳು.

### ಇಂದಿನ ಪ್ರಪಂಚ ಮತ್ತು ಅದಕ್ಕೆ ಮಹಾಭಾರತದ ಸಂದೇಶ

ಆಧುನಿಕ ಯುಗದ ಮುಖ್ಯ ಲಕ್ಷಣಗಳು ಮಾನವ ಸ್ವಾತಂತ್ರ್ಯ, ಧನಸಂಪತ್ತು. ಈಗ ಪ್ರತಿಯೊಬ್ಬನೂ ಆದಷ್ಟುಮಟ್ಟಿಗೆ ತಾನು ಸ್ವತಂತ್ರನಾಗಿರಬೇಕೆಂದು ಅಪೇಕ್ಷಿಸುತ್ತಾನೆ. ಆದರೆ ಕಾರ್ಯರೂಪದಲ್ಲಿ ಅದು ಅನೇಕವೇಳೆ ತನಗೆ ಯಾವ ಕಟ್ಟೂ ಬೇಡ, ತಾನು ಯಾರ ಮಾತನ್ನೂ ಕೇಳುವುದಿಲ್ಲ, ತನ್ನ ಇಷ್ಟಬಂದಹಾಗೆ ನಡೆದುಕೊಳ್ಳುತ್ತೇನೆ ಎಂಬಂತೆ ಸ್ವಾಚ್ಛಂದ್ಯವಾಗಿ ಪರಿಣಮಿಸುತ್ತಿದೆ. ಆದ್ದರಿಂದ ಎಲ್ಲ ವಿಧವಾದ ಕಟ್ಟುಗಳೂ ಸಡಿಲಿ, ತಂದೆ-ಮಗ, ಗಂಡ-ಹೆಂಡತಿ, ರಾಜ-ಪ್ರಜೆ, ಗುರು-ಶಿಷ್ಯ,—ದೇವರು-ಭಕ್ತ ಹಾಗಿರಲಿ—ಈ ಸಂಬಂಧಗಳಲ್ಲಿ ಹಿಂದೆ ಇದ್ದ ಭಕ್ತಿ ಗೌರವಗಳು ಹೋಗುತ್ತಿವೆ. ಹಿರಿದುಕಿರಿದು ಮೇಲುಕೀಳು ಎಂಬ ಭಾವನೆಯೇ ಅನ್ಯಾಯವೆಂಬುದು ಕೆಲವರ ಭಾವ. ಹಣವಿದ್ದರೆ ಯಾವ ಸೌಕರ್ಯ ಸೌಭಾಗ್ಯಗಳನ್ನು ಬೇಕಾದರೂ ಪಡೆಯಬಹುದಾಗಿರುವುದರಿಂದ, ಆದಷ್ಟುಬೇಗ ಹೆಚ್ಚು ಹಣ ಸಂಪಾದಿಸುವುದು ಎಲ್ಲರ ಗುರಿಯಾಗಿರುತ್ತದೆ; ಅದನ್ನು ಅಧರ್ಮಕ್ಕೂ ಅನ್ಯಾಯಕ್ಕೂ ಹೇಸದೆ ಸಂಪಾದನೆ ಮಾಡಬೇಕೆನ್ನುತ್ತಾರೆ; ಮಾಡಿಯೂ ಮಾಡುತ್ತಾರೆ. ಆದ್ದರಿಂದ ಸುಳ್ಳು ಮೋಸ ಕೃತ್ರಿಮ ಸ್ಪರ್ಧೆಗಳು ಹೆಚ್ಚಿವೆ. "ಎಲ್ಲ ಪಾಪಗಳಿಗೂ ದುರಾಶೆಯೇ ಮೂಲ" (ಪುಟ ೩೪೬). ಸಾಲದ್ದಕ್ಕೆ ಯಂತ್ರಕೈಗಾರಿಕೆಗಳಿಂದ ಬಂಡವಾಳಗಾರ ಕಾರ್ಮಿಕ ಎಂಬ ವರ್ಗಗಳು ಏರ್ಪಟ್ಟು, ಬಡವರಲ್ಲಿ ಬಡತನವೂ ಐಶ್ವರ್ಯವಂತರಲ್ಲಿ ಐಶ್ವರ್ಯವೂ, ನಿರುದ್ಯೋಗ ಹಸಿವು ಅತೃಪ್ತಿಗಳೂ, ದೊಡ್ಡ ನಗರಗಳೂ ಅವುಗಳ ಕಷ್ಟಗಳೂ, ಆದ್ದರಿಂದ ಅಸಮಾಧಾನಗಳೂ ಹೆಚ್ಚುತ್ತಿವೆ. ವ್ಯಕ್ತಿಗಳಂತೆಯೇ ದೇಶಗಳೂ, ಕೆಲವು ಅತಿಪುಷ್ಟವಾಗಿ, ಮಿಕ್ಕವು ಶೋಷಿಸಿಹೋಗಿವೆ.[74] ಯಂತ್ರಕೈಗಾರಿಕೆಯ ಒಂದು ದೊಡ್ಡ ಲೋಪವೇ ಇದು. ಮತ್ತು, ಯಂತ್ರಕ್ಕೆ ಅಪಾರವಾದ ಕಚ್ಚಾ ಪದಾರ್ಥಗಳನ್ನು ಒದಗಿಸಬೇಕು; ಅವುಗಳಿಂದ ರಾಶಿರಾಶಿಯಾಗಿ ತಯಾರಾದ ಪದಾರ್ಥಗಳನ್ನು ಮಾರಲು ಗಿರಾಕಿಗಳನ್ನು ಹುಡುಕಿಕೊಳ್ಳಬೇಕು; ಇದರಲ್ಲಿ ಒದಗುವ ಸ್ಪರ್ಧೆಗಳನ್ನು ಎದುರಿಸಬೇಕು, ನಿವಾರಿಸಿಕೊಳ್ಳಬೇಕು; ಉತ್ಪನ್ನಗಳು ಅವಶ್ಯವಾಗಿರಲಿ ಬಿಡಲಿ, ಯಂತ್ರಕ್ಕೆ ಬಿಡುವು ಕೊಡದೆ ಕೆಲಸಮಾಡಿಸಬೇಕು. ಇದರಿಂದ ಈಗ ಅತ್ಯಗತ್ಯವಾದ ಅನ್ನ ಬಟ್ಟೆಗಳಿಗಿಂತ ಭೋಗ್ಯವಸ್ತುಗಳೂ, ಅಪಾಯಕರಗಳಾದ ಯುದ್ಧಸಾಮಗ್ರಿಗಳೂ ಉತ್ಪನ್ನವಾಗುತ್ತಿವೆ. ಅಸಮಾಧಾನವಿದ್ದು, ಯುದ್ಧಸಾಮಗ್ರಿ ಕೈಯಲ್ಲಿದ್ದರೆ, ಯುದ್ಧ ಎಷ್ಟುದೂರ? ಯುದ್ಧವಾದರೇ ಕೆಲವರಿಗೆ ಸ್ವಾರ್ಥಸಾಧನೆಯಾಗಿ ಸಂಪತ್ತಿನ ಶೇಖರವಾಗುತ್ತದೆ; ಆದ್ದರಿಂದ ಅವರು ಒಳಗೇ ಅದನ್ನು ಮುಂದುವರಿಸುತ್ತಾರೆ. ಯುದ್ಧವಾದರೆ, ಅಂಥ ಹತ್ತಾರು ಜನರನ್ನು ಹೊರತು ಮಿಕ್ಕವರಿಗೆಲ್ಲಾ ಸರ್ವನಾಶ. ಆದ್ದರಿಂದ ಶಾಂತಿಕಾಲದಲ್ಲಿಯೂ ಜನಸಾಮಾನ್ಯಕ್ಕೆ ಸುಖವಿಲ್ಲ, ಯುದ್ಧಕಾಲದಲ್ಲಿಯೂ ಇಲ್ಲ;

ಎರಡನೆ ಮುದ್ರಣಕ್ಕೆ ಶಾಸ್ತ್ರಿಗಳು ತಿದ್ದಿ ಸಿದ್ಧಗೊಳಿಸಿದ 'ವಚನಭಾರತ'ದ ಒಂದು ಪುಟ

ಎನ್. ಬಸವಾರಾಧ್ಯ

# ಕನ್ನಡ ನಿಘಂಟೂ–ಕೃಷ್ಣಶಾಸ್ತ್ರಿಗಳೂ

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಕನ್ನಡ ನಾಡಿನ ವಿದ್ವನ್ಮಣಿಗಳೂ ಉದ್ದಾಮ ಸಾಹಿತಿಗಳೂ ಶ್ರೇಷ್ಠ ಸಂಶೋಧಕರೂ ಕನ್ನಡ ನಿಘಂಟು ಸಂಪಾದಕ ಸಮಿತಿಯ ಪ್ರಥಮ ಅಧ್ಯಕ್ಷರೂ "ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆ", "ಸ್ವಾಮಿ ಶಿಷ್ಯಸಂವಾದ", "ನಾಗಮಹಾಶಯ", "ಭಾಸಕವಿ", "ಸಂಸ್ಕೃತನಾಟಕ", "ಕವಿಜಿಹ್ವಾಬಂಧನ", "ಭಾಷಣಗಳು ಮತ್ತು ಲೇಖನಗಳು", "ಸರ್ವಜ್ಞ ಕವಿ", "ವಚನಭಾರತ", "ಕಥಾಮೃತ", "ಶ್ರೀಪತಿಯ ಕಥೆಗಳು", "ನಿರ್ಮಲಭಾರತಿ", "ಹರಿಶ್ಚಂದ್ರ ಕಾವ್ಯ ಸಂಗ್ರಹ", "ಬಂಕಿಮಚಂದ್ರ", ಇತ್ಯಾದಿ ಗ್ರಂಥಗಳ ಕರ್ತೃಗಳೂ ಸಂಪಾದಕರೂ, "ಪ್ರಬುದ್ಧ ಕರ್ಣಾಟಕ"ದ ಸಂಸ್ಥಾಪಕರೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರೂ ಇಂಗ್ಲಿಷ್–ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯರೂ ಕನ್ನಡ ನಾಡುನುಡಿಗಳ ಹಿರಿಯ ಅಭಿಮಾನಿಗಳೂ ಆದ ಡಾ|| ಎ. ಆರ್. ಕೃಷ್ಣ ಶಾಸ್ತ್ರಿಗಳವರು ದಿನಾಂಕ ೧–೨–೧೯೬೮ರಂದು ಬೆಂಗಳೂರಿನಲ್ಲಿ ದಿವಂಗತರಾದರೆಂಬ ವಿಷಯವನ್ನು ತಿಳಿದು ಕನ್ನಡ ನಿಘಂಟು ಸಂಪಾದಕ ಸಮಿತಿ ತನ್ನ ಅಪಾರವಾದ ದುಃಖವನ್ನು ಈ ಮೂಲಕ ವ್ಯಕ್ತಪಡಿಸುತ್ತದೆ.

ಕನ್ನಡ ನಿಘಂಟು ರಚನೆಯ ಪ್ರಯತ್ನಕ್ಕೆ ಮೊದಲಿನಿಂದಲೂ ಪ್ರೋತ್ಸಾಹಕರೂ ಆ ಪ್ರಯತ್ನ ಕಾರ್ಯರೂಪಕ್ಕೆ ಬರುವ ಸಮಯದಲ್ಲಿ ಅದಕ್ಕೆ ಒಂದು ಖಚಿತ ರೂಪವನ್ನು ಕೊಟ್ಟವರೂ ನಿಘಂಟು ಸಂಪಾದಕ ಸಮಿತಿ ಪ್ರಾರಂಭವಾದಾಗಿನಿಂದ ಅದರ ಸಂಪಾದಕ ಅಧ್ಯಕ್ಷರಾಗಿದ್ದು ಉದ್ದಕ್ಕೂ ಕಾರ್ಯನಿರ್ದೇಶನಮಾಡಿದವರೂ, ನಿಘಂಟಿನ ಮೊದಲ ಎಂಟು ಪುಟಗಳ ಕರಡುಪ್ರತಿಯನ್ನು ಸಿದ್ಧಪಡಿಸಿ ಪ್ರಕಟಿಸಿದವರೂ ಆದ ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳವರ ಅಮೋಘ ಸೇವೆಯನ್ನು ಸಂಪಾದಕ ಸಮಿತಿ ಅತ್ಯಂತ ಕೃತಜ್ಞತೆಯಿಂದ ನೆನೆಯುತ್ತದೆ. ಈ ಸಂತಾಪ ಸೂಚಕ ನಿರ್ಣಯದಲ್ಲಿ ಶ್ರೀ ಶಾಸ್ತ್ರಿಗಳವರ ಬಹುಮುಖವಾದ ಸೇವೆಯನ್ನು ಮುಕ್ತಕಂಠದಿಂದ ಕೊಂಡಾಡಲಾಗಿದೆ. ಪ್ರಕೃತ ಶ್ರೀ ಶಾಸ್ತ್ರಿಗಳು ಕನ್ನಡ ನಿಘಂಟಿಗೆ ಸಲ್ಲಿಸಿದ ಸೇವೆಯ ಮತ್ತೆ ಕೆಲವು ಅಂಶಗಳನ್ನು ನಿರೂಪಿಸಲಾಗಿದೆ.

ಡಾ॥ ಎ. ಆರ್. ಕೃಷ್ಣಶಾಸ್ತ್ರಿಗಳು ಕನ್ನಡ ನಿಘಂಟು ಸಂಪಾದಕ ಸಮಿತಿಯ ಅಧ್ಯಕ್ಷರಾಗಿದ್ದರು. ಆಗ ಪ್ರಾ॥ ಡಿ. ಎಲ್. ನರಸಿಂಹಾಚಾರ್ಯರು ನಿಘಂಟಿನ ಮುಖ್ಯ ಸಂಪಾದಕರಾಗಿದ್ದರು. ಶ್ರೀ ಡಿ. ಎಲ್. ನರಸಿಂಹಾಚಾರ್ಯರು ಮೈಸೂರಿಗೆ ಹಿಂತಿರುಗಿದ ಮೇಲೆ ಕೆಲಕಾಲ ಡಾ॥ ಕೃಷ್ಣಶಾಸ್ತ್ರಿಗಳೇ ಸಂಪಾದಕರ ಕಾರ್ಯ ವನ್ನೂ ನಿರ್ವಹಿಸುತ್ತಿದ್ದರು. ಈ ಸಂದರ್ಭದಲ್ಲಿ ಅವರು ಸಿದ್ಧಪಡಿಸಿದ್ದು ನಿಘಂಟಿನ ಮೊದಲ ಎಂಟು ಕರಡುಪುಟಗಳು. ಈ ಪುಟಗಳನ್ನು ಸಿದ್ಧಪಡಿಸುವಲ್ಲಿ ಅವರು ಪಟ್ಟಶ್ರಮ ವಹಿಸಿದ ಆಸಕ್ತಿ ಎಷ್ಟೆಂದು ಹೇಳತೀರದು. ಈ ಸಂದರ್ಭದಲ್ಲಿ ಒಂದೆರಡು ಬಾರಿ ಅವರ ಮನೆಗೆ ಹೋಗಿದ್ದಾಗ ನಾನು ಕಂಡದ್ದು ಹಲವಾರು ನಿಘಂಟುಗಳ, ಗ್ರಂಥಗಳ ಮಧ್ಯದಲ್ಲಿ ಮುಳುಗಿಹೋಗಿದ್ದ ಶ್ರೀ ಕೃಷ್ಣಶಾಸ್ತ್ರಿಗಳನ್ನು.

ಡಾ॥ ಕೃಷ್ಣಶಾಸ್ತ್ರಿಗಳು ನಿಘಂಟು ಸಂಪಾದಕ ಸಮಿತಿ ಸಭೆಯ ಅಧ್ಯಕ್ಷತೆ ಯನ್ನು ನಿರ್ವಹಿಸುತ್ತಿದ್ದ ವಿಧಾನವನ್ನು ನಾನು ಕಂಡಿದ್ದೇನೆ. ಯಾವುದಾದ ರೊಂದು ಶಬ್ದ ಚರ್ಚೆಗೆ ಬಂದಾಗ ಮೊದಲು ಸದಸ್ಯರ ಅಭಿಪ್ರಾಯಗಳನ್ನೆಲ್ಲ ಕೇಳಿಕೊಂಡು ಕಡೆಗೆ ತಮ್ಮ ಸ್ಪಷ್ಟ ಅಭಿಪ್ರಾಯವನ್ನು ಸೂಚಿಸಿಬಿಡುತ್ತಿದ್ದರು. ಅರ್ಥಕ್ಕಾಗಿ ಮೀನ ಮೇಷ ಎಣಿಸುವ ಸ್ವಭಾವ ಅವರದಾಗಿರಲಿಲ್ಲ. "ಇಷ್ಟೊಂದು ಜನ ವಿದ್ವಾಂಸರು ಆಲೋಚಿಸಿಕೊಂಡು ಬಂದಿರುವಾಗ ಇವರಿಗೆ ತಿಳಿಯದಿರುವುದು ಬೇರೆ ಇದೆ ಎಂದು ನಾನು ಭಾವಿಸುವುದಿಲ್ಲ. ಒಂದು ವೇಳೆ ಹಾಗೇನಾದರೂ ಇದ್ದಲ್ಲಿ ಮುಂದೆ ಅದನ್ನು ಬದಲಾಯಿಸಿಕೊಳ್ಳೋಣ" ಎಂಬ ನಿರ್ದಿಷ್ಟ ಮನೋ ಭಾವ ಶ್ರೀ ಶಾಸ್ತ್ರಿಗಳವರದು.

ನಿಘಂಟಿನ ಯಾವುದಾದರೊಂದು ಶಬ್ದ ಶಾಸ್ತ್ರಿಗಳ ಮನವನ್ನು ಹೊಕ್ಕಿ ತೆಂದರೆ ಅದರ ತಳಬುಡಗಳನ್ನು ಶೋಧಿಸುವವರೆಗೂ ಅವರಿಗೆ ಸಮಾಧಾನವೇ ಇರುತ್ತಿರಲಿಲ್ಲ. 'ಅತ್ತಿಗೆ' ಎಂಬ ಶಬ್ದದ ಅರ್ಥ ನಿಷ್ಪತ್ತಿಗಳಿಗಾಗಿ ಅವರು ಎಷ್ಟು ಕಷ್ಟಪಟ್ಟರು ಎಷ್ಟುಜನ ವಿದ್ವಾಂಸರೊಡನೆ ಪರ್ಯಾಲೋಚಿಸಿದರು ಎಂಬುದು ನನಗೆ ಗೊತ್ತು. ಕೊನೆಗೆ ಆ ಶಬ್ದದ ಬಗೆಗೆ ಒಂದು ದೀರ್ಘವಾದ ಲೇಖನವನ್ನೇ ಬರೆದು ಪ್ರಕಟಿಸಿದರು.

ಒಮ್ಮೆ 'ಆಯಕ' ಎಂಬ ಶಬ್ದ ಚರ್ಚೆಗೆ ಬಂದಿತು. ಈ ಶಬ್ದ ಶಾಸ್ತ್ರಿಗಳ ಮನಸ್ಸನ್ನು ಸೂರೆಗೊಂಡಿತು. ಅದರ ಒಂದು ಪ್ರಯೋಗ ಹೀಗಿದೆ: ಜೆರಲ್ಗ ಳೊಪ್ಪಿರ್ದುವಾಯಕನಂಘ್ರಿಯುಗಳ ಪಲ್ಲವದಿ (ಮೋಹನ ತರಂಗಿಣಿ ೨೩-೧೪). ಈ ಪ್ರಯೋಗದಲ್ಲಿನ ಶಬ್ದ 'ಅಕ'ವೇ ಅಥವಾ 'ಆಯಕ'ವೇ ಎಂಬುದನ್ನು ನಿರ್ಧರಿಸಬೇಕಾಗಿತ್ತು. ಅದಕ್ಕಾಗಿ ಶ್ರೀ ಶಾಸ್ತ್ರಿಗಳವರು ಮೋಹನ ತರಂಗಿಣಿಯ ಪುಸ್ತಕವನ್ನೆಲ್ಲಾ ಆಮೂಲಾಗ್ರವಾಗಿ ಓದಿ 'ಆಯಕ' ಶಬ್ದದ ಪ್ರಯೋಗಗಳನ್ನೆಲ್ಲಾ ಸಂಗ್ರಹಿಸಿದರು. ಈ ಶಬ್ದ ಮತ್ತಾವ ಕಾವ್ಯದಲ್ಲಿಯೂ ದೊರಕುವುದಿಲ್ಲ. ಕೊನೆಗೆ ಈ ಶಬ್ದ ಆ+ಅಕ ಎಂದು ತೀರ್ಮಾನಿಸಿದರು. ಈ ಸಂದರ್ಭದಲ್ಲಿ ಅವರು ನನಗೆ ಬರೆದ ಪತ್ರವೊಂದನ್ನು ಯಥಾವತ್ತಾಗಿ ಉದ್ಧರಿಸಿದ್ದೇನೆ:–

Mr. N. B.

It is posible that ಆಯುಕ is one word = ಆಕೆ. Telugu scholars derive ಆಕೆ from ಆ+ಅಕ. We must go through the whole of ಮೋಹನ ತರಂಗಿಣಿ carefully and collect all the instances of ಆಯುಕ and ಅಕ್ಕ. If ಆಯುಕ occurs elsewhere they must also be noted. Probably we can get some instances of the kind if we verify all the prayoga's of ಅಕ and ಅಕ್ಕ.

ಡಾ॥ ಕೃಷ್ಣಶಾಸ್ತ್ರಿಗಳ ನೇರ ನಿರ್ದೇಶನದಲ್ಲಿ ಸ್ವಲ್ಪಕಾಲ ಕೆಲಸಮಾಡುವ ಸುಯೋಗ ನನಗೆ ಒದಗಿತ್ತು. ಕಚೇರಿಯಲ್ಲಿ ಆಯಾದಿನ ಆದ ಕೆಲಸವನ್ನೆಲ್ಲಾ ಪರಿಶೀಲಿಸಿ ಸೂಕ್ತ ಸಲಹೆಗಳನ್ನೂ ಸೂಚನೆಗಳನ್ನೂ ಬರೆದು ಕಳಿಸುತ್ತಿದ್ದರು. ಯಾವುದೊಂದು ಕಾಗದ ಪತ್ರವಾಗಲಿ ಅನವಶ್ಯವಾಗಿ ತಡವಾಗಬಾರದು ಎಂದು ಹೇಳಿ ಪಾದರಸದಂತೆ ಕೆಲಸಮಾಡುತ್ತಿದ್ದವರು ಶ್ರೀ ಶಾಸ್ತ್ರಿಗಳು. ಅವರ ಕರ್ತವ್ಯ ನಿಷ್ಠೆ ಮೆಚ್ಚತಕ್ಕಂತಹದು.

ಡಾ॥ ಕೃಷ್ಣಶಾಸ್ತ್ರಿಗಳು ಹಲವಾರು ಭಾಷೆಗಳಲ್ಲಿ ಪಾರಂಗತರು. ಈ ಮೊದಲು ಹೇಳಿರುವ ಅವರ ಒಂದೊಂದು ಕೃತಿಯೂ ಅವರ ಅಪಾರ ವಿದ್ವತ್ತಿಗೆ ಸಾಕ್ಷೀ ಭೂತವಾಗಿ ನಿಂತಿವೆ. ಶ್ರೀ ಶಾಸ್ತ್ರಿಗಳು ಕನ್ನಡಕ್ಕೆ ಸಲ್ಲಿಸಿರುವ ಸೇವೆಯಿಂದ ಅವರ ಹೆಸರು ಚಿರಸ್ಥಾಯಿಯಾಗಿ ನಿಲ್ಲುವಂತಹದಾಗಿದೆ. ಇಂದು ಅವರು ನಮ್ಮ ಕಣ್ಣು ಮುಂದೆ ಇಲ್ಲದಿದ್ದರೂ ಅವರ ಅಮರಕೃತಿಗಳಿಂದ ಕನ್ನಡ ಸಾರಸ್ವತಲೋಕದಲ್ಲಿ ಚಿರಂಜೀವಿಗಳಾಗಿದ್ದಾರೆ.

# ಶಾಸ್ತ್ರಿಗಳ ಸೂಕ್ತಿಗಳು

**ಕವಿಕರ್ಮ :**

ಮನೆಯಲ್ಲಿರುವ ಒಂದೆರಡು ಸಾಮಗ್ರಿಗಳಿಂದಲೇ, ಮೂರು ನಾಲ್ಕು ಪಾತ್ರೆಗಳಲ್ಲಿಯೇ, ಹತ್ತಾರು ರುಚಿರುಚಿಯಾದ ಅಡಿಗೆ ಮಾಡಬಲ್ಲ ನಿಪುಣೆಯಾದ ಗೃಹಿಣಿಯಂತೆ, ಕವಿಯು ಮುಂದಿರುವ ಒಂದೆರಡು ಪಾತ್ರೆಗಳಲ್ಲಿಯೇ, ಹಳೆಯ ಕಥಾಸಾಮಗ್ರಿಗಳಿಂದಲೇ, ಸುಂದರ ವಾಗಿ ಕಂಗೊಳಿಸುವ ಮನೋಹರವಾದ ರಸಪದಾರ್ಥಗಳನ್ನು ಸೃಷ್ಟಿಸಿದ್ದಾನೆ.

(ಭಾಸಕವಿ. ಪು. ೫೯)

* * *

**ಭಾಸನ ಕಲೆ**

ಮಹಾಭಾರತವು ಒಂದು ಮಹಾರಣ್ಯ, ವಿರಾಟಪರ್ವವು ಅದರಲ್ಲಿ ಒಂದು ಮರ. ಇದರ ಒಂದು ತುಂಡನ್ನು ತೆಗೆದುಕೊಂಡು ಭಾಸನು ಕೊಚ್ಚಿ, ಕೆತ್ತಿ, ನಯಮಾಡಿ, ಜೋಡಿಸಿ, ಮಧ್ಯೆ ಮಧ್ಯೆ ದಂತದ ಚಿತ್ರಗಳಿಂದ ಅಲಂಕರಿಸಿ ಹದವಾದ ತಂತಿಗಳನ್ನು ಕಟ್ಟಿ ಶ್ರುತಿಮಾಡಿ ನುಡಿಸುತ್ತಿದ್ದಾನೆ.

(ಅದೇ. ಪು. ೯೮)

* * *

**ಸೀತೆಯ ಭಾಗ್ಯ :**

ಸೀತೆಯ ಪಾಲಿಗೆ ಬಂದದ್ದೇನು ?–ಕಾಡು, ದೂರು, ದುಃಖ.

(ಸಂಸ್ಕೃತ ನಾಟಕ, ಪು. ೨೨೬)

* * *

**ಕಾಳಿದಾಸನ ಪಾತ್ರಗಳು :**

ಇರಾವತಿ, ಕೋಪಮಾತ್ಸರ್ಯಗಳ ಮುದ್ದೆಯಾದ ಹುಳಿಗಾಯಿ ; ಧಾರಿಣೀ ಔಶೀನರೀ ದೇವಿಯರು ವಿಧಿಯಿಲ್ಲದೆ ಬಂದಾಗ ಗಂಡನೊಡನೆ ಹೇಗೋ ಹಾಗೆ ಸಮಾಧಾನ ಮಾಡಿ ಕೊಂಡಿದ್ದ ದೋರೆಹಣ್ಣುಗಳು ; ಶಕುಂತಲೆ ಪತಿಗೋಸ್ಕರ ಪೂರ್ಣ ಸ್ವಾರ್ಥತ್ಯಾಗಮಾಡಿದ ಮೃದುಮಧುರವಾದ ಅಖಂಡ ಪುಣ್ಯಫಲ.

(ಅದೇ. ಪು, ೧೫೪)

ಎಚ್. ಜಿ. ಸೂರ್ಯನಾರಾಯಣರಾವ್

# ನಾಗಮಹಾಶಯ

ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಬಹುಭಾಷಾ ಪಂಡಿತರು. ಬೇರೆ ಬೇರೆ ಭಾಷೆಗಳ ಸಾಹಿತ್ಯದ ಆಳವಾದ ಅಭ್ಯಾಸದಿಂದ ಪಡೆದ ವಿದ್ವತ್ತನ್ನು ಅವರು ಕನ್ನಡ ನುಡಿಗೆ ಧಾರೆಯೆರೆದರು. ಬಂಗಾಳಿ ಭಾಷೆಯಲ್ಲಿ ಅವರಿಗಿದ್ದ ಪರಿಶ್ರಮ ಕೆಲವು ಉತ್ತಮ ಗ್ರಂಥಗಳನ್ನು ಕೊಟ್ಟಿದೆ. ಶ್ರೀ ರಾಮಕೃಷ್ಣ ಪರಮಹಂಸರ ಜೀವನ ವನ್ನು ಕುರಿತು ಇವರೂ ಶ್ರೀ ಟಿ ಎಸ್. ವೆಂಕಣ್ಣಯ್ಯನವರೂ ಸೇರಿ ಬಹಳ ವರ್ಷಗಳ ಹಿಂದೆಯೇ ಒಂದು ಚಿಕ್ಕಪುಸ್ತಕವನ್ನು ಬರೆದರು. ಶ್ರೀ ರಾಮಕೃಷ್ಣರ ಗೃಹಸ್ಥಭಕ್ತರ ಪೈಕಿ ಅಗ್ರಗಣ್ಯರಾದ ಶ್ರೀ ನಾಗಮಹಾಶಯರ ಜೀವನಚರಿತ್ರೆಯ ಅನುವಾದವೂ, ಬಂಗಾಳಿ ಭಾಷೆಯಲ್ಲಿ ಶ್ರೇಷ್ಠ ಕಾದಂಬರಿಕಾರರಾದ ಶ್ರೀ ಬಂಕಿಮಚಂದ್ರ ಚಟರ್ಜಿಯವರ ಜೀವನ ಮತ್ತು ಕೃತಿಗಳ ಮೇಲೆ ಬರೆದ ವಿಸ್ತಾರ ವಾದ ವಿಮರ್ಶಾತ್ಮಕ ಗ್ರಂಥವೂ ಪ್ರಸಿದ್ಧವಾದುವು. ಇವುಗಳ ಮೂಲಕ ಶ್ರೀ ಕೃಷ್ಣಶಾಸ್ತ್ರಿಗಳು ಬಂಗಾಳಿ ಪ್ರಾಂತದ ವಿಶಿಷ್ಟ ಸಂಸ್ಕೃತಿಯ ತಿಳಿವಳಿಕೆಯನ್ನು ಮಾಡಿಕೊಟ್ಟು, ಈಚೀಚೆಗೆ ನಾವು ಕೇಳುತ್ತಿರುವ ಭಾವೈಕ್ಯತೆಯ ಕೆಲಸವನ್ನು ಹೆಚ್ಚು ಪರಿಣಾಮಕಾರಿಯಾಗಿಯೂ ಪ್ರತಿಭಾಪೂರ್ಣವಾಗಿಯೂ ಅನೇಕ ವರ್ಷಗಳ ಹಿಂದೆಯೇ ಸಾಧಿಸಿದ್ದಾರೆ.

ಶಾಸ್ತ್ರಿಗಳು ವಿದ್ಯಾರ್ಥಿಯಾಗಿದ್ದಾಗಲೇ ಸ್ವಾಮಿವಿವೇಕಾನಂದರ "ಕೊಲಂಬೋದಿಂದ ಆಲ್ಮೋರಕ್ಕೆ" ಎಂಬ ಇಂಗ್ಲಿಷ್ ಉಪನ್ಯಾಸಗ್ರಂಥವನ್ನು ಓದಿದ್ದರು. ಅವರು ಮೈಸೂರಿನಿಂದ ಬೆಂಗಳೂರಿಗೆ ಹೋದಾಗ ತಮ್ಮ ಪರಮ ಮಿತ್ರರಾದ ಶ್ರೀ ಟಿ. ಎಸ್. ವೆಂಕಣ್ಣಯ್ಯನವರ ಜೊತೆ ರಾಮಕೃಷ್ಣಾಶ್ರಮಕ್ಕೆ ಹೋಗಿಬರುತ್ತಿದ್ದರು. ಆಗ ಶ್ರೀ ರಾಮಕೃಷ್ಣರ ಜೀವನ, ಲೀಲಾಪ್ರಸಂಗ ಮತ್ತು ಉಪದೇಶಗಳನ್ನು ಹೆಚ್ಚಾಗಿ ಓದಿ ತಿಳಿದುಕೊಳ್ಳುವುದಕ್ಕೂ, ಆಗ ಆಶ್ರಮದ ಅಧ್ಯಕ್ಷ ರಾಗಿದ್ದ ಸ್ವಾಮಿ ನಿರ್ಮಲಾನಂದರೊಡನೆ ವಿಚಾರವಿನಿಮಯ ಮಾಡಿಕೊಳ್ಳುವು ದಕ್ಕೂ ಅವಕಾಶವಾಯಿತು. ಆ ಪ್ರಭಾವದ ಫಲವೇ ಅವರು ಕೆಲವು ವರ್ಷಗಳ ನಂತರ (೧೯೩೯) ಬರೆದ ಶ್ರೀ ನಾಗಮಹಾಶಯರ ಜೀವನ. ಈ ಪುಸ್ತಕ ಶ್ರೀ

ಶರಚ್ಚಂದ್ರ ಚಕ್ರವರ್ತಿಯವರ ಬಂಗಾಳಿ ಮೂಲ ಕೃತಿಯಿಂದ ಕನ್ನಡಿಸಲ್ಪಟ್ಟಿದ್ದರೂ ಇದನ್ನು ಓದುತ್ತಿರುವಾಗ ಕನ್ನಡದಲ್ಲಿಯೇ ಸ್ವತಂತ್ರವಾಗಿ ಬರೆಯಲ್ಪಟ್ಟಿದೆಯೋ ಎನ್ನಿಸುವಷ್ಟು, ಸರಳ ಸುಂದರ ಶೈಲಿಯಲ್ಲಿದೆ. ಇದು ಮೂಲಕೃತಿಯ ಲೇಖಕರ ಸಾಮರ್ಥ್ಯಕ್ಕೂ ಅನುವಾದ ಮಾಡಿದವರ ಜಾಣ್ಮೆಗೂ ಶೈಲಿಗೂ ಕೀರ್ತಿತರುವ ವಿಚಾರ. ಕೆಲವು ಸಾರಿ ತರ್ಜುಮೆ ಮಾಡುವವರು ಪ್ರತಿಯೊಂದು ಭಾಷೆಗಿರುವ ತನ್ನದೇ ಆದ ನುಡಿಗಟ್ಟನ್ನು ಮರೆತು ತಮ್ಮ ಭಾಷಾಂತರವನ್ನು ಯಾಂತ್ರಿಕವಾಗಿ ಮಾಡುವರು. ಉದಾಹರಣೆಗೆ ಬಂಗಾಲಿಯಲ್ಲಿ ಸಂಸ್ಕೃತ ಪದಗಳ ಬಳಕೆ ಹೆಚ್ಚಾಗಿದೆ. ಕನ್ನಡದಲ್ಲಿ ಅವನ್ನು ಹಾಗೆಯೇ ಉಪಯೋಗಿಸಿದರೆ ಶೈಲಿಯು ಸಂಸ್ಕೃತ ಭೂಯಿಷ್ಠ ವಾಗುತ್ತದೆ. ಅನುವಾದದಲ್ಲಿ ಈ ದೋಷವಿರಬಾರದು. ಈ ದೃಷ್ಟಿಯಿಂದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳ 'ನಾಗಮಹಾಶಯ' ಭಾಷಾಂತರ ಮಾಡುವವರಿಗೆಲ್ಲಾ ಮಾದರಿಯಾಗಿದೆ.

ನಾಗಮಹಾಶಯರು ಅಪರೂಪವಾದ ವ್ಯಕ್ತಿ. ಅವರ ಭಕ್ತಿ ಭಾವಗಳು, ಸಾಧನೆಯ ರೀತಿಗಳು ವಿಲಕ್ಷಣವಾಗಿದ್ದವು. ಶ್ರೀ ರಾಮಕೃಷ್ಣ ಪರಮಹಂಸರ ಮಾತನ್ನು ವೇದವಾಕ್ಯದಂತೆ ನಡೆಸಿ ತಮ್ಮ ಜೀವನವನ್ನೆಲ್ಲಾ ಗುರುವಿನ ಪೂಜ್ಯ ಪಾದಗಳಲ್ಲಿ ಅರ್ಪಿಸಿ ತಮ್ಮ ಬಾಳನ್ನು ಬೆಳಗಿಸಿಕೊಂಡ ಮಹಾವ್ಯಕ್ತಿ. ಅವರು ಗೃಹಸ್ಥರಾಗಿದ್ದರೂ ಯಾವ ಬ್ರಹ್ಮಚಾರಿಗೂ ಸಾಧ್ಯವಾಗದ ಸಂಯಮಶೀಲವಾದ ಮತ್ತು ತ್ಯಾಗಮಯವಾದ ಜೀವನವನ್ನು ನಡೆಸಿ, ಪರಮಹಂಸರ ಪೂರ್ಣ ಕೃಪೆಗೆ ಪಾತ್ರರಾದರು. ಗಿರೀಶ ಚಂದ್ರಘೋಷ್, ವಿವೇಕಾನಂದ, ಬ್ರಹ್ಮಾನಂದ ಮೊದಲಾಗಿ ಶ್ರೀ ರಾಮಕೃಷ್ಣರ ಶಿಷ್ಯರೆಲ್ಲಾ ಇವರನ್ನು ಕೊಂಡಾಡಿದರು. ಇವರ ಅಮೋಘ ವ್ಯಕ್ತಿತ್ವವನ್ನು ಶ್ರೀ ವಿವೇಕಾನಂದರು ಈ ರೀತಿ ಬಣ್ಣಿಸಿದರು: "ನಾನು ಪ್ರಪಂಚದ ಅನೇಕ ಕಡೆ ತಿರುಗಿ ಬಂದಿದ್ದೇನೆ. ಆದರೆ ನಾಗಮಹಾಶಯರಂತಹ ಮಹಾತ್ಮರನ್ನು ಎಲ್ಲಿಯೂ ಕಾಣಲಿಲ್ಲ." ಇಂತಹ ಭಕ್ತರ ಜೀವನವನ್ನು ತಿಳಿಯುವುದು ಆಧ್ಯಾತ್ಮ ಜೀವನದಲ್ಲಿ ಶ್ರದ್ಧೆಯಿರುವ ಪ್ರತಿಯೊಬ್ಬರಿಗೂ ಬೋಧ ಪ್ರದವಾಗಿರುತ್ತದೆ. ಇವರ ಬಗ್ಗೆ ಮೊದಲು ಬರೆದದ್ದು ಬಂಗಾಳಿಯಲ್ಲಿ ಶ್ರೀ ಶರಚ್ಚಂದ್ರ ಚಕ್ರವರ್ತಿಗಳು. ಅವರು ಅರಿಕೆಮಾಡಿಕೊಂಡಿರುವಂತೆ ಶ್ರೀ ನಾಗಮಹಾಶಯರ ದಿವ್ಯ ಜೀವನವು ಅವರ ಧಾರ್ಮಿಕಜೀವನದಲ್ಲಿ ಬೆಳಕು ಚೆಲ್ಲಿತು. ಈ ಕೆಲಸಕ್ಕೆ ಶ್ರೀ ಗಿರೀಶ ಚಂದ್ರಘೋಷ್ ಮತ್ತು ಸ್ವಾಮಿ ಶಾರದಾನಂದರ ಆಶೀರ್ವಾದವೂ, ಪ್ರೋತ್ಸಾಹವೂ ದೊರೆಯಿತು. ಇಂತಹ ಅಪರೂಪ ಜೀವನ ಚರಿತ್ರೆಯನ್ನು ಕನ್ನಡದಲ್ಲಿ ಅನುವಾದಮಾಡಿ ಶ್ರೀ ಕೃಷ್ಣಶಾಸ್ತ್ರಿಗಳು ತುಂಬ ಉಪಕಾರ ಮಾಡಿರುವರು.

ಶ್ರೀ ನಾಗಮಹಾಶಯರು ಜನ್ಮತಾಳಿದ್ದು ೧೮೪೬ನೇ ಇಸವಿ ಆಗಸ್ಟ್ ಇಪ್ಪತ್ತೊಂದನೇ ತಾರೀಖು, ಪೂರ್ವ ಬಂಗಾಳಕ್ಕೆ ಸೇರಿದ್ದ ದೇವಭೋಗದಲ್ಲಿ.

ತಾಯಿ ತ್ರಿಪುರಸುಂದರಿ ಇವರ ಬಾಲ್ಯದಲ್ಲಿಯೇ ತೀರಿಕೊಂಡಿದ್ದರಿಂದ, ಸೋದರತ್ತೆ ಭಗವತಿಯ ಲಾಲನೆ ಪೋಷಣೆಯಲ್ಲಿ ಬೆಳೆದರು. ಮಗುವಾಗಿದ್ದಾಗಿನಿಂದಲೂ ಇವರ ಮಾತುಕತೆ ಬಲು ನಯದಿಂದ ಕೂಡಿತ್ತು. ಬಡವರ ಮನೆಯಲ್ಲಿ ಹುಟ್ಟಿದ್ದರಿಂದ ಜೀವನದ ಕಷ್ಟಸುಖಗಳ ಅರಿವು ಚೆನ್ನಾಗಿತ್ತು. ಇವರ ವಿದ್ಯಾಹಂಬಲ ಎಷ್ಟು ತೀಕ್ಷ್ಣವಾಗಿತ್ತೆಂಬುದಕ್ಕೆ ಇವರು ಡಾಕಾ ಸ್ಕೂಲಿಗೆ ತಾವೇ ಹೋಗಿ ಸೇರಿದ್ದು, ಹದಿನೈದು ತಿಂಗಳು ಪ್ರತಿದಿನವೂ ಇಪ್ಪತ್ತು ಮೈಲಿ ನಡೆದುಹೋಗಿ ಬರುತ್ತಿದ್ದುದು, ಸಾಕ್ಷಿಯಾಗಿವೆ. ನಂತರ ಕಲ್ಕತ್ತೆಗೆ ವೈದ್ಯವನ್ನು ಓದಲು ಹೋದರು. ಇವರು ಮುಂದೆ ಹೋಮಿಯೋಪತಿಯಲ್ಲಿ ಸಿದ್ಧಹಸ್ತರಾದರು. ಇವರು ತಮ್ಮ ವೈದ್ಯವನ್ನು ಸಂಪಾದನೆಗೆ ಉಪಯೋಗಿಸದೆ ಪರೋಪಕಾರಕ್ಕೆ ಮುಡಿಪಾಗಿಟ್ಟರು. ಇವರ ಮೊದಲನೆಯ ಹೆಂಡತಿ ಪ್ರಸನ್ನಕುಮಾರಿ ಅಕಾಲ ಮರಣಕ್ಕೆ ತುತ್ತಾದಾಗ ಇವರಿಗೆ ವೈರಾಗ್ಯ ಬುದ್ಧಿ ಅಧಿಕವಾಯಿತು. ಆಗ ಇವರ ಜಪತಪ ಕಠೋರ ಸಾಧನೆಗಳು ಪ್ರಾರಂಭವಾದವು. ಇವರ ತಂದೆ ದೀನದಯಾಳು ಇವರ ಮನಸ್ಸನ್ನು ಲೌಕಿಕದಕಡೆ ತಿರುಗಿಸಲು ಎರಡನೇ ಮದುವೆಯನ್ನು ಸೂಚಿಸಿದಾಗ, ಸಾಂಸಾರಿಕ ಜೀವನ ನಡೆಸಲು ಸ್ವಲ್ಪವೂ ಮನಸ್ಸಿಲ್ಲದಿದ್ದರೂ, ತಂದೆಯ ಮನಸ್ಸನ್ನು ಸಂತೋಷ ಪಡಿಸಲು ಒಪ್ಪಿದರು. ಇವರಿಗೆ ದೊರೆತ ಎರಡನೆಯ ಹೆಂಡತಿಯೂ ಮಹಾ ಸಾಧ್ವಿ. ಗಂಡನ ಸಾಧನೆಗೆ ಸ್ವಲ್ಪವೂ ಅಡ್ಡಬರದೆ ತಮ್ಮಬಾಳನ್ನು ಅವರ ಪವಿತ್ರ ಸೇವೆಯಲ್ಲಿಯೇ ಸಾರ್ಥಕ ಮಾಡಿಕೊಂಡರು.

ನಾಗಮಹಾಶಯರು ದಕ್ಷಿಣೇಶ್ವರದಲ್ಲಿ ಶ್ರೀ ರಾಮಕೃಷ್ಣರ ದರ್ಶನ ಪಡೆದ ಸಂದರ್ಭದಿಂದ ಅವರ ಜೀವನದಲ್ಲಿ ಆಧ್ಯಾತ್ಮಿಕ ಕ್ರಾಂತಿಯುಂಟಾಯಿತು. ಪರಮಹಂಸರು ಅವರಿಗೆ "ಮನೆಯಲ್ಲೇ ಇರಿ" ಎಂದು ಹೇಳಿದ ಮಾತನ್ನು ಆಜ್ಞೆ ಎಂದು ಭಾವಿಸಿ ಜೀವನದ ಕೊನೆಯ ಘಳಿಗೆಯವರೆವಿಗೂ ಗುರುಸ್ಮರಣೆಯಲ್ಲಿಯೂ, ಭವತಾರಿಣಿಯ ಕೃಪೆ ಹಂಬಲಿಸುತ್ತಲೂ ಕಳೆದರು. ಅವರ ವಿನಯ, ಸಹನೆ, ಕ್ಷಮೆ, ಸಾತ್ವಿಕತೆ, ಅಹಿಂಸೆ, ದಯೆ, ಅತಿಥಿಸತ್ಕಾರ, ತಂದೆಯಸೇವೆ, ಬ್ರಹ್ಮಚರ್ಯ, ಕಠೋರ ಸಾಧನೆ ಇವೆಲ್ಲಾ ಲೋಕವನ್ನು ಅಚ್ಚರಿಗೊಳಿಸುವಂತಹವು. ಅಹಂಕಾರದ ಲವಲೇಶವೂ ಅವರಲ್ಲಿರಲಿಲ್ಲವೆಂಬುದಕ್ಕೆ ಹಲವಾರು ಪ್ರಸಂಗಗಳನ್ನು ನಾವು ನೋಡುತ್ತೇವೆ. ದಾರಿಯಲ್ಲಿ ಮುಂದೆ ಹೋಗುವವರನ್ನು ದಾಟಿ ಹೋಗದಷ್ಟು ದೈನ್ಯತೆ, ಪ್ರಸಾದ ಕೊಟ್ಟರೆ ಎಲೆಯನ್ನು ಬಿಡದೆ ತಿನ್ನುವ ಭಕ್ತಿ, ವೈದ್ಯ ವೃತ್ತಿಯಲ್ಲಿ ಯಾರಾದರೂ ಹಣಕೊಟ್ಟರೆ ಅಳುವುದರಷ್ಟರಮಟ್ಟಿನ ನಿರ್ಲೋಭತನ, ಎಷ್ಟೇ ಕಷ್ಟವಾದರೂ ಮನೆಗೆ ಬರುತ್ತಿದ್ದ ಅನೇಕ ಭಕ್ತರನ್ನು ಆದರಿಸುತ್ತಿದ್ದ ಪ್ರೇಮ, 'ಎನಗಿಂತ ಕಿರಿಯರಿಲ್ಲ' ಎಂಬ ನಿಜವಾದ ದೈನ್ಯಭಾವ, ಮದುವೆ ಮಾಡಿಕೊಂಡು ಸಂಸಾರವೆಂಬ ಘೋರ ಜ್ವಾಲೆಯ ಮಧ್ಯೆ ಇದ್ದರೂ ಸ್ವಲ್ಪವೂ ಅದರ ತಾಪಕ್ಕೆ ಒಳಗಾಗದಂತಹ ಬ್ರಹ್ಮಚರ್ಯ, ತಂದೆಯು ಸಿಟ್ಟಿನಲ್ಲಿ ಇವರ ಬಗ್ಗೆ, "ಕಪ್ಪೆಯನ್ನು

ತಿಂದು ಬದುಕುತ್ತೀಯಾ?" ಎಂದು ಆಡಿದ ಮಾತಾದರೂ ಅಲ್ಲೇ ಸತ್ತು ಬಿದ್ದಿದ್ದ ಕಪ್ಪೆಯನ್ನು ತಕ್ಷಣ ತಿಂದು ತಂದೆಯ ಮಾತಿಗೆ ಗೌರವತೋರಿಸಿದ್ದು, ಪರಮಗುರು ಪರಮಹಂಸರಲ್ಲಿ ಅವರಿಗಿದ್ದ ಅನನ್ಯಭಕ್ತಿ—ಈ ರೀತಿಯ ಅಲೌಕಿಕ ವ್ಯಕ್ತಿ ಶ್ರೀ ನಾಗಮಹಾಶಯರು. "ಮಹಾ ಮಾಯೆಯು ನಾಗಮಹಾಶಯರನ್ನು ಎಷ್ಟೆಷ್ಟು ಕಟ್ಟುವುದಕ್ಕೆ ಹೋದರೆ ಅಷ್ಟಷ್ಟು ಸೂಕ್ಷ್ಮವಾಗುತ್ತಾ ಕೊನೆಗೆ ಮಾಯಾ ಬಲೆಯ ಕಂಡಿಯಿಂದ ನುಸುಳಿಕೊಂಡು ಹೋದರು" ಎಂದು ಶ್ರೀ ಗಿರೀಶ ಚಂದ್ರರು ಇವರ ಬಗ್ಗೆ ಹೇಳಿದಮಾತು ಎಷ್ಟು ಸತ್ಯವಾದುದು!

'ಶರಣರನ್ನು ಮರಣದಲ್ಲಿ ನೋಡು' ಎಂಬ ಮಾತನ್ನು ಇವರಲ್ಲಿ ಚೆನ್ನಾಗಿ ನೋಡಬಹುದು. ೧೮೯೯ನೇ ಇಸವಿಯಲ್ಲಿ ಇವರು ಮಹಾಸಮಾಧಿಯನ್ನು ಪಡೆದರು. ಕಡೇ ಕಾಲದಲ್ಲಿ ಇವರ ಜೊತೆಯಲ್ಲಿದ್ದ, ಇವರ ಭಕ್ತರಾದ ಚಕ್ರವರ್ತಿಗಳು ಆ ಕೊನೆಯ ದಿನಗಳನ್ನು ನಾಗಮಹಾಶಯರು ಹೇಗೆ ಕಳೆದರೆಂಬುದನ್ನು ವಿವರಿಸಿದ್ದಾರೆ. ಅವರು ತಲೆನೋವಿನ ಬೇನೆಯಿಂದಾಗಿ ಸುಮಾರು ಇಪ್ಪತ್ತು ವರ್ಷಗಳ ಕಾಲ ಸ್ನಾನಮಾಡಿರಲಿಲ್ಲವಂತೆ. ಕಡೇ ಕಾಲದಲ್ಲಿ ಹತ್ತಿರವಿದ್ದ ಚಕ್ರವರ್ತಿಗಳಿಗೆ ಅವರು ನೋಡಿ ಬಂದಿದ್ದ ತೀರ್ಥಕ್ಷೇತ್ರಗಳನ್ನೆಲ್ಲಾ ಒಂದೊಂದಾಗಿ ತಿಳಿಸುವಂತೆ ಕೇಳಿಕೊಂಡರು. ಅವರು ಕ್ರಮವಾಗಿ ಹರಿದ್ವಾರ, ಪ್ರಯಾಗ, ಕಾಶಿ, ಜಗನ್ನಾಥ ಕ್ಷೇತ್ರ ಮೊದಲಾದ ಪುಣ್ಯ ಕ್ಷೇತ್ರಗಳ ಹೆಸರುಗಳನ್ನು ಕೇಳುತ್ತಾ ಆಯಾ ಪುಣ್ಯ ನದಿಗಳಲ್ಲಿ ಸ್ನಾನಮಾಡಿ ಆ ದೇವತೆಗಳ ದರ್ಶನ, ಆ ಸ್ಥಳಗಳ ಪ್ರತ್ಯಕ್ಷ ದರ್ಶನ ಮಾಡಿದವರಂತೆ ವಿವರಿಸುತ್ತಿದ್ದರಂತೆ. ಶ್ರೀ ರಾಮಕೃಷ್ಣರ ಹೆಸರು ಅವರ ಕಿವಿಗಳಲ್ಲಿ ಸಂತತವಾಗಿ ಉಚ್ಚರಿಸಲ್ಪಡುತ್ತಿತ್ತು. ಅವರ ಮುಂದೆ ಹಿಡಿದಿದ್ದ ಭಗವಾನ್ ರಾಮಕೃಷ್ಣರ ಪಟಕ್ಕೆ ಕೈಮುಗಿದು 'ಕೃಪಾ, ನಿಮ್ಮ ಕೃಪಾ' ಎಂದದ್ದೇ ಅವರ ಕೊನೆ ಉಸಿರಾಯಿತು.

ಇಂತಹ ಸಂತರ ಜೀವನ ಬಹುಮಟ್ಟಿಗೆ ಅಂತರ್ಮುಖವಾದದ್ದು. ಅವರ ಬಹಿರಂಗ ವ್ಯಾಪಾರಗಳಲ್ಲಿ ಸ್ವಲ್ಪಮಟ್ಟಿಗೆ ಮಾತ್ರ ಅವರ ಮಹಿಮೆ ಪ್ರಕಟವಾಗುತ್ತದೆ. ಅಷ್ಟು ಸ್ವಲ್ಪ ವಿಚಾರಗಳೇ ನಮಗೆ ಜೀವನದ ಧನ್ಯತೆಯ ಕಲ್ಪನೆಯನ್ನು ಕೊಡುತ್ತವೆ. ಆ ಶ್ರೇಣಿಗೆ ಸೇರಿದ ಮಹಾಮಹಿಮರು ಶ್ರೀ ನಾಗಮಹಾಶಯರು. ಕವಿ ಶ್ರೀ ಪು. ತಿ. ನ. ಹೇಳಿರುವಂತೆ "ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಕನ್ನಡಿಸಿರುವ ನಾಗಮಹಾಶಯರ ಜೀವನಚರಿತ್ರೆಯನ್ನು ಓದಿದಾಗ ನನ್ನ ಎದೆ ದ್ರವಿಸಿದ ಸ್ಥಿತಿಯನ್ನು ವರ್ಣಿಸಹೊರಟರೆ ಹುಚ್ಚನೆಂದು ಯಾರಾದರೂ ನಕ್ಕಾರು. ಜೀವಸತ್ವ ತನ್ನ ಪ್ರಖರ ದೀಪ್ತಿಯನ್ನು ಪಡೆಯುವುದು ಸಾಧು, ಸಂತ, ಸಿದ್ಧಯೋಗಿ ಜನಗಳಲ್ಲಿ. ರತ್ನವನ್ನು ಸೋಕಿದ ಹೊರತು ಹೇಗೆ ಸೂರ್ಯಕಿರಣ ತನ್ನ ತೇಜದ ಉಚ್ಛ್ರತಿಯನ್ನು ಕಾಣಲಾಗದೋ ಹಾಗೆಯೇ ಋಷಿಗಳನ್ನು ಸೋಕಿದ ಹೊರತು ಚೈತನ್ಯವೂ ಸಹ ತನ್ನ ಸತ್ವದ ಪರಮಾವಧಿಯನ್ನು ತಾನು ಅರಿಯಲಾರದು." ಇಂತಹ

ಮಹಾಮಹಿಮರ ಜೀವನ ಚರಿತ್ರೆಯನ್ನು ಕನ್ನಡಕ್ಕೆ ತಂದು ಶ್ರೀ ಕೃಷ್ಣಶಾಸ್ತ್ರಿಗಳು ನಮಗೆ ದೊಡ್ಡ ಉಪಕಾರವನ್ನೇ ಮಾಡಿದ್ದಾರೆ.

ಕನ್ನಡದಲ್ಲಿ ಹಲವಾರು ಜೀವನಚರಿತ್ರೆಗಳು ಬರೆಯಲ್ಪಟ್ಟಿವೆ. ಕೆಲವು ರಾಜ ಮಹಾರಾಜರುಗಳಿಗೆ ಸಂಬಂಧಿಸಿದವು; ಕೆಲವು ಕಲಾವಿದರಿಗೆ ಸಂಬಂಧಿಸಿದವು; ಕೆಲವು ನಾಗಮಹಾಶಯರಂತಹ ಸಾಧುಸಂತರನ್ನು ಕುರಿತದ್ದು. ಮೂಲತಃ ಈ ತರಹದ ವ್ಯಕ್ತಿಗಳ ಜೀವನ ಅಂತರ್ಮುಖವಾದದ್ದು. ಇವರ ಚಟುವಟಿಕೆಗಳ ಮೂಲಸ್ಫೂರ್ತಿ, ಗುಪ್ತಚೈತನ್ಯಕ್ಕೆ ಸಂಬಂಧಪಟ್ಟದ್ದು. ಈ ಗ್ರಂಥವನ್ನು ಬರೆದವರು ಈ ಚೈತನ್ಯದ ಸತ್ವವನ್ನು ಸ್ವಲ್ಪಮಟ್ಟಿಗೆ ತೋರಿಸಿಕೊಟ್ಟರೂ ಅದು ನಮಗೆ ಬಾಳಿನ ಆದರ್ಶವನ್ನು ಎತ್ತಿಹಿಡಿಯುತ್ತದೆ. ವಿಷಯ ನಿರೂಪಣೆಯ ದೃಷ್ಟಿಯಿಂದಲೂ ಶೈಲಿಯ ದೃಷ್ಟಿಯಿಂದಲೂ ಶ್ರೀ ಕೃಷ್ಣಶಾಸ್ತ್ರಿಗಳು ಅನುವಾದವನ್ನು ಸರಳ ಸುಂದರ ಶೈಲಿಯಲ್ಲಿ ಕನ್ನಡಕ್ಕೆ ತಂದಿದ್ದಾರೆ. ಶ್ರೀ ಶಾಸ್ತ್ರಿಗಳಿಗೆ ಕನ್ನಡ ಶೈಲಿ ಒಲಿದು ಬಂದದ್ದು.

ಅವರ ಎಲ್ಲಾ ಬರವಣಿಗೆಗಳಲ್ಲೂ, ಭಾಷಣಗಳಲ್ಲೂ ಕಂಡುಬರುವ ಒಂದು ನೈಜ ಸರಳತೆ ಇಲ್ಲಿಯೂ ಇದೆ. ಭಾಷಾಂತರ ಮಾಡುವವರು ಕೆಲವೊಮ್ಮೆ ಭಾವಕ್ಕಿಂತಲೂ ಭಾಷೆಗೇ ಪ್ರಾಧಾನ್ಯತೆಯನ್ನು ಕೊಡುವುದರಿಂದ ಮೂಲದ ಸ್ಫೂರ್ತಿಯು ಮಸಕಾಗುತ್ತದೆ. ಇಲ್ಲಿ ಶ್ರೀ ಶಾಸ್ತ್ರಿಗಳವರಿಗೆ ಭಾಷೆ ಮತ್ತು ವಿಷಯಗಳ ಮೇಲೆ ಪೂರ್ಣ ಹಿಡಿತವಿದ್ದು ಅವರೇ ಈ ಜೀವನಚರಿತ್ರೆಯನ್ನು ಮೊದಲಬಾರಿ ಬರೆಯುತ್ತಿದ್ದಾರೆನ್ನುವಷ್ಟು ಸಹಜವಾಗಿದೆ ಇವರ ನಿರೂಪಣೆ. ಒಳ್ಳೆಯ ಜೀವನ ಚರಿತ್ರೆಯಲ್ಲಿ ಇರಬೇಕಾದ ಹಲವಾರು ಗುಣಗಳನ್ನು ಇಲ್ಲಿ ನಾವು ಕಾಣುತ್ತೇವೆ. ಮೂಲ ಗ್ರಂಥಕರ್ತರು ಶ್ರೀ ನಾಗಮಹಾಶಯರ ಬಗ್ಗೆ ತೋರಿದ ಪ್ರೇಮ, ಭಕ್ತಿ ಭಾವವನ್ನು ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ಕನ್ನಡ ಭಾಷಾಂತರದಲ್ಲಿ ಪ್ರತಿಬಿಂಬಿಸಿ, ವಿಷಯದ ಔನ್ನತ್ಯವನ್ನು ಕಾಪಾಡಿದ್ದಾರೆ. ಕನ್ನಡದಲ್ಲಿ ಭಾಷಾಂತರಮಾಡುವ ಬರಹಗಾರರಿಗೆ ಈ ಕೃತಿಯು ಒಳ್ಳೆಯ ಮಾದರಿಯಾಗಿದೆ. ಉತ್ತಮ ವಿಚಾರದಿಂದಲೂ, ಸರಳ ಶೈಲಿಯಿಂದಲೂ, ಶೋಭಿಸುತ್ತಿರುವ 'ಶ್ರೀ ನಾಗಮಹಾಶಯ'ರ ಜೀವನ ಚರಿತ್ರೆಯು ಎಲ್ಲ ಸಾಧಕರ ಕೈದೀವಿಗೆಯಾಗಿರಲಿ.

# ಶಾಸ್ತ್ರಿಗಳ ಸೂಕ್ತಿಗಳು

**ಕವಿತೆ–ವನಿತೆ:**

ಕವಿತೆಯೂ ವನಿತೆಯೂ ತಾವಾಗಿ ಬಂದರೇ ಸುಖ.

(ಬಂಕಿಮಚಂದ್ರ, ಪು. ೩೧೪)

*   *   *

**ಹೆಣ್ಣಿನ ಮನಸ್ಸು:**

ಹೆಂಗಸು ಮನಸ್ಸನ್ನು ಕಲ್ಲುಮಾಡಿಕೊಂಡು ಒಂದು ನಿರ್ಧಾರಕ್ಕೆ ಬಂದುಬಿಟ್ಟರೆ ಬ್ರಹ್ಮನ ಕೈಯಲ್ಲೂ ಅದನ್ನು ಕದಲಿಸುವುದಕ್ಕಾಗುವುದಿಲ್ಲ.

(ಅದೇ, ಪು. ೩೩೩)

*   *   *

**ಸ್ವಾರ್ಥ:**

ದಯೆ ಅನುಕಂಪೆಗಳು ಎಲ್ಲರಲ್ಲಿಯೂ ಎಲ್ಲ ಕಾಲದಲ್ಲಿಯೂ–ಬರುವುದಿಲ್ಲ. ಅದಕ್ಕೆ ದೊಡ್ಡ ಅಡ್ಡಿ ಹಸಿವು, ಕಾಮ; ಅವುಗಳ ತೃಪ್ತಿಯಿಂದ ತಾನು ಸಂತೋಷಪಡಬೇಕೆಂಬ ಆತುರ; ಅವುಗಳ ಸಂಪಾದನೆಗಾಗಿ ಕಷ್ಟ ಪಟ್ಟು ಕ್ರೌರ್ಯನಡಸಿ ಮೋಸಮಾಡಿಯಾದರೂ ಸಾಧಿಸಬೇಕೆಂಬ ಪ್ರವೃತ್ತಿ. ಈ ವಿಚಾರದಲ್ಲಿ ಮನುಷ್ಯನೂ ಪಶುವೂ ಒಂದೇ.

(ಅದೇ, ಪು. ೨೧೫)

*   *   *

**ಹೂವು–ಮುಳ್ಳು:**

ಮುಳ್ಳು ಬಲಿತರೆ ಬೆಳೆದರೆ.... ಇತರರಿಗಂತೂ ಕಷ್ಟ, ಹಿಂಸೆ. ಲೋಕದೃಷ್ಟಿಯಲ್ಲಿ ತನ್ನ ಸೌರಭ ಸೌಕುಮಾರ್ಯ ಸೌಂದರ್ಯಗಳಿಂದ ಜಗತ್ತಿಗೆ ಶಾಂತಿ ಸಂತೋಷಗಳನ್ನು ಕೊಡುವ ಹೂವೇ ಧನ್ಯ, ಮಾನ್ಯ. ಮುಳ್ಳು ಉಪಯೋಗಕ್ಕೆ ಬಂದರೆ ತೊಂಡು ದನಗಳಿಗೆ ಅಡ್ಡಿಯಾಗುವಂತೆ ಬೇಲಿ ಹಾಕುವುದಕ್ಕೆ.

(ಅದೇ, ಪು. ೧೬೧)

*   *   *

**ಪ್ರಣಯ ಕಥೆ:**

ದಾಂಪತ್ಯದ ದಾರಿಯೇ ಸುಗಮವಲ್ಲ; ಇನ್ನು ಪ್ರಣಯದಾರಿ ಸುಗಮವಾಗುತ್ತದೆಯೇ? ಒಂದು ಪಕ್ಷ ಆದರೆ ಕಥೆಯಾಗುವುದಿಲ್ಲ, ಕಥೆ ಬೆಳೆಯುವುದಿಲ್ಲ.

(ಅದೇ, ಪು. ೧೫೨)

ಬಿ. ಶಿವಮೂರ್ತಿಶಾಸ್ತ್ರಿ

# ನಾ ಕಂಡ "ಕನ್ನಡ ವ್ಯಾಸ"

ಅಗಾಧವಾದ ಪಾಂಡಿತ್ಯ, ಅಸದೃಶವಾದ ಸತ್ಯಸಂಧತೆ, ಅತುಲವಾದ ಮಾನವಪ್ರೇಮ ಇವೆಲ್ಲಕ್ಕೂ ಮಿಗಿಲಾದ ದೈವಭಕ್ತಿ ಮತ್ತು ದೇಶಭಕ್ತಿ ಇವೆಲ್ಲವುಗಳೂ ಒಟ್ಟುಗೂಡಿದ್ದ ಕನ್ನಡ ನಾಡಿನ ಮಹಾಪುರುಷರು ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು. ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೂ, ಕನ್ನಡ ಸಾಹಿತ್ಯ ಪರಿಷತ್ತಿಗೂ ಕನ್ನಡ ಸಾಹಿತ್ಯ ಪ್ರಪಂಚಕ್ಕೂ ಕನ್ನಡ-ಕನ್ನಡ ಕೋಶಕ್ಕೂ "ಪ್ರಬುದ್ಧ ಕರ್ಣಾಟಕ" ತ್ರೈಮಾಸಿಕಕ್ಕೂ ತಮ್ಮ ಆಯುಷ್ಯವನ್ನು ಮೀಸಲಾಗಿಟ್ಟಿದ್ದರು ಎಂದು ನಾವು ತಿಳಿಯಬಹುದು. ಕನ್ನಡ ಸಾಹಿತ್ಯ–ಸಂಸ್ಕೃತಿಗಳ ಉನ್ನತಿಗೆ, ಕನ್ನಡ ನಾಡಿನ ಸರ್ವಾಂಗೀಣ ಪ್ರಗತಿಗೆ ವೀರಕಂಕಣವನ್ನು ಕಟ್ಟಿದ್ದ ಮಹನೀಯರು ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು. ಅವರು ಕನ್ನಡದಲ್ಲಿ ರಚಿಸಿದ ಮತ್ತು ಸಂಪಾದಿಸಿದ ಕೃತಿಗಳು ಕನ್ನಡ ನಾಡು ನುಡಿ ಇರುವವರೆಗೆ ಇರತಕ್ಕವುಗಳು. ವಚನಭಾರತ, ಕಥಾಮೃತ, ನಿರ್ಮಲಭಾರತಿ, ಬಂಕಿಮಚಂದ್ರ, ಸಂಸ್ಕೃತ ನಾಟಕ, ಭಾಸಕವಿ, ನಾಗಮಹಾಶಯ, ಶ್ರೀಪತಿಯ ಕತೆಗಳು, ಸರ್ವಜ್ಞಕವಿ, ಮೊದಲಾದ ಈ ಅಮರಕೃತಿಗಳು ಕನ್ನಡ ಸಾಹಿತ್ಯ ಸಂಪತ್ತನ್ನು ಅಧಿಕಗೊಳಿಸಿವೆ. ಕನ್ನಡ ಕೈಪಿಡಿಯಲ್ಲಿ ಅವರು ಬರೆದಿರುವ "ಅಲಂಕಾರಶಾಸ್ತ್ರದ ಚರಿತ್ರೆ" ಅಗಾಧವಾದ ಅವರ ವಿದ್ವತ್ತಿಗೆ ನಿದರ್ಶನವಾಗಿದೆ. ಅವರು ಸಂಪಾದಿಸಿರುವ ಹರಿಶ್ಚಂದ್ರ ಕಾವ್ಯಸಂಗ್ರಹ, ಅದಕ್ಕೆ ಬರೆದಿರುವ ಪೀಠಿಕೆ (ಪ್ರೊ. ಟಿ. ಎಸ್. ವೆಂಕಣ್ಣಯ್ಯನವರನ್ನು ಕೂಡಿಕೊಂಡು) ಗ್ರಂಥ ಸಂಪಾದನೆ ಮಾಡಬೇಕೆನ್ನುವವರಿಗೆ ಮಾರ್ಗದರ್ಶನವಾಗಿದೆ. ಕನ್ನಡ ಕವಿ–ಕಾವ್ಯಮಾಲೆಯಲ್ಲಿ ಪ್ರಕಟವಾಗಿರುವ ಮಾನ್ಯ ಶಾಸ್ತ್ರಿಗಳ "ಭಾಷಣಗಳು ಮತ್ತು ಲೇಖನಗಳು" ಎಂಬ ಗ್ರಂಥವು ಅವರ ಅಗಾಧವಾದ ಜ್ಞಾನ ಭಂಡಾರವೆನಿಸಿದೆ. ಅವರಿಗೆ ಜನ ಸಮರ್ಪಿಸಿದ ಅಭಿವಂದನೆ, ಅವರ ಗೌರವಕ್ಕೆ ತಕ್ಕಂತಿದೆ. ಕನ್ನಡನಾಡು ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳನ್ನು ಬಹುಮುಖವಾಗಿ ಗೌರವಿಸಿದೆ. ಹೈದರಾಬಾದಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅವರು ಅಧ್ಯಕ್ಷರಾಗಿದ್ದರು (೧೯೪೧).

ಮೈಸೂರು ವಿಶ್ವವಿದ್ಯಾನಿಲಯವು ಅವರಿಗೆ ಡಾಕ್ಟರೇಟ್ ಪದವಿಯನ್ನು ಕೊಟ್ಟಿತು. ನಾಡಿನ ವಿದ್ವಾಂಸರು ಒಟ್ಟುಗೂಡಿ ೧೯೫೭ರಲ್ಲಿ ಅವರಿಗೆ "ಅಭಿವಂದನೆ" ಎಂಬ ಗಂಭೀರವಾದ ವಿದ್ವತ್ ಪ್ರಚುರವಾದ ಗ್ರಂಥವೊಂದನ್ನು ಸಮರ್ಪಿಸಿದರು. ಭಾರತ ಸಾಹಿತ್ಯ ಅಕಾಡಮಿಯವರು ಶಾಸ್ತ್ರಿಗಳಿಗೆ "ಬಂಕಿಮಚಂದ್ರ" ಎಂಬ ಅವರ ಕನ್ನಡ ಗ್ರಂಥಕ್ಕೆ ಅಖಿಲ ಭಾರತ ಗೌರವ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದರು. ಇವೆಲ್ಲಕ್ಕೂ ಮಿಗಿಲಾಗಿ ಎರಡೂವರೆ ಕೋಟಿ ಕನ್ನಡ ಜನರು ಅವರನ್ನು ಪಂಡಿತ ವರೇಣ್ಯ, ಕನ್ನಡ ತಪಸ್ವಿ, ಕನ್ನಡ ವ್ಯಾಸ, ಕನ್ನಡ ಕುಲದ ಆಧಾರಸ್ತಂಭ, ಪ್ರಾಮಾಣಿಕ ಪ್ರತಿಭಾಸಂಪನ್ನ, ಚಿರಸ್ಮರಣೀಯ ಕನ್ನಡ ಮಹಾ ಪಂಡಿತ, ಆದರ್ಶ ಶಿಕ್ಷಕ, ಪ್ರತಿಭಾವಂತ ವಿಮರ್ಶಕ, ಸ್ನೇಹಮಯ ಜೀವಿ ಎಂದು ಮೊದಲಾಗಿ ಹಾಡಿ ಹರಸಿತು. ಇದಕ್ಕಿಂತ ಹೆಚ್ಚಿನ ಮಾನ–ಮನ್ನಣೆಗಳನ್ನು ಪಡೆಯಲು ಮತ್ತಾವ ಕನ್ನಡಿಗನಿಗೆ ತಾನೇ ಸಾಧ್ಯವಾದೀತು?

ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ಪ್ರಾಚೀನ ಪರಂಪರೆಯಲ್ಲಿ ಹುಟ್ಟಿ ಬೆಳೆದವರು. ಅವರ ತಂದೆಯವರು ಮಹಾವಿದ್ವಾಂಸರಾದ, ದಿ. ಅಂಬಳೆ ರಾಮಕೃಷ್ಣ ಶಾಸ್ತ್ರಿಗಳು. ಶ್ರೀ ಶಾಸ್ತ್ರಿಗಳವರಿಗೆ ಸಂಸ್ಕೃತ, ಕನ್ನಡ, ಇಂಗ್ಲಿಷ್ ಮತ್ತು ಬಂಗಾಳಿ ಭಾಷೆಗಳಲ್ಲಿ ತುಂಬಿದ ಪಾಂಡಿತ್ಯವಿದ್ದಿತು. ಅವರು ಪ್ರಾಚೀನ ಗ್ರಂಥಗಳನ್ನಲ್ಲದೆ ಶಿಲಾಶಾಸನಗಳನ್ನೂ ಓದಿ ಹೆಚ್ಚಿನ ವೈದುಷ್ಯವನ್ನು ಗಳಿಸಿದ್ದರು, ತೆಲುಗು, ತಮಿಳು ಭಾಷೆಗಳನ್ನೂ ಅರಿತಿದ್ದರು. ಶ್ರೀ ಕೃಷ್ಣಶಾಸ್ತ್ರಿಗಳ ಜನನ ೧೨–೨–೧೮೯೦ರಲ್ಲಿ. ಅವರ ಮರಣ ತಾ. ೧–೨–೧೯೬೮ರಲ್ಲಿ. ಅವರು ಬಾಳಿದುದು ೭೮ ವರ್ಷಗಳು ಮಾತ್ರ. ಈ ಸುದೀರ್ಘವಾದ ಕಾಲದಲ್ಲಿ ಅವರು ಕನ್ನಡ ಕುಲಗುರುಗಳಾಗಿಯೇ ಬಾಳಿದರು. ಕನ್ನಡ ನಾಡಿನಲ್ಲಿ ಅವತರಿಸಿದ ಪುಣ್ಯಶ್ಲೋಕರಾದ ಆರ್. ನರಸಿಂಹಾಚಾರ್ಯರು, ಟಿ. ಎಸ್. ವೆಂಕಣ್ಣಯ್ಯನವರು, ವ್ಯಾಕರಣದ ಬಿ. ಮಲ್ಲಪ್ಪನವರು, ಪಂಜೆ ಮಂಗೇಶರಾಯರು, ಪಂಡಿತ ಎಂ. ಗೋವಿಂದ ಪೈಗಳು, ಮುಳಿಯ ತಿಮ್ಮಪ್ಪಯ್ಯನವರು, ಕನ್ನಡ ಚಿರಭಾಷಾರತ್ನ ಕರಿಬಸವ ಶಾಸ್ತ್ರಿಗಳು, ಪ್ರೊ. ಎಸ್. ಎಸ್. ಬಸವನಾಳರು, ಡಾ. ಫ. ಗು. ಹಳಕಟ್ಟಿಯವರು, ಪ್ರೊ. ಬಿ. ಎಂ. ಶ್ರೀಕಂಠಯ್ಯನವರು, ಎಂ. ಆರ್. ಶ್ರೀನಿವಾಸಮೂರ್ತಿಗಳು, ಆಲೂರು ವೆಂಕಟರಾಯರು, ದೇವುಡು ನರಸಿಂಹ ಶಾಸ್ತ್ರಿಗಳು ಮೊದಲಾದ ಮಹಾಪಂಡಿತೋತ್ತಮರ ಪಂಕ್ತಿಗೆ ಸೇರತಕ್ಕವರು ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು. ಅವರು ಬರೆದಿರುವ ಕನ್ನಡ ಭಾರತವನ್ನು ಓದಿದವರು ಅವರನ್ನು ಕನ್ನಡ ವ್ಯಾಸರೆಂದು ಕರೆದಿರುವುದು ಯಥೋಚಿತವಾಗಿದೆ. ಆದಿಪಂಪ ಕುಮಾರ ವ್ಯಾಸರ ಅನಂತರ ಭಾರತವನ್ನು ಅರಗಿಸಿಕೊಂಡ ಮಹಾಭಾವರು ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು.

ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಅತ್ಯುತ್ತಮವಾದ ಜೀವನಾದರ್ಶಗಳನ್ನು ಅಳವಡಿಸಿಕೊಂಡಿದ್ದರು.

(೧) ಅವರು ಸದಾ ಕಾರ್ಯತತ್ಪರರಾಗಿರುತ್ತಿದ್ದರು. ಸೋಮಾರಿತನಕ್ಕೆ ಅವರ ಮನೆಯಲ್ಲಿ ಸ್ಥಳವಿರಲಿಲ್ಲ.

(೨) ಅವರು ಸದಾ ಸತ್ಯವನ್ನೇ ನುಡಿಯುತ್ತಿದ್ದರು. ಅವರದು ಅಭಯ ಜೀವನ. ಇನ್ನೊಬ್ಬರ ಸಂತೋಷಕ್ಕಾಗಿ ಅವರು ಅಸತ್ಯವನ್ನು ಎಂದೂ ಹೇಳಿಲ್ಲ. ಅವರು ಮತ್ತೊಬ್ಬರ ಮನನೋಯುವಂತೆ ಎಂದೂ ಮಾತನಾಡಿದವರಲ್ಲ. ಅವರು ನಿಜಕ್ಕೂ ವಾಙ್ಮಯ ತಪಸ್ವಿಗಳು.

(೩) ಮಧ್ಯಾಹ್ನದ ವೇಳೆಯಲ್ಲಿ ಅವರು ಎಂದೂ ಮಲಗಿದವರಲ್ಲ. ರಾತ್ರೆ ವೇಳೆಗೆ ಸರಿಯಾಗಿ ಮಲಗಿ ಬೆಳಗಿನ ಜಾವದಲ್ಲಿ ಎದ್ದು, ತಮ್ಮ ಅಭ್ಯಾಸವನ್ನೂ ಗ್ರಂಥಲೇಖನವನ್ನೂ ನಡೆಸುತ್ತಿದ್ದರು. ಅವರು ಭೋಜನವಾದ ಮೇಲೆ ಕೊಂಚ ತಿಂಡಿ–ತಿನಸುಗಳನ್ನು ತಿನ್ನುತ್ತಿದ್ದರು. ಅವರು ಊಟದ ರುಚಿ–ಶುಚಿಗಳನ್ನು ಚೆನ್ನಾಗಿ ತಿಳಿದಿದ್ದರು. ಅವರು ಸದಾ ಆರೋಗ್ಯವಾಗಿಯೇ ಬಾಳಿ ಬದುಕಿದರು. ಕಡೆಕಡೆಯಲ್ಲಿ ವಯೋಧರ್ಮಕ್ಕನುಗುಣವಾಗಿ ರೋಗ ಅವರನ್ನು ಆಕ್ರಮಿಸಿತು. "ಜಾತಸ್ಯ ಮರಣಂ ಧ್ರುವಂ" ಎಂಬಂತೆ ಅವರು ಕಡೆಗೆ ಸಂತೋಷವಾಗಿ ಮರಣವನ್ನು ಅಪ್ಪಿದರು. ಮರಣಕ್ಕೆ ಅವರು ಹೆದರಲು ಯಾವ ಕಾರಣವೂ ಇರಲಿಲ್ಲ. ಕರ್ಣಾಟಕದಲ್ಲಿ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳಿಗೆ ಮಿಗಿಲಾದ ಕೀರ್ತಿ ತಂದುದು ಅವರ ಸುಂದರವೂ, ಶುದ್ಧವೂ, ಸುಪ್ರೌಢವೂ ಆದ ಗದ್ಯಶೈಲಿ. ಅವರು ಅತ್ಯುತ್ತಮ ಗದ್ಯ ಲೇಖಕರು. ಚಂಪೂಶೈಲಿಯಲ್ಲಿ ಆದಿಪಂಪ; ರಗಳೆ ಕೃತಿಗಳಲ್ಲಿ ಹರೀಶ್ವರ; ಷಟ್ಪದಿಗಳಲ್ಲಿ ಲಕ್ಷ್ಮೀಶ; ತ್ರಿಪದಿಗಳಲ್ಲಿ ಸಾಂಗತ್ಯದಲ್ಲಿ ಸರ್ವಜ್ಞ ರತ್ನಾಕರ; ಕಂದಗಳಲ್ಲಿ ಷಡಕ್ಷರ; ಹಳಗನ್ನಡ ಶೈಲಿಯಲ್ಲಿ ಮುದ್ದಣ ಸೀಮಾಪುರುಷರಾದಂತೆ ಕನ್ನಡ ಗದ್ಯ ಶೈಲಿಯಲ್ಲಿ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ಶ್ರೇಷ್ಠ ಪುರುಷರಾಗಿದ್ದಾರೆ. ಆದ್ದರಿಂದಲೇ ಅವರು ಕನ್ನಡ ವ್ಯಾಸರು ಎಂಬ ಬಿರುದಿಗೆ ಅರ್ಹರು.

ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳನ್ನು ನಾನು ಮೊದಲು ಕಂಡುದು ಸುಮಾರು ೨೦ ವರ್ಷಗಳ ಹಿಂದೆ ಮೈಸೂರಿನಲ್ಲಿ ನಡೆದ ಕನ್ನಡ–ಕನ್ನಡ ಕೋಶದ ಸಂಪಾದಕ ಮಂಡಳಿಯ ಸಭೆಯಲ್ಲಿ. ಆ ವರ್ಷ ನಾನು ಮೈಸೂರು ಸರಕಾರದ ಪ್ರತಿನಿಧಿಯಾಗಿ ಕೋಶಸಂಪಾದಕ ಮಂಡಳಿಯ ಸದಸ್ಯನಾಗಿ ಸೇರಿದ್ದೆನು. ಆಗ ಕನ್ನಡಕೋಶದ ಪ್ರಮುಖ ಅಧ್ವರ್ಯರಾಗಿದ್ದ ಮಾನ್ಯ ಶಾಸ್ತ್ರಿಗಳನ್ನು ಸನಿಹದಲ್ಲಿ ಕಂಡು ಮಾತನಾಡಲು ನನಗೆ ಅನುಕೂಲವಾಯಿತು. ಸಭೆಯಲ್ಲಿ ಕನ್ನಡ ಶಬ್ದಗಳ ಅರ್ಥವನ್ನು ನಿರ್ಣಯಿಸುವ ಬಗೆಗೆ ಅವರು ತೆಗೆದುಕೊಳ್ಳುತ್ತಿದ್ದ ಆಸಕ್ತಿ, ಚರ್ಚೆ ಮಾಡುತ್ತಿದ್ದ ವಿಧಾನ, ತೀರ್ಮಾನಿಸುತ್ತಿದ್ದ ರೀತಿ ಇವುಗಳನ್ನು ಕಂಡು ನನಗೆ ನಿಜಕ್ಕೂ

ಆಶ್ಚರ್ಯವಾಗುತ್ತಿದ್ದಿತು. ಕನ್ನಡಿಗರಿಗೆ ಒಂದು ಅಧಿಕೃತವಾದ ಕೋಶಬೇಕು ಎಂಬ ಬಗೆಗೆ ಅವರಿಗೆ ಅಚಲವಾದ ಅಭಿಮಾನವಿದ್ದಿತು. ಕನ್ನಡಕ್ಕೊಂದು ಕೋಶಬೇಕು ಎಂದು ಅವರು ಹಟಮಾಡಿ ಕೈಗೊಳ್ಳದಿದ್ದರೆ ಈಗ ಸಾಹಿತ್ಯ ಪರಿಷತ್ತಿನಲ್ಲಿ ಮೆಲ್ಲಮೆಲ್ಲನೆ ಬೆಳಕು ಕಾಣುತ್ತಿರುವ ಕನ್ನಡ–ಕನ್ನಡ ಕೋಶದ ಸಂಚಿಕೆಗಳು ನಮಗೆ ಕಾಣಸಿಗುತ್ತಿರಲಿಲ್ಲ. ಆದುದರಿಂದ ಕನ್ನಡಕೋಶಕ್ಕೆ ಅವರನ್ನು ಪಿತಾಮಹರೆನ್ನಬಹುದು.

ಪ್ರಬುದ್ಧ ಕರ್ನಾಟಕವನ್ನು ನಾನು ಸುಮಾರು ೪೦ ವರ್ಷಗಳಿಂದ ಕ್ರಮವಾಗಿ ಓದುತ್ತಿದ್ದೇನೆ. ಅದರಲ್ಲಿ ಬರುವ ಸುಪ್ರೌಢವಾದ ಲೇಖನಗಳಿಗೂ, ಗ್ರಂಥ ವಿಮರ್ಶೆಗಳಿಗೂ ನಾನು ಬಹಳವಾಗಿ ಮನಸೋತಿದ್ದೇನೆ. ಪ್ರಬುದ್ಧ ಕರ್ನಾಟಕದ ಸಂಚಿಕೆಗಳಲ್ಲಿ ಕಂಡುಬರುವ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳ ಪಾಂಡಿತ್ಯ–ಪ್ರತಿಭೆಗಳನ್ನು ನಾನು ಹಲವು ವೇಳೆ ಮೆಚ್ಚಿಕೊಂಡು ತಲೆದೂಗಿದ್ದೇನೆ; ತಲೆ ಬಾಗಿದ್ದೇನೆ.

೧೯೫೬ನೆಯ ಜೂನ್ ತಿಂಗಳಿನಲ್ಲಿ ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗುವ ಸದವಕಾಶವು ದೊರಕಿತು. ಸುಮಾರು ಒಂದು ನೂರು ತಿಂಗಳ ಕಾಲ ಆ ಮಹಾಸಂಸ್ಥೆಯ ಅಧ್ಯಕ್ಷನಾಗಿದ್ದು ಯಥಾಮತಿ ಸೇವೆಯನ್ನು ಸಲ್ಲಿಸಿದೆನು. ಆಗ ಕನ್ನಡಕೋಶಕ್ಕೆ ಸಂಬಂಧಪಟ್ಟಂತೆ ಮೇಲಿಂದ ಮೇಲೆ ಅವರನ್ನು ಕಾಣುತ್ತಿದ್ದೆನು. ೧೯೬೧ರಲ್ಲಿ ಪರಿಷತ್ತು ಮತ್ತು ಸರಕಾರಗಳಿಗೆ ಕನ್ನಡಕೋಶದ ಪ್ರಕಟನೆಯ ಬಗೆಗೆ ಒಂದು ಕರಾರು ಮಾಡಿಕೊಳ್ಳಬೇಕಾಯಿತು. ಆ ಸಂದರ್ಭದಲ್ಲಿ ಮೊದಲು ನಾನು ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳನ್ನು ಕಂಡು ಕರಾರಿನ ನಿಯಮಗಳನ್ನು ಅರುಹಿ ಅದಕ್ಕೆ ಅವರ ಅಪ್ಪಣೆ ಮತ್ತು ಆಶೀರ್ವಾದ ಗಳನ್ನು ಪಡೆದೆನು. ಈ ಸಂದರ್ಭಗಳಲ್ಲಿ ಪರಿಷತ್ತಿನ ಕಾರ್ಯದರ್ಶಿಗಳೂ ನನ್ನ ಆಪ್ತಗೆಳೆಯರೂ ಆಗಿದ್ದ ದಿವಂಗತ ಕೆ. ಗೋಪಾಲ ಕೃಷ್ಣರಾಯರು ಸದಾ ನನ್ನ ಸಂಗಡ ಇರುತ್ತಿದ್ದರು. ಏಕೆಂದರೆ ಅವರು ಡಾ. ಕೃಷ್ಣಶಾಸ್ತ್ರಿಗಳ ಅನುಗ್ರಹಕ್ಕೆ ಬಹಳವಾಗಿ ಪಾತ್ರವಾಗಿದ್ದವರು.

ನಾನು ಪರಿಷತ್ತಿನ ಅಧ್ಯಕ್ಷನಾಗಿದ್ದ ಕಾಲದಲ್ಲಿ ಕೆಲವು ಪ್ರಮುಖ ಸಾಹಿತಿಗಳು ಪರಿಷತ್ತಿಗೆ ಬರುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದಾರೆ ಎಂಬ ಒಂದು ಮಾತು ನನಗೆ ಕೇಳಿಬಂದಿತು. ಈ ವಿಷಯವನ್ನು ನಾನೂ ಕೆ. ಗೋಪಾಲಕೃಷ್ಣರಾಯರೂ ಒಮ್ಮೆ ಅವರಲ್ಲಿಗೆ ಹೋಗಿ ಡಾ. ಕೃಷ್ಣಶಾಸ್ತ್ರಿಗಳ ಗಮನಕ್ಕೆ ತಂದಾಗ ಅವರು ಅದಕ್ಕಾಗಿ ಬಹಳ ವ್ಯಸನಪಟ್ಟರು. ಪರಿಷತ್ತಿನ ಸೇವೆಯಲ್ಲಿ ಯಾವ ಗುಂಪು ಗಾರಿಕೆಯೂ ಇರಬಾರದೆಂದು ಹೇಳಿದರು. ಈತರಹ ಭಾವನೆಗಳು ಕನ್ನಡದ ಏಳಿಗೆಗೆ ಕಂಟಕಪ್ರಾಯವಾದಾವು ಎಂದು ಅವರು ನಿರೂಪಿಸಿದರು. ಅವರು ಕನ್ನಡ ಸಾಹಿತ್ಯ ಪರಿಷತ್ತು ಎಲ್ಲ ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆ; ಸಣ್ಣತನದತ್ತ ಅವಕಾಶ

ವಿಲ್ಲ ಎಂದು ಹೇಳಿದರು. ಈ ಉದಾರ ಭಾವನೆಗಳನ್ನು ಕಂಡು ನನ್ನ ಮನಸ್ಸಿಗೆ ಬಹಳ ಸಂತೋಷವಾಯಿತು. ಕನ್ನಡ ಸಾಹಿತ್ಯ ಪರಿಷತ್ತಿಗೆ ರಾಷ್ಟ್ರಪತಿಗಳಾದ ದಿ. ಡಾ. ರಾಜೇಂದ್ರ ಪ್ರಸಾದರು, ಡಾ. ರಾಧಾಕೃಷ್ಣನ್‌ರವರು, ಮೈಸೂರು ಮಹಾರಾಜರವರು ಮೊದಲಾದ ಮಹನೀಯರು ಸಂದರ್ಶನವಿತ್ತಿದ್ದಾಗ ಶಾಸ್ತ್ರಿಗಳು ಆಗಮಿಸಿ ಸಭೆಯ ಮೊದಲಸಾಲಿನಲ್ಲಿ ಕುಳಿತಿರುತ್ತಿದ್ದರು. ಅವರು ಪರಿಷತ್ತಿನ ಏಳಿಗೆಗೆ ಸದಾ ಹರಸುತ್ತಿದ್ದರು. ೧೯೬೭ನೆಯ ಫೆಬ್ರುವರಿ ೨ನೆಯ ತಾರೀಖಿನಿಂದ ಫೆಬ್ರುವರಿ ೯ನೆಯ ತಾರೀಖಿನ ವರೆಗೆ ನಾನು ಬೆಂಗಳೂರು ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆಗಾಗಿ ಇರಬೇಕಾಗಿದ್ದಿತು. ನನ್ನ ವಾಸದ ಕೊಟ್ಟಡಿಯ ಸಮೀಪದಲ್ಲಿಯೇ ಮತ್ತೊಂದು ಸ್ಥಳದಲ್ಲಿ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಬೇನೆಯಿಂದ ಬಳಲಿ ಹಾಸಿಗೆ ಹಿಡಿದಿದ್ದರು. ಆಗ ದಿನವೂ ನಾನು ಅವರ ಹಾಸಿಗೆಯ ಹತ್ತಿರ ಹೋಗಿ ಅವರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದೆನು. ಆಗ ಪ್ರಸಂಗ ವಶಾತ್ ಅವರು ನನ್ನ ಸಂಗಡ ಮಾತನಾಡುತ್ತಿದ್ದ ವಿಷಯ ಅವರ ಆರೋಗ್ಯವನ್ನು ಕುರಿತಾದುದಲ್ಲ. "ಹುಟ್ಟಿದ ದೇಹ ಒಮ್ಮೆ ಹೋಗಲೇ ಬೇಕು. ಅದಕ್ಕಾಗಿ ಚಿಂತಿಸುವುದೇಕೆ? ಮನೆಯಲ್ಲಿ ಇರುವುದಕ್ಕಿಂತ ಆಸ್ಪತ್ರೆಯಲ್ಲಿ ಇದ್ದರೆ ಉಪಚಾರ ಚೆನ್ನಾಗಿ ನಡೆಯುತ್ತದೆ. ಮರಣವನ್ನು ತಪ್ಪಿಸಿಕೊಳ್ಳಲು ನಾನು ಇಲ್ಲಿಗೆ ಬಂದಿಲ್ಲ. ಅದು ಸಾಧ್ಯವೂ ಅಲ್ಲ. ಆದರೆ ದೇಹದ ಆರೋಗ್ಯವನ್ನು ಕಾಪಾಡಿಕೊಳ್ಳುವುದು ವಿವೇಕಿಯ ಲಕ್ಷಣ. ಆದಕ್ಕಾಗಿ ನಾನು ಇಲ್ಲಿಗೆ ಬಂದಿದ್ದೇನೆ" ಎಂದು ಅವರು ಬಹಳ ಸರಳವಾಗಿ ಹೇಳುತ್ತಿದ್ದರು. ಅವರ ಆ ದಿಟ್ಟತನವನ್ನು ಕಂಡು ನನಗೆ ಆಶ್ಚರ್ಯವಾಗುತ್ತಿತ್ತು. ನಾನು ಆಸ್ಪತ್ರೆಯಲ್ಲಿ ಇದ್ದ ಸುಮಾರು ೮ ದಿವಸಗಳು ಅವರು ನನ್ನಲ್ಲಿ ಮಾತನಾಡುತ್ತಿದ್ದ ವಿಷಯ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತ, ಕನ್ನಡ ನಿಘಂಟು ಮತ್ತು ಸಾಹಿತ್ಯ ಪರಿಷತ್ತು ಇವುಗಳನ್ನು ಕುರಿತುದೇ ಆಗಿರುತ್ತಿದ್ದಿತು. ನಾನು ಆಸ್ಪತ್ರೆಯನ್ನು ಬಿಟ್ಟು ಮನೆಗೆ ಬರುವ ದಿನ (ತಾ. ೯-೨-೧೯೬೭) ಶಾಸ್ತ್ರಿಗಳನ್ನು ಕಂಡು ಕೈ ಮುಗಿದು ಬಂದೆನು. ಅವರು "ನಾನು ಇನ್ನೂ ಕೆಲವು ದಿನ ಆಸ್ಪತ್ರೆಯಲ್ಲಿ ಇರಬೇಕಾಗಿದೆ ಡಾಕ್ಟರರು ಹೇಳಿದ್ದಾರೆ" ಎಂದು ಹೇಳಿದರು. ಆಗ ನಾನು "ಕನ್ನಡ ಕುಲಗುರುಗಳಾದ ತಮ್ಮ ಆರೋಗ್ಯವು ಬೇಗನೆ ಕುದುರಲಿ, ತಾವು ಆರೋಗ್ಯದಿಂದ ಮನೆಗೆ ಹಿಂತಿರುಗುವಂತೆ ಆಗಲಿ. ತಮ್ಮ ಜ್ಞಾನಾನುಭವಗಳ ಪ್ರಯೋಜನ ನಮ್ಮ ಕರ್ನಾಟಕಕ್ಕೆ ಇನ್ನೂ ಹೆಚ್ಚು ಹೆಚ್ಚು ಕಾಲ ದೊರಕುವಂತಾಗಲಿ" ಎಂದು ಹೇಳಿ ಶಾಸ್ತ್ರಿಗಳಿಗೆ ಕೈ ಮುಗಿದು ಹೊರಟು ಬಂದೆನು. ಆಮೇಲೆ ಅವರ ಕಡೆಗಾಲದವರೆಗೆ ನಾನು ಶ್ರೀ ಶಾಸ್ತ್ರಿಗಳನ್ನು ನೋಡಲು ಸಾಧ್ಯವಾಗಲಿಲ್ಲ. ದೈವೇಚ್ಛೆಗೆ ಉಪಾಯವಿಲ್ಲ. ಪತ್ರಿಕೆಗಳಲ್ಲಿ ಓದಿದೆನು ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು (ತಾ. ೨-೨-೬೮) ದಿವಂಗತರಾದರೆಂದು. ಅಂದು ನಾನು ಪರಸ್ಥಳದಲ್ಲಿದ್ದುದರಿಂದ ಅವರ ಅಂತ್ಯದರ್ಶನ ಪಡೆಯಲೂ ಕೂಡ ಸಾಧ್ಯ

ವಾಗಲಿಲ್ಲವಲ್ಲಾ ಎಂದು ಬಹಳವಾಗಿ ಮರುಗಿದೆನು. ಮಿಂಚು ಕಾಣದಾಯಿತು. ಮಳೆ ಸುರಿದು ಹೋಯಿತು. ಭೂಮಿ ಹಸುರಾಗಿ ಕಂಗೊಳಿಸಿತು. ಜನ ಸ್ಫೂರ್ತಿಗೊಂಡಿತು. ಕಾಲ ಕಳೆದು ಹೋಯಿತು. ಆದರೆ ಅವರ ಕೀರ್ತಿ ಕನ್ನಡ ನಾಡು ನುಡಿ ಇರುವ ವರೆಗೆ ಇರುತ್ತದೆಂಬುದರಲ್ಲಿ ಸಂಶಯವಿಲ್ಲ. ಶ್ರೀ ಶಾಸ್ತ್ರಿಗಳಲ್ಲಿ ಗೌರವವುಳ್ಳ ನಾವುಗಳು ಈಗ ಕನ್ನಡ ನಾಡು–ನುಡಿಗಳ ರಕ್ಷಣೆಗೆ ಕಂಕಣ ಕಟ್ಟುವುದೊಂದೇ ಅವರಿಗೆ ನಾವು ಸಲ್ಲಿಸಬೇಕಾದ ಗುರುದಕ್ಷಿಣೆಯಾಗಿದೆ.

ಎಚ್. ದೇವೀರಪ್ಪ

# ಪೂಜ್ಯ ಶ್ರೀ ಕೃಷ್ಣಶಾಸ್ತ್ರಿಗಳು

ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಕನ್ನಡ ಪ್ರಾಧ್ಯಾಪಕ ಪೂಜ್ಯ ಶ್ರೀ ಎ. ಆರ್. ಕೃ. ಅವರು ಹದಿನಾರು ವರ್ಷಗಳ ಹಿಂದೆ 'ಕಥಾಮೃತ' ಎಂಬ ಕಥಾಸರಿತ್ಸಾಗರದ ಸಂಗ್ರಹವನ್ನು ರಚಿಸಿ ಅಚ್ಚುಹಾಕಿಸಿ ಕನ್ನಡ ಮಕ್ಕಳ ಕೈಯಲ್ಲಿಡುತ್ತ ಈ ಮಾತುಗಳನ್ನು ಹೇಳಿದ್ದಾರೆ: "ನನ್ನ ಮಕ್ಕಳು ಶ್ರೀಮತಿ ಸೌಭಾಗ್ಯವತಿಯರಾದ ಲಲಿತಾ, ಸುಬ್ಬುಲಕ್ಷ್ಮಿ, ಶಾಂತಾ, ಇವರೂ ಇವರ ಮಕ್ಕಳೂ, ಮೊಮ್ಮಕ್ಕಳೂ, ಅವರ ಮಕ್ಕಳೂ ಕನ್ನಡ ನಾಡಿನ ಅಂಥ ಹೆಣ್ಣು ಮಕ್ಕಳೂ ಗಂಡು ಮಕ್ಕಳೂ ಓದುವುದಕ್ಕೆ, ಓದಿ ನಲಿಯುವುದಕ್ಕೆ ಅರಿತು ನಡೆಯುವುದಕ್ಕೆ ಈ ಗ್ರಂಥವನ್ನು ಬರೆದು ಪ್ರಕಟಿಸಿದ್ದೇನೆ." ಈ ಮಾತನ್ನು ಓದಿ ಯಾವ ಮಗುತಾನೆ ಪ್ರೇಮ ಪುಳಕಿತವಾಗುವುದಿಲ್ಲ? ಒಂದೊಂದು ಮಾತೂ ಸಹಜ ಪ್ರೇಮದ ಸದ್ವಾಸನೆಯನ್ನು ಬೀರುತ್ತಿರುವುದು; ತೂಗಿ ಒರೆಹಚ್ಚಿ ಬಣ್ಣವಿಟ್ಟು ಹೊಳಪುಕೊಟ್ಟು ಇಟ್ಟಿರುವುಂತಹುದು. ಈ ಮಾತುಗಳ ಮೂಲಕ ನೋಡಿದರೆ ಪೂಜ್ಯ ಶ್ರೀ ಶಾಸ್ತ್ರಿಗಳ ಹೃದಯ, ಅನಂತ ವಾತ್ಸಲ್ಯವಾರಿಧಿ ಎಂದೆನ್ನಿಸುತ್ತದೆ. ಭಾರತೀಯ ಜನತೆಯ ಸಂಸ್ಕೃತಿಯನ್ನು ಕಥೆಯ ಕನ್ನಡಿಯಲ್ಲಿ ಪ್ರತಿಬಿಂಬಿಸುತ್ತಿರುವ ಈ ಸತ್ಕೃತಿ ಮಕ್ಕಳಿಗೇಕೆ, ಮುದುಕರಿಗೂ ಅಮೃತವೆ. ಕಥಾಮೃತ, ವಚನಭಾರತ ಭಾಸಕವಿ, ಸಂಸ್ಕೃತ ನಾಟಕ, ಬಂಕಿಂಚಂದ್ರ—ಈ ಪಂಚ ರತ್ನಗಳಿರುವವರೆಗೆ 'ಪ್ರಬುದ್ಧ ಕರ್ಣಾಟಕ' ಜೀವಂತವಾಗಿರುವವರೆಗೆ ಪೂಜ್ಯ ಶ್ರೀ ಶಾಸ್ತ್ರಿಗಳೂ ಜೀವಿಸಿರುವರು. ಇವರ ಚರಣತಲದಲ್ಲಿ ಕುಳಿತು ವಿದ್ಯಾವ್ಯಾಸಂಗ ಮಾಡಿದವರಿ ಗಂತು ಆ ಗ್ರಂಥಗಳೂ ಲೇಖನಗಳೂ ಭಾಷಣಗಳೂ ಅವರನ್ನು ಅಡಿಗಡಿಗೆ ನೋಡುವ ನುಡಿಸುವ, ನುಡಿಸಿ ಆಲಿಸಿ ಆನಂದಪಡುವ ಪರಮ ಸೌಭಾಗ್ಯವನ್ನು ಇಂದೂ ಒದಗಿಸಿ ಕೊಡುತ್ತಿರುವುವು.

ಮೂವತ್ತುಮೂರು ವರ್ಷಗಳ ಹಿಂದೆ, ನಾನು ಬೆಂಗಳೂರು ಗವರ್ನಮೆಂಟ್ ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ಓದುತ್ತಿದ್ದಾಗ ಅವರ ಶಿಷ್ಯನಾದೆ. ಆಗ ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಅಸಿಸ್ಟೆಂಟ್ ಪ್ರೊಫೆಸರ್ ಆಗಿದ್ದರೂ

ಇಂಟರ್‌ಮಿಾಡಿಯಟ್ ತರಗತಿಯ ಕಲಾವಿಭಾಗದ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು. ಅವರು ದಿ. ಎಂ. ಆರ್. ಶ್ರೀ. ಅವರ 'ನಾಗರಿಕ' ಎಂಬ ನಾಟಕವನ್ನು ಕುರಿತು ಪಾಠ ಹೇಳಬೇಕಾಗಿತ್ತು. ದೇಶಭಕ್ತನಾದ ಆಧುನಿಕ ವಿದ್ಯಾವಂತ ತರುಣನೊಬ್ಬನು ಹಾಳ ಹಂಪೆಯ ಪಾಳುಗಳನ್ನು ಕಂಡು ವಿಜಯ ನಗರದ ಪ್ರಾಚೀನ ವೈಭವವನ್ನು ನೆನೆಸಿಕೊಂಡು ಭಾವಾವೇಗದಿಂದ ಆಡುವ ಮಾತುಗಳೂ ಮಾಡುವ ಮಾಟಗಳೂ ಆ ನಾಟಕದವಸ್ತು. ತರುಣ ವಿದ್ಯಾರ್ಥಿ ಗಳಲ್ಲಿ ದೇಶಾಭಿಮಾನವನ್ನು ಕೆರಳಿಸಬಲ್ಲಂಥ ಪದ್ಯ ನಾಟಕ ಅದು. ಆ ಕೃತಿಯನ್ನು ಹಿಡಿದುಕೊಂಡು ಉಪನ್ಯಾಸಮಂದಿರಕ್ಕೆ ಬರುತ್ತಿದ್ದಂತೆಯೆ ಶಾಸ್ತ್ರಿಗಳು ನಮ್ಮ ಹೃನ್ಮನಗಳನ್ನು ಸೂರೆಗೊಂಡಿದ್ದರು. ಕೊರಳು ಮುಚ್ಚಿನ ಕೋಟು, ಸರಿಗೆಯ ರುಮಾಲು, 'ಕನಳೀ ಗರ್ಭಶ್ಯಾಮ' ವರ್ಣದ ಗಂಭೀರ ಮುಖಮುದ್ರೆ, ಧೀಮಂತನ ಧೀರನಡಗೆ — ಮರೆಯುವಂತಹುವಲ್ಲ. ಇವರೂ ನಮ್ಮಂತೆಯೆ ಇದ್ದಾರೆ, ನಮ್ಮಂತೆಯೆ ತಿಳಿಯುವ ಕನ್ನಡದಲ್ಲಿ ಮಾತನಾಡುತ್ತಾರೆ, ಇವರು ನಮ್ಮವರೆ ಎನ್ನಿಸುತ್ತಿತ್ತು ಕಲಿಯುವ ಚಲವುಳ್ಳ ವಿದ್ಯಾರ್ಥಿಗಳಿಗೆ.

ಹೇಳುವ ವಿಷಯ ಎಂತಹ ಗಡುಚಾದುದಾಗಿದ್ದರೂ ಎಲ್ಲರಿಗೂ ತಿಳಿಯು ವಂತಹ ರೀತಿಯಲ್ಲಿ ಸಹಜ ಸುಂದರ ಶೈಲಿಯಲ್ಲಿ ಪ್ರತಿಪಾದಿಸುತ್ತಿದ್ದರವರು. ವಿಷಯಾಂತರಕ್ಕೆ ಜಾರುವುದೂ ಹಾರುವುದೂ ಅವರ ಋಜು ಸ್ವಭಾವಕ್ಕೆ ವಿರುದ್ಧ ವೆಂದು ತೋರುತ್ತದೆ. ಅವರು ಅಂದು ಮಾಡಿದ 'ಪಾಠ'ವನ್ನು ಇಂದು ನೆನೆಸಿ ಕೊಂಡರೆ ಅವರೆಂತಹ ಆದರ್ಶ ಅಧ್ಯಾಪಕರೆಂಬುದು ಮನವರಿಕೆಯಾಗುತ್ತದೆ. ಪಾಠದ ಚೌಕಟ್ಟಿನೊಳಗೇ ಇದ್ದು ವಿಷಯ ನಿರೂಪಣೆಗೆ ಅನುವಾಗುವಂತಹ ಹಿನ್ನೆಲೆ ಯನ್ನು ವಿವರಿಸುತ್ತಿದ್ದರು. ಒಂದೊಂದು ಪದದ ಪಾದದ ಹಿಂಬದಿಯಲ್ಲಿ ಅಡಗಿರುವ ಅರ್ಥ ಭಾವಗಳನ್ನು ಬಿಡಿಸಿ ಹೇಳುತ್ತಿದ್ದರು. 'ನಾಗರಿಕ'ವನ್ನು ಮೊದಲೇ ಓದಿ ಕೊಂಡಿದ್ದ ಅದರ ಸಂಪೂರ್ಣ ಸೊಬಗನ್ನು ಸವಿದಿರುವೆವೆಂದು ಬಗೆದು ಬೀಗುತ್ತಿದ್ದ ತರುಣರಿಗೆ ಸಹ ಶಾಸ್ತ್ರಿಗಳ ಪಾಠವನ್ನು ಕೇಳುತ್ತಿದ್ದಾಗ ಹೊಸ ಅರ್ಥ ಹೊಸಭಾವ ಗಳು ಗೋಚರಿಸುತ್ತಿದ್ದುವು. ಕಲಾವಿಭಾಗದ ವಿದ್ಯಾರ್ಥಿಗಳಾಗಿದ್ದ ನಾವು 'ಪಂಚ ರಾತ್ರ ರೂಪಕಂ' ಎಂಬ ನಾಟಕವನ್ನೂ ವ್ಯಾಸಂಗಮಾಡಬೇಕಾಗಿತ್ತು. ಭಾಸ ಮಹಾ ಕವಿಯ 'ಪಂಚರಾತ್ರ'ವನ್ನು ಕುರಿತು ವಿಮರ್ಶಾತ್ಮಕ ಸ್ವಾರಸ್ಯ ಪೂರ್ಣ ಲೇಖನವೊಂದು, 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟವಾಗಿತ್ತು. ಅದನ್ನೋದಿ ದಾಗಲೆ ನಮಗೆ ಗೊತ್ತಾದುದು, ಶಾಸ್ತ್ರಿಗಳು ಬರಿಯ ಪಾಠಕರಲ್ಲ, ಲೇಖಕರೂ ಕೂಡ ಎಂಬುದು. ಅವರ ಬಗೆಗೆ ನಮ್ಮ ಗೌರವ ಇನ್ನಷ್ಟು ಬೆಳೆದು ಬಲಿಯಿತು.

ಇದಾದ ಸುಮಾರು ನಾಲ್ಕುವರ್ಷಗಳ ಮೇಲೆ, ೧೯೩೯–೪೦ರಲ್ಲಿ ಎಂದು ತೋರುತ್ತದೆ—ಶಾಸ್ತ್ರಿಗಳು ಮೈಸೂರು ಮಹಾರಾಜಾ ಕಾಲೇಜಿಗೆ ವರ್ಗಾಯಿಸ ಲ್ಪಟ್ಟು ಕನ್ನಡ ಪ್ರಾಧ್ಯಾಪಕ ಪದವಿಗೇರಿದರು. ಆ ತನಕ ಕನ್ನಡವನ್ನು

'ಕಡ್ಡಾಯ'ವಾಗಿ ವ್ಯಾಸಂಗಮಾಡುತ್ತಿದ್ದ ಬಿ.ಎಸ್‌ಸಿ. ವಿದ್ಯಾರ್ಥಿಗಳಿಗೆ ಮಾತ್ರ ಅವರು ಬೋಧಿಸಬೇಕಾಗಿತ್ತು; ತಾವು ಕಲಿತುದನ್ನೆಲ್ಲ ಕನ್ನಡ ಮಕ್ಕಳಿಗೆ ಹಂಚಿ ತಮ್ಮ ಕಲಿಕೆಯನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬ ಹಂಬಲ ಹಾಗೆಯೇ ಉಳಿದಿದ್ದಿತೆಂದು ತೋರುತ್ತದೆ. ಮೈಸೂರಿಗೆ ಬಂದು 'ಆನರ್ಸ್' ವಿದ್ಯಾರ್ಥಿಗಳಿಗೂ ಎಂ.ಎ. ವಿದ್ಯಾರ್ಥಿಗಳಿಗೂ ಪಾಠ ಹೇಳಲು ಪ್ರಾರಂಭಿಸಿದ ಮೇಲೆ ಆ ಹಂಬಲ ಈಡೇರುವಂತಾಯಿತು.

ಕನ್ನಡದಲ್ಲಲ್ಲದೆ ಸಂಸ್ಕೃತದಲ್ಲಿಯೂ ಅಪಾರ ಪಾಂಡಿತ್ಯವನ್ನು ಪರಂಪರೆಯಿಂದ ಪಡೆದ ಭಾಗ್ಯವಂತರು ಶ್ರೀ ಶಾಸ್ತ್ರಿಗಳು. ಅವರಿಗೆ ಮೊದಲಿನಿಂದಲೂ ಅಲಂಕಾರ ಶಾಸ್ತ್ರದ ಕಡೆಗೇ ಹೆಚ್ಚು ಒಲವಿದ್ದಿತೆಂದು ತೋರುವುದು. ಕನ್ನಡ ಎಂ.ಎ. ವಿದ್ಯಾರ್ಥಿಗಳಿಗೆ ಕೂಲಂಕಷವಾಗಿ ಬೋಧಿಸಬೇಕು; ಹೀಗೆ ಹೇಳಿಕೊಡುವವರು ಹಿಂದೆ ಇರಲಿಲ್ಲ ಮುಂದೆಯೂ ಬರಲಾರರು ಎಂಬಷ್ಟು ಪರಿಷ್ಕಾರವಾಗಿ ತಿಳಿಯ ಹೇಳಬೇಕೆಂಬ ಮಹದಾಶೆ ಅವರಿಗೆ. ಅಂದು ಕನ್ನಡ ಎಂ.ಎ.ಗಳಿಗೆ ಇಂದಿರುವಷ್ಟಾದರೂ ಪುರಸ್ಕಾರವಿರಲಿಲ್ಲ. ವರ್ಷಕ್ಕೆ ಒಬ್ಬರೋ ಇಬ್ಬರೊ ಬರುತ್ತಿದ್ದರು. ಬಂದವರಿಗಾದರೂ ಸಂಸ್ಕೃತಭಾಷಾಜ್ಞಾನ ಅಷ್ಟಾಗಿ ಇರುತ್ತಿರಲಿಲ್ಲ. ಶಾಸ್ತ್ರಿಗಳು ಹೇಳುವ ಅಲಂಕಾರ ಶಾಸ್ತ್ರವನ್ನು ತಿಳಿದುಕೊಂಡು ಅರಗಿಸಿಕೊಳ್ಳುವುದಕ್ಕೆ ಸಂಸ್ಕೃತ ಭಾಷೆಯ ಪರಿಚಯವೂ ಇರಲೇಬೇಕಾಗಿತ್ತು. ಆದರೆ ಆ ತಪಶ್ಶಕ್ತಿ ಇಚ್ಛಾಶಕ್ತಿ ಶಿಷ್ಯವಾತ್ಸಲ್ಯಗಳೆದುರಿಗೆ ಯಾವ ಎಡರು ತೊಡರುಗಳು ನಿಂತಾವು?

ಈ ಲೇಖಕನಿಗೆ ಶಾಸ್ತ್ರಿಗಳ ಪದತಲದಲ್ಲಿ ಕುಳಿತು ಅಲಂಕಾರಶಾಸ್ತ್ರವನ್ನು ಹೇಳಿಸಿಕೊಳ್ಳುವ ಸದವಕಾಶ ಲಭಿಸಿತ್ತು. ಭರತಾಚಾರ್ಯನ ನಾಟ್ಯ ಶಾಸ್ತ್ರದಿಂದಲೆ ಅಲಂಕಾರಶಾಸ್ತ್ರದ ಪಾಠಗಳು ಆರಂಭವಾದುವು. ದಂಡಿಯ ಕಾವ್ಯಾದರ್ಶವಾಯಿತು, ಅನಂತರ ವಾಮನನ ಕಾವ್ಯಾಲಂಕಾರ ಸೂತ್ರವೃತ್ತಿ, ಮುಂದೆ ಆನಂದವರ್ಧನನ ಧ್ವನ್ಯಾಲೋಕ, ಕ್ಷೇಮೇಂದ್ರನ ಔಚಿತ್ಯವಿಚಾರ ಚರ್ಚೆ. ಸಂಸ್ಕೃತ ಲಿಪಿಯನ್ನು ಸರಾಗವಾಗಿ ಓದಲೂ ಬಾರದಿದ್ದವನಿಗೆ ಅಂಥ ಸುಪ್ರೌಢಶಾಸ್ತ್ರ ಗ್ರಂಥಗಳನ್ನು ವಿದ್ವನ್ಮಣಿಗಳಿಂದ ಪೂಜ್ಯ ಶ್ರೀ ಶಾಸ್ತ್ರಿಗಳು ನನಗಾಗಿ ಓದುತ್ತಿದ್ದ ಬಗೆಯನ್ನು ನೆನೆಸಿಕೊಂಡರೆ ಈಗಲೂ ಅಮಿತಾನಂದವಾಗುತ್ತಿದೆ. ಅತಿ ನಿಧಾನವಾಗಿ ಸಂಧಿ ಸಮಾಸಗಳನ್ನು ಬಿಡಿಸಿ ಅಗತ್ಯವಾದ ಕಡೆ ಒತ್ತಿ ಒತ್ತಿ ಮತ್ತೆ ಮತ್ತೆ ಹೇಳುತ್ತಿದ್ದರು, ಹೇಳುವಾಗಲೆ ನನಗೂ ಅರ್ಥವಾಗುವಂತೆ. ತಾವು ಓದಿದ ಪ್ರತಿ ಶ್ಲೋಕವನ್ನೂ ಬಿಡಿಸಿ ಬಿತ್ತರಿಸಿ ಅರ್ಥಮಾಡುವರು, ಸಮುಚಿತವಾದ ದೈನಂದಿನ ಜೀವನದ ಸಾಮ್ಯಗಳನ್ನೂ ಅನುಭವಗಳನ್ನೂ ಉದಾಹರಿಸಿ. ಅಲಂಕಾರಕ್ಕೆ ಪ್ರಾಧಾನ್ಯವಿರಬಾರದೆಂಬುದನ್ನು ಹೇಳುವಾಗ, "ಬಾಯೊಳಗೆ ಹಲ್ಲುಗಳಿರಬೇಕು, ಇರುತ್ತವೆ. ಅವಿಲ್ಲದಿದ್ದರೆ ಬೊಚ್ಚುಬಾಯಿ. ಹಾಗೆಂದು ಹಲ್ಲುಗಳೇ ಪ್ರಧಾನವಾಗಿ ತುಟಿಮೀರಿ ಹೊರಗೆಬಂದು ಕಾಣಿಸಿಕೊಂಡರೆ?"—ನೆನೆಸಿಕೊಂಡರೆ ಈಗಲೂ ನಗುಬರುವುದು.

ಹೇಳುತ್ತಿದ್ದುದು 'ಕಬ್ಬಿಣದ ಕಡಲೆ'ಯಂತಹ ಶಾಸ್ತ್ರೀಯ ವಿಷಯ. ಕೇಳುವ ವಿದ್ಯಾರ್ಥಿಯೊ, ಸಂಸ್ಕೃತಭಾಷಾಜ್ಞಾನ ಸಾಕಷ್ಟಿಲ್ಲದ ಅಸಡ್ಡೆಯ ಸ್ವಭಾವದ ಏಕೈಕ 'ಅಲಂಕಾರ ವಿದ್ಯಾರ್ಥಿ'. ಅಂಥವನಿಗೂ ಮನಂಬುಗುವಂತೆ ಬೋಧಿಸುವುದು ಸಾಮಾನ್ಯ ಪವಾಡವೆ? ಎರಡು ಘಂಟೆಗಳು ಎರಡು ನಿಮಿಷಗಳಂತೆ ಕಳೆದು ಹೋಗುತ್ತಿದ್ದುವು. ಆಮೇಲೆ ಬಂದಿತುನೋಡಿ 'ಹಿಮಹಿಮ'ಭಟ್ಟನ 'ವ್ಯಕ್ತಿ ವಿವೇಕ'; ಅದು ತರ್ಕಶಾಸ್ತ್ರ ಪ್ರಧಾನವಾದ ಅಲಂಕಾರಶಾಸ್ತ್ರವೆಂದೆ ನನ್ನ ಭಾವನೆ. ಒಂದುಸಲ ಪೀಠಿಕಾರೂಪವಾಗಿ ಕೆಲವು ವಿಷಯುಗಳನ್ನು ಹೇಳಿದರು. ಎರಡನೆಯ ದಿನವೂ ಹೇಗೋ ಕಳೆಯಿತು. ಮೂರನೆಯ ದಿನ ಈ ಏಕೈಕ ವಿದ್ಯಾರ್ಥಿ ಗುರುವಿನೆದುರಿಗೇ ತೂಕಡಿಸಹತ್ತಿದ. ಇದನ್ನು ಕಂಡ ಗುರುಗಳು ಹಠಾತ್ತಾಗಿ "ಇಲ್ಲಿಗೆ ಸಾಕು" ಎಂದರು. ಮುಂದೆ ಒಂದು ಶ್ಲೋಕವನ್ನೂ 'ಮಹಿಮಭಟ್ಟ'ನಿಂದ ಓದಲಿಲ್ಲ, ಈ ಕೊಡ ತುಂಬಿತು ಹೆಚ್ಚು ನೀರನ್ನು ಒಳಕೊಳ್ಳಲಾರದು ಎಂದುಕೊಂಡು.

ಅಂತಹ ವಿದ್ಯಾಸಾಗರರು ನನ್ನ ಗುರುಗಳು. ತಾವು ಗಳಿಸಿದ್ದ ಅಮೂಲ್ಯ ವಿದ್ಯೆಯ ಸಾರಸರ್ವಸ್ವವನ್ನೂ ಶಿಷ್ಯವಾತ್ಸಲ್ಯವನ್ನೂ ಸೇರಿಸಿ ಸವೆದು ತಮ್ಮ ಶಿಷ್ಯರಿಗೆ ಮುಕ್ತಮನಸ್ಸಿನಿಂದ ಮುಕ್ತಹಸ್ತದಿಂದ ಧಾರೆಯೆರೆಯಬೇಕೆಂಬ ಬಲ್ಬಯಕೆ ಅವರಿಗಿದ್ದಿತು. ನಾನಂತು ಅಂತಹ ವಿದ್ಯಾರ್ಥಿಯಲ್ಲ. ಇನ್ನಾವ ವಿದ್ಯಾರ್ಥಿಯೋ ಅವರ ಹಂಬಲವನ್ನು ಈಡೇರಿಸಿರಬಹುದು.

ಪೂಜ್ಯ ಶ್ರೀ ಶಾಸ್ತ್ರಿಗಳು ಕನ್ನಡ ನಾಡು ನುಡಿಗಳ ಅಭ್ಯುದಯಕ್ಕಾಗಿ ಹೇಗೆ ಎಷ್ಟು ದುಡಿದಿರುವರೆಂಬುದು ಬೇರೆ ಲೇಖನಗಳಲ್ಲಿ ನಿರೂಪಿಸಲ್ಪಟ್ಟಿದೆ. ತಮ್ಮ ಕನಸೆಲ್ಲ ನನಸಾಗುತ್ತಿರುವುದನ್ನು ಕಣ್ಣಾರೆ ಕಂಡು, ತಾವು ಮತ್ತು ತಮ್ಮಂಥವರು ಸೇರಿ ಎಳೆದಂಥ ಕನ್ನಡದ ತೇರನ್ನು ಮುಂದುವರಿಸುವ ಅಭಿಮಾನಿಗಳಿರುವರೆಂಬುದನ್ನು ಕಂಡು ಸಂತೃಪ್ತಿಯಿಂದ ನಿಶ್ಚಿಂತೆಯಿಂದ ಕಣ್ಮರೆಯಾಗಿದ್ದಾರೆ. ಕಾಲಗರ್ಭದಲ್ಲಿ ಸೇರಿಕೊಂಡಿರುವಂತೆ ತಮ್ಮ ಕೃತಿಗಳಲ್ಲೆಲ್ಲ ಹುದುಗಿರುವರು. 'ಬಿತ್ತಿದರೆ ಹುಟ್ಟಿ ಬಂದಾರು' ಎಂಬ ಗಾದೆ ಮಾತು ಹುಟ್ಟಿರುವುದು ಇಂಥವರಿರುವುದರಿಂದಲೆ. ಕನ್ನಡನಾಡು ಇರುವವರೆಗೆ ಇವರಿರುತ್ತಾರೆ.

ಎಚ್. ಎಸ್. ಹರಿಶಂಕರ್

# ಸರ್ವಜ್ಞ ಕವಿ

ಜ್ಞಾನಪ್ರಸಾರವನ್ನು ಧ್ಯೇಯವಾಗಿಟ್ಟುಕೊಂಡು ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿ ನುರಿತ ವಿದ್ವಾಂಸರುಗಳಿಂದ ಉಪನ್ಯಾಸಗಳನ್ನೇರ್ಪಡಿಸಿ, ಆ ಉಪನ್ಯಾಸಗಳನ್ನು ಅಚ್ಚುಮಾಡಿಸಿ 'ಪ್ರಚಾರ ಪುಸ್ತಿಕೆ'ಗಳನ್ನು ಕನ್ನಡ ಜನತೆಗೆ ಕಳೆದ ಮುವತ್ತು, ಮುವತ್ತೈದು ವರ್ಷಗಳಿಂದಲೂ ಮೈಸೂರು ವಿಶ್ವವಿದ್ಯಾನಿಲಯವು ನೀಡುತ್ತಿದೆ. 'ಸರ್ವಜ್ಞ ಕವಿ' ಇಂತಹ ವಿಚಾರಪೂರ್ಣವಾದ ಪುಟ್ಟಪುಸ್ತಕ.

ಸರ್ವಜ್ಞನನ್ನು ಕುರಿತ ಪ್ರೊ. ಎ. ಆರ್. ಕೃ. ಅವರ ಅಧ್ಯಯನ, ಚಿಂತನ, ಮನನಗಳ ಸಾರಸರ್ವಸ್ವದಂತಿದೆ ಅಂಗೈ ಅಗಲದ ಈ ಕಿರುಹೊತ್ತಿಗೆ. ಹಲವಾರು ವರ್ಷಗಳ ಅಧ್ಯಾಪನ, ಸಂಶೋಧನೆ ಮತ್ತು ಅಧ್ಯಯನದ ಅವಿರತ ದುಡಿಮೆಯ ಫಲ, ಸಾರರೂಪವಾಗಿ ಇದರಲ್ಲಿ ಮೂಡಿಬಂದಿದೆ. ವಿಷಯದ ಮೇಲಿನ ಪ್ರಭುತ್ವ, ಕಥನಕಲೆಯ ಜಾಣ್ಮೆ ಇವುಗಳನ್ನೂ ಎ. ಆರ್. ಕೃ ರವರು ಇಲ್ಲಿ ಮೆರೆದಿದ್ದಾರೆ. ವಿಷಯ ಎಷ್ಟು ಜನಪ್ರಿಯವಾಗುವುದೋ ನಿರೂಪಣೆ ಅಷ್ಟು ಕಠಿಣವಾಗುತ್ತದೆ. ಆದರೆ ಈ ಪುಟ್ಟ ಹೊತ್ತಿಗೆಯಲ್ಲಿ ಜನಪ್ರಿಯವಾದ ವಿಷಯದ ವೈಜ್ಞಾನಿಕ ನಿರೂಪಣೆ ವಿಶ್ಲೇಷಣೆ ಅತ್ಯಂತ ಸಫಲವಾಗಿ ಮೂಡಿಬಂದಿದೆ. ಸರ್ವಜ್ಞನಂತಹ ಕವಿಯನ್ನು ಕುರಿತು, ಅವನ ವಚನಗಳ ಶೈಲಿ ಸ್ವರೂಪವನ್ನು ಕುರಿತು ಸಂಗ್ರಹವಾಗಿ, ಒಂದು ವಿಷಯವನ್ನೂ ಬಿಡದಂತೆ ನಿರೂಪಿಸುವುದು ಸುಲಭದ ಮಾತಲ್ಲ. ಆದರೆ ಪ್ರೊಫೆಸರ್ ಕೃಷ್ಣಶಾಸ್ತ್ರಿಗಳ ಈ ಪುಟ್ಟ ಪುಸ್ತಕ ಅದನ್ನು ಸಾಧಿಸಿದೆಯೆಂದು ಧೈರ್ಯವಾಗಿ ಹೇಳಬಹುದು.

೬೨ ಪುಟಗಳ ಈ ಪುಸ್ತಿಕೆಯಲ್ಲಿ ಲೇಖಕರು ವಿಷಯವನ್ನು ಪ್ರತಿಪಾದಿಸಿರುವುದು ಎಂತಹ ಜನಸಾಮಾನ್ಯರ ಹೃದಯವನ್ನೂ ಸೆರೆಹಿಡಿಯಬಲ್ಲುದು ಎನ್ನುವುದಕ್ಕೆ ಸಾಕ್ಷಿಯಾಗಿದೆ. ಕನ್ನಡಸಾಹಿತ್ಯ ಬೆಳೆದು ಬಂದು ರೀತಿಯನ್ನು ಬಹು ಸಂಕ್ಷಿಪ್ತವಾಗಿ ವಿವರಿಸಿ ಸಂಸ್ಕೃತ ಭೂಯಿಷ್ಠವಾದ ಕಂದವೃತ್ತಗಳು ಕಾಲಕ್ರಮೇಣ ಹೇಗೆ ಷಟ್ಪದಿ ಸಾಂಗತ್ಯ, ರಗಳೆ, ತ್ರಿಪದಿ, ಚೌಪದಿ ಮೊದಲಾದ ಕನ್ನಡ ಪದ್ಯಜಾತಿಗಳಿಗೆ ದಾರಿ ಮಾಡಿಕೊಟ್ಟವು ಎನ್ನುವುದನ್ನು ತೋರಿಸಿಕೊಟ್ಟಿದ್ದಾರೆ. ಕನ್ನಡ ನಮ್ಮದೆಂಬ

ಭಾವನೆ ಹೆಚ್ಚಾಗಿ, ಮನಸ್ಸಿಗೆ ಅಂಟಿ, ಹೃದಯವನ್ನು ಹೊಕ್ಕು, ಜೀವನವನ್ನು ಹಸನು ಮಾಡುವುದು ಹೇಗೆ ಸಾಧ್ಯವಾಯಿತು ಎನ್ನುವುದನ್ನು ತೋರಿಸಿಕೊಟ್ಟಿದ್ದಾರೆ.

ಈ ಪುಟ್ಟ ಪುಸ್ತಕದಲ್ಲಿ ಸರ್ವಜ್ಞನ ವಿಷಯವಾಗಿ ಏನಿಲ್ಲ? ಸರ್ವಜ್ಞನ ಕಾಲ ದೇಶ ಮತಗಳಿಂದ ಹಿಡಿದು ಸರ್ವಜ್ಞನ ಶೈಲಿ ಹಾಗೂ ಅವನು ಬಳಸಿಕೊಂಡಿರುವ ತ್ರಿಪದಿಯ ವಿಷಯದವರೆಗೂ ನಿರಂತರವಾಗಿ ಲೇಖಕರ ವಿಚಾರಧಾರೆ ಹರಿದು ಬಂದಿದೆ.

ಪೂರ್ವಸೂರಿಗಳ ಸ್ಮರಣೆಯನ್ನು ಕುರಿತು ಹೇಳುವಲ್ಲಿ ಅವರು ಹೇಳುವ ಮಾತು ಮೆಚ್ಚುವಂತಹದು. 'ಸರ್ವಜ್ಞನ ಹೆಸರಿನಲ್ಲಿರುವ ಸಾವಿರಾರು ವಚನಗಳಲ್ಲಿ ಇತರರು ಬರೆದು ಸೇರಿಸಿರುವ ಹಲವು ಪದ್ಯಗಳಿರುವಂತೆ ತೋರುತ್ತದೆ. ಶ್ರೀಮಾನ್ ಚನ್ನಪ್ಪ ಉತ್ತಂಗಿ ಅವರು ಇವುಗಳನ್ನೆಲ್ಲ ಶೇಖರಿಸಿ, ಶೋಧಿಸಿ, ಬಹು ಕಷ್ಟಪಟ್ಟು ಸಂಪಾದನೆ ಮಾಡಿದ್ದಾರೆ' (ಪುಟ–೩). ಹೀಗೆಯೇ ಸರ್ವಜ್ಞನ ವಿಷಯದಲ್ಲೂ ಹೇಳಿರುವ ಖಚಿತವಾದ ಮಾತುಗಳನ್ನು ಇಲ್ಲಿ ನೋಡಬಹುದು. 'ತಾಯಿತಂದೆಗಳ ವಿಚಾರವಾಗಿ ಹುಟ್ಟಿರುವ ಹಲವು ದಂತಕಥೆಗಳೂ ಎಷ್ಟರ ಮಟ್ಟಿಗೆ ನಂಬಲರ್ಹವೋ ಹೇಳುವುದಕ್ಕಾಗುವುದಿಲ್ಲ. ಅವನ ಬಾಲ್ಯದ ವಿಚಾರ ನಮಗೆ ಏನೂ ಖಚಿತವಾಗಿ ಗೊತ್ತಿಲ್ಲವೆಂದು ಒಪ್ಪಿಕೊಳ್ಳುವುದೇ ಮೇಲು' (ಪುಟ ೪). ಹೀಗೆ ಪ್ರೊಫೆಸರ್ ಕೃಷ್ಣ ಶಾಸ್ತ್ರಿಗಳು ಯಾವ ವಿಷಯವನ್ನೇ ಆಗಲಿ ತಮಗೆ ಅನಿಸಿದುದನ್ನು ಮುಚ್ಚುಮರೆಯಿಲ್ಲದೆ ಹೇಳುತ್ತಾರೆ.

ಕಾಲಜ್ಞಾನವನ್ನು ಕುರಿತು ಪ್ರಸ್ತಾಪಮಾಡುತ್ತಾ 'ಸರ್ವಜ್ಞನ ಹೆಸರಿನಲ್ಲಿರುವ 'ಕಾಲಜ್ಞಾನ' ವಚನಗಳನ್ನು ನೋಡಿದರಂತೂ ಈ ಸಂದೇಹವು ಬಲವಾಗುತ್ತದೆ. ಇವುಗಳಲ್ಲಿ ಮೊನ್ನೆ ಮೊನ್ನೆ ನಡೆದ ಸಂಗತಿಗಳೂ ಸೇರಿಕೊಂಡಿವೆ........ ವಿದ್ಯಾರಣ್ಯರ ಹೆಸರಿನಲ್ಲಿಯೂ ಒಂದು 'ಕಾಲಜ್ಞಾನ'ವಿದೆ. ಆ ಕಾಲಜ್ಞಾನವನ್ನು ಅವರೂ ಬರೆಯಲಿಲ್ಲ. ಈ ಕಾಲಜ್ಞಾನವನ್ನು ಇವನೂ ಬರೆಯಲಿಲ್ಲ; ಇದನ್ನು ಬರೆದವನು ಮತ್ತೊಬ್ಬ ಕವಿಯಾಗಿರುವುದು ಸಂಭವ' (ಪುಟ ೬). ಎಂದಿದ್ದಾರೆ. ಹೀಗೆ ಎಷ್ಟೋ ಜಟಿಲವಾದ ವಿಷಯಗಳನ್ನು ಎತ್ತಿಕೊಂಡು ಸರಳವಾದ ರೀತಿಯಲ್ಲಿ ನಿರೂಪಣೆಯನ್ನು ನೀಡಿ ಸಾಮಾನ್ಯ ಓದುಗರಿಗೂ ವಿಷಯದಲ್ಲಿ ಆಸಕ್ತಿ ಬರುವಂತೆ ಪ್ರಚೋದನೆಯನ್ನು ನೀಡುತ್ತಾರೆ.

ಸರ್ವಜ್ಞ ಎನ್ನುವುದು ಕವಿಯ ಹೆಸರೆ? ಬಿರುದೆ? ಇದನ್ನು ಹೇಳುವುದು ಕಷ್ಟ. ಆದರೆ ಪ್ರೊ. ಎ. ಆರ್. ಕೃ ರವರು ಇದನ್ನು ಪರಿಭಾವಿಸಿ ಆದಷ್ಟು ಸರಳವಾಗಿ ತಮ್ಮ ಪ್ರತಿಪಾದನೆಯನ್ನು ಮುಂದಿರಿಸಿದ್ದಾರೆ. 'ಸರ್ವಜ್ಞ ಎಂಬುದು ಅವನಿಗೆ ಇತರರು ಕೊಟ್ಟ ಬಿರುದು ಎಂದು ಕೆಲವರು ಊಹಿಸುತ್ತಾರೆ. ಈ ಊಹೆಗೆ ಆಧಾರವಿಲ್ಲ. ಯಾರೋ ಕೊಟ್ಟ ಇಂಥ ಬಿಗುಮಾನದ ಬಿರುದನ್ನು ಅವನು ಪ್ರತಿ ವಚನಕ್ಕೂ ಸೇರಿಸಿಕೊಂಡಿದ್ದಾನೆಂದರೆ ಒಪ್ಪುವ ಮಾತಲ್ಲ........ಹಿಂದಿನ ವೀರ

ಶೈವ ವಚನಗಳನ್ನೂ ದಾಸರ ಕೀರ್ತನೆಗಳನ್ನೂ ನೋಡಿದರೆ ಅವರು ತಮ್ಮ ಹಾಡಿನ ಕೊನೆಗೆ ಅಂಕಿತ ಹಾಕುವುದು ಕಂಡುಬರುತ್ತದೆ. ಅದರಂತೆ 'ಸರ್ವಜ್ಞ'ಎಂಬುದು ಎಲ್ಲವನ್ನು ತಿಳಿದ ಜ್ಞಾನಸ್ವರೂಪನಾದ ಭಗವಂತನನ್ನು ಮನಸ್ಸಿನಲ್ಲಿಟ್ಟುಕೊಂಡು ಉಪಯೋಗಿಸಿರುವ ಅಂಕಿತವಾಗಿ ಕಾಣುತ್ತದೆ.' (ಪುಟ ೭)

ಕವಿಯ ಮತವನ್ನು ವಿಶ್ಲೇಷಿಸುವಾಗಲೂ ಅವರು ಹಿಡಿದಿರುವ ಮಾರ್ಗ ಸರಿ ಎನ್ನಿಸುತ್ತದೆ. 'ಸರ್ವಜ್ಞ' ಎನ್ನುವ ಅಂಕಿತದಿಂದಲೇ ಕವಿಯ ಮತವನ್ನು ಕಂಡುಹಿಡಿಯುವುದು ಕಷ್ಟ. ಆದರೆ ಸರ್ವಜ್ಞನ ವಚನಗಳನ್ನು ತೆಗೆದು ನೋಡಿದರೆ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಅನೇಕ ವಿಷಯುಗಳು ಅಲ್ಲಿ ಅಡಕವಾಗಿವೆ. ಷಟ್‌ಸ್ಥಲ, ಅಷ್ಟಾವರಣಗಳನ್ನು ಕುರಿತ ಅನೇಕ ವಿಷಯಗಳು ಕಾಣಸಿಗುತ್ತವೆ. 'ವಚನ'ಗಳು ಎಂದು ಅವನ ಪದ್ಯಗಳು ರೂಢಿಯಾಗಿರುವುದೂ ಇದನ್ನೇ ಸೂಚಿಸುತ್ತದೆ. ಆದ್ದರಿಂದ ಕವಿಯು ವೀರಶೈವನೆಂದು ಲೇಖಕರು ಪ್ರತಿಪಾದಿಸಿರುವುದು ಸರಿ ಎನ್ನಿಸುತ್ತದೆ. ಹೀಗೆಯೇ ಇನ್ನೂ ಹಲವಾರು ವಿಷಯಗಳನ್ನು ಈ ಪುಟ್ಟ ಪುಸ್ತಕದಲ್ಲಿ ನೋಡಬಹುದು.

ವಿಷಯ ನಿರೂಪಣೆಯ ಸೌಂದರ್ಯ, ಲೇಖಕರ ಖಚಿತ ಅಭಿಪ್ರಾಯ ಮಂಡನೆಯ ಕೌಶಲ, ಇವುಗಳನ್ನು ಮನದಟ್ಟುಮಾಡಿಸುವ ಒಂದೆರಡು ಉಲ್ಲೇಖಗಳೊಡನೆ ಈ ಲೇಖನವನ್ನು ಮುಗಿಸಬಹುದು. ಈ ನಿರೂಪಣೆಗಳು ಜನ ಸಾಮಾನ್ಯರ ಗಮನವನ್ನು ಸೆಳೆದು ಅವರಿಗೆ ಕನ್ನಡದ ಪ್ರಾಚೀನ ಕವಿಗಳ ಮತ್ತು ಕಾವ್ಯಗಳ ಬಗ್ಗೆ ಹೆಚ್ಚು ಆದರಣೆಯನ್ನು ಹುಟ್ಟಿಸಲು ಪ್ರಚೋದನೆಯನ್ನು ನೀಡುತ್ತವೆ. ಜನಸಾಮಾನ್ಯರಷ್ಟೇ ಅಲ್ಲ, ವಿದ್ವಾಂಸರೂ ಕೂಡ ಪ್ರೊಫೆಸರ್ ಎ. ಆರ್. ಕೃ ಅವರ ಶೈಲಿಯನ್ನು ಮೆಚ್ಚಿ ತಲೆದೂಗದೆ ಇರಲಾರರು.

'ಸರ್ವಜ್ಞನು ಕನ್ನಡಿಗರ ತಿರುವಳ್ಳುವರ್, ಕನ್ನಡಿಗರ ವೇಮನ' (ಪುಟ ೫೧)

'ಸರ್ವಜ್ಞನ ಬರವಣಿಗೆಯೂ ಹೀಗೆಯೇ, ಕೆಲವು ವೇಳೆ ಧೂರ್ತನಂತೆ ವರ್ತಿಸುತ್ತದೆ, ದನದಂತೆ ನುಗ್ಗುತ್ತದೆ.' (ಪುಟ ೫೭)

'ಸರ್ವಜ್ಞನು ಜನತೆಯ ಕವಿ, ಅವನ ತ್ರಿಪದಿಯು ಜನತೆಯ ಪದ್ಯ; ಹಾಗೇ ಅದರ ಭಾಷೆಯೂ ಜನದ ಭಾಷೆ.' (ಪುಟ ೫೭)

'ಸರ್ವಜ್ಞನು ಪ್ರೌಢವಾದ ಅಲಂಕಾರಗಳ ಗೋಜಿಗೆ ಹೋಗುವುದಿಲ್ಲ, ಉಪಮಾಲಂಕಾರವೊಂದೇ ಅವನಿಗೆ ಸಾಕು; ಅದು ಯಥೇಚ್ಛವಾಗಿದೆ; ಕವಿಗೆ ಅದೇ ಒರೆಗಲ್ಲು' (ಪುಟ ೫೯)

'ಬರವಣಿಗೆಯಲ್ಲಿ ಸರ್ವಜ್ಞನ ತ್ರಿಪದಿಯು 'ಕುಜಿಳಿ' ನಷ್ಟೇ ಸಾರವತ್ತಾ

ಪದ್ದು, ಅರ್ಥಗರ್ಭಿತವಾದದ್ದು. ಅರ್ಥವಿಲ್ಲದ 'ಮಾತಿನ ಮಾಲೆ'ಯಲ್ಲಿ ಸರ್ವಜ್ಞನಿಗೆ ಸರ್ವಥಾ ಗೌರವವಿಲ್ಲ' (ಪುಟ ೬೧)

ಮೇಲೆಕಾಣಿಸಿದ ನಾಲ್ಕಾರು ಉಲ್ಲೇಖಗಳನ್ನು ಗಮನಿಸಿದರೇ ಸಾಕು ಪ್ರೊಫೆಸರ್ ಕೃಷ್ಣಶಾಸ್ತ್ರಿಗಳ ಬರೆವಣಿಗೆಯಲ್ಲಿ ಗೌರವ ಮೂಡುತ್ತದೆ, ಆದರ ಹುಟ್ಟುತ್ತದೆ. ಈ ಚಿಕ್ಕ ಪುಸ್ತಕದಲ್ಲಿ ಹೀಗೆಯೇ ಅರಸುತ್ತಾಹೋದರೆ ಇಂತಹ ಆಣಿಮುತ್ತುಗಳನ್ನು ಎತ್ತಿ ತೋರಿಸುವುದು ಕಷ್ಟವೇನೂ ಅಲ್ಲ. ಕನ್ನಡದ ಪ್ರಾಚೀನ ಕವಿಗಳನ್ನು ಕುರಿತ ಇಂತಹ ಪುಸ್ತಕಗಳು ಹೆಚ್ಚಿದಷ್ಟೂ ನಮ್ಮ ಕನ್ನಡ ಸಂಪತ್ತು ಇನ್ನಷ್ಟು ಶ್ರೀಮಂತವಾಗುತ್ತದೆ ಎಂದು ಧೈರ್ಯವಾಗಿ ಹೇಳಬಹುದು.

ಎಂ. ರಾಮರಾವ್

# ಕೃಷ್ಣಶಾಸ್ತ್ರಿಗಳ "ಬಂಕಿಮಚಂದ್ರ"

The Function of Criticism (ವಿಮರ್ಶೆಯ ಕೆಲಸ) ಎಂಬ ತನ್ನ ಪ್ರಸಿದ್ಧವಾದ ಪ್ರಬಂಧದಲ್ಲಿ ಮಾಥ್ಯೂ ಆರ್ನಾಲ್ಡ್ ಕವಿ, ವಿಮರ್ಶೆ ಕೈಗೊಳ್ಳಬೇಕಾದುದು ಏನು ಎಂಬ ಪ್ರಶ್ನೆಯನ್ನು ಚರ್ಚಿಸುತ್ತ ನಿಷ್ಪಕ್ಷಪಾತವಾದ ರೀತಿಯಲ್ಲಿ ಸತ್ಯಾನ್ವೇಷಣೆ ಮಾಡುವುದೂ ಜಗತ್ತಿನಲ್ಲಿ ಹೊರಬಿದ್ದಿರುವ ಅತ್ಯುತ್ತಮವಾದ ಆಲೋಚನೆಗಳನ್ನೂ ಹೇಳಿಕೆಗಳನ್ನೂ ವಾಚಕ ವೃಂದದಲ್ಲಿ ಹರಡುವುದೂ ಅದರ ಪ್ರಮುಖ ಕರ್ತವ್ಯವೆಂದು ನುಡಿದಿದ್ದಾನೆ. ಆದರೆ ಇಂಥ ಆಲೋಚನೆಗಳೂ ಹೇಳಿಕೆಗಳೂ ಯಾವ ಒಂದು ಭಾಷೆಯ ಸ್ವತ್ತೂ ಅಲ್ಲ. ಬೇರೆ ಬೇರೆಯ ದೇಶಗಳಲ್ಲಿ ಪ್ರತಿಭಾಶಾಲಿಗಳು ತಮ್ಮ ತಮ್ಮ ಭಾಷೆಗಳಲ್ಲಿ ತಮ್ಮ ಆಲೋಚನೆಗಳನ್ನೂ ಕಲಾಕೃತಿಗಳನ್ನೂ ಬಿಟ್ಟು ಹೋಗಿದ್ದಾರೆ. ಪೂರ್ಣ ವಿದ್ಯಾವಂತರೂ ಸುಸಂಸ್ಕೃತರೂ ಆಗಲೆಳಸುವವರು ಅವುಗಳ ಪರಿಚಯ ಪಡೆಯಬೇಕು. ಈ ಉದ್ದೇಶದ ಸಾಧನೆಗೆ ಒಂದು ಕಡೆ ಭಾಷಾಂತರಗಳು ಅವಶ್ಯವಾದರೆ ಇನ್ನೊಂದು ಕಡೆ ವಿಮರ್ಶಾ ಲೇಖನಗಳೂ ಅಗತ್ಯವಾಗುತ್ತವೆ. ತಮ್ಮ ಭಾಷೆಗಳಲ್ಲಿರುವ ಉತ್ಕೃಷ್ಟ ಗ್ರಂಥಗಳನ್ನು ಜನಪ್ರಿಯವಾಗಿ ಮಾಡುವುದರ ಜೊತೆಗೆ ಇತರ ಭಾಷೆಗಳಲ್ಲಿರುವ ಮೇಲ್ತರಗತಿಯ ಬರಹಗಳನ್ನೂ ಕುರಿತು ಆಯಾ ಭಾಷೆಗಳನ್ನು ಬಲ್ಲವರು ವರ್ಣನಾತ್ಮಕವೂ ವಿಮರ್ಶಾತ್ಮಕವೂ ಆದ ಪುಸ್ತಕಗಳನ್ನು ರಚಿಸಿ ಪ್ರಪಂಚದ ಅತ್ಯುತ್ತಮವಾದ ಸಾಹಿತ್ಯದ ಅರಿವನ್ನು ತಮ್ಮವರಿಗೆ ನೀಡಬೇಕು. ಹೀಗೆ ಮಾಡುವುದರಿಂದ ಸಾಹಿತ್ಯ ಪ್ರೇಮಿಗಳ ಮತ್ತು ವಿಚಾರಪರರ ಜೀವನಾನುಭವ ಮತ್ತು ಆಲೋಚನೆಗಳು ಹೆಚ್ಚು ಆಳವೂ ವಿಶಾಲವೂ ಆಗುವುದಲ್ಲದೆ ಅವರ ಅಭಿರುಚಿ ಪರಿಶುದ್ಧವಾಗಿ ವಿಮರ್ಶಾ ಶಕ್ತಿ ಸ್ಫುಟವೂ ನಿಷ್ಕೃಷ್ಟವೂ ಆಗುತ್ತದೆ. ತನ್ಮೂಲಕ ಎಲ್ಲ ಭಾಷೆಗಳಲ್ಲೂ ದೋಷರಹಿತವಾದ ಸಾಹಿತ್ಯಸೃಷ್ಟಿ ಸಾಧ್ಯವಾಗುತ್ತದೆ, ಸುಲಭವಾಗುತ್ತದೆ.

ಡಾಕ್ಟರ್ ಎ. ಆರ್. ಕೃಷ್ಣಶಾಸ್ತ್ರಿಗಳು ಬಂಕಿಮಚಂದ್ರನನ್ನು ಕುರಿತು ರಚಿಸಿರುವ ಉದ್ಗ್ರಂಥವನ್ನು ನಾವು ಸ್ವಾಗತಿಸಬೇಕಾದುದೂ ಅದಕ್ಕೆ ಗೌರವಾದರಗಳನ್ನು ನೀಡಬೇಕಾದುದೂ ಈ ಕಾರಣದಿಂದ. ಬಂಕಿಮಚಂದ್ರ

ಬಂಗಾಳೀ ಲೇಖಕನಾದರೂ ಆಧುನಿಕ ಭಾರತೀಯ ಸಾಹಿತ್ಯದ ಆಚಾರ್ಯರಲ್ಲಿ ಒಬ್ಬನೆಂದು ಖ್ಯಾತಿಗಳಿಸಿದ್ದಾನೆ. ಪಾಶ್ಚಾತ್ಯ ಸಾಹಿತ್ಯ ಕೃತಿಗಳನ್ನೂ ಸಾಹಿತ್ಯ ಮಾರ್ಗಗಳನ್ನೂ ಅನುಸರಿಸಿ ಗ್ರಂಥರಚನೆಗೈದು ಬಂಗಾಳಿ ಭಾಷೆ ಮತ್ತು ಸಾಹಿತ್ಯಗಳಲ್ಲಿ ನವೋದಯವನ್ನುಂಟುಮಾಡಿದವರಲ್ಲಿ ಅವನು ಅಗ್ರೇಸರ. ಆ ಕೆಲಸವನ್ನು ತಾನು ಮಾಡಿದ್ದಲ್ಲದೆ ತನ್ನ ಕಾಲದ ಉದಯೋನ್ಮುಖರಾದ ತರುಣ ಲೇಖಕರನೇಕರಿಗೆ ಮಾದರಿಯೂ ಆಗಿ "ತಾಯ್ನುಡಿಯ ತಮ್ಮಡಿ" ಯಾಗಿ ಯಶಸ್ಸನ್ನು ಗಳಿಸಿದವನು. ವಿದ್ವತ್ಸಭೆಯೊಂದರಲ್ಲಿ ತನಗೆ ಸಂದ ಹೂ ಮಾಲೆಯನ್ನು ಆಗ ಇನ್ನೂ ಬಾಲಕರಾಗಿದ್ದ ತಮ್ಮ ಕೊರಳಿಗೆ ಹಾಕಿ ತಾವು ಅದಕ್ಕೆ ಅವನಿಗಿಂತಲೂ ಹೆಚ್ಚು ಅರ್ಹರೆಂದು ಬಂಕಿಮಚಂದ್ರ ಹೇಳಿದುದಾಗಿ ರವೀಂದ್ರರೇ ಒಂದಡೆ ಬರೆದಿದ್ದಾರೆ. ಅವನ ನಿರ್ಮತ್ಸರತೆಗೂ ಮಾತೃಭಾಷೆಯ ಏಳ್ಗೆಯಲ್ಲಿ ಅವನಿಗಿದ್ದ ಆಸಕ್ತಿಗೂ ಇದೊಂದು ನಿದರ್ಶನ. ಸರ್ಕಾರದ ಕೆಲಸದಲ್ಲಿದ್ದ ಅವನು ತನ್ನ ಸೇವೆಯ ಅವಧಿ ನಿಯಮದ ಪ್ರಕಾರ ಮುಗಿಯುವುದಕ್ಕೆ ಇನ್ನೂ ಎರಡು ವರ್ಷವಿರುವಾಗಲೇ ಸ್ವಂತ ಇಚ್ಛೆಯಿಂದ ವಿಶ್ರಾಂತನಾಗಿ ತತ್ಫಲವಾಗಿ ದೊರೆತ ವಿರಾಮವನ್ನೆಲ್ಲಾ ಸಾಹಿತ್ಯಸೇವೆಗೆ ಬಳಸಲೆಳಸಿದ. ಅವನ ಆ ಸಾಹಿತ್ಯ ನಿರ್ಮಾಣ ಕಾರ್ಯ ನಡೆದುದು ಬಂಗಾಳಿಯಲ್ಲಿ. ಆ ಭಾಷೆಗೂ ಅದರ ಸಾಹಿತ್ಯಕ್ಕೂ ಅವನು ಮಾಡಿದ ಕೈಂಕರ್ಯವನ್ನು ಕುರಿತು ರವೀದ್ರರೇ ಬರೆದಿರುವ ಪ್ರಶಂಸೆ ಬಂಗಾಳಿ ಸಾಹಿತ್ಯದಲ್ಲಿ ಮಾತ್ರವಲ್ಲದೆ ಸಮಗ್ರ ಆಧುನಿಕ ಭಾರತೀಯ ಸಾಹಿತ್ಯ ದಲ್ಲೂ ಅವನಿಗಿರುವ ಸ್ಥಾನವನ್ನೂ ವೈಶಿಷ್ಟ್ಯವನ್ನೂ ಎತ್ತಿ ತೋರಿಸುತ್ತದೆ. ರವೀಂದ್ರರ ಈ ಬರಹವನ್ನು ಕೃಷ್ಣಶಾಸ್ತ್ರಿಗಳೇ ಭಾಷಾಂತರಿಸಿ ತಮ್ಮ ಪುಸ್ತಕದ ಮೊದಲಿನಲ್ಲಿ ಕೊಟ್ಟಿದ್ದಾರೆ. ಅದರಲ್ಲಿ ಬರುವ ಕೆಲವು ವಾಕ್ಯಗಳಿವು:

> "ರಾಮಮೋಹನರಾಯನು ಬಂಗಾಳಿ ಸಾಹಿತ್ಯವನ್ನು ಗ್ರಾನೈಟ್ ಬಂಡೆಯ ಮೇಲೆ ನಿಲ್ಲಿಸಿ ಅದು ಮುಳುಗಿ ಹೋಗದಂತೆಮಾಡಿದನು. ಬಂಕಿಮನು ಅದರ ಮೇಲೆ ತನ್ನ ಪ್ರತಿಭಾ ಪ್ರವಾಹವನ್ನು ಹರಿಯಿಸಿ ಮಣ್ಣು ಮೆಕ್ಕಲನ್ನು ತಂದು ಎಳೆದನು. ಈಗ ಬಂಗಾಳಿ ಭಾಷೆಯು ವಾಸ ಯೋಗ್ಯವಾದ ನೆಲವಷ್ಟೇ ಅಲ್ಲ. ಉರ್ವರಾ ಸಸ್ಯಶಾಮಲಾ ಆಗಿದೆ; ವಾಸ ಭೂಮಿ ನಿಜವಾದ ಮಾತೃಭೂಮಿಯಾಗಿದೆ. ಮನಸ್ಸಿನ ಆಹಾರ ಮನೆಯ ಬಾಗಿಲಲ್ಲಿಯೇ ಬೆಳೆದು ನಿಂತಿದೆ........
>
> "ಬಂಕಿಮನಿಗಿಂತ ಮುಂಚೆ ಯಾರೂ ಬಂಗಾಳಿಯನ್ನು ಸಡ್ಡೆಮಾಡು ತ್ತಿರಲಿಲ್ಲ. ಸಂಸ್ಕೃತ ಪಂಡಿತರಿಗೆ ಅದು ಗ್ರಾಮ್ಯ. ಇಂಗ್ಲಿಷ್ ತಿಳಿದವರಿಗೆ ಬರ್ಬರ. ಬಂಗಾಳಿ ಭಾಷೆಯು ಹೆಸರುವಾಸಿಯಾಗಬಹುದೆಂಬುದು ಅವರು ಕನಸಿನಲ್ಲಿಯೂ ಕಾಣಲಾಗದ ವಿಷಯವಾಗಿತ್ತು. ಆದ್ದರಿಂದ ಅವರು

ಹೆಂಗಸರು ಮಕ್ಕಳ ಉಪಯೋಗಕ್ಕಾಗಿ, ಅನುಗ್ರಹ ಬುದ್ಧಿಯಿಂದ ಬಂಗಾಳಿಯಲ್ಲಿ ಬರೆಯುತ್ತಿದ್ದರು.... ಹೀಗೆ ತಿರಸ್ಕಾರಕ್ಕೆ ಪಾತ್ರವಾಗಿದ್ದ ಬಂಗಾಳಿಯು ಅತ್ಯಂತ ದೀನ ಮಲಿನ ಭಾವದಲ್ಲಿ ಕಾಲ ಹಾಕುತ್ತಿತ್ತು. ಅದರಲ್ಲಿ ಅಡಗಿದ್ದ ಅಷ್ಟೊಂದು ಸೌಂದರ್ಯ, ಮಹಿಮೆ ಎಲ್ಲಾ ಅದರ ಬಡತನವನ್ನು ಭೇದಿಸಿಕೊಂಡು ಹೊರಕ್ಕೆ ಬಂದು ಕಾಣಿಸಿಕೊಳ್ಳಲಾರದಿದ್ದುವು. ಮಾತೃಭಾಷೆಗೆ ಇಷ್ಟು ತಿರಸ್ಕಾರವಿರುವ ಸ್ಥಳದಲ್ಲಿ ಮಾನವಜೀವನದ ಶುಷ್ಕತೆ ಶೂನ್ಯತೆ ದೀನತೆಗಳನ್ನು ಯಾರೂ ಹೋಗಲಾಡಿಸರು.

“ಇಂಥ ಕಾಲದಲ್ಲಿ ಅಂದಿನ ವಿದ್ಯಾವಂತರೊಳಗೆ ಶ್ರೇಷ್ಠನೆನಿಸಿದ ಬಂಕಿಮಚಂದ್ರನು ತನ್ನ ಎಲ್ಲಾ ವಿದ್ಯೆ ಅನುರಾಗ ಪ್ರತಿಭೆಗಳನ್ನೂ ಆ ಸಂಕುಚಿತ ವಂಗಭಾಷೆಯ ಚರಣದಲ್ಲಿ ಅರ್ಪಿಸಿದನು........

“ಆಗ ಅವನಿಗಿಂತ ಅಲ್ಪ ವಿದ್ಯಾವಂತರಾದ ಪ್ರತಿಭಾಹೀನ ಬಂಗಾಳಿಗಳು ಇಂಗ್ಲಿಷಿನಲ್ಲಿ ಎರಡು ಪಂಕ್ತಿ ಬರೆಯಬಲ್ಲವರಾದರೆ ಉಬ್ಬಿ ಹೋಗುತ್ತಿದ್ದರು. ಅವರು ಇಂಗ್ಲಿಷ್ ಸಮುದ್ರದಲ್ಲಿ ಅಳಿಲಿನಂತೆ ಮರಳಕಟ್ಟೆಯನ್ನು ಕಟ್ಟುತ್ತಿದ್ದರು ಎಂಬುದನ್ನು ಗ್ರಹಿಸಲಾರದವರಾಗಿದ್ದರು.

“ಬಂಕಿಮಚಂದ್ರನು ಆ ಅಭಿಮಾನ ಕೀರ್ತಿಕಾಮನೆಗಳನ್ನು ತ್ಯಜಿಸಿ, ಅಂದಿನ ವಿದ್ವಜ್ಜನರು ಅಲ್ಲಗಳೆದಿದ್ದ ವಿಷಯಕ್ಕೆ ತನ್ನ ಶಕ್ತಿ ಎಲ್ಲವನ್ನೂ ಕೊಟ್ಟನು ಎಂಬುದಕ್ಕಿಂತ ಹೆಚ್ಚು ವೀರತ್ವ ಉಂಟೆ?

“ಅವನು ತನ್ನ ಶಿಕ್ಷಣದಿಂದ ಗರ್ವಿತನಾಗಿ ವಂಗ ಭಾಷೆಯನ್ನು ಅನುಗ್ರಹ ಬುದ್ಧಿಯಿಂದ ನೋಡಲಿಲ್ಲ. ಪೂರ್ಣಭಕ್ತಿಯನ್ನು ತೋರಿಸಿದನು. ಏನೇನು ಆಶೆ ಆಕಾಂಕ್ಷೆ ಸೌಂದರ್ಯ ಪ್ರೇಮ ಹಿರಿಮೆ ಭಕ್ತಿ ದೇಶಾಭಿಮಾನ ವಿದ್ಯೆ ಬುದ್ಧಿ ಇದ್ದುವೋ ಅವೆಲ್ಲವನ್ನೂ ಧಾರಾಳವಾಗಿ ವಂಗ ಭಾಷೆಯ ಕೈಯಲ್ಲಿ ಅರ್ಪಿಸಿದನು. ತಿರಸ್ಕಾರದಿಂದ ಬಾಡಿಹೋಗಿದ್ದ ಭಾಷೆಯ ಮುಖವು ತಟ್ಟನೆ ಅರಳಿ ಅಪೂರ್ವಕಾಂತಿಯಿಂದ ಶೋಭಿಸಿತು. ಇದಕ್ಕೆ ಮುಂಚೆ ಬಂಗಾಳಿ ಭಾಷೆಯನ್ನು ತಿರಸ್ಕರಿಸುತ್ತಿದ್ದವರು ಅದರ ಈ ಯೌವನ ಸೌಂದರ್ಯದಿಂದ ಆಕರ್ಷಣೆಗೊಂಡು ಒಬ್ಬೊಬ್ಬರಾಗಿ ಹತ್ತಿರ ಬರುವುದಕ್ಕೆ ಮೊದಲು ಮಾಡಿದರು. ವಂಗ ಸಾಹಿತ್ಯದ ಗೌರವವು ದಿವಸ ದಿವಸಕ್ಕೆ ತುಂಬುತ್ತಾ ಬಂತು.”

ಆದರೆ ಕೇವಲ ದೇಶ ಭಾಷಾಸಾಹಿತ್ಯಗಳ ವಿಚಾರದಲ್ಲಿ ವಾತ್ಸಲ್ಯ ಉತ್ಸಾಹಗಳಿದ್ದ ಮಾತ್ರಕ್ಕೇ ಯಾರೂ ಉನ್ನತ ಮಟ್ಟದ ಸಾಹಿತಿಯಾಗಲಾರ. ಭಾಷಾ

ಪ್ರೇಮದ ಜೊತೆಗೆ ಉತ್ತಮ ಕಲಾಭಿರುಚಿಯೂ ಸಾಕಷ್ಟು ಎತ್ತರದ ಗುರಿಯೂ ಆ ಗುರಿಯನ್ನು ಸೇರಲು ಅಗತ್ಯವಾದ ನಿಷ್ಠೆಯೂ ಶ್ರದ್ಧೆಯೂ ಇರಬೇಕು. ಬಂಕಿಮಚಂದ್ರನ ಸಾಹಿತ್ಯ ವ್ಯವಸಾಯ ಈ ದೃಷ್ಟಿಯಿಂದ ನೋಡಿದರೂ ಅನುಕರಣಯೋಗ್ಯವಾಗಿತ್ತು.

"ಬಂಕಿಮನು ಹೊತ್ತ ಗುರುತರವಾದ ಭಾರವನ್ನು ಹೊರಲು ಇತರರಿಗೆ ಅಸಾಧ್ಯವಾಗಿತ್ತು: (೧) ಆಗ ಬಂಗಾಳಿ ಭಾಷೆ ಇದ್ದ ಸ್ಥಿತಿಯಲ್ಲಿ ಅದನ್ನು ವಿದ್ಯಾವಂತರ ಎಲ್ಲ ಭಾವನೆಗಳ ಪ್ರಕಾಶನಕ್ಕೂ ಉಪಯೋಗಿಸಬಹುದು ಎಂದು ನಂಬಿ ಹಾಗೆ ಪ್ರಯೋಗಿಸಿದ್ದು. (೨) ಸಾಹಿತ್ಯದಲ್ಲಿ ಯಾವ ಒಂದು ಆದರ್ಶವೂ ಇಲ್ಲದೆ, ಪಾಠಕನು ಅಸಾಧಾರಣವಾದ ಉತ್ಕರ್ಷದ ಆಶೆಯನ್ನೇ ಇಟ್ಟುಕೊಳ್ಳದೆ, ಲೇಖಕನು ತಿರಸ್ಕಾರ ಬುದ್ಧಿಯಿಂದ ಬರೆಯುತ್ತ, ಪಾಠಕನು ಅನುಗ್ರಹ ಬುದ್ಧಿಯಿಂದ ಓದುತ್ತ, ಸ್ವಲ್ಪ ಚೆನ್ನಾಗಿ ಬರೆದರೂ ಶಹಬಾಸುಗಿರಿ ಪಡೆಯುತ್ತಾ ಕೀಳಾಗಿ ಬರೆದರೆ ನಿಂದನೆ ಅನಾವಶ್ಯಕವೆಂದು ಭಾವಿಸುತ್ತ ಇದ್ದ ಕಾಲದಲ್ಲಿ ಬಂಕಿಮನು ತನ್ನ ಅಂತರಂಗದಲ್ಲಿ ಇದ್ದ ಒಂದು ಉನ್ನತ ಆದರ್ಶವನ್ನು ಸದಾ ಮುಂದಿಟ್ಟುಕೊಂಡು, ಅಲ್ಪ ಪರಿಶ್ರಮದಿಂದ ಸುಲಭ ಖ್ಯಾತಿ ಪಡೆಯುವ ಚಾಪಲ್ಯವನ್ನು ತ್ಯಜಿಸಿ, ಸಂತತವಾದ ಪ್ರಯತ್ನ ಮತ್ತು ಉದ್ಯಮಗಳಿಂದ, ಪರಿಪೂರ್ಣತೆಯ ದಾರಿಯಲ್ಲಿ ಮುಂದುವರಿದದ್ದು.... ಎಲ್ಲೆಲ್ಲಿಯೂ ಶೈಥಿಲ್ಯವಿದ್ದು, ಅದು ನಿಂದ್ಯವಾಗಿಲ್ಲದಿದ್ದಾಗ ತಾನು ನಿಯಮ ವ್ರತ–ನಿರತನಾಗುವುದು ಮಹಾ ಸತ್ವಶಾಲಿಗೇ ಸಾಧ್ಯ."

ಬಂಕಿಮನ ಈ ಉಚ್ಚ ಆದರ್ಶಗಳ ಅನುಸರಣೆಯ ಫಲವಾಗಿ ಅವನು ಸೃಷ್ಟಿಸಿದ ಸಾಹಿತ್ಯ ಉತ್ಕೃಷ್ಟವಾದುದು ಮಾತ್ರವಲ್ಲದೆ ಇತರ ಬಂಗಾಳಿ ಲೇಖಕರೂ ಶ್ರೇಷ್ಠಗುಣಪಕ್ಷಪಾತಿಗಳಾದರು. ಏಕೆಂದರೆ

"ಬಂಕಿಮನು ವಂಗಭಾಷೆಗೆ ತಾನು ತೊರಿಸಿದ್ದ ಶ್ರದ್ಧಾ ಭಕ್ತಿಗಳನ್ನೇ ಇತರರೂ ತೋರಿಸಬೇಕೆಂದು ನಿರೀಕ್ಷಿಸಿದ್ದನು. ಯಾರಾದರೂ ಪೂರ್ವಾಭ್ಯಾಸದಿಂದ ಸಾಹಿತ್ಯದೊಡನೆ ಹುಡುಗಾಟ ಮಾಡಿಕೊಂಡು ಬಂದಾಗ ಅವರನ್ನು ಬಂಕಿಮನು ಎಷ್ಟರಮಟ್ಟಿಗೆ ಶಿಕ್ಷಿಸುತ್ತಿದ್ದನೆಂದರೆ ಮತ್ತೆ ಅವರು ಸ್ಪರ್ಧೆನಡೆಸುವ ಸಾಹಸಕ್ಕೆ ಕೈಯಿಡುತ್ತಿರಲಿಲ್ಲ........ಬಂಕಿಮನು ದೇಶದ ಆದ್ಯಂತವೂ ಒಂದು ಭಾವಾಂದೋಲನವನ್ನು ತಂದಿದ್ದನು. ಆ ಆಂದೋಲನದ ಪ್ರಭಾವದಲ್ಲಿ ಎಷ್ಟೋ ಚಿತ್ತಗಳು ಚಂಚಲವಾದವು. ಲೆಕ್ಕವಿಲ್ಲದಷ್ಟು ಜನ ಲೇಖಕರು ತಮ್ಮ ಸಾಮರ್ಥ್ಯದ ಎಲ್ಲೆಯನ್ನು ಅರಿಯದೆ, ಒಂದೇ

ನೆಗೆತದಲ್ಲಿ ಲೇಖಕರಾಗಿಬಿಡಬೇಕೆಂದು ಪ್ರಯತ್ನಪಟ್ಟರು. ಅವರಿಗೆ ಲೇಖನದ ಆಯಾಸ ಕಂಡಿತು, ಆದರ್ಶ ಕಾಣಲಿಲ್ಲ. ಈ ಸಮಯದಲ್ಲಿ ಸವ್ಯಸಾಚಿಯಾದ ಬಂಕಿಮನು ಒಂದು ಕೈಯನ್ನು ರಚನೆಗೂ ಇನ್ನೊಂದು ಕೈಯನ್ನು ನಿವಾರಣೆಗೂ ಉಪಯೋಗಿಸಿದನು. ಒಂದು ಕಡೆ ಬೆಂಕಿ ಉರಿಸುತ್ತ ಇನ್ನೊಂದು ಕಡೆ ಹೊಗೆ ಬೂದಿಗಳನ್ನು ಹೋಗಿಸುವ ಭಾರವನ್ನೂ ತಾನೇ ತೆಗೆದುಕೊಂಡನು. ರಚನೆ ಸಮಾಲೋಚನೆ ಈ ಎರಡು ಕೆಲಸಗಳ ಭಾರವನ್ನೂ ಬಂಕಿಮನು ಒಬ್ಬನೇ ಹೊತ್ತಿದ್ದರಿಂದ ವಂಗ ಸಾಹಿತ್ಯವು ಅಷ್ಟು ಬೇಗ ಪರಿಣತಿಗೊಳ್ಳಲು ಸಾಧ್ಯವಾಯಿತು."

ಬಂಕಿಮನು ಕಲೆಗಾರನು ಮಾತ್ರವೇ ಆಗಿರಲಿಲ್ಲ. ಅವನ ಬರಹಗಳಲ್ಲಿ ಆ ಕಾಲದ ಸಾಮಾಜಿಕ ಪದ್ಧತಿಗಳು, ಧಾರ್ಮಿಕಾಚರಣೆಗಳು, ಮೊದಲಾದ ಕ್ಷೇತ್ರಗಳಲ್ಲಿ ಕಂಡುಬರುತ್ತಿದ್ದ ಲೋಪದೋಷಗಳನ್ನು ಕುರಿತು ಬೇಕಾದಷ್ಟು ಪ್ರತ್ಯಕ್ಷವೂ ಅಪ್ರತ್ಯಕ್ಷವೂ ಆದ ಟೀಕೆಯಿದೆ. ಈ ಟೀಕೆಯಲ್ಲಿ ಅವನು ಪ್ರದರ್ಶಿಸಿರುವ ಹಾಸ್ಯವಿಡಂಬನೆಗಳು ಕೂಡ ಬಂಗಾಳಿ ಸಾಹಿತ್ಯಕ್ಕೆ ನೂತನವಾಗಿದ್ದವು. ಈ ಎಲ್ಲ ಸಾಧನೆಗಳಿಂದ ಬಂಕಿಮನು ತನ್ನ ಅನಂತರ ಬಂದ ಸಾಹಿತಿಗಳಿಗೆ ದಾರಿ ತೋರುವ ಪ್ರೋಜ್ವಲ ಜ್ಯೋತಿಯಾದನು. ವಂಗ ಸಾಹಿತ್ಯದಲ್ಲಿ ಅವನ ಸ್ಥಾನವನ್ನು ರವೀಂದ್ರರು ತಮ್ಮದೇ ಆದ ಅನನುಕರಣೀಯವಾದ ಶೈಲಿಯಲ್ಲಿ ತುಂಬಾ ಹೃದಯಂಗಮವಾಗಿ ಹೀಗೆ ವರ್ಣಿಸಿದ್ದಾರೆ:

"ನಮ್ಮಲ್ಲಿ ಸಾಹಿತ್ಯ ವ್ಯವಸಾಯಿಗಳಾಗಿರುವವರು ಬಂಕಿಮನಿಗೆ ಹೇಗೆ ಋಣಿಗಳಾಗಿದ್ದಾರೆಂಬುದನ್ನು ಎಂದಿಗೂ ಮರೆಯುವ ಹಾಗಿಲ್ಲ. ಒಂದು ಕಾಲದಲ್ಲಿ ನಮ್ಮ ವಂಗ ಭಾಷೆಯು ಒಂದೇ ತಂತಿ ಕಟ್ಟಿದ ಏಕನಾದ ತುಂಬೂರಿಯಾಗಿದ್ದು ತನ್ನ ಸಹಜ ಸ್ವರದಲ್ಲಿ ಧರ್ಮಸಂಕೀರ್ತನೆ ಮಾಡುವುದಕ್ಕೆ ಉಪಯುಕ್ತವಾಗಿತ್ತು. ಬಂಕಿಮನು ತನ್ನ ಕೈಯಿಂದ ಅದಕ್ಕೆ ಒಂದೊಂದಾಗಿ ತಂತಿಗಳನ್ನು ಕಟ್ಟಿ ಇಂದು ಅದನ್ನು ವೀಣಾಯಂತ್ರವಾಗಿ ಪರಿವರ್ತಿಸಿದ್ದಾನೆ. ಮೊದಲು ಯಾವುದರಲ್ಲಿ ಕೇವಲ ಸ್ಥಳೀಯ ಗ್ರಾಮ್ಯ ಸ್ವರವು ಬಾಜಿಸುತ್ತಿತ್ತೋ ಅದು ಇಂದು ವಿಶ್ವಸಭೆಯಲ್ಲಿ........ಕಲಾವತೀ ರಾಗಿಣೀ ಆಲಾಪನ ಮಾಡಲು ಯೋಗ್ಯವಾಗಿದೆ........ಬಂಕಿಮನು ನಮ್ಮ ಮಾತೃಭಾಷೆಗೆ ಎಲ್ಲವಿಧದ ಭಾವಪ್ರಕಾಶನಕ್ಕೂ ಅನುಕೂಲ ಮಾಡಿಕೊಟ್ಟು ಈ ಹತಭಾಗ್ಯ ದರಿದ್ರದೇಶಕ್ಕೆ ಒಂದು ಅಮೂಲ್ಯ ಚಿರಸಂಪತ್ತನ್ನು ದಾನಮಾಡಿದ್ದಾನೆ, ಶಾಶ್ವತವಾದ ರಾಷ್ಟ್ರೋನ್ನತಿಗೆ ಏಕ ಮಾತ್ರ ಮೂಲ ಸಾಧನವನ್ನು ಸ್ಥಾಪಿಸಿ ಹೋಗಿದ್ದಾನೆ. ನಮ್ಮ ಶೋಕ ಮಧ್ಯದಲ್ಲಿ ಉತ್ಸಾಹ, ಬಡತನದ ಶೂನ್ಯತೆಯ ಮಧ್ಯದಲ್ಲಿ ಚಿರಸೌಂದರ್ಯ,

ಇವುಗಳ ಅಕ್ಷಯಗಣಿಯನ್ನು ತೆರೆದಿಟ್ಟು ಹೋಗಿದ್ದಾನೆ. ನಮ್ಮಲ್ಲಿ ಮಾಡ ಬಲ್ಲದಾಗಿದ್ದರೆ, ಆ ಮಹಾಶಕ್ತಿಯನ್ನು ಧಾರಣ ಪೋಷಣ ಪ್ರಕಾಶನ ಪ್ರಚಾರ ಮಾಡಲು ಏಕಮಾತ್ರ ಸಾಧನವಾದ ತಾಯ್ನುಡಿಯನ್ನೂ ಅವನು ಬಲಪಡಿಸಿದ್ದಾನೆ, ದೊಡ್ಡದು ಮಾಡಿದ್ದಾನೆ."

ತಮ್ಮ ಗ್ರಂಥದಲ್ಲಿ ಮಾತೃಭಾಷಾ ಸೇವಾದೀಕ್ಷೆಗೆ ತೂರ್ಯವಾಣಿ ಯಂತಿರುವ ಈ ರವೀಂದ್ರ ಕೃತ ಲೇಖನಗಳ ಅನುವಾದವನ್ನು ಕೊಟ್ಟು ಕೃಷ್ಣ ಶಾಸ್ತ್ರಿಗಳು ನಮ್ಮ ಅರಿವನ್ನು ಬೆಳಗಿದ್ದಾರೆ.

ಬಂಕಿಮಚಂದ್ರನನ್ನು ಕುರಿತು ರಚಿತವಾದ ಈ ಗ್ರಂಥ ಕನ್ನಡಿಗರಿಗೆ ಸ್ವಾಗತಾರ್ಹವಾಗಿ ಪ್ರಿಯವಾಗಲು ಇನ್ನೊಂದು ಕಾರಣವುಂಟು. ೬೦–೭೦ ವರ್ಷಗಳ ಹಿಂದೆ ಕನ್ನಡದಲ್ಲಿ ಸಾಮಾನ್ಯ ಓದುಗರಿಗೆ ಬೇಕಾದ ಗದ್ಯ ಸಾಹಿತ್ಯದ ಅಭಾವವಿದ್ದಾಗ ಆ ಅರಕೆಯನ್ನು ಸ್ವಲ್ಪ ಮಟ್ಟಿಗಾದರೂ ತುಂಬಿ ಕೊಟ್ಟವನು ಬಂಕಿಮಚಂದ್ರ. ಬಿಂಡಿಗನವಲೆ ವೆಂಕಟಾಚಾರ್ಯರು "ದೇವೀಚೌಧುರಾಣಿ" "ಆನಂದ ಮಠ", "ವಿಷವೃಕ್ಷ", ಮೊದಲಾದ ಅವನ ಕಾದಂಬರಿಗಳನ್ನು ಕನ್ನಡಿಸಿ ವಾಚನ ಕುತೂಹಲಿಗಳಾದ ನಮ್ಮವರಿಗೆ ದೊಡ್ಡ ಉಪಕಾರ ಮಾಡಿದರು. ಕನ್ನಡದಲ್ಲಿ ಕಾಣಿಸಿಕೊಂಡ ಮೊದಲ ಕಾದಂಬರಿಗಳೆಂದರೆ ಎಂ. ಎಸ್. ಪುಟ್ಟಣ್ಣ ನವರ ಕೃತಿಗಳು ಹಾಗೂ "ವೆಂಕಟಾಚಾರ್ಯರ ನಾವೆಲ್ಲುಗಳು". ತತ್ಕಾರಣ ವಂಗ ಸಾಹಿತ್ಯದ ಬೆಳೆವಣಿಗೆಯನ್ನು ತಿಳಿಯಲಪೇಕ್ಷಿಸುವವರಿಗೆ ಮಾತ್ರವಲ್ಲದೆ ಕನ್ನಡದ ಆಧುನಿಕ ಸಾಹಿತ್ಯದ ಚರಿತ್ರೆಯನ್ನು ವ್ಯಾಸಂಗ ಮಾಡಲೆಳಸುವವರಿಗೂ ಬಂಕಿಮನ ಸಾಧನೆಯ ಪರಿಚಯದ ಅಗತ್ಯವಿದೆ.

ಈ ಅಗತ್ಯವನ್ನು ಪೂರೈಸಲು ಬೇಕಾದ ಗ್ರಂಥವೊಂದನ್ನು ಕೃಷ್ಣಶಾಸ್ತ್ರಿಗಳು ಒದಗಿಸಿದ್ದಾರೆ. ೧೯೩೯ರಲ್ಲಿ ಸುಬೋಧ ಗ್ರಂಥಮಾಲೆಯಲ್ಲಿ ಬಂದಿದ್ದ ಒಂದು ಪುಟ್ಟ ಕಿರುಹೊತ್ತಗೆಯನ್ನು ಬಿಟ್ಟರೆ ಬಂಕಿಮಚಂದ್ರನ ಮೇಲಾಗಲಿ ಅವನ ಬರಹಗಳ ಮೇಲಾಗಲಿ ಕನ್ನಡದಲ್ಲಿ ಪುಸ್ತಕಗಳಿರಲಿಲ್ಲ. ಬಂಗಾಳಿ ಸಾಹಿತ್ಯ ನವೋದಯವನ್ನು ಕಂಡುದು ಇತರ ಭಾರತೀಯ ಸಾಹಿತ್ಯಗಳಿಗಿಂತಲೂ ಮೊದಲು. ಅಂತೆಯೇ ಅದು ಇತರ ಸಾಹಿತ್ಯಗಳ ನವೋದಯಕ್ಕೂ ಪ್ರೇರಕವಾಯಿತು. ಆ ನವೋದಯದ ಆಧಾರಸ್ತಂಭದಂತಿದ್ದ ಬಂಕಿಮನ ವ್ಯಕ್ತಿ ಮತ್ತು ಕೃತಿಗಳ ಪರಿಚಯವನ್ನು ಪಡೆಯಬೇಕಾದುದು ಕನ್ನಡಿಗರ ಕರ್ತವ್ಯ. ಕೃಷ್ಣಶಾಸ್ತ್ರಿಗಳ ಪುಸ್ತಕ ಈ ಕರ್ತವ್ಯದ ಪಾಲನೆಗೆ ಸಹಾಯಕವಾಗಿರುವುದಷ್ಟೇ ಅಲ್ಲದೆ ಬಂಕಿಮ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಲೆಳಸುವ ವಿದ್ಯಾರ್ಥಿಗಳಿಗೂ ಅತ್ಯಂತ ಉಪಯುಕ್ತವಾಗಿದೆ. ಅದು ಅವರಿಗೆ ಸಾಹಿತ್ಯ ಅಕಾಡೆಮಿಯಿಂದ ರಾಷ್ಟ್ರೀಯ ಪ್ರಶಸ್ತಿಯನ್ನು ಗಳಿಸಿಕೊಟ್ಟ ಪುಸ್ತಕ. ಅದು ಎಷ್ಟುಮಟ್ಟಿಗೆ ಆ ಪ್ರಶಸ್ತಿಗೆ

ಅರ್ಹವಾದುದು ಎಂಬುದು ಮನದಟ್ಟಾಗಲು ಅದನ್ನು ಒಮ್ಮೆ ಓದಿದರೆ ಸಾಕು. “ಮುನ್ನುಡಿ”ಯ ಕೊನೆಯಲ್ಲಿ ಡಾ. ಪುಟ್ಟಪ್ಪನವರೆಂದಿರುವಂತೆ ಅದೊಂದು “ವಿಮರ್ಶಮಹಾಕೃತಿ”. ಬಂಕಿಮನಂತೆಯೇ ಕೃಷ್ಣಶಾಸ್ತ್ರಿಗಳೂ ಉದ್ಯೋಗದಿಂದ ನಿವೃತ್ತರಾದನಂತರ ತಮ್ಮ ಕಾಲವನ್ನೆಲ್ಲಾ ಗ್ರಂಥವ್ಯಾಸಂಗಕ್ಕೂ ಗ್ರಂಥ ಲೇಖನಕ್ಕೂ ನಿವೇದಿಸಿದ್ದರು. ಅವರ “ವಚನ ಭಾರತ”, “ಕಥಾಮೃತ”ಗಳನ್ನು ಓದಿದವರು ಅವರ ಇಳಿವಯಸ್ಸಿನಲ್ಲಿ ರಚಿತವಾದ ಆ ಕೃತಿಗಳು ಎಷ್ಟು ಶಕ್ತಿ ಪೂರ್ಣವೂ ಉತ್ಸಾಹಪೂರ್ಣವೂ ಕಾಂತಿಯುತವೂ ಆಗಿವೆ ಎಂದು ಬಲ್ಲರು. ಅವರ ಜೀವನದ ಇದೇ ಅವಧಿಗೆ ಸೇರಿದ “ಬಂಕಿಮಚಂದ್ರ”ದಲ್ಲೂ ನಾವು ಅದೇ ಗುಣಗಳನ್ನು ಕಾಣುತ್ತೇವೆ. ಮುಪ್ಪೇರುತ್ತಿದುದು ಅವರ ದೇಹಕ್ಕೆ ಹೊರತು ಚೇತನಕ್ಕಲ್ಲ ಎನ್ನಲು ಈ ಗ್ರಂಥ ಸಾಕ್ಷಿಯಾಗಿದೆ.

ಇಂಥ ಪುಸ್ತಕವನ್ನು ಬರೆಯುವುದರಲ್ಲಿ ಒಂದು ತೊಡರುಂಟು. ಒಂದು ಭಾಷೆಯಲ್ಲಿ ತಾನು ಗೈದಿರುವ ಕೆಲಸದ ಫಲವಾಗಿ ಕೀರ್ತಿ ಪಡೆದಿರುವ ಸಾಹಿತಿಯನ್ನು ಕುರಿತು ಅವನ ಎಲ್ಲ ಕೃತಿಗಳ ಭಾಷಾಂತರಗಳು ದೊರೆಯದ ಬೇರೊಂದು ಭಾಷೆಯಲ್ಲಿ ಅವನ ಕಾರ್ಯಸಾಧನೆಗೆ ಬಹುಮಟ್ಟಿಗೆ ಅಪರಿಚಿತರಾದ ಓದುಗರಿಗಾಗಿ ಗ್ರಂಥರಚನೆ ಮಾಡುವಾಗ ಅವನ ಲೇಖನಗಳನ್ನು ವಾಚಕರೆಲ್ಲರೂ ಬಲ್ಲರು ಎಂಬ ಭರವಸೆಯಿಂದ ವಿಮರ್ಶೆಯಲ್ಲಿ ತೊಡಗುವ ಹಾಗಿಲ್ಲ. ಅಂಥ ವಿಮರ್ಶಾಗ್ರಂಥದಲ್ಲಿ ಅವನ ಕೃತಿಗಳ ಸುದೀರ್ಘ ಪರಿಚಯವನ್ನು ಮಾಡಿಕೊಡಲೇಬೇಕಾಗುತ್ತದೆ. ಹಾಗೆ ಕೃತಿಗಳ ಪರಿಚಯವನ್ನು ಮಾತ್ರ ಮಾಡಿಕೊಟ್ಟರೂ ಸಾಲದಾದೀತು. ಅವನ ಕಾಲ, ಜೀವನ ಚರಿತ್ರೆ, ವ್ಯಕ್ತಿತ್ವ ಮೊದಲಾದ ಸಂಗತಿಗಳನ್ನು ಕುರಿತೂ ಅಗತ್ಯವಿದ್ದಷ್ಟು ವಿವರಗಳನ್ನು ಕೊಡಬೇಕಾಗುತ್ತದೆ. ಕೃಷ್ಣಶಾಸ್ತ್ರಿಗಳು ಬಂಕಿಮ ಚಂದ್ರನ ಹಿಂದಿದ್ದ ಬಂಗಾಳಿ ಸಾಹಿತ್ಯದ ಚರಿತ್ರೆ, ಅವನ ಜೀವನ, ಇತ್ಯಾದಿಯಾಗಿ ಬಹು ಸ್ವಾರಸ್ಯವಾದ ವಿಷಯಗಳನ್ನು ತಮ್ಮ ಗ್ರಂಥದ ಮೊದಲ ಭಾಗದಲ್ಲಿ ಸೇರಿಸಿರುವುದು ಮಾತ್ರವಲ್ಲದೆ ಉದ್ದಕ್ಕೂ ಅವಕಾಶ ಸಿಕ್ಕಿದಾಗಲೆಲ್ಲಾ ಅವನ ಜೀವನಾನುಭವ ಮತ್ತು ಮನೋಧರ್ಮಗಳನ್ನು ವಿವರಿಸಿ ಪಾಠಕನಿಗೆ ಅವನ ಬರಹಗಳ ಅರಿವು ಉಂಟಾಗುವುದರ ಜೊತೆಗೆ ಅವನ ವೈಯಕ್ತಿಕ ಗುಣಗಳೂ ಗೊತ್ತಾಗುವಂತೆ, ಅವನ್ನು ಇನ್ನೂ ಹೆಚ್ಚಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲ ಕೆರಳುವಂತೆ ಮಾಡಿದ್ದಾರೆ. ಈ ಗ್ರಂಥ ವಿಮರ್ಶಕೃತಿಯೊಂದೆ ಆಗಿರದೆ ಸ್ವಲ್ಪ ಮಟ್ಟಿಗೆ ವಿಮರ್ಶಾತ್ಮಕ ಜೀವನಚರಿತ್ರೆಯೂ ಆಗಿದೆ; ಡಾಕ್ಟರ್ ಜಾನ್‌ಸನ್‌ನ Lives of Poets ಅನ್ನೂ English Men of Letters ಗ್ರಂಥಮಾಲೆಯಲ್ಲಿ ಪ್ರಕಟವಾಗಿರುವ ಕೆಲವು ಪುಸ್ತಕಗಳನ್ನೂ ನೆನಪಿಗೆ ತರುತ್ತದೆ.

ಐನೂರು ಪುಟಗಳ ಈ ಬೃಹತ್ಸಂಪುಟ ಮೂವತ್ತು ಅಧ್ಯಾಯಗಳಾಗಿ ವಿಭಜಿತವಾಗಿದೆ. ಅದಕ್ಕೆ ಮೊದಲು “ವಂದೇ ಮಾತರಂ”, “ಅರ್ಪಣೆ”,

"ಮುನ್ನುಡಿ", "ಗ್ರಂಥಕರ್ತನ ಬಿನ್ನಹ", "ಕವಿಕಾಣಿಕೆ" ಎಂಬ ಭಾಗಗಳು ಬೇರೆ ಬಂದಿವೆ. ಇವೆಲ್ಲಕ್ಕಿಂತಲೂ ಮೊದಲು ಕಂಗೊಳಿಸುವ ಬಂಕಿಮುಚಂದ್ರನ ಚಿತ್ರವೊಂದು ಪುಸ್ತಕವನ್ನು ಓದುತ್ತಿರುವಾಗ ಅನೇಕಸಾರಿ ಪುಟಗಳನ್ನು ಹಿಂದು ಹಿಂದಕ್ಕೆ ತಿರುವಿಹಾಕಿ ನೋಡುವಂತೆ ವಾಚಕನನ್ನು ಆಕರ್ಷಿಸುತ್ತದೆ. ಇದರ ಜೊತೆಗೆ ಕೃಷ್ಣಶಾಸ್ತ್ರಿಗಳ ಚಿತ್ರವೂ ಇದ್ದಿದ್ದರೆ ಇನ್ನಷ್ಟು ಚೆನ್ನಾಗಿರುತ್ತಿತ್ತು ಎನ್ನಿಸದಿರದು. ಇದಾದನಂತರ ಬರುವ "ವಂದೇ ಮಾತರಂ" ಗೀತೆ ನಮ್ಮ ನಾಡಿನ ಸ್ವಾತಂತ್ರ್ಯಸಾಧನೆಯ ಇತಿಹಾಸದಲ್ಲಿ ಚಿರಸ್ಥಾಯಿಯಾದ ಕೀರ್ತಿಯನ್ನು ಪಡೆದಿರುವ ಹಾಡು, ಭಾರತೀಯರ ಹೃನ್ಮನಗಳಲ್ಲಿ ಸವಿನೆನಪುಗಳ, ಸಂತಸ ಸಂಭ್ರಮಗಳ, ಅಲೆಗಳನ್ನೆಬ್ಬಿಸುವ ರಾಷ್ಟ್ರಗೀತೆ. ಬಂಕಿಮರ "ಆನಂದಮಠ" ದಿಂದ ಉಧೃತವಾದ ಈ ಕವಿತೆ ದೇಶದಾದ್ಯಂತವೂ ಪ್ರತಿಧ್ವನಿತವಾಗಿ ಭಾರತ ಮಾತೆಯ ದಿವ್ಯಕಲ್ಪನೆಯನ್ನು ಜನತೆಗುಂಟುಮಾಡುತ್ತಿದ್ದುದನ್ನು ನಮ್ಮಲ್ಲನೇಕರು ಕಣ್ಣಾರ ಕಂಡಿದ್ದೇವೆ. ವಿಖ್ಯಾತವೂ ಮಧುರಮನೋಹರವೂ ಆದ ಈ ಗೀತೆಗೆ ಬಂಕಿಮುಚಂದ್ರನನ್ನು ಕುರಿತು ರಚಿತವಾಗುವ ಯಾವ ಪುಸ್ತಕದಲ್ಲಾದರೂ ಪ್ರಥಮಸ್ಥಾನ ದೊರೆಯಬೇಕಾದುದು ಉಚಿತ, ಅಗತ್ಯ. ಇಷ್ಟೇ ಉಚಿತವಾದುದು ಈ ಗ್ರಂಥ ಕನ್ನಡಿಗರಿಗೆ ಬಂಕಿಮ ಸಾಹಿತ್ಯದ ಪರಿಚಯವನ್ನು ಮೊಟ್ಟಮೊದಲು ಮಾಡಿಕೊಟ್ಟ ಬಿ. ವೆಂಕಟಾಚಾರ್ಯರಿಗೆ ಅರ್ಪಿತವಾಗಿರುವುದು. ಈ ಅರ್ಪಣೆ ಕನ್ನಡಕ್ಕೆ ವೆಂಕಟಾಚಾರ್ಯರು ಎಸಗಿದ ಸೇವೆಯ "ಪುಣ್ಯಸ್ಮರಣೆ"ಯಾಗಿರುವುದಲ್ಲದೆ ಕೃಷ್ಣಶಾಸ್ತ್ರಿಗಳ ಸೌಜನ್ಯವನ್ನೂ ಔದಾರ್ಯವನ್ನೂ ತೋರಿಸುವ ಹೊಂದೀವಿಗೆಯಂತಿದೆ. ಬಂಕಿಮುಚಂದ್ರನು ಸ್ವರ್ಗಸ್ಥನಾದಾಗ ರವೀಂದ್ರರು ಬರೆದ ಪ್ರಶಂಸಾಲೇಖನವೊಂದರಿಂದ ತೆಗೆದುಕೊಂಡು ಅನುವಾದಿಸಿರುವ "ಕವಿಕಾಣಿಕೆ"ಯಿಂದ ಈಗಾಗಲೆ ಅನೇಕ ವಾಕ್ಯಗಳನ್ನು ಉದ್ಧರಿಸಿ ಕೊಟ್ಟಿದ್ದಾಗಿದೆ. ಆದರೂ ರವೀಂದ್ರರು ಬಂಕಿಮುಚಂದ್ರನು ತಮ್ಮಮೇಲೆ ಬೀರಿದ ಪ್ರಭಾವವನ್ನು ಬಣ್ಣಿಸುತ್ತ ಬರೆದಿರುವ ಈ ಮಾತುಗಳನ್ನು ಇಲ್ಲಿ ಕೊಡದಿರಲು ಮನಸ್ಸು ಒಪ್ಪದು:

> "ಬಂಕಿಮನ ಸಾಕ್ಷಾತ್ಕಾರವಾದಾಗ, ಭಾಗ್ಯವಶದಿಂದ ಈ ಲೇಖಕನಿಗೆ ಸಾಹಿತ್ಯ ಸಂಬಂಧದಲ್ಲಿ ಯಾವ ವಿಧವಾದ ಪೂರ್ವ ಸಂಸ್ಕಾರವೂ ಮನಸ್ಸಿನಲ್ಲಿ ರೂಢಮೂಲವಾಗಿರಲಿಲ್ಲ. ಆಧುನಿಕ ಕಾಲದ ನೂತನ ಭಾವಗಳೂ ಪರಿಚಿತವಾಗಿರಲಿಲ್ಲ. ಆಗ, ವಂಗಸಾಹಿತ್ಯಕ್ಕೆ ಹೇಗೋಹಾಗೆ ನನಗೂ ವಯಸ್ಸಿನಲ್ಲಿ ಪ್ರಾತಃಕಾಲ. ಬಂಕಿಮನು ಉದಯಿಸಿ ವಂಗಸಾಹಿತ್ಯದಲ್ಲಿ ಸೂರ್ಯಪ್ರಕಾಶವನ್ನು ತಂದಾಗ ನನ್ನ ಹೃತ್ಕಮಲವು ಮೊದಲಬಾರಿಗೆ ಅರಳಿತು.
>
> "ಆ ಸಂಧಿಕಾಲದಲ್ಲಿದ್ದದ್ದರಿಂದ, ಹಿಂದೆ ಏನು ಇತ್ತು ಮುಂದೆ ನಾವು

ಏನುಪಡೆದೆವು ಎಂಬುದನ್ನು ನಾನು ತಿಳಿಯುವುದು ಸಾಧ್ಯವಾಯಿತು. ಹಿಂದಿದ್ದ ಆ ಅಂಧಕಾರ, ಏಕಾಕಾರ, ನಿದ್ರೆ, ಎಲ್ಲಾ ಎಲ್ಲೋ ಹೋದವು. ಎಲ್ಲಿಂದಲೋ ಅಷ್ಟೊಂದು ಬೆಳಕು, ಆಶೆ, ಸಂಗೀತ, ವೈಚಿತ್ರ್ಯ ಎಲ್ಲಾ ಬಂದವು.

"'ವಂಗದರ್ಶನ'ವು ಆಷಾಢದ ಮೊದಲ ಮಳೆಯಂತೆ 'ಸಮಾಗತೋರಾಜವದುನ್ನತಧ್ವನಿಃ!' ಆ ಭಾವದೃಷ್ಟಿಯ ಮುಂಗಾರು ಮಳೆಯಿಂದ ಸಮಸ್ತನದೀ ನಿರ್ಝರಗಳು ತಟ್ಟನೆತುಂಬಿ ಯೌವನದ ಆನಂದ ವೇಗದಿಂದ ಓಡಲು ಮೊದಲು ಮಾಡಿದವು. ಎಷ್ಟು ಕಾವ್ಯನಾಟಕ ಕಾದಂಬರಿ ಪ್ರಬಂಧ ವಿಮರ್ಶೆ ಮಾಸಪತ್ರಿಕೆ ವರ್ತಮಾನಪತ್ರಿಕೆಗಳು ಎದ್ದು ವಂಗ ಭೂಮಿಯನ್ನು ಬೆಳಗಿನ ಕಲರವದಿಂದ ತುಂಬಿದುವು! ಬಂಗಾಳಿ ಭಾಷೆಯು ಇದ್ದಕ್ಕಿದ್ದಹಾಗೆ ಬಾಲ್ಯದಿಂದ ಯೌವನದಲ್ಲಿ ಕಾಲಿಟ್ಟಿತು.

"ನಾನು ಬಾಲ್ಯದಲ್ಲಿ ವಂಗಸಾಹಿತ್ಯದೊಳಗೆ ಭಾವದ ನವಸಮಾಗಮ ಮಹೋತ್ಸವವನ್ನು ಕಂಡೆನು....ಮದುವೆಯ ಮೊದಲ ದಿನದಲ್ಲಿ ಕೇಳುವ ವೇಣುಗಾನವು ನಿತ್ಯವೂ ಕೇಳುವುದಿಲ್ಲ....ಅಂದಿನ ವಾದ್ಯವಾಲಗಗಳು ಪ್ರತಿ ದಿನವೂ ನಡೆಯುವುದಿಲ್ಲ. ಆದರೂ ಆ ಒಂದುದಿನ ಕಂಡ ಉತ್ಸವದ ನೆನವು ಕಠೋರ ಕರ್ತವ್ಯಪಥದಲ್ಲಿ ಯಾವಾಗಲೂ ಆನಂದವನ್ನು ಉಂಟು ಮಾಡುತ್ತಿರುತ್ತದೆ."

ಈ ಭಾಷಾಂತರ ರವೀಂದ್ರರ ಸುಂದರಶೈಲಿಯ ನಿದರ್ಶನವೊಂದನ್ನು ಕನ್ನಡದಲ್ಲಿ ಇಳಿಸಿ ತೋರಿಸಿರುವುದಲ್ಲದೆ ಅವರಂತಹ ಉದ್ದಾಮ ಕವಿಗಳು ಕೂಡ ಬಂಕಿಮಚಂದ್ರನ ವಿಚಾರದಲ್ಲಿ ಎಂಥ ಪೂಜ್ಯಭಾವವನ್ನು ಹೊಂದಿದ್ದರೆಂಬುದನ್ನು ವ್ಯಕ್ತಪಡಿಸುತ್ತದೆ. "ಮುನ್ನುಡಿ"ಯನ್ನು ಬರೆದಿರುವ ಡಾ. ಕೆ. ವಿ. ಪುಟ್ಟಪ್ಪನವರು ಕೃಷ್ಣಶಾಸ್ತ್ರಿಗಳ ವಿಷಯವಾಗಿ ಆಡಿರುವ ಮಾತುಗಳೂ ಇಷ್ಟೇ ಗೌರವಭಾವ ಸಂಜನಿತವೂ ನಿರರ್ಗಳವೂ ಗಣನೀಯವೂ ಆಗಿವೆ :

"ಒಬ್ಬನೇ ವಿಮರ್ಶಕನು ಕಾವ್ಯವೊಂದನ್ನು ಕುರಿತು ವಿಮರ್ಶೆ ಮಾಡುವಂತೆಯೇ ಕವಿಯೊಬ್ಬನನ್ನು ಕುರಿತು ಅವನ ಸಮಗ್ರಕೃತಿಗಳನ್ನು ತೆಗೆದುಕೊಂಡು, ನಾನಾದೃಷ್ಟಿಕೋನಗಳಿಂದ ಅವುಗಳನ್ನು ವೀಕ್ಷಿಸಿ ಅವುಗಳ ಸತ್ವಸ್ವಾರಸ್ಯಗಳನ್ನು ಜನಗಳಿಗೆ ದಿಗ್ದರ್ಶನ ಮಾಡಿಸಬಲ್ಲ ವಿಮರ್ಶ ಕೃತಿಗಳೂ ಇಂದಿನ ಸಂದರ್ಭದಲ್ಲಿ ಅತ್ಯಗತ್ಯ. 'ನಾಡೋಜ ಪಂಪ' ವೊಂದನ್ನು ಬಿಟ್ಟರೆ ಇಂತಹ ಸಮಾಲೋಚನೆ ನಮ್ಮಲ್ಲಿ ಇನ್ನೂ ನಡೆದೇ

ಇಲ್ಲವೆಂದು ಹೇಳಬಹುದು. ಇಂತಹ ಸ್ತುತ್ಯ ಪ್ರಯತ್ನದ ಒಂದು ಅತ್ಯುತ್ತಮ ಕೃತಿ, ಶ್ರೀ ಕೃಷ್ಣಶಾಸ್ತ್ರಿಗಳ 'ಬಂಕಿಮಚಂದ್ರ.'

"ದಿವಂಗತ ಬಿ. ವೆಂಕಟಾಚಾರ್ಯರ ಭಾಷಾಂತರಗಳ ಮೂಲಕ ಕನ್ನಡಿಗರಿಗೆ ಬಂಕಿಮಚಂದ್ರರ ಪರಿಚಯ ತಕ್ಕಮಟ್ಟಿಗೆ ಈಗಾಗಲೇ ಆಗಿದೆ. ಆದರೆ ಆ ಭಾಷಾಂತರಗಳ ಮೂಲಕ ಮೂಲಕರ್ತನ ವ್ಯಕ್ತಿತ್ವ, ಸಾಧನೆ, ಸಿದ್ಧಿಗಳಾಗಲಿ, ಆತನ ಕೃತಿಗಳ ಹಿನ್ನೆಲೆ, ಬೆಳವಣಿಗೆಯ ರೀತಿ, ಅವು ನೀಡಿದ ನೂತನ ದೃಷ್ಟಿ–ಈ ಮೊದಲಾದ ವಿಷಯಗಳಾಗಲಿ ನಮಗೆ ಇದುವರೆಗೆ ದೊರೆತಿರಲಿಲ್ಲ. ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ಈ ಕೃತಿಯ ಮೂಲಕ ಮಾರ್ಗದರ್ಶಕವಾದ ವಿಮರ್ಶಕೃತಿಯನ್ನು ನೀಡಿದ್ದಾರೆ. ಸೃಷ್ಟಿ ಸಾಹಿತ್ಯದಲ್ಲಿ ಬಂಕಿಮರು ಸಾಧಿಸಿರುವ ಔನ್ನತ್ಯವನ್ನು ಶ್ರೀ ಶಾಸ್ತ್ರಿಗಳು ತಮ್ಮ ಈ ವಿಮರ್ಶ ಕೃತಿಯಲ್ಲಿ ಹೊಯ್‌ಕಯ್ ಆಗುವಂತೆ ಸಾಧಿಸಿದ್ದಾರೆ.

"ಶ್ರೀ ಕೃಷ್ಣಶಾಸ್ತ್ರಿಗಳು ಈ ನಾಲ್ಕು ಐದು ದಶಕಗಳಿಂದಲೂ ಕನ್ನಡದ ಪ್ರಬೋಧಕ ಶಕ್ತಿಗಳಲ್ಲಿ ಪ್ರಮುಖವಾದ ಪ್ರಚೋದಕ ಶಕ್ತಿಯಾಗಿ ಕೆಲಸ ಮಾಡಿದರು. ಅವರೂ ದಿವಂಗತ ವೆಂಕಣ್ಣಯ್ಯನವರೂ ನಲವತ್ತು ವರ್ಷಗಳಿಗೂ ಹಿಂದೆ 'ಪ್ರಬುದ್ಧ ಕರ್ಣಾಟಕ' ಆರಂಭಿಸಿ ಕನ್ನಡಿಗರಲ್ಲಿ ನವಚೇತನವನ್ನು ಪ್ರಚೋದಿಸಿದವರು; ಕೇಳುವವರಿಲ್ಲದೆ ಮೂಲೆಗುಂಪಾಗಿದ್ದ ಕನ್ನಡ ಭಾಷಾಸಾಹಿತ್ಯಗಳಲ್ಲಿ ಜನರ ಅನುರಕ್ತಿ ಆಸಕ್ತಿಗಳು ಮೂಡಿ ಬೆಳೆಯುವಂತೆ ಮಾಡಿದವರು. ಅಶ್ವಿನೀ ದೇವತೆಗಳಂತೆ ಒಂದುಗೂಡಿ ಕೆಲಸಮಾಡುತ್ತಿದ್ದ ಈ ಇರ್ವರೂ ಬಂಗಾಳಿ ಸಾಹಿತ್ಯವನ್ನು ಅಭ್ಯಾಸಮಾಡಿ ಅಲ್ಲಿನ ಸಾಹಿತ್ಯದ ಸ್ವರೂಪವನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡಲು ಹೊರಟವರು; ಶ್ರೀರಾಮಕೃಷ್ಣ ಪರಮಹಂಸರ ಉಪದೇಶಾಮೃತವನ್ನೂ ಕವಿರವೀಂದ್ರರ ಸಾಹಿತ್ಯ ವಿಮರ್ಶೆಯ ತೀರ್ಥವನ್ನೂ ಕನ್ನಡ ಭಾಷೆಯಲ್ಲಿ ಮೊಟ್ಟಮೊದಲು ಹರಿಯಬಿಟ್ಟವರು. ಹಲವು ವರ್ಷಗಳಿಂದಲೂ ಈ ನಿಟ್ಟಿನಲ್ಲಿ ದುಡಿಯುತ್ತಿರುವ ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ದುಡಿಮೆಯ ಫಲವನ್ನು ಇಂದು ಕನ್ನಡಕ್ಕೆ ನೀಡಿದ್ದಾರೆ.

* * *

"ಶ್ರೀ ಕೃಷ್ಣಶಾಸ್ತ್ರಿಗಳು ನಿವೃತ್ತ ಕನ್ನಡ ಪ್ರಾಧ್ಯಾಪಕರು. ನೌಕರಿಯಿಂದ ನಿವೃತ್ತರಾಗುವುದೆಂದರೆ ಹಲವರ ಪಾಲಿಗೆ ಅದೊಂದು ವಿಷಾದದ ಘಟನೆ....ಶ್ರೀ ಕೃಷ್ಣಶಾಸ್ತ್ರಿಗಳು ಈ ಜಾತಿಯವರಲ್ಲ. ಅವರು ಹೆಸರಿಗೆ ಮಾತ್ರ ನಿವೃತ್ತರು....ಸರ್ಕಾರಿ ನೌಕರಿಯಿಂದ ನಿವೃತ್ತರಾದ ಮೇಲೆ ಮೀಸಲು ಕಟ್ಟಿಕೊಂಡಿದ್ದವರಂತೆ ಅವರು ಕೃತಿರಚನಾಕಾರ್ಯದಲ್ಲಿ ತೊಡಗಿ

ದ್ದಾರೆ. ಅವರ 'ವಚನ ಭಾರತ', 'ಕಥಾಮೃತ', 'ಬಂಕಿಮಚಂದ್ರ'– ಒಂದೊಂದೂ ಬೃಹತ್ತಾದ ಗ್ರಂಥ. ಹೀಗೆ ನಿವೃತ್ತಿಯ ತರುವಾಯದ ಬಾಳನ್ನು ಇಷ್ಟು ಸಾರ್ಥಕವಾಗಿ ಬಳಸಿಕೊಂಡವರು ಬಹಳ ಅಪೂರ್ವ."

ಈ ಪೀಠಿಕೆ ವಿಭಾಗದ ಲೇಖನಗಳೇ ಉತ್ತಮ ಸಾಹಿತ್ಯ ಕೃತಿಗಳಂತಿವೆ. ರವೀಂದ್ರರ ಲೇಖನ ಬಂಕಿಮನಿಂದ ಬಂಗಾಳಿ ಸಾಹಿತ್ಯಕ್ಕೆ ತಂದ ಸೇವೆಯನ್ನು ಕೊಂಡಾಡಿದರೆ ಅಷ್ಟೇ ಮೆಚ್ಚಿಗೆಯಿಂದ ಅಷ್ಟೇ ಮುಕ್ತಕಂಠರಾಗಿ ಪುಟ್ಟಪ್ಪನವರು ಕೃಷ್ಣಶಾಸ್ತ್ರಿಗಳು ಕನ್ನಡಕ್ಕೆ ಸಲ್ಲಿಸಿರುವ ಸೇವೆಯನ್ನು ವರ್ಣಿಸಿದ್ದಾರೆ. ತತ್ಫಲವಾಗಿ–ಕೃಷ್ಣಶಾಸ್ತ್ರಿಗಳೇ ಕುವೆಂಪುರವರಿಗೆ ಬರೆದಂತೆ–"ಇಬ್ಬರು ಕವೀಂದ್ರರು ಎರಡೂ ಕಡೆಯಿಂದ" ಅವರನ್ನೂ ಬಂಕಿಮನನ್ನೂ "ಎತ್ತಿನಿಲ್ಲಿಸಿ"ದ್ದಾರೆ.

"ಗ್ರಂಥಕರ್ತನ ಬಿನ್ನಹ"ದಲ್ಲಿ ಕೃಷ್ಣಶಾಸ್ತ್ರಿಗಳು ಬಂಕಿಮಸಾಹಿತ್ಯಕ್ಕೆ ತಮಗೆ ಪ್ರವೇಶವಾದುದು ಹೇಗೆ ಎಂಬುದನ್ನು ಒಂದು ಸೊಗಸಾದ ಸಣ್ಣಕತೆಯ ರೀತಿಯಲ್ಲಿ ನಿರೂಪಿಸಿದ್ದಾರೆ; ತನ್ಮೂಲಕ ಅವರು ತಮ್ಮ ಜೀವನದ ಒಂದೆರಡು ಮುಖಗಳನ್ನೂ ನಮ್ಮೆದುರಿಗೆ ತೆರೆದು ತೋರಿದ್ದಾರೆ. ಬಡತನದಲ್ಲಿ ಕಳೆದ ಅವರ ಬಾಲ್ಯಜೀವನದ ದೃಶ್ಯ ನಮ್ಮ ಕಣ್ಣಮುಂದೆ ಹಾದುಹೋಗುವುದಲ್ಲದೆ ಕಾಲಕ್ರಮೇಣ ಅವರು ಅಧ್ಯಾಪಕರಾದಮೇಲೆ ಎಷ್ಟು ಆಸ್ಥೆಯಿಂದ ಶ್ರದ್ಧೆಯಿಂದ ಅಪಾರ ಪರಿಶ್ರಮ ಮತ್ತು ಸಹನೆಗಳಿಂದ ತಮ್ಮ ಜ್ಞಾನಭಂಡಾರವನ್ನು ವೃದ್ಧಿಪಡಿಸಿಕೊಳ್ಳುತ್ತಿದ್ದರು ಎಂಬುದನ್ನೂ ನಾವಿಲ್ಲಿ ಕಾಣುತ್ತೇವೆ. ಕನ್ನಡ, ಇಂಗ್ಲಿಷ್, ಬಂಗಾಳಿ, ಮತ್ತು ಸಂಸ್ಕೃತ ಸಾಹಿತ್ಯಗಳಲ್ಲಿ ಅವರಿಗಿದ್ದ ಆಳವಾದ ವಿಸ್ತಾರವಾದ ಪಾಂಡಿತ್ಯದ ಸೂಚನೆಗಳೂ ಇಲ್ಲಿ ಮಾತ್ರವೇ ಅಲ್ಲದೆ ಗ್ರಂಥದ ಉದ್ದಕ್ಕೂ ಕಂಡುಬರುತ್ತದೆ. ಬಂಕಿಮನ ಕೃತಿಗಳನ್ನು ಕುರಿತು ಟೀಕೆ ಮಾಡುವಾಗ ಅನೇಕ ಸಂದರ್ಭಗಳಲ್ಲಿ ಅವರು ತಮ್ಮ ಅಭಿಪ್ರಾಯಗಳನ್ನೂ ಪುಷ್ಟೀಕರಿಸುವಂತಹ ವಾಕ್ಯಗಳನ್ನೂ ಶ್ಲೋಕಗಳನ್ನೂ ಇಂಗ್ಲಿಷ್ ಅಥವಾ ಸಂಸ್ಕೃತಗಳಿಂದ ಉದ್ಧರಿಸಿ ಕೊಟ್ಟಿರುವುದೇ ಇದಕ್ಕೆ ಸಾಕ್ಷಿ. ಈ ಬಹುಭಾಷಾಪಾಂಡಿತ್ಯ ಅವರ ಅಭಿಪ್ರಾಯಗಳಿಗೂ ಬರಹಕ್ಕೂ ಒಂದು ಮೆರುಗನ್ನೂ ಬೆಲೆಯನ್ನೂ ಕೊಟ್ಟಿದೆ. ಅವರ ಮುನ್ಸೂಚನೆಯನ್ನು ನಾವು ಈ ಪೀಠಿಕಾ ಪ್ರಕರಣದಲ್ಲೇ ಕಾಣುತ್ತೇವೆ.

ಪುಸ್ತಕದ ಮೊದಲನೆಯ ಎರಡು ಅಧ್ಯಾಯಗಳು "ಬಂಗಾಳಿ ಸಾಹಿತ್ಯದ ಸಂಕ್ಷಿಪ್ತ ಚರಿತ್ರೆ"ಯನ್ನೂ "ಬಂಕಿಮಚಂದ್ರನ ಸಂಕ್ಷಿಪ್ತ ಜೀವನ ಚರಿತ್ರೆ"ಯನ್ನೂ ಒಳಗೊಂಡಿವೆ. ಅವು ಬಂಕಿಮನ ಕೃತಿಗಳ ಪರಿಶೀಲನೆಗೆ ಅಗತ್ಯವಾದ ಹಿನ್ನೆಲೆಯನ್ನೂ ತಳಹದಿಯನ್ನೂ ಒದಗಿಸಿ ಮುಂದೆ ಬರಲಿರುವ ಅಧ್ಯಾಯಗಳ ಪಠಣ ಮತ್ತು ಮನನಕ್ಕೆ ವಾಚಕನನ್ನು ಸಿದ್ಧಪಡಿಸುತ್ತವೆ. ಈ ಎರಡು ಅಧ್ಯಾಯಗಳೂ ಆ ಬಗೆಯ ಲೇಖನಗಳಿಗೆ ಮಾದರಿಗಳೆನ್ನಬಹುದು. ಬಂಗಾಳಿ

ಸಾಹಿತ್ಯದ ಚರಿತ್ರೆಯ ಸ್ಥೂಲಚಿತ್ರ ನಮಗೆ ಕೃಷ್ಣಶಾಸ್ತ್ರಿಗಳು ಕೊಟ್ಟಿರುವ ಸಾರಾಂಶದಿಂದ ಸಾಕಷ್ಟು ದೊರೆಯುತ್ತದೆ. ಕೆಲವೇ ಕೆಲವು ಪುಟಗಳಲ್ಲಿ ಬಂಕಿಮನ ವರೆಗೂ ಬೆಳೆದುಬಂದಿದ್ದ ವಂಗಸಾಹಿತ್ಯದ ಮುಖ್ಯಾಂಶಗಳನ್ನೂ ಮುಖ್ಯ ಲಕ್ಷಣ ಗಳನ್ನೂ ಕೊಟ್ಟಿರುವುದು ಮಾತ್ರವಲ್ಲದೆ ಅಲ್ಲಲ್ಲಿ ಗದ್ಯ ಪದ್ಯಗಳ ಭಾಷಾಂತರಗಳನ್ನೂ ನಿದರ್ಶನರೂಪವಾಗಿ ಸೇರಿಸಿದ್ದಾರೆ. ಬಂಗಾಳಿ ಸಾಹಿತ್ಯದ ಕೆಲವು ಲಕ್ಷಣಗಳಿಗೂ ಇತರ ಸಾಹಿತ್ಯಗಳಲ್ಲಿ ತೋರಿಬರುವ ಅಂಥವೇ ಆದ ಲಕ್ಷಣಗಳಿಗೂ ಇರುವ ಸಾದೃಶ್ಯಗಳನ್ನು ಸೂಚಿಸಿದ್ದಾರೆ. (ಉದಾಹರಣೆಗೆ, ಡಾಕಾಖಾನಾ ವಚನಗಳಿಗೂ ತಮಿಳಿನ ಕುಱಳು ಮತ್ತು ಕನ್ನಡದ ಸರ್ವಜ್ಞ ವಚನಗಳಿಗೂ ಇರುವ ಹೋಲಿಕೆ, ಬೌದ್ಧಯುಗದ ಬಂಗಾಳಿಯ ಕೆಲವು ಜಾತಿಯ ಹಾಡುಗಳಿಗೂ ಕನ್ನಡದ ಗೋವಿನ ಕಥೆ, ತಿರುಕನ ಕನಸು, ಮಂಗಳಗೌರಿಕಥೆ ಮೊದಲಾದವುಗಳಿಗೂ ಇರುವ ಹೋಲಿಕೆಗಳನ್ನು ಸೂಚಿಸಿರುವುದು.) ಇದಲ್ಲದೆ, ಬಂಗಾಳಿ ಸಾಹಿತ್ಯದಲ್ಲೇ ಒಬ್ಬ ಲೇಖಕನಿಗೂ ಇನ್ನೊಬ್ಬನಿಗೂ ಇರುವ ಸಾದೃಶ್ಯ ವೈದೃಶ್ಯಗಳನ್ನು ವಿವರಿಸಿದ್ದಾರೆ. ಈಶ್ವರಚಂದ್ರ ವಿದ್ಯಾಸಾಗರ, ಮೈಕೇಲ್ ಮಧುಸೂದನದತ್ತ ಮತ್ತು ದೀನಬಂಧು —ಈ ಮೂವರನ್ನೂ ಕುರಿತು ಅವರು ಮಾಡಿರುವ ತುಲನಾತ್ಮಕ ವಿಮರ್ಶೆಯನ್ನು ಇದಕ್ಕೆ ಉದಾಹರಣೆಯಾಗಿ ತೆಗೆದುಕೊಳ್ಳಬಹುದು :

"೧೮೫೯–೬೦ನೆಯ ವರ್ಷವು ಬಂಗಾಳ ಸಾಹಿತ್ಯದಲ್ಲಿ ಚಿರಸ್ಮರಣೀಯ. ಏಕೆಂದರೆ ಅದು ನೂತನ ಪುರಾತನಗಳ ಸಂಧಿಸ್ಥಲ. ಹಳೆಯಕಾಲದ ಕೊನೆಯ ಕವಿಯಾದ ಈಶ್ವರ ಚಂದ್ರಗುಪ್ತನು ಆಗತಾನೇ ಮೃತನಾಗಿದ್ದನು; ಹೊಸ ಕಾಲದ ಮೊದಲ ಕವಿಯಾದ ಮಧುಸೂದನದತ್ತನು ತನ್ನ 'ತಿಲೋತ್ತಮಾಸಂಭವ ಕಾವ್ಯ'ದಿಂದ ಹೆಸರು ಪಡೆದಿದ್ದನು. ಈಶ್ವರ ಚಂದ್ರಗುಪ್ತನು ಅಪ್ಪಟ ಬಂಗಾಳಿ, ಮಧುಸೂದನನು ಶುದ್ಧ ಇಂಗ್ಲಿಷ್ ದೀನಬಂಧುವು ಅವರ ಸಂಧಿಸ್ಥಲ. ಅವನು ಈಶ್ವರಚಂದ್ರನ ಕಾವ್ಯಶಿಷ್ಯ ನಾದರೂ ಕವಿತೆಯಲ್ಲಿ ಗುರುವಿಗಿಂತಲೂ ಮೇಲು. ಕವಿಯ ಪ್ರಧಾನ ಗುಣವಾದ ಸೃಷ್ಟಿಕೌಶಲದಲ್ಲಿ ಈಶ್ವರ ಚಂದ್ರಗುಪ್ತನಿಗೆ ಅಷ್ಟು ಸಾಮರ್ಥ್ಯ ವಿರಲಿಲ್ಲ ದೀನಬಂಧುವಿಗೆ ಬೇಕಾದಹಾಗಿತ್ತು. ಅಲ್ಲದೆ ಎಲ್ಲ ಅಂತಸ್ತಿನ ಬಂಗಾಳಿಗಳ ನಿತ್ಯಜೀವನವೂ ಅವನಿಗೆ ಪರಿಚಯವಾಗಿತ್ತು. ಅವರು ಏನು ಕೆಲಸಮಾಡುತ್ತಾರೆ, ಹೇಗೆ ಮಾತನಾಡುತ್ತಾರೆ ಎಂಬುದು ಖಚಿತವಾಗಿ ಗೊತ್ತಿತ್ತು. ಅನೇಕರಿಗೆ ದೇಶವಾತ್ಸಲ್ಯವಿರುತ್ತದೆ, ಆದರೆ ದೇಶದ ವಿಚಾರವೇ ಏನೂ ಗೊತ್ತಿರುವುದಿಲ್ಲ. ಕಲ್ಕತ್ತೆಯ ಒಳಗೆ ತಮ್ಮ ಅಂತಸ್ತಿನ ಜನ ಏನು ಮಾಡುತ್ತಾರೆ ಅದೇ ಅವರ ಜ್ಞಾನದ ಎಲ್ಲೆ. ಹೆಚ್ಚೆಂದರೆ ನಾಲ್ಕಾರು ನಗರಗಳನ್ನೂ ಹಳ್ಳಿಗಳನ್ನೂ ನೋಡಿರಬಹುದು; ಅದೂ ಬೀದಿ, ಅಂಗಡಿ,

ತೋಟ, ತುಡಿಗೆ ಮಾತ್ರ. ಜನರ ಪರಿಚಯವಿಲ್ಲ; ದೇಶದ ಪರಿಜ್ಞಾನವೆಲ್ಲಾ ವರ್ತಮಾನ ಪತ್ರಿಕೆಗಳಿಂದ ಪಡೆದದ್ದು. ಜನರೊಡನೆ ಹೊಕ್ಕು ಬಳಸದಿದ್ದರೆ ಆ ಜ್ಞಾನ ಏತಕ್ಕೆ ಬರುತ್ತದೆ?"

ಸಾಹಿತ್ಯ ವಿಮರ್ಶೆ, ಜನಜೀವನ ಮತ್ತು ಜನಮನವನ್ನು ಕುರಿತು ತಮ್ಮ ಅಭಿಪ್ರಾಯಗಳ ಅಭಿವ್ಯಕ್ತನೆ ಎರಡನ್ನೂ ಹೀಗೆ, ಈ "ಸಂಕ್ಷಿಪ್ತ ಚರಿತ್ರೆ"ಯಲ್ಲಿ ಕೂಡ ಕೃಷ್ಣಶಾಸ್ತ್ರಿಗಳು ಸೇರಿಸಿದ್ದಾರೆ. ಇದ್ದಷ್ಟು ಸ್ಥಳದಲ್ಲೇ ಅವರು ಈ ಕೆಲಸ ವನ್ನು ಮಾಡಿರುವುದು ಮಾತ್ರವಲ್ಲದೆ ವ್ಯಕ್ತಿ ಚಿತ್ರಗಳನ್ನೂ ಕೊಟ್ಟಿದ್ದಾರೆ. ಈಶ್ವರ ಚಂದ್ರಗುಪ್ತನನ್ನು ವರ್ಣಿಸುವ ಈ ಮಾತುಗಳನ್ನು ನೋಡಿ:

"ಈಶ್ವರಚಂದ್ರನು ಸ್ವಪ್ರಯತ್ನದಿಂದ ಮುಂದಕ್ಕೆ ಬಂದವನು. ಪತ್ರಿಕೆಯಿಂದಲೇ ಅವನಿಗೆ ಬೇಕಾದಷ್ಟು ಸಂಪಾದನೆ ಇತ್ತು. ಆದರೆ ಹಣದ ಮೇಲೆ ಆಸೆ ಇಟ್ಟುಕೊಂಡವನಲ್ಲ. ಬೇಕಾದಹಾಗೆ ದಾನಧರ್ಮಗಳನ್ನೂ ಮಾಡುತ್ತಿದ್ದನು. ಕಾಗದ ಪತ್ರಗಳಿಲ್ಲದೆ ಎಷ್ಟೋ ಜನಕ್ಕೆ ಸಾಲಕೊಟ್ಟು ಕಳೆದುಕೊಂಡದ್ದೂ ಉಂಟು. ಅವನು ಕಾಪಟ್ಯ ಕೋಪ ಚಾತುರ್ಯ ಚಮ ತ್ಕಾರಗಳನ್ನು ಅರಿತವನಲ್ಲ; ಯಾವಾಗಲೂ ನಗುಮುಖದಿಂದ ಎಲ್ಲ ರೊಡನೆಯೂ ಸಂತೋಷದಿಂದ ಇರುತ್ತಿದ್ದನು. ಅವನಲ್ಲಿ ಕುಡಿಯುವ ಅಭ್ಯಾಸವಿತ್ತು; ಕುಡಿದಾಗ ಉತ್ಸಾಹವೇರಿ ಲೇಖನಿಯು ತಡೆಯಿಲ್ಲದೆ ಓಡುತ್ತಿತ್ತಂತೆ. ಆದರೆ ಧನಿಕರ ಮತ್ತಾವ ದುರಭ್ಯಾಸವೂ ಇರಲಿಲ್ಲ. ಅವನ ಕೋಣೆಯಲ್ಲಿ ಒಂದು ಜಮಖಾನ ಅಥವಾ ಚಾಪೆ ಹೊರತು ಆಸನಗಳ ಆಡಂಬರವಿರುತ್ತಿರಲಿಲ್ಲ. ಬಂದವರು ಎಷ್ಟು ದೊಡ್ಡವರಾದರೂ ಅದರ ಮೇಲೆಯೇ ಕುಳಿತು ಅವನೊಡನೆ ಮಾತಾಡುತ್ತಿದ್ದರು.

"ಈಶ್ವರ ಚಂದ್ರಗುಪ್ತನು ಬಂಗಾಳಾ ಸಮಾಜದ ಕವಿ. ಕಲ್ಕತ್ತಾ ಷಹರಿನ ಕವಿ; ಬಂಗಾಳಾ ಗ್ರಾಮಾಂತರದ ಕವಿ; ನೈಸರ್ಗಿಕತೆಯ ಕವಿ, ವಿಡಂಬನ ಕವಿ; ಆದರೆ ಅವನ ವಿಡಂಬನದಲ್ಲಿ ದ್ವೇಷವಿಲ್ಲ. ಅವನಿಗೆ ಕೃತ್ರಿಮ ಕಪಟವೆಂದರೆ ಆಗದು; ಸುಳ್ಳುಧರ್ಮ ಪೊಳ್ಳುರಾಜಕೀಯ ಇಂಥವುಗಳನ್ನು ಕಂಡರೆ ಆಗದು, ಅವುಗಳನ್ನು ಲೇವಡಿ ಎಬ್ಬಿಸುತ್ತಾನೆ; ಅದರಲ್ಲಿ ದೊಡ್ಡವರು ಚಿಕ್ಕವರು ಎಂಬ ಭೇದವಿಲ್ಲ; ಇವು ಕೆಲವು ವೇಳೆ ಅಸಭ್ಯವಾಗುತ್ತವೆ, ಅಶ್ಲೀಲವಾಗುತ್ತವೆ; ಅದನ್ನು ಬಿಟ್ಟರೆ ಬರವಣಿಗೆ ನಿಸ್ಸತ್ವವಾಗುತ್ತದೆ, ಈಶ್ವರಚಂದ್ರಗುಪ್ತನು ಹೀಗೆ ವಿರಸವಾಗುವುದಕ್ಕೆ ಅವನ ಜೀವನ ಸಂಗತಿಗಳೂ ಬಹುಮಟ್ಟಿಗೆ ಕಾರಣ. ಬಂಗಾರದಂಥ ತಾಯಿ ಹೋಗಿ ಹಿತ್ತಾಳೆಯಂಥ ಮಲತಾಯಿ ಬಂದಳು. ಯೌವನ

ವಾರ್ಧಕಗಳಲ್ಲಿ ರತ್ನವಾದ ಸಹಧರ್ಮಿಣೀ ಸಹವಾಸ ಅವನ ಪಾಲಿಗೆ ಬರಲಿಲ್ಲ; ಚಿಕ್ಕ ವಯಸ್ಸಿನಲ್ಲಿಯೇ ತಂದೆ ಹೋಗಿ ಅವನು ಅನ್ನಕ್ಕೆ ಕಷ್ಟ ಪಡಬೇಕಾಯಿತು. ಕಷ್ಟದೊಡನೆ ಹೋರಾಡಿ ಗೆದ್ದು ಅವನು ಧನಮಾನ ಯಶಸ್ಸುಗಳನ್ನೇನೋ ಗಳಿಸಿದನು; ಆದರೆ ಒಳಗೊಳಗೇ ಇದ್ದ ಕಹಿ, ಕ್ರೋಧ ಮಾತ್ರ ಅಳಿಸಿಹೋಗಲಿಲ್ಲ. ಕಾಲಲಕ್ಷಣವೂ ಒಂದು ಕಾರಣ; ಆಗ ಅಸಭ್ಯವಲ್ಲದ ಬೈಗಳು ಬೈಗಳೆಂದೇ ಗಣ್ಯವಾಗುತ್ತಿರಲಿಲ್ಲ. ಹಾಗೆ ನೋಡಿದರೆ ಅಂದಿನ ಕಾವ್ಯಗಳೆಲ್ಲಾ ಅಶ್ಲೀಲಮಯವೇ. ಪಾಶ್ಚಾತ್ಯ ಪ್ರಭಾವದಲ್ಲಿ ನಮ್ಮ ರುಚಿ ಇಂದು ಬದಲಾಗಿದೆ."

ಸಾಹಿತ್ಯದಲ್ಲಿ ಉತ್ತಮ ಕೃತಿಗಳು ಯಾವಾಗ ಹೇಗೆ ಬರುತ್ತವೆ ಎಂಬ ವಿಚಾರವಾಗಿ ಈ ಚರಿತ್ರೆಯ ಕೊನೆಯಲ್ಲಿ ಶಾಸ್ತ್ರಿಗಳು ಆಡಿರುವ ಈ ಮಾತು ಎಷ್ಟು ಚೆನ್ನಾಗಿದೆ, ಎಷ್ಟು ನಿಜವಾಗಿದೆ:

"ಹೂವಿನ ಗಿಡವಾಗಲಿ ಹಣ್ಣಿನ ಮರವಾಗಲಿ, ಅದರಲ್ಲಿ ಹೂವಿಗಿಂತ ಹಣ್ಣಿಗಿಂತ ಎಲೆಯೇ ಹೆಚ್ಚು; ಅದೇ ಯಾವಾಗಲೂ ಕಣ್ಣಿಗೆ ಕಾಣುತ್ತಿರುವುದು; ಹೂವು ಹಣ್ಣೂ ಬಿಡುವುದು ಆಯಾ ಋತುವಿನಲ್ಲಿ ಮಾತ್ರ— ಅವೂ ಎಲ್ಲಾ ಒಂದೇ ಗುಣವಾಗಿರುವುದಿಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ಫಲ ಪುಷ್ಪಗಳು ಬಿಡಲು ಋತುನಿಯಮವಿಲ್ಲ; ಇದ್ದರೆ ಅದು ನಮಗೆ ತಿಳಿದಿಲ್ಲ."

ಮುಂದಿನ ಅಧ್ಯಾಯವಾದ "ಬಂಕಿಮಚಂದ್ರನ ಸಂಕ್ಷಿಪ್ತ ಜೀವನ ಚರಿತ್ರೆ"ಯಲ್ಲಿ ಮತ್ತೆ ಇಂಥದೇ ಒಂದು ಮುತ್ತು ಬರುತ್ತದೆ:

"ಯಾವ ಕೆಲಸವಿರಲಿ ಇಲ್ಲದಿರಲಿ, ಕಾವ್ಯಲೇಖನಪ್ರವೃತ್ತಿ ಬಲವಾಗಿರ ತಕ್ಕವನು ಅವಕಾಶಮಾಡಿಕೊಂಡು ಬರೆದೇಬರೆಯುತ್ತಾನೆ."

ಬಂಕಿಮನ ಜೀವನ ಚರಿತ್ರೆಯನ್ನು ಶಾಸ್ತ್ರಿಗಳು ಬಹಳ ಸಂಕ್ಷೇಪವಾಗಿ (ಆರೇ ಆರು ಪುಟಗಳಲ್ಲಿ) ಹೇಳಿದ್ದರೂ ಅದರಲ್ಲೂ ಒಂದೆರಡು ಸ್ವಾರಸ್ಯವಾದ ಸಂಗತಿಗಳು ಸೇರಿವೆ, ವ್ಯಕ್ತಿಚಿತ್ರಗಳು ಅದರಲ್ಲೂ ಇಲ್ಲದೆಹೋಗಿಲ್ಲ:

"ಬಂಕಿಮನು ತಂದೆಯ ಜೊತೆಯಲ್ಲಿ ಮೇದಿನೀಪುರದಲ್ಲಿದ್ದಾಗ ನೆರೆ ಗ್ರಾಮವಾದ ನಾರಾಯಣಪುರದ ನವಕುಮಾರ ಚಕ್ರವರ್ತಿಯ ಮಗಳನ್ನು ಕೊಟ್ಟು ಮದುವೆಯಾಯಿತು (೧೮೪೯). ಆಗ ಅವನಿಗೆ ಇನ್ನೂ ಹನ್ನೊಂದು ವರ್ಷ; ಹುಡುಗಿಗೆ ಐದು ವರ್ಷ. ಆಕೆ ಪರಮ ಸುಂದರಿಯೂ ಗುಣವತಿಯೂ ಆಗಿದ್ದಳಂತೆ. ಒಳ್ಳೆಯ ವಸ್ತು ಬಹಳ ದಿನವಿರುವುದಿಲ್ಲ. ಬಂಕಿಮನು ಯಶೋಹರದಲ್ಲಿ ಡೆಪ್ಯುಟಿ ಕಲೆಕ್ಟರಾಗಿದ್ದಾಗ ಆಕೆ ತನ್ನ ಹದಿನಾರನೆಯ

ವಯಸ್ಸಿನಲ್ಲಿ ಸ್ವರ್ಗಸ್ಥಳಾದಳು. ಆಕೆಯೂ, ಆಕೆಯೊಡನೆ ಅಲ್ಪಕಾಲ ನಡೆಸಿದ ಪ್ರೇಮಸಂಸಾರವೂ ಬಂಕಿಮನ ಹೃದಯದಲ್ಲಿ ಅಚ್ಚಳಿಯದೆ ನಿಂತಂತೆ ಕಾಣುತ್ತದೆ. ಅವನ ಕಾದಂಬರಿಗಳಲ್ಲಿ ಬರುವ ಅನೇಕ ನಾಯಕಿಯರು ಈ ವಯಸ್ಸಿನ ಪರಮಸುಂದರಿಯರು."

* * *

"ಬಂಕಿಮಚಂದ್ರನಿಗೆ ತಾಯಿತಂದೆಗಳಲ್ಲಿ ತುಂಬ ಭಕ್ತಿ: ಅವನು ಮೊದಲು ಕೆಲಸಕ್ಕೆ ಸೇರಿದಾಗ ಅವರ ಪಾದಗಳನ್ನು ತೊಳೆದು ತೀರ್ಥವನ್ನು ಎರಡು ಥಾಲಿಗಳಲ್ಲಿ ತುಂಬಿಕೊಂಡು ತನ್ನ ಜೊತೆಯಲ್ಲಿ ತೆಗೆದುಕೊಂಡು ಹೋದನಂತೆ. ಅಯೋಗ್ಯರನ್ನೂ ಒಣಪ್ರತಿಷ್ಠೆಯವರನ್ನೂ ಕಂಡರೆ ಅವನಿಗೆ ತಿರಸ್ಕಾರ. ಆದ್ದರಿಂದ ಅವನು ಹಲವರಿಗೆ ಉದ್ಧತನೆಂದು ತೋರಿದ್ದರೆ ಅದು ಆಶ್ಚರ್ಯವೇನಲ್ಲ. ಯೋಗ್ಯರನ್ನೂ ವಿದ್ವಾಂಸರನ್ನೂ ಕಂಡರೆ ಅವನಿಗೆ ತುಂಬಾ ಗೌರವ. ಅವನಿಗೆ ಅಂಥ ಸ್ನೇಹಿತರನೇಕರಿದ್ದರು . . . .

"ಬಂಕಿಮನು ಆಜೀವ ವಿದ್ಯಾರ್ಥಿ; ಅವನ ಜೀವನವೆಲ್ಲಾ ವ್ಯಾಸಂಗಮಯ . . . ."

ಗ್ರಂಥದ ಮೂರನೆಯ ಅಧ್ಯಾಯದಿಂದ ಹಿಡಿದು ಕೊನೆಯವರೆಗೂ ಬಂಕಿಮನ ಕೃತಿಗಳ ಸಮೀಕ್ಷೆ ನಡೆದಿದೆ. ಈ ಅಧ್ಯಾಯಗಳಲ್ಲಿ ಒಂದಾಗುತ್ತಲೂ ಒಂದನ್ನು ಓದುವುದೇ ಒಂದು ವಿದ್ಯಾಭ್ಯಾಸ. ಬಂಗಾಳಿ ಭಾಷೆಯ ಗಂಧವೇ ಇಲ್ಲದವರೂ ಬಂಕಿಮನ ಯಾವ ಪುಸ್ತಕವನ್ನು ಓದದವರೂ ಈ ಅಧ್ಯಾಯಗಳ ಪಠಣದಿಂದ ಅವನ ಸಾಹಿತ್ಯದ ಸಮಗ್ರ ಪರಿಚಯವನ್ನು ಪಡೆಯಲು ಸಾಧ್ಯ. ಶಾಸ್ತ್ರಿಗಳು ಕೊಟ್ಟಿರುವಷ್ಟು ವಿವರಗಳನ್ನು ಓದಿ ಮೂಲಕೃತಿಗಳಿಗೆ ಧಾವಿಸಿ ಇನ್ನು ಹೆಚ್ಚು ತಿಳಿವಳಿಕೆಯನ್ನು ಬೆಳೆಸಿಕೊಳ್ಳಬೇಕೆಂಬ ಆಸೆ ಅವರಲ್ಲಿ ಉಂಟಾದರೆ ಅಚ್ಚರಿಯೇನಿಲ್ಲ, ಅಷ್ಟು ವ್ಯಾಪಕವಾಗಿ ಕುತೂಹಲ ಪ್ರಚೋದಕವಾಗಿದೆ ಗ್ರಂಥಕರ್ತರ ಬರಹದ ಧಾಟಿ ಮತ್ತು ಅವರು ಅನುಸರಿಸಿರುವ ವಿಮರ್ಶೆಯ ರೀತಿ. ಬಂಕಿಮನ ಯಾವ ಲೇಖನವನ್ನು ಅವರು ಬಿಟ್ಟಿಲ್ಲ; ತಾವು ಪರಿಶೀಲನೆಗೆ ತೆಗೆದುಕೊಂಡಿರುವ ಯಾವ ಕೃತಿಯ ವಿಚಾರದಲ್ಲೂ ಅದರ ಸಾರಾಂಶವನ್ನು ಕೊಡದೆ ಅದನ್ನು ಸಾಕಷ್ಟು ಕೂಲಂಕಷವಾಗಿ ವಿಮರ್ಶೆಮಾಡದೆಹೊಗಿಲ್ಲ; ಎಲ್ಲೂ ಅವರ ಶ್ರದ್ಧೆ ಹುಮ್ಮಸ್ಸುಗಳು ಕಡಿಮೆಯಾದಂತೆ ಕಾಣುವುದಿಲ್ಲ.

ಬಂಕಿಮಚಂದ್ರ ಬಂಗಾಳಿ ಕಾದಂಬರಿಕಾರನೆಂದು ಕೀರ್ತಿಪಡೆದಿದ್ದಾನೆ, ನಿಜ. ಆದರೆ ಅವನ ಲೇಖನಿ ಕಾದಂಬರಿಗಳ ಸೃಷ್ಟಿ ಮಾತ್ರದಿಂದ ತೃಪ್ತವಾಗಲಿಲ್ಲ. ಬಂಕಿಮ ಸಾಹಿತ್ಯದ ಬಹುಭಾಗ ಕಾದಂಬರಿಗಳಿಂದ ತುಂಬಿಹೋಗಿದ್ದರೂ ಅದು ಕಾವ್ಯ, ವಿಡಂಬನೆ, ಪ್ರಬಂಧ ಮೊದಲಾದ ಇತರ ಸಾಹಿತ್ಯ ಪ್ರಕಾರಗಳನ್ನೂ

ಒಳಗೊಂಡಿದೆ. ಅವನು ಬಂಗಾಳಿ ಕಾದಂಬರಿಯ ಪಿತಾಮಹನಾದರೂ ಕಾದಂಬರೀ ಕ್ಷೇತ್ರದಲ್ಲಿ ಅವನ ಕೃಷಿ ಆರಂಭವಾದುದು ಇಂಗ್ಲಿಷ್ ಕಾದಂಬರಿಯೊಂದರಿಂದ. ಇವಲ್ಲದೆ ಅವನು ಸಮಕಾಲೀನ ಧಾರ್ಮಿಕ ಮತ್ತು ಸಾಮಾಜಿಕ ಪ್ರಶ್ನೆಗಳನ್ನೂ ಕುರಿತು ಅನೇಕ ಲೇಖನಗಳನ್ನೂ ಭಗವದ್ಗೀತೆಯ ಮೇಲೆ ಒಂದು ಟೀಕೆಯನ್ನೂ ಬರೆದ. ಇವೆಲ್ಲದರ ಜೊತೆಗೆ ಪತ್ರಕರ್ತನೂ ಆಗಿದ್ದು "ವಂಗದರ್ಶನ" ಎಂಬ ಪ್ರಸಿದ್ಧಪತ್ರಿಕೆಯನ್ನು ಪ್ರಕಟಿಸಿ ಅದರ ಮೂಲಕ ಬಂಗಾಳಿ ಭಾಷೆ ಮತ್ತು ಸಾಹಿತ್ಯಗಳ ಬೆಳೆವಣಿಗೆಯ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿದ. ಕೃಷ್ಣಶಾಸ್ತ್ರಿಗಳ ಗ್ರಂಥದಲ್ಲಿ ಬಂಕಿಮಚಂದ್ರನ ಈ ಬಹುಮುಖದ ಕಾರ್ಯಸಿದ್ಧಿಯ ವಿವಿಧ ಕ್ಷೇತ್ರಗಳಿಗೆ ನ್ಯಾಯವಾದ ಪ್ರಮಾಣದಲ್ಲಿ ಗಮನ ದೊರೆತಿದೆ.

ಪುಸ್ತಕದ ಮೂವತ್ತು ಪರಿಚ್ಛೇದಗಳಲ್ಲಿ ಮೇಲೆ ಹೇಳಿದ ಮೊದಲನೆಯ ಎರಡು ಅಧ್ಯಾಯಗಳನ್ನು ಬಿಟ್ಟರೆ ಮೂರನೆಯದು ಬಂಕಿಮನ ಕವಿತೆಗಳಿಗೂ, ನಾಲ್ಕನೆಯದು Rajmohan's wife (ರಾಜಮೋಹನನ ಹೆಂಡತಿ) ಎಂಬ ಅವನ ಇಂಗ್ಲಿಷ್ ಕಾದಂಬರಿಗೂ, ಐದರಿಂದ ಹದಿನೇಳರವರೆಗೆ ಒಟ್ಟು ಹದಿಮೂರು ಅಧ್ಯಾಯಗಳು ಅವನ ಬಂಗಾಳಿ ಕಾದಂಬರಿಗಳಿಗೂ, ಹದಿನೆಂಟನೆಯ ಅಧ್ಯಾಯ "ವಂಗದರ್ಶನ"ಕ್ಕೂ, ಉಳಿದವು ಇತರ ಲೇಖನಗಳಿಗೂ ಮೀಸಲಾಗಿವೆ. ಒಂದೊಂದು ಅಧ್ಯಾಯದಲ್ಲೂ ಆಯಾ ವಿಷಯವನ್ನು ಕುರಿತು ಸುದೀರ್ಘವೂ ಸವಿಮರ್ಶಾತ್ಮಕವೂ ನಿದರ್ಶನಭೂಯಿಷ್ಠವೂ ಆನಂದದಾಯಕವೂ ಅತ್ಯಂತ ಪ್ರಯೋಜನಕಾರಿಯೂ ಆದ ವ್ಯಾಖ್ಯಾನವಿದೆ. ಭಾಷೆ ಉದ್ದಕ್ಕೂ ಸುಂದರವೂ ಉಜ್ವಲವೂ ಸಮ್ಮೋಹಕವೂ ಆಗಿದೆ. ಈ ಗುಣಗಳು ಇಡಿ ಗ್ರಂಥವನ್ನು ಸೃಷ್ಟಿ ಸಾಹಿತ್ಯದ ಮಟ್ಟಕ್ಕೆ ಏರಿಸಿವೆ.

ಕೃಷ್ಣಶಾಸ್ತ್ರಿಗಳು ತಮ್ಮ ವಿಮರ್ಶೆಯಲ್ಲಿ ಬಂಕಿಮನ ಕೃತಿಗಳ ಸಾರಾಂಶವನ್ನು ಹೇಳಿರುವುದು ಮಾತ್ರವಲ್ಲದೆ ಸಾಧ್ಯವಿದ್ದ ಕಡೆಯಲ್ಲೆಲ್ಲಾ ಕೆಲವು ಪಂಕ್ತಿಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿಕೊಟ್ಟು ತಮ್ಮ ಹೇಳಿಕೆಗಳನ್ನು ಪುಷ್ಟೀಕರಿಸಿರುವರು. ವಾಚಕರ ಸಂತೋಷ ಸಮಾಧಾನಗಳನ್ನು ಇಮ್ಮಡಿಗೊಳಿಸಿರುವರು. ಆದರೆ ಎಲ್ಲೂ ಅವರು ಅನಾವಶ್ಯಕವಾದ ವಿವರಗಳನ್ನು ಕೊಟ್ಟಿಲ್ಲ. ಉದಾಹರಣೆಗೆ ಬಂಕಿಮನ ಕವಿತೆಗಳ ವಿಚಾರವಾಗಿ ಅವರೇ ಹೇಳಿರುವ ಮಾತುಗಳಿವು:

> "ಈ ಕವಿತೆಗಳಲ್ಲಿ ವಸ್ತುವೈವಿಧ್ಯವೂ ಛಂದೋವೈವಿಧ್ಯವೂ ಇದೆ. ಯಥೇಷ್ಟವಾದ ಭಾವಸಂಪತ್ತಿದೆ. ಭಾಷೆ ಲಲಿತವಾಗಿಯೂ ಪದ್ಯಕಾವ್ಯಕ್ಕೆ ಅನುರೂಪವಾಗಿಯೂ ಇದೆ. ಬಂಗಾಳಿ ಪದ್ಯಗಳ ಛಂದಸ್ಸೂ ಧಾಟಿಯೂ ನಮಗೆ ಪರಿಚಿತವಲ್ಲ. ಅವು ಸಂಸ್ಕೃತ ಕನ್ನಡ ಛಂದಸ್ಸು ಧಾಟಿಗಳ ಸಂಪ್ರದಾಯಕ್ಕಿಂತ ತೀರ ಭಿನ್ನವಾದವು. ಅವನ್ನು ವಿವರಿಸಿ, ಬಂಕಿಮನು

ಉಪಯೋಗಿಸಿಕೊಂಡಿರುವ ಛಂದಸ್ಸಿನ ಔಚಿತ್ಯವನ್ನು ಚರ್ಚಿಸುವುದರಿಂದ ಕನ್ನಡಿಗರಿಗೆ ಹೆಚ್ಚು ಪ್ರಯೋಜನವಾಗುವುದಿಲ್ಲ"

ಆದರೆ ವಿವರಗಳೂ ಟೀಕೆಯೂ ಬೇಕಾದ ಕಡೆ ಅವನ್ನು ಕೊಡಲು ಅವರು ಹಿಂದೆಗೆದಿಲ್ಲ ಉದಾಹಾರಣೆಗೆ, "ಪುಷ್ಪ ನಾಟಕ" ಎಂಬ ಬಂಕಿಮರ ವಚನ ಕಾವ್ಯವನ್ನು ಕುರಿತು ಅವರು ಬರೆದಿರುವ ವಾಕ್ಯಗಳಿವು:

"'ಪುಷ್ಪ ನಾಟಕ' ಗದ್ಯದಲ್ಲಿದೆ. (ಐದು ಪುಟಮಾತ್ರ.) ಇದರಲ್ಲಿ ಮಳೆಯ ಹನಿಯೇ ನಾಯಕ, ಸೇವಂತಿಗೆ ಹೂವೇ ನಾಯಿಕೆ. ಸೇವಂತಿಗೆ ಮಳೆಯ ಹನಿಯನ್ನು ವಿರಹಕಾತರದಿದಲೂ ಪ್ರೇಮಾತುರದಿಂದಲೂ ಬರಮಾಡಿಕೊಳ್ಳುತ್ತಿದ್ದಹಾಗೇ ಗಾಳಿ ಒಂದು ಹನಿಯನ್ನು ನೆಲದ ಮೇಲೆ ಹೂವಿನ ಪರಿಮಳವನ್ನು ತಳ್ಳಿ, ಕಸಿದುಕೊಳ್ಳಲು ಅದನ್ನು ಪೀಡಿಸಿದಾಗ, ಅದು ಒದ್ದಾಡಿ ತನ್ನ ಪ್ರಿಯನ ದಾರಿಯನ್ನೇ ಹಿಡಿಯುತ್ತೇನೆಂದು ನೆಲದ ಮೇಲೆ ಬಿದ್ದು ಬಿಡುತ್ತದೆ. ಇದನ್ನು ಗ್ರಂಥಕರ್ತನು 'A lamentable tragedy which occurred in a flower pot on the evening of the 19th July, 1885, Sunday, and of which the writer was an eye-witness' ಎಂದು ಕರೆದಿದ್ದಾನೆ. ಸಸ್ಯ ಜೀವನದಿಂದ ಪ್ರಾಣಿಜೀವನಕ್ಕೆ ಇದನ್ನು ಅನ್ವಯಿಸಿಕೊಂಡರೆ ವಸ್ತುವಿನ ಹಿಂದೆ ಧ್ವನಿತಾರ್ಥ ಬೇಕಾದ ಹಾಗಿರುವುದು ಕಂಡುಬರುತ್ತದೆ."

ಶಾಸ್ತ್ರಿಗಳ ಟೀಕೆಗಳಿಗೂ ಅನುವಾದಗಳಿಗೂ ಇನ್ನೊಂದು ಉದಾಹಾರಣೆಯಿದು:

"'ರಾಜಾರ ಉಪರ್ ರಾಜಾ' ಎಂಬುದರಲ್ಲಿ ಯಾವ ಛಂಧಸ್ಸೂ ಇಲ್ಲ ಪದ್ಯದ ಸಾಲುಗಳೂ ಅಂತ್ಯಪ್ರಾಸವೂ ಇದೆ. ಉದಾ:

'ಮರವನು ಬೆಳೆಸಿದೆ ಹಣ್ಣಿಗಾಗಿ,
ಆದರೆ ದೊರೆಯಿತು ಬರೀ ಮುಳ್ಳೇ;
ಮದುವೆ ಮಾಡಿಕೊಂಡೆ ಸುಖಕಾಗಿ,
ಆದರೆ ದೊರೆಯಿತು ಪೊರಕೆಯ ಸೇವೆ.'"

ಇಪ್ಪತ್ತು ಮತ್ತು ಇಪ್ಪತ್ತೊಂದನೆಯ ಅಧ್ಯಾಯಗಳಲ್ಲಿರುವ ವಿಡಂಬನೆಗಳ ವಿಮರ್ಶೆಯಿಂದಲೂ ಶಾಸ್ತ್ರಿಗಳ ಭಾಷಾಂತರ ಚಾತುರ್ಯಕ್ಕೂ ವಿಮರ್ಶಾತ್ಮಕ ಟೀಕೆಗಳಿಗೂ ನಿದರ್ಶನಗಳನ್ನು ಆಯ್ದುಕೊಳ್ಳಬಹುದು:

## ಇಂಗ್ಲಿಷನ ಸ್ತೋತ್ರ

"ಇದು 'ಮಹಾಭಾರತದಿಂದ ಅನುವಾದಿತ' ಎಂದು ಹೇಳಲ್ಪಟ್ಟಿದೆ; ಆದರೆ ಅದು ಕಲ್ಪಿತವೆಂಬುದು ಸ್ಪಷ್ಟವಾಗಿದೆ. ಮಹಾಭಾರತದಲ್ಲಿಯೂ ಪುರಾಣಗಳಲ್ಲಿಯೂ ದೇವದೇವಿಯರ ಸ್ತೋತ್ರಗಳು ಅಲ್ಲಲ್ಲಿ ಬರುತ್ತವೆ. ವೇದದಲ್ಲಿ ಬರುವ ಇಂದ್ರ ವರುಣ ಮರುತ್ತು ಮುಂತಾದವರ ಸ್ತೋತ್ರಗಳೂ ಪ್ರತಿಪಾದ್ಯ ವಿಷಯದಲ್ಲಿ ಹೀಗೇ ಇರುತ್ತವೆ.

"ಇದರಲ್ಲಿ ೨೮ 'ಶ್ಲೋಕ'ಗಳಿವೆ. (ಆದರೆ ಗದ್ಯರೂಪದಲ್ಲಿವೆ.) ಪ್ರತಿಯೊಂದರಲ್ಲಿಯೂ ದೇವತೆಯನ್ನು ಸಂಬೋಧಿಸುವಂತೆ, ಲಕ್ಷಿಸುವಂತೆ, ತ್ರಿಮೂರ್ತಿ, ತ್ರಿಗುಣಾತ್ಮಕ, ಸಚ್ಚಿದಾನಂದ, ಶುಭಂಕರ, ಭಕ್ತವತ್ಸಲ, ಅಂತರ್ಯಾಮಿ, ಮಿಷ್ಟಭಾಷಿ, ಸುಭೋಜಕ (!) ಎಂದು ಮುಂತಾಗಿ ಕರೆಯುತ್ತಾನೆ. ಆದರೆ ಇಂಗ್ಲಿಷನಿಗೆ ಅನ್ವಯಿಸುವಂತೆ ಅವುಗಳ ಅರ್ಥ ವಿವರಣೆ ಮಾತ್ರ ಹಾಸ್ಯಕರವಾಗಿರುತ್ತದೆ; ಇಂಗ್ಲಿಷನಲ್ಲಿ ಇವು ವಾಸ್ತವಿಕ ವಾಗಿದ್ದರೂ ಭಾರತೀಯನಲ್ಲಿ ದೈನ್ಯವನ್ನೂ ಅಪಹಾಸ್ಯವನ್ನೂ ಉಂಟು ಮಾಡುತ್ತವೆ. ಮುಂದೆ ಒಂದೆರಡು ಮಾದರಿಗಳನ್ನು ಮಾತ್ರ ಕೊಟ್ಟಿದೆ:

"'ನೀನು ರಾಜಧಾನಿಯಲ್ಲಿದ್ದು ರಾಜ್ಯವಾಳುತ್ತೀಯೆ; ಪೇಟೆಯಲ್ಲಿ ವ್ಯಾಪಾರ ಮಾಡುತ್ತೀಯೆ; ನದಿಯ ತೀರದಲ್ಲಿ ನೀನು ಮೀನು ಹಿಡಿಯು ತ್ತೀಯೆ. ಆದ್ದರಿಂದ, ಹೇ ತ್ರಿಮೂರ್ತಿ! ನಾನು ನಿನಗೆ ನಮಸ್ಕರಿಸುತ್ತೇನೆ(೫)

"'ನಿನ್ನ ಸತ್ವಗುಣ ನೀನು ಮಾಡಿದ ಗ್ರಂಥದಲ್ಲಿ ಪ್ರಕಾಶಗೊಂಡಿದೆ; ನಿನ್ನ ರಜೋಗುಣ ನೀನು ಮಾಡಿದ ಯುದ್ಧಾದಿಗಳಲ್ಲಿ ಪ್ರಕಾಶಗೊಂಡಿದೆ; ನಿನ್ನ ತಮೋಗುಣ ನೀನು ನಡೆಸುವ ವೃತ್ತಪತ್ರಿಕೆಗಳಲ್ಲಿ ಪ್ರಕಾಶಗೊಂಡಿದೆ. ಆದ್ದರಿಂದ ಹೇ ತ್ರಿಗುಣಾತ್ಮಕ! ನಾನು ನಿನಗೆ ನಮಸ್ಕರಿಸುತ್ತೇನೆ.'(೬)

"'ನೀನು ಇಂದ್ರ; ಫಿರಂಗಿಯು ನಿನ್ನ ವಜ್ರಾಯುಧ. ನೀನು ಚಂದ್ರ; ಆದಾಯದ ತೆರಿಗೆ ನಿನ್ನ ಕಳಂಕ. ನೀನು ವಾಯು; ನೀನು ರೈಲಿನಲ್ಲಿ ಧಾವಿಸುತ್ತೀಯೆ. ನೀನು ವರುಣ; ಸಮುದ್ರವು ನಿನ್ನ ರಾಜ್ಯ. ಆದ್ದರಿಂದ ಇಂಗ್ಲಿಷ! ನಾನು ನಿನಗೆ ನಮಸ್ಕರಿಸುತ್ತೇನೆ.' (೯)

"'ಎಲೈ ಸೌಮ್ಯ! ನಿನಗೆ ಯಾವುದು ಸಮ್ಮತವೋ ಅದನ್ನು ಮಾಡುತ್ತೇನೆ; ಬೂಟು ಪ್ಯಾಂಟು ಕನ್ನಡಕ ಧರಿಸುತ್ತೇನೆ; ಚಮಚ ಮುಳ್ಳು ಉಪಯೋಗಿಸುತ್ತೇನೆ; ಪ್ರಸನ್ನನಾಗು; ನಾನು ನಿನಗೆ ನಮಸ್ಕರಿಸುತ್ತೇನೆ' (೨೧)

"'ಎಲೈ ಸರ್ವದ! ನನಗೆ ಧನವನ್ನು ಕೊಡು, ಮಾನವನ್ನು ಕೊಡು—ನನ್ನ ಇಷ್ಟಾರ್ಥಗಳನ್ನು ಪೂರೈಸು! ನನಗೆ ದೊಡ್ಡ ಚಾಕರಿಯನ್ನು ನೀಡು, ರಾಜನನ್ನಾಗಿ ಮಾಡು, ಬಹದೂರನನ್ನಾಗಿ ಮಾಡು; ನಾನು ನಿನಗೆ ನಮಸ್ಕರಿಸುತ್ತೇನೆ' (೨೫)"

ಇಂಥದೇ ಇನ್ನೊಂದು ಸೊಗಸಾದ ಚಿತ್ರ ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ಬಂಗಾಳಿ ಬಾಬುವಿನದು :

"ಬಾಬುವು ವಿಚಿತ್ರ ಬುದ್ಧಿ, ಆಹಾರ ನಿದ್ರಾಕುಶಲಿ, ಉಪನೇತ್ರಾಲಂಕೃತ, ಉದಾರಚರಿತ್ರ, ಬಹುಭಾಷಿ, ತಿಂಡಿಪ್ರಿಯ....ಚಿತ್ರವಸನಾವೃತ, ವೇತ್ರಹಸ್ತ, ರಂಜಿತಕುಂತಲ ...ಮಾತಿನಲ್ಲಿ ಅಜೇಯ, ಪರಭಾಷೀ ಪಾರದರ್ಶಿ, ಮಾತೃಭಾಷಾವಿರೋಧಿ....ಅವನ ಕಾಲು ಮೂಳೆ ಮಾಂಸಗಳಿಲ್ಲದೆ ಕಟ್ಟಿಗೆಯಂತಿದ್ದರೂ ಅವನು ಪಲಾಯನದಲ್ಲಿ ಗಟ್ಟಿಗ; ಕೈಯಲ್ಲಿ ಬಲವಿಲ್ಲದಿದ್ದರೂ ಲೇಖನಿಯನ್ನೂ ಬೆತ್ತವನ್ನೂ ಹಿಡಿಯುವುದರಲ್ಲಿ ಸಮರ್ಥ....

"ಬಾಬುವು ಎರಡನೆ ಅಗಸ್ತ್ಯನಂತೆ (ಮದ್ಯದ) ಸಮುದ್ರವನ್ನು ಶೋಷಿಸುತ್ತಾನೆ; ಗಾಜಿನಲೋಟವೇ ಅವನ ಆಪೋಶನಪಾತ್ರ; ಅಗ್ನಿಯು ಅವನ ಆಜ್ಞಾಧಾರಕನಾಗಿ ತಂಬಾಕು ಚುಟ್ಟಾ ಎಂಬ ಎರಡು ಹೊಸ ಖಾಂಡವಗಳಲ್ಲಿ ಆಶ್ರಯಪಡೆದು ಹಗಲೂ ರಾತ್ರಿಯೂ ಅವನ ಬಾಯಲ್ಲಿ ಇರುತ್ತಾನೆ...."

ಈ ಅನುವಾದಗಳು ಬಂಕಿಮನ ವಿಡಂಬನ ಕೌಶಲವನ್ನೂ ಹಾಸ್ಯ ಚಾತುರ್ಯವನ್ನೂ ತೋರಿಸುವುದಲ್ಲದೆ ಕೃಷ್ಣಶಾಸ್ತ್ರಿಗಳು ಹೇಗೆ ಆಯಾ ವಿಷಯಕ್ಕೆ ತಕ್ಕ ಭಾಷೆಯಲ್ಲಿ ಶೈಲಿಯಲ್ಲಿ ಬಂಕಿಮನ ಬಂಗಾಳಿ ಬರಹವನ್ನು ಅಚ್ಚುಕಟ್ಟಾಗಿ ಕನ್ನಡಿಸಬಲ್ಲರು ಎಂಬುದನ್ನೂ ಸೂಚಿಸುತ್ತವೆ. ಈ ಅಧ್ಯಾಯಗಳು ಬಂಕಿಮಚಂದ್ರನು ಬರಿಯ ಕಾದಂಬರಿಕಾರನೆಂದು ಭಾವಿಸಿರುವವರ ಕಣ್ಣು ತೆರೆಸಿ ಅವನ ಪ್ರತಿಭೆ ಎಷ್ಟು ವೈವಿಧ್ಯಪೂರ್ಣವಾಗಿತ್ತು ಎನ್ನುವುದರ ಅರಿವನ್ನು ನೀಡುತ್ತವೆ. "ಬಂಕಿಮನು ಕವಿತೆಗಳನ್ನೂ ಕಟ್ಟುಕಥೆಗಳನ್ನೂ ಮಾತ್ರವೇ ಬರೆದ ಸುಲಭ ಮನೋವೃತ್ತಿಯವನಲ್ಲ. ಅವನ ಮನಸ್ಸು ಮೊದಲಿಂದಲೂ ಘನವಾದ, ಗಹನವಾದ ವಿಚಾರಗಳ ಕಡೆಗೆ ಓಲುತ್ತಿತ್ತು" ಎಂಬ ಕೃಷ್ಣಶಾಸ್ತ್ರಿಗಳ ಹೇಳಿಕೆಗೆ ಪ್ರತ್ಯಕ್ಷ ನಿದರ್ಶನಗಳನ್ನು ಪುಸ್ತಕದ ಉತ್ತರಾರ್ಧದಲ್ಲಿ ಅವರು ಅನುವಾದಿಸಿ ಕೊಟ್ಟಿರುವ ಈ ವಿಡಂಬನ ಲೇಖನಗಳೂ "ಧರ್ಮತತ್ತ್ವ", "ಶ್ರೀಕೃಷ್ಣಚರಿತ್ರೆ", "ಭಗವದ್ಗೀತೆಯ ಟೀಕೆ" ಮೊದಲಾದ ಬರಹಗಳೂ ಇತರ ಪ್ರಬಂಧಗಳೂ ಹೇರಳವಾಗಿ ಒದಗಿಸುತ್ತವೆ. ಹತ್ತೊಂಬತ್ತನೆಯ ಅಧ್ಯಾಯದಲ್ಲಿ "ಲಘುಲೇಖನಗಳು—

ಪೀಠಿಕೆ" ಎಂಬ ಹೆಸರಿನಲ್ಲಿ ಅವರು ಹಾಸ್ಯಸಾಹಿತ್ಯವನ್ನು ಕುರಿತು ವಿವರಣಾತ್ಮಕವೂ ವಿಮರ್ಶಾತ್ಮಕವೂ ಆದ ಒಂದು ಸಣ್ಣ ಉಪನ್ಯಾಸವನ್ನೇ ಬರೆದಿದ್ದಾರೆ. ಶಾಸ್ತ್ರಿಗಳ ಸಾಹಿತ್ಯ ವ್ಯಾಸಂಗವೂ ಸಾಹಿತ್ಯ ಚಿಂತನೆಯೂ ಹೇಗೆ ಸುವಿಸ್ತಾರವಾಗಿದ್ದುವು ಎಂಬುದನ್ನು ಅದು ಸೂಚಿಸುತ್ತದೆ. ಕನ್ನಡದಲ್ಲಿ ಬರೆಯುವ ಎಲ್ಲ "ವಿಮರ್ಶಕ"ರೂ ಇಂಥ ಪರಿಶ್ರಮವನ್ನೂ ಯೋಗ್ಯತೆಯನ್ನೂ ಪಡೆದಿದ್ದ ಪಕ್ಷಕ್ಕೆ ಅವರ ಲೇಖನಗಳು ನಿಜವಾಗಿಯೂ ನಮ್ಮ ಸಾಹಿತ್ಯದ ಬೆಳವಣಿಗೆಗೆ ಸಾಧಕವಾಗುತ್ತಿದ್ದವು.

ಇನ್ನು ಗ್ರಂಥದ ಮಧ್ಯಭಾಗಕ್ಕೆ ಸೇರಿದ–ಅದಕ್ಕೆ ಬೆನ್ನುಮೂಳೆಯಂತಿರುವ–ಕಾದಂಬರಿಗಳ ಪರಿಶೀಲನೆಯನ್ನು ತೆಗೆದುಕೊಂಡರೆ ಮತ್ತೆ ಇದೇ ವೈಶಿಷ್ಟ್ಯ ನಮ್ಮ ಗಮನವನ್ನು ಸೆಳೆದು ಮೆಚ್ಚಿಗೆಯನ್ನು ಗಳಿಸುತ್ತದೆ. ಬಂಕಿಮನ ಕಾದಂಬರಿಗಳನ್ನು ಕೃಷ್ಣಶಾಸ್ತ್ರಿಗಳು "ಸಾಮಾಜಿಕ ಕಾದಂಬರಿಗಳು" "ಐತಿಹಾಸಿಕ ಕಾದಂಬರಿಗಳು" ಎಂದು ಎರಡು ಗುಂಪುಗಳಾಗಿ ವಿಂಗಡಿಸಿ, ಒಂದೊಂದು ಕಾದಂಬರಿಯನ್ನೂ ಪ್ರತ್ಯೇಕವಾಗಿ ಒಂದೊಂದು ಅಧ್ಯಾಯದಲ್ಲಿ ಸಮೀಕ್ಷಿಸಿದ್ದಾರೆ. ಬಂಕಿಮನ ಕಾದಂಬರಿಗಳ ಪರಿಶೀಲನೆಯಲ್ಲಿ ತಾವು ಅನುಸರಿಸಿರುವ ವಿಧಾನವನ್ನು ಶಾಸ್ತ್ರಿಗಳೇ ತಮ್ಮ "ಬಿನ್ನಹ"ದಲ್ಲಿ ಈ ರೀತಿ ವಿವರಿಸಿದ್ದಾರೆ :

> "ಈಗ ಹಲವು ಕಾರಣಗಳಿಂದಾಗಿ ವೆಂಕಟಾಚಾರ್ಯರ ಕಾದಂಬರಿಗಳು ಹಿಂದೆ ಬಿದ್ದಿವೆ. ಒಂದೆರಡು ಹೊರತು ಮಿಕ್ಕವು ದುಡ್ಡು ಕೊಟ್ಟರೂ ದೊರೆಯುವುದಿಲ್ಲ. ಆದ್ದರಿಂದ ಈ ಕಾದಂಬರಿಗಳನ್ನು ಪರಿಶೀಲಿಸುವಾಗ ಸಾಧ್ಯವಾದಕಡೆಗಳಲ್ಲೆಲ್ಲಾ ಅವುಗಳ ಕಥಾಸಂಗ್ರಹವನ್ನು ಕೊಟ್ಟಿದೆ. ಇದರಿಂದ ಆಯಾ ಕಾದಂಬರಿಯ ಸಾಮಾನ್ಯ ರೂಪರೇಖೆಗಳು ಗೊತ್ತಾಗ ಬಹುದೇ ಹೊರತು ಅದರ ನಿಜಸ್ವರೂಪ ಗೊತ್ತಾಗುವುದಿಲ್ಲ; ಅದಕ್ಕೆ ಮೂಲವನ್ನೇ ಅಥವಾ ಒಳ್ಳೆಯ ಭಾಷಾಂತರವನ್ನೇ ಓದಬೇಕು. ಕಲೆಯ ಜೀವವಿರುವುದು ಅದರ ವಿವರಗಳಲ್ಲಿ. ಒಬ್ಬ ವ್ಯಕ್ತಿಯ ನಗೆ, ನೋಟ, ಹಾವ, ಭಾವ, ಒಲುಮೆ, ನಲ್ಮೆ, ಮಾಯೆ, ಮಾಧುರ್ಯ ಮುಂತಾದವುಗಳನ್ನು ಹೇಗೆ ಫೋಟೋತೆಗೆದುಕೊಂಡು ತೋರಿಸುವುದು ಸಾಧ್ಯವಿಲ್ಲವೋ, ಅವನ್ನು ಅನುಭವಕ್ಕೆ ತಂದುಕೊಳ್ಳದೆ ಜೀವಂತವಾದ ವ್ಯಕ್ತಿತ್ವದ ಸತ್ಯಪರಿಚಯ ಹೇಗೆ ಆಗುವುದಿಲ್ಲವೋ, ಹಾಗೇ ಕೆಲವು ಸವಿರಾದ ಸನ್ನಿವೇಶಗಳನ್ನು ಪೂರ್ತಿಯಾಗಿ ಓದದೆ, ಮನಶ್ಚಕ್ಷುವಿನ ಮುಂದೆ ತಂದುಕೊಳ್ಳದೆ ಕಲೆಯ ಸೌಂದರ್ಯವು ಅನುಭವಕ್ಕೆ ಬರದು. ಕಥೆಯ ಸ್ಥೂಲಪರಿಚಯವಾದರೂ ಆದರೆ, ಭಾವುಕರಾದ ಪಾಠಕರು, ಮುಂದೆ ಆಯಾ ಕಾದಂಬರಿಯ ವಿಚಾರವಾಗಿ ಬರೆದಿರುವ ಮಾತುಗಳನ್ನು ಗ್ರಹಿಸಿಯಾರೆಂಬ ಆಸೆಯಿಂದ ಇದನ್ನು ಬರೆದುದಾಗಿದೆ. ಮೂಲಕಾದಂಬರಿಯನ್ನು ವಿವರವಾಗಿ, ಸಾವಧಾನವಾಗಿ,

ಓದಿದರೆ ಅದು ಹೆಚ್ಚು ಸೊಗಸೀತು, ಪಾಠಕರಲ್ಲಿ ಆ ಆಸೆ ಹುಟ್ಟೀತು ಎಂದು ನಿರೀಕ್ಷಿಸಿದ್ದೇನೆ."

ಹೀಗೆ ಕಥಾವಸ್ತುವನ್ನು ಸಾರಾಂಶರೂಪದಲ್ಲಿ ನಿರೂಪಿಸಿರುವುದಲ್ಲದೆ ಅದರಲ್ಲಿ ಬರುವ ಸಂವಿಧಾನ ರಚನೆ ಪಾತ್ರ ಪರಿಪೋಷಣೆ, ಸಾಮಾಜಿಕ ಚಿತ್ರ, ಜೀವನ ದರ್ಶನ ಮೊದಲಾದ ಅಂಶಗಳನ್ನೂ ಶಾಸ್ತ್ರಿಗಳು ವಿವರವಾಗಿ ಚರ್ಚಿಸಿದ್ದಾರೆ. ಅವರಿತ್ತಿರುವ ಕಾದಂಬರಿಗಳ ಅರ್ಥವಿವರಣೆಯ ವೈಖರಿಗೊಂದು ನಿದರ್ಶನ ಹೀಗಿದೆ :

" 'ವಿಷವೃಕ್ಷ'ವು ಭಾವಪ್ರಧಾನವಾದ ಕಾದಂಬರಿ; ಈ ಹೆಸರೇ ಅದನ್ನು ಸೂಚಿಸುತ್ತದೆ. ಬಂಕಿಮನು ತನ್ನ ಮಿಕ್ಕ ಕಾದಂಬರಿಗಳಿಗೆಲ್ಲಾ ನಾಯಕ ಅಥವಾ ನಾಯಿಕೆಯರ ಹೆಸರುಕೊಟ್ಟಿರುವಾಗ ಇದಕ್ಕೆ ಅಂಥ ಯಾವ ಹೆಸರನ್ನೂ ಕೊಡದೆ ಮನುಷ್ಯನ ಕಾಮಕ್ರೋಧಾದಿಗಳಿಂದ ಉಂಟಾಗುವ ದುಷ್ಕೃತ್ಯ ದುರ್ಮಾರ್ಗ ದುರಾಚರಣೆಗಳನ್ನು 'ವಿಷವೃಕ್ಷ' ವೆಂದು ರೂಪಕವಾಗಿ ನಿರ್ದೇಶಿಸಿ, ಅದನ್ನು ಒಂದು ಪರಿಚ್ಛೇದದ ತುಂಬ ವಿವರಿಸಿ, ಕಾದಂಬರಿಯ ಪಾತ್ರಗಳಲ್ಲಿ ಸಮನ್ವಯ ಮಾಡಿ ತೋರಿಸಿದ್ದಾನೆ. 'ಆನಂದಮಠ' 'ಕೃಷ್ಣಕಾಂತನ ಉಯಿಲು'ಗಳಿಗೆ ನಾಯಕ ನಾಯಿಕೆಯರ ಹೆಸರು ಇಲ್ಲವೆನ್ನಬಹುದು. ಆದರೆ ಆನಂದಮಠವು ಒಂದು ಸಂಸ್ಥೆಯ ಹೆಸರು; ಅದು ಆನಂದರ ಮಠ. ಅದರ ಮುಖ್ಯಪಾತ್ರಗಳೆಲ್ಲಾ 'ಆನಂದ'ರೇ. ಆ ಸಂಸ್ಥೆಯ ಹಿಂದೆ, ಅದರ ಪಾತ್ರಗಳ ಹೆಸರುಗಳ ಹಿಂದೆ, (ಸತ್ಯ–ಜೀವ–ಭವ–ಶಾಂತಿ,) ಒಂದು ಧ್ಯೇಯವಿತ್ತೆಂಬುದೇನೋ ನಿಜ. 'ಕೃಷ್ಣಕಾಂತನ ಉಯಿಲು' ನಲ್ಲಿ ಎಲ್ಲ ಅವಾಂತರಗಳಿಗೂ ಕಾರಣವಾದ ಉಯಿಲುಗಳನ್ನು ಬರೆದ ಕೃಷ್ಣಕಾಂತನ ಹೆಸರು ಇದೆ. ಆದರೆ ಅವನನ್ನೇನೂ ಕಥಾನಾಯಕನೆನ್ನುವಂತಿಲ್ಲ."

ಪಾತ್ರಗಳ ಗುಣಾವಗುಣಗಳ ಆಗುಹೋಗುಗಳ ವಿಶ್ಲೇಷಣ ಮಾಡುವಾಗ ಅವರು ಅನುಸರಿಸಿರುವ ರೀತಿಗೆ ಇದೊಂದು ನಿದರ್ಶನ:

" ಕುಂದೆಯಲ್ಲಿರಬಹುದಾದ ಕಾಮಮೋಹಗಳು ಅವಳಿಗೆ ಕೆಡುಕು ಮಾಡಿದುವೆಂದು ಹೇಳುವುದಕ್ಕಿಂತಲೂ ನಗೇಂದ್ರ ದೇವೇಂದ್ರ ಹೀರೆಯರು ತಮ್ಮ ಅಂಗಳಗಳಲ್ಲಿ ವಿಷವೃಕ್ಷ ಬೆಳೆಸಿ ಅದರ ನೆರಳಿಗೆ ಅವಳನ್ನು ಎಳೆದದ್ದರಿಂದ ಅವಳಿಗೆ ಹೆಚ್ಚು ಘಾತವಾಯಿತೆಂದು ಹೇಳುವುದು ಉಚಿತ.

" ಅವಳ ದುರಂತಕ್ಕೆ ನಗೇಂದ್ರನನ್ನು ಬಿಟ್ಟರೆ ಹೀರೆಯೇ ಹೆಚ್ಚು ಜವಾಬುದಾರಳು ಎಂದು ತೋರುತ್ತದೆ.

"ಹೀರೆಯು ತರುಣ ವಯಸ್ಸಿನ ಹೆಂಗಸಾದರೂ (ವಯಸ್ಸು ೨೦) ವಿಧವೆಯಾದರೂ ಅವಳು ವಿಷವೃಕ್ಷದ ಬೆಳೆವಣಿಗೆಗೆ ಹದವಾದ ಕ್ಷೇತ್ರ ವಾಗಿದ್ದಳು...."

ಸಾಮಾಜಿಕ ಸಮಸ್ಯೆಗಳು, ಲೇಖಕನ ಜೀವನದರ್ಶನ ಇವುಗಳ ವಿವರಣೆಗೆ ಉದಾ ಹರಣೆಯಾಗಿ ಇದೇ ಭಾಗದಿಂದ ಕೆಲವು ವಾಕ್ಯಗಳನ್ನು ಕೊಡಬಹುದು:

"ನಗೇಂದ್ರನು ಕುಂದೆಯನ್ನು ನೋಡುವುದಕ್ಕಿಂತ ಮುಂಚೆ ಸುಖ ವಾಗಿದ್ದನು; ಅವಳು ರಂಗದಿಂದ ಅದೃಶ್ಯಳಾದ ಮೇಲೆ-ದುಸ್ವಪ್ನವನ್ನು ಕಂಡು ಎಚ್ಚತ್ತವನಂತೆ- ಸುಖವಾಗಿರುವನು. ಸೂರ್ಯಮುಖಿಯೂ ಹಾಗೆಯೇ. ಆದರೆ ಕುಂದೆ-ಅಲ್ಪಾಯುಸ್ಸಿನ, ದುರದೃಷ್ಟದ ಕುಂದೆ- ಎಂದಾದರೂ ಸುಖವಾಗಿದ್ದಳೋ ಇಲ್ಲವೋ !....

"ಬಂಕಿಮನ ಅಭಿಪ್ರಾಯದಲ್ಲಿ ಈ ದುಃಖಕ್ಕೆ, ವಿವೇಚನೆ ಇಲ್ಲದ ವಿವಾಹ-ಬಹು ಪತ್ನೀ ವಿವಾಹ, ವಿಧವಾ ವಿವಾಹ-ಒಂದು ಕಾರಣ. ಬಂಕಿಮನೇನೂ ಹಿಂದಿನ ಕಾಲದ ಸಂಪ್ರದಾಯಬದ್ಧನಾದ, ಗೊಡ್ಡು- ವ್ಯಕ್ತಿಯಲ್ಲ. ಅವನ 'ಧರ್ಮತತ್ವ'ವನ್ನೂ 'ಕೃಷ್ಣ ಚರಿತೆ'ಯನ್ನೂ ಓದಿದವರಿಗೆ ಇದು ಸ್ಪಷ್ಟವಾಗುತ್ತದೆ. ಅಂಥವನು ಇದನ್ನು ಖಂಡಿಸ ಬೇಕಾದರೆ ಅದಕ್ಕೆ ತಾನು ಕಣ್ಣೆದುರಿಗೆ ಕಾಣುತ್ತಿದ್ದ ಕ್ಲೇಶಗಳೇ ಕಾರಣ...."

ಹೀಗೆ ಕಾದಂಬರಿಯ ಕಥೆ, ಆ ಕಥೆಯ ಬೆಳವಣಿಗೆಗೆ ಕಾರಣವಾದ ಪಾತ್ರ ಗಳು ಮತ್ತು ಅವರ ಗುಣಾವಗುಣಗಳು, ಅವರ ಜೀವನದ ಚಿತ್ರಣದಿಂದ ವ್ಯಕ್ತ ವಾಗುವ ಕಾದಂಬರಿಕಾರನ ಮನೋದೃಷ್ಟಿ ಮತ್ತು ಅದು ಸೂಚಿಸುವ ಅವನ ಲೋಕಾನುಭವ ಇವೆಲ್ಲವನ್ನೂ ಕೃಷ್ಣಶಾಸ್ತ್ರಿಗಳು ಒಂದೊಂದು ಕಾದಂಬರಿಯ ವಿಚಾರದಲ್ಲೂ ವಿವರವಿವರವಾಗಿ ಬಿಚ್ಚಿ ತೋರಿಸಿ ಕಾದಂಬರಿಗೂ ನಮಗೂ ನಿಕಟ ಸಂಬಂಧವನ್ನು ಏರ್ಪಡಿಸಿ ನಮ್ಮ ಗ್ರಹಣಶಕ್ತಿಯನ್ನು ಚುರುಕುಗೊಳಿಸುತ್ತಾರೆ.

ಐತಿಹಾಸಿಕ ಕಾದಂಬರಿಗಳ ವಿಭಾಗಕ್ಕೆ ಮುನ್ನುಡಿಯಾಗಿ—ಹಾಸ್ಯ ಲೇಖನ ಗಳ ಪರಿಶೀಲನೆಗೆ ಮೊದಲು ಮಾಡಿರುವಂತೆಯೇ—ಆ ಜಾತಿಯ ಕಾದಂಬರಿಗಳ ಮುಖ್ಯ ಲಕ್ಷಣಗಳ ವಿವರಣೆಯಿದೆ. ಬಂಕಿಮನು ಐತಿಹಾಸಿಕ ಕಾದಂಬರಿಗಳನ್ನು ಬರೆಯಲು ತೊಡಗಿದುದಕ್ಕೆ ಕಾರಣಗಳನ್ನು ಹೇಳುತ್ತಾ ಶಾಸ್ತ್ರಿಗಳು ಹೀಗೆ ನುಡಿ ದಿದ್ದಾರೆ.

"ಬಂಕಿಮನು ದೇಶವಿದೇಶಗಳ ಚರಿತ್ರೆಯನ್ನು ಓದಿದ್ದನು; ಅವುಗಳ ಮೇಲೆ ಸ್ಕಾಟ್ ಲಿಟ್ಟನ್ ಮುಂತಾದವರು ಬರೆದ ಉಜ್ವಲವಾದ ಕಾದಂಬರಿ

ಗಳನ್ನು ಓದಿದ್ದನು; ಮೆಚ್ಚಿದ್ದನು. ಅಂಥ ಚರಿತ್ರೆಯನ್ನು ನಮ್ಮ ದೇಶಕ್ಕೆ ಯಾರೂ ಬರೆದಿಲ್ಲವಲ್ಲಾ ಎಂದು ಅವನಿಗೆ ತುಂಬಾ ಕೊರಗು ಉಂಟಾಗಿತ್ತು. ಇದ್ದ ಕೆಲವು ಲೇಖನಗಳಲ್ಲಿಯೂ ಗ್ರಂಥಗಳಲ್ಲಿಯೂ ನಮ್ಮ ಜನವನ್ನು, ಅದರಲ್ಲಿಯೂ ಬಂಗಾಳಿಗಳನ್ನು, ತುಂಬ ನಿಕೃಷ್ಟವಾಗಿ ಚಿತ್ರಿಸಿತ್ತು. ಅದನ್ನು ಓದಿದಾಗ ಅವನಿಗೆ ಆದ ಸಂಕಟವನ್ನು, ಬಂದ ರೋಷವನ್ನು ಅವನು ಅನೇಕ ಕಡೆಗಳಲ್ಲಿ ಹೇಳಿಕೊಂಡಿದ್ದಾನೆ ಆದ್ದರಿಂದ ಅವನು ಬಂಗಾಳಾ ದೇಶದ ಚರಿತ್ರೆಯನ್ನು ಬರೆಯಲು ಪ್ರಯತ್ನಪಟ್ಟನು. ಆದರೆ, ಆಗ ಇಂದು ದೊರಕಿರುವ ಸಾಮಗ್ರಿಗಳು ದೊರಕಿರಲಿಲ್ಲ; ಅವುಗಳ ಹೆಸರನ್ನೂ ಕೇಳಿರಲಿಲ್ಲ. ಆದ್ದರಿಂದ ಅವನು ಆ ಚರಿತ್ರೆಯ ಮೇಲಿನ ಕಾದಂಬರಿ ಗಳನ್ನು ಬರೆಯಲು ಕೈಯಿಟ್ಟನು........"

ಇದಾದನಂತರ ಶಾಸ್ತ್ರಿಗಳು ಕಾದಂಬರಿಗಳನ್ನು ಬೇರೆ ಬೇರೆಯಾಗಿ ಪರಿಶೀಲಿಸಿ ಅವು ಗಳ ವಿವಿಧ ಲಕ್ಷಣಗಳನ್ನು ಚರ್ಚಿಸಿ ವಿಮರ್ಶಿಸಿದ್ದಾರೆ. ಯಾವುದಾದರೂ ಕಾದಂಬರಿ ಇಂಗ್ಲಿಷ್ ಮೂಲಕೃತಿಯೊಂದರ ಆಧಾರದ ಮೇಲೆ ರಚಿತವಾಗಿದ್ದರೆ ಬಂಕಿಮನ ಬಂಗಾಳಿ ಕೃತಿಗೂ ಆ ಇಂಗ್ಲಿಷ್ ಕೃತಿಗೂ ಇರುವ ಸಾದೃಶ್ಯ ಎಷ್ಟರ ಮಟ್ಟಿಗಿದೆ ಎಂಬುದನ್ನು ಹೋಲಿಸಿ ನೋಡಿದ್ದಾರೆ. (ಇದಕ್ಕೊಂದು ಉದಾಹರಣೆ ಲಿಟ್ಟನ್ನನ Last Days of Pompaii ಕಾದಂಬರಿಯ ನಿಡಿಯಾಳಿಗೂ ಬಂಕಿಮನ "ರಜನೀ" ಕಾದಂಬರಿಯ ರಜನಿಯ ಪಾತ್ರಕ್ಕೂ, ಸ್ಕಾಟ್‌ನ Bride of Lammermoorನ ಕ್ಯಾಲೆಬ್ ಬಾಲ್ಡರ್‌ಸ್ಟನ್‌ಗೂ "ದುರ್ಗೇಶನಂದಿನಿ"ಯ ದಿಗ್ಗಜನಿಗೂ ಇರುವ ಹೋಲಿಕೆ ಮತ್ತು ತಾರತಮ್ಯಗಳ ಪರಿಶೀಲನೆ.) ವೆಂಕಟಾ ಚಾರ್ಯರ ಕನ್ನಡ ಅನುವಾದಕ್ಕೂ ಬಂಕಿಮನ ಬಂಗಾಳಿ ಮೂಲಕ್ಕೂ ಎಲ್ಲಾದರೂ ವ್ಯತ್ಯಾಸಗಳಿದ್ದರೆ ಅವನ್ನೂ ಸೂಚಿಸಿದ್ದಾರೆ. ಒಂದೇ ಕಾದಂಬರಿ ಪುನರ್ಮುದ್ರಿತ ವಾದಾಗ ಕಾದಂಬರಿಕಾರನು ಅದರಲ್ಲಿ ಏನಾದರೂ ಬದಲಾವಣೆಗಳನ್ನು ಮಾಡಿದ್ದರೆ ಅವನ್ನೂ ಅವಲೋಕಿಸಿದ್ದಾರೆ. ಕೆಲವು ಕಡೆ ತಮ್ಮ ಅಭಿಪ್ರಾಯಗಳಿಗೆ ಪೋಷಕ ವಾಗಿ ಇಂಗ್ಲಿಷ್ ಚರಿತ್ರಕಾರರಿಂದಲೂ ಸಾಹಿತಿಗಳಿಂದಲೂ ವಾಕ್ಯಗಳನ್ನು ಉದ್ಧರಿಸಿ ಕೊಟ್ಟಿದ್ದಾರೆ. ಒಟ್ಟಿನ ಮೇಲೆ ಬಂಕಿಮನ ಕಾದಂಬರಿಗಳನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ವಾಚಕನಿಗೆ ಬೇಕಾಗುವ ಎಲ್ಲ ಸಹಾಯವನ್ನೂ ಅವರು ನೀಡಿರುವರು.

ಹೀಗೆ ಈ ಗ್ರಂಥದ ಯಾವ ಭಾಗವನ್ನೇ ತೆಗೆದುಕೊಂಡರೂ ಅದರ ಉತ್ಕೃಷ್ಟತೆ ಎದ್ದು ಕಾಣುತ್ತದೆ. ಬೃಹದ್ಗ್ರಂಥವಾದ ಅದರ ಗುಣಬಾಹುಳ್ಯವೂ ಬೃಹ ತ್ತಾಗಿಯೇ ಇದೆ. ಯಾವ ಪುಟದಲ್ಲಿ ನೋಡಿದರೂ ಗ್ರಂಥಕರ್ತರ ಪಾಂಡಿತ್ಯ, ತೀಕ್ಷ್ಣ ದೃಷ್ಟಿ, ತುಲನಶಕ್ತಿ, ಶ್ರದ್ಧೆ, ತಾವು ಮೆಚ್ಚಿಕೊಂಡಿರುವ ಬಂಕಿಮನ

ಹಿರಿಮೆಯನ್ನು ಎತ್ತಿ ಹಿಡಿಯುವುದರಲ್ಲಿ ಅವರಿಗಿರುವ ಉತ್ಸಾಹ, ಎಲ್ಲಕ್ಕಿಂತಲೂ ಹೆಚ್ಚಾಗಿ, ತಮ್ಮ ಈ ಉತ್ಸಾಹವನ್ನು ಓದುಗನಲ್ಲೂ ಪ್ರಚೋದಿಸುವ ಅವರ ಚಾಕಚಕ್ಯತೆ, ಈ ಗುಣಗಳಿಂದ ಗ್ರಂಥ ಅತ್ಯಾಕರ್ಷಕವೂ ಅಮೂಲ್ಯವೂ ಆಗಿದೆ. ಅದರ ಭಾಷೆಯು ಶೈಲಿಯಂತೂ ಉದ್ದಕ್ಕೂ ಮನೋಹರವಾಗಿ ವಾಚಕನ ಮನಸ್ಸನ್ನು ಕಥೆ ಕಾದಂಬರಿಗಳ ಹಾಗೆ ಸೆರೆಹಿಡಿಯುತ್ತದೆ. ಎಲ್ಲೂ ಬೇಸರವಾಗುವುದಿಲ್ಲ; ಪುಸ್ತಕವನ್ನು ಓದಿ ಮುಗಿಸುವತನಕ ನಿಲ್ಲಿಸಬೇಕೆನ್ನಿಸುವುದಿಲ್ಲ. "ತೇಜಸ್ವಿಯಾಗಿರಲಿ ನಾವು ಓದುವ ಓದು" ಎಂಬ ಪ್ರಾರ್ಥನೆಯೊಂದಿಗೆ ಶಾಸ್ತ್ರಿಗಳು ಪುಸ್ತಕವನ್ನು ಮುಕ್ತಾಯಮಾಡಿದ್ದಾರೆ. ನಾವು ಕನ್ನಡದಲ್ಲಿ ಓದಬಹುದಾದ ಅತ್ಯಂತ ತೇಜಸ್ವಿಗಳಾದ ಗ್ರಂಥಗಳಲ್ಲಿ ಅವರ ಈ "ಮಾರ್ಗದರ್ಶಕವಾದ ವಿಮರ್ಶ ಕೃತಿ"ಯೂ ಒಂದೆಂದು ಸ್ವಲ್ಪವೂ ಅನುಮಾನಿಸದೆ ಘೋಷಿಸಬಹುದು. ಇಂಥ ಗ್ರಂಥ ರತ್ನದಿಂದ ತಮ್ಮ ಸಾರಸ್ವತ ಸಂಪತ್ತನ್ನು ಹೆಚ್ಚಿಸಿದ್ದಕ್ಕಾಗಿ ಡಾ. ಶಾಸ್ತ್ರಿಗಳಿಗೆ ಕನ್ನಡಿಗರು ಕೃತಜ್ಞರು ಎಂದರೆ ಅದು ಖಂಡಿತ ಬರಿಯ ಉಪಚಾರದ ಮಾತಾಗಲಾರದು.

ಎಸ್. ವಿ. ಪರಮೇಶ್ವರ ಭಟ್ಟ

# ಎ. ಆರ್. ಕೃ. ಅವರ ಕಾವ್ಯಮೀಮಾಂಸೆ

ಮೈಸೂರು ವಿಶ್ವವಿದ್ಯಾನಿಲಯದ ಹೆಮ್ಮೆಯ ಪ್ರಕಟಣೆಗಳಲ್ಲಿ 'ಕನ್ನಡ ಕೈಪಿಡಿ'ಯೂ ಒಂದು. ಇದು ಎರಡು ಸಂಪುಟಗಳಲ್ಲಿ ಪ್ರಕಟವಾಗಿದೆ. ಇದರ ಮೊದಲನೆಯ ಸಂಪುಟದಲ್ಲಿ ಬಂದಿರುವ ಮೂರನೆಯ ಭಾಗವಾದ ಅಲಂಕಾರದ ವಿಷಯಕ್ಕೆ ಸಂಬಂಧಿಸಿದಂತೆ ಮೊದಲನೆಯ ಹನ್ನೊಂದು ಅಧ್ಯಾಯಗಳನ್ನು ಶ್ರೀ ಎ. ಆರ್. ಕೃಷ್ಣಶಾಸ್ತ್ರಿ, ಎಂ.ಎ. ಅವರು ಬರೆದು ಕೊಟ್ಟಿರುತ್ತಾರೆ. ಈ ಬರಹಗಳಲ್ಲಿ ಕಾಣಬರುವ ವೈಶಿಷ್ಟ್ಯಗಳನ್ನು ಕುರಿತು ಈ ನನ್ನ ಲೇಖನದಲ್ಲಿ ನಾಲ್ಕು ಮಾತು ಹೇಳಿದ್ದೇನೆ.

'ಕನ್ನಡ ಸಾಹಿತ್ಯವನ್ನು ಓದುವ ವಿದ್ಯಾರ್ಥಿಗಳ ಉಪಯೋಗಕ್ಕಾಗಿ' ಈ ಕೈಪಿಡಿ ರಚಿತವಾಯಿತು ಎಂಬುದನ್ನು ನಾವು ಮರೆಯಬಾರದು. ಆರು ಜನ ವಿದ್ವಾಂಸರು ಈ ಕೈಪಿಡಿಯ ರಚನೆಯಲ್ಲಿ ದುಡಿದಿದ್ದಾರೆ. ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಈ ವಿದ್ವಜ್ಜನರ ಮಂಡಲಿಯ ಅಧ್ಯಕ್ಷರಾಗಿದ್ದರು. 'ಮುಖ್ಯಾಂಶಗಳನ್ನು ಸಂಕ್ಷೇಪವಾಗಿ, ಸೂಚಿಸಬೇಕು', 'ಪ್ರೌಢವಿಚಾರಗಳಿಗಾಗಲಿ ಇನ್ನೂ ಚರ್ಚಾಸ್ಪದವಾಗಿರತಕ್ಕ ಅಂಶಗಳಿಗಾಗಲಿ ಸಾಧಾರಣವಾಗಿ ಪ್ರವೇಶ ಕೊಡಬೇಕಾದದ್ದಿಲ್ಲ' 'ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣನಾಗುವ ವಿದ್ಯಾರ್ಥಿ ತಿಳಿದಿರಬೇಕಾದಷ್ಟು ಅಂಶಗಳು ಇರಬೇಕು' ಈ ಮೂರು ಮಿತಿಗಳನ್ನು ಇಟ್ಟುಕೊಂಡು ಕೈಪಿಡಿಯ ಭಾಗಗಳನ್ನು ಅಳವಡಿಸಲಾಗಿದೆ. ಈ ಅಂಶಗಳನ್ನೆಲ್ಲ ದೃಷ್ಟಿಯಲ್ಲಿಟ್ಟುಕೊಂಡು ನಾವು ಶ್ರೀ ಶಾಸ್ತ್ರಿಗಳವರ 'ಅಲಂಕಾರ' ವಿಭಾಗದ ಲೇಖನಗಳನ್ನು ನೋಡಬೇಕು. ಜೊತೆಗೆ ಇದರ ಪ್ರಥಮ ಮುದ್ರಣ ೧೯೩೭ರಲ್ಲಿ ಆದದ್ದು ಎಂಬುದನ್ನು ಮರೆಯಲಾಗದು. ನಲವತ್ತೊಂದು ವರುಷಗಳ ಕೆಳಗೆ ಬರೆದ ಬರವಣಿಗೆ ಸಹಜವಾಗಿ ಈಗ ಇತ್ತೀಚಿನ ದಿನಗಳಲ್ಲಿ ಅದೇ ವಿಷಯವಾಗಿ ಅದೇ ಲೇಖಕರು ಬರೆದ ಬರವಣಿಗೆಯ ಮಟ್ಟಕ್ಕೆ ಏರೀತೋ ಏರದೋ! ಏರಲಾರದೆಂದೇ ನನ್ನ ಎಣಿಕೆ. ೧೯೩೭ರಲ್ಲಿ ಈ ಕೈಪಿಡಿಯ ಪರಿಷ್ಕೃತ ಮುದ್ರಣ ಹೊರಬಿದ್ದಿತು. ಟಿ. ಎಸ್. ವಿ., ಎ. ಆರ್. ಕೃ., ಬಿ. ಎಂ. ಎಸ್. (ಅಧ್ಯಕ್ಷ) ಇವರು ಒಂದು

ಸವಿಿತಿಯಾಗಿ ಇದನ್ನು ಪರಿಷ್ಕರಿಸಿದರು. ಒಟ್ಟಿನಲ್ಲಿ ರಚಿತವಾದ ಕಾಲ, ರಚಿತ ವಾದುದಕ್ಕೆ ಇದ್ದ ಉದ್ದೇಶ, ಸದಸ್ಯರ ಮುಂದೆ ಇದ್ದ ಇತಿಮಿತಿಗಳು ಇವುಗಳನ್ನೆಲ್ಲ ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗ ಈ 'ಕೈಪಿಡಿ' ಅಪೂರ್ವವಾದ ಅದ್ವಿತೀಯ ವಾದ (ಈ ಪದಗಳು ಎಲ್ಲ ಸಂದರ್ಭಗಳಲ್ಲಿಯೂ ಬಳಕೆಗೊಂಡು ಸವೆದುಹೋಗಿವೆ. ಇವುಗಳ ಸರಿಯಾದ ಅರ್ಥವನ್ನೂ ಇಲ್ಲಿ ಗ್ರಹಿಸಬೇಕು.) ಒಂದು ರಚನೆಯೇ ಸರಿ.

ಹಳಗನ್ನಡದ ವ್ಯಾಕರಣ, ಕರ್ಣಾಟಕ ಛಂದಸ್ಸು, ಅಲಂಕಾರ, ಕನ್ನಡ ಭಾಷೆಯ ಚರಿತ್ರೆ, ಕನ್ನಡ ಛಂದಸ್ಸಿನ ಚರಿತ್ರೆ, ಕನ್ನಡ ಸಾಹಿತ್ಯದ ಚರಿತ್ರೆ– ಇವುಗಳನ್ನು ಒಳಗೊಂಡ ಇಂತಹ ಸಂಪುಟ ಮತ್ತೊಂದು ರಚಿತವಾಗಿಲ್ಲ ಈ ನಲವತ್ತು ವರುಷಗಳಲ್ಲಿ. ಛಂದಸ್ಸು, ಭಾಷೆ, ಅಲಂಕಾರ, ಸಾಹಿತ್ಯಾದಿ ಒಂದೊಂದೇ ವಿಷಯಗಳನ್ನು ಕುರಿತು ಬೇರೆ ಬೇರೆ ವಿದ್ವಾಂಸರು ಈಚಿನ ದಿನಗಳಲ್ಲಿ ಬೃಹದ್ಗ್ರಂಥ ಗಳನ್ನು ಬರೆದಿದ್ದಾರೆ. ಇದು ಹೆಮ್ಮೆಯ ವಿಷಯವೇ ಸರಿ. ಆದರೆ ಬಹು ಹಿಂದೆಯೇ ಇಲ್ಲಿ ಸಣ್ಣದಾದ ಪ್ರಮಾಣದಲ್ಲಿ ಆ ವಿಷಯಗಳೆಲ್ಲವೂ ಬಂದೇ ಇದ್ದವು ಎಂಬುದು ಗಮನಿಸಬೇಕಾದ ಸಂಗತಿ. ಒಟ್ಟು ಕೈಪಿಡಿಯ ರಚನೆಯನ್ನು ಕುರಿತು ಆಡಿದ ಈ ಮಾತುಗಳು ಅದರ ಎಲ್ಲ ಒಳಭಾಗಗಳ ವಿಷಯಗಳಿಗೂ, ಪ್ರಸ್ತುತದಲ್ಲಿ ಅಂತಹ ವಿಭಾಗಗಳಲ್ಲಿ ಒಂದಾದ ಅಲಂಕಾರದ ವಿಷಯಗಳಿಗೂ ಅನ್ವಯಿಸುತ್ತದೆ.

ಅಲಂಕಾರಶಾಸ್ತ್ರದ ಚರಿತ್ರೆ, ಕಾವ್ಯಸ್ವರೂಪ, ಶಬ್ದಾರ್ಥಸ್ವರೂಪ, ಕಾವ್ಯ ವಿಭಾಗಗಳು, ರಸಪ್ರಕರಣ, ದೃಶ್ಯಕಾವ್ಯಗಳು, ರೀತಿ (ಮಾರ್ಗ), ಶಯ್ಯೆ, ಪಾಕ, ದೋಷಗಳು, ಗುಣಗಳು, ಕವಿಸಮಯ, ಅಲಂಕಾರಗಳು ಪೀಠಿಕೆ—ಹೀಗೆ ಹನ್ನೊಂದು ಅಧ್ಯಾಯಗಳಲ್ಲಿ ಭಾರತೀಯ ಕಾವ್ಯಮೀಮಾಂಸೆಯ ವಿಷಯವನ್ನು ಜೋಡಿಸಿ ಹೇಳಲಾಗಿದೆ.

ಇಷ್ಟು ವಿಷಯಗಳ ಮೇಲೆ ಹೊಸಗನ್ನಡದಲ್ಲಿ ತಿಳಿಯಾದ ಶೈಲಿಯಲ್ಲಿ ನಿರ್ದುಷ್ಟವಾದ ರೀತಿಯಲ್ಲಿ ಸೋದಾಹರಣವಾಗಿ ಗದ್ಯದಲ್ಲಿ ಬರೆದ ಪುಸ್ತಕ ಆ ಕಾಲಕ್ಕೆ ಇದೊಂದೇ. ಈಗ ತೀ. ನಂ. ಶ್ರೀಯವರ ಭಾರತೀಯ ಕಾವ್ಯಮೀಮಾಂಸೆ ಬಂದಿದೆ. ಡಾ. ಕೃಷ್ಣಮೂರ್ತಿಯವರ, ಡಾ. ಸಿದ್ಧಪ್ಪಾರಾಧ್ಯರ, ಸಂಸ್ಕೃತ ಅಲಂಕಾರ ಗ್ರಂಥಗಳ ಅನುವಾದಗಳು ಉಪೋದ್ಘಾತ ಟೀಕೆ ಟಿಪ್ಪಣಿ ಅನುಬಂಧಾದಿಗಳೊಡನೆ ಪ್ರಕಟವಾಗಿವೆ. ಮಾಸ್ತಿ, ಡಿ. ವಿ. ಜಿ., ಕುವೆಂಪು, ಪು. ತಿ. ನ., ಬೇಂದ್ರೆ, ಗೋಕಾಕ್, ವಿ. ಸೀ., ಮುಗಳಿ ಮೊದಲಾದವರು ಈ ಸಂಬಂಧವಾದ ಚಿಂತನ ಮಂಥನಗಳನ್ನು ನಡಸಿ ಸ್ವತಂತ್ರವಾಗಿ ಲೇಖನಗಳನ್ನು ಬರೆದಿದ್ದಾರೆ. ಬಿ. ಕೆ. ಎಸ್., ಸಿ. ಪಿ. ಕೆ., ಸುಬ್ಬಣ್ಣ, ಜಿ. ಎಸ್. ಎಸ್. ಬಾಲಸುಬ್ರಹ್ಮಣ್ಯ ಮುಂತಾ ದವರು ಈ ದಿಸೆಯಲ್ಲಿ ಕೆಲಸಮಾಡಿ, ಪೂರ್ವದ ಪಶ್ಚಿಮದ ಲಾಕ್ಷಣಿಕರ ಗ್ರಂಥಗಳನ್ನು ಆಧರಿಸಿ ಅನುವದಿಸಿ ಬರೆದಿದ್ದಾರೆ. ಈಗ ಕನ್ನಡಕ್ಕೆ ಇಳಿದ ಅನ್ಯಭಾಷಾಲಾಕ್ಷಣಿಕರ

ಶಾಸ್ತ್ರಗ್ರಂಥಗಳನ್ನು ಓದಿಕೊಂಡರೆಯೇ ಸಾಕಾಗಿದೆ ವಿಷಯಸಂಗ್ರಹಕ್ಕೆ ವಿಚಾರ ಮಂಥನಕ್ಕೆ! ಆದರೆ ನಲವತ್ತು ವರುಷಗಳ ಹಿಂದಣ ಮಾತು ನೆನೆದಾಗ ಆ ಕತ್ತಲೆಯ ದಿನಗಳಲ್ಲಿಬೆಳಕಿನ ಕಿರಣವಾಗಿ ದಾರಿ ತೋರಿದ ಶ್ರೀ ಶಾಸ್ತ್ರಿಗಳವರ ಈ ಲೇಖನಗಳು ಎಷ್ಟು ಸಹಾಯಮಾಡಿದವು ಎಂಬುದು ವರ್ಣನಾತೀತವಾದದ್ದು. ಇಷ್ಟೆಲ್ಲ ಪುಸ್ತಕಗಳು ಬಂದಮೇಲೆ ಸಹ ಕೈಪಿಡಿಯೆ ನಮ್ಮ ಐಚ್ಛಿಕ ಕನ್ನಡದ ವಿದ್ಯಾರ್ಥಿಗಳಿಗೆ ಮಾರ್ಗ ದರ್ಶನಕ್ಕೆ ಸಹಾಯಕ ಗ್ರಂಥವಾಗಿ ಒದಗಿದೆ. ಅದರಲ್ಲಿ ಬರುವ ಈ ಅಲಂಕಾರ ಭಾಗವನ್ನೇ ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕನ್ನಡವನ್ನು ಐಚ್ಛಿಕವಾಗಿ ತೆಗೆದುಕೊಂಡ ವಿದ್ಯಾರ್ಥಿಗಳು ಪಠ್ಯ ವಿಷಯವಾಗಿ ಓದುತ್ತಿದ್ದಾರೆ. ಡೆಮಿ ಆಕಾರದ ತೊಂಬತ್ತು ಪುಟಗಳಲ್ಲಿ ಶ್ರೀ ಶಾಸ್ತ್ರಿಗಳವರು ಅಡಕವಾಗಿ, ಈ ವಿಷಯಗಳನ್ನು ಮೇಲೆ ಮೊದಲೆಯೆ ಕಾಣಿಸಿದ ಹಾಗೆ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಅಳವಡಿಸಿದ್ದಾರೆ.

ಶಾಸ್ತ್ರಿಗಳವರ ಬರವಣಿಗೆ ಅಚ್ಚುಕಟ್ಟಾದದ್ದು. ಇದಕ್ಕೆ ಈ ಕೆಳಗಿನ ಎರಡು ಉದಾಹರಣೆಗಳನ್ನು ನೋಡಬಹುದು.

(೧) 'ಕಾವ್ಯದಲ್ಲಿ 'ರಸ'ವೇ ರಮಣೀಯವೆಂದೂ ಅದಿದ್ದರೇ ಅರ್ಥವು 'ಇಷ್ಟ'ವಾಗುವುದೆಂದೂ ರಸವು ಯಾವಾಗಲೂ 'ವ್ಯಂಗ್ಯ' ಅಥವಾ 'ಧ್ವನಿತ' ವಾಗುವುದೆಂದೂ ಹೇಳಿಬಿಟ್ಟರೆ ಕಾವ್ಯಾತ್ಮ ವಿಚಾರವಾಗಿ ಇರತಕ್ಕ ಪರಸ್ಪರ ಭಿನ್ನಾಭಿಪ್ರಾಯಗಳು ಹೋದಂತಾಗುತ್ತದೆ.'

(೨) 'ಆದರೆ ಧ್ವನಿರಸಗಳು ಕಾವ್ಯಶರೀರದಲ್ಲಿ ಜೀವ ಅಥವಾ ಆತ್ಮದಂತೆಯೂ, ರೀತಿಮಾರ್ಗಾದಿಗಳು ಅಂಗಾಂಗ ಸನ್ನಿವೇಶ ವಿಶೇಷಗಳಂತೆಯೂ ಗುಣಗಳು ಶೌರ್ಯ ಧೈರ್ಯಾದಿಗಳಂತೆಯೂ ಅಲಂಕಾರಗಳು ಮೇಲೆ ಹಾಕಿಕೊಳ್ಳುವ ಒಡವೆಗಳಂತೆಯೂ ಇರುತ್ತವೆ.'

ಒಂದೆರಡು ಕಡೆಗಳಲ್ಲಿ ಶ್ರೀ ಶಾಸ್ತ್ರಿಗಳವರು ಹೇಳಿರುವ ಮಾತು ಅಷ್ಟು ಸಮಂಜಸವೆನ್ನಿಸದು ಎಂಬುದನ್ನು ವಿನಯಪೂರ್ವಕವಾಗಿ ಸೂಚಿಸಬೇಕಾಗುತ್ತದೆ. ಉದಾಹರಣೆಗೆ 'ಕಾವ್ಯ ವಿಭಾಗಗಳು' ಎಂಬ ಅಧ್ಯಾಯದಲ್ಲಿ ಬರುವ ವಚನಗಳನ್ನು ಕುರಿತ ಈ ಮಾತು ನೋಡಿ. 'ಪ್ರತಿಪಾದ್ಯ ವಿಷಯವು ಸಾಮಾನ್ಯವಾಗಿ ಆಮುಷ್ಮಿಕ ವಿಚಾರ; ಹೇಳಿಸಿಕೊಳ್ಳುವಂಥ ರಸವೇನೂ ಕಂಡುಬರುವುದಿಲ್ಲ' ಎಂದು ಬರೆದಿರುವುದಲ್ಲಿ ಉತ್ತರಾರ್ಧವನ್ನು ಹೇಗೆ ಒಪ್ಪಿಕೊಳ್ಳಬಹುದು? ಶಿವಸಾಪೇಕ್ಷತ್ವದ ತೃಷೆಯ ತುಯ್ತದಿಂದ ಹೊರಹೊಮ್ಮಿದ ಅಣ್ಣನ ಅಥವಾ ಅಕ್ಕನ ವಚನೋದ್ಗಾರಗಳು ಶುಷ್ಕವೆ? ರಸವಿಹೀನವೆ? ನ್ಯಾಯವಾಗಿ ವಚನಗಳನ್ನು ಪ್ರತ್ಯೇಕವಾದ ಒಂದು ಕಾವ್ಯಪ್ರಕಾರವಾಗಿ ಪರಿಗಣಿಸಿ ಅದರ ಒಳ-ಹೊರಗಣ

ಸ್ವರೂಪವನ್ನು ಪರಿಚಯಮಾಡಿಕೊಡಬೇಕಾಗುತ್ತದೆ. ಮುಂದಿನ, ಕೈಪಿಡಿಯ ಮುದ್ರಣಗಳಲ್ಲಿ ಅಡಿಟಿಪ್ಪಣಿಯಲ್ಲಿ ಅಥವಾ ಅನುಬಂಧದಲ್ಲಿ ನಾಲ್ಕು ಮಾತು ಈ ವಿಷಯವಾಗಿ ಬರೆಯಬಹುದು.

ಹೀಗೆಯೇ ಇನ್ನೊಂದು ವಾಕ್ಯ: 'ಅಂತು ಈಗ ಇರುವ ಹಳಗನ್ನಡದ ಗ್ರಂಥಗಳು, ಅದರಲ್ಲಿಯೂ ಪ್ರೌಢವಾದ ಪ್ರಾಚೀನಕಾವ್ಯಗಳು, ಸಂಸ್ಕೃತಮಾರ್ಗ ವನ್ನು ಅನುಸರಿಸಿಯೇ ಬರೆದವುಗಳು.' ಚಂಪುವಿನ ಮೂಲವನ್ನು ಕುರಿತು ಈಚಿಗೆ ಚರ್ಚೆ ನಡೆದಿದೆ. ಚಂಪೂಕಾವ್ಯಪ್ರಕಾರ ಕನ್ನಡ ಕವಿಗಳೇ ಸಂಸ್ಕೃತಕ್ಕೆ ಕೊಟ್ಟ ಕೊಡುಗೆ ಇರಬಹುದೇ ಎಂಬ ಪ್ರಶ್ನೆ ಇದೆ. ಇದರ ಮೇಲೆ ರಾಜಕೀಯ ಶ್ಲೇಷೆಯಿಂದ ಪುರಾಣ ವ್ಯಕ್ತಿಗಳೊಡನೆ ಏಕೀಕರಿಸಿ ಸಮಕಾಲೀನ ಇತಿಹಾಸ ಪುರುಷರನ್ನು ನಾಯಕರನ್ನಾಗಿ ಚಿತ್ರಿಸುವುದು, ಆತ್ಮಚರಿತ್ರೆಯ ವಿವರಗಳನ್ನು ಕವಿಗಳು ಹೇಳಿ ಕೊಳ್ಳುವುದು, ಕಾವ್ಯಧರ್ಮ–ಧರ್ಮಗಳ; ಮಾರ್ಗದೇಸಿಗಳ ಸಮನ್ವಯ ಮಾಡಿ ಬರೆಯುವುದು, ಸಂಸ್ಕೃತದ ಅಲ್ಲಿ ಅಖ್ಯಾತವಾದ ಉತ್ಪಲ ಶಾರ್ದೂಲ ಚಂಪಕಾದಿ ಆರು ವೃತ್ತಗಳನ್ನೇ ಕನ್ನಡದ ನುಡಿಕಟ್ಟಿಗೆ ಒಗ್ಗುತ್ತವೆ ಎಂಬ ಕಾರಣದಿಂದ ಪ್ರಯೋಗಮಾಡಿನೋಡಿ ಒಪ್ಪಿ ಸ್ವೀಕರಿಸಿ ಖ್ಯಾತ ಕರ್ಣಾಟಕಗಳನ್ನಾಗಿ ಅವು ಗಳನ್ನು ಮೆರೆಯಿಸುವುದು, ಸುಕವಿ ಸತ್ಕಾವ್ಯಗಳ ಪ್ರಶಂಸೆ; ಕುಕವಿ ದುಷ್ಕಾವ್ಯಗಳ ನಿಂದೆಗಳನ್ನು ಉದ್ಘೋಷಿಸುವುದು; ಲೌಕಿಕ ಆಗಮಿಕಗಳೆಂಬ ಕಾವ್ಯಗಳನ್ನು ಪ್ರತ್ಯೇಕವಾಗಿ ವಿನಿರ್ಮಿಸುವುದು; ಸಂಸ್ಕೃತದಲ್ಲಿ ಸರ್ವವ್ಯಾಪಿಯಾದ ಶ್ಲೋಕದ ಛಂದೋರೂಪವನ್ನು ಕೈಬಿಟ್ಟು ಅದರ ಸ್ಥಾನದಲ್ಲಿ ಮಾತ್ರಾಗಣದ ಕಂದವನ್ನು ಪ್ರಾಕೃತದಿಂದ ತಂದುಕೊಂಡದ್ದು; ಅಡುಮಾತಿನ ಸೊಗಡು ತುಂಬುವಂತೆ ಶೈಲಿ ಯನ್ನು ರೂಢಿಸಿಕೊಂಡದ್ದು–ಈ ಮುಂತಾದ ಹತ್ತಾರು ವಿಷಯಗಳನ್ನು ಪರಿಭಾವಿಸಿದಾಗ ಮತ್ತು ಜೈನ ಕವಿಗಳು ಜೈನಧರ್ಮದ ಪ್ರಚಾರಕ್ಕಾಗಿ ಮೊಟ್ಟ ಮೊದಲು ಶಲಾಕಾ ಪುರುಷರ ವೃತ್ತಾಂತಗಳನ್ನೂ ಜೈನ ಭಾರತ ರಾಮಾಯಣಗಳ ವಸ್ತುಗಳನ್ನೂ ಕನ್ನಡದಲ್ಲಿ ಕೊಟ್ಟರೆಂಬ ಸಂಗತಿಯನ್ನು ನೆನೆದಾಗ, ಸಂಸ್ಕೃತದಲ್ಲಿ ಪ್ರಸಿದ್ಧವಾಗಿರುವ ಪಂಚಮಹಾಕಾವ್ಯಗಳ ಸಂಸ್ಕೃತಮಾರ್ಗವನ್ನು ನಮ್ಮ ಪ್ರಾಚೀನ ಕಾವ್ಯಗಳು ಎಷ್ಟರಮಟ್ಟಿಗೆ ಅನುಸರಿಸಿವೆಯೋ ಹೇಳುವುದು ಕಷ್ಟ. ಇಂತಹ ಕಡೆಗಳಲ್ಲಿ 'ಇದಮಿತ್ಥಂ' ಎಂಬ ರೀತಿಯಲ್ಲಿ ಹೇಳುವುದಕ್ಕಾದೀತೇ?

ಶ್ರೀ ಶಾಸ್ತ್ರಿಗಳವರು 'ಪ್ರತಿಭಾ ವ್ಯಾಪಾರ' 'ಧ್ವನಿಸಿದ್ಧಾಂತ' 'ಕಾವ್ಯ ಪ್ರಯೋಜನ'—ಈ ಮೂರು ವಿಷಯಗಳನ್ನು ಇನ್ನೂ ವಿವರವಾಗಿ ಪ್ರತ್ಯೇಕವಾದ ತಲೆಬರಹಗಳಡಿಯಲ್ಲಿ ಕೊಡಬಹುದಾಗಿತ್ತು. ಹಾಗೆ ಮಾಡಿದ್ದರೆ ವಿಷಯವು ಇನ್ನೂ ಸ್ಪಷ್ಟವಾಗಿರುತ್ತಿತ್ತು. ಏಕೆಂದರೆ ಈ ಪುಸ್ತಕ ವಿದ್ಯಾರ್ಥಿಗಳನ್ನು ಉದ್ದೇಶಿಸಿ ತಾನೆ ಬರೆದದ್ದು! ಅವರಿಗೆ ವಿಷಯ ಎಷ್ಟೆಷ್ಟು ಸ್ಪಷ್ಟವಾದರೆ ಅಷ್ಟೂ ಒಳ್ಳೆಯದೇ. ದೃಶ್ಯಕಾವ್ಯಗಳನ್ನೂ ಕವಿಸಮಯವನ್ನೂ ಕುರಿತು ಕೊಟ್ಟ ವಿವರ ಏಕೆ ಬೇಕು

ಎನ್ನಿಸುತ್ತದೆ. ಅದಕ್ಕೆ ಮೀಸಲಿಟ್ಟ ಪುಟಗಳ ಸಂಖ್ಯೆ ಹೆಚ್ಚಾಯಿತು ಎನ್ನಿಸುತ್ತದೆ. ಇದು ಅಭಿಪ್ರಾಯಭೇದದ ಮಾತು ಎಂಬುದನ್ನು ಒಪ್ಪಿಕೊಳ್ಳುತ್ತೇನೆ.

ಅಲಂಕಾರಶಾಸ್ತ್ರದ ಚರಿತ್ರೆ ರೀತಿ, ಶಯ್ಯೆ, ಪಾಕ, ದೋಷಗಳು, ಗುಣಗಳು, ಅಲಂಕಾರಗಳ—ಪೀಠಿಕೆ ಈ ಭಾಗಗಳು ಚೆನ್ನಾಗಿ ಬಂದಿವೆ. ರಸಪ್ರಕರಣಕ್ಕೆ ಕೊಟ್ಟ ವಿಸ್ತಾರ ಆವಶ್ಯಕವೆನ್ನಿಸಿದೆ. ಆ ವಿಸ್ತಾರ, ಅಲ್ಲಿ ಅಗತ್ಯ.

ಶ್ರೀ ಶಾಸ್ತ್ರಿಗಳವರು ಪ್ರಾಚೀನ ಲಾಕ್ಷಣಿಕರ ಅಭಿಪ್ರಾಯಗಳನ್ನು ಎಲ್ಲಿಯೂ ಬಿಟ್ಟುಹೋಗುವುದಿಲ್ಲ. ' ನಾಗವರ್ಮನ ಕಾವ್ಯಾವಲೋಕನವನ್ನು ಅನುಸರಿಸಿ ಮುಂದೆ ಕವಿಸಮಯವನ್ನು ನಿರೂಪಿಸಿದೆ' ಎಂದು ಒಂದು ಕಡೆ ಹೇಳಿದರೆ, ' ಇಲ್ಲಿ ವಾಮನನು ಹೇಳಿರುವಂತೆ ಶಬ್ದಾರ್ಥಗುಣಗಳಿಗೆ ಮೊದಲು ಲಕ್ಷಣೋದಾಹಾರಣೆಗಳನ್ನು ಕೊಟ್ಟಿದೆ' ಎಂದು ಇನ್ನೊಂದು ಕಡೆ ಹೇಳುತ್ತಾರೆ. ' ದೋಷಗಳನ್ನು ಕಾವ್ಯಪ್ರಕಾಶಕಾರನು ವಿಸ್ತಾರವಾಗಿ ಹೇಳಿರುವುದರಿಂದ ಅವನ ಮತವನ್ನು ಅನುಸರಿಸಿ ಕನ್ನಡದಲ್ಲಿ ಬರಬಹುದಾದ ಕೆಲವು ದೋಷಗಳನ್ನು ಇಲ್ಲಿ ಪ್ರತಿಪಾದಿಸಿದೆ' ಎಂದು ಇನ್ನೊಂದು ಕಡೆ ಹೇಳಿದ್ದಾರೆ.

ಶ್ರೀ ಶಾಸ್ತ್ರಿಗಳವರು ಉದಾಹರಣೆಗಳನ್ನು ಕೊಡುವಾಗ ಪ್ರಸಿದ್ಧರಾದ ಪೂರ್ವ ಕವಿಗಳ ಪದ್ಯಗಳನ್ನು ಆರಿಸಿ ಕೊಟ್ಟಿದ್ದಾರೆ. ಹಾಗೆ ಆರಿಸಿದ ಪದ್ಯಗಳಿಗೆ ಆಕರಗಳನ್ನು ಸೂಚಿಸಿರುವುದು ನ್ಯಾಯವಾಗಿಯೆ ಇದೆ. ಆದರೆ ಕೆಲವು ಸಂದರ್ಭಗಳಲ್ಲಿ ಆಕರಗಳನ್ನು ಸೂಚಿಸಿಲ್ಲ. ಕವಿಸಮಯದ ಅಧ್ಯಾಯದಲ್ಲಿ ಬರುವ ಯಾವ ಪದ್ಯಗಳಿಗೂ ಆಕರಗಳನ್ನು ಹೇಳಿಲ್ಲ. ಇದು ಏಕೆ ಹೀಗಾಯಿತೋ ತಿಳಿಯದು. ವಿಶ್ವವಿದ್ಯಾನಿಲಯದ ಪ್ರಕಟಣ ಶಾಖೆಯವರು ಮುಂದಿನ ಮುದ್ರಣಗಳಲ್ಲಿ ಆಕರ ದೊರೆಯುವಂತಹ ಎಲ್ಲ ಪದ್ಯಗಳಿಗೂ ಆಕರಗಳನ್ನು ತಿಳಿಸಿದರೆ ಮಹೋಪಕಾರವಾಗುತ್ತದೆ. ಸಂಸ್ಕೃತದ ಆಲಂಕಾರಿಕರು ಹೇಳಿದ ಸೂತ್ರಗಳಿಗೆ ಕನ್ನಡದ ಕವಿಗಳಿಂದ ಉದಾಹರಣ ಪದ್ಯಗಳನ್ನು ಆರಿಸಿಕೊಳ್ಳುವಾಗ ಒಳ್ಳೊಳ್ಳೆಯ ಪದ್ಯಗಳನ್ನೇ ಶ್ರೀ ಶಾಸ್ತ್ರಿಗಳವರು ಆರಿಸಿದ್ದಾರೆ. ಇದು ಮೆಚ್ಚಬೇಕಾದ ವಿಷಯ. ಈ ಉದಾಹರಣ ಪದ್ಯಗಳ ಆಯ್ಕೆಗಳಲ್ಲಿ ಶಾಸ್ತ್ರಿಗಳವರ ಪಾಂಡಿತ್ಯ, ರಸಿಕತೆಗಳೆರಡನ್ನೂ ನಾವು ಗಮನಿಸಬಹುದು. ಪ್ರಾಚೀನರಲ್ಲಿ ಕವಿಕುಲಾಗ್ರಣಿಯಾದ ಪಂಪನ ಭಾರತದಿಂದಲೂ ಆಧುನಿಕರಲ್ಲಿ ಅಭಿನವ ಕಾಳಿದಾಸರಾದ ಬಸಪ್ಪಶಾಸ್ತ್ರಿಗಳ ಶಾಕುಂತಲದಿಂದಲೂ ಹೆಚ್ಚು ಉದಾಹರಣೆಗಳನ್ನು ಆರಿಸಿಕೊಂಡಿರುವುದು ಉಚಿತವಾಗಿಯೇ ಇದೆ. ನವೀನರಾದ ಡಿ. ವಿ. ಜಿಯವರ ನಿವೇದನದಿಂದ ಒಂದು ಪದ್ಯವೂ ಇಲ್ಲಿ ಸೇರಿದೆ. ಆದರೆ ಇದು ಡಿ. ವಿ. ಜಿಯವರದು ಎಂದು ಸೂಚಿತವಾಗಿಲ್ಲ. ಶಾಸ್ತ್ರಗ್ರಂಥಗಳಲ್ಲಿ ಆಕರಗಳನ್ನು ಕೊಡುವುದು ಅತ್ಯಾವಶ್ಯಕವಾದದ್ದು ಎಂಬುದನ್ನು ನಾವು ಮರೆಯಲಾಗದು. ಕೇವಲ ಉದಾಹರಣ ಪದ್ಯಗಳಿಗೆ ಮಾತ್ರವಲ್ಲ, ಒಂದು ಕಡೆ ಗದ್ಯದ ಒಂದು ಉದ್ಧರಣಕ್ಕೂ ಶಾಸ್ತ್ರಿಗಳು ಆಕಾರವನ್ನು ಸೂಚಿಸಿಲ್ಲ. ' ಕವಿಸಮಯ'ದ ಭಾಗದಲ್ಲಿ ಬರುವ ಒಂದು ಉದ್ಧರಣವನ್ನು ನೋಡಬಹುದು.

ಕವಿತೆಯ ಆಕರ, ಪ್ರಯೋಜನ, ಕಾವ್ಯದ ಸೌಂದರ್ಯ, ರಸವಿವೇಚನೆ, ಸಹೃದಯಲಕ್ಷಣ, ಶಬ್ದಾರ್ಥಗಳ ಸ್ವರೂಪ, ಮುಂತಾದ ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿಗೆ ಅವಕಾಶವಿದ್ದೇ ಇದೆ. ಇದೇ ಕೊನೆಯ ಮಾತು ಎಂದು ಯಾರೂ ಹೇಳಲಾರರು. ಆದರೆ ಕನ್ನಡದ ಪೂರ್ವಾಚಾರ್ಯರು ಸಂಸ್ಕೃತದ ಲಾಕ್ಷಣಿಕರ ಮತಕ್ಕಿಂತ ಬೇರೆಯಾದ ಮತವನ್ನು ನಿರೂಪಿಸಿದ್ದರೆ ಅದನ್ನು ಎತ್ತಿ ತೋರಿಸಬೇಕು. ಇಲ್ಲಿ ಭಿನ್ನಾಭಿಪ್ರಾಯದಲ್ಲಿಯೆ ಕನ್ನಡದವರು ಕಾವ್ಯಮೀಮಾಂಸೆಗೆ ಕೊಟ್ಟ ಕೊಡುಗೆ ಇದೆ. ಉದಾಹರಣೆಗೆ ರೀತಿಯೆ ಕಾವ್ಯದ ಆತ್ಮ ಎಂದು ವಾಮನ ಹೇಳಿದ್ದರೆ ರೀತಿ ಕಾವ್ಯದ ಶರೀರ ಎಂದು ನಾಗವರ್ಮ ಹೇಳಿದ್ದಾನೆ. ಅಲಂಕಾರಗಳನ್ನು ಅಷ್ಟಾಗಿ ಗಮನಿಸದೆ ರೀತಿಯಮೇಲೆ ಲಕ್ಷ್ಯವಿರಿಸಿ ರಸಪ್ರತೀತಿಯಾಗುವಂತೆ ಕಾವ್ಯವನ್ನು ರಚಿಸಬೇಕೆಂಬುದು ಆ ನಾಗವರ್ಮನ ಅಭಿಪ್ರಾಯ. ಈ ಅಭಿಪ್ರಾಯವನ್ನು ಸುಸ್ಪಷ್ಟವಾಗಿ ಮೂಡಿಸಬೇಕು ವಾಚಕರಲ್ಲಿ. ನಾಗವರ್ಮನು ಇನ್ನೂ ಮೂರು ನಾಲ್ಕು ಸಂದರ್ಭಗಳಲ್ಲಿ ಸಂಸ್ಕೃತದವರಿಗಿಂತ ಬೇರೆಯಾದ ಅಭಿಪ್ರಾಯಗಳನ್ನು ಜೋಡಿಸಿದ್ದಾನೆ. ನೃಪತುಂಗ, ನಾಗವರ್ಮ, ಸಾಳ್ವ ಈ ಮೂವರ ಪ್ರತಿಪಾದನೆಯ ವೈಶಿಷ್ಟ್ಯಗಳನ್ನು ಕೊಂಚ ವಿವರವಾಗಿ ಹೇಳಿದ್ದರೆ ಚೆನ್ನಾಗಿರುತ್ತಿತ್ತಲ್ಲವೆ? ಈ ಮಾತು ಬಾರದಿರುವುದು ಶಾಸ್ತ್ರಿಗಳ ಬರವಣಿಗೆಯಲ್ಲಿ ಒಂದು ಲೋಪವೆಂದಲ್ಲ, ಒಂದು ದೋಷವೆಂದಲ್ಲ. ಇಂತಹ ಅಭಿಪ್ರಾಯಗಳ ಸ್ಪಷ್ಟೀಕರಣವಿದ್ದಿದ್ದರೆ ಚನ್ನಾಗಿರುತ್ತಿತ್ತು ಎಂದಷ್ಟೇ ನನ್ನ ವಿನಮ್ರವಾದ ಮತ.

೨

ಶ್ರೀ ಕೃಷ್ಣಶಾಸ್ತ್ರಿಗಳವರು ಅಲಂಕಾರಶಾಸ್ತ್ರಕ್ಕೆ ಸಂಬಂಧಿಸಿದಂತೆ ಒಂದು ಹೆಬ್ಬೊತ್ತಗೆಯನ್ನು ಒಂದು ಪ್ರಮಾಣಗ್ರಂಥವನ್ನು ಕನ್ನಡದಲ್ಲಿ ಬರಯಬೇಕೆಂದು ಸಂಕಲ್ಪಿಸಿದ್ದಂತೆ ತೋರುತ್ತದೆ. ಆ ಪುಸ್ತಕದ ಆರಂಭದಲ್ಲಿ ಬರುವ ಕೆಲವು ಅಂಶಗಳು ‘ ಅಲಂಕಾರಶಾಸ್ತ್ರದ ಚರಿತ್ರೆ ’ ಎಂಬ ಹೆಸರಿನಲ್ಲಿ ಈ ಹಿಂದೆ ಪ್ರಬುದ್ಧ ಕರ್ಣಾಟಕದಲ್ಲಿ ಬಂದಿದೆ. ಆದರೆ ಸಮಗ್ರಗ್ರಂಥವು ಪ್ರಬುದ್ಧ ಕರ್ಣಾಟಕದಲ್ಲಿಯಾಗಲಿ, ಪ್ರತ್ಯೇಕವಾದ ಗ್ರಂಥರೂಪದಲ್ಲಿಯಾಗಲಿ ಬಾರದೆ ಹೋಯಿತು. ಆ ಗ್ರಂಥದ ಹಸ್ತಪ್ರತಿಯೂ ಇದ್ದಂತಿಲ್ಲ. ಇದು ಕನ್ನಡಿಗರ ದುರ್ದೈವವೇ ಸರಿ. ಆ ಗ್ರಂಥದ ಸ್ವರೂಪವನ್ನು ಈಗ ಅಚ್ಚಾದಷ್ಟು ಭಾಗದಿಂದಲೇ ಅರಿಯುವುದು ಸಾಧ್ಯ. ಶಾಸ್ತ್ರಿಗಳವರ ಗದ್ಯಶೈಲಿಯ ಸೊಗಸಿಗೆ, ಶಾಸ್ತ್ರದ ವಿಷಯವನ್ನೂ ರಸವತ್ತಾಗಿ ಹೇಳುವ ರೀತಿಗೆ, ವಿಷಯವನ್ನು ಹರಳಿನಂತೆ ಸುಸ್ಪಷ್ಟವಾಗಿ ಹೊಳೆಯಿಸುವ ಬುದ್ಧಿಗೆ ಈ ಅಲಂಕಾರಶಾಸ್ತ್ರದ ಚರಿತ್ರೆ ಎಂಬ ಲೇಖನ ಕನ್ನಡಿ ಹಿಡಿಯುತ್ತದೆ. ಪೀಠಿಕೆ, ಅಲಂಕಾರಶಾಸ್ತ್ರ, ಭರತನ ನಾಟ್ಯಶಾಸ್ತ್ರ, ನಾಟ್ಯದ ಉತ್ಪತ್ತಿ, ನಾಟ್ಯದ ಉದ್ದೇಶ, ಮಂಟಪವಿಧಾನ, ಪೂರ್ವರಂಗವಿಧಾನ, ಇವೇ ಮುಂತಾದ ಉಪಶೀರ್ಷಿಕೆಗಳಲ್ಲಿ ಲೇಖನದ ವಿಷಯ ಹಸರಿಸಿಕೊಂಡಿದೆ ಇಲ್ಲಿ.

ಭರತನ ನಾಟ್ಯಶಾಸ್ತ್ರವನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವ ಸಂದರ್ಭದಲ್ಲಿ ತಮ್ಮ ಉದ್ದೇಶ ಆಶಯಗಳನ್ನು ಶಾಸ್ತ್ರಿಗಳು ಹೀಗೆ ತಿಳಿಸಿದ್ದಾರೆ. "ಆದ್ದರಿಂದ ಈ ಗ್ರಂಥವನ್ನೇ ಇಟ್ಟುಕೊಂಡು ಯಾವುದು ಆವಶ್ಯಕ ಮತ್ತು ಉಪಯುಕ್ತ ಎಂದು ತೋರುತ್ತದೆಯೋ ಅದನ್ನು ಮಾತ್ರ ಯಥಾಮತಿಯಾಗಿಯೂ ಯಥೋಚಿತವಾಗಿಯೂ ಕನ್ನಡದಲ್ಲಿ ತಿಳಿಸುತ್ತಹೋಗುತ್ತೇನೆ. ಹೀಗೆ ಮೊದಲು ಭರತನ ನಾಟ್ಯಶಾಸ್ತ್ರ ಗ್ರಂಥದ ಸ್ವರೂಪವು ತಿಳಿದು ಅದರ ಪರಿಚಯವು ಸ್ವಲ್ಪ ಮಟ್ಟಿಗೆ ಆದಮೇಲೆ ಅಲಂಕಾರಶಾಸ್ತ್ರಕ್ಕೆ ಸಾಕ್ಷಾತ್ತಾಗಿ ಸಂಬಂಧಪಟ್ಟ ರಸಭಾವ ಅಲಂಕಾರ ಗುಣ ಮುಂತಾದ ಅಂಶಗಳನ್ನು ತಿಳಿಸುವ ಎರಡು ಮೂರು ಅಧ್ಯಾಯ ಗಳನ್ನು ಓಲೆಯ ಪ್ರತಿಗಳ ಸಹಾಯದಿಂದ ಶೋಧಿಸಿ ಸಂಸ್ಕೃತ ಮೂಲವನ್ನೂ ಅದಕ್ಕೆ ಕನ್ನಡ ಅರ್ಥವನ್ನೂ ಕೊಡುತ್ತೇನೆ." ೧೯೩೭ರಲ್ಲಿ ಶಾಸ್ತ್ರಿಗಳವರ ಈ ಲೇಖನ ಪ್ರಬುದ್ಧ ಕರ್ಣಾಟಕದಲ್ಲಿ ಬಂದಿತು. ೧೯೬೦ರಲ್ಲಿ ಅವರ 'ಭಾಷಣಗಳು ಲೇಖನಗಳು' ಎಂಬ ಹೆಬ್ಬೊತ್ತಗೆಯಲ್ಲಿ ಈ ಲೇಖನ ಅಚ್ಚಾಗಿದೆ. ಇದರ ಕೊನೆಯ ಅಡಿಟಿಪ್ಪಣಿಯಲ್ಲಿ ಹೀಗೆ ಹೇಳಲಾಗಿದೆ. "ಈ ಪ್ರಬಂಧವನ್ನು ಬರೆದಾಗ ನಾಟ್ಯ ಶಾಸ್ತ್ರದಿಂದ ಕೆಲವು ಭಾಗಗಳನ್ನು ಭಾಷಾಂತರ ಸಹಿತವಾಗಿ ಪ್ರಕಟಿಸಬೇಕೆಂಬ ಉದ್ದೇಶವಿತ್ತು. ಮೇಲೆ ಅದನ್ನು ಅಲ್ಲಲ್ಲೇ ಸೂಚಿಸಿದೆ. ಆದರೆ ಆ ಉದ್ದೇಶ ನೆರವೇರಲಿಲ್ಲ. ಈ ಲೇಖನಕ್ಕೆ "ಅಲಂಕಾರಶಾಸ್ತ್ರದ ಚರಿತ್ರೆ" ಎಂಬ ಹೆಸರನ್ನು ಕೊಟ್ಟಿದೆ. ಇದನ್ನು ಬರೆದಾಗ ಇದೊಂದು ಲೇಖನಮಾಲೆಯಾಗಬೇಕೆಂಬ ಉದ್ದೇಶವಿತ್ತು. ಆದರೆ ಇಲ್ಲಿಂದ ಮುಂದೆ ಈ ವಿಷಯದಮೇಲೆ ಮತ್ತಾವ ಲೇಖನವೂ ಬರಲಿಲ್ಲವಾಗಿ ಈ "ಅಲಂಕಾರಶಾಸ್ತ್ರದ ಚರಿತ್ರೆಯು ಬರಿಯ ನಾಟ್ಯಶಾಸ್ತ್ರದ ಪರಿಚಯದಲ್ಲಿ ಮುಗಿಯುವ ಹಾಗಾಯಿತು." ಹೀಗಾದದ್ದು ಎಂತಹ ಸಾರಸ್ವತ ನಷ್ಟವೆಂಬುದನ್ನು ಕನ್ನಡದ ವಿದ್ವಾಂಸರು ಬಲ್ಲರು. ಈ ಲೇಖನದ ಪೀಠಿಕೆಯ ಈ ವಾಕ್ಯವನ್ನು ನೋಡಿ:—'ಸಂಸ್ಕೃತಶಾಸ್ತ್ರಗಳ ಈಗಿನ ಸ್ಥಿತಿಯು ಒಣಗಿದ ಹಣ್ಣುಗಳ ಸ್ಥಿತಿಯಾಗಿದೆ. ಅವುಗಳಲ್ಲಿ ರುಚಿಯಿದ್ದರೂ ರಸವಿದ್ದರೂ ಹಸಿಯಿಲ್ಲ; ಆ ಹಣ್ಣುಗಳು ದಿನದಿನಕ್ಕೆ ವಿಚಿತ್ರ ಬಣ್ಣಗಳನ್ನು ಧರಿಸಿ ಬೆಳೆದು ಪರಿಪಾಕಕ್ಕೆ ಬರುವ ಹಾಗಿಲ್ಲ; ಈಗ ಹೇಗೆ ಇವೆಯೋ ಮುಂದೆಯೂ ಇದೇ ರೂಪದಲ್ಲಿಯೇ ಇರಬೇಕು; ಇಲ್ಲವೇ ನಷ್ಟವಾಗಿ ಹೋಗಬೇಕು' ಶ್ರೀಯುತರ ಬರವಣಿಗೆಯ ಕೌಶಲಕ್ಕೆ ಈ ವಾಕ್ಯ ಸಾಕು. ಶಾಸ್ತ್ರಿಗಳು ಈ ಹಣ್ಣಿನ ಹೋಲಿಕೆಯನ್ನೇ ಮುಂದುವರಿಸಿರುತ್ತಾರೆ ಮುಂದಿನ ವಾಕ್ಯದಲ್ಲಿ. "ಬೇಕಾದರೆ ನಾವು ಅವುಗಳ ಸಿಪ್ಪೆಯನ್ನು ಸುಲಿದು ರಸವನ್ನು ಸ್ವೀಕರಿಸಬಹುದು; ಒಳಗಿನ ತಿರುಳನ್ನು ತೆಗೆದು ಅಲಂಕಾರವಾಗಿಡ ಬಹುದು; ಕುಸುರಿಗಳನ್ನೂ ಕಾಳನ್ನೂ ಎಣಿಸಬಹುದು; ಸಾಲಾಗಿ ಸಲಕ್ಷಣವಾಗಿ ಜೋಡಿಸಿ ಇಡಬಹುದು ಅಷ್ಟೇ." ಈ ಹೋಲಿಕೆ ಎಷ್ಟು ಸಮರ್ಪಕವಾಗಿ ಸಂಸ್ಕೃತ ಶಾಸ್ತ್ರಗಳ ಈಗಿನ ಸ್ಥಿತಿಯನ್ನು ಚಿತ್ರಿಸುತ್ತದೆ. ಅಲಂಕಾರಶಾಸ್ತ್ರಕ್ಕೆ ಒದಗಿದ

ಗತಿಯನ್ನು ಹೇಗೆ ಆಲಂಕಾರಿಕವಾಗಿ ಶಾಸ್ತ್ರಿಗಳವರು ಹೇಳಿದ್ದಾರೆ. ! ಈ ಹೋಲಿಕೆ ಇನ್ನೂ ಮುಂದುವರಿಯುತ್ತದೆ, ಇದೇ ವಾಕ್ಯವೃಂದದಲ್ಲಿ. ಎರಡು ವಾಕ್ಯಗಳನ್ನು ಉದ್ಧರಿಸಿದ ಮಾತ್ರಕ್ಕೇ ಶಾಸ್ತ್ರಿಗಳ ಬರವಣಿಗೆಯ ಸೊಗಸು ಎಲ್ಲವೂ ಗೋಚರವಾಗುವುದಿಲ್ಲ. ಆದ್ಯಂತವಾಗಿ ಬರವಣಿಗೆಯನ್ನು ಓದಿಯೇ ಸವಿಯಬೇಕಾಗುತ್ತದೆ.

೩

ಶ್ರೀ ಶಾಸ್ತ್ರಿಗಳವರು ಕಾವ್ಯಮೀಮಾಂಸೆಯ ವಿಷಯವಾಗಿ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಹೇಳಿದ ಸಂಗತಿಗಳನ್ನೂ ಇಲ್ಲಿ ನೆನೆಯಬೇಕು. ಆಗ ಮಾತ್ರ ಕಾವ್ಯಮೀಮಾಂಸೆಯ ವಿಷಯದಲ್ಲಿ ಶಾಸ್ತ್ರಿಗಳ ದೃಷ್ಟಿಯ ಪೂರ್ಣ ಪರಿಚಯ ನಮಗೆ ಸಾಧ್ಯ. ಹೀಗೆ ನೋಡಿದಾಗ 'ಸಾಹಿತ್ಯ' ಎಂಬ ಮಾಸ್ತಿಯವರ ಪುಸ್ತಕವನ್ನು ವಿಮರ್ಶಿಸುತ್ತ ಶಾಸ್ತ್ರಿಗಳವರು ಹೇಳಿದ ಒಂದೆರಡು ಅಂಶಗಳನ್ನು ಇಲ್ಲಿ ಗಮನಿಸಬಹುದು. ಈ ವಿಮರ್ಶೆಯಲ್ಲಿ ಒಂದು ಕಡೆ 'ಕವಿಸಮಯ'ದ ವಿಷಯವಾಗಿ ಮಾಸ್ತಿಯವರು ಹೇಳಿದ ಮಾತುಗಳನ್ನು (ಉದಾ: 'ಕವಿ ಸಮಯವು ಜನರಲ್ಲಿ ವಾಡಿಕೆಯಾದಷ್ಟೂ ಒಳ್ಳೆಯದೆ.') ಶಾಸ್ತ್ರಿಗಳು ಒಪ್ಪುವುದಿಲ್ಲ. 'ನಿಷ್ಪಕ್ಷಪಾತವಾಗಿ ಹೇಳಬೇಕೆಂದರೆ ಪ್ರಾಚೀನ ಕಾವ್ಯಗಳಲ್ಲಿ ಕವಿಸಮಯದ ಬಾಧೆ'ಯು ಸಹಿಸಲಾರದಷ್ಟಾಗಿದೆ; ಕವಿ ಶಿಕ್ಷೆಯನ್ನು ಬೋಧಿಸುವ ಗ್ರಂಥಗಳಲ್ಲಿ ಕೊಟ್ಟಿರುವ ವರ್ಣನಾಂಶಗಳು ಉಪಮಾನಗಳು ಮುಂತಾದವುಗಳ ಪಟ್ಟಿಗಳನ್ನೂ ಬಾಯಿಪಾಠಮಾಡಿ ಒಪ್ಪಿಸಿದ ಕವಿಬ್ರುವರ "ಕವಿತೆ"ಗಳು ನಮ್ಮ ತಲೆ ಚಿಟ್ಟು ಹಿಡಿಸಿವೆ." 'ಕವಿಸಮಯ' ಎಂಬ ಕೈಪಿಡಿಯ ಅಧ್ಯಾಯದಲ್ಲಿ ಇಷ್ಟು ಗಟ್ಟಿಯಾಗಿ ಶಾಸ್ತ್ರಿಗಳವರು ಹೇಳಿಲ್ಲ. 'ಇದು ಕಾವ್ಯಕ್ಕೆ ಎಷ್ಟರ ಮಟ್ಟಿಗೆ ಆವಶ್ಯಕವೆಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ' ಎಂದು ಹೇಳಿ ಪರ ವಿರೋಧವಾದ ಎರಡು ಅಭಿಪ್ರಾಯಗಳನ್ನು ಕೊಟ್ಟುಬಿಡುತ್ತಾರೆ. ಮೇಲೆ ಹೇಳಿದ 'ಸಾಹಿತ್ಯ' ಎಂಬ ಹೊತ್ತಗೆಯ ವಿಮರ್ಶೆಯಲ್ಲಿ ಅಲ್ಲಲ್ಲಿ ತಮ್ಮ ಅಭಿಪ್ರಾಯವನ್ನು ಕಾವ್ಯಲಕ್ಷಣ, ಕಾವ್ಯಕಾರಣ ಕಾವ್ಯದ ಫಲ ಮತ್ತು ಉದ್ದೇಶ ಈ ಮುಂತಾದ ವಿಷಯಗಳ ಬಗ್ಗೆ ಸ್ಪಷ್ಟವಾಗಿ ಹೇಳಿದ್ದಾರೆ. ಅಂತಹ ಹೇಳಿಕೆಗಳೆಲ್ಲವನ್ನೂ ಕೂಡಿಸಿಕೊಂಡರೆ ಶಾಸ್ತ್ರಿಗಳ ವಿಮರ್ಶೆಯ ನೆಲೆಬೆಲೆಗಳ ಪರಿಚಯವಾಗುತ್ತದೆ.

೪

'ರನ್ನನ ರಸಪ್ರತಿಪಾದನೆ' ಎಂಬ ಲೇಖನವನ್ನೂ ಇಲ್ಲಿ ಕುರಿಯಬಹುದು. ಆಣಿಮುತ್ತಿನಂತಹ ಮಾತುಗಳನ್ನು ಪ್ರಾಸಂಗಿಕವಾಗಿ ಶಾಸ್ತ್ರಿಗಳು ಇಲ್ಲಿ ಆಡಿದ್ದಾರೆ. ನೋಡಿ: 'ಸಂಸ್ಕೃತ ವಾಙ್ಮಯ ಪ್ರಪಂಚವು ಮೊದಲು ಹಸುರಾಗಿ ಹುಲುಸಾಗಿ ನಗುತ್ತ ನಲಿಯುತ್ತಿದ್ದ ಸಸಿಗಳಿಂದ ಕೂಡಿ ಉದ್ಯಾನವನದಂತೆ ಶೋಭಿಸು

ತ್ತಿತ್ತು. ಆದರೆ ಅದೇ ಬೆಳೆಯುತ್ತಾ ಹೋಗಿ ಕಾಲಕ್ರಮದಲ್ಲಿ ಅಗಾಧವಾದ ಮರಗಳಿಂದೊಡಗೂಡಿ ದಿಕ್ಕು ತೋರದಂತಹ ಕಾಡಾಗಿಹೋಯಿತು. ಈ ಮಾತನ್ನು ಶಾಸ್ತ್ರ ಸಾಹಿತ್ಯಗಳೆರಡಕ್ಕೂ ಅನ್ವಯಿಸಬಹುದು.' 'ಪಂಡಿತ ಕವಿಗಳು ಇಂದ್ರನೊಡನೆ ಅರ್ಥಾಸನವನ್ನಾದರೂ ಬಿಟ್ಟಾರು, ಈ ಶ್ಲೇಷವನ್ನೂ ಅದರ ಜ್ಞಾತಿಗಳಾದ ವಿರೋಧಾಭಾಸ ಪರಿಸಂಖ್ಯೆಗಳನ್ನೂ ಬಿಡಲಾರರು.' 'ಪಾಠಕರು ಕಾವ್ಯಗಳನ್ನು ಓದುವುದು ರಸಕ್ಕೋಸ್ಕರ–ಶಬ್ದಾಲಂಕಾರದ ಸದ್ದಿಗಲ್ಲ. ಹೆಣ್ಣು ನೋಡುವುದಕ್ಕೆ ಹೋಗುವವರು ಹುಡುಗಿಯ ರೂಪು ಗುಣ ಕುಲ ಮುಂತಾದುವುಗಳನ್ನು ನೋಡಿ ಮೆಚ್ಚುತ್ತಾರೆಯೋ ಅವಳ ಕಾಲಿನ ಗೆಜ್ಜೆ ಕಡಗ ಕಾಲುಂಗರ ಇವುಗಳ ಸದ್ದನ್ನು ಕೇಳಿ ಮೆಚ್ಚುತ್ತಾರೆಯೆ?' ಇಂತಹ ಮಾತುಗಳಲ್ಲಿ ಶಾಸ್ತ್ರಿಗಳು ಸುಲಭವಾಗಿ ಸತ್ಕಾವ್ಯದ ಸೊಬಗನ್ನು ತಿಳಿಸಿಬಿಡುತ್ತಾರೆ.

ಧ್ವನಿತತ್ತ್ವದ ವಿಷಯವಾಗಿ ಶಾಸ್ತ್ರಿಗಳವರು ಎಷ್ಟು ಚೆನ್ನಾಗಿ ವಿವೇಚಿಸಬಲ್ಲರು ಎಂಬುದಕ್ಕೆ ಡಾ. ಕೆ. ಕೃಷ್ಣಮೂರ್ತಿಯವರ ಕನ್ನಡ ಧ್ವನ್ಯಾಲೋಕಕ್ಕೆ ಅವರು ಬರೆದಿರುವ ಮುನ್ನುಡಿಯ ಭಾಗವನ್ನು ಓದಬೇಕು. ಆ ತತ್ತ್ವ ಶಾಸ್ತ್ರಿಗಳಿಗೆ ಕರತಲಾಮಲಕ. ಅವರು ಶಿಷ್ಯರಿಗೂ ಅದು ಕರತಲದ ಆಮಲಕವಾಗುವಂತೆ ಮಾಡಿಬಿಡುತ್ತಿದ್ದರು. ಪ್ರಾಧ್ಯಾಪಕರಾಗಿ ಕನ್ನಡದ ವಿದ್ಯಾರ್ಥಿಗಳಿಗೆ ಕಾವ್ಯಮೀಮಾಂಸೆಯನ್ನು ಹೇಳಿಕೊಡುತ್ತಿದ್ದಾಗ ಅವರು ನಡೆಸುತ್ತಿದ್ದ ಪ್ರವಚನಗಳನ್ನು ಈಗಲೂ ವಿದ್ಯಾರ್ಥಿಗಳು ನೆನೆದು ಮೆಲುಕಾಡಿಕೊಳ್ಳುತ್ತಾರೆ. ಇರಲಿ. ಶಾಸ್ತ್ರಿಗಳು ಧ್ವನಿಯ ಪರಮರಹಸ್ಯವನ್ನು ಹೇಗೆ ಬಿಡಿಸಬಲ್ಲರೆಂಬುದನ್ನು ತಿಳಿಸುವುದಕ್ಕೆ ಆ ಮುನ್ನುಡಿಯ ಒಂದು ಭಾಗವನ್ನು ಇಲ್ಲಿ ಉದಾಹರಿಸಿರುತ್ತೇನೆ.

"ಹಾಗೇ ಅಶ್ವಘೋಷನು ಒಂದು ಕೆರೆಯನ್ನು ಬಿಳಿಯ ಸೀರೆ ಸುತ್ತಿಕೊಂಡು ಮಲಗಿರುವ ಪ್ರಮದೆಗೆ ಹೋಲಿಸಿರುವ ಈ ಶ್ಲೋಕವನ್ನು ನೋಡಿ (ಬುದ್ಧಚರಿತೆ ೪-೪೯):

> ದೀರ್ಘಿಕಾಂ ಪ್ರಾವೃತಾಂ ಪಶ್ಯ ತೀರಜೈಃ ಸಿಂಧುವಾರಕೈಃ।
> ಪಾಂಡುರಾಂಶುಕ ಸಂವೀತಾಂ ಶಯಾನಾಂ ಪ್ರಮದಾಮಿವ॥

ಇಲ್ಲಿ 'ಶಯನಾಂ ಪ್ರಮದಾಂ' ಎಂಬುದಕ್ಕೆ ಬದಲಾಗಿ 'ಪ್ರಸುಪ್ತಾಂ ವನಿತಾಂ' ಎಂದೋ 'ಪ್ರಸುಪ್ತಾಂ ಲಲನಾಂ' ಎಂದೋ ಹೇಳಬಹುದು; ಛಂದಸ್ಸು ಕೆಡುವುದಿಲ್ಲ. ಆದರೆ ಅರ್ಥಪುಷ್ಟಿಯಲ್ಲಿ, ಎಷ್ಟು ವ್ಯತ್ಯಾಸವಾಗುತ್ತದೆ! ವನಿತೆಯೆಂದರೆ ಹೆಂಗಸು, ಅಷ್ಟೇಯೆ; ಲಲನೆಯೆಂದರೆ ಚಂಚಲೆಯಾಗಿ ಬಳುಕುತ್ತಿರುವ ಲತಾಂಗಿ; ಪ್ರಮದೆ ಯೌವನದಿಂದ ಕೊಬ್ಬಿ ರಸರಸವಾಗಿರುವವಳು. ಪ್ರಸುಪ್ತಾಂ ಎಂದರೆ ನಿದ್ರೆಹೋಗಿರುವವಳು; ಶಯಾನಾಂ ಎಂದರೆ ಕಾಲು ನೀಡಿಕೊಂಡು ಆದರೆ ಎಚ್ಚರವಾಗಿ ಮಲಗಿರುವವಳು. ಹಾಗೇ ದೀರ್ಘಿಕಾಂ ಎಂಬುದಕ್ಕೆ ಬದಲಾಗಿ ವಾಪಿಕಾಂ

ಎಂಪೋ ಸರಃ ಎಂದೋ ಹೇಳಬಹುದು, ದೀರ್ಘತೆ ಸೀಳ, ವಾಪಿ ಆಳ; ಸರಸ್ಸು ಕುರುಚಲನ್ನೋ ಕುಂಟೆಯನ್ನೋ ಮನಸ್ಸಿಗೆ ತರುತ್ತದೆ. ಅದು ನಪುಂಸಕಲಿಂಗ. ಇದನ್ನು ಹೆಚ್ಚು ವಿವರಿಸಬೇಕಾಗಿಲ್ಲ. ಈ ಮಾತುಗಳ ಔಚಿತ್ಯ ಧ್ವನಿ ಸ್ವಾರಸ್ಯ ಗಳು ಅವರವರ ಸಂಸ್ಕರಾಭಿರುಚಿಗಳ ಮೇಲೆ ಹೋಗುತ್ತವೆ. ಅಶ್ವಘೋಷ ಕಾಳಿ ದಾಸರು ಆನಂದವರ್ಧನನಿಗಿಂತ ಐನೂರು ಆರುನೂರು ವರ್ಷಗಳ ಹಿಂದೆ ಇದ್ದ ವರು; ಅವರು ಧ್ವನ್ಯಾಲೋಕದ ನಿಯಮವನ್ನು ಅನುಸರಿಸಿ ಬರೆದವರೇನಲ್ಲ; ಅಂಥ ವರ ಪ್ರಯೋಗಗಳನ್ನು ಪರಿಶೀಲಿಸಿ, ಆನಂದವರ್ಧನನು ತನ್ನ ಲಕ್ಷಣಗ್ರಂಥ ವನ್ನು ಬರೆದನು."

ಶಾಸ್ತ್ರಿಗಳು ಎಂತಹ ಸಹೃದಯರು ಎಂತಹ ಕವಿಗಳು ಎಂತಹ ವಿದ್ಯಾನಿಧಿ ಎಂಬುದನ್ನು ಮೇಲಣ ಶ್ಲೋಕದ ವ್ಯಾಖ್ಯ ತಿಳಿಸುತ್ತದೆಯಲ್ಲವೇ?

೬

ಹೀಗೆಯೇ ಶಾಸ್ತ್ರಿಗಳವರು ಬರೆದ ಎಲ್ಲ ಲೇಖನಗಳನ್ನೂ ಪರಿಶೀಲಿಸಿ ಎಲ್ಲೆಲ್ಲಿ ಕಾವ್ಯಮೀಮಾಂಸೆಗೆ ಸಂಬಂಧಪಟ್ಟಮಾತುಗಳು ಬಂದಿವೆ ಎಂಬುದನ್ನು ನೋಡಿ ಒಂದು ಕಡೆಗೆ ಅವುಗಳನ್ನೆಲ್ಲ ಕೂಡಿಸಿಕೊಂಡು ಓದಿದರೆ ಅವರ ಕಾವ್ಯ ಮೀಮಾಂಸೆಯ ಸಂಬಂಧವಾದ ಒಂದು ಪೂರ್ಣ ದೃಷ್ಟಿ ನಮಗೆ ಹೊಳೆಯುತ್ತದೆ. ಸ್ಥಳಾಭಾವ ಕಾಲಾಭಾವಗಳ ದೆಸೆಯಿಂದ ಇಲ್ಲಿ ಆ ಕೆಲಸವನ್ನು ಮಾಡಲು ಆಗದೆ ಹೋಗಿದೆ. ಹಾಗೆ ನೋಡಿದಾಗ ಈ ಲೇಖನ ಅಸಮಗ್ರವೇ. ಆದರೇನು? ಶಾಸ್ತ್ರಿ ಗಳ ಈ ಸಂಬಂಧವಾದ ನಿಲವು ಏನು ಎಂಬುದು ಗೊತ್ತಾಗುತ್ತದೆಯಾದರೆ ಅದೇ ಸಧ್ಯಕ್ಕೆ ಸಾಕು.

ವ್ಯಾಸ ಭಾರತದ ರುಂದ್ರವಾದ ವಚನಾಮೃತ ವಾರ್ಧಿಯನ್ನು ತಿಮಿಂಗಿಲ ದಂತೆ ಹೊಕ್ಕಾಡಿ ಈಸಿ ಅದರ ಮುತ್ತು ರತ್ನಗಳನ್ನು ಸೋಸಿ ತೆಗೆದುಕೊಟ್ಟವರು ಕೃಷ್ಣಶಾಸ್ತ್ರಿಗಳವರು. ಪೂರ್ವ ಪಶ್ಚಿಮವಾಗಿ ದಕ್ಷಿಣೋತ್ತರವಾಗಿ ಕಥಾ ಸರಿತ್ಸಾಗರವನ್ನು ಹೊಕ್ಕಾಡಿ ಚಿಂತನಪೂರ್ವಕವಾದ ಮಂಥನದಿಂದ ಕಥಾಮೃತ ವನ್ನು ತೆಗೆದು ತಂದವರು ಅವರು. ಭಾಸ ಕಾಳಿದಾಸಾದಿ ಸಂಸ್ಕೃತ ನಾಟಕಕಾರರ ನಾಟಕರತ್ನಗಳನ್ನು ಪರೀಕ್ಷಿಸಿ ಬೆಲೆ ಕಟ್ಟಿದ ಪರೀಕ್ಷಕರು ಅವರು. ಬಂಕಿಮರ ರವೀಂದ್ರರ ಕೃತಿಪರಿಚಯವನ್ನು ಒದಗಿಸಿಕೊಟ್ಟವರು ಅವರು. ಇಂತಹ ಉಭಯ ಭಾಷಾಕೋವಿದ ಸಹೃದಯವರೇಣ್ಯರು ಅಲಂಕಾರಶಾಸ್ತ್ರದ ವಿಷಯ ವಾಗಿ ಹೇಳಿದ ಮಾತುಗಳು ಗ್ರಾಹ್ಯವಾದವುಗಳೇ ಸರಿ. ಕೈಪಿಡಿಯ ರಚನೆಯ ಇತಿಮಿತಿಗಳಲ್ಲಿ ಸಿಲುಕಿ ಶ್ರೀ ಶಾಸ್ತ್ರಿಗಳವರು ವಿಷಯದ ವಿಚಾರಕ್ಕೆ ಹೋಗಲಿಲ್ಲ ವೆನ್ನಿಸುತ್ತದೆ. ಈಚೆಗೆ ಬೆಳೆದ ವಿದ್ವತ್ತಿನ ಫಲವಾಗಿ ಕೈಪಿಡಿಯಲ್ಲಿ ಅಲಂಕಾರದ ಭಾಗದ ಬರವಣಿಗೆಯಲ್ಲಿ ಒಂದೆರಡು ಕಡೆ ವಿಸ್ತಾರಬೇಕಿತ್ತು ಎನ್ನಿಸುತ್ತದೆ;

ಒಂದೆರಡು ಹೊಸ ವಿಷಯ ಸೇರಬೇಕಿತ್ತು ಎನ್ನಿಸುತ್ತದೆ; ಒಂದೆರಡು ಕಡೆ ಪ್ರತಿಪಾದನೆಯಲ್ಲಿ ಮಾರ್ಪಾಡು ಬೇಕಿತ್ತು ಎನ್ನಿಸುತ್ತದೆ. ಹೀಗೆ ಎನ್ನಿಸಿದ ಕಡೆ ಶಾಸ್ತ್ರಿಗಳು ಇತರ ಸಂದರ್ಭಗಳಲ್ಲಿ ಹೇಳಿದ ಅಂಶಗಳನ್ನು ಓದಿಕೊಂಡರೆ ಇಂತಹ ಅರೆಗಳೂ ತುಂಬಿಕೊಳ್ಳುತ್ತವೆ ಎಂದು ಹೇಳುವ ಸಲುವಾಗಿಯೆ ಇತರ ಕಡೆಯ ಶಾಸ್ತ್ರಿಗಳ ಬರವಣಿಗೆಯ ಉದ್ಧರಣಗಳನ್ನೂ ಮೇಲೆ ಕೊಟ್ಟಿದ್ದೇನೆ.

# ನಿವೃತ್ತ ಶಾಸ್ತ್ರಿಗಳು

ಶ್ರೀ ಕೃಷ್ಣಶಾಸ್ತ್ರಿಗಳು ನಿವೃತ್ತ ಕನ್ನಡ ಪ್ರಾಧ್ಯಾಪಕರು. ನೌಕರಿಯಿಂದ ನಿವೃತ್ತರಾಗುವು ದೆಂದರೆ ಹಲವರ ಪಾಲಿಗೆ ಅದೊಂದು ವಿಷಾದದ ಘಟನೆ–ಸಂಬಳ ಕಡಿಮೆಯಾಗುತ್ತದೆ, ಅಧಿಕಾರ ನಿಂತುಹೋಗುತ್ತದೆ, ಮನ್ನಣೆ ಮೊಟಕಾಗುತ್ತದೆ. ಆದ್ದರಿಂದಲೆ, ಅನೇಕರು ನಿವೃತ್ತರಾದಮೇಲೆ ಹೊಸ ನೌಕರಿಯನ್ನು ಹುಡುಕುತ್ತಾ ಹೋಗುತ್ತಾರೆ; ಕೆಲವು ಜನ ರಾಜಕೀಯಕ್ಕೆ ಕೂಡ ಇಳಿಯುತ್ತಾರೆ. ಶ್ರೀ ಕೃಷ್ಣಶಾಸ್ತ್ರಿಗಳು ಈ ಜಾತಿಯವರಲ್ಲ. ಅವರು ಹೆಸರಿಗೆ ಮಾತ್ರ ನಿವೃತ್ತರು. ವಿದ್ಯಾರ್ಥಿಗಳಿಗೆ ನಿರ್ದಿಷ್ಟವಾದ ಘಂಟೆಗಳಲ್ಲಿ ಪಾಠ ಹೇಳುವ ಕಾರ್ಯವೊಂದನ್ನು ಬಿಟ್ಟರೆ, ಉಳಿದಂತೆ ಅವರ ಕಾರ್ಯಕ್ರಮ ಯಥಾಪ್ರಕಾರವಾಗಿದೆ. ಸರ್ಕಾರಿ ನೌಕರಿಯಿಂದ ನಿವೃತ್ತರಾದಮೇಲೆ ವಿಶ್ರಾಸಲು ಕಟ್ಟಿಕೊಂಡಿದ್ದವರಂತೆ ಅವರು ಕೃತಿರಚನಾ ಕಾರ್ಯದಲ್ಲಿ ತೊಡಗಿದ್ದಾರೆ. ಅವರ 'ವಚನಭಾರತ', 'ಕಥಾಮೃತ', 'ಬಂಕಿಮಚಂದ್ರ',— ಒಂದೊಂದೂ ಬೃಹತ್ತಾದ ಗ್ರಂಥ. ಹೀಗೆ ನಿವೃತ್ತಿಯ ತರುವಾಯದ ಬಾಳನ್ನು ಇಷ್ಟು ಸಾರ್ಥಕವಾಗಿ ಸಮರ್ಪಕವಾಗಿ ಬಳಸಿಕೊಂಡವರು ಬಹಳ ಅಪೂರ್ವ.

—ಕುವೆಂಪು

('ಬಂಕಿಮಚಂದ್ರ', ಮುನ್ನುಡಿ, ಪು. xii)

ಎಚ್. ಜೆ. ಲಕ್ಕಪ್ಪಗೌಡ

# ಕೃಷ್ಣಶಾಸ್ತ್ರಿಗಳ ಸಣ್ಣ ಕಥೆಗಳು

೧

ಕನ್ನಡ, ಸಂಸ್ಕೃತ, ಬಂಗಾಳಿ, ಇಂಗ್ಲಿಷ್ ಮುಂತಾದ ಹಲವು ಭಾಷೆಗಳಲ್ಲಿ ಪ್ರಥಮ ದರ್ಜೆಯ ಪಾಂಡಿತ್ಯ ಪ್ರಭುತ್ವಗಳನ್ನು ಗಳಿಸಿ ಪಂಡಿತ ಪಾಮರರಿಬ್ಬ ರಿಂದಲೂ ಏಕಪ್ರಕಾರವಾದ ಮಹಾಮನ್ನಣೆಗೆ ಪಾತ್ರವಾಗುವ ವಚನಭಾರತ, ಸಂಸ್ಕೃತ ನಾಟಕ, ಬಂಕಿಮಚಂದ್ರಗಳಂತಹ ಸರಳ ಸುಂದರವೂ ಗಂಭೀರವೂ ಸತ್ವ ಯುಕ್ತವೂ ಸಾರ್ವಕಾಲಿಕವೂ ಆದ ಉದ್ಘಕೃತಿಶೈಲಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ಸಮರ್ಪಿಸಿದ ಆಧುನಿಕ ಕನ್ನಡದ ಆಚಾರ್ಯಪುರುಷರಲ್ಲೊಬ್ಬರಾದ ದಿವಂಗತ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ಲಲಿತ ಸಾಹಿತ್ಯ ಪ್ರಕಾರವಾದ ಸಣ್ಣ ಕಥೆಗಳ ರಚನೆಯಲ್ಲೂ ಸಿದ್ಧಹಸ್ತರಾಗಿದ್ದರೆಂಬುದು ಅವರ ವಿದ್ವತ್ಕಿರೀಟಕ್ಕೆ ಮತ್ತೊಂದು ಸ್ವರ್ಣಗರಿ; ಅವರ ವ್ಯಾಪಕ ಲೋಕಾನುಭವದ ಮತ್ತೊಂದು ಅವತಾರ; ಅವರ ನಿರ್ದುಷ್ಟ ವಿಶಿಷ್ಟ ಪ್ರತಿಭೆಯ ಮತ್ತೊಂದು ಮಧುರ ರಸಸೃಷ್ಟಿ.

ಇಪ್ಪತ್ತನೆಯ ಶತಮಾನದ ಪ್ರಾರಂಭದ ದಶಕಗಳಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಿದ ಚೇತನದಾಯಕವೂ ಶಕ್ತಿಸಮನ್ವಿತವೂ ನವಭಾವ ವಿಚಾರ ಸಂಪುಷ್ಟವೂ ಸೃಷ್ಟ್ಯಾತ್ಮಕವೂ ಆದ ಹೊಸ ಸುಗ್ಗಿಯಲ್ಲಿ ಮೂಡಿಬಂದ ಮಧುರ ಸ್ವರ ಮೇಳದಲ್ಲಿ ಒಂದು ಪ್ರಧಾನ ಸ್ವರ ಶ್ರೀ ಎ. ಆರ್. ಕೃ. ಅವರು. ಕನ್ನಡ ಲೋಕದಲ್ಲಿ ಪುನರುತ್ಥಾನಕಾರಿಯಾದ ವಸಂತದ ಸುಳಿಗಾಳಿಯಾಗಿ ನಾಡಿನ ಉದ್ದಗಲಕ್ಕೂ ಅಮಿತವೇಗದಿಂದ ಬೀಸಿ ಮಲಗಿದ್ದ ಕನ್ನಡಿಗರ ಸ್ವಾಭಿಮಾನ ಸ್ವಪ್ರತಿಷ್ಠೆ ಸ್ವಪ್ರತಿಭೆಗಳನ್ನು ಎಚ್ಚರಗೊಳಿಸಿ ನವ ಕ್ರಾಂತಿಯೊಂದಕ್ಕೆ ಕಾರಣ ಪುರುಷರಾದ ಬಿ. ಎಂ. ಶ್ರೀ ಅವರ ಕಣ್ಣುಕೋರೈಸುವ ಪ್ರಭಾವಲಯದಲ್ಲಿ ಮಿಂದು, ಅವರಿಗೆ ಹೆಗಲೆಣೆಯಾಗಿ ತಮ್ಮ ಅನನ್ಯಸದೃಶವಾದ ಅಧ್ಯಯನ ಅಧ್ಯಾಪನ ಮತ್ತು ಲೇಖನ ಶಕ್ತಿಗಳಿಂದ ಕನ್ನಡದ ಮೆರುಗು ಬೆರಗುಗಳನ್ನು ಜಾಗೃತಿ ಜವ್ವನ ಗಳನ್ನು ಸತ್ವಸ್ವತ್ವಗಳನ್ನು ಚೇತನಿಸಿ ಬೆಳಗಿದ ಜೋಡಿ ನಕ್ಷತ್ರಗಳು: ಪ್ರೊ. ಎ. ಆರ್. ಕೃ. ಮತ್ತು ಪ್ರೊ. ಟಿ. ಎಸ್. ವೆಂ. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು

ಕೃತಿ ಸೃಷ್ಟಿಗಿಂತ ಅಧಿಕವಾಗಿ ಕೃತಿಕಾರರ ಸೃಷ್ಟಿಗೆ ಗಮನವಿತ್ತರೆ, ಪ್ರೊ. ಕೃಷ್ಣಶಾಸ್ತ್ರಿಗಳು ಎರಡಕ್ಕೂ ಗಮನವಿತ್ತರು. ಎರಡು ವಿಧದಲ್ಲೂ ಲೇಖಕರಿಗೆ ಆದರ್ಶದ ಅನುಕರಣೀಯ ಮೇಲ್ಪಂಕ್ತಿಯನ್ನು ಹಾಕಿ ಮಾರ್ಗದರ್ಶನ ಮಾಡಿದರು. ಅವರ ವಿವಿಧಮುಖೀ ಪ್ರತಿಭೆಯ ಪರಿಣತ ಫಲಗಳೇ ಅವರ ಬಹುಮುಖವಾದ ಸಾಹಿತ್ಯ ಕೃತಿಗಳು. ಇಂಥದೇ ಒಂದು, ಹಲವು ದೃಷ್ಟಿಗಳಿಂದ ಗಮನಾರ್ಹವಾದ, ವಿಶಿಷ್ಟ ರಸವತ್ಕೃತಿ ಅವರ 'ಶ್ರೀಪತಿಯ ಕಥೆಗಳು.'

೨

೧೯೨೩ ರಿಂದ ೧೯೪೯ರ ವರೆಗಿನ ಇಪ್ಪತ್ತಾರು ವರ್ಷಗಳ ಅವಧಿಯಲ್ಲಿ ರಚಿತವಾದ ಹದಿಮೂರು ಕಥೆಗಳು ಈ ಸಂಗ್ರಹದಲ್ಲಿ ಸೇರ್ಪಡೆಗೊಂಡಿವೆ. 'ನನ್ನ ಸ್ನೇಹಿತ', 'ಜ್ಯೋತಿಷಕ್ಕೆ ಬಹುಮಾನ', 'ಶ್ಯಾನುಭೋಗನ ಪುಣ್ಯ', 'ದೇವರು ಇದ್ದಾನೆ', 'ನಾಗರ ಪಂಚಮಿ', 'ಹುಚ್ಚೋ ಅಲ್ಲವೋ', 'ಅಗ್ಗದ ಮದುವೆ', 'ಬಂಗಲಿಯ ವಾಸ', 'ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ' 'ಅತ್ತೆ', 'ಊಟದಲ್ಲಿ ಉಪಚಾರ', 'ಗುರುಗಳ ಮಹಿಮೆ' ಮತ್ತು 'ಭೀಮಣ್ಣನ ಬುದ್ಧಿವಂತಿಕೆ' —ಈ ಕಥಾನಾಮಗಳೇ ಸಾಕು, ಅವುಗಳ ಅಂತರ್ಗತ ವಸ್ತುವೈವಿಧ್ಯವನ್ನೂ, ಲೇಖಕರ ವಿಶಿಷ್ಟ ದೃಷ್ಟಿಕೋನವನ್ನೂ ಸಾಕಷ್ಟು ಪ್ರತಿಬಿಂಬಿಸಲು.

ಇವೆಲ್ಲ ಕತೆಗಳ ಮೂಲ ದ್ರವ್ಯವಾಗಿ ಸಾಂದ್ರವೂ ಸಂಕೀರ್ಣವೂ ಸಹಾನುಭೂತಿ ಪರವೂ ಆದ ಅದ್ಭುತ ಜೀವನಾನುಭವ ಮಡುಗಟ್ಟಿದೆ. ಅವುಗಳ ಅಂತಃಸೂತ್ರವಾಗಿ ಬಾಳನ್ನು ಪುಟಗೊಳಿಸುವ ಸ್ಫುಟಗೊಳಿಸುವ ತೀವ್ರಗೊಳಿಸುವ ನೋವಿನ ಎಳೆಯೊಂದು ಹರಿದಾಡಿದೆ. ಅಂತೆಯೇ ಇವೆಲ್ಲ ಕತೆಗಳೂ ಒಂದಲ್ಲ ಒಂದು ರೀತಿಯಲ್ಲಿ ಕರುಣ ಪ್ರಧಾನವಾದ ಚಿತ್ರಗಳೇ ಆಗಿವೆ. 'ಭಗವಂತನ ಸೃಷ್ಟಿ ಚಿತ್ರ ವಿಚಿತ್ರವಾಗಿದೆ. ಅದರಲ್ಲಿ ಒಂದೊಂದು ವಸ್ತುವಿನ ಸ್ವರೂಪ ಒಂದೊಂದು ಬಗೆಯದು. ಅದು ಏಕೆ ಹಾಗಿದೆಯೋ, ಹಾಗಿರಬೇಕೋ, ಅವನಿಗೇ ಗೊತ್ತು! ಜಟಕಾ ಗಾಡಿಯ ಕುದುರೆ ಲಂಗುಲಗಾಮುಗಳನ್ನು ಕಟ್ಟಿಸಿಕೊಂಡು ದುಡಿದೇ ದುಡಿಯುತ್ತದೆ; ಪಟ್ಟದ ಕುದುರೆ ವಸ್ತ್ರಾಭರಣಭೂಷಿತವಾಗಿ ರಾಜವೈಭವದಿಂದ ಪೂಜೆಮಾಡಿಸಿಕೊಳ್ಳುತ್ತದೆ, ಆಡು ಬಡಜಂತುವಾಗಿದ್ದು ಬೆಳಗೆದ್ದರೆ ಅಸಹಾಯವಾಗಿ ಕಟುಕನ ಕೈಯ್ಯಲ್ಲಿ ಕಡಿಸಿಕೊಳ್ಳುತ್ತದೆ. ಆನೆ ಬೃಹದಾಕಾರ ತಳೆದು ಅರಮನೆ ಗುರುಮನೆಗಳ ಮುಂದೆ ಘನ ಗಂಭೀರವಾಗಿ ಬಾಳುತ್ತದೆ. ಮೊಲ್ಲೆ ಮಲ್ಲಿಗೆ ಸಂಪಗೆ ಜಾಜಿ ಹೂವುಗಳು ಮೃದು ಮೃದುವಾಗಿ ಬಣ್ಣ ಬಣ್ಣವಾಗಿ, ಸುವಾಸನೆಯನ್ನು ಬೀರಿ ಪೂಜಾವಸ್ತುವಾಗುತ್ತವೆ; ತೆಂಗು ಹೊಂಗೆ ಮುಂತಾದ ಹೂಗಳು ಒರಟಾಗಿ, ಕಟುವಾಗಿ, ತಾವಾಗಿ ಉದುರಿ ತಿಪ್ಪೆಯಂತೆ ಬಿದ್ದಿದ್ದರೂ ಕೇಳುವವರಿಲ್ಲದೆ, ದಾರಿಹೋಕರು ಅವನ್ನು ಕಚಪಚನೆ ತುಳಿದುಹಾಕುತ್ತಾರೆ.

ಅದರ ಜನ್ಮ ಹಾಗೇ, ಇದರ ಜನ್ಮ ಹೀಗೇ'—ಜೀವನದ ವಿಷಮತೆಯನ್ನು ಕುರಿತ ಮುನ್ನುಡಿಯು ಈ ಮಾತೇ ಮುಂದಿನ ಎಲ್ಲ ಕತೆಗಳ ಭಿತ್ತಿಯಾಗಿ ನಿಂತಿದೆ.

೩

'ನನ್ನ ಸ್ನೇಹಿತ' ಕವಿಮನೋಧರ್ಮದ ನಿರ್ಮಲ ಹೃದಯದ ಆದರ್ಶ ಜೀವಿಯೊಬ್ಬ ವಿಷಮ ದಾಂಪತ್ಯದ ಅಗ್ನಿಸುಳಿಯಲ್ಲಿ ಸುಟ್ಟುಹೋದ ದುರಂತ ಕತೆ. ಯಾವ ಸುತ್ತು ಬಳಸೂ ಇಲ್ಲದೆ ಯಾವ ತಂತ್ರದ ತಿಪ್ಪರಲಾಗವೂ ಇಲ್ಲದೆ ಕತೆ ಅತ್ಯಂತ ಸರಳವಾಗಿ ನೇರವಾಗಿ ಪ್ರಾರಂಭವಾಗುತ್ತದೆ. ಆರಂಭದ ಕೆಲವೇ ಮಾತುಗಳಲ್ಲಿ ಕಥಾನಾಯಕ ಕಿಟ್ಟಣ್ಣನ ಕಾರ್ಯದಕ್ಷತೆಯನ್ನೂ ಸಹನಾಶೀಲತೆಯನ್ನೂ ರಸಿಕದೃಷ್ಟಿಯನ್ನೂ ತುಂಬುಸಹಜತೆಯಿಂದ ಅಭಿವ್ಯಕ್ತಗೊಳಿಸಲಾಗಿದೆ. ಸಂಸಾರ ಸಾಗರಕ್ಕೆ ಧುಮುಕುವುದಕ್ಕೆ ಮುಂಚೆ ದಡದಲ್ಲಿ ನಿಂತು ನೋಡುವಾಗ ಅದು ಆಕರ್ಷಣೀಯವಾಗಿ ಆದರ್ಶನೀಯವಾಗಿ ಆನಂದಮಯವಾಗಿ ಕಾಣುವುದು ಸ್ವಾಭಾವಿಕ. ಕೆಲವರ ಬಾಳಿನಲ್ಲಿ ಅದು ಬಯಸಿದಂತೆಯೇ ಬಹುರಂಜನೀಯವಾಗಿಯೇ ಪರಿಣಮಿಸುತ್ತದೆ. ಹೀಗಾಗಬೇಕಾದರೆ ಗಂಡಹೆಂಡಿರಿಬ್ಬರೂ ಸಮಾನಾಭಿರುಚಿಯ ಸಮಾನ ಮನೋಧರ್ಮದ, ಎಲ್ಲ ಏರಿಳಿತಗಳಲ್ಲೂ ಸಮಾನ ಸ್ವಸ್ಥ ಚಿತ್ತದಿಂದಿರುವ ವ್ಯಕ್ತಿಗಳಾಗಿರಬೇಕು. ಇಲ್ಲದಿದ್ದರೆ ಜೀವನ ಅಶಾಂತಿಯ ಆಗರವಾಗುತ್ತದೆ; ಜಗತ್ತು ನಿಸ್ಸಾರವಾಗುತ್ತದೆ. ಕಿಟ್ಟಣ್ಣನ ಬಾಳಿನಲ್ಲಾದುದೂ ಹಾಗೆಯೇ. ಮದುವೆಗೆ ಮುಂಚೆ ಆತ ಕಟ್ಟಿಕೊಂಡಿದ್ದ ಸವಿಬದುಕು ಹೆಂಡತಿಯ ಅನನುಭವದ ಸಂಕುಚಿತ ಮನಸ್ಸಿನ ನಿಷ್ಠುರ ಹಠಮಾರಿತನದಿಂದಾಗಿ ಕಷ್ಟದ ಕಡಲಾಗುತ್ತದೆ. ಆದರೂ ಆತನ ಸಹನೆ ಸಹಾನುಭೂತಿ ತುಂಬ ದೊಡ್ಡದು. ತನಗಾಗಿಯೇ ಬೆಳೆದ ಪುಟ್ಟು ತಂದೆಯ ಅಂಧಶ್ರದ್ಧೆಯ ಫಲವಾಗಿ ತನ್ನ ಕೈ ಹಿಡಿದು ಹೃದಯವನ್ನು ತುಂಬಲು ಅಶಕ್ಯವಾದಾಗ, ಮುರಿದ ಮನಸ್ಸಿನಿಂದಲೇ ತಾನು ಅದುವರೆಗೆ ಕಾಣದ ಕೇಳದ ಸಾಹುಕಾರರ ಮಗಳೊಬ್ಬಳನ್ನು ಕೈ ಹಿಡಿದಾಗಲೇ ಅವನ ಬಾಳಿನಲ್ಲಿ ಅಂಧಕಾರದ ಅಂಕುರಾರ್ಪಣವಾಯಿತೆಂಬುದನ್ನು ಲೇಖಕರು ತುಂಬ ಸೂಕ್ಷ್ಮವಾಗಿ ಧ್ವನಿಸಿದ್ದಾರೆ. ಆದರೂ ತನ್ನ ಮನಸ್ಸಿಗೆ ವಿರುದ್ಧವಾಗಿ ಮನೆಗೆ ಕಾಲಿರಿಸಿದ ಮಡದಿಯೊಡನೆ ಆತ ವ್ಯವಹರಿಸುವ ರೀತಿ ಕಸದಲ್ಲೇ ರಸವನ್ನು ಕಾಣುವ ಆತನ ಉದಾರದೃಷ್ಟಿಯ ದ್ಯೋತಕ. ಏತಿ ಎಂದರೆ ಪ್ರೇತಿ ಎಂದು ಪಟಾಕಿಯಂತೆ ಸಿಡುಗುಟ್ಟಿ ಮಾತಿಗೆ ಮರುಮಾತುಕೊಡುವ ಹೆಂಡತಿಯ ಬಗ್ಗೆ ಆತ ಹೇಳುವ ಮಾತು ಇದು: 'ನನ್ನ ಹೆಂಡತಿ ಅರ್ಧನಾರೀಶ್ವರನ ಅವತಾರ; ಆದರೆ ಒಂದು ಕಡೆ ಗಂಡಸು ಒಂದು ಕಡೆ ಹೆಂಗಸಲ್ಲ; ಒಳಗೆ ಗಂಡಸು, ಮೇಲೆ ಹೆಂಗಸು, ಅದರಲ್ಲಿ ಪುರುಷಭಾಗವು ಹೊದ್ದುಕೊಂಡಿರುವುದು ಗಜಚರ್ಮವಲ್ಲ ಗಾರ್ದಭ ಚರ್ಮ; ಕೈಯಲ್ಲಿಹಾವು, ಗಂಟಲಲ್ಲಿ ವಿಷ ಇವೆಲ್ಲಾ ಸಮ.' ಈ ವರ್ಣನೆ ಅವನ

ಕಲ್ಪನಾಪ್ರಧಾನ ಮನೋಧರ್ಮವನ್ನೂ, ಹೆಂಡತಿಯ ಭೀಕರ ನಿಜಸ್ವರೂಪವನ್ನೂ ಅಭಿವ್ಯಕ್ತಿಸುವುದರ ಜೊತೆಗೆ ಅವನ ಅಂತರ್ಯದಲ್ಲಿ ಕೊಳಗೊಂಡಿರುವ ಅಡಲಾರದ ಅನುಭವಿಸಲಾರದ ಅನಂತಯಾತನೆಯನ್ನೂ ಪರಿಣಾಮಕಾರಿಯಾಗಿ ಕರುಣಾಜನಕ ವಾಗಿ ಧ್ವನಿಸುತ್ತದೆ. ಆದರೂ ಕೊನೆಯವರೆಗೂ ಆತ ತನ್ನ ಕವಿಹೃದಯದ ಹಾಸ್ಯ ನುಡಿಗಳ ಹೂಗಂಪಿನಲ್ಲಿ ಆಕೆಯಮಾರಿಮಾತಿನ ಮಸಣವಾಸನೆಯನ್ನು ಮರೆಯಲಿಸ್ಸಿ ಸುತ್ತಾನೆ. 'ಸ್ವಲ್ಪ ಜೋರುಮಾಡಿ ಹೆದರಿಸು' ಎಂದು ಸ್ನೇಹಿತರು ಹೇಳಿದಾಗ ಅವನು ಹೇಳುವ 'ಬಂಗಾರವನ್ನು ಕಾಯಿಸಿದರೆ ಅದಕ್ಕೆ ಹೆಚ್ಚು ಬಣ್ಣ ಬರುತ್ತೆ; ತಟ್ಟಿದರೆ ಹೊಳೆಯುವ ತಗಡಾಗುತ್ತೆ, ಎಳೆದರೆ ತಂತಿಯಾಗುತ್ತೆ. ಅರೆ ಬಂಡೆಯನ್ನು ಕಾಯಿಸಿ ಹೊಡೆದರೆ? ಪುಡಿಪುಡಿಯಾಗುತ್ತೆ. ಬೇಕಾದರೆ ಅರೆ ಬಂಡೆಯನ್ನಿಟ್ಟುಕೊಂಡಿರಬೇಕು ಇಲ್ಲದಿದ್ದರೆ ಸುಮ್ಮನಿರಬೇಕು' ಎಂಬಮಾತು ಅವನ ನಿಸ್ಸಹಾಯಕ ಪರಿಸ್ಥಿತಿಯ ದಾರುಣತೆಗೆ ಜೀವಂತ ಸಾಕ್ಷಿಯಾಗಿ ಓದುಗರ ಕರುಳನ್ನು ಹಿಂಡುತ್ತದೆ. ಪುಟ್ಟುವಿನ ಬಗೆಗಿದ್ದ ಆತನ ನಿಷ್ಕಲ್ಮಷ ಪ್ರೀತಿ, ತನ್ನ ಮದುವೆಯ ಸಂದರ್ಭದಲ್ಲಿ ತಾವಿಬ್ಬರೇ ಏಕಾಂಗಿಗಳಾಗಿ ಇರಬೇಕಾಗಿ ಬಂದು ತಮ್ಮ ಶೀಲಕ್ಕೆ ಸವಾಲಾಗಿ ಬಂದ ಸನ್ನಿವೇಶ ದಲ್ಲಿ ಆತ ತೋರುವ ಅಸಾಧಾರಣ ಸಂಯಮ, ಪುಟ್ಟು ಜೀವನದ ಹೊಸ್ತಿಲಲ್ಲೇ ಗಂಡನನ್ನು ಕಳೆದುಕೊಂಡಾಗ ಆತ ಪಡುವ ಮಾನಸಿಕ ಯಾತನೆ—ಎಲ್ಲವೂ ತುಂಬ ಉಚ್ಚಮಟ್ಟದ ಕಲಾತ್ಮಕವಾದ ಹೃತ್ಸ್ಪರ್ಶಿ ನಿರೂಪಣೆಯನ್ನು ಪಡೆದಿವೆ. ಅಂತೆಯೇ ಪುಟ್ಟುವಿನ ನಿರ್ಮಲ ಅಂತಃಕರಣ, ಹಾಸ್ಯಮನೋಭಾವ, ಅಕೃತಿಮ ಪ್ರೀತಿಗಳಿಗೆ ಬಳುವಳಿಯಾಗಿ ಬಂದ ವೈಧವ್ಯದ ದುಸ್ಸಹನೀಯ ಯಾತನೆ ಮಾನವ ಬಾಳಿನ ವಿಷಮತೆಯನ್ನು ಕಣ್ಣಿಗೆ ಬಡಿಯುವಂತೆ ಎದುರು ನಿಲ್ಲಿಸುತ್ತದೆ. ಅವರಿಬ್ಬರ ಬಾಲ್ಯದ ಸಂತಸ ಯೌವನದಲ್ಲಿ ಸಂಕಟವಾಗಿ ಪರಿಣಮಿಸಿ ಕೊನೆಗೆ ಸಾವಿನಲ್ಲಿ ಮುಕ್ತಾಯವಾಗುತ್ತದೆ. ಜೀವನದಲ್ಲಿ ಒಂದಾಗಿ ಕೂಡಿ ಬಾಳಲು ವಿಧಿ ವಂಚಿಸಿದರೂ ಸಾವಿನಲ್ಲಾದರೂ ಅವರು ಜೊತೆಗೂಡುತ್ತಾರೆ. ಇದು ಅವರ ಹೃದಯದಲ್ಲಿ ಸುಸ್ಥಿರವಾಗಿದ್ದ ನಿರ್ಮಲಪ್ರೇಮವನ್ನು ಪ್ರತಿಮಿಸುತ್ತದೆ. ಈ ಸಾವಿನ ಸನ್ನಿ ವೇಶವಾದರೂ ಕೇವಲ ಕರುಣಾಪೂರ್ಣಮುಗಿವಿಗಾಗಿ ಎಳೆದು ತಂದು ಹಾಕಿದ ಅಸಹಜ ಘಟನೆಯಾಗದೆ ಅತ್ಯಂತ ಸಹಜ ಹಾಗೂ ಅನಿವಾರ್ಯವೆಂಬಂತೆ ಚಿತ್ರಿ ಸಿರುವುದರಲ್ಲಿ ಕತೆಗಾರರ ಕೌಶಲ ಒಡೆದು ಕಾಣುತ್ತದೆ. ಇಲ್ಲಿಗೆ ಕತೆ ನಿಂತಿದ್ದರೆ ಹೆಚ್ಚು ಉಚಿತವೂ ಅರ್ಥಪೂರ್ಣವೂ ಆಗಿರುತ್ತಿತ್ತು; ಕತೆಯ ದುರಂತತೆ ಪರಿಣಾಮ ಕಾರಿಯಾಗಿರುತ್ತಿತ್ತು. ಆದರೆ ಅನಂತರ ಬಂದಿರುವ ಪರಿಶಿಷ್ಟ ಕಲಾದೃಷ್ಟಿಯಿಂದ ಅನವಶ್ಯಕವಾಗಿತ್ತೇನೋ ಅನ್ನಿಸುತ್ತದೆ. ಭಾರತೀಯ ಮನೋಧರ್ಮದ ಮಂಗಳ ಮುಕ್ತಾಯದ ಸಂಪ್ರದಾಯಕ್ಕಾಗಿ ಅದನ್ನು ಸೇರಿಸಿದಂತೆ ಕಾಣುತ್ತದೆ. ಅದಿಲ್ಲದಿದ್ದರೆ ಕತೆಗೆ ಏನೂ ಊನವಾಗುತ್ತಿರಲಿಲ್ಲ. ಇದೊಂದು ಅಂಶವನ್ನು ಬಿಟ್ಟರೆ ಕತೆ ತುಂಬ ಸಂಯಮಬದ್ಧವಾಗಿ ಸಹಜವಾಗಿ ಹರಿದು ಉತ್ತಮ ಕಲಾಸಿದ್ಧಿಯನ್ನು ತೋರಿಸು

ತ್ತದೆ. ಇಲ್ಲಿ ಬರುವ ಸಂವಾದಗಳ ಸರಳ ಸೌಂದರ್ಯ, ಸನ್ನಿವೇಶದ ಸ್ವಾಭಾವಿಕ ಸಮರ್ಪಕ ನಿರೂಪಣೆ ತುಂಬ ಸತ್ವಯುತವಾಗಿದ್ದು ಕತೆಯ ಕಲಾಪರಿಣಾಮವನ್ನು ಉಜ್ವಲಗೊಳಿಸಿವೆ.

'ಜ್ಯೋತಿಷಕ್ಕೆ ಬಹುಮಾನ'–ಹೆಸರೇ ಸೂಚಿಸುವಂತೆ ಜ್ಯೋತಿಷಿಯೊಬ್ಬನ ಶ್ರೇಷ್ಠ ಜ್ಯೋತಿಷ್ಯಜ್ಞಾನಪರಿಣತಿಯನ್ನು ಪ್ರತಿಬಿಂಬಿಸುವ ಕತೆ.

ಜೀವನ ಒಂದು ಚಿತ್ರವಿಚಿತ್ರವಾದ ಕಗ್ಗಂಟು; ಒಂದು ಕಡೆಯಿಂದ ಬಿಡಿಸ ಹೋದರೆ ಮತ್ತೊಂದು ಕಡೆ ಗಂಟುಹಾಕಿಕೊಳ್ಳುತ್ತದೆ. ಇದು ಬಿಡಿಸಲಾರದ ಗಂಟು ಎನ್ನುವಾಗ ಮತ್ತೊಂದು ಕಡೆ ಅನಿರೀಕ್ಷಿತವಾಗಿ ಆಶ್ಚರ್ಯಕರವಾಗಿ ಬಿಚ್ಚಿಕೊಳ್ಳುತ್ತದೆ. ಹೂ ಬಿಸಿಲು ಹರಡಿದೆ ಎಂದು ಆನಂದದಿಂದಿರುವಾಗ ಇದ್ದಕ್ಕಿದ್ದಂತೆ ಕಾರ್ಮೋಡ ಕವಿಯುತ್ತದೆ; ಕಾರ್ಮೋಡ ಕವಿಯಿತೆಂದು ನಿರಾಸೆಯ ನಿಟ್ಟುಸಿರು ಬಿಡುವಾಗ ನಾವು ನಿರೀಕ್ಷಿಸದ ಕಡೆಯಿಂದ ರವಿರಶ್ಮಿ ಚೆಲ್ಲಿ ನೋವು ನಲಿವಾಗುತ್ತದೆ. ಇದರಿಂದ ಮಾನವ ಪ್ರಯತ್ನಕ್ಕೆ ಮೀರಿದ ಅದೃಶ್ಯಶಕ್ತಿಯೊಂದು ನಮ್ಮ ಆಗುಹೋಗುಗಳನ್ನು ಸೋಲುಗೆಲುವುಗಳನ್ನು ನಿಯಂತ್ರಿಸುತ್ತದೆ ಎಂದು ಬಹು ವೇಳೆ ನಂಬಬೇಕಾಗುತ್ತದೆ. ಇಂತಹುದೇ ಪ್ರಸಂಗ ಈ ಕತೆಯಲ್ಲಿ ಸುಂದರ ವಾಗಿ ನಿರೂಪಿತವಾಗಿದೆ. ನರಹರಿ ತನ್ನ ಭವಿಷ್ಯಜ್ಞಾನ ಪರಿಣತಿಯಿಂದ ತಿಮ್ಮಣ್ಣ ಭಟ್ಟರ ಮಗಳಿಗೆ ಮೊದಲು ಗೊತ್ತಾಗಿದ್ದ ಗಂಡನೊಡನೆ ಮದುವೆ ನಡೆಯುವುದಿಲ್ಲ ವೆಂದಾಗ ಅವರು ಔದಾಸೀನ್ಯದಿಂದ ಹಠದಿಂದ ಅದೇ ಗಂಡನೊಡನೆ ಮದುವೆ ನಡೆಸಲು ನಿರ್ಧರಿಸುತ್ತಾರೆ. ಇನ್ನೇನು ಎಲ್ಲವೂ ಮುಗಿಯಿತು ಎನ್ನುವಾಗ ಅನಿರೀಕ್ಷಿತ ಘಟನೆಗಳೊದಗುತ್ತವೆ. ಗಂಡಿನ ಹತ್ತಿರದ ಸಂಬಂಧಿಯೊಬ್ಬರು ಕಾಲರಾ ದಿಂದ ತೀರಿಕೊಳ್ಳುತ್ತಾರೆ. ಇದರಿಂದ ಮದುವೆ ನಿಲ್ಲುತ್ತದೆ. ಆದರೆ ಅಷ್ಟೇ ಅತ್ಯಾಶ್ಚರ್ಯಕರರೀತಿಯಲ್ಲಿ ಅದೇ ಚಪ್ಪರದಲ್ಲಿ ಬೇರೊಂದು ಗಂಡಿನೊಡನೆ ಆಕೆಯ ಮದುವೆ ನಡೆದುಹೋಗುತ್ತದೆ. ಇಷ್ಟೆಲ್ಲಾ ಅನಿರೀಕ್ಷಿತ ಘಟನಾಪರಂಪರೆಗಳು ಅತಿವೇಗವಾಗಿ ನಡೆದುಹೋದರೂ ಅಸಹಜ ಅಸ್ವಾಭಾವಿಕ ಎಂಬಛಾಯೆಯೂ ಬರದಂತೆ ಕಥಾಸಂವಿಧಾನವನ್ನು ರೂಪಿಸಿರುವುದರಲ್ಲಿ ಕತೆಗಾರರ ಪ್ರತಿಭಾವಿಶಿಷ್ಟತೆ ಗೋಚರವಾಗುತ್ತದೆ. ಬೀಗರ ಕಡೆಯ ಹೆಂಗಸಿಗೆ ಕಾಲರಾ ಬಂದು ಆಕೆಯನ್ನು ಆಸ್ಪತ್ರೆಗೆ ಸೇರಿಸುವುದು, ಆ ಸುದ್ದಿಗಾಗಿ ಮದುವೆ ಮನೆಯವರೆಲ್ಲಾ ತುದಿಗಾಲಲ್ಲಿ ನಿಂತು ಕಾಯುವುದು, ಸತ್ತ ಸುದ್ದಿಯನ್ನು ಆದಷ್ಟು ನಿಧಾನವಾಗಿ ತಿಳಿಸಿ ಮಂಗಳ ಮುಹೂರ್ತ ಮುಗಿವಂತೆ ಮಾಡಲು ಕತೆಗಾರರು ನಡೆಸುವ ಸನ್ನಾಹ, ಆದರೆ ಎಲ್ಲರ ಮನಸ್ಸಿನ ಹಾರೈಕೆಯನ್ನೂ ಮೀರಿ ಮಿಂಚಿನ ವೇಗದಲ್ಲಿ ಘಟನೆಗಳು ನಡೆಯುವ ರೀತಿ–ಎಲ್ಲವೂ ತುಂಬ ಸಮಂಜಸವಾಗಿ ಉಚಿತವಾಗಿ ಅಡಕವಾಗಿ ಯಥಾವತ್ತಾಗಿ ಪರಿಣಾಮಕಾರಿಯಾಗಿ ಚಿತ್ರಿಸಲ್ಪಟ್ಟಿವೆ. ಹಂತ ಹಂತವಾಗಿ ಕತೆ ಬೆಳೆಯುವ ರೀತಿ ಕುತೂಹಲಕರವೂ ಕಲಾತ್ಮಕವೂ ಆಗಿದೆ. ಆದರೆ ಮೊದಲಿನ

ಕತೆಯಂತೆ ಇಲ್ಲಿಯೂ ಕೊನೆಯ ಭಾಗ ಅವಶ್ಯಕವಾಗಿರಲಿಲ್ಲ. ' ಗಂಡು ಗೊತ್ತಾಯಿತು' ಎಂದು ತಿಳಿದ ತತ್‌ಕ್ಷಣ ಕತೆ ಮುಕ್ತಾಯಗೊಂಡಿದ್ದರೆ ಚೆನ್ನಾಗಿರುತ್ತಿತ್ತು; ಮುಂದಿನ ಮದುವೆ, ಮಗುವಿನ ಹುಟ್ಟುಹಬ್ಬದ ಔತಣದ ವಿವರಗಳು ಅಗತ್ಯವಿರಲಿಲ್ಲ. ಆದರೆ ಕತೆಯ ಶೀರ್ಷಿಕೆಯನ್ನು ಸಾರ್ಥಕ ಪಡಿಸುವುದಕ್ಕೆ ಮಾತ್ರ ಈ ವಿವರ ಬಂದಂತಿದೆ. ನರಹರಿಯ ಸತ್ಯನಿಷ್ಠುರತೆ, ತಿಮ್ಮಣ್ಣ ಭಟ್ಟರ ಪ್ರಾಮಾಣಿಕತೆ ಹಾಸ್ಯಮನೋಭಾವ ತುಂಬ ಜೀವಂತವಾಗಿ ಸೃಜಿತವಾಗಿವೆ.

ಪತ್ನಿಯ ಸಚ್ಚಾರಿತ್ರ್ಯ ಸೌಶೀಲ್ಯ ನಯವಿನಯ ಚಾತುರ್ಯಾದಿ ಸದ್ಗುಣಗಳಿಂದ ತನ್ನ ಪ್ರಾಣವನ್ನೂ ಸಂಸಾರವನ್ನೂ ಕಾಪಾಡಿಕೊಂಡ ಶ್ಯಾನುಭೋಗರೊಬ್ಬರ ಕತೆ, ' ಶಾನುಭೋಗನ ಪುಣ್ಯ'. ಇದು ಅವರ ಕತೆಗಿಂತ ಹೆಚ್ಚಾಗಿ ಅವರ ಪುಣ್ಯ ಸ್ವರೂಪಿಯಾದ ಪತ್ನಿಯ ಉಜ್ವಲ ವ್ಯಕ್ತಿತ್ವದ ಗೌರವ ಚಿತ್ರ.

ಪುಂಡುಕೊಂಪೆಯೆಂದು ಕುಪ್ರಸಿದ್ಧವಾಗಿದ್ದ, ಸರ್ಕಾರೀ ಅಧಿಕಾರಿಗಳಾರೂ ತಲೆಹಾಕಲು ಥರಗುಟ್ಟುತ್ತಿದ್ದ ಪ್ರಾಂತದಲ್ಲಿ ಪ್ರತಿನಿತ್ಯವೂ ಜೀವವನ್ನು ಕೈಯ್ಯಲ್ಲಿ ಹಿಡಿದು ಅಧಿಕಾರ ನಡೆಸಬೇಕಾಗಿದ್ದ ಶಾನುಭೋಗ, ಪತ್ನಿ ಲಕ್ಷ್ಮೀದೇವಮ್ಮನ ಉದಾತ್ತಗುಣದಿಂದ ನಿರಾಳವಾಗಿ ಉಸಿರಾಡುವಂತಾದ. ಆಕೆಯ ಉನ್ನತ ಗುಣದ ಚಿತ್ರ ತುಂಬ ಸಮುಚಿತವಾಗಿ ಸಮರ್ಥವಾಗಿ ಮೂಡಿಬಂದಿದೆ. ಅವರು ಹೇಳುವ 'ನಾನೇನು ಮಾಡುತ್ತೇನಪ್ಪ! ನಮ್ಮ ನಡೆನುಡಿ ಚೆನ್ನಾಗಿಟ್ಟುಕೊಂಡಿದ್ದರೆ ಕಾಪಾಡುವ ದೇವರು ಹ್ಯಾಗೋ ಕಾಪಾಡುತ್ತಾನೆ' ಎಂಬ ಮಾತು ಅವರ ಅಚಲ ಶ್ರದ್ಧೆಯ ನಿರ್ಮಲ ಹೃದಯದ ಜೀವನ—ವಿಜಯದ ಶ್ರುತಿಯಾಗಿದ್ದು ಅವರ ಎಲ್ಲ ಪ್ರಯತ್ನಗಳ ಅಂತಃಶಕ್ತಿಯಾಗಿದೆ. ಅವರ ನಡೆ, ನುಡಿ, ಅತಿಥಿಪ್ರಿಯತೆ, ಸರಳ ಸಂಪ್ರದಾಯಶೀಲ ಅಲಂಕಾರ ಇವುಗಳ ವರ್ಣನೆ ಆಕೆ ಮುಂದೆ ತನ್ನ ಪತಿಯ ಪ್ರಾಣವನ್ನುಳಿಸುವ ಸನ್ನಿವೇಶಕ್ಕೆ ಉಚಿತ ಹಿನ್ನೆಲೆಯನ್ನೂ ಸಮರ್ಥನೆಯನ್ನೂ ಒದಗಿಸುತ್ತವೆ.

ಶಾನುಭೋಗನನ್ನು ಕೊಲೆಗೈಯ್ಯಲು ಕ್ಷುಭಿತರಾಗಿ ದುಡುದುಡನೆ ಬಂದ ರೈತರ ಗುಂಪನ್ನು ಕಂಡು ಭಯಿಷ್ಠೆಯಾಗದೆ ನೀರಿಗೆ ಹೋಗುವವಳಂತೆ ನಟಿಸಿ, ಅವರನ್ನು ಬಾಗಿಲಲ್ಲೇ ಎದುರುಗೊಂಡು ಅವರ ಆತುರಕ್ಕೆ ಮೊದಲನೇ ಅಡ್ಡಗಟ್ಟಿಯನ್ನು ಹಾಕಿ, ಕ್ರಮಕ್ರಮೇಣ ತನ್ನ ಸವಿಯಾದ ವಾತ್ಸಲ್ಯಪೂರ್ಣವಾದ ಪರಿಣಾಮಕಾರಕ ಮಾತುಗಳಿಂದ ಅವರ ಅಂತರಂಗದ ಸಿಡುಕು ಕೆಡುಕುಗಳಿಗೆ ತಣ್ಣೀರೆರೆದು, ಕದಿಯಲು ಬಂದವರಿಗೆ ಕಂಠಪೂರ್ತಿ ರಸಗವಳ ನೀಡಿ, ಕ್ರೋಧ ತಾಂಡವವಾಡುತ್ತಿದ್ದ ಹೃದಯದಲ್ಲಿ ಕರುಣೆ ಸಹಾನುಭೂತಿ ಕೃತಜ್ಞತೆಗಳನ್ನು ಚಿಲುಮಿಸಿ ತನ್ನ ಪತಿಯ ಪ್ರಾಣಕ್ಕೆ ಧಕ್ಕೆ ಇನ್ನು ಬಾರದೆಂದು ಅವರಿಂದ ವಚನ ತೆಗೆದುಕೊಳ್ಳುವ ಸನ್ನಿವೇಶ ತುಂಬ ಚಿತ್ರವತ್ತಾಗಿ ಶಕ್ತಿವತ್ತಾಗಿ ಮೂಡಿ ಬಂದಿದೆ. ಈ ಸಂದರ್ಭ ಹಂತಹಂತವಾಗಿ ಬೆಳೆದು ನೇರಗುರಿಯನ್ನು ಮುಟ್ಟಿ ನಿರೀಕ್ಷಿತ

ಪರಿಣಾಮವನ್ನು ಓದುಗರಲ್ಲಿ ಉಂಟುಮಾಡುತ್ತದೆ. ಬಂದಿದ್ದವರು ತಾವು ಬಚ್ಚಿಟ್ಟುಕೊಂಡಿದ್ದ ಮಚ್ಚುಗಳನ್ನು ಹೊರತೆಗೆದುತೋರಿಸಿ "ಅಮ್ಮ ಇವತ್ತು ನಿನ್ನ ಗಂಡನ್ನ ಬದುಕಿಸಿಕೊಂಡೆ; ಹೋಗು, ನಿನ್ನ ತಾಳೀ ಪುಣ್ಯ ಚೆನ್ನಾಗಿತ್ತು. ಹಾಲು ತುಪ್ಪ ಇಟ್ಟು ನಮ್ಮನ್ನು ಕೊಂದೆ" ಎಂದು ಹೇಳುವ ಮಾತು ತುಂಬ ಧ್ವನಿಗರ್ಭಿತವೂ ಆಕೆಯ ವ್ಯಕ್ತಿತ್ವದ ವ್ಯಾಖ್ಯಾನವೂ ಆಗಿದೆ. ಕೊನೆಯ ಮಾತಂತೂ ಅತ್ಯಂತ ಉಜ್ವಲಸತ್ವದ್ದು.

ಲಕ್ಷ್ಮಿದೇವಮ್ಮನವರಲ್ಲಿ ಬನಶಂಕರಿಯ ಅಂಶವಿತ್ತು ಎಂಬ ನಂಬಿಕೆಯನ್ನು ಕುರಿತ ಉಪಕತೆ ಮೇಲುನೋಟಕ್ಕೆ ಅಸಹಜ ಅನಾವಶ್ಯಕವೆಂದು ಕಂಡರೂ ಆಕೆಯ ವ್ಯಕ್ತಿಮಹತ್ವ ಇಂತಹ ಕಲ್ಪನೆಗೆ ಅವಕಾಶ ನೀಡುವಷ್ಟು ಉಜ್ವಲವಾಗಿತ್ತು ಎಂಬುದನ್ನು ಸಾಂಕೇತಿಸುವುದರಿಂದ ಸಾರ್ಥಕವಾಗಿದೆ. ಆದರೆ ಅದರಲ್ಲಿಯ ಕತೆಗಾರ ಮತ್ತು ಅಜ್ಜಿಯ ಸಂಭಾಷಣೆ ಸ್ವಲ್ಪ ಉದ್ದವಾಗಿ ಕತೆಯ ಬಿಗಿಯನ್ನು ತುಸು ಸಡಿಲಗೊಳಿಸುತ್ತದೆ. ಕತೆಯ ಮುಕ್ತಾಯ ರಮ್ಯವಾಗಿದೆ. ಅಷ್ಟೊಂದು ಸತ್ಯನಿಷ್ಠೆ, ಸದ್ಗುಣ ಮತ್ತು ವೈಭವಗಳಿಂದ ಬಾಳಿ ಬದುಕಿದ ಮನೆತನ ಈಗ ಹೇಳ ಹೆಸರಿಲ್ಲದಂತಾಗಿದೆಯೆನ್ನುವಾಗ ಈ ಮಾತು ಬರುತ್ತದೆ: 'ಜನರು ಕಾಲ ಕೆಟ್ಟು ಹೋಯಿತು ಎನ್ನುತ್ತಾರೆ. ಕಾಲ ಕೆಟ್ಟು ಹೋಯಿತೋ ನಾವೇ ಕೆಟ್ಟು ಹೋದೆವೋ! "ನಮ್ಮ ನಡೆನುಡಿ ಚೆನ್ನಾಗಿದ್ದರೆ ಕಾಪಾಡುವ ದೇವರು ಹ್ಯಾಗೋ ಕಾಪಾಡುತಾನೆ" ಅದನ್ನು ಕೆಡಿಸಿಕೊಂಡರೆ—?' ಶಾನುಭೋಗನ ಮನೆತನದ ಪುಣ್ಯ ಪ್ರಭಾವ ಇರುವವರೆಗೆ ಅದು ಬದುಕಿತು, ಅದು ಕ್ಷಯಿಸಿದನಂತರ ಮನೆತನವೂ ಕ್ಷಯಿಸಿತು. ನಾಟಕೀಯ ಆರಂಭ, ಧ್ವನಿಪೂರ್ಣ ಮುಕ್ತಾಯ, ಮೂಲನದಿ ಉಪನದಿಗಳ ಪೂರಕ ಕಲಾತ್ಮಕತೆ, ಚತುರ ನಿರೂಪಣೆ ಇದನ್ನೊಂದು ಉತ್ತಮ ಕತೆಯನ್ನಾಗಿಸಿವೆ.

ನೋವು ನಿರಾಸೆಗಳು ಜೀವನವನ್ನು ಕವಿದಾಗ, ಸಜ್ಜನರಿಗೆ ಸದ್ಗುಣ ಸಂಪನ್ನರಿಗೆ ಕಷ್ಟಪರಂಪರೆಗಳು ಮುತ್ತಿದಾಗ, ಇಹದೊಡನೆ ಬಂಧಿಸಿರುವ ಬಾಳಿನ ಬೇರು ಅಲುಗಾಡಿದಾಗ ದೇವರ ಅಸ್ತಿತ್ವದಲ್ಲಿ ನಂಬಿಕೆ ಮಂಕಾಗುತ್ತದೆ; ಇದಕ್ಕೆ ಬದಲಾಗಿ ಅನಿರೀಕ್ಷಿತ ಅಸಂಬದ್ಧ ಘಟನಾಪರಂಪರೆಗಳು ಆಶ್ಚರ್ಯಕರ ರೀತಿಯಲ್ಲಿ ಒಂದಕ್ಕೊಂದು ಸುಸಂಬದ್ಧವಾಗಿ ಹೆಣೆದುಕೊಂಡಾಗ, ಸಂಪೂರ್ಣ ನಿರಾಶಾದಾಯಕ ಅಸಹಾಯಕತೆಯ ದಾರುಣಸ್ಥಿತಿಯಲ್ಲಿ ಎಂದೂ ಕೇಳರಿಯದ ಕಂಡರಿಯದ ಕೃಪಾಹಸ್ತವೊಂದು ಮೇಲೆದ್ದು ಸಹಾಯವಾದಾಗ ಎಂತಹ ನಾಸ್ತಿಕನಿಗೂ ಒಮ್ಮೊಮ್ಮೆ "ದೇವರು ಇದ್ದಾನೆ" ಎನ್ನಿಸುತ್ತದೆ. ಇಂತಹ ಸನ್ನಿವೇಶವೊಂದರ ಸುರಸ ಚಿತ್ರಣ "ದೇವರು ಇದ್ದಾನೆ."

ಮಿತ್ರರಿಬ್ಬರ ಅನಿರೀಕ್ಷಿತ ಆನಂದದಾಯಕ ಭೇಟಿ ಮತ್ತೊಂದು ಕತೆಗೆ ಮೂಲಬೀಜವಾಗುವ ತಂತ್ರ ತುಂಬ ಸಹಜವಾಗಿದ್ದು, ಪ್ರಧಾನ ವಸ್ತುವಿನ

ನಿರೂಪಣೆಗೆ ಮುನ್ನುಡಿಯಂತಿದೆ. ಲೇಖಕರ ಸಮಾಧಾನಚಿತ್ತದ ಸಾವಧಾನ ಶೀಲತೆ ಮಿತ್ರರ ವರ್ಣನೆಯನ್ನು ಜೀವಂತವಾಗಿ ವಿವರವಾಗಿ ಕುಂಚಿಸಿದೆ. ಈ ವರ್ಣನೆ ಮೊದಮೊದಲು ಅನವಶ್ಯಕವೆನಿಸಿದರೂ ಮುಂದಿನ ಕತೆಯ ಹಿನ್ನೆಲೆಯಲ್ಲಿ ನೋಡಿದಾಗ ಇದಕ್ಕೆ ತುಂಬ ಔಚಿತ್ಯವಿದೆ ಎನ್ನಿಸುತ್ತದೆ. ಇಂತಹ ಶಿಸ್ತುಗಾರ ಪುಟ್ಟಸ್ವಾಮಿ, ಜೀವನದ ರಸವನ್ನು ಗುರುತಿಸಿ ಅನುಭವಿಸಬಲ್ಲ ರಸಿಕ ಮದ್ರಾಸಿನಲ್ಲಿದ್ದ ಅನಾಥದಂಪತಿಗಳಿಗೆ ಮಾಡಿದ ಸಹಾಯ, ತೋರಿದ ನಿರ್ಮಲ ಸಹಾನುಭೂತಿ ಅನುಭವಿಸಿದ ತೊಂದರೆಗಳು ತುಂಬ ಉನ್ನತ ಮಟ್ಟದವು ಎಂಬುದನ್ನು ಇದು ಧ್ವನಿಸುತ್ತದೆ. ಗಂಡ ಹಾಸಿಗೆ ಹಿಡಿದು ಅತ್ತಲೋ ಇತ್ತಲೋ ಎನ್ನುವಂತಿರುವಾಗ ಅರ್ಧರಾತ್ರಿಯಲ್ಲಿ ಆಕೆ ಬಂದು ವೆಂಕಟೇಶಯ್ಯನನ್ನು ಎಬ್ಬಿಸುವುದು, ಆತ ಹೋಗಿನೋಡಿದಾಗ ಕಂಡ ಬಡತನವೇ ಮೂರ್ತಿವೆತ್ತಂತಿದ್ದ ಮನೆಯ ಕರುಣಾಜನಕ ಪರಿಸ್ಥಿತಿ, ಔಷಧಿತರಲೂ ಸಹ ಯಾರೂ ದಿಕ್ಕಿಲ್ಲದ ಅವರ ನಿಸ್ಸಾಹಾಯಕತೆ, ರೋಗಿಯ ಸಂಕಟ, ಆಕೆಯ ದೀನ ಆರ್ತತೆ, ಈತನ ಪರದಾಟ ಈ ಸನ್ನಿವೇಶಗಳು ಅತ್ಯಂತ ಮನೋವೇದಕವಾಗಿ ಸಹಜವಾಗಿ ಹೃದ್ರಮ್ಯ ಅಭಿವ್ಯಕ್ತಿಯನ್ನು ಪಡೆದಿವೆ. ಕಾಣದ ಊರಿನಲ್ಲಿ ಭಾಷೆಯ ಬಂಧುತ್ವವೇ ಸಹಾಯ ಯಾಚಿಸುವ ನೀಡುವ ಏಕೈಕ ಸಾಧನವಾಗಿ ಬಂಧನವಾಗಿ ಜೀವತಂತುವಾಗಿ ಪರಿಣಮಿಸುವ ಚಿತ್ರ ಸೊಗಸಾಗಿ ಮೂಡಿದೆ. "ಐವತ್ತು ರೂಪಾಯಿನಲ್ಲಿ ಸಂಸಾರ ಮಾಡಿಕೊಂಡು ನೀವು ಡಾಕ್ಟರಿಗೆ ಏನು ಕೊಟ್ಟೀರಿ; ಚಿಂತೆಯಿಲ್ಲ, ನಾನು ಫೀಸು ತೆಗೆದುಕೊಳ್ಳುವ ಜನರು ಬೇರೆ ಇದ್ದಾರೆ"—ಎನ್ನುವ ಉದಾರ ಹೃದಯರಾದ ಡಾಕ್ಟರು; ಕಂಡುಕೇಳದ, ಕೇವಲ ಮುಖಪರಿಚಯದಿಂದಲೇ ಭಾಷೆಯ ಸಂಬಂಧದಿಂದಲೇ ಬಂಧುಗಳಾಗಿ ಯಾರೂ ಕೇಳದೆಯೇ ನಲವತ್ತುರೂಪಾಯಿಗಳನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಬಂದು ಕೊಟ್ಟು ರಕ್ತಸಂಬಂಧಿಗಳಿಗಿಂತ ಹೆಚ್ಚಾಗಿ ಓಡಾಡಿ ಉತ್ತರಕ್ರಿಯಾದಿಗಳಿಗೆ ನೆರವಾದ ಸಹಜಾಂತಃಕರಣಿಗಳಾದ ಕೋರ್ಟಿನ ಸ್ನೇಹಿತರು, ಮದ್ರಾಸ್ ಪಟ್ಟಣದ ಜೀವನಕ್ರಮ—ಎಲ್ಲವೂ ಅತ್ಯಂತ ವಾಸ್ತವಿಕವಾಗಿ ಸ್ಫುಟವಾಗಿ ಚಿತ್ತಾಕರ್ಷಕವಾಗಿ ಮೂಡಿನಿಂತಿವೆ. 'ದೊಡ್ಡ ಪಟ್ಟಣದಲ್ಲಿ ದೊಡ್ಡ ಮನಸ್ಸಿನವರು ದೊರಕುವುದುಅಪರೂಪ. ದೊರಕಿದರೆ ದೇವರಂಥವರೇ ಸಿಕ್ಕುತ್ತಾರೆ'—ಎಂಬುವ ಸಹಜಾನುಭವ ಜನ್ಯವಾದ ಆಣಿ ಮುತ್ತುಗಳು ಕತೆಯ ಮೌಲ್ಯವನ್ನು ಅಧಿಕಗೊಳಿಸುತ್ತವೆ. ಇಲ್ಲಿಯ ಘಟನಾವಳಿಗಳನ್ನು ನೋಡಿದಾಗ ಕಥಾನಾಯಕನಿಗೆ ಅನ್ನಿಸುವಂತೆಯೇನಮಗೂ 'ದೇವರು ಇದ್ದಾನೆ' ಅನ್ನಿಸುತ್ತದೆ. ಇಲ್ಲಿಯೇ ಕತೆಯುಕಲಾವಿಜಯಆಡಕವಾಗಿದೆ. ಹಿಂದಿನ ಕತೆಗಳಂತೆ ಇದರಲ್ಲಿಯೂ ಅಂತ್ಯವನ್ನು ಅನಾವಶ್ಯಕವಾಗಿ ಲಂಬಿಸುವ ಚಾಪಲ್ಯ ನುಸುಳಿದೆ. ಕಥಾನಾಯಕ 'ಪರೀಕ್ಷೆ ಮುಗಿದಮೂರನೆ ದಿನವೇ ಊರಿಗೆ ಹೊರಟುಬಿಟ್ಟ' ಎಂದು ಹೇಳಿದಾಗಲೇ ಕತೆ ಮುಕ್ತಾಯವಾಗಿದ್ದರೆ ಚೆನ್ನಿತ್ತು. ಅಲ್ಲಿಂದ ಮುಂದಿನ 'ದೇವರು ಇದ್ದಾನೆ' ಎಂಬ ತರ್ಕದ ವಿವರಣೆ ಅನಗತ್ಯ ಹೊರೆ; ಸಂಪ್ರದಾಯದ ಶೃಂಖಲೆ.

ಅಣ್ಣತಂಗಿಯರಿಬ್ಬರ ಅಶಾಂತ ಅತೃಪ್ತ ಬಾಳಿನ ಕರುಣಾಜನಕ ಕತೆ 'ನಾಗರಪಂಚಮಿ'. ಹೆಂಡತಿಯ ಹಠಮಾರಿತನ ಬಾಯಾಳಿತನಗಳಿಂದ ಬೇಸತ್ತು ಅನಿವಾರ್ಯವಾಗಿ ಅವಳಿಗೆ ಅಂಜಿ ನಡೆಯಬೇಕಾಗಿ ಬಂದು, ಒಡಹುಟ್ಟಿದ ವಿಧವೆ ತಂಗಿಯನ್ನು ಸತ್ಕರಿಸಲು ಸಂತೈಸಲು ಮನಸ್ಸಿದ್ದರೂ ಮಾರ್ಗವಿಲ್ಲದೆ ಒಳಗೊಳಗೇ ಕರಗಿ ಕೃಶವಾಗಿ ಕಂಬನಿ ಹರಿಸುವ ಅಣ್ಣ; ಅತ್ತಿಗೆಯ ಬಾಯಿಯ ಬಾರುಕೋಲಿಗೆ ಬೆದರಿ, ತನ್ನ ಪ್ರವೇಶದಿಂದ ಅಣ್ಣನ ಗೃಹಜೀವನದಲ್ಲಿ ಅಶಾಂತಿಯ ಬಿರುಗಾಳಿ ಎದ್ದೀತೇನೋ ಎಂದು ಭಯಗೊಂಡು, ತನ್ನ ಹೃದಯದ ನೂರಾರು ನೋವು ನಿರಾಶೆಗಳನ್ನು ನುಂಗಿಕೊಂಡು ಸದಾ ಅಣ್ಣನ ಬಾಳಿನ ಅಭ್ಯುದಯವನ್ನೇ ಹಾರೈಸುವ ತಂಗಿ—ಇವರಿಬ್ಬರ ಮನಸ್ಸಿನ ಬವಣೆ ಬೇಗೆಗಳ ಹಾರೈಕೆ ಹಂಬಲಗಳ ಸೂಕ್ಷ್ಮವೂ ಪರಿಣಾಮಕಾರಿಯೂ ಕಲಾತ್ಮಕವೂ ಆದ ನಿರೂಪಣೆ ಈ ಕಥೆಯ ವಸ್ತು.

ನಾಗರಪಂಚಮಿ ಒಡಹುಟ್ಟಿದವರ ಹಬ್ಬ; ಪ್ರೇಮದ ತನಿ ಎರೆಯುವ ಹಬ್ಬ. ಎದುರು ಮನೆಯಲ್ಲಿ ಎಲ್ಲೆಲ್ಲಿದ್ದ ಅಣ್ಣತಮ್ಮಂದಿರು ಅಕ್ಕತಂಗಿಯರೆಲ್ಲಾ ಕೂಡಿಕೊಂಡು ಹಬ್ಬ ಆಚರಿಸಿದ್ದು ವಿಧವೆಯ ಮನಸ್ಸಿನಲ್ಲಿ ತನ್ನ ಗತಸೌಭಾಗ್ಯದ ಸವಿ ದಿನಗಳನ್ನು ಸ್ಮರಣೆಗೆ ತಂದು ಎಂತಾದರೂ ಅಣ್ಣನನ್ನು ನೋಡಿಯಾದರೂ ಬರಬೇಕೆಂಬ ವಾತ್ಸಲ್ಯದ ಮಹಾಪೂರವನ್ನು ಉಕ್ಕಿಸಿದ್ದು ತುಂಬ ಸಹಜ. ಅಣ್ಣನ ಮನೆಗೆ ಬಂದಾಗ ಅತ್ತಿಗೆಯಾಡಿದ ಕಟಕಿಯ ಕತ್ತಿನುಡಿ ಹೃದಯವನ್ನು ಹರಿದಾಗ ಬಯಲಾದ ಬಯಕೆಯಿಂದ ಶೂನ್ಯಮನಸ್ಕಳಾಗಿ ಹಿಂದಿರುಗಿ ಹಬ್ಬದ ದಿನವೆಲ್ಲ ಉಪವಾಸಮಾಡಿದ ಆಕೆಯ ಸಂಕಟ ಕರುಳನ್ನು ಹಿಂಡುತ್ತದೆ. "ಇದ್ಯಾಕಮ್ಮಾ, ಎಂದೂ ಇಲ್ಲದ್ದು ಇವತ್ತು ಇಷ್ಟು ದುಃಖ?"—ಎಂದು ಅಣ್ಣ ಕೇಳಿದರೆ, "ಏನೂ ಇಲ್ಲ ಅಣ್ಣಯ್ಯಾ; ಸುಮ್ಮನೆ" ಎಂದು ಹೇಳುವ ಅವಳ ಮಾತಿನಲ್ಲಿರುವ ಅಳಲಿನ ಆಳ ಅಳತೆಗೆ ಮೀರಿದ್ದು. ನೂರು ಮಾತುಗಳು ವಿವರಿಸಲಾಗದ ನೋವನ್ನು ಅರ್ಥವನ್ನು ಈ ಸರಳ ಸಂಕ್ಷಿಪ್ತ ಉತ್ತರ ಧ್ವನಿಸುತ್ತದೆ. 'ನಾಗರಪಂಚಮಿಯ ಪೂಜೆಗೆ ಅನುಕೂಲವಾಯಿತು; ಜೀವದ ಹಾವೇ ಸಿಕ್ಕಿದ ಹಾಗಾಯಿತು'—ಎನ್ನುವ ಅಣ್ಣನ ಮಾತಿನ ಹಾಸ್ಯದ ಹೊದಿಕೆಯಲ್ಲಿರುವ ನಿಸ್ಸಹಾಯಕ ನೋವಿನ ಹಾವುಮಿಡಿತ; '.. ನಾವು ಹುತ್ತಮಾಡಿಟ್ಟುಕೊಂಡು ಹಾವು ಬಂದು ಸೇರಿಕೊಂಡಿತು ಎಂದರೆ, ಅದು ಹಾವಿನ ತಪ್ಪೇ?"—ಎನ್ನುವಲ್ಲಿನ ಪಶ್ಚಾತ್ತಾಪದ ಪ್ರಾಮಾಣಿಕ ಕಳಕಳಿ; "ದೇವರು ಹೊಟ್ಟೆತುಂಬ ಅನ್ನ ಕೊಟ್ಟಿದ್ದಾನೆ; ಆದರೆ ತುಪ್ಪ ಮಜ್ಜಿಗೆಯಿಲ್ಲದೆ ಬರಿಯ ಅನ್ನವನ್ನು ಮುಕ್ಕುವುದು ನನ್ನ ಅದೃಷ್ಟವಾಗಿದೆ" ಎನ್ನುವಲ್ಲಿನ ಆಡಲಾರದ ಅನುಭವಿಸಲಾರದ ಅನಿವಾರ್ಯ ದುಃಖದ ಭೀಕರತೆ—ಉಜ್ವಲ ಪ್ರಭಾವಕಾರಿಯಾಗಿವೆ; ಲೇಖಕರ ಸ್ವೋಪಜ್ಞಶೀಲ ಅನುಭವದ ವ್ಯಾಪಕತೆಗೆ ನಿದರ್ಶನವಾಗಿವೆ. ತಾನೂ ಊಟಮಾಡುವೆನೆಂದು ತಂಗಿಯ

ಮೇಲಿನ ಅದಮ್ಯ ವಾತ್ಸಲ್ಯಕ್ಕಾಗಿ ಅವಳಿಂದ ಅಡಿಗೆಮಾಡಿಸಿ ಒಂದು ತುತ್ತು ಕಡಿಮೆಯಾಗಿ ಉಂಡು, ಹೆಂಡತಿ ಹರಿಹಾಯುವಳೆಂದು ಹೆದರಿ ಹಣೆಯ ಅಕ್ಷತೆಯನ್ನು ಕೆರೆದುಕೊಂಡು ಆಫೀಸಿನಲ್ಲಿ ಒಂದು ಗಂಟೆ ಕುಳಿತು, ಮತ್ತೆ ಮನೆಗೆಬಂದು ಊಟಮಾಡಿಕೊಂಡು ಹೋಗುವ ಅಣ್ಣನ 'ಅತ್ತದರಿ; ಇತ್ತ ಪುಲಿ' ಎಂಬಂತಹ ಅಸಹಾಯಕ ಪರಿಸ್ಥಿತಿಯ ಉತ್ಕಟ ಚಿತ್ರಣ ಅಸಾಧಾರಣ ಸತ್ವಯುತವಾಗಿದೆ. ಉದ್ದಕ್ಕೂ ಎಲ್ಲಿಯೂ ಅಸಂಬದ್ಧ ಅಸಹಜ ಅನಾವಶ್ಯಕ ಮಾತುಗಳಿಲ್ಲದೆ ತುಂಬ ಬಿಗಿಯಾಗಿ ಬಸಿಯಾಗಿ ಗಂಭೀರವಾಗಿ ಔಚಿತ್ಯಪೂರ್ಣವಾಗಿ ಅತಿ ಎಚ್ಚರದಿಂದ ಕಲಾತ್ಮಕವಾಗಿ ಕತೆ ಮುನ್ನಡೆದು ನಿಶ್ಚಿತ ಉದ್ದೇಶವನ್ನು ಸಾಧಿಸಿ ಓದುಗರಮೇಲೆ ಗಾಢವಾದ ಪರಿಣಾಮವನ್ನುಂಟುಮಾಡುತ್ತದೆ. ಕರುಣಪ್ರಧಾನವಾದ ಈ ಸುಂದರ ಕತೆ ಈ ಸಂಕಲನದ ಅತ್ಯುತ್ತಮ ಕತೆಗಳಲ್ಲೊಂದು.

"ಈಗಿನ ಹಳ್ಳಿಗಾಡಿನ ಸ್ಥಿತಿಯಲ್ಲಿ ಹುಚ್ಚು ಹಿಡಿಯದೇ ಇರಬೇಕಾದರೆ, ಧರ್ಮಕರ್ಮ, ದೇವರು ದಿಂಡರು, ಸತ್ಯ ನ್ಯಾಯ ಎಲ್ಲ ಬಿಟ್ಟವರಿಗೇ ಸಾಧ್ಯ"— ಎಂಬ ಕಹಿ ಅನುಭವದ, ನೂರಾರು ಕಷ್ಟಪರಂಪರೆಗಳ ಕುಲುಮೆಯಲ್ಲಿ ಬೆಂದು ದಗ್ಧಹೃದಯನಾಗಿ ಹುಚ್ಚನೆನ್ನುವ ಬಿರುದಿಗೆ ಪಾತ್ರನಾಗಿ ಕೆಲಸ ಕಳೆದುಕೊಂಡು ಪಾಡುಪಟ್ಟ ಬಡಶಾಲಾ ಉಪಾಧ್ಯಾಯನೊಬ್ಬನ ಹೃದಯ ವಿದ್ರಾವಕ ಚಿತ್ರ 'ಹುಚ್ಚೊ ಅಲ್ಲವೋ?'.

ಹಳ್ಳಿಯ ಪಾರ್ಟಿಗಳು, ನ್ಯಾಯಾನ್ಯಾಯಗಳನ್ನು ವಿಮರ್ಶಿಸದೆ ಮುಖ ನೋಡಿ ಮಣೆಹಾಕುವ 'ಆರುದೋಸೆ ಕೊಟ್ಟರೆ ಅತ್ತೆ ಕಡೆ, ಮೂರುದೋಸೆ ಕೊಟ್ಟರೆ ಸೊಸೆಕಡೆ' ಎಂದು ನಡೆಯುವ ಅವಿವೇಕಿ ಪುಡಾರಿಗಳು, ಜನದ ಮುಗ್ಧತೆಯನ್ನೆ ಮೂಲಧನವಾಗಿಸಿಕೊಂಡು ತಮ್ಮ ಬೇಳೆ ಬೇಯಿಸಿಕೊಳ್ಳುವ ಸ್ವಾರ್ಥಿಗಳಾದ ಅರೆವಿದ್ಯಾಗರ್ವಿಗಳು—ಮುಂತಾದವರಿಂದ ಬಡವರ ಶ್ರಮಜೀವಿಗಳ ಮುಗ್ಧಜೀವಿಗಳ ಬದುಕು ಹೇಗೆ ಸ್ಮಶಾನವಾಗುತ್ತದೆ ಎನ್ನುವುದನ್ನು ತುಂಬ ಹೃದ್ಯವಾಗಿ ಶಕ್ತಿವತ್ತಾಗಿ ಈ ಕತೆ ವಿವರಿಸುತ್ತದೆ. ಹಾಗೆಯೇ ಕಗ್ಗತ್ತಲೆಯ ರಾತ್ರಿಯಲ್ಲಿ ರೈಲು ಬಿದ್ದುಹೋದಾಗ ತಮ್ಮ ಕಲಾಪತ್ತಿನ ರುಮಾಲನ್ನು ತಾವು ತೆಗೆದುಕೊಂಡು ಹೋಗುತ್ತಿದ್ದ ತುಪ್ಪದ ಡಬ್ಬದಲ್ಲಿ ಅದ್ದಿ ಹೊತ್ತಿಸಿ ಕಕ್ಕಡ ಉರಿಸುವಂಥ ಕೆಡ್ಡಾ ಶಾನ್ಭೋಗರು, ಹರುಕು ಕೋಟು ಹಾಕಿಕೊಂಡು ದೈನ್ಯತೆಯೇ ಮೂರ್ತಿವೆತ್ತಂತೆ ಬಡತನವೇ ಒಡಮೂಡಿ ಎದ್ದಂತೆ ನಿಂತಿದ್ದ ಉಪಾಧ್ಯಾಯರನ್ನು ಕಂಡು ಕಣ್ಣೀರಿಟ್ಟು ತಮ್ಮ ಹೊಸ ಟ್ವೀಡ್ ಕೋಟನ್ನೇ ಕಳಚಿ ತೊಟ್ಟುಕೊಳ್ಳಲು ಕೊಡುವಂಥ ವಿದ್ಯಾಶಾಖೆಯ ಮುಖ್ಯಾಧಿಕಾರಿಗಳು ಮುಂತಾದವರ ಉದಾರವೂ ಆದರ್ಶಪೂರ್ಣವೂ ಆದ ವ್ಯಕ್ತಿ ಚಿತ್ರಣ ಅತ್ಯಂತ ಸೊಗಸಾಗಿ ಪಡಿಮೂಡಿದೆ. ರೈಲಿನಲ್ಲಿ ಸಂಧಿಸಿದ ವಿವಿಧ ವ್ಯಕ್ತಿಗಳ ಮನೋಭಾವ ಅವರ ಕೆಲವೇ ಮಾತುಗಳಲ್ಲಿ ಸಮರ್ಥವಾಗಿ ರೇಖಿತವಾಗಿದೆ. ಪ್ರಯಾಣದ ಪರಿಸರ ತುಂಬ ನೈಜವಾಗಿದೆ; ಮುಕ್ತಾಯ ಸಮಂಜಸವಾಗಿದೆ.

'ಅತಿಯಾಸೆ ಗತಿಕೆಡಿಸಿತು'. 'ವಿನಾಶ ಕಾಲಕ್ಕೆ ವಿಪರೀತ ಬುದ್ಧಿ' ಎಂಬ ನಾಣ್ಣುಡಿಗಳು ಕೇವಲ ಬರಡು ಮಾತಿನ ಬುರುಡೆಗಳಲ್ಲ. ಅವುಗಳಲ್ಲಿ ಆಳವಾದ ಅಂತಸ್ಸತ್ವವಿದೆ; ಸಾಂದ್ರವಾದ ಸ್ವಾನುಭವವಿದೆ; ಸಾರ್ವಕಾಲಿಕ ವ್ಯಾಪಕತೆ ಇವೆ. ಇದರ ಉತ್ತಮ ಉದಾಹರಣೆ 'ಅಗ್ಗದ ಮದುವೆ'.

ಕೇವಲ ಇನ್ನೂರು ರೂಪಾಯಿಗಳಲ್ಲಿ ಮಗಳ ಮದುವೆಯನ್ನು ಮುಗಿಸ ಬೇಕೆಂದು ಲೀಲಾಜಾಲವಾಗಿ ಲೆಕ್ಕಹಾಕಿದ ವೆಂಕಟರಮಣಯ್ಯನವರು ಹೂಡದ ಹಂಚಿಕೆಗಳಿಲ್ಲ, ಯೋಜಿಸದ ಉಪಾಯಗಳಿಲ್ಲ, ಆಡದ ಬೇಳುವ ಮಾತುಗಳಿಲ್ಲ. ಮದುವೆಯ ಸ್ಥಳವನ್ನು ಪಟ್ಟಣದಿಂದ ಹಳ್ಳಿಗೆ ಬದಲಾಯಿಸಿದರು, ಒಟ್ಟಿಬರೆಗಳನ್ನು ಕಡಿಮೆ ಮಾಡಿದರು, ಅಡಿಗೆಯವನ ಆವಶ್ಯಕತೆ ಇಲ್ಲವೆಂದರು, ವಾಲಗವಿಲ್ಲದ ಲಗ್ನಪತ್ರಿಕೆಯಿಲ್ಲದ ಸರಳ ವಿವಾಹ ನಡೆಸುತ್ತೇನೆಂದರು. ಯೋಜನೆಯೇನೋ ಆಕರ್ಷಕ. ಆದರೆ ಕಾರ್ಯರೂಪಕ್ಕಿಳಿಯುವಾಗ ಬಯಸಿದ್ದು ಒಂದಾದರೆ, ಆದದ್ದು ಮತ್ತೊಂದು. ದೊಡ್ಡ ಕುಟುಂಬದವರಾದ ಅವರ ಮನೆ ಮದುವೆಯೆಂದು ಕೇಳಿ ಕುತೂಹಲದಿಂದ ಸುತ್ತ ಮುತ್ತ ಊರಿನವರು ನೊತ್ತನೊತ್ತವಾಗಿ ಬಂದು ತುಂಬಿದರು. ವಿವಾಹ ರಂಗ ಹಳ್ಳಿಯಿಂದ ಪಟ್ಟಣಕ್ಕೆ ಅನಿವಾರ್ಯವಾಗಿ ಬದ ಲಾಗಬೇಕಾಗಿ ಬಂತು. ತಮ್ಮ ಘನತೆಗೆ ಗೌರವಕ್ಕೆ ಕುಂದು ಬಾರದಂತೆ ನಾಲ್ಕು ಜನ ಹೌದೆನ್ನುವಂತೆ ಕಾರ್ಯನಡೆಸಲೇ ಬೇಕಾದ ಪ್ರಸಂಗ ಬಂದು ಅಡಚಣೆಗಳು ಅಪಾರವಾದವು, ಪರದಾಟ ಅನಾನುಕೂಲತೆ ವಿಪರೀತವಾಯಿತು, ಖರ್ಚು ಒಂದಕ್ಕೆ ನಾಲ್ಕರಷ್ಟಾಯಿತು. ಆದರೂ ವೈಭವ ಮಂಕಾಯಿತು, ಆನಂದ ಕಡಿಮೆ ಯಾಯಿತು. ಸೂಜಿಕಣ್ಣಿನಲ್ಲಿ ಉಳಿಸುವ ಲೆಕ್ಕಹಾಕಿ ದಬ್ಬಳದ ಕಣ್ಣಿನಲ್ಲಿ ಸುರಿಯು ಬಿಟ್ಟಂತಾಯಿತು. ಕತೆಯ ಉದ್ದಕ್ಕೂ ಲಘುವಾದ ಅಕುಟಿಲವಾದ ಮನೋ ಲ್ಲಾಸಗೊಳಿಸುವ ರಮ್ಯ ರಂಜನೀಯವಾದ ನವುರುಹಾಸ್ಯ ಹರಿಯುತ್ತಿದೆ. ಹಳ್ಳಿಯಲ್ಲಿ ಖರ್ಚು ಕಡಿಮೆಯಾಗುವುದೆಂದು ಭಾವಿಸಿದ ಅವರು ಪಡುವ ಪರದಾಟ, ಅವ್ಯವಸ್ಥೆ; ಪಟ್ಟಣಕ್ಕೆ ಹೋಗಬೇಕಾಗಿ ಬಂದ ಮೇಲೆ ದುಡ್ಡಿಗೆ ಅದಕ್ಕೆ ಇದಕ್ಕೆ ಅವರು ಓಡಿಯಾಡುವ, ಮನಸ್ಸಿಲ್ಲದಿದ್ದರೂ ಅನಿವಾರ್ಯವಾಗಿ ಒಂದಕ್ಕೆ ಹತ್ತರಷ್ಟು ತೆರಬೇಕಾಗಿ ಬಂದ ಪರಿಸ್ಥಿತಿ ಒಂದೆಡೆ ನಗೆಯನ್ನುಕ್ಕಿಸಿದರೆ ಮತ್ತೊಮ್ಮೆ ಸಹಾನು ಭೂತಿಯನ್ನು ಚಿಮ್ಮಿಸುತ್ತವೆ. ಈ ಸನ್ನಿವೇಶಗಳು ಅತ್ಯಂತ ಸ್ವಾಭಾವಿಕವಾಗಿ ಸಚಿತ್ರವಾಗಿ ಸಶಕ್ತವಾಗಿ ಮೂಡಿ ಬಂದಿವೆ. ವೆಂಕಟರಮಣಯ್ಯ, ಲಾಯರು ಶಾಮರಾಯರು, ಅವರ ತಾಯಿ—ಈ ಪಾತ್ರಗಳು ವಿಶಿಷ್ಟಗುಣ ಸಂಪನ್ನವಾಗಿ ಸ್ವಭಾವ ಸಂಪುಷ್ಟವಾಗಿ ಮೈವೆತ್ತಿವೆ. ಹಳ್ಳಿ ಮತ್ತು ಪಟ್ಟಣಗಳಲ್ಲಿನ ಸಂಪ್ರದಾಯ ಗಳು, ಒಳಿತು ಕೆಡುಕುಗಳು, ಭಾವ ಸ್ವಭಾವಗಳು ಸಹಜ ರಮ್ಯ ಅಭಿವ್ಯಕ್ತಿ ಯನ್ನು ಪಡೆದಿವೆ. ಮದುವೆ 'ಅಗ್ಗವಾಗಿ ನಡೆಯಿತೆಂಬ ಸಮಾಧಾನವಿಲ್ಲ. ಖರ್ಚಾದರೂ ಚಿಂತೆಯಿಲ್ಲ ಚೆನ್ನಾಗಿ ನಡೆಯಿತೆಂಬ ಸಂತೋಷ ಮೊದಲೇ ಇಲ್ಲ

ಅಂತು ನಡೆಪೇನೊ ನಡೆಯಿತು' ಎಂಬ ಮುಕ್ತಾಯದ ಮಾತುಗಳು ಔಚಿತ್ಯ ಪೂರ್ಣವಾಗಿವೆ. ಅಂತು 'ಮದುವೆ ಮಾಡಿ ನೋಡು, ಮನೆ ಕಟ್ಟಿ ನೋಡು' ಎಂಬ ಗಾದೆಗೆ ಉತ್ತಮ ನಿದರ್ಶನವಾಗಿ ಈ ಕತೆ ನಿಲ್ಲುತ್ತದೆ.

ಬಂಗಲೆ ಮನೆಯ ವಾಸದ ಮೋಹಕ್ಕೆ ಒಳಗಾಗಿ ಅವರ್ಣನೀಯವಾದ ಅತಿ ವಿಚಿತ್ರ ಅನುಭವಗಳನ್ನು ಪಡೆಯಬೇಕಾಗಿ ಬಂದ ಆವರಣ ಪ್ರಧಾನವಾದ ಮನೋ ವಿಶ್ಲೇಷಣಾತ್ಮಕ ಕತೆ 'ಬಂಗಲಿಯ ವಾಸ'.

ಈ ಬಂಗಲೆಯ ವಾತಾವರಣವೇ ಗಭೀರ ಭೀಕರ. ಅದರ ವರ್ಣನೆ ಮೈ ಜುಮ್ಮೆನಿಸುತ್ತದೆ: 'ಸುತ್ತಲೂ ದೊಡ್ಡ ಕಾಂಪೌಂಡು; ಅದರಲ್ಲಿ ಎಲ್ಲೋ ಎರಡು ಮೂರು ಮಾತ್ರ ಎತ್ತರವಾದ ಪ್ರೇತಾಕಾರದ ಬಡಕಲು ಮರಗಳು. ಅವುಗಳಲ್ಲಿ ಹೆಚ್ಚು ಕೊಂಬೆಗಳೂ ಎಲೆಗಳೂ ಇಲ್ಲ–ಅವು ಉದುರಿ ಕೆಳಗೆ ಬಿದ್ದು ಒಣಗಿ ಹೋಗಿದ್ದವು; ಸ್ವಲ್ಪ ಗಾಳಿ ಬಂದರೂ ಅವು ಸರಿಯುತ್ತ ಮರ ಮರ ಶಬ್ದಮಾಡು ತ್ತಿದ್ದವು ಎದುರಿಗೆ, ಯಾವಾಗಲೋ ಹುವ್ವಿನ ಗಿಡಗಳನ್ನು ಹಾಕಿದ್ದು ಅವುಗಳ ಗುರುತುಗಳು ಕಾಣುತ್ತಿದ್ದವು; ಒಂದು ಜಾಜಿಯ ಬಳ್ಳಿ ಮಾತ್ರ ಪೊದೆಪೊದೆಯಾಗಿ ಗಂಟು ಗಂಟಾಗಿ ನಿಂತಿತ್ತು; ಅದರಲ್ಲಿ ಹೂ ಇಲ್ಲ....'–ಈ ವರ್ಣನೆ ಆ ಮನೆಯ ಪ್ರೇತಕಳೆಯನ್ನು, ಸಂತೋಷ ನೆಮ್ಮದಿಗಳ ಸಮಾಧಿಯ ಅವಶೇಷಗಳನ್ನು ತುಂಬ ಶಕ್ತಿಪತ್ತಾಗಿ ಮನಂಬುಗುವಂತೆ ಅಭಿವ್ಯಕ್ತಿಸುತ್ತದೆ. ಮನೆಯ ಹೊರಾವರಣ ದಂತೆಯೇ ಒಳ ವಾತಾವರಣವೂ, ಮನೆಯಲ್ಲಿರುವವರ ನಡವಳಿಕೆಯೂ ಅತಿ ವಿಚಿತ್ರವಾಗಿವೆ. ಕಥಾನಾಯಕ ಮೊಟ್ಟಮೊದಲು ದರ್ಶಿಸಿದ್ದು ಅಮಂಗಳ ಕಾರಿಣಿಯಾದ ವಿಧವೆ. ಆ ಮನೆಯ ಯಜಮಾನನ ಇರವೂ ಅಸಾಧಾರಣವೇ. ಅವನ ಮುಳ್ಳು ಮುಳ್ಳಾದ ಗಡ್ಡ, ಶೋಭೆ ಬಂದ ಸಿಡುಬಿನ ಹಳ್ಳಗಳ ಮುಖ, ಸುತ್ತಿದ ತುಂಡು ಪಂಚೆ, ಕೊಳಕಾದ ದಿಂಬು, ಬೆಳಕನ್ನು ಕಂಡರೆ ಹೆದರುವ ಮನೋಭಾವ–ಇವೆಲ್ಲವೂ ಯಾವುದೋ ಅಜ್ಞಾತಭಯದಿಂದ ಪುದುರುಗುಟ್ಟುವ ಭೂತವಶನಾದ ವ್ಯಕ್ತಿಯಂತೆ ಕಾಣಿಸುತ್ತವೆ. ಆ ಮನೆಯಲ್ಲಿನ ಎಲ್ಲರೂ ಯಾವುದೋ ನಿಗೂಢ ಪಾಪದ ಭೀತಿಯಿಂದ ಅಶಾಂತರಾಗಿ ಸದಾಸಂಶಯಿತ ಮನರಾಗಿ ವ್ಯವಹರಿ ಸುತ್ತಿರುವಂತೆ ಕಾಣುತ್ತದೆ. ಎಂಥವರ ಹೃದಯದಲ್ಲೂ ಭಯದ ಸಂಚಾರ ವಾಗುವಂತಹ ಈ ಪರಿಸರ ಸೃಷ್ಟಿ ತುಂಬ ಪರಿಣಾಮಕಾರಿಯಾಗಿದೆ.

ಶಾಂತಿ ಸಂತೋಷ ಉಲ್ಲಾಸಗಳ ಪ್ರತೀಕವಾದ ಬೆಳದಿಂಗಳ ರಾತ್ರಿಯಲ್ಲಿ ಭಯ ಸಂಶಯಗಳ ಬೀಜವಾದ ಆಕೃತಿಯೊಂದನ್ನು ಕಾಣುವುದು, ಆ ಮನೆಯಲ್ಲಿ ಹಿಂದೆ ನಡೆದು ಹೋದ ಯಾವುದೋ ಅಕೃತ್ಯವನ್ನು ಸೂಚಿಸುತ್ತದೆ. ಅಂತೆಯೇ ಅದು ಮನೆಯಲ್ಲಿ ವಾಸಿಸಲು ಬಂದವರ ನೆಮ್ಮದಿಗೆ ಕುಟ್ಟಿ ಹುಳುವೂ ಆಯಿತು. ಅಧೈರ್ಯದ ಮನಸ್ಸು ಅಶಾಂತಿ ಅತೃಪ್ತಿಗಳ ಆಗರವೆಂಬುದನ್ನು ಇದು ಧ್ವನಿಸು ತ್ತದೆ. ಬಿಸಿಲ ಮಚ್ಚಿನ ಮೇಲೆ ಶತಪಥ ತಿರುಗುವ ಯಾರನ್ನೋ ಕಂಡದ್ದು,

ಅದನ್ನು ಕೇಳಿದಾಗ ಮನೆಯುವನ ಮುಖದಲ್ಲಿ ಗಾಬರಿ ಕಂಡದ್ದು, ರಾತ್ರಿಯ ಒಂದು ಹೊತ್ತಿನಲ್ಲಿ ಕೇಳಿದ ವಿಕಾರ ಕಿರಿಚು, ರಸ್ತೆಯ ದೀಪವೂ ಹೋಗಿರುವ ಕುಟುಕು ಮಳೆಯ ಕತ್ತಲೆ, ಭಾವ ಮೈದುನನ ಮುಖ ನೋಡುತ್ತಿದ್ದಂತೆಯೇ ಯಾವುದೋ ಸತ್ತಿದ್ದ ಭೂತ ಎದ್ದುಬಂದಂತೆ ಭಯಂಕರವಾಗಿ ಕಿರಿಚಿಕೊಳ್ಳುವುದು ಇವೆಲ್ಲವೂ ಆ ಮನೆಯುವರ ಮಾನಸಿಕ ಭೀತಿಯ ಘೋರಸ್ವರೂಪವನ್ನು ಹೃದಯ ವನ್ನು ಹೆಪ್ಪುಗಟ್ಟಿಸುವಂತೆ ಬಣ್ಣಿಸುತ್ತವೆ. ಕೊನೆಗೆ ಗೊತ್ತಾಗುತ್ತದೆ: ಆ ಮುದಿ ವಿಧವೆ ತನ್ನ ಭಾವನ ಮಗನನ್ನು ಕೊಂದಿದ್ದಳಂತೆ! ಇದನ್ನು ಬಾಯಿಬಿಟ್ಟು ಹೇಳದೆ ಹೌದೋ ಅಲ್ಲವೋ ಎನ್ನುವಂತೆ ಬೇರೊಬ್ಬರಿಂದ ಲೇಖಕರು ಸೂಚಿಸಿರುವುದ ರಲ್ಲೇ ತುಂಬ ಅರ್ಥವಿದೆ, ಪರಿಣಾಮವಿದೆ. ಯಾವುದೋ ಆಸೆಯಿಂದ ಯಾವುದೋ ಕಾಲದಲ್ಲಿ ಮಾಡಿದ ತಿದ್ದಿಕೊಳ್ಳಲಾರದ ತಪ್ಪು ದುರ್ಬಲ ಮಾನಸರ ಜೀವನ ದುದ್ದಕ್ಕೂ ಭೇತಾಳನಾಗಿ ಕಾಡಿ ಹೇಗೆ ಅವರ ಸರ್ವಸುಖ ಶಾಂತಿಸಮಾಧಾ ಗಳನ್ನು ಸಮಾಧಿಮಾಡಿ ಇರಬಾರದ ಸಾಯುಬಾರದ ತ್ರಿಶಂಕುನರಕಸ್ಥಿತಿಗೆ ಅವರನ್ನು ಈಡುಮಾಡುತ್ತದೆ ಎನ್ನುವುದರ ಸಜೀವ ಸಮರ್ಥ ಪ್ರಭಾವಕಾರೀ ನಿರೂಪಣೆ ಇಲ್ಲಿದೆ. ಲೇಖಕರ ಸೂಕ್ಷ್ಮನಿರೀಕ್ಷಣಾ ಸಾಮರ್ಥ್ಯಕ್ಕೆ ಪರೇಂಗಿತ ಪರಿಜ್ಞಾನಕ್ಕೆ ಅಗಾಧ ಅನುಭವಕ್ಕೆ ಸತ್ವಯುತ ನಿರೂಪಣಾ ಕೌಶಲಕ್ಕೆ ಭಾಷಾ ಪ್ರಭುತ್ವಕ್ಕೆ ಇದು ಒಂದು ಉಜ್ವಲಸಾಕ್ಷಿಯಾಗಿ ನಿಲ್ಲುತ್ತದೆ. ಆದರೆ ಇಲ್ಲಿಯೂ ಕಥಾಂತ್ಯದಲ್ಲಿನ 'ನನಗೆ ದೆವ್ವ ಭೂತಗಳೆಂದರೆ ನಂಬಿಕೆಯೇನೋ ಇಲ್ಲ' ಮೊದಲಾದ ವಿವರಣೆ ಕಲಾದೃಷ್ಟಿಯಿಂದ ಅನಗತ್ಯವಾಗಿತ್ತು. ಇಲ್ಲಿಯ ಹಲವು ಕತೆಗಳಲ್ಲಿ ಮುಕ್ತಾಯದ ವಿವರಣೆ ಒಂದು ದೋಷವಾಗಿ ಸಂಪ್ರದಾಯವಾಗಿ ಪರಿಣಮಿಸಿ ಪರಿಣಾಮದ ತೀವ್ರತೆಯನ್ನು ಕುಂದಿಸಿಬಿಡುತ್ತದೆ.

ಸೇರು ಸವಾಸೇರುಗಳಾಗಿ ನಿಂತು ಚಾತುರ್ಯ ನಟನೆಗಳಲ್ಲಿ ಒಬ್ಬರನ್ನೊಬ್ಬರು ಮೀರಿಸಿ ಒಬ್ಬರೊಬ್ಬರ, ಸಾಮರ್ಥ್ಯ ಬುದ್ಧಿವಂತಿಕೆಗಳನ್ನು ಅರಿತುಕೊಂಡ, ಅರಿತು ಮೆಚ್ಚಿಕೊಂಡ, ಮೆಚ್ಚಿ ಸ್ನೇಹಿತರಾದ ಅಮಲ್ದಾರರು ಮತ್ತು ಡೆಪ್ಯುಟಿ ಕಮಿಷನ ರಿಬ್ಬರ ಯುಕ್ತಿ ಪ್ರತಿಯುಕ್ತಿಗಳ ಹಾಸ್ಯಪ್ರಧಾನವಾದ ಸರಸ ಸುಂದರ ಚಿತ್ರ 'ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ'

ಕತೆಯ ತಲೆಬರಹವೇ ಅತ್ಯಂತ ರಮ್ಯವಾಗಿದೆ; ಅರ್ಥಗರ್ಭಿತವಾಗಿದೆ. ಇಲ್ಲಿಂದಲೇ ಆರಂಭವಾಗುವ ಸಹಜ ಸಲೀಲ ತಿಳಿಹಾಸ್ಯ ಕತೆಯುದ್ದಕ್ಕೂ ತನ್ನ ಕಂಪಿನ ಮೋಹಕ ಜಾಲವನ್ನು ಹರಡಿದೆ; ಅಲ್ಲಲ್ಲಿ ಕಟಕಿ ವಿಡಂಬನೆಗಳ ಗೊಂಚಲನ್ನು ನಿರ್ಮಿಸಿದೆ; ತಲೆದೂಗಿಸುವ ಚಾತುರ್ಯದ ಚಿತ್ರಗಳನ್ನು ಬಿಡಿಸಿದೆ. ಅಮಲ್ದಾರ ರೆಂದರೆ ತಾಲ್ಲೂಕಿನ ಅನಭಿಷಿಕ್ತ ಸರ್ವಾಧಿಕಾರಿಯಾಗಿದ್ದ ಕಾಲದಲ್ಲಿ, ಉನ್ನತಾಧಿ ಕಾರಿಗಳ ನಿರ್ದೇಶನವನ್ನೂ ಹೇಗೆ ಕಡೆಗಣಿಸಿ ಆಡಳಿತದ ಸಮರ್ಥ ನಿರ್ವಹಣೆಗೆ ಗಮನವೀಯದೆ ಮುಗ್ಧ ಅವಿದ್ಯಾವಂತ ಜನತೆಯ ಕುಂದುಕೊರತೆಗಳಿಗೆ ಕುರುಡಾಗಿ

ಸ್ವಾರ್ಥಲಾಲಸೆಯ ಶೃಂಗದಲ್ಲಿ ಸಿಂಹಾಸನಸ್ಥರಾಗಿ ನಿರಂಕುಶ ನಾಗಗಳಾಗಿ ವ್ಯವಹರಿಸುತ್ತಿದ್ದರೆಂಬುದನ್ನೂ, ನಿಸ್ವಾರ್ಥಿ ಪ್ರಾಮಾಣಿಕ ಮೇಲಾಧಿಕಾರಿಗಳೂ ಸಹ ಇಂಥವರ ಕುಟಿಲವ್ಯೂಹದಲ್ಲಿ ಸಿಕ್ಕಿ ನಿಸ್ಸಹಾಯರಾಗುವಷ್ಟು ಇವರ ಪ್ರಾಬಲ್ಯ ಹೆಚ್ಚಿ ಹೇಗೆ ಆಡಳಿತಯಂತ್ರ ಶಿಥಿಲವಾಗಿತ್ತೆನ್ನುವುದನ್ನೂ ಅತ್ಯಂತ ಮಾರ್ಮಿಕವಾಗಿ ಸ್ವಾಭಾವಿಕವಾಗಿ ಶಕ್ತಿಯುತವಾಗಿ ಈ ಕತೆ ನಿರೂಪಿಸುತ್ತದೆ.

'ಹಲ್ಲಿಗೆ ಕಲ್ಲು ಸಿಕ್ಕಿದಹಾಗೆ, ಕತ್ತರಿಗೆ ಗೋಟು ಸಿಕ್ಕಿದರೆ, ಗೋಟಿನಲ್ಲಿ ಕತ್ತರಿ ಸಿಕ್ಕಿಕೊಂಡು ಕತ್ತರಿಯ ಬಾಯಿ ಹೋಗುತ್ತದೆ'—ಹಾಗೆ, ಘಾಟಿ ಅಮಲ್ದಾರರಿಗೆ ಮಹಾಘಾಟಿ ಡೆಪ್ಯುಟಿಕಮಿಷನರು ಸಿಕ್ಕಿದರು. ಹೇಳದೆ ಕೇಳದೆ ಸುಳಿವು ಕೊಡದೆ ಡೆಪ್ಯುಟಿಕಮಿಷನರು ಅಮಲ್ದಾರರ ಕಛೇರಿಗೆ ಬಂದರೆ ಅದು ಇಸ್ಪೀಟಾಟದ ಕ್ಲಬ್ಬಾಗಿತ್ತು. ಇವರು ಬಂದ ಸುಳಿವು ತಿಳಿದ ಚತುರ ಅಮಲ್ದಾರ ಹೊಟ್ಟೆನೋವೆಂದು ಮಲಗಿದರೆ ಸಾಹೇಬರು ಹೊಟ್ಟೆ ಬಿರಿಯ ಹರಳೆಣ್ಣೆ ಕುಡಿಸಿದರು; ಆಟಕ್ಕೆ ತಕ್ಕ ಬೈರೂಪ, ವೇಷಕ್ಕೆ ತಕ್ಕ ಭಾಷೆ ಉಪಯೋಗಿಸಿದರು. ಕೊನೆಗೆ ಈ ಸಾಹೇಬರ ಮುಂದೆ ತಮ್ಮ ಆಟ ನಡೆಯದೆಂದು ತೀರ್ಮಾನಿಸಿದ ಖದೀಮ ಅಮಲ್ದಾರ ಕಛೇರಿಯ ತನಿಖೆಗೆ ಒಪ್ಪಲೇಬೇಕಾಯಿತು ಅನಿವಾರ್ಯವಾಗಿ; ಆತುರಾತುರದಲ್ಲಿ ಲೆಕ್ಕಪತ್ರಗಳು ಸಿದ್ಧವಾದವು. ಇವರ ಈ ಎಲ್ಲ ಥಳಕು ಹುಳುಕುಗಳೂ ಆಟ ಮಾಟಗಳೂ ಚೆನ್ನಾಗಿ ಅರ್ಥವಾದರೂ ಆಗದವರಂತೆ ನಟಿಸಿ ಅವರ ಅಂತರಂಗಕ್ಕೆ ಎಚ್ಚರಿಕೆಯ ಚಾಟಿಏಟುಕೊಟ್ಟು ಪರೋಕ್ಷ ಮಾತುಕತೆಗಳ ವ್ಯಂಗ್ಯದಿಂದ ಚುಚ್ಚಿ ಬುದ್ಧಿ ಕಲಿಸಿದರು. ಆದರೆ ಬಹಿರಂಗವಾಗಿ ಅವರಿಗೆ ಅಪಮಾನಮಾಡದೆ ಮುಸುಕಿನ ಗುದ್ದು ಕೊಟ್ಟು ಅವರ ತಪ್ಪು ಅವರಿಗೇ ಅರಿವಾಗುವಂತೆ ಮಾಡಿದ್ದರಲ್ಲೇ ಡೆಪ್ಯುಟಿ ಕಮಿಷನರ ಆಡಳಿತ-ಚಾಣಾಕ್ಷತನ ಎದ್ದು ಕಾಣುತ್ತದೆ. ಈ ಘಟನೆಯ ನಂತರವೂ ಅಮಲ್ದಾರರೊಡನೆ ಸ್ನೇಹವನ್ನೂ ಪತ್ರವ್ಯವಹಾರವನ್ನೂ ಇಟ್ಟುಕೊಂಡಿದ್ದು ಅವರ ಔದಾರ್ಯವನ್ನು ತೋರಿಸುತ್ತದೆ. ತಪ್ಪುಮಾಡುವುದು ಮಾನವಸಹಜ ಸ್ವಭಾವ. ಆದರೆ ಅದನ್ನು ಬಹಿರಂಗವಾಗಿ ಅಪಮಾನಕಾರಕವಾಗಿ ಪ್ರದರ್ಶಿಸಿದರೆ ರೊಚ್ಚು ದ್ವೇಷ ಕೆರಳುತ್ತದೆ, ಬದಲಾಗಿ ಸೂಚ್ಯವಾಗಿ ರಹಸ್ಯವಾಗಿ ಅದನ್ನು ಕಾಣಿಸಿದರೆ ತಪ್ಪು ತಿಳಿದುಕೊಳ್ಳಲು ಅನುಕೂಲವಾಗುತ್ತದೆ. ಮುಂದೆ ಅಂಥವನು ತಪ್ಪುಮಾಡುವುದು ಅಪರೂಪ. ಈ ಸೂಕ್ಷ್ಮ ಆಡಳಿತ ನೈಪುಣ್ಯವನ್ನು ಈ ಪ್ರಸಂಗದಲ್ಲಿ ಪ್ರದರ್ಶಿಸಿ ಯೂರೋಪೀಯ ಸಾಹೇಬ ತನ್ನ ದಕ್ಷತೆಯನ್ನು ಪ್ರಕಟಿಸಿದ್ದಾನೆ. ಇದು ಲೇಖಕರ ವಿಚಾರದ ಗತಿಯನ್ನೂ ಬಿಂಬಿಸುತ್ತದೆ. ಅಂತೂ ಹಾಸ್ಯದ ಹಂದರದಲ್ಲಿ ಉನ್ನತ ತತ್ವವೊಂದನ್ನು ಪ್ರತಿಪಾದಿಸುವ ಕಲಾಪೂರ್ಣಕತೆ ಇದು.

'ಅತ್ತೆ' ಭಾರತೀಯ ಕೌಟುಂಬಿಕ ಜೀವನದಲ್ಲಿ ಪರಂಪರಾಗತವಾಗಿ ಬಂದಿರುವ ಸಂಕುಚಿತ ಮನೋಧರ್ಮದ ನಿರಂಕುಶ ಅಧಿಕಾರಶಾಹಿಯ ಸಂಕೇತ.

'ಅದೊಂದು ಮನುಷ್ಯ ವ್ಯಕ್ತಿಯೇ ಅಲ್ಲ, ಮನಸ್ಸಿನ ವೃತ್ತಿ ಎಂದರೂ ಎನ್ನಬಹುದು . . . ಅತ್ತೆಯ ಮುಖ್ಯಲಕ್ಷಣ ದರ್ಪ; ಆಳಬೇಕು; ಅನ್ನಬೇಕು, ಅಂದು ಆಳಬೇಕು, ಆಳಿ ಅನ್ನಬೇಕು, ಅಂದು ಆಳಿ ದಂಡಿಸಬೇಕು, ಎಂಬುದೇ ಪ್ರಧಾನವಾದ ಮನೋವೃತ್ತಿ '—ಎಂಬ ವಿವರಣೆಯಲ್ಲಿ ಅತ್ತೆತನದ ಪ್ರಮುಖ ಲಕ್ಷಣಗಳನ್ನು ಲೇಖಕರು ಪ್ರಸ್ತಾಪಿಸಿದ್ದಾರೆ. ಇಂತಹ ಕಾರಣವಿಲ್ಲದೆ ಕೆರೆದು ಗಾಯಮಾಡಿಕೊಳ್ಳುವ, ಪ್ರಸಂಗವಿಲ್ಲದೆ ಪರದೂಷಣೆ ಮಾಡುವ, ಎದುರಾಗದಿದ್ದರೂ ಇದ್ದ ಬದ್ದವರನ್ನೆಲ್ಲಾ ತನ್ನ ಬಾಯ್ಗತ್ತಿಗೆ ಬಲಿಕೊಡುವ ಅತ್ತೆಯೊಬ್ಬಳ ದಿನಚರಿಯನ್ನು ಅತ್ಯಂತ ನಾಟಕೀಯವಾಗಿ ಕ್ರಿಯಾಪೂರ್ಣವಾಗಿ ಚಾತುರ್ಯಭರಿತವಾಗಿ ತರ್ಕಬದ್ಧವಾಗಿ ಇಲ್ಲಿ ಶಿಲ್ಪಿಸಿದ್ದಾರೆ. ಇದೊಂದು ರಮ್ಯ ದೃಶ್ಯಕಾವ್ಯವೇ ಸರಿ. ಮೊದಲನೆಯ ವಿವರಣಾತ್ಮಕ ಮುನ್ನುಡಿ, ನಂತರದ ಆರು ದೃಶ್ಯಗಳು ತುಂಬ ಕಲಾತ್ಮಕವಾಗಿವೆ. ಮೊದಲನೆ ದೃಶ್ಯದಲ್ಲಿ ಶಾಲೆಗೆ ಹೋಗುವ ಮಗನೊಡನೆ, ಎರಡನೆಯದರಲ್ಲಿ ಯಜಮಾನನಾದ ಮಗನೊಡನೆ, ಮೂರನೆಯದರಲ್ಲಿ ಶಾಲೆಗೆ ಹೋಗುವ ಮಗಳೊಡನೆ, ನಾಲ್ಕನೆಯದರಲ್ಲಿ ಸೊಸೆಯೊಡನೆ, ಐದರಲ್ಲಿ ತಂಗಿಯೊಡನೆ, ಆರರಲ್ಲಿ ಮತ್ತೆ ಸೊಸೆಯ ವಿಚಾರವಾಗಿ ಮಗಳೊಡನೆ ಅವರು ನಡೆಸುವ ಸಂವಾದಗಳು ಚತುರಮಾತಿನ ಚಕಮಕಿಯಾಗಿವೆ. ಅವರ ಮಾತಿನ ಖಡ್ಗಕ್ಕೆ ಅವರಿವರೆಂಬ ಭೇದವಿಲ್ಲ, ನಿರ್ದಾಕ್ಷಿಣ್ಯವಾಗಿ ಎಲ್ಲರನ್ನೂ ಅದು ಛೇದಿಸುತ್ತದೆ; ಅವರು ಮರುಮಾತನಾಡದಂತೆ ಬಾಯಿಗೆ ಕುಕ್ಕೆ ಕಟ್ಟುತ್ತದೆ. ಕೂತರೆ ತಪ್ಪು, ನಿಂತರೆ ತಪ್ಪು; ಅಂದರೆ ತಪ್ಪು, ಅನ್ನದಿದ್ದರೆ ತಪ್ಪು; ಬಂದರೆ ತಪ್ಪು, ಹೋದರೆ ತಪ್ಪು—ಅಂತು ಎಲ್ಲರಲ್ಲಿಯೂ ಎಲ್ಲದರಲ್ಲಿಯೂ ತಪ್ಪನ್ನೇ ಕಾಣುವ ಅವರ ದೋಷೈಕ ದೃಷ್ಟಿ, ಕಾರ್ಯಕಾರಣ ಸಂಬಂಧವಿಲ್ಲದೆ ಭೋರ್ಗರೆದು ಧುಮುಕುವ ಮಾತಿನ ಜಲಪಾತ, ಅದರಲ್ಲಿರುವ ಹೃದಯಭೇದಕ ಹರಿತ, ಕಟಕಿಯ ಮುಳ್ಳು ತುಂಬ ರಸೋಜ್ವಲವಾಗಿ ಕುತೂಹಲಕರವಾಗಿ ವರ್ಣರಂಜಿತವಾಗಿ ಶಕ್ತಿಸಮನ್ವಿತವಾಗಿ ಸೃಷ್ಟಿಗೊಂಡಿವೆ. ವಾದ ಪ್ರತಿವಾದಗಳ ಮಿಂಚಿನ ರಭಸ ಮೋಹಕವಾಗಿದೆ. ಕೇವಲ ಸಂಭಾಷಣೆಯ ಸೊಗಸಿನಲ್ಲಿಯೇ ಒಂದು ಕಥಾ ಕಟ್ಟಡವನ್ನು ನಿರ್ಮಿಸಿರುವ ತಂತ್ರಕೌಶಲ ಅದ್ಭುತವಾಗಿದೆ. ಇದು ಲೇಖಕರ ಲೋಕಾನುಭವದ ಆಳವನ್ನು ಪ್ರತಿನಿಧಿಸುತ್ತದೆ.

"ಸಂಸಾರಿಯಾದರೆ ಸುಖ, ಸನ್ಯಾಸಿಯಾದರೆ ಕಷ್ಟ ಎನ್ನುವುದು ಸುಳ್ಳು. ಕಷ್ಟಸುಖಗಳೆಲ್ಲಾ ಅವರವರ ಅದೃಷ್ಟ—'ಪ್ರಾರಬ್ಧ'. ಸುಖ ಪ್ರಾರಬ್ಧವಿರುವ ಸನ್ಯಾಸಿ ಕಾಡಿಗೆ ಹೋದರೂ ನಿತ್ಯ ಅಭ್ಯಂಗನ ಔತಣ ಉಪಚಾರ ತಪ್ಪುವುದಿಲ್ಲ. ಸುಖಪ್ರಾಪ್ತಿ ಇಲ್ಲದಿರುವವನು ಸಂಸಾರ ಕಟ್ಟಿಕೊಂಡರೆ ಅದು ದಕ್ಕುವುದಿಲ್ಲ."—ಈ ಸಹಜ ಸತ್ಯದ ಹಿನ್ನೆಲೆಯಲ್ಲಿ ರಚಿತವಾದ ಕತೆ 'ಊಟದಲ್ಲಿ ಉಪಚಾರ'.

ಊಟದ ವಿಷಯವನ್ನು ಉದಾಹರಣೆಯಾಗಿ ತೆಗೆದುಕೊಂಡು, ಇಂತಹ

ಸಾಮಾನ್ಯ ವಿಷಯದಲ್ಲಿಯೂ ಅದೃಷ್ಟಬಲ ಸರಿಯಾಗಿಲ್ಲದಿದ್ದರೆ ಕೈಗೆಬಂದ ತುತ್ತು ಹೇಗೆ ಬಾಯಿಗೆ ಬರುವುದಿಲ್ಲ, ಬಂದರೂ ಹೇಗೆ ಆನಂದದಾಯಕವಾಗಿರುವುದಿಲ್ಲ ಎಂಬುದನ್ನು ಒಬ್ಬ ಸನ್ಯಾಸಿ ಮತ್ತು ಒಬ್ಬ ಸಂಸಾರಿಯ ಆಹಾರ ಸೇವನೆಯ ನಿದರ್ಶನಗಳಿಂದ ಲೇಖಕರು ಇಲ್ಲಿ ಚಿತ್ರಿಸಿದ್ದಾರೆ. ಸಂಸಾರದ ಸರ್ವ ಸುಖಭೋಗ ಗಳನ್ನೂ ತ್ಯಾಗಮಾಡಿ ಸರಳ ಜೀವನವನ್ನು ವರಿಸಿದ ಸನ್ಯಾಸಿಯ ಊಟದ ವೈಭವ ವೈಖರಿ ರಾಜಭೋಜನವನ್ನೂ ನಾಚಿಸುವಂಥದು. ಆದರೆ ಸುಖವನ್ನನುಭವಿಸ ಲೆಂದೇ ಸಂಸಾರವನ್ನು ಕಟ್ಟಿಕೊಂಡ ದುರದೃಷ್ಟವಂತ ಸಂಸಾರಿಯ ಊಟೋಪ ಚಾರಗಳ ಸ್ಥಿತಿ ಅಧೋಗತಿ, ಅತೃಪ್ತಿದಾಯಕ. ಸ್ನಾನಮಾಡುವುದರಿಂದ ಹಿಡಿದು, ಊಟಕ್ಕೆ ಎಲೆ ಹಾಕುವುದರಲ್ಲಿ, ಲೋಟಕ್ಕೆ ನೀರು ತುಂಬುವುದರಲ್ಲಿ, ಹಣೆಗೆ ಸಾದಿಡುವುದರಲ್ಲಿ, ಅನ್ನ ಮಾಡುವುದರಲ್ಲಿ ಸಾರು ಮಜ್ಜಿಗೆ ಚಟ್ನಿ ತಯಾರಿಸು ವುದರಲ್ಲಿ—ಎಲ್ಲದರಲ್ಲೂ ಏನೋ ಒಂದೊಂದು ಅರೆಕೊರೆ, ಅರುಚಿ, ಅತೃಪ್ತಿ; ಜೊತೆಗೆ ಊಟದ ಪ್ರತಿಹಂತದಲ್ಲೂ ಪತ್ನಿಯಿಂದ ಏನಾದರೊಂದು ಅಡ್ಡಮಾತು, ಕೊಂಕುಮಾತು, ವಾದ, ಪ್ರತಿಭಟನೆ. ನೆಮ್ಮದಿಯಾಗಿ ನಿರುಂಬಳವಾಗಿ ಒಂದು ತುತ್ತು ಅನ್ನ ತಿನ್ನಲೂ ಅವನಿಗೆ ಅವಕಾಶವಿಲ್ಲ. ಇದು ನಿತ್ಯರಾಮಾಯಣ. ಗಂಡ ಹೆಂಡತಿ ಸಹೃದಯರಾಗಿದ್ದರೆ ಸಹಾನುಭೂತಿಪರರಾಗಿದ್ದರೆ ಅನುಭವಿಗಳಾಗಿದ್ದರೆ ವಿಶಾಲಮನಸ್ಕರಾಗಿದ್ದರೆ ಇಂತಹ ಸಾಂಸಾರಿಕ ಗೊಂದಲ ಗಲಿಬಿಲಿಗಳು ಹುಟ್ಟಿದಲ್ಲೇ ಸಾಯುತ್ತವೆ; ಇಲ್ಲದಿದ್ದರೆ 'ಎತ್ತು ಏರಿಗೆ ಕೋಣ ನೀರಿಗೆ' ಎಂಬಂತಾಗಿ ಸಹಜಕೊರತೆಗಳ ಜೊತೆಗೆ ಸೌಮನಸ್ಯದ ಅಭಾವವೂ ಸೇರಿ ಕಷ್ಟ ಕಾರ್ಪಣ್ಯಗಳ ಅತೃಪ್ತಿ ಅಶಾಂತಿಗಳ ಕಂದರ ಅಗಲವಾಗುತ್ತಾ ಹೋಗುತ್ತದೆ. ಈ ತತ್ತ್ವವನ್ನು ಮನೋಹರವಾಗಿ ಅಭಿವ್ಯಂಜಿಸುವ ಕತೆಯಿದು. ಹಿಂದಿನ ಕತೆ ಯಂತೆಯೇ ಇದೂ ದೃಶ್ಯರೂಪವಾಗಿದ್ದು ಸಹಜ ಜೀವಂತ ಸಂಭಾಷಣೆಯ ಕಾಂತಿ ಯಿಂದ ಕಂಗೊಳಿಸುತ್ತದೆ. ಸಂಸಾರಿಯ ಊಟದ ವೈಖರಿ ಸನ್ಯಾಸಿಯ ಊಟದ ವೈಭವದೊಡನೆ ವೈದೃಶ್ಯವನ್ನು ಕಲ್ಪಿಸಿ ಓದುಗರಮೇಲೆ ಅಪಾರ ಪ್ರಭಾವ ವನ್ನುಂಟುಮಾಡುತ್ತದೆ.

ಮಾನವಜೀವನ ಬಹುಮಟ್ಟಿಗೆ ದೈವನಿಯಂತ್ರಿತ. ಅವನ ಅನುಗ್ರಹ ಆಶೀರ್ವಾದಗಳು ಯಾವಕಾಲದಲ್ಲಿ ಯಾವರೂಪದಲ್ಲಿ ಬರುತ್ತವೆಂಬುದನ್ನು ತಿಳಿಯು ವುದು ಅಸಾಧ್ಯ. ಅವನ ಸಂಕಲ್ಪವನ್ನು ಬದಲಾಯಿಸುವ ಹಠ ಮಾಡಿದರೆ ಆಗ ಬಾರದ್ದು ಆಗುತ್ತದೆ. ಆದುದರಿಂದ ಅವನು ಪ್ರೀತಿಯಿಂದ ಅನುಗ್ರಹಿಸಿದಷ್ಟರಿಂದ ತೃಪ್ತರಾಗುವುದು ಕ್ಷೇಮಕರ—ಎಂಬ ತತ್ತ್ವವನ್ನು ಸಾರುವ ಸಾಂಕೇತಿಕ ಕಥೆ 'ಗುರುಗಳ ಮಹಿಮೆ'. ಕೇವಲ ಹೆಣ್ಣುಮಕ್ಕಳನ್ನೇ ಹಡೆದು ಗಂಡು ಮಕ್ಕಳಿಗಾಗಿ ಹಲುಬಿ ಹಂಬಲಿಸಿ ನಿರಾಶಳಾಗಿ, ಕೊನೆಗೆ ಕೋರಿದ್ದನ್ನು ಕೊಡುವರೆಂದು ಪ್ರಕೀರ್ತಿತರಾದ ಗುರುಗಳೊಬ್ಬರ ಬಳಿಗೆ ಹೋಗಿ ತನಗೆ ಪುತ್ರ ಸಂತಾನವಾಗ

ಬೇಕೆಂದು ಹಟ ಹಿಡಿದು, ಫಲರೂಪವಾಗಿ ಇದ್ದ ಮಗಳನ್ನೂ ಕಳೆದುಕೊಂಡು ಅವಳ ತಬ್ಬಲಿ ಮಗನನ್ನು ಸಾಕಬೇಕಾಗಿ ಬಂದ ದಾರುಣ ಪರಿಸ್ಥಿತಿಗೆ ಪಕ್ಕಾದ ಮಾತೆಯೊಬ್ಬಳ ಕಹಿ ಅನುಭವದ ಕರುಳು ಕತ್ತರಿಸುವಂಥ ಕತೆ 'ಗುರುಗಳ ಮಹಿಮೆ'.

ನಮ್ಮ ಸಾಮಾಜಿಕ ಜೀವನದಲ್ಲಿ ಗುರುಗಳ ಬಗೆಗಿರುವ ಶ್ರದ್ಧೆ ಪ್ರಶ್ನಿಸಲಾಗದಂಥದು. ಹಾಗೆ ಪ್ರಶ್ನಿಸುವವರು ನಾಸ್ತಿಕರಾಗುತ್ತಾರೆ. ಈ ಶ್ರದ್ಧೆ ಎಷ್ಟು ಗಾಢವಾಗಿ ಬೇರೂರಿದೆಯೆಂದರೆ ಆ ಸನ್ಯಾಸಿಯೇ ತನಗೆ ಆ ಶಕ್ತಿಯಿಲ್ಲವೆಂದು ಸಾರಿದರೂ ಅದನ್ನು ನಿಷ್ಠಾವಂತ ಜನ ನಂಬುವುದಿಲ್ಲ. ಭಗವಂತನೇ ಗುರುಗಳ ಆಜ್ಞಾಧಾರಕನಾಗಿರುತ್ತಾನೆಂದು ಅವರ ಅಚ್ಚಳಿಯದ ನಂಬಿಕೆ. ಇಂಥದೇ ನಂಬಿಕೆಯನ್ನುಳ್ಳವಳು ಈ ಕತೆಯ ತಾಯಿ. ಇಷ್ಟಲ್ಲದೆ ಎಷ್ಟು ಹೆಣ್ಣುಮಕ್ಕಳಾದರೂ ಒಬ್ಬ ಪುತ್ರನಿಲ್ಲದಿದ್ದರೆ ಸದ್ಗತಿಯಿಲ್ಲವೆಂಬ ಸಂಪ್ರದಾಯದತ್ತ ನಂಬಿಕೆಯೂ ಈಕೆಯ ಬೇಡಿಕೆಗೆ ಬೇರಾಗುತ್ತದೆ. ಹೀಗಾಗಿ ಗುರುಗಳನ್ನು ಕಾಡಿಸಿ ಪೀಡಿಸಿ ತನ್ನ ಬಯಕೆಯನ್ನು ಪೂರೈಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಈಕೆಯ ಹಟಮಾರಿತನದಿಂದ ನಿರುಪಾಯನಾದ ಗುರು ಅನುಗ್ರಹಿಸಿದ. ಆದರೆ ಆ ಅನುಗ್ರಹ ಬೇರೊಂದು ಫಲ ನೀಡಿತು. ಗಂಡುಮಕ್ಕಳಿಲ್ಲದ ಈ ತಾಯಿಯ ನಂಬಿಕೆ, ಹಾರೈಕೆ, ಹಟ, ವಾದವೈಖರಿ, ಮುಗ್ಧಮನೋಭಾವ, ದುಃಖ ತೀವ್ರತೆ ನಿಚ್ಚಳವಾಗಿ ಹೃತ್ಸ್ಪರ್ಶಿಯಾಗಿ ಸ್ವಭಾವ ರಮ್ಯವಾಗಿ ಮೂಡಿಬಂದಿವೆ. ಗುರುವಿನ ಉದಾತ್ತ ಹೃದಯ, ಪರರ ದುಃಖಕ್ಕಾಗಿ ಮರುಗುವ ನಿಷ್ಕಪಟತನ, ತನ್ನಲ್ಲಿ ಯಾವ ಮಹಿಮೆಯನ್ನೂ ಆರೋಪಿಸಿಕೊಳ್ಳದೆ ಇದ್ದುದನ್ನು ಇದ್ದಂತೆಯೇ ಹೇಳುವ ಸರಳ ಸತ್ಯಪ್ರಿಯತೆ–ಅವನ ಬಗ್ಗೆ ಅಪಾರ ಗೌರವವನ್ನು ಮೂಡಿಸುತ್ತವೆ. 'ಕೆಲವರು ಅವರವರ ಇಷ್ಟಪೂರ್ತಿಮಾಡಿಕೊಂಡು ಹೋದರಲ್ಲಾ' ಎಂದರೆ ಆತ 'ಗಿಡದಮೇಲೆ ಹಣ್ಣಾಗುತ್ತಿದ್ದುದ್ದನ್ನು ಇಲ್ಲಿಗೆ ತಂದು ಅಡೆಹಾಕಿಕೊಂಡು ಹೋದರು, ಅಷ್ಟೆಯೇ' ಎನ್ನುತ್ತಾನೆ. ಮಗಳನ್ನು ಕಳೆದುಕೊಂಡು ಮೊಮ್ಮಗನಮೇಲೆ ತಾತ್ಸಾರ ತಾಳಿದ್ದವಳಿಗೆ 'ಸಂಸಾರವೂ ಒಂದು ತೋಟದ ಹಾಗೆ ತಾಯಿ! ಬಲಿತ ಮರಗಳು ಬೆಳೆದುಕೊಂಡು ಹೋಗುತ್ತವೆ; ಎಳೆಯ ಸಸಿಗಳನ್ನು ನೋಡಿಕೊಳ್ಳದೆ ಒಣಗಿಸಿದರೆ ಹೇಗೆ?' ಎಂದು ಸಂತೈಸುತ್ತಾನೆ. ಇಂತಹ ಅನುಭವಸಮೃದ್ಧವಾದ ಮಾತುಗಳ ಹಿಂದೆ ಲೋಕಕಾರುಣ್ಯದ ವಿಶ್ವಪ್ರೇಮದ ನಾಡಿ ಮಿಡಿತವನ್ನು ಕಾಣಬಹುದಾಗಿದೆ. ಅರ್ಥಗರ್ಭಿತ ಧ್ವನಿಗರ್ಭಿತ ಸರಳ ಸುಂದರ ಸಂವಾದ, ಸಂವಾದದ ಮೂಲಕವೇ ಕತೆ ಹೇಳಿ ಗಾಢಪ್ರಭಾವ ಬೀರುವ ಕಲಾಕೌಶಲ ತುಂಬ ಮೆಚ್ಚುವಂಥವು. 'ತಗೊಳ್ಳಿ, ಕುಂಕುಮ ಇಟ್ಟುಕೊಳ್ಳಿ . . . !' ಎನ್ನುವ ಮುಕ್ತಾಯದ ಮಾತು ತುಂಬ ಅರ್ಥಪೂರ್ಣವಾದದ್ದು.

ಕೊನೆಯ ಹಾಗೂ ದೀರ್ಘವಾದ ಕತೆ 'ಭೀಮಣ್ಣನ ಬುದ್ಧಿವಂತಿಕೆ.' ಸ್ವಂತ

ಪರಿಶ್ರಮ ಪ್ರಯತ್ನ ಬುದ್ಧಿವಂತಿಕೆಗಳಿಂದ ಸಣ್ಣ ಗುಮಾಸ್ತನಾಗಿ ಕೆಲಸಕ್ಕೆ ಸೇರಿದ ವ್ಯಕ್ತಿಯೊಬ್ಬ ಆಡಿಟರ್ ಆಗಿ, ಬೆಂಗಳೂರಿನಲ್ಲಿ ಮನೆ ಕಟ್ಟಿಸಿ, ಬಾಡಿಗೆಯ ಅತಿ ಯಾಸೆಯಿಂದ ಬವಣೆ ಪಟ್ಟ ಕತೆಯಿದು. ಭೀಮಣ್ಣನ ನಿಷ್ಠೆ, ಪ್ರಾಮಾಣಿಕತೆ, ನಾರಾಯಣರಾಯರ ಸಹಾಯ ಮನೋಭಾವ, ಸರಕಾರೀ ಅಧಿಕಾರಿಗಳ ವ್ಯವ ಹಾರ ಇವುಗಳ ಸಾಭಾವಿಕ ಪೃಥಕ್ಕರಣೆ ಇಲ್ಲಿದೆ. ಭೀಮಣ್ಣ ಹಂತ ಹಂತವಾಗಿ ತನ್ನ ಅಧಿಕಾರಸ್ಥಾನದಲ್ಲಿ ಮೇಲೇರಿ ಸ್ವಾಧ್ಯಯನದಿಂದ ಮೆಟ್ರಿಕ್ಯುಲೇಷನ್ ಪಾಸುಮಾಡಿ ಒಂದು ಮನೆಗೆ ಒಡೆಯನಾಗುವ ಸನ್ನಿವೇಶ ಪ್ರಯತ್ನ ಪ್ರಾಮಾಣಿ ಕತೆಗಳಿಗೆ ಫಲವುಂಟು ಎಂಬುದನ್ನು ತೋರಿಸುತ್ತದೆ. ಮೇಸ್ತ್ರಿ ರಾಮಣ್ಣನಿಗೆ ಬಾಡಿಗೆಗೆ ಮನೆಕೊಟ್ಟಿದ್ದ ಭೀಮಣ್ಣ, ಮೋಸಗಾರ ಮಂಜುನಾಥಯ್ಯನ ಬೇಳುವೆ ಮಾತಿಗೆ ಬಲಿಬಿದ್ದು ಹೆಚ್ಚು ಬಾಡಿಗೆಯ ಆಸೆಗಾಗಿ ಮನಸ್ಸು ಬದಲಾಯಿಸುತ್ತಾನೆ. ಆದರೆ ತನ್ನ ದುರಾಸೆಗೆ ತಕ್ಕ ಪ್ರತಿಫಲವನ್ನೂ ಆತ ಅನುಭವಿಸಬೇಕಾಯಿತು. ಎರಡು ತಿಂಗಳು ಸಲೀಸಾಗಿ ಮೇಲೆ ಬಿದ್ದು ಬಾಡಿಗೆ ಹಣವನ್ನು ಕೊಟ್ಟ ಮಂಜು ನಾಥಯ್ಯ ಮೂರನೆ ತಿಂಗಳಿಂದಲೇ ಚೌಕಾಸಿಗೆ ಶುರು ಮಾಡುತ್ತಾನೆ. ದಿನ ದಿನಕ್ಕೆ ತಿಂಗಳಿಂದ ತಿಂಗಳಿಗೆ ಅವನ ಬಣ್ಣ ಬದಲಾಗುತ್ತದೆ. ಅವನ ಸುಳ್ಳಿನ ಸರಪಣಿಗಳು, ಡೌಲು ಮಾತಿನ ಆಕರ್ಷಣೆ, ವಿವಿಧ ವಿಳಾಸಗಳು, ತನ್ನ ಅಂತ ರಂಗ ಗೊತ್ತಾದನಂತರ ಅವನು ತಾಳುವ ಮೊಂಡುತನ ಅವನ ಗೋಮುಖ ವ್ಯಾಘ್ರತ್ವಕ್ಕೆ ಸಾಕ್ಷಿಯಾಗಿ ಸ್ಪಷ್ಟವಾದ ನೈಜವಾದ ಅಭಿವ್ಯಕ್ತಿಯನ್ನು ಪಡೆದಿವೆ. ಬೀದಿಯಲ್ಲಿ ಹೋಗುವ ಮಾರಿಯನ್ನು ಮನೆಗೆ ಹೊಗಿಸಿಕೊಂಡ ಭೀಮಣ್ಣ ಅವನನ್ನು ಹೊರದೂಡಲು ಪಡುವ ಪರದಾಟ ಕನಿಕರವನ್ನುಕ್ಕಿಸುತ್ತದೆ. ಮಂಜು ನಾಥಯ್ಯನ ಹೆಂಡತಿಯ ಸರಳತನ, ಸೌಜನ್ಯ, ಮುಗ್ಧತೆಗಳು ಅವನ ಗುಣಗಳೊಡನೆ ವೈದೃಶ್ಯವನ್ನು ಕಲ್ಪಿಸಿ ಅವಳ ಬಗೆಗಿನ ಸಹಾನುಭೂತಿಯನ್ನು ಹೆಚ್ಚಿಸು ತ್ತವೆ. ಕೊನೆಗೂ ಭೀಮಣ್ಣನ ಬುದ್ಧಿವಂತಿಕೆಗೇ ವಿಜಯದೊರಕಿತು. ಆದರೂ ಆತ ಮಂಜುನಾಥಯ್ಯನ ಹೆಂಡತಿಯ ಬಗ್ಗೆ ತೋರುವ ಆದರ ಔದಾರ್ಯ ಮೆಚ್ಚುವಂಥದು. ಒಟ್ಟಿನಲ್ಲಿ 'ಎಂಥ ಬುದ್ಧಿವಂತನಾದರೂ ಇತರರಿಂದ ಇನ್ನೂ ಬುದ್ಧಿ ಕಲಿಯುವುದು ಇದ್ದೇ ಇರುತ್ತದೆ: ಒಳ್ಳೆಯವರಿಗಿಂತ ಕೆಟ್ಟವರಿಂದ ಕಲಿಯು ವುದು ಇರುತ್ತದೆ'–ಎಂಬ ತತ್ವವನ್ನು ಈ ಕತೆ ಪ್ರತಿಪಾದಿಸುತ್ತದೆ. ಸಹಜವಾದ ಸನ್ನಿವೇಶ ಚಿತ್ರಣ, ಸೊಗಸಾದ ಅರ್ಥಪೂರ್ಣ ಸಂಭಾಷಣೆ, ಹಂತ ಹಂತವಾದ ಕತೆಯ ಬೆಳವಣಿಗೆ–ಎಲ್ಲವೂ ಇದ್ದರೂ ಇದು ಹಿಂದಿನ ಕತೆಗಳಂತೆ ಬಿಗಿಯಾಗಿರದೆ ಶಿಥಿಲವಾಗಿದೆ. ಮಧ್ಯೆ ಮಧ್ಯೆ ಬರುವ ಲೇಖಕರ ವಿವರಣೆಗಳು–ನಿದರ್ಶನಕ್ಕೆ ಭೀಮಣ್ಣ ಮೆಟ್ರಿಕ್ಯುಲೇಷನ್ ಪಾಸುಮಾಡಿದ ಸಂದರ್ಭ–ಸ್ವಲ್ಪ ಎಲ್ಲೆ ಮೀರಿ ಕತೆಯ ಏಕಮುಖತೆಗೆ, ನಿರ್ದಿಷ್ಟ ಪರಿಣಾಮಕ್ಕೆ, ಕಲಾ ಸೌಂದರ್ಯಕ್ಕೆ ಭಂಗ ತರುತ್ತವೆ. ಇನ್ನೂ ಅಡಕವಾಗಿದ್ದಲ್ಲಿ, ಮಾತಿನ ಸಂಯಮ ಸ್ವಲ್ಪ ಹೆಚ್ಚಾಗಿದ್ದಲ್ಲಿ

ಪರಿಣಾಮರಮಣೀಯತೆ ಮಿಗಿಲಾಗಿ ಇದು ಇನ್ನೂ ಸುಂದರವಾದ ಕೃತಿಯಾಗುತ್ತಿತ್ತು.

೪

ಇಷ್ಟೆಲ್ಲ ಕತೆಗಳನ್ನು ಅವಲೋಕಿಸುವಾಗ ಮೊದಲ ನೋಟಕ್ಕೆ ಅನ್ನಿಸುವ ಅಂಶವೆಂದರೆ, ಇಲ್ಲಿ ಯಾವ ಕೃತಕ ತಂತ್ರದ ಕಸರತ್ತೂ ಇಲ್ಲ ಎನ್ನುವುದು. ಎಲ್ಲ ಕತೆಗಳೂ ತುಂಬ ಸಹಜವಾಗಿ ನೇರವಾಗಿ ಕ್ರಿಯಾಪೂರ್ಣವಾಗಿ ಆರಂಭವಾಗಿ ಮೆಟ್ಟಲು ಮೆಟ್ಟಲಾಗಿ ಬೆಳೆಯುತ್ತಾ ಹೋಗುತ್ತವೆ. ಕತೆಗಳ ಅಂತರಂಗದಲ್ಲೂ ಯಾವ ತಿರುವು ಮುರುವುಗಳೂ ಸುಳಿಸುತ್ತುಗಳೂ ಘರ್ಷಣೆ ಪ್ರತಿಘರ್ಷಣೆಗಳೂ ಅನಿರೀಕ್ಷಿತ ಆಸ್ಫೋಟಗಳೂ ಕಾಣಬರುವುದಿಲ್ಲ. ಒಪ್ಪವಾಗಿ ಓರಣವಾಗಿ ಕಪ್ಪೆಯ ಜೀವನದಂತೆ ಬೆಳೆ ಬೆಳೆಯುತ್ತಾ ಕಥಾಶರೀರ ಕಲಾಸೌಂದರ್ಯವನ್ನು ಮೈಗೂಡಿಸಿಕೊಳ್ಳುತ್ತಾ ವಿಕಾಸವಾಗುತ್ತಾ ಹೋಗುತ್ತದೆ. ಆದರೂ ವಸ್ತುವಿಗೆ ತಕ್ಕಂತೆ ಆರಂಭವೂ ವಿವಿಧವಾಗಿರುವುದನ್ನು ಕಾಣಬಹುದು. 'ನನ್ನ ಸ್ನೇಹಿತ' ಮತ್ತು 'ಜ್ಯೋತಿಷಕ್ಕೆ ಬಹುಮಾನ' ಕತೆಗಳು ನೇರವಾಗಿ ವ್ಯಕ್ತಿ ಚಿತ್ರಣದ ವೇಗಯುತವಾದ ಸಶಕ್ತ ವರ್ಣನೆಯಿಂದ ಮೊದಲಾಗುತ್ತವೆ. 'ಜ್ಯೋತಿಷ್ಯಕ್ಕೆ ಬಹುಮಾನ' ಕತೆಯ ಆರಂಭ ಹೀಗಿದೆ: "ನಮ್ಮ ನರಹರಿ ಬಹು ಪ್ರಚಂಡ— ಬಲದಲ್ಲೂ ಅಷ್ಟೇ, ಬುದ್ಧಿಯಲ್ಲಿಯೂ ಅಷ್ಟೇ." ಇದು ನರಹರಿಯ ಇಡೀ ವ್ಯಕ್ತಿತ್ವದ ಮೇಲೆ ಬೆಳಕುಚೆಲ್ಲಿ ಮುಂದಿನ ಕತೆಯಮೇಲೆ ಪ್ರಭಾವ ಬೀರುತ್ತದೆ. 'ಶಾನುಭೋಗನ ಪುಣ್ಯ' ನೇರವಾಗಿ ಸಂಭಾಷಣೆಯಿಂದಲೇ ಷುರುವಾಗುತ್ತದೆ; ಪ್ರಾರಂಭದ "ತಾಯಿ," ಎನ್ನುವ ಸಂಬೋಧನೆ ಇಡೀ ಕತೆಯಲ್ಲಿ ಹೊಳಹು ಗೊಡುತ್ತದೆ. 'ದೇವರು ಇದ್ದಾನೆ,' 'ಹುಚ್ಚೋ ಅಲ್ಲವೋ,' 'ಅಗ್ಗದ ಮದುವೆ' ಮುಂತಾದುವು ಕಥಾಂತರಂಗಮುಖಿಯಾದ ಅನುಭವ ಪ್ರಧಾನವಾದ ಕುತೂಹಲದ ಮೊನೆಯ ಮಾತುಗಳಿಂದ ಮೊದಲಾದರೆ, 'ಅತ್ತೆ,' 'ಗುರುಗಳ ಮಹಿಮೆ' ಮತ್ತು 'ಊಟದಲ್ಲಿ ಉಪಚಾರ' ಕತೆಗಳು ಕೇವಲ ರಸಭರಿತ ಸಂವಾದ ಶಕ್ತಿಯಿಂದಲೇ ಅರಳಿ ನಿಂತಿವೆ. ಅಂತೆಯೇ ಈ ಸಂಕಲನದ ಎಲ್ಲ ಕತೆಗಳೂ ಸೂಕ್ತವಾದ ಸುಂದರವಾದ ಸೂಚ್ಯವಾದ ಪ್ರಾರಂಭಪರಿಣತಿಯಿಂದ ಮಿನುಗುತ್ತವೆ. ಆದರೆ ಅಂತ್ಯದ ಬಗ್ಗೆ ಇದೇ ಮಾತನ್ನು ಹೇಳುವಂತಿಲ್ಲ. 'ಶಾನುಭೋಗನ ಪುಣ್ಯ,' 'ನಾಗರ ಪಂಚಮಿ,' 'ಗುರುಗಳ ಮಹಿಮೆ' ಕತೆಗಳ ಧ್ವನಿಯುಕ್ತ ಕಲಾತ್ಮಕ ಮುಕ್ತಾಯ ಉಳಿದವುಗಳಲ್ಲಿಲ್ಲ. ಅವುಗಳು ಅನವಶ್ಯಕವಾಗಿ ಲಂಬಿತವಾಗಿ ತಮ್ಮ ಪರಿಣಾಮ ತೀವ್ರತೆಯನ್ನೂ ಧ್ವನಿಶಕ್ತಿಯನ್ನೂ ಕುಗ್ಗಿಸಿಕೊಂಡಿವೆ. ನಾಲ್ಕಾರು ಕತೆಗಳಿಗಾಗುವಷ್ಟು ವಸ್ತುಸಾಂದ್ರತೆ 'ಅತ್ತೆ'ಯಲ್ಲಿ ಅಸ್ವಾದ್ಯದೃಶವಾಗಿ ಅಡಕಗೊಂಡಿದೆ. 'ಶ್ಯಾನುಭೋಗನ ಪುಣ್ಯ'ದಲ್ಲಿ ಕತೆಯೊಳಗೊಂದು ಕತೆ ಮೂಡಿಸುವ, ಅದರಿಂದ

ಮೂಲ ಕತೆಯ ಸತ್ವವನ್ನು ಹಿಗ್ಗಿಸುವ, ನವವಿಧಾನವಿದೆ. ಹೀಗೆ ತಂತ್ರಕ್ಕಾಗಿಯೇ ತಂತ್ರ ಬರದಿದ್ದರೂ ಕತೆಯ ಅನಿವಾರ್ಯ ಸ್ವಾಭಾವಿಕ ಚೌಕಟ್ಟಾಗಿ ಚರ್ಮವಾಗಿ ವಸ್ತುವಿಗೆ ತಕ್ಕಂಥ ವಿವಿಧ ರೂಪಧಾರಣೆ ಮಾಡಿದೆ.

*

ಶ್ರೀ ಶಾಸ್ತ್ರಿಗಳ ಕತೆಗಳಲ್ಲಿನ ಮತ್ತೊಂದು ವಿಶಿಷ್ಟ ಗುಣವೆಂದರೆ ಸಮುಚಿತವೂ ಸಮರ್ಪಕವೂ ಮನೋಹರವೂ ಭಾವಸಂಪನ್ನವೂ ಆದ ಉಪಮೆ, ದೃಷ್ಟಾಂತಗಳನ್ನೊಳಗೊಂಡ ಪ್ರಭಾವಪೂರ್ಣ ವರ್ಣನೆಗಳು. ಈ ವರ್ಣನೆಗಳು ಕತೆಯ ಒಂದು ಅವಿಭಾಜ್ಯ ಅಂಗವಾಗಿ ಧ್ವನ್ಯಾರ್ಥ ದ್ಯೋತಕವಾಗಿ ರಸಭಾವ ಪರಿಪೋಷಕವಾಗಿದ್ದು ಕತೆಗೆ ಒಂದು ಅನನ್ಯ ಪ್ರಭಾಪರಿವೇಷವನ್ನು ಗಾಂಭೀರ್ಯ ಗುರುತ್ವಗಳನ್ನು ಉತ್ತಮ ಕಾವ್ಯತ್ವವನ್ನು ದೊರಕಿಸಿಕೊಟ್ಟಿವೆ; ಅಷ್ಟೇ ಹಿತಮಿತವಾಗಿಯೂ ಚೊಕ್ಕವಾಗಿಯೂ ಇವೆ. ಇವು ಎಲ್ಲಿಯೂ ಹಾಳತ ತಪ್ಪುವುದಿಲ್ಲ, ತೂಕ ಮೀರುವುದಿಲ್ಲ, ಮೂಲಕತೆಯ ಭಾವಸೌಂದರ್ಯವನ್ನು ಮರೆಸುವ ಅಪಾರದರ್ಶಕ ಭಿತ್ತಿಯಾಗುವುದಿಲ್ಲ. ಅಂತೆಯೇ ಇವಕ್ಕೆ ಹೆಚ್ಚು ಬೆಲೆಯಿದೆ, ಗೌರವವಿದೆ. "ಅವನ ಸಂಸಾರದಲ್ಲಿ ಕಷ್ಟಪಟ್ಟು ಬಾವಿಯನ್ನು ತೆಗೆದು ಕಲ್ಲು ಮಣ್ಣುಗಳನ್ನು ರಾಶಿಹಾಕಿಯಾಯಿತೇ ಹೊರತು ಬಾವಿಯಲ್ಲಿ ನೀರು ಮಾತ್ರ ಬೀಳಲಿಲ್ಲ." 'ಕೆಲವರು ಮದುವೆ ಮಾಡಿಕೊಳ್ಳುವುದು ಕಾಲಿಗೆ ಮುಳ್ಳು ಚುಚ್ಚಿಕೊಳ್ಳುವಹಾಗೆ; ಇನ್ನು ಕೆಲವರು ಮದುವೆಮಾಡಿಕೊಳ್ಳುವುದು ಕಲ್ಲಿನಮೇಲೆ ಕಲ್ಲಿಟ್ಟು ಕುಟ್ಟುವ ಹಾಗೆ; ಇನ್ನು ಕೆಲವರು—ಎಲ್ಲಿಯೋ ಕೆಲವರು—ಮದುವೆಮಾಡಿಕೊಳ್ಳುವುದು ಎರಡು ಹೂಗಳು ಸೇರುವಹಾಗೆ'—'ನನ್ನ ಸ್ನೇಹಿತ' ಕತೆಯ ಕಿಟ್ಟಣ್ಣನ ವಿಷಮದಾಂಪತ್ಯವನ್ನು ವರ್ಣಿಸುವ ಬಗೆಯಿದು. 'ದೇವರು ಈ ಜೀವದ ಯಂತ್ರವನ್ನು ಸೃಷ್ಟಿಸಿದಾಗ ಯಾವುದೋ ಒಂದು ಮೊಳೆಯನ್ನು ಸರಿಯಾಗಿ ಹೊಡೆಯದೆ ಬಿಟ್ಟನೆಂದು ತೋರುತ್ತದೆ. ಏಕೆಂದರೆ ಈತನು ಕಲಿಯದ ವಿದ್ಯೆಯಿಲ್ಲ, ಕೈಹಾಕದ ಕೆಲಸವಿಲ್ಲ; ಆದರೆ ಹಿಡಿದಮೇಲೆ ಪಾಂಕ್ತವಾಗಿಮಾಡಿ ಮುಗಿಸಿದ್ದಿಲ್ಲ.' 'ನೀವು ಮಾತನಾಡುವುದೇ ಹೀಗೆ, ಸ್ವಾಮಿ! ಎರಡು ಮೂರು ಮೆಟ್ಟಲುಗಳನ್ನು ಬಿಟ್ಟು ಹಾರಿ ಹಾರಿ ಏಣಿಯನ್ನು ಹತ್ತಿಕೊಂಡು ಹೋಗುವಹಾಗೆ'—ನರಹರಿಯ ವ್ಯಕ್ತಿತ್ವವನ್ನು ಎಷ್ಟು ಸೊಗಸಾಗಿ ಈ ಸಾಲುಗಳು ಪ್ರತಿಮಿಸುತ್ತವೆ! 'ಅವರ ಮನೆತನವು ಈಗ ಸಿಡಿಲುಬಡಿದ ಮರವಂತೆ ಎಲ್ಲಾ ಬೋಳಾಗಿ ಎಲ್ಲೋ ಒಂದು ಕುಡಿ ಅಂಟಿಕೊಂಡಿದೆ.' 'ಶರತ್ಕಾಲದ ಜೆಳದಿಂಗಳಲ್ಲಿ ತಳತಳನೆ ಹೊಳೆಯುತ್ತ ಶಾಂತವಾಗಿ ಪ್ರವಹಿಸುವ ನದಿಯಂತೆ ಆ ಸಂಸಾರ ನಡೆಯುತ್ತಿತ್ತು'—ಶಾನುಭೋಗರ ಮನೆತನದ ಎರಡು ಮುಖಗಳನ್ನು ಚಿತ್ರಿಸುವ ರೀತಿಯಿದು. 'ದೇವರು ಇದ್ದಾನೆ' ಕತೆಯ ವೆಂಕಟೇಶಯ್ಯನ ವರ್ಣನೆಯಿದು: 'ಅದೇ ಶಿಸ್ತುಗಾರ ಪುಟ್ಟಸ್ವಾಮಿ ಈಗ ಫೆಲ್ಟ್‌ಕ್ಯಾಪ್‌ಗೆ ಬದಲಾಗಿ ಪೂರ್ತಿ ಎರಡು

ಬೆಟ್ಟು ಅಗಲ ಕಲಾಪತ್ತು ಇರುವ ರುಮಾಲು; ಕಸಿಮಾಡಿದ ಮೀಸೆ; ಅದಕ್ಕೆ ತಕ್ಕಹಾಗೆ ಮಿಕ್ಕದ್ದೆಲ್ಲಾ'—ವೆಂಕಟೇಶಯ್ಯನ ಮುಂದಿನ ಪರೋಪಕಾರದ ಮೌಲ್ಯವನ್ನು ಈ ಬಣ್ಣನೆ ಹೆಚ್ಚಿಸುತ್ತದೆ. 'ಹೆಂಗಸರ ಜನ್ಮವೇ ಹೀಗೆಂದು ತೋರುತ್ತದೆ. ಇದ್ದರೆ ದೇವಿಯರಂತೆ ಸ್ವರ್ಗಸುಖದಲ್ಲಿರುತ್ತಾರೆ, ಇಲ್ಲದಿದ್ದರೆ ಅವರ ಬಾಳು ನಾಯಿಯ ಬಾಳು.' 'ಅವಳ ಜೀವನದಲ್ಲಿ ಅರುಣೋದಯವಾಗಿ ಸೂರ್ಯನು ಹುಟ್ಟುವ ಸೂಚನೆಗಳು ಕಂಡು ಅಕಸ್ಮಾತ್ತಾಗಿ ಮಧ್ಯರಾತ್ರಿ ಬಂದುಬಿಟ್ಟಿತು.' 'ಹೂವನ್ನು ಹರಿದಾದರೂ ಹಾಕಬಹುದು. ಅದು ಕಂದಿಹೋಗುವುದನ್ನು ನೋಡುವುದು ಕಷ್ಟ'—ಪ್ರಭಾವಪೂರ್ಣವಾದ ಭಾವಗೀತೆಯಂತಿರುವ 'ನಾಗರ ಪಂಚಮಿ'ಯ ವಿಧವೆ ಶಾರದೆಯ ಬಾಳಿನ ಕಹಿಯ ತೀವ್ರತೆಯನ್ನು ಉಜ್ವಲವಾಗಿ ಪುಟಿದೆಬ್ಬಿಸುವ ವರ್ಣನೆಗಳಿವು. 'ಹುಚ್ಚೋ ಅಲ್ಲವೋ' ಕತೆಯ ಶಾಲಾ ಉಪಾಧ್ಯಾಯನ ವರ್ಣನೆ, 'ಅಗ್ಗದ ಮದುವೆ'ಯ ಹಳ್ಳಿಯ ಪರಿಸ್ಥಿತಿಯ ಚಿತ್ರ ತುಂಬ ಮೋಹಕವಾಗಿ ಅರ್ಥವತ್ತಾಗಿವೆ. 'ಊರಲ್ಲಿ ಕೋತಿಗಳ ಕಾಟದಿಂದ ಮನೆಗಳೆಲ್ಲವೂ ಒಂದರಿಗಳಾಗಿದ್ದುವು.' 'ರಿಪೀಟರ್ ಅಲಾರಂ ಟೈಂಪೀಸಿನಂತೆ ಅರ್ಧರ್ಧ ನಿಮಿಷ ಬಿಟ್ಟು ಬಿಟ್ಟು ಅದೇ ವಿಕಾರವಾದ ಕಿರಿಚಲು,' 'ಮದರಾಸಿನವರಿಗೆ ನಮ್ಮ ದೇಶ ರಸಬಾಳೆಯ ಹಣ್ಣಿನ ಹಾಗೆ,' ಮುಂತಾದ ಹೃದ್ಯ ಪರಿಣಾಮಕಾರೀ ಹೋಲಿಕೆಗಳು ಹೇರಳವಾಗಿವೆ. ಹಾಗೆಯೇ ಸನ್ಯಾಸಿಯ ಊಟದ ವರ್ಣನೆ, ಬಂಗಲೆಮನೆಯ ಮತ್ತು ಯಜಮಾನನ ವರ್ಣನೆ, ಮದ್ರಾಸಿನ ವಠಾರದ ರಾತ್ರಿಯ ವರ್ಣನೆ ಮುಂತಾದುವುಗಳು ಅತ್ಯಂತ ಸಜೀವವಾಗಿ ಸಶಕ್ತವಾಗಿ ನವನವೀನವಾಗಿದ್ದು ಕತೆಗಳ ಮೌಲ್ಯವನ್ನು ಅಧಿಕಗೊಳಿಸಿವೆ. ಇವು ಲೇಖಕರ ಕಲ್ಪನಾ ಶಕ್ತಿಗೂ ಸೂಕ್ಷ್ಮವಾದ ಲೋಕವೀಕ್ಷಣೆಗೂ ಔಚಿತ್ಯ ಪ್ರಜ್ಞೆಗೂ ಸುಂದರ ನಿದರ್ಶನಗಳಾಗಿವೆ.

೬

ಈ ಎಲ್ಲ ಕತೆಗಳ ಭಾವಸಂಪತ್ತಿಗೂ ಅರ್ಥಗೌರವಕ್ಕೂ ಪರಿಣಾಮ ರಮಣೀಯತೆಗೂ ಮುಖ್ಯಕಾರಣ ಅವರ ಅನನ್ಯ ವಿಶಿಷ್ಟವಾದ ಹಾಗೂ ಬಿಗಿಯೂ ಬಂಧುರವೂ ಆದ ಆದರ್ಶಶೈಲಿ. ಸಂಸ್ಕೃತ ಭಾಷಾ ವಿಶಾರದರಾದ ಅವರ ಬರವಣಿಗೆಯಲ್ಲಿ ಅನವಶ್ಯಕವೂ ಅರ್ಥಕ್ಲಿಷ್ಟವೂ ಅಹಿತವೂ ಆದ ಸಂಸ್ಕೃತ ಪದಗಳ ಡೊಂಬರಾಟವಿಲ್ಲ; ಉದ್ದುದ್ದನೆಯ ಸಮಾಸಗಳ ಸಾಲುಮೆರವಣಿಗೆಯಿಲ್ಲ; ಪುಟಗಟ್ಟಲೆ ಧುಮುಕಿ ಭೋರ್ಗರೆವ ಜಲಪಾತವಾಕ್ಯಗಳಿಲ್ಲ. ಕರ್ಣಮಧುರವಾದ ಅರ್ಥಪ್ರಸಾದಿಯಾದ ಭಾವವ್ಯಂಜಕವಾದ ಗಂಭೀರವಾದ ಲಲಿತ ಪದಮಂಜರಿ ಅವರ ಶೈಲಿಯ ಜೀವಾಳ. ಹಿತವಾದರೂ ಹರಿತವಾಗಿರುವ ಮೃದುವಾದರೂ ಬಿಗಿಯಾಗಿರುವ ಚಿಕ್ಕದಾದರೂ ಮೊನಚಾಗಿರುವ ಪದಗಳಿಂದ ಕೂಡಿದ ಪುಟ್ಟಪುಟ್ಟ

ವಾಕ್ಯಗಳು ಅವರ ಕತೆಗಳ ತುಂಬಾ ಪುಟಿಯುತ್ತವೆ. ಮೈಸೂರು ಕಡೆಯ ಮಧ್ಯಮವರ್ಗದ ವಿದ್ಯಾವಂತ ಸಮಾಜದ ಮನೆ ಮಾತನ್ನು ಸೊಗಸಾಗಿ ಸ್ವಾಭಾವಿಕವಾಗಿ ಅವರು ಬಳಸುತ್ತಾರೆ. ಅದರಲ್ಲಿ ಒಳ್ನುಡಿಗಳೂ, ಗಾದೆಗಳೂ, ದೃಷ್ಟಾಂತಗಳೂ, ಸ್ವಾನುಭವ್ಯಜನ್ಯವಾದ ಸುಲಭ ಸ್ಮರಣೀಯವಾದ ಸೂಕ್ತಿಗಳೂ ತುಂಬಿದ್ದು ಕಥನಕಲೆಗೆ ಒಂದು ಸಹಜತೆಯ ಸೊಗಡನ್ನು ಸವಿಯನ್ನು ತಂದು ಕೊಟ್ಟು ಅದರ ವ್ಯಾಪ್ತಿಯನ್ನು ವಿಕಾಸಗೊಳಿಸಿವೆ.

'ಹೊಟ್ಟೆ ನಿನ್ನಿಂದ ನಾಕೆಟ್ಟೆ'!; 'ಸೇವಾಂ ಶ್ವಪೃತ್ತಿಂ ವಿದು:', 'ಮನೋ ಜಯಂತು ಮಾಂಡವ್ಯಃ', 'ಎಲೆಕ್ಟ್ರಿಕ್ ದೀಪ, ನಲ್ಲಿಯ ನೀರು ಇವೆಲ್ಲಾ ನಂಬ ತಕ್ಕದಲ್ಲ', 'ಅವನ ಮನೆ ಎಂಟಿಮ್ಮೆಕರೆಯ', 'ಕಣ್ಣು ಕುರುಡಾದರೆ ಬಾಯಿ ಕುರುಡೇ', 'ಯೋಗಿ ಪಡೆದದ್ದು ಯೋಗಿಗೆ; ಜೋಗಿ ಪಡೆದದ್ದು ಜೋಗಿಗೆ', 'ಒಂದು ಕಾಸು ಕೊಡ್ತೀನಿ ಹಾಡು ದಾಸಯ್ಯ, ಎರಡು ಕಾಸು ಕೊಡ್ತೀನಿ ಬಿಡು ದಾಸಯ್ಯ', 'ಕಂತೆಗೆ ತಕ್ಕ ಬೊಂತೆ', 'ಹಸು ಸೊರು ಬಿಟ್ಟಹಾಗಾಯಿತು;—ಇನ್ನು ಎಷ್ಟು ಹಾಲು ಕರೆದರೂ ಬರುವುದು', 'ದುಡ್ಡು ಕೊಟ್ಟೇಯೆ—ಪ್ರಾಣ ಕೊಟ್ಟೇಯಾ?', 'ಕಟ್ಟಿಸಿದವರಿಗೆ ಒಂದೇ ಮನೆಯಾದರೆ, ಕಟ್ಟಿಸದಿದ್ದವರಿಗೆ ಊರೆಲ್ಲಾ ಮನೆ', 'ಇನ್ನೂ ಒಬ್ಬೊಬ್ಬರ ಮನೆಯ ಅನ್ನ ನೋಡಬೇಕು;—ಕೆಳಗೆ ಅಂಗಾರ, ಮೇಲೆ ಮಂತ್ರಾಕ್ಷತೆ, ಮಧ್ಯೆ ಗೋಪೀ ಚಂದನ ಅನ್ನುವ ಹಾಗೆ ಇರುತ್ತೆ', 'ಬಿರಿಯ ಉಂಡ ಬ್ರಾಹ್ಮಣ ಭಿಕ್ಷಕ್ಕೆ ಹೋದ', 'ಬಾಂಡ್ಲೆಯಿಂದ ಹಾರಿ ಬೆಂಕಿಗೆ ಬಿದ್ದ'—ಮುಂತಾದ ನೂರಾರು ಸಾಮತಿಗಳು ಗಾದೆಗಳು ಉಪಯೋಗವಾಗಿ ಅರ್ಥಸ್ಪಷ್ಟತೆಯನ್ನು ದೇಶೀಯ ಹೊಗರನ್ನು ಬನಿಬಿಗಿಗಳನ್ನು ಆತ್ಮೀಯತೆಯನ್ನೂ ಇಲ್ಲಿನ ಕತೆಗಳಿಗೆ ತಂದುಕೊಟ್ಟಿವೆ. ತಾಜೆ, ಜೋಲು ಬಿತ್ತು, ಕರಾವು, ಕುಳ, ಚಾಲೂಕು, ಭಾತಿ, ವಸ್ತು (ಪ್ರಾಣ), ಎಡವಟ್ಟು, ಮುಸುಂಡಿ, ದರವೇಸಿ, ಒಂದರಿ, ಲೊಟಗುಟ್ಟು, ಶೋಭೆ (ಊತ), ಮಖಂಡೆ, ಮಂದಳ, ಮೊಖಾಬಿಲೆ—ಮುಂತಾದ ಆಡು ನುಡಿಗಳ ಪ್ರಯೋಗ ಶೈಲಿಗೆ ಜೀವಂತಿಕೆ ಹೃದಯವಂತಿಕೆಗಳನ್ನು ತಂದಿವೆ. ಸಂವಾದದಲ್ಲೂ ಇದೇ ಬಗೆಯ ಕೌಟುಂಬಿಕ ಸಹಜವಾದ ಆತ್ಮೀಯಕಾಂತಿ ಮಿನುಗುತ್ತಿದೆ. ಉದಾ: "ಶ್ವಪಚರು, ಮಗು: ಶ್ವಪಚರು; ಮಡಿಯಿಲ್ಲ, ಮೈಲಿಗೆಯಿಲ್ಲ; ದಾನವಿಲ್ಲ, ಧರ್ಮವಿಲ್ಲ; ನಿಮ್ಮಮಾವ ಇದಾನೆ ನೋಡು, ಅವನ ಮುಖ ನೋಡಬಹುದೇ? ಕೈಬಿಟ್ಟುಕೊಟ್ಟರೆ ಬರುತ್ತೋ ಕೂಡಿಟ್ಟರೆ ಬರುತ್ತೋ ಮಗು? ಬರುವುದು ಹ್ಯಾಗೋ ಹೋಗುವುದೂ ಹಾಗೆ! ಮೂರು ಹೊತ್ತು ತಾರಾತಂಟಲು, ತಗರು ಬುಗುರು; ಸುಳ್ಳು ತಟವಟ, ಜೂಜು ದುರ್ಮಾರ್ಗತನ, ಮನೆಹಾಳುತನ ಇವೆಲ್ಲಾ ಕಲಿತುಕೊಂಡರೆ ದೇವರು ಹ್ಯಾಗಿರುತಾನೋ ಮನೇಲಿ?" ಈ ಸರಳ ಸಣ್ಣಗ್ರಾಮ್ಯ ಪದಗಳಲ್ಲಿ ಎಂಥ ಶಕ್ತಿಯಿದೆ! ಸಾಮಾನ್ಯ ಹೇಳಿಕೆಗಳಲ್ಲೂ ಶೈಲಿ ನಯವಾಗಿ ಹದವಾಗಿ ಸಮರ್ಥವಾಗಿ ಹರಿಯು

ತ್ತದೆ. ಉದಾ: "ನಾಗರ ಪಂಚಮಿಯಾದ ಬೆಳಗ್ಗೆ ಅಗ್ರಹಾರದ ಕಡೆಗೆ ಹೋಗ ಬೇಕಾಗಿತ್ತು. ಅಗ್ರಹಾರದಲ್ಲಿಯೆ ನನ್ನ ತಂಗಿಯ ಮನೆ, ಆದರಿಂದ ಹಾಗೇ ಅವಳನ್ನು ನೋಡಿಕೊಂಡು ಬರೋಣವೆಂದು ಹೋದೆ. ನನ್ನನ್ನು ಕಂಡದ್ದೇ ತಡ, ಅವಳು ಕಣ್ಣೀರು ತಂದುಕೊಂಡಳು. ಹೆಂಗಸರ ಜನ್ಮವೇ ಹೀಗೆಂದು ತೋರುತ್ತದೆ. ಇದ್ದರೆ ದೇವಿಯರಂತೆ ಸ್ವರ್ಗಸುಖದಲ್ಲಿರುತ್ತಾರೆ, ಇಲ್ಲದಿದ್ದರೆ ಅವರ ಬಾಳು ನಾಯಿಯ ಬಾಳು; ಅದೂ ಅಲ್ಲದಿದ್ದರೆ, ಅನುಕೂಲವಿದ್ದರೂ ಅನುಭವಿಸುವುದಕ್ಕೆ ಪ್ರಾಪ್ತಿಯಿಲ್ಲದೆ ಅಶಿಕ್ಷೆಯಿಂದಲೂ ಅವಿವೇಕದಿಂದಲೂ ಮುಳ್ಳು ಪೊದೆಯಂತೆ ಇರುತ್ತಾರೆ. ತಮಗೆ ಹಿತವಿಲ್ಲ, ಮತ್ತೊಬ್ಬರಿಗೆ ಸುಖವಿಲ್ಲ." ಸುಲಿದ ಬಾಳೆಯ ಹಣ್ಣಿನ ಸಾರಳ್ಯ, ಕಳೆದ ಸಿಗುರಿನ ಕಬ್ಬಿನ ರುಚಿ, ಲಲಿತ ಉಷ್ಣದ ಹಾಲಿನ ಸತ್ವ ಈ ಮಾತುಗಳಲ್ಲಿ ಕೆನೆಗಟ್ಟಿದೆ. ಒಟ್ಟಿನಲ್ಲಿ "ಸಮತಟ್ಟಾದ ಪ್ರದೇಶದಲ್ಲಿ ಕೂಲ ಮೀರದೆ ತುಂಬಿ ಹರಿಯುವ ನದಿಯಂತೆ ಅವರ ಶೈಲಿ ಗಂಭೀರವಾಗಿ ಸಾಗುತ್ತದೆ. ಎಲ್ಲಿಯೂ ಆವೇಶವಿಲ್ಲ, ಬೊಬ್ಬೆಯಿಲ್ಲ, ಅಲ್ಲೋಲಕಲ್ಲೋಲವಿಲ್ಲ. ಬೊಜ್ಜು ಹೆಂಗಸಿನ ಮೈತೂಕವಾಗಲೀ, ಲಂಬಾಣಿ ಹೆಂಗಸಿನ ಅಲಂಕಾರಭಾರವಾಗಲಿ, ಸೀಕಲು ಹೆಂಗಸಿನ ವಿಕಾರವಾದ ಬಡಕಲುತನವಾಗಲಿ ಇಲ್ಲ. ಹದವರಿತು ಸುಪುಷ್ಟವಾಗಿ ಗಟ್ಟಿಯಾಗಿ ಬೆಳೆದ ಹೆಂಗಸಿನ ಮೈತುಂಬು ಅಲ್ಲಿದೆ. ಅರ್ಥವ್ಯಕ್ತಿ ಪ್ರಸಾದ ಸಮತೆ ಅವರ ಶೈಲಿಯ ವಿಶಿಷ್ಟಗುಣಗಳು"—ಎಂಬ ಪ್ರೊ. ದೇಜಗೌ ಅವರ ವಿಮರ್ಶೋಕ್ತಿಗೆ ನಾವು ತಲೆದೂಗಬಹುದು.

೭

ಅದ್ಭುತವಾದ ಜೀವನಾನುಭವ, ವ್ಯಾಪಕವಾದ ಸತತ ಸಾಹಿತ್ಯಾಧ್ಯಯನ, ಪ್ರಕೃತಿಯ ಪ್ರಾಮಾಣಿಕ ಪರಿವೀಕ್ಷಣೆ, ನಿತಾಂತವಾದ ಪರಾನುಕಂಪೆಯ ನಾಡಿಮಿಡಿತ, ಸೂಕ್ಷ್ಮವೂ ತಲಸ್ಪರ್ಶಿಯೂ ಆದ ಚಿಂತನ, ಜೀವನ ಪೋಷಕವಾದ ಅನುಕರಣೀಯ ಬೋಧನಾಂಶ, ಸುಸಂಸ್ಕೃತಾಭಿರುಚಿ, ಸರಳ ಗಂಭೀರಶೈಲಿ, ನವೀನವಾದ ಪ್ರಥಮದರ್ಜೆಯ ಕಲ್ಪನಾಸಂಪತ್ತು—ಇವೆಲ್ಲ ಗುಣಗಳನ್ನು ಗರ್ಭೀಕರಿಸಿಕೊಂಡ ಬರವಣಿಗೆಯೇ ಶ್ರೀ ಶಾಸ್ತ್ರಿಗಳವರ ಕಥಾಸಾಹಿತ್ಯ. ಇಲ್ಲಿರುವ ಹದಿಮೂರು ಕತೆಗಳಲ್ಲಿ, ಒಂದೊಂದರಲ್ಲೂ ಆದರಣೀಯ ಅಂಶಗಳಿವೆಯಾದರೂ, 'ನಾಗರ ಪಂಚಮಿ', 'ನನ್ನ ಸ್ನೇಹಿತ',' ಅತ್ತೆ ', 'ಗುರುಗಳ ಮಹಿಮೆ' ಮತ್ತು 'ಬಂಗಲಿಯವಾಸ' ಕತೆಗಳು ತಮ್ಮ ವಿಶಿಷ್ಟಗುಣಗಳಿಂದ ಉತ್ತಮ ಕಲಾಕೃತಿ ಗಳಾಗಿವೆ. ೧೯೪೫ ಕ್ಕಿಂತ ಹಿಂದೆ, ಕನ್ನಡ ಸಣ್ಣಕಥಾಸಾಹಿತ್ಯ ಅಷ್ಟೇನೂ ಶ್ರೀಮಂತವೂ ವೈವಿಧ್ಯಪೂರ್ಣವೂ ಆಗಿರದಿದ್ದ ಇಪ್ಪತ್ತು ವರ್ಷಗಳ ಕಾಲಾ ವಧಿಯಲ್ಲಿ, ರಚಿತವಾದ ಈ ಕತೆಗಳಲ್ಲಿ ಇಪ್ಪತ್ತು ವರ್ಷಗಳಷ್ಟು ದೂರ ಈಚೆ ನಿಂತು ಅವಲೋಕಿಸಿದಾಗಲೂ ಮಾಸದ ಸೊಗಸು, ಕುಂದದ ಕಾಂತಿ, ನಂದದ ಹೃದ್ಯತೆ, ಹಳಸದ ಹೊಸತನ, ಆರದ ಬನಿ, ವಿವರ್ಣವಾಗದ ವಿಚಾರ ಜೀವಂತ ವಾಗಿವೆಯೆನ್ನುವುದೇ ಈ ಕತೆಗಳ ಕಲಾಪೌಲ್ಯಕ್ಕೆ ಸಾಕ್ಷಿಯಾಗಿದೆ.

# ಶಾಸ್ತ್ರಿಗಳು ಕವಿಗಳೆ?

ನನಗೆ ಒಂದೇ ಪ್ರಶ್ನೆ: ಶಾಸ್ತ್ರಿಗಳು ಕವಿಗಳೆ?
ಹುತ್ತವನು ಕೆದಕಿ ಹಾವಿನ ಹೆಡೆಯ ಹಿಡಿದಂತೆ
ಉತ್ತರದ ಹಾದಿ. ಬ್ಲ್ಯಾಂಕ್ ವರ್ಸಿನಲ್ಲಿ ಭಾರತದ
ಕಥೆಯ ಬರೆದವರೆಲ್ಲ ಕವಿಗಳೇ ಎನಬಹುದೆ?
ದೇವರನು ಬೆಳಗಿ ತೊಳೆವಂತೆ, ಕನ್ನಡ ನುಡಿಯ
ನಾನೂರು ಪುಟದ ನವರತ್ನ ಸೀಮೆಗಳಲ್ಲಿ
ಭಾರತದ ಕಥೆಯನರಳಿಸಿದ ಬೆರಳಿಗೆ ಬಂದ
ಧನ್ಯತೆಗೆ ಮಾತ್ರ ಕೈಮುಗಿವುದೇ ಉತ್ತರಂ.
ಪದ ಪಂಕ್ತಿ ಪುಟ ಪರ್ವ ಯಜ್ಞಾಶ್ವಗಮನದಲಿ
ಕಾಣುವುದು ಕೃಷ್ಣಶಾಸ್ತ್ರಿಗಳಪೂರ್ವ ಸಾಹಸಂ;
ಗೆದ್ದವರು ಪಾಂಡವರು, ಕೌರವರು ಎನಲಾರೆ
ಗೆದ್ದವರು ಇಲ್ಲಿ ಶಾಸ್ತ್ರಿಗಳು. ಕವಿಗಳ ಹಿಡಿದು
ಕವಿತೆಯಲಿ ನಿಲಿಸಿ ಹರಸುವ ಕೈಗೆ ತಲೆಬಾಗಿ
ಒಪ್ಪಿಸುವೆನಿದನು; ಇದು ಪದ್ಯವೇ ಗದ್ಯವೇ
ಎಂಬ ಸಂಶಯ ಮಾತ್ರ ಉಳಿದಿರಲಿ ನನಗೆ.

—ಕೆ. ಎಸ್. ನರಸಿಂಹಸ್ವಾಮಿ
('ವಚನಭಾರತ ಪ್ರವೇಶ' ದಿಂದ)



ಡಾಕ್ಟರ್ ಶಾಸ್ತ್ರಿಗಳು ತಮ್ಮ ಪತ್ನಿ, ಮಗಳು, ಅಳಿಯ ಹಾಗೂ ಮೊಮ್ಮಗಳೊಡನೆ



‘ ಅಭಿವಂದನೆ ’ಗೆ ‘ ಪ್ರತಿವಂದನೆ ’ ಸಲ್ಲಿಸುತ್ತಿರುವ ಕೃಷ್ಣಶಾಸ್ತ್ರಿಗಳು (೧೯೫೬)

ಡಾ. ಹಾ. ಮಾ. ನಾಯಕ

# ಗದ್ಯಶಿಲ್ಪಿ

"Moderately well educated people nowadays find so little difficulty in writing down what they have to say, in easy and straight forward language, that it is hardly possible for us to realize that there was a time when even practised writers found prose troublesome to manage."[1]

ಇಂಗ್ಲಿಷಿನ ಗದ್ಯವಿಕಾಸವನ್ನು ಕುರಿತು ವಿಚಾರ ಮಾಡುತ್ತಾ ವಿಮರ್ಶಕರೊಬ್ಬರು ಆಡಿರುವ ಈ ಮಾತುಗಳು ಕನ್ನಡದ ಗದ್ಯಬೆಳವಣಿಗೆಗೂ ತುಂಬ ಚೆನ್ನಾಗಿ ಒಪ್ಪುತ್ತವೆ. ಸುಮಾರು ಸಾವಿರದೈನೂರು ವರ್ಷಗಳ ನಮ್ಮ ಸಾಹಿತ್ಯದ ಸಂಪದ್ಯುಕ್ತ ಇತಿಹಾಸದಲ್ಲಿ ಗದ್ಯದ್ದು ಕುರುಚಲು ಬೆಳೆ. ಗದ್ಯ ಪದ್ಯಗಳ ರಚನೆಯಲ್ಲಿ ಪದ್ಯವನ್ನು ರಚಿಸುವುದೇ ಪ್ರತಿಷ್ಠೆಯೆಂದು ಭಾವಿಸಿದ್ದರಿಂದಲೋ ಏನೋ ಗದ್ಯ ಬೆಳೆಯಬೇಕಾದ ಹಾಗೆ ಬೆಳೆಯಲಿಲ್ಲ. ಅಲ್ಲದೆ ಒಳ್ಳೆಯ ಗದ್ಯದ ಬರವಣಿಗೆ ಸುಲಭಸಾಧ್ಯವಲ್ಲವೆಂಬುದನ್ನೂ ನಮ್ಮ ಪ್ರಾಚೀನರು ತಿಳಿದುಕೊಂಡಿದ್ದಿರಬೇಕು. ಗದ್ಯದ ರಚನೆಯೂ ಪ್ರತಿಭೆಯ ಒರೆಗಲ್ಲಾಗಬಹುದೆಂಬುದನ್ನು ಕೂಡ ಅವರು ಗಮನಿಸಿದ್ದರು. "ಗದ್ಯಂ ಕವೀನಾಂ ನಿಕಷಂ ವದಂತಿ" ಎಂಬ ಪ್ರಸಿದ್ಧವಾದ ಹೇಳಿಕೆಯಲ್ಲಿ ಅವರು ಗದ್ಯಕ್ಕೆ ಗೌರವ ಸಲ್ಲಿಸಿದರು.

ನಮ್ಮ ಹೊಸಸಾಹಿತ್ಯದ ಹರಿಕಾರನಾದ ಮುದ್ದಣನು "ಪದ್ಯಂ ವಧ್ಯಂ ಗದ್ಯಂ ಹೃದ್ಯಂ" ಎಂದು ಇಪ್ಪತ್ತನೆಯ ಶತಮಾನದ ಸಾಹಿತ್ಯಪ್ರವೃತ್ತಿಯನ್ನು ಘೋಷಿಸಿದ; ರಸಿಕರ ಬದಲಾದ ಒಲವಿನ ದಿಕ್ಕನ್ನು ಸೂಚಿಸಿದ. ಸಮಕಾಲೀನ ಸಾಹಿತ್ಯದಲ್ಲಿ ಗದ್ಯವೇ ಪ್ರಥಮ, ಪ್ರಧಾನ; ಅದರದೇ ರಾಜ್ಯಭಾರ, ರಾಯಭಾರ. ಹಾಗಾಗಿ ಗದ್ಯರಚನೆಯನ್ನು ಎತ್ತಿಕೊಂಡವರು ಹಲವರು; ಅದರಲ್ಲಿ ಯಶಸ್ಸು ಪಡೆದವರು ಕೆಲವರು; ಈ ಮಾರ್ಗದಲ್ಲಿ ಮಾದರಿಯನ್ನು ನಿರ್ಮಿಸಿದವರು ತೀರ ವಿರಳ.

---

[1] A. C. Ward : *Foundations of English Prose*, ಪು. ೧೯,

ಈ ವಿಷಯದಲ್ಲಿ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಅಗ್ರಗಣ್ಯರು. ನಿಸ್ಸಂದೇಹವಾಗಿ ಅವರು ಹೊಸಗನ್ನಡದ ಗದ್ಯಶಿಲ್ಪಿಗಳಲ್ಲಿ ಶ್ರೇಷ್ಠರು.

ಎ. ಸಿ. ವಾರ್ಡ್ ಇಂಗ್ಲಿಷ್ ಗದ್ಯದ ವಿಚಾರವಾಗಿ ಬರೆಯುತ್ತಾ ಡ್ರೈಡನ್ನನ ಕೊಡುಗೆಯನ್ನು ಪ್ರಸ್ತಾಪಿಸುವಾಗ ಡ್ರೈಡನ್ನನಿಗಿಂತ ಮೊದಲು ಇಂಗ್ಲಿಷ್ ಗದ್ಯ ಸಾಮಾನ್ಯವಾಗಿ ಬೇನಾಜೂಕಿನದಾಗಿತ್ತೆಂದೂ, ಶ್ರಮಪಟ್ಟು ರಚಿಸಿದ್ದಾಗಿದ್ದು ಅದನ್ನು ಓದುವುದೇ ಒಂದು ಶ್ರಮದ ಕೆಲಸವೆಂದೂ ಹೇಳುತ್ತಾನೆ.[2] ಇಂಗ್ಲಿಷ್ ಗದ್ಯಕ್ಕೆ ನಯನಾಜೂಕುಗಳನ್ನೂ, ಶಕ್ತಿಸಾಮರ್ಥ್ಯಗಳನ್ನೂ ಡ್ರೈಡನ್ ತಂದುಕೊಟ್ಟನೆಂದು ಅವನನ್ನು ಹೀಗೆ ಪ್ರಶಂಸಿಸಿದ್ದಾನೆ:

> "Dryden was our greatest benefactor in this respect for it was he who first demonstrated how prose might be made a clear, sharp, plain instrument for workaday purpose."[3]

ನಮ್ಮ ಹೊಸ ಗದ್ಯದ ಇತಿಹಾಸದಲ್ಲಿ ಕೃಷ್ಣಶಾಸ್ತ್ರಿಗಳ ಸಾಧನೆ ಈ ಬಗೆಯಾದುದು. ಐವತ್ತು ವರ್ಷಗಳ ಹಿಂದೆ ಅವರು ಬರವಣಿಗೆಗೆ ತೊಡಗಿ, 'ಪ್ರಬುದ್ಧ ಕರ್ಣಾಟಕ'ವನ್ನು ಸ್ಥಾಪಿಸಿದ್ದಾಗ, ಕನ್ನಡ ಗದ್ಯಕ್ಕೆ ಒಂದು ನೆಲೆ ಇರಲಿಲ್ಲ. ಇದ್ದ ಗದ್ಯಕ್ಕೆ ಯಾವ ಬಗೆಯ ಆಕರ್ಷಣೆಯೂ ಇರಲಿಲ್ಲ. ಕೃಷ್ಣಶಾಸ್ತ್ರಿಗಳು ಹೊಸ ಸಾಹಿತ್ಯಕ್ಕೆ ಒಂದು ಸ್ಪಷ್ಟವಾದ, ನಿಶಿತವಾದ, ಸರಳ ಮಾಧ್ಯಮವೊಂದನ್ನು ತಮ್ಮ ಬರವಣಿಗೆಯ ಮೂಲಕ ದೊರಕಿಸಿಕೊಟ್ಟರು. ಅದನ್ನು ತಮ್ಮ ಪತ್ರಿಕೆಯ ಮೂಲಕ ಬಲಪಡಿಸಿದರು. ಕನ್ನಡಗದ್ಯ ಅವರ ಕೈಯಲ್ಲಿ ಒಂದು ಪ್ರಬುದ್ಧತೆಯನ್ನು ಪಡೆದುಕೊಂಡಿತು. ನಿತ್ಯಬಳಕೆಯ ಮಾತುಗಳೇ ಸಾಹಿತ್ಯದ ಮಹತ್ವ ಪಡೆಯಬಲ್ಲವೆಂಬುದನ್ನು ತೋರಿಸಿಕೊಟ್ಟ ಮಹಾನುಭಾವರು ಅವರು.

ಭಾಸಕವಿಯ ಕಲಾಚಾತುರ್ಯವನ್ನು ಪ್ರಶಂಸಿಸುತ್ತಾ ಶಾಸ್ತ್ರಿಗಳು ಹೇಳುತ್ತಾರೆ: "ಮನೆಯಲ್ಲಿ ಇರುವ ಒಂದೆರಡು ಸಾಮಗ್ರಿಗಳಿಂದಲೇ, ಮೂರು ನಾಲ್ಕು ಪಾತ್ರೆಗಳಲ್ಲಿಯೇ, ಹತ್ತಾರು ರುಚಿರುಚಿಯಾದ ಅಡಿಗೆ ಮಾಡಬಲ್ಲ ನಿಪುಣೆಯಾದ ಗೃಹಿಣಿಯಂತೆ ಕವಿಯು ಮುಂದಿರುವ ಒಂದೆರಡು ಪಾತ್ರಗಳಲ್ಲಿಯೇ, ಹಳೆಯ ಕಥಾಸಾಮಗ್ರಿಗಳಿಂದಲೇ ಸುಂದರವಾಗಿ ಕಂಗೊಳಿಸುವ ಮನೋಹರವಾದ ರಸ ಪದಾರ್ಥಗಳನ್ನು ಸೃಷ್ಟಿಸಿದ್ದಾನೆ."[4]

ಇದು ಕೃಷ್ಣಶಾಸ್ತ್ರಿಗಳ ಗದ್ಯವಿಲಾಸಕ್ಕೇ ಅನ್ವಯವಾಗುವಂಥದು. ದಿನ ಬಳಕೆಯ ಚಿರಪರಿಚಿತ ಸಾದಾ ಸರಳ ಪದಗಳಲ್ಲಿಯೇ ಅವರು ಶಕ್ತಿಯನ್ನೂ

---

[2] ಅದೇ.

[3] ಅದೇ. ಪು. ೧೫.

[4] ಭಾಸ ಕವಿ, ಪು. ೫೯.

ಸೌಂದರ್ಯವನ್ನೂ ಮೆರೆಸಬಲ್ಲರು. ಬಗೆ ಬಗೆಯ ಬಣ್ಣವನ್ನೂ, ರುಚಿಯನ್ನೂ ತೋರಬಲ್ಲರು. ಅದಕ್ಕಾಗಿ ಅವರು ಶ್ರಮಪಡರು. ಬರವಣಿಗೆ ಅವರಿಗೆ ನಿರಾಯಾಸವಾಗಿ ಲಭಿಸಿದ್ದು; ಅದು ಉಸಿರಾಡುವಷ್ಟೇ ಸಹಜ. ಕನ್ನಡ ಗದ್ಯ ಶಾಸ್ತ್ರಿಗಳ ಕೈಯಲ್ಲಿ ರೂಪುಗೊಂಡ ಬಗೆ ನಮ್ಮ ಸಾಹಿತ್ಯಚರಿತ್ರೆಯಲ್ಲಿ ಒಂದು ಅಪೂರ್ವ ಸಿದ್ಧಿ. ಈ ಗದ್ಯದ ಒಂದು ಪವಾಡವೆಂದರೆ, ಅದು ಅನುಕರಣೆಗೆ ಸಿಕ್ಕದಿರುವುದು. ಎಷ್ಟೋ ಜನರ ಅತ್ಯಂತ ಸುಂದರವಾದ ಗದ್ಯ ಅನೇಕರ ಅನುಕರಣೆಗೆ ಒಳಗಾಗಿರುವುದನ್ನು ಗುರುತಿಸಬಹುದಾಗಿದೆ. ಆದರೆ ಕೃಷ್ಣಶಾಸ್ತ್ರಿಗಳ ಗದ್ಯವನ್ನು ಅನುಸರಿಸಿ, ಇವರದು ಶಾಸ್ತ್ರಿಗಳ ರೀತಿ ಎನ್ನಿಸಿಕೊಂಡವರೊಬ್ಬರನ್ನೂ ನಾನು ಕಾಣೆ. ಇದೇ ಶಾಸ್ತ್ರಿಗಳ ಗದ್ಯದ ವೈಶಿಷ್ಟ್ಯ.

* * *

ಬರವಣಿಗೆಯಲ್ಲಿ ಕನ್ನಡ–ಸಂಸ್ಕೃತಗಳ ಸಂಬಂಧ ಯಾವ ಬಗೆಯದಾಗಿರಬೇಕೆಂಬುದೊಂದು ಹಳೆಯ ಪ್ರಶ್ನೆ. ಇವುಗಳ ಬೆರಕೆ ಮುತ್ತು ಮೆಣಸುಗಳ ಬೆರಕೆಯೆಂದೂ, ಎಣ್ಣೆ ತುಪ್ಪಗಳ ಬೆರಕೆಯೆಂದೂ ಪ್ರಾಚೀನರು ಕೊರಗಿದ್ದುಂಟು. ಆಧುನಿಕರು ತಮ್ಮ ಸಂಸ್ಕೃತಭೂಯಿಷ್ಠಶೈಲಿಯಲ್ಲಿ ಪದಗಳಿಗೆ ಮಾರುಹೋಗಿ ಅರ್ಥವನ್ನು ಕಡೆಗಾಣಿಸಿದ್ದಾರೆಂದೂ ಒಂದು ಆಪಾದನೆ.

ಕೃಷ್ಣಶಾಸ್ತ್ರಿಗಳು ವಂಶದಿಂದಲೂ, ವಿದ್ಯೆಯಿಂದಲೂ ದೊಡ್ಡ ಸಂಸ್ಕೃತ ವಿದ್ವಾಂಸರು. ಅವರ ಕೃತಿರಚನೆಯ ಕೇಂದ್ರಬಿಂದುವೂ ಸಂಸ್ಕೃತವೆ. ಆದರೂ ಸಂಸ್ಕೃತದ ಬಳಕೆಯಲ್ಲಿ ಅವರು ತೋರುವ ಸಂಯಮ ಅನ್ಯಾದೃಶವಾದುದು. ಸಂಸ್ಕೃತ–ಕನ್ನಡಗಳನ್ನು ಹಿತಮಿತವಾಗಿ ಬಳಸಿಕೊಳ್ಳುವ ಅವರ ರೀತಿಯಂತೂ ಕಲಾತ್ಮಕ, ಆಕರ್ಷಣೀಯ, ಮನೋಜ್ಞ. ಅವರು ಎಂದೂ ಅನವಶ್ಯವಾಗಿ ಸಂಸ್ಕೃತವನ್ನು ಬಳಸಿದವರಲ್ಲ. ಸಂಸ್ಕೃತದ ಬಳಕೆಯಲ್ಲಿ ಲೇಖಕರು ಯಾವ ಬಗೆಯ ವಿವೇಚನೆ ತೋರಬೇಕೆಂದು ಅವರೇ ವೆಂಕಟಾಚಾರ್ಯರ ಶೈಲಿಯ ಬಗೆಗೆ ಬರೆಯುತ್ತಾ ಹೇಳಿದ್ದಾರೆ:

"ಬಂಗಾಳಿ ಭಾಷೆಯಲ್ಲಿ ಸಂಸ್ಕೃತಶಬ್ದಗಳು ಹೇರಳವಾಗಿ ಬರುತ್ತವೆ. ಕನ್ನಡಕ್ಕೆ ತರ್ಜುಮೆ ಮಾಡುವಾದ ಆ ಶಬ್ದಗಳನ್ನೇ ಇಟ್ಟುಕೊಂಡರೆ ಕನ್ನಡ ಶೈಲಿಯು ಸಂಸ್ಕೃತಭೂಯಿಷ್ಠವಾಗುತ್ತದೆ. ಸಂಸ್ಕೃತವನ್ನು ಸೇರಿಸುವುದು ತಪ್ಪೆಂದಲ್ಲ. ಸಂಸ್ಕೃತದ ಸಹಾಯವಿಲ್ಲದಿದ್ದರೆ ಎಲ್ಲಾ ಅಭಿಪ್ರಾಯಗಳನ್ನೂ ಕನ್ನಡದಲ್ಲಿ ತಿಳಿಸುವ ಬಗೆ ಹೇಗೆ? ಆದರೆ ಇದರಲ್ಲಿ ಸ್ವಲ್ಪ ವಿವೇಚನೆ ಬೇಕು. ಎಲ್ಲಿ ಸುಲಭವಾದ ಕನ್ನಡ ಮಾತುಗಳಿಂದಲೇ ಅರ್ಥವನ್ನು ತಿಳಿಸುವುದು ಸಾಧ್ಯವೋ ಅಲ್ಲಿ ಅನಾವಶ್ಯಕವಾಗಿ ಸಂಸ್ಕೃತವನ್ನು ಉಪಯೋಗಿಸಬಾರದು."[5]

---

[5] ಭಾಷಣಗಳು ಮತ್ತು ಲೇಖನಗಳು, ಪು. ೩೫೦

ವೆಂಕಟಾಚಾರ್ಯರ ಬರವಣಿಗೆಯಲ್ಲಿ ಬೇಡವಾದ ಎಷ್ಟೋ ಪೆಡಸು ಸಂಸ್ಕೃತ ಶಬ್ದಗಳು ನುಸುಳಿಕೊಂಡು ಬಂದವು. ಇವುಗಳನ್ನು ಕೈಬಿಟ್ಟು ಕನ್ನಡ ಪದಗಳನ್ನೇ ಬಳಸಲು ಅವರು ಪ್ರಯತ್ನಿಸಿದ ಫಲವಾಗಿ ಅನೇಕ 'ಅಪ್ರಸಿದ್ಧ ಕನ್ನಡ ಪದಗಳು ಬಂದು ಸೇರಿದವು'. ಇದನ್ನು ಟೀಕಿಸಿ ಶಾಸ್ತ್ರಿಗಳು ಹೇಳಿದರು: "... ಇಂಥ ಕನ್ನಡ ಪದಗಳನ್ನು ಪ್ರಯೋಗಿಸುವುದು ಚೆನ್ನಾಗಿ ತೋರುವುದಿಲ್ಲ. ಅವುಗಳಿಗೆ ಬದಲಾಗಿ ಸಂಸ್ಕೃತ ಪದಗಳನ್ನು ಉಪಯೋಗಿಸುವುದು ಎಷ್ಟೋ ಮೇಲು".[6]

ಪದಗಳ ಬಳಕೆಯ ವಿಚಾರದಲ್ಲಿ ಶಾಸ್ತ್ರಿಗಳು ಅಂಧಶ್ರದ್ಧೆ, ಮಡಿಭಾವನೆ, ಸ್ವಮೋಹ ಈ ಯಾವುದರಿಂದಲೂ ಪೀಡಿತರಾಗಲಿಲ್ಲ. ಅವರ ಎದುರಿಗಿದ್ದದ್ದು ತೂಕವಾದ, ನಿಷ್ಕೃಷ್ಟವಾದ, ತಿಳಿಯದ ಗದ್ಯದ ಆದರ್ಶ.

ಅವರ 'ವಚನ ಭಾರತ' ಒಂದು ರಸದ ಚಿಲುಮೆ. ಅದರ ಯಾವ ಪುಟವನ್ನು ತೆರೆದರೂ ಅತ್ಯುತ್ತಮ ಕನ್ನಡ ಬರವಣಿಗೆಗೆ ಉದಾಹರಣೆಯಾಗಬಲ್ಲದು. ಯಾವ "ಭೂತಕಾವ್ಯ"ವನ್ನು ಸಂಪೂರ್ಣವಾಗಿ ಓದಲು ಒಂದು ಜೀವಮಾನವೇ ಸಣ್ಣದೆಂದು ತೋರಿಬರುತ್ತದೆಯೋ ಆ ಕಾವ್ಯವನ್ನು ನಾನೂರು ಪುಟಗಳಿಗೆ ಭಟ್ಟಿ ಇಳಿಸುವುದು ಸಾಮಾನ್ಯವಾದ ಸಾಹಸವಲ್ಲ. ಶಾಸ್ತ್ರಿಗಳ ದೃಷ್ಟಿ ಹಾಗೂ ಸೃಷ್ಟಿಯಲ್ಲಿ ಈ ಯಶಸ್ಸಿನ ಗುಟ್ಟು ಅಡಗಿದೆ. 'ವಚನ ಭಾರತ'ದ ರಚನೆಯ ವಿಷಯವಾಗಿ ಹೇಳುತ್ತಾ ಅವರೇ ತಮ್ಮ ದೃಷ್ಟಿಯನ್ನು ವಿವರಿಸಿದ್ದಾರೆ: "ಈ ಗ್ರಂಥದ ರಚನೆಯಲ್ಲಿ ನನ್ನ ದೃಷ್ಟಿಯು ಮುಖ್ಯವಾಗಿ ಕಾವ್ಯದೃಷ್ಟಿ, ಸಾಹಿತಿಯ ದೃಷ್ಟಿ. ಕಥೆ ಚೆನ್ನಾಗಿರಬೇಕು, ಆದಷ್ಟು ರಸವತ್ತಾಗಿರಬೇಕು, ವರ್ಣನೆ ಅಲಂಕಾರ ಧರ್ಮ ನೀತಿ ಎಲ್ಲಾ ಉಚಿತಪ್ರಮಾಣದಲ್ಲಿ ಹದವಾಗಿ ಹೊಂದಿಕೊಂಡಿರಬೇಕು; ಮೂಲದಲ್ಲಿ ಸಾರವತ್ತಾದದ್ದೆಲ್ಲಾ ಪಾಕವಿಳಿಯಬೇಕು ; ಆದರೂ ಹಿಡಿತದಲ್ಲಿರಬೇಕು ; **ಭಾಷೆ ಬಿಗಿಯಾಗಿ, ಆದರೆ ತಿಳಿಯಾಗಿ ಇರಬೇಕು**—ಇದು ನನ್ನ ಗುರಿ. (ದೊಡ್ಡಕ್ಷರಗಳು ನನ್ನವು)"

'ವಚನ ಭಾರತ'ದ ಮಿಕ್ಕ ಎಲ್ಲ ಗುಣಗಳಿಗೂ ಮಹತ್ವ ಬಂದಿರುವುದು ಈ ಬಿಗಿಯಾದ ಆದರೆ ತಿಳಿಯಾದ ಭಾಷೆಯಿಂದ ಎಂಬುದು ಮೇಲು ನೋಟಕ್ಕೇ ವ್ಯಕ್ತವಾಗುವ ವಿಷಯ. ಸಂಗ್ರಹಗುಣ, ಔಚಿತ್ಯ, ರಸಗ್ರಹಣಶಕ್ತಿ ಇವೆಲ್ಲ ಎಷ್ಟೇ ಮಹತ್ವದವಾಗಿದ್ದರೂ ಬರವಣಿಗೆಯಲ್ಲಿ ಪ್ರಾಸಾದಿಕತೆ ಇಲ್ಲದಿದ್ದರೆ ಅವು ಈಗಿನಷ್ಟು ಶೋಭಾಯಮಾನವಾಗಿ ಇರುತ್ತಲೇ ಇರಲಿಲ್ಲ. ಇದರಿಂದಲೇ 'ವಚನ ಭಾರತ' ಆಧುನಿಕ ಕಾದಂಬರಿಯ ಅನೇಕ ಲಕ್ಷಣಗಳನ್ನು ಪಡೆದಿದೆ. ಇಂದಿನ ಕಾದಂಬರಿಕಾರನ ಕೈಯಲ್ಲಿ ಇದು ತಂತ್ರವನ್ನುಳಿದು ಅನ್ಯವಿಷಯಗಳಲ್ಲಿ ಇದಕ್ಕಿಂತ ಬೇರೆಯಾಗಿರುವುದು ಸಾಧ್ಯವಿರುತ್ತಿರಲಿಲ್ಲ. ಇಲ್ಲಿನ ಸಂಭಾಷಣೆಗಳಂತೂ ಇಂದಿನ ಲಲಿತ ಸಾಹಿತ್ಯದ ಬರವಣಿಗೆಗೆ ತೀರ ಹತ್ತಿರದವಾಗಿವೆ.

---

6 ಅದೇ.

'ಶ್ರೀಪತಿಯ ಕಥೆಗಳ'ನ್ನುಳಿದು ಕೃಷ್ಣಶಾಸ್ತ್ರಿಗಳು ಬೇರೆ ಲಲಿತ ಸಾಹಿತ್ಯವನ್ನು ನಿರ್ಮಿಸಲಿಲ್ಲ. ಆದರೆ ಅವರಶಕ್ತಿ ಆ ನಿಟ್ಟಿನಲ್ಲಿ ಅದ್ಭುತವಾದುದೆಂಬುದಕ್ಕೆ ಅವರ ವಿಮರ್ಶಾತ್ಮಕ ಬರವಣಿಗೆಯ ಪುಟಪುಟಗಳಲ್ಲಿಯೂ ನಮಗೆ ಆಧಾರಗಳು ಸಿಕ್ಕುತ್ತವೆ. 'ಭಾಸ' ಮತ್ತು 'ಸಂಸ್ಕೃತನಾಟಕ'ಗಳಲ್ಲಿ ಅವರು ಸಂಸ್ಕೃತ ನಾಟಕದ ತುಣುಕುಗಳನ್ನು ಉದಾಹರಣೆಗಾಗಿ ಅನುವಾದಿಸಿಕೊಟ್ಟಿದ್ದಾರೆ. ಅವು ಎಷ್ಟು ಮೋಹಕವಾಗಿವೆಯೆಂದರೆ ಅವನ್ನು ಓದುವ ಯಾರಿಗಾದರೂ ಕೃಷ್ಣಶಾಸ್ತ್ರಿಗಳು ಕೆಲವಾದರೂ ನಾಟಕಗಳನ್ನು ಅನುವಾದಿಸದೇ ಹೋದರಲ್ಲಾ ಎಂಬ ವ್ಯಥೆಯಾಗುತ್ತದೆ.

ತಮ್ಮ ವಿಮರ್ಶೆಯ ಗ್ರಂಥಗಳಲ್ಲಿ ಅವರು ಸಂಸ್ಕೃತ ನಾಟಕಗಳ ಮತ್ತು ಬಂಕಿಮಚಂದ್ರ ಚಟರ್ಜಿಯವರ ಕಾದಂಬರಿಗಳ ಸಾರಾಂಶವನ್ನು ಕೊಟ್ಟಿದ್ದಾರೆ ಪ್ರತ್ಯೇಕವಾಗಿ ಪ್ರಕಟಿಸಿದರೆ ಇವುಗಳ ಸಂಕಲನವೇ ರಸಸ್ಯಂದಿಯಾದ ಕಥಾಗುಚ್ಛಗಳಾಗಬಲ್ಲವು. ಕೆಲವೇ ಪುಟಗಳಲ್ಲಿ ಮೂಲಕ್ಕೆ ಭಂಗಬರದಂತೆ ದೊಡ್ಡದೊಡ್ಡ ಕಥಾವಸ್ತುಗಳನ್ನು ಹಿಡಿದಿಡುವ ಅವರ ನೈಪುಣ್ಯ ಅನನ್ಯಸಾಧ್ಯವಾದುದು. ಸಾರಾಂಶವನ್ನು ಕೊಡುವಾಗ ಪಾತ್ರದ ಬೆಳವಣಿಗೆಯನ್ನೂ, ಸನ್ನಿವೇಶಗಳ ಮಹತ್ವವನ್ನೂ ಅವರು ಮರೆಯುವುದಿಲ್ಲ. ಮೂಲದ ಅಂಕಗಳ ಇಲ್ಲವೆ ಅಧ್ಯಾಯಗಳ ಬೆಳವಣಿಗೆಯನ್ನು ಹಾಗೆಯೇ ಉಳಿಸಿಕೊಳ್ಳುವುದರಿಂದ ಒಟ್ಟು ರೂಪವಿನ್ಯಾಸಕ್ಕೆ ಭಂಗ ಬರುವುದಿಲ್ಲ. ಈ ಸಾರಾಂಶಗಳೇ ಶಾಸ್ತ್ರಿಗಳ ಸೃಜನ ಶಕ್ತಿಗೊಂದು ಸಾಕ್ಷಿ.

'ಶ್ರೀಪತಿಯ ಕಥೆಗಳ'ಲ್ಲಾಗಲಿ, ಈ ಸಾರಾಂಶಗಳಲ್ಲಾಗಲಿ, ವಿಮರ್ಶೆಗಳಲ್ಲಾಗಲಿ ಶಾಸ್ತ್ರಿಗಳ ವರ್ಣನಚಾತುರ್ಯ ಮೆಚ್ಚುವಂಥದು. 'ವಿಷವೃಕ್ಷ' ಕಾದಂಬರಿಯನ್ನು ವಿಮರ್ಶಿಸುತ್ತಾ ಬಂಕಿಮಚಂದ್ರರ ವರ್ಣನ ಶಕ್ತಿಯನ್ನೂ, ಭಾವರಸಾರ್ಥಗಳಿಗೆ ಸಮನಾಗಿ ಕೂಡಿಕೊಂಡು ಹೋಗುವ ಅವರ ಶೈಲಿಯನ್ನೂ ಕುರಿತು ವಿಚಾರಮಾಡುವಾಗ, ಬರವಣಿಗೆಯಲ್ಲಿ ವರ್ಣನೆ ಯಾವ ಬಗೆಯಾಗಿರಬೇಕೆಂಬುದನ್ನು ಶಾಸ್ತ್ರಿಗಳೇ ಹೀಗೆ ನಿರೂಪಿಸಿದ್ದಾರೆ:

"ವರ್ಣನೆಯ ಮುಖ್ಯ ಉದ್ದೇಶವೇನೆಂದರೆ—ವರ್ಣಿತ ವಸ್ತುವು ನಮ್ಮ ಕಣ್ಣಿಗೆ ಕಟ್ಟಿದಂತಾಗಬೇಕು; ಅದರ ಭಾವಚಿತ್ರವನ್ನು ಮುಂದೆ ತಂದಿಟ್ಟಂತಾಗಬೇಕು; ಅಷ್ಟೇ ಅಲ್ಲ; ಚಿತ್ರಗಾರನಾಗಲಿ, ಭಾವಚಿತ್ರವನ್ನು ಹಿಡಿಯತಕ್ಕ ಯಂತ್ರವಾಗಲಿ ಅಸಾಧ್ಯವೆಂದು ಕೈಬಿಡುವ ಎಷ್ಟೋ ಸೂಕ್ಷ್ಮ ವಿಷಯಗಳನ್ನು ಕವಿಯು ತನ್ನ ವಾಕ್ಸಂಪತ್ತಿಯಿಂದ ಪಾಠಕರ ಕಿವಿಯ ಮೂಲಕ ಅವರ ಮನಸ್ಸಿನಲ್ಲಿ ಅಚ್ಚಳಿಯದಂತೆ ಚಿತ್ರಿಸಬೇಕು" [7]

ಕೃಷ್ಣಶಾಸ್ತ್ರಿಗಳು ತಮ್ಮ ಶೈಲಿಯಲ್ಲಿಯೇ ಈ ವರ್ಣನಚಾತುರ್ಯವನ್ನು

---

[7] ಅದೇ. ಪು, ೩೨೬

ಮೆರೆದಿದ್ದಾರೆ. 'ಶ್ರೀಪತಿಯ ಕಥೆಗಳ'ಲ್ಲಿ ಅವರು ವ್ಯಕ್ತಿಗಳನ್ನು ಸಮ್ಮೆದುರು ತಂದು ನಿಲ್ಲಿಸಿಬಿಡುತ್ತಾರೆ. ಸನ್ನಿವೇಶಗಳನ್ನು ಚಿತ್ತಾಕರ್ಷಕವಾಗಿ ಕಟ್ಟುತ್ತಾರೆ. ವಿಮರ್ಶೆಯಲ್ಲಿಯೂ ಅವರು ಕುಶಲ ಚಿತ್ರಗಾರನ ಕೆಲಸವನ್ನು ನಿರ್ವಹಿಸಬಲ್ಲರೆಂಬುದಕ್ಕೆ ಬೇಕಾದಷ್ಟು ಉದಾಹರಣೆಗಳು ಸಿಕ್ಕುತ್ತವೆ. ಬಂಕಿಮಚಂದ್ರರ 'ರಾಜಸಿಂಹ' ಕಾದಂಬರಿಯ ಪಾತ್ರಗಳನ್ನು ವಿವೇಚಿಸುತ್ತಾ ಒಂದುಕಡೆ ಶಾಸ್ತ್ರಿಗಳು ಬರೆದಿರುವುದು ಇದು:

"ಮಾಣಿಕಲಾಲನು ರೂಪನಗರದ ಅಂಗಡಿಬೀದಿಗೆ ಹೋಗಿ, ಹೊಟ್ಟೆಗೆ ವಂಚನೆ ಮಾಡಿಕೊಳ್ಳದೆ ಐದಾರು ಸೇರು ಮಿಠಾಯಿ ತಿಂದು ಸೇರೂವರೆ ಹಾಲು ಕುಡಿದು, ತಾಂಬೂಲ ಮಾರುವ ಅಂಗಡಿಗೆ ಬರುತ್ತಾನೆ. ಅಂಗಡಿಯ ಯಜಮಾನಿಯು ಬಹಳ ರಸಿಕಳು; ವರ್ಣದಲ್ಲಿ ಕೆಂಪು, ಜಿಂಕೆಯ ಕಣ್ಣುಗಳು; ದೃಷ್ಟಿ ಚಂಚಲ; ಸುಂದರವಾಗಿ ನಗುವಳು, ಅನಿಂದ್ಯವಾದ ದಂತ ಪಂಕ್ತಿ; ಆಭರಣ ಭೂಷಿತಳು; ವಯಸ್ಸು ಸುಮಾರು ಮುವ್ವತ್ತು. ಅವಳ ಕೆಲಸ ಬೀಡಾ ಮಾರುವುದಲ್ಲ; ಅದನ್ನು ಅವಳ ದಾಸಿ ಮಾಡುತ್ತಿದ್ದಳು; ಯಜಮಾನಿಯು ರತ್ನಗಂಬಳಿಯ ಮೇಲೆ ಕುಳಿತು ಮನೋಹರವಾಗಿ ನಗುತ್ತ ದುಡ್ಡು ತೆಗೆದುಕೊಳ್ಳುತ್ತಿದ್ದಳು; ರಸಿಕರು ಸಿಕ್ಕಿದರೆ ಚಕ್ಕಂದವಾಡುವಳು."[8]

ಇದು ಯಾವುದೋ ಕಥೆ—ಕಾದಂಬರಿಯಿಂದ ತಪ್ಪಿಸಿಕೊಂಡು ಬಂದ ವರ್ಣನೆಯಂತೆ ಕಾಣುತ್ತದೆಯೆ ಹೊರತು ವಿಮರ್ಶೆಯ ಭಾಗವೆಂದು ಗೊತ್ತಾಗುವುದಿಲ್ಲ. ಈ ಬೀಡಾ ಅಂಗಡಿಯ ಒಡತಿಯ ಚಿತ್ರವನ್ನು ಕೃಷ್ಣಶಾಸ್ತ್ರಿಗಳ ಮಾತುಗಳು ಚಿತ್ರಿಸಿರುವ ಹಾಗೆ ಯಾವ ಚಿತ್ರಕಾರ ಬರೆದಾನು? ಯಾವ ಕ್ಯಾಮರ ತೆಗೆದೀತು?

'ಕೃಷ್ಣಕಾಂತನ ಉಯಿಲಿ'ನ ರೋಹಿಣಿಯನ್ನು ಅವರ ಶಬ್ದಗಳು ಚಿತ್ರಿಸಿದ ಬಗೆ ಇದು:

"ರೋಹಿಣಿಯು ಕುಂದೆಗಿಂತ ರೂಪವತಿ, ಯೌವನಸಂಪನ್ನೆ, ಪ್ರೌಢೆ, ಮೋಹಕಾರಿ, ಮಾಯಕಾರಿ, ಬುದ್ಧಿವಂತೆ, ವಿದ್ಯಾವಂತೆ, ಧೃಷ್ಟೆ, ಚತುರೆ, ರಸಿಕೆ; ವಿಧವೆಯ ವೇಷಭೂಷಣಗಳಿಲ್ಲ; ದಿವ್ಯವಾಗಿ ಅಡಿಗೆ ಮಾಡುವಳು, ಹಾಡುವಳು, ಕಸೂತಿ ಕೆಲಸಮಾಡುವಳು, ಜಡೆ ಹಾಕುವಳು, ಹೂಕಟ್ಟುವಳು; ತುಂಬು ಯೌವನ; ರೂಪ ಉಕ್ಕುತ್ತಿತ್ತು."[9]

ಇಲ್ಲಿನ ಪ್ರತಿಯೊಂದು ಮಾತೂ ರೋಹಿಣಿಯನ್ನು ವರ್ಣಿಸುವುದಷ್ಟೇ ಅಲ್ಲ, ಇಡೀ ಕಾದಂಬರಿಯಲ್ಲಿ ನೇಯ್ದುಕೊಂಡಿರುವ ಅವಳ ಪಾತ್ರವನ್ನು ಸ್ಪಷ್ಟಪಡಿಸುತ್ತವೆ.

---

[8] ಬಂಕಿಮಚಂದ್ರ, ಪು. ೨೫೫

[9] ಅದೇ, ಪು. ೭೬-೭೭

ಇದೇ ಸಂದರ್ಭದಲ್ಲಿ ಗೋವಿಂದಲಾಲನನ್ನು ಕುರಿತು ಶಾಸ್ತ್ರಿಗಳು ಹೇಳುವುದು ಹೀಗೆ:

"ಭ್ರಮರೆ ಎಷ್ಟು ಗುಣವಂತಳೋ ಅಷ್ಟು ರೂಪವಂತಳಲ್ಲ; ಹೆಸರಿಗೆ ತಕ್ಕಂತೆ ಕಪ್ಪು; ಆದರೆ ಹೆಚ್ಚೇನೂ ಕಪ್ಪಿರಲಾರದು; ರೋಹಿಣಿಯನ್ನು ನೋಡಿ, ಅವಳ ಕಣ್ಣು ತುಟಿ ಒಲಪು ವೈಯಾರಗಳ ಪರಿಚಯವಾಗುವವರೆಗೂ ಗೋವಿಂದಲಾಲನು ಹೆಂಡತಿಯ ಕಪ್ಪನ್ನು ಅಷ್ಟಾಗಿ ಮನಸ್ಸಿಗೆ ಹತ್ತಿಸಿಕೊಂಡ ಹಾಗೆ ಕಾಣುವುದಿಲ್ಲ; ಅವಳು ಬೆಳ್ಳಗಿದ್ದಿದ್ದರೆ ಅವನು ದಾರಿತಪ್ಪುತ್ತಿರಲಿಲ್ಲವೆಂಬ ಭರವಸೆಯೇನೂ ಇಲ್ಲ" [10]

ನಮ್ಮಲ್ಲಿ ಇಂಥ ಚಿತ್ತಾಕರ್ಷಕ ವಿಮರ್ಶೆ, ಇಷ್ಟು ವಿಶ್ಲೇಷಾತ್ಮಕವಾಗಿ ಇನ್ನೊಂದು ಕಡೆ ಸುಲಭವಾಗಿ ಸಿಕ್ಕುವುದಿಲ್ಲ. ಒಂದೊಂದು ಮಾತಿನಲ್ಲಿ, ಸೂಕ್ತಿರೂಪ ವಾಕ್ಯದಲ್ಲಿ ಶಾಸ್ತ್ರಿಗಳು ಒಂದು ಪೂರ್ಣ ಪ್ರಪಂಚವನ್ನೇ ತೋರಬಲ್ಲರು. ಭವಭೂತಿಯನ್ನು ವಿಮರ್ಶಿಸುವಾಗ, ಸೀತೆಯ ಪಾತ್ರದ ವಿಚಾರಮಾಡುತ್ತಾ ಹೇಳುತ್ತಾರೆ: "ಆದರೆ ಸೀತೆಯ ಪಾಲಿಗೆ ಬಂದದ್ದೇನು?—ಕಾಡು, ದೂರು, ದುಃಖ." [11] ಸೀತೆಯ ದೌರ್ಭಾಗ್ಯವನ್ನು, ರಾಮಾಯಣದ ತಿರುಳನ್ನು ಇದಕ್ಕಿಂತ ಸಂಕ್ಷಿಪ್ತವಾಗಿ ಪರಿಣಾಮಕಾರಿಯಾಗಿ ಹೇಳುವುದು ಸಾಧ್ಯವೇ ಇಲ್ಲ. ಕಾಡು, ದೂರು, ದುಃಖ ಸೀತೆಯ ಪಾತ್ರದ ಮೂಲಕವಾಗಿ ಪ್ರಕಟವಾಗುವ ರಾಮಾಯಣದ ಮೂರು ಮಜಲುಗಳು. 'ಮೃಚ್ಛಕಟಿಕ'ದ ಕಥೆಯ ಸಾರಾಂಶ ಕೊಡುವಾಗ ಕೊನೆಯ ಮಾತು: "ವೇಶ್ಯೆಯಾಗಿದ್ದ ವಸಂತಸೇನೆ 'ವಧು'ವಾಗುವಳು." [12]

ಇದೇ ಬಗೆಯಲ್ಲಿ ಶಾಸ್ತ್ರಿಗಳು ಪಾತ್ರಗಳ ಅಂತರಂಗ ಬಹಿರಂಗಗಳೆರಡನ್ನು ತೆಗೆದಿಡುವ ರೀತಿ ಆಶ್ಚರ್ಯಕರವಾದುದು. ಅವರ ಹೋಲಿಕೆಗಳು ದೃಷ್ಟಾಂತಗಳು ನಿರಾಭರಣವಾದರೂ ಅಸಮಾನ್ಯವಾದುವು. 'ಕೃಷ್ಣಕಾಂತನ ಉಯಿಲಿ'ನ ಎರಡು ಪಾತ್ರಗಳ ಬಗೆಗೆ ಅವರು ಹೇಳುವುದು: "ಕುಂದೆ ಭೀರು, ಸಾಧು; ರೋಹಿಣಿಯು ಧೃಷ್ಟೆ; ಅವಳು ಹುಲಿ—ಹೆಣ್ಣು ಹುಲಿ; ಗೋವಿಂದಲಾಲನು ಎತ್ತು." [13] ಕಾಳಿದಾಸನ ಪಾತ್ರಗಳನ್ನು ಅವರು ವರ್ಣಿಸಿರುವುದು: "ಇರಾವತಿ, ಕೋಪ ಮಾತ್ಸರ್ಯಗಳ ಮುದ್ದೆಯಾದ ಹುಳಿಗಾಯಿ; ಧಾರಿಣೀ ಔಶೀನರೀ ದೇವಿಯರು ವಿಧಿಯಿಲ್ಲದೆ ಬಂದಾಗ ಗಂಡನೊಡನೆ ಹೇಗೋ ಹಾಗೆ ಸಮಾಧಾನ ಮಾಡಿಕೊಂಡಿದ್ದ ದೋರಹಣ್ಣುಗಳು; ಶಕುಂತಲೆ ಪತಿಗೋಸ್ಕರ ಪೂರ್ಣ ಸ್ವಾರ್ಥ

---

10 ಅದೇ, ಪು. ೭೫-೭೬

11 ಸಂಸ್ಕೃತ ನಾಟಕ, ಪು. ೨೨೬

12 ಅದೇ, ಪು. ೧೧೫

13 ಬಂಕಿಮಚಂದ್ರ, ಪು. ೮೨

ತ್ಯಾಗಮಾಡಿದ ಮೃದು ಮಧುರವಾದ ಅಖಂಡ ಪುಣ್ಯಫಲ.'[14] 'ವಿಷವೃಕ್ಷ'ದ ಹೀರೆಯನ್ನು ಕುರಿತು ಶಾಸ್ತ್ರಿಗಳ ವ್ಯಾಖ್ಯಾನ: "ಹೀರೆಯು ತರುಣ ವಯಸ್ಸಿನ ಹೆಂಗಸಾದರೂ (ವಯಸ್ಸು ೨೦) ವಿಧವೆಯಾದರೂ ಅವಳು ವಿಷವೃಕ್ಷದ ಬೆಳವಣಿಗೆಗೆ ಹದವಾದ ಕ್ಷೇತ್ರವಾಗಿದ್ದಳು." [15] ಇದು ವಾಸವದತ್ತೆಯ ವರ್ಣನೆ: "ರತ್ನಾವಳಿಯ ವಾಸವದತ್ತೆಯು ಮುಂಗೋಪದ ಮುದ್ದೆ." [16]

ಕೆಲವೊಮ್ಮೆ ಆಡುಮಾತುಗಳ ಬಳಕೆಯಿಂದ ನಿತ್ಯಸಂಗತಿಗಳಿಂದ ಶಾಸ್ತ್ರಿಗಳು ತಮ್ಮಶೈಲಿಗೆ ಒಂದು ಬಗೆಯ ಆತ್ಮೀಯತೆಯನ್ನು ತಂದುಕೊಡುತ್ತಾರೆ: 'ಸ್ವಪ್ನವಾಸವದತ್ತ'ದ ಪದ್ಮಾವತಿಯ ಗುಣಗಳನ್ನು ಹೇಳುತ್ತಾ ಅವರು ಬರೆದಿರುವುದು: "ಅವಳಲ್ಲಿ ಜೋರಿಲ್ಲ, ಜಬರುದಸ್ತಿಲ್ಲ, ಮುಂದಾಳುತನವಿಲ್ಲ."[17] 'ಮಾಳವಿಕಾಗ್ನಿಮಿತ್ರ'ದ ಆವರಣವನ್ನು ಕುರಿತು ಅವರು ಹೇಳುವುದು: "ಕಥೆ ನಡೆಯುವುದು ರಾಜನ ಅಂತಃಪುರ; ಅಲ್ಲಿ ಒಂದು ಸ್ತ್ರೀ ಮಲೆಯಾಳ . . ."[18] ಭಾಸನನ್ನು ವಿಮರ್ಶಿಸುತ್ತಾ ಒಂದುಕಡೆ ಅವರು ಬರೆದಿರುವುದು: "ಶ್ರೀ ರಾಮನ ಯೌವರಾಜ್ಯಪಟ್ಟಾಭಿಷೇಕ ಮಹೋತ್ಸವದಲ್ಲಿ ಸಂಭ್ರಮದಿಂದ ಮೈಮರೆತು ದುಡುದುಡನೆ ಓಡಿಯಾಡುತ್ತಿರುವ ಪ್ರತೀಹಾರಿಯ ಈ ಚಿತ್ರವನ್ನು ನೋಡಿ."[19] —ಇಲ್ಲಿ ಜಬರುದಸ್ತು, ಸ್ತ್ರೀ ಮಲೆಯಾಳ, ದುಡುದುಡನೆ ಈ ಪ್ರಯೋಗಗಳು ಬರವಣಿಗೆಯಲ್ಲಿ ಎದ್ದುಕಾಣಿಸಿಕೊಂಡು, ಹೊಸತಿರುವನ್ನೇ ಕೊಡುತ್ತವೆ.

ಶಾಸ್ತ್ರಿಗಳು ತಮ್ಮ ಹೋಲಿಕೆಗಳಲ್ಲಿ ಅನಿರೀಕ್ಷಿತವಾದ ಸ್ವಾರಸ್ಯವಾದ ಸಂಬಂಧವನ್ನು ಕುದುರಿಸುವುದರಲ್ಲಿ ಗಟ್ಟಿಗರು. ಒಂದು ಉದಾಹರಣೆ ಸಾಕು: "ಕೆಲವು ವೇಳೆ, ಪರೀಕ್ಷೆಗೆ ಹೋಗಿದ್ದ ಯುವಕರಿಗೆ ಇತ್ತಕಡೆ ಮದುವೆಯೋ ಪುತ್ರೋತ್ಸವವೋ ಆಗುವುದು, ಅತ್ತಕಡೆ ಪರೀಕ್ಷೆಯಲ್ಲಿ ತೇರ್ಗಡೆಯಾಯಿತೆಂಬ ವರ್ತಮಾನವೂ ಬರುವುದು. ಹಾಗೇ ವತ್ಸರಾಜನಿಗೂ, ಆರನೆಯ ಅಂಕದಲ್ಲಿ, ಅತ್ತಕಡೆ ಕೈತಪ್ಪಿ ಹೋದ ಹೊಸ ರಾಜ್ಯವೂ ದೊರಕುವುದು, ಇತ್ತಕಡೆ ಕಳೆದುಕೊಂಡ ಹೆಂಡತಿಯೂ ಕೈಸೇರುವಳು."[20]

ಎಷ್ಟೇ ಕಷ್ಟವಾದ, ಸಂಕೀರ್ಣವಾದ ವಿಷಯವನ್ನಾದರೂ ಕೃಷ್ಣಶಾಸ್ತ್ರಿಗಳು ಸರಳವಾಗಿ, ಸುಲಭವಾಗಿ ಹಿಡಿಮಾತಿನಲ್ಲಿ ವಿವರಿಸಬಲ್ಲರು. ತಮ್ಮ ವಿಚಾರ

---

14 ಸಂಸ್ಕೃತನಾಟಕ, ಪು. ೧೫೪

15 ಬಂಕಿಮಚಂದ್ರ, ಪು. ೫೮

16 ಭಾಸಕವಿ, ಪು. ೬೪

17 ಅದೇ. ಪು. ೪೮

18 ಸಂಸ್ಕೃತನಾಟಕ, ಪು. ೧೩೨

19 ಅದೇ. ಪು. ೮೩

20 ಭಾಸಕವಿ, ಪು. ೬೨

ಧಾರೆಯನ್ನು ಒಪ್ಪದವರ ಮನಸ್ಸನ್ನೂ ಅವರು ಆಕರ್ಷಿಸುತ್ತಾರೆ. ಅವರ ವಿವರಣೆ, ವಿಶ್ಲೇಷಣೆ, ವಾದ ಸರಣಿಗಳು ಎದುರಾಳಿಗಳನ್ನೂ ಸ್ತಬ್ಧಗೊಳಿಸುತ್ತವೆ. ಸಂದರ್ಭ ಬಂದರೆ ಕಟಕಿ, ವ್ಯಂಗ್ಯಗಳನ್ನೂ ಶಾಸ್ತ್ರಿಗಳು ಸಮರ್ಪಕವಾಗಿ ಬಳಸುತ್ತಾರೆ. ವಿಸ್ತಾರವಾದ ಲೋಕಾನುಭವ, ಆಳವಾದ ಪಾಂಡಿತ್ಯ, ಪ್ರಖರವಾದ ಪ್ರತಿಭೆ ಅವರಲ್ಲಿ ಮುಪ್ಪುರಿಗೊಂಡಿರುವುದರಿಂದ ಅವರ ಬರವಣಿಗೆಗೆ ಒಂದು ವ್ಯಾಪಕತೆಯಿದೆ. ಅದರಲ್ಲಿ ಬಿಗಿಯಿದೆ, ಬನಿಯಿದೆ. ತಪಸ್ಸಿನಿಂದ ಸಿದ್ಧಿಸಬಲ್ಲ ಕಾಂತಿಯಿದೆ.

ಕೃಷ್ಣಶಾಸ್ತ್ರಿಗಳ ಗದ್ಯ ಕಲೆಯೂ ಹೌದು; ಕೌಶಲವೂ ಹೌದು. ಸ್ಪಷ್ಟತೆ ಖಚಿತತೆ ಅವರ ಶೈಲಿಯ ಪ್ರಧಾನ ಲಕ್ಷಣಗಳು. ಅದರಲ್ಲಿ ಬೆಡಗಿಲ್ಲ ಬಿನ್ನಾಣವಿಲ್ಲ; ಹಾಗೆಂದು ಕುರೂಪ, ಅವಲಕ್ಷಣಗಳು ತಲೆ ಹಾಕಿಲ್ಲ. ಅಹಿಂಸೆಯನ್ನು ಕುರಿತ ಅವರ ವ್ಯಾಖ್ಯಾನ ಅವರ ಬರವಣಿಗೆಯ ಅತ್ಯುತ್ತಮ ಮಾದರಿಗೆ ಒಂದು ನಿದರ್ಶನ:

"ಸತ್ವಗುಣವೆಂದರೆ ಅಕರ್ಮವಲ್ಲ, ನಿರ್ವೀರ್ಯತೆಯೂ ಅಲ್ಲ, ಅಹಿಂಸೆಯೂ ಅಷ್ಟೇ .... ಅಹಿಂಸೆಯೆಂಬುದು ಅಪರಂಜಿಯ ಹಾಗೆ; ಶುದ್ಧ ಅಪರಂಜಿ ನಾಣ್ಯ ವಾಗುವುದಿಲ್ಲ; ವ್ಯವಹಾರಕ್ಕೆ ಸಲ್ಲುವುದಿಲ್ಲ; ಅದಕ್ಕೆ ಸ್ವಲ್ಪವಾದರೂ ಪೆಡಸಾದ ಕೆಚ್ಚನೆಯ ತಾಮ್ರ ಬೆರೆಯಬೇಕು. ಹಾಗೆಯೇ ರಾಜನಲ್ಲಿ ಸ್ವಲ್ಪ ಕಾಠಿಣ್ಯ ಬೇಕು .... ದುಷ್ಟ ನಿಗ್ರಹಕ್ಕೆ ಕ್ರೌರ್ಯವೂ ಬೇಕು, ಹಿಂಸೆಯೂ ಬೇಕು. ಆ ಹಿಂಸೆ ಹಿಂಸೆಯಲ್ಲ, ಧರ್ಮ. ರಾಮರಾಜ್ಯದಲ್ಲಿಯೂ ರಾಕ್ಷಸ ಸಂಹಾರವಾಗಿಯೇ ಆಯಿತು. ಸ್ವಾರ್ಥಸಾಧನೆಗೆ ದೇಶದ ಯುವಕರನ್ನು ಬಲಿಕೊಡುವುದು ಹಿಂಸೆಯೇ ಹೊರತು, ಶಿಷ್ಯಪರಿಪಾಲನಕ್ಕೆ ಹಿಂಸಾಕ್ರೌರ್ಯಗಳನ್ನು ಆಚರಿಸುವುದು ಪಾಪವಲ್ಲ. ಆದ್ದರಿಂದ, ಹಿಂಸಾಕಾರ್ಯಕ್ಕಿಂತಲೂ ಅದರಹಿಂದೆ ಇರುವ ಉದ್ದೇಶವೇ ಪ್ರಧಾನ .... ಹಸುವಿನಿಂದ ಹಾಲು ಕರೆದುಕೊಳ್ಳಬೇಕಾದರೂ ಅಲ್ಪ ಸ್ವಲ್ಪ ಹಿಂಸೆ ಮಾಡಲೇ ಬೇಕಾಗುತ್ತದೆ .... ಅಹಿಂಸೆಯೆಂದರೆ ಕ್ರೌರ್ಯವಿಲ್ಲದಿರುವುದು; ನಿಸ್ತೇಜತೆಯಲ್ಲ; ತಮೋಗುಣವಲ್ಲ; ಎಷ್ಟಾದರೂ ತಗ್ಗಿ ಬಗ್ಗಿ ನಡೆಯುವುದಲ್ಲ. ತಗ್ಗುತ್ತಾಹೋದರೆ ನೆಲದೊಳಗೆ ಐಕ್ಯವಾಗುವುದೇ ಗತಿ."[21]

* * *

ನಮ್ಮ ಗದ್ಯಶಿಲ್ಪಿಗಳಲ್ಲಿ ಒಬ್ಬರಾಗಿ ಕೃಷ್ಣಶಾಸ್ತ್ರಿಗಳು ಕನ್ನಡ ಗದ್ಯಕ್ಕೆ ಒಂದು ಹೊಸ ಮಾದರಿಯನ್ನೇ ನಿರ್ಮಿಸಿಕೊಟ್ಟರು; ಅದಕ್ಕೆ ಅಗತ್ಯವಾದ ನೆಲೆ-ಬೆಲೆಗಳನ್ನು ಒದಗಿಸಿದರು. ಗದ್ಯದ ಕಾರ್ಯವನ್ನು ವರ್ಣಿಸುತ್ತಾ ಎ. ಸಿ. ವಾರ್ಡ್, ಅದು ಮೂರು ಮುಖದ್ದೆಂದು ಹೇಳುತ್ತಾನೆ.[22] ಲೇಖಕನ ಉದ್ದೇಶಿತ ಅರ್ಥವನ್ನು ಸ್ಪಷ್ಟವಾಗಿ ಅಭಿವ್ಯಕ್ತಗೊಳಿಸುವುದು; ಭಾಷೆಯನ್ನು ನಿರ್ದಿಷ್ಟವಾಗಿ ಬಳಸುವುದು; ಸತತ ಆನಂದವನ್ನು ನೀಡುವುದು—ಇವೇ ಗದ್ಯದ ಆ ಮೂರು ಮುಖಗಳು.

---

21 ವಚನಭಾರತ, ಪೀಠಿಕೆ, ಪು. ೫೮–೫೯

22 A. C. Ward : ಅದೇ. ಪು. ೨೩

ಕೃಷ್ಣಶಾಸ್ತ್ರಿಗಳ ಗದ್ಯ ಈ ಒಂದೊಂದಕ್ಕೂ ಅತ್ಯುತ್ತಮ ಮಾದರಿಯಾಗಿದೆ. ಕಷ್ಟವಿಲ್ಲದೆ, ಕೃತಕತೆಯಿಲ್ಲದೆ, ಪಾಂಡಿತ್ಯದ ಭಾರಹೇರದೆ, ಅವರಂತೆ ಗದ್ಯ ಬರೆಯಬಲ್ಲ ಲೇಖಕರು ಯಾವ ಭಾಷೆಯಲ್ಲಾದರೂ ವಿರಳವೇ.

ಇಂಗ್ಲಿಷ್ ಕಾದಂಬರಿಕಾರನೊಬ್ಬನ ಗದ್ಯವನ್ನು ಕುರಿತು ವಿಮರ್ಶಿಸುತ್ತಾ ಅಂಥೊನಿ ಟ್ರೊಲೊಪ್ ಒಂದು ಮಾತು ಹೇಳಿದ್ದಾನೆ: "The readers, without labour, knows what he means, and knows all that he means."[23]

ಕೃಷ್ಣಶಾಸ್ತ್ರಿಗಳು ನಿರ್ಮಿಸಿರುವ ಗದ್ಯಶಿಲ್ಪದ ಮಹತ್ವದ ಗುಟ್ಟಾದರೂ ಇಲ್ಲೇ ಅಡಗಿದೆ.

[23] Frederick Page (ed.): *An Autobiography*, ಪು. ೨೪೪

**ದೇ. ಜವರೇಗೌಡ**

# ಹೊಸ ಪರಂಪರೆಯ ನಿರ್ಮಾಪಕರು—ಎ.ಆರ್.ಕೃ.

'ಶ್ರೀ' ಅವರನ್ನು ಕನ್ನಡ ನವೋದಯ ಸಮಯದ ಆಚಾರ್ಯಪುರುಷರೆಂದು ಸಾಮಾನ್ಯವಾಗಿ ಕರೆಯುವುದುಂಟು. ಅವರು ಆ ಬಿರುದಿಗೆ ಸರ್ವಯೋಗ್ಯರೆಂಬುದರಲ್ಲಿ ಸಂದೇಹವಿಲ್ಲ. ಅಂಥ ಬಿರುದಿಗೆ ಯೋಗ್ಯರಾದವರಲ್ಲಿ ದಿವಂಗತ ಶ್ರೀಮಾನ್ ಕೃಷ್ಣಶಾಸ್ತ್ರಿಗಳೂ ಒಬ್ಬರು. ಅವರು 'ಶ್ರೀ'ಯವರಂತೆ ವಾಗ್ಮಿಗಳಾಗಿರಲಿಲ್ಲ, ಕನ್ನಡನಾಡಿನ ಮೂಲೆಮೂಲೆಗಳಲ್ಲಿ ಸಂಚರಿಸಿ ಜನಸಂಪರ್ಕವನ್ನು ಬೆಳೆಸಿಕೊಳ್ಳಲಿಲ್ಲ; ಸಮಯದೊರೆತಾಗ ಮುನ್ನುಗ್ಗಿ ನಾಯಕತ್ವವನ್ನು ಬೆಳೆಸಿಕೊಳ್ಳುವ ಸ್ವಭಾವ ಅವರದಾಗಿರಲಿಲ್ಲ. ಅವರದು ಸಂಕೋಚ ಪ್ರಕೃತಿ; ನಡೆಯಲ್ಲಿ ಮಾತ್ರವಲ್ಲ ನುಡಿಯಲ್ಲಿಯೂ ಸಂಕೋಚ ಎದ್ದುಕಾಣುತ್ತಿತ್ತು. ಮಾತು ಮಿತ, ಸರಳ. ಅವರ ಬರವಣಿಗೆಯಲ್ಲಿ ಕಾಣುವ ಹಿತರಸತೆಗಳು ಭಾಷಣಗಳಲ್ಲಿ ಕಾಣುತ್ತಿರಲಿಲ್ಲ. ಮಾತಿಗಿಂತ ಕೃತಿಯಲ್ಲಿ ಅವರಿಗೆ ನಂಬಿಕೆ. ಎಲೆಮರೆಯ ಕಾಯಂತೆ ಯಾವಾಗಲೂ ದುಡಿಯುವುದರಲ್ಲಿ ಅವರು ಸುಖ ಕಾಣುತ್ತಿದ್ದರು. ಆಡಂಬರ ಪ್ರದರ್ಶನಗಳು ಅವರ ಚಾಳಿಗೆ ಒಗ್ಗಿಬಂದುವಾಗಿರಲಿಲ್ಲ. 'ಶ್ರೀ' ಅವರು ಉತ್ಸವಮೂರ್ತಿಯಾಗಿ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯನ್ನು ಕೃಷ್ಣಶಾಸ್ತ್ರಿಗಳು ಮೂಲಮೂರ್ತಿಯಾಗಿದ್ದುಕೊಂಡೇ ಸಲ್ಲಿಸಿದರು. ಅವರ ಆ ಸೇವೆಗೆ ಸಜೀವ ನಿದರ್ಶನವಾಗಿ ಇಂದಿಗೂ ಪ್ರಬುದ್ಧಕರ್ಣಾಟಕ ಬೆಳಗುತ್ತಿದೆ. ಅವರ ದೂರದರ್ಶಿತ್ವ ಉತ್ಕಟಭಾಷಾಭಿಮಾನ ಜೀವನಶ್ರದ್ಧೆಗಳಿಗೆ ಸಾಕ್ಷಿಯೆಂಬಂತೆ ಅದು ಅಂದು ಜನ್ಮತಾಳಿತು.

ಆಧುನಿಕ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಪ್ರಬುದ್ಧಕರ್ಣಾಟಕಕ್ಕೆ ಮಹತ್ತರವಾದ ಆಚಾರ್ಯಸ್ಥಾನವಿದೆ. ಅದು ಎಚ್ಚೆತ್ತ ಕನ್ನಡನಾಡಿನ ಶಕ್ತಿಸಾಮರ್ಥ್ಯಗಳ ಸಂಕೇತವಾಗಿ, ಆ ನಾಡಿನ ಭವಿಷ್ಯವನ್ನು ರೂಪಿಸುವ ಪ್ರವಾದಿಶಕ್ತಿಯಾಗಿ ಕನ್ನಡಿಗರ ಆಸೆ ಆಕಾಂಕ್ಷೆಗಳಿಗೆ ನಾಲಗೆಯಾಗಿ, ಕವಿಲೇಖಕ ಸಮೂಹಕ್ಕೆ ಸ್ಫೂರ್ತಿ ಶಕ್ತಿಯಾಗಿ ಪರಿಣಮಿಸಿದೆ. ಅದರ ಬೆಳವಣಿಗೆಯಲ್ಲಿ ಕನ್ನಡ

ಸಾಹಿತ್ಯದ ಅಭ್ಯುದಯವನ್ನೂ, ಕನ್ನಡಸಾಹಿತ್ಯದ ಬೆಳವಣಿಗೆಯಲ್ಲಿ ಅದರ ಅಭ್ಯುದಯವನ್ನೂ ಗುರುತಿಸಬಹುದಾಗಿದೆ. ಅದು ಅನೇಕ ಕವಿಗಳನ್ನು ಕತೆಗಾರ ರನ್ನು ಕಾದಂಬರಿಕಾರರನ್ನು, ಹಲವು ಬಗೆಯ ಲೇಖಕರನ್ನು ಸೃಷ್ಟಿಸಿತು, ಅವರಿಗೆ ಆಸರೆ ನೀಡಿತು, ಮೆರೆಸಿತು; ಜನಜೀವನದಲ್ಲಿ ಜಾಗೃತಿಯುಂಟುಮಾಡಿತು. ಹತ್ತಾರು ವಾಗ್ಮಿಗಳು ನೂರಾರು ವೇದಿಕೆಗಳಿಂದ ಮಾಡಬಹುದಾದ ಕೆಲಸವನ್ನು ಅದೊಂದೇ ಅತ್ಯಂತ ಪರಿಣಾಮಕಾರಿಯಾಗಿ ಮಾಡಿತು. ಅದರ ಉಗಮದೊಡನೆ ಕನ್ನಡ ನಾಡಿನ ಜಾಗೃತಿಯೂ ಪ್ರಾರಂಭವಾಯಿತೆನ್ನಬಹುದು.

ಇಂಥ ಪತ್ರಿಕಾಶಕ್ತಿಗೆ ಜನ್ಮವಿತ್ತು ಬೆಳೆಸಿದ ಪೋಷಿಸಿದ ಕಾರಣಿಕರು ಕೃಷ್ಣಶಾಸ್ತ್ರಿಗಳು. ಅದನ್ನು ತಾಯಿಯಂತೆ ಲಾಲಿಸಿದರು; ತಂದೆಯಂತೆ ಪೋಷಿ ಸಿದರು. ಲೇಖಕರ ಮನೆಯಿಂದ ಅಚ್ಚುಕೂಟಕ್ಕೆ, ಅಚ್ಚುಕೂಟದಿಂದ ಚಂದಾ ದಾರರ ಮನೆಗಳಿಗೆ ಬೇಸರವಿಲ್ಲದೆ ಅಲೆದಾಡಿ ಅದನ್ನು ಹೊತ್ತು ಮೆರೆದಾಡಿದರು. ಇಂಗ್ಲೆಂಡಿನಲ್ಲಿ ಸ್ಪೆಕ್ಟೇಟರ್ ಟ್ಯಾಟ್ಲರ್ ಮೊದಲಾದ ಅನೇಕ ಪತ್ರಿಕೆಗಳು ಮಾಡುತ್ತಿದ್ದ ಕೆಲಸವನ್ನು ಈ ಪತ್ರಿಕೆಯೊಂದೇ ಮಾಡುತ್ತಿತ್ತು, ಮಾಡುತ್ತಿದೆ. ಇದು ಹೊಸಗನ್ನಡ ಕಾವ್ಯಶ್ರೀಯನ್ನು ವಿದ್ಯಾವಂತರ ಮನೆಮನೆಗೂ ಕೊಂಡೊಯ್ದು ದಲ್ಲದೆ ಹೊಸಗನ್ನಡ ಗದ್ಯದ ಪೂರ್ಣವಿಕಾಸಕ್ಕೂ ವೈಭವಸಂಪತ್ತಿಗೂ ಕಾರಣ ವಾಯಿತು. ವೈಜ್ಞಾನಿಕ ಸಾಹಿತ್ಯಕ್ಕೂ ಇದು ನಾಂದಿಯನ್ನು ಹಾಡಿತು. ಇದರ ಮಾದರಿಯನ್ನನುಸರಿಸಿ ಅನೇಕ ಪತ್ರಿಕೆಗಳೂ ಜನ್ಮತಾಳಿದ್ದುಂಟು. ಆದರೆ ಅಂದಿ ನಿಂದ ಇಂದಿನವರೆಗೆ ಇದೊಂದೇ ಆಚಾರ್ಯ ಪತ್ರಿಕೆಯಾಗುಳಿದಿದೆ. ಕೃಷ್ಣಶಾಸ್ತ್ರಿ ಮತ್ತು ಪ್ರಬುದ್ಧ ಕರ್ಣಾಟಕ ಇವೆರಡೂ ಬೇರೆಬೇರೆಯಲ್ಲ; ಅವು ಅಭಿನ್ನ ಶಕ್ತಿಗಳು.

'ಶ್ರೀ'ಯವರಾದನಂತರ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡವನ್ನು ಮನಸ್ಸಿಗೆ ಹಚ್ಚಿಕೊಂಡು ಅದಕ್ಕಾಗಿ ತ್ರಿಕರಣಪೂರ್ವಕವಾಗಿ ಶ್ರಮಿಸಿದ ಹಿಂದಿನ ಇಬ್ಬರು ಪ್ರಾಧ್ಯಾಪಕರಲ್ಲಿ ಇವರು ಒಬ್ಬರು. ಕನ್ನಡದಿಂದ ಮಾತ್ರ ಕನ್ನಡಿಗರ ಉದ್ಧಾರ ಸಾಧ್ಯವೆಂಬುದನ್ನು ಅವರು ತಿಳಿದಿದ್ದರು. ಅನ್ಯಭಾಷೆಯಿಂದ ಕನ್ನಡ ಕ್ಕೊದಗುತ್ತಿದ್ದ ಉಪಟಳವನ್ನವರು ಸಹಿಸುತ್ತಿರಲಿಲ್ಲ. ಅವರ ಮನಸ್ಸು ಯಾವಾಗಲೂ ತೆರೆದ ಪುಸ್ತಕವಾಗಿತ್ತು. ಬಾಯಿಗೆ ಬಂದದ್ದನ್ನು, ಖಾರವಾದರೂ ಸರಿಯೆ ನಿಸ್ಸಂಕೋಚವಾಗಿ ಒದರಿಬಿಡುತ್ತಿದ್ದರು. ಅನ್ಯಭಾಷೆಗಳಿಂದ ಕನ್ನಡ ಕ್ಕಾಗುತ್ತಿದ್ದ ಅನ್ಯಾಯವನ್ನು ಅನೇಕ ವೇದಿಕೆಗಳಿಂದ, ಅನೇಕ ಪತ್ರಿಕೆಗಳ ಮೂಲಕ ಘಂಟಾಘೋಷವಾಗಿ ಸಾರುತ್ತಿದ್ದರು. ಹೈದರಾಬಾದ್ ಸಮ್ಮೇಳನದಲ್ಲಿ ಅವರು ಮಾಡಿದ ಭಾಷಣದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಇಂದಿಗೂ ಸತ್ಯ ವಾಗಿವೆ. ಹಿಂದಿಯಿಂದ ಕನ್ನಡಕ್ಕೊದಗಬಹುದಾದ ಅಪಾಯವನ್ನು ಅಂದೇ ಅವರು ಮನಗಂಡಿದ್ದರು, ಅಂದೇ ಅವರು ಪ್ರವಾದಿಯಂತೆ ನುಡಿದಿದ್ದರು. ಅವರ

ಆ ಪ್ರಬಂಧವನ್ನೋದುವಾಗ ಅಲ್ಲಿ ಉಕ್ತವಾಗಿರುವ ಅಭಿಪ್ರಾಯದ ಸತ್ಯತೆಯ ಬಗ್ಗೆ ಯಾರಾದರೂ ಸೋಜಿಗಪಡುವಂತಿದೆ. ಸ್ವಯಂ ಸಂಸ್ಕೃತ ಪಂಡಿತರಾದ ಅವರು ಆ ಭಾಷೆಯ ಮೇಲೆಯೂ ಖಡ್ಗವನ್ನು ಬೀಸದಿರಲಿಲ್ಲ. ಎದುರಾಳಿಗಳು ಅವರ ಮೇಲೆ ಪತ್ರಿಕೆಗಳ ಮೂಲಕ ಕತ್ತಿಯನ್ನು ಮಸೆದದ್ದೂ ಉಂಟು. ಆದರೆ ಎಂತಹ ಪ್ರತಿಭಟನೆಯ ಮುಂದೆಯೂ ಅವರ ಸತ್ಯನಿಷ್ಠೆ ಅಚಲಶ್ರದ್ಧೆಗಳು ಕರಗಲಿಲ್ಲ.

ಅವರು ಕನ್ನಡ ಅಧ್ಯಾಪಕರಾಗಿ ಕಾಲೇಜಿನಲ್ಲಿ ಕೆಲಸಕ್ಕೆ ಸೇರಿದಾಗ ಕನ್ನಡದ ಸ್ಥಿತಿ ತುಂಬ ನಿರಾಶಾದಾಯಕವಾಗಿತ್ತು. ಪಠ್ಯಕ್ರಮದಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನಮಾನವಿರಲಿಲ್ಲ. ಇತರ ಪ್ರಾಧ್ಯಾಪಕರು ಕನ್ನಡ ಎಂದರೆ ಮೂಗು ಮುರಿಯುತ್ತಿದ್ದರು. ಕನ್ನಡದ ತರಗತಿಯೆಂದರೆ ವಿದ್ಯಾರ್ಥಿಗಳಿಗೆ ಬೇಕಾಬಿಟ್ಟಿ. 'ಪಂಡಿತ'ನೆಂಬ ಅವಹೇಳನಕ್ಕೆ ಗುರಿಯಾಗಿದ್ದ ಅವನು ವಿಶ್ವವಿದ್ಯಾನಿಲಯದ ಸಮಾಜದಲ್ಲಿ ಯೋಗ್ಯ ಸ್ಥಾನಮಾನಗಳನ್ನು ಸಂಪಾದಿಸುವುದು ತುಂಬ ಕಷ್ಟವಾಗಿತ್ತು. ಕನ್ನಡ ಅಧ್ಯಾಪಕರೆಂದರೆ ಶಾಲುಹೊದೆದ ನಶ್ಯಡಬ್ಬಿ ಹಿಡಿದ ಕಚ್ಚೆಪಂಚೆಯ ನಿಸ್ಸಾರ ವ್ಯಕ್ತಿಯೆಂಬ ಭಾವನೆ ವಿದ್ಯಾರ್ಥಿಗಳಲ್ಲಿ ಬೇರೂರಿದ್ದ ಕಾಲವದು. ಇಂಗ್ಲಿಷ್ ಅಧ್ಯಾಪಕರಂತೆ ಸೂಟು ಹಾಕಿಕೊಂಡು ರುಮಾಲು ಧರಿಸಿದ ಮೇಷ್ಟ್ರು ಕನ್ನಡ ತರಗತಿಯನ್ನು ಮೊಟ್ಟಮೊದಲನೆಯ ಸಾರಿ ಪ್ರವೇಶಿಸಿದಾಗ ವಿದ್ಯಾರ್ಥಿಗಳಿಗೆ ದಿಗ್ಭ್ರಮೆಯಾಗಿರಬೇಕು. ಯಾರೋ ಕನ್ನಡೇತರ ಅಧ್ಯಾಪಕರು ಗುರಿತಪ್ಪಿ ತಮ್ಮ ತರಗತಿಗೆ ಪ್ರವೇಶಿಸಿರಬೇಕೆಂದು ಕೆಲವರಾದರೂ ವಿದ್ಯಾರ್ಥಿಗಳು ಆಗ ಅಂದುಕೊಂಡಿದ್ದಿರಬಹುದು. ಕಾಳಿದಾಸನ ಶಾಕುಂತಲ ನಾಟಕವನ್ನು ಇಂಗ್ಲಿಷ್ ಭಾಷೆಯ ಮೂಲಕ ಒಂದು ಗಂಟೆಯ ಕಾಲ ಬೋಧಿಸಿದಾಗ ವಿದ್ಯಾರ್ಥಿಗಳು ಸೋಜಿಗಗೊಂಡಿರಬೇಕು. ಇವರು ಶಾಲು ಪಂಡಿತರಲ್ಲ, ಹೊಸಕಾಲದ ಪರಿಷ್ಕೃತ ಪಂಡಿತರಿರಬೇಕೆಂಬುದಾಗಿ ಅವರು ಭಾವಿಸಿರಬೇಕು. ತಾವು ಇತರ ಅಧ್ಯಾಪಕರಿಗೇನೂ ಕಡಿಮೆಯಲ್ಲ ಎಂಬುದನ್ನು ತೋರಿಸುವುದಕ್ಕಾಗಿಯೋ ವಿದ್ಯಾರ್ಥಿಗಳ ಗಮನ ಗೌರವಗಳನ್ನು ಆಕರ್ಷಿಸುವ ಸಲುವಾಗಿಯೋ ಅವರು ಹಾಗೆ ಮಾಡಿದ್ದುಂಟು. ಅವರ ಎಣಿಕೆ ತಪ್ಪಾಗಿರಲಿಲ್ಲ. ಕೃಷ್ಣಶಾಸ್ತ್ರಿಗಳ ನವೀನ ಬೋಧನರೀತಿಯಿಂದ ವಿದ್ಯಾರ್ಥಿಗಳು ತೃಪ್ತಿಗೊಂಡರು. ಕನ್ನಡ ಭಾಷೆಯೂ ಬೋಧನಾರ್ಹವಾದದ್ದು, ಕನ್ನಡದಲ್ಲಿಯೂ ಕಲಿಯುವುದಿದೆ ಎಂಬ ಭಾವನೆ ಅವರಲ್ಲಿ ಮೂಡಿತು.

ಕೃಷ್ಣಶಾಸ್ತ್ರಿಗಳು ಕನ್ನಡದ ಕಟ್ಟಾಳುಗಳಾದರೂ ಅವರ ಭಾಷಣ ಲೇಖನಗಳಲ್ಲಿ ಪಾಠಪ್ರವಚನಗಳಲ್ಲಿ ಕನ್ನಡ ಪಾಂಡಿತ್ಯಕ್ಕಿಂತ ಸಂಸ್ಕೃತ ಪಾಂಡಿತ್ಯದ ಪ್ರಭಾವ ಎದ್ದು ಕಾಣುತ್ತಿತ್ತು. ಸಂಸ್ಕೃತಭಾಷೆಯ ಮಹಾಕಾವ್ಯ ನಾಟಕಗಳ ಸಾರ ಸೊಗಸುಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವುದೇ ಅವರ ಉದ್ದೇಶ

ವಾಗಿತ್ತು. ಹರಿಶ್ಚಂದ್ರ ಕಾವ್ಯ ಸಂಗ್ರಹ, ಕವಿಜಿಹ್ವಾಬಂಧನ ಮತ್ತು ಸರ್ವಜ್ಞ ಕವಿ, ಈ ಮೂರು ಹೊತ್ತಗೆಗಳು ಮಾತ್ರ ಅವರ ಕನ್ನಡ ಪಾಂಡಿತ್ಯಕ್ಕೆ ಹೆಗ್ಗುರುತುಗಳಾಗಿವೆ. ಉಳಿದುವುಗಳೆಲ್ಲ ಬಹುತೇಕವಾಗಿ ಅವರ ಸಂಸ್ಕೃತ ವಿದ್ವತ್ತಿನ ಅಪೂರ್ವ ಫಲಗಳಾಗಿವೆ. ಶ್ರೀಪತಿಯ ಕಥೆಗಳು ಅವರ ಸ್ವತಂತ್ರ ಸೃಜನಶಕ್ತಿಗೆ ನಿದರ್ಶನವಾಗಿರುವಂತೆಯೇ ಸಂಸ್ಕೃತನಾಟಕ ಮತ್ತು ಬಂಕಿಮಚಂದ್ರ ಗ್ರಂಥಗಳು ವಿಮರ್ಶಾ ಸಾಹಿತ್ಯಕ್ಕೆ ಮಾದರಿಯಾಗಿವೆ. ಕನ್ನಡ ಸಂಸ್ಕೃತ ಶಬ್ದಗಳ ಮಧುರ ಸಾಂಗತ್ಯ ಅವರ ಶೈಲಿಯ ವೈಶಿಷ್ಟ್ಯ; ಲಕ್ಷಣ ಸಮನ್ವಿತವೂ ಸರಳಶುದ್ಧವೂ ಹಿತಮಿತವೂ ಆದ ಅವರ ಮಾತಿನ ಮೋಡಿಯಲ್ಲಿ ಪ್ರಜ್ಞಾಪೂರ್ವಕವಾದ ಪರಂಪರೆಯ ಸುಗಂಧ ಸೂಸುತ್ತದೆ.

ಅಧ್ಯಾಪಕ–ಪ್ರಾಧ್ಯಾಪಕ ವೃತ್ತಿಯಲ್ಲಿದ್ದಾಗ ಅವರು ಬರೆದ ಸಾಹಿತ್ಯದ ಮೊತ್ತ ಸ್ವಲ್ಪ. ಆದರೆ ಆ 'ಸ್ವಲ್ಪ' ಅಪೂರ್ವ ಬೆಲೆಯುಳ್ಳದ್ದು. ಸಂಸ್ಕೃತ ನಾಟಕದಂಥ ವಿಮರ್ಶಗ್ರಂಥ ಪ್ರಪಂಚದ ಯಾವ ಭಾಷೆಯಲ್ಲಿಯೂ ಬಂದಿಲ್ಲವೆಂದೇ ಹೇಳಬಹುದು. ಪ್ರಬುದ್ಧ ಕರ್ಣಾಟಕದ ಮತ್ತು ಪ್ರಕಟನ ಸಮಿತಿಯ ಅಧ್ಯಕ್ಷ ಪದವಿಗಳನ್ನು ಅನಿವಾರ್ಯವಾಗಿ ಕಟ್ಟಿಕೊಂಡದ್ದರಿಂದ ಅವರ ಬರವಣಿಗೆ ಸಾಕಷ್ಟು ಸಾಗಲಿಲ್ಲ. ಆದರೆ ಆಗ ಮಾಡಲಾಗದ್ದನ್ನು ನಿವೃತ್ತರಾದ ಮೇಲೆ ಮಾಡಿ ಮುಗಿಸಿದರು. ಬಹು ಮಂದಿ ಸರ್ಕಾರಿ ನೌಕರರು ನಿವೃತ್ತಿಯ ವೇಳೆಗೆ ಅಧಿಕಾರ ಕೈತಪ್ಪಿ ಹೋಯಿತಲ್ಲ, ಸಂಬಳ ಖೋತಾ ಆಯಿತಲ್ಲ, ಉಳಿದ ದಿನಗಳನ್ನು ನೂಕುವ ಬಗೆ ಹೇಗೆಂದು ಚಿಂತಿಸಿ ಚಿಂತಿಸಿ ಕಂಗಾಲಾಗುತ್ತಾರೆ, ಅನುದಿನವೂ ಸತ್ತು ಬದುಕುತ್ತಾರೆ. ಕೆಲವರಂತು ನಿವೃತ್ತಿ ದಿನಗಳನ್ನೆ ಎದುರು ನೋಡುತ್ತಿದ್ದು, ನಿಜಕ್ಕೂ ಸೋಮಾರಿಗಳಾಗಿ ವಿಶ್ರಾಂತಿಯನ್ನನುಭವಿಸುತ್ತ, ಸುಖಲೋಲರಾಗಿ ಕಾಲ ಕಳೆಯುತ್ತಾರೆ. ಆದರೆ ನೌಕರಿಯಲ್ಲಿದ್ದಾಗ ಪ್ರಾಮಾಣಿಕವಾಗಿ ನಿರ್ವಂಚನೆಯಿಂದ ದುಡಿಮೆಯ ಮೂಲಕ ದೇಶಕ್ಕೆ ಸೇವೆ ಸಲ್ಲಿಸಿದ ಜನರು ನಿವೃತ್ತರಾದ ಮೇಲೂ ವಿಶ್ರಾಂತಿ ಪಡೆಯುವುದಿಲ್ಲ. ನೌಕರಿಯಿಂದ ನಿವೃತ್ತರಾದರೂ, ದುಡಿಮೆಯಿಂದ ನಿವೃತ್ತರಾಗುವುದಿಲ್ಲ. ಕೃಷ್ಣಶಾಸ್ತ್ರಿಗಳು ನಿವೃತ್ತಾನಂತರ ಸೃಷ್ಟಿಸಿದ ಸಾಹಿತ್ಯ ಗುಣದಲ್ಲಂತೂ ಪ್ರಮಾಣದಲ್ಲಿಯೂ ಅಧಿಕವಾಗಿದೆ. ದೇಹದಲ್ಲಿ ಶಕ್ತಿಯಿರುವ ತನಕ ಅವರ ಲೇಖನಿ ಬತ್ತಲಿಲ್ಲ; ಅವರ ದುಡಿತ ನಿಲ್ಲಲಿಲ್ಲ. ವಚನ ಭಾರತ, ಬಂಕಿಮಚಂದ್ರ, ಕಥಾಮೃತ ಅವರ ಪರಿಣತವಯಸ್ಸಿನ, ಪಕ್ವಾನುಭವದ ವಿಶೇಷಫಲಗಳು. 'ನಿಬಂಧಮಾಲೆ'ಯ ಅನುವಾದ ಮುಗಿಯುವುದರೊಳಗೆ ಅವರ ಮೆದುಳಿನಶಕ್ತಿ ಕುಗ್ಗಿ, ನರವ್ಯೂಹ ದುರ್ಬಲವಾಗಿ, ಲೇಖನಿಯನ್ನು ಮೂಲೆಗಿಡಬೇಕಾಯಿತು. ಕಾಯಕವೇ ಕೈಲಾಸವೆಂದು ದುಡಿದ ಶರಣರವರು.

ದ್ವಿತೀಯ ಭಾಷೆಯ ದೊಡ್ಡ ತರಗತಿಗಳಿಗಿಂತ ಐಚ್ಛಿಕ ವಿಷಯದ ಸಣ್ಣ ಆನರ್ಸ್ ತರಗತಿಗಳಲ್ಲಿ ಕೃಷ್ಣಶಾಸ್ತ್ರಿಗಳ ಅಧ್ಯಾಪನ ಸಾಮರ್ಥ್ಯ ಸ್ಪಷ್ಟವಾಗು

ತ್ತಿತ್ತು. ಅವರು ತರಗತಿಗೆ ಎಂದೂ ತಡವಾಗಿ ಬಂದವರಲ್ಲ; ಎಂದೂ ಮುಂಚಿತ ವಾಗಿ ಪಾಠ ನಿಲ್ಲಿಸಿದವರಲ್ಲ. ಪಾಠಕ್ಕೆ ಸಂಬಂಧಿಸದ ಕಾಡುಹರಟೆಗೆ ತರಗತಿಯಲ್ಲಿ ಸ್ವಲ್ಪವೂ ಅವಕಾಶವಿರುತ್ತಿರಲಿಲ್ಲ. ಅಧ್ಯಾಪನ ಕಲೆಯಲ್ಲಿ ಅವರನ್ನು ಮೀರಿಸಿದ ಬೋಧಕರಿದ್ದಿರಬಹುದು; ಆದರೆ ಬೋಧನ ವಿಷಯದಲ್ಲಿ ಅವರಿಗಿದ್ದ ಶ್ರದ್ಧೆ ಮತ್ತು ಆತ್ಮೀಯತೆಗಳು ಅಪೂರ್ವವಾದವು. ಮೊದಲ ಪಾಠದ ಪ್ರಾರಂಭದಲ್ಲಿಯೇ ವಿದ್ಯಾರ್ಥಿಗಳು ಓದಿಕೊಳ್ಳಬೇಕಾದ ವಿಶೇಷ ಗ್ರಂಥಗಳ ಪಟ್ಟಿಯೊಂದನ್ನು ತಯಾರಿಸಿ ಕೊಟ್ಟು, ಅವರು ಅವನ್ನು ಓದಿದರೋ ಇಲ್ಲವೋ ಎಂದು ಆಗಾಗ್ಗೆ ವಿಚಾರಿಸಿ ಕೊಳ್ಳುತ್ತಿದ್ದರು. ವಿದ್ಯಾರ್ಥಿಗಳು ಓದಲಿಲ್ಲವೆಂದು ಕಂಡುಬಂದಾಗ ಲಘು ವಾಗಿ ರೇಗುತ್ತಿದ್ದುದೂ ಉಂಟು. ಆ ರೇಗಿನಲ್ಲಿ ಕಹಿ ಇಲ್ಲದ್ದರಿಂದ ಅದು ಹಿತ ವಾಗಿಯೇ ಇರುತ್ತಿತ್ತು. ತಾವೇ ವಿದ್ಯಾರ್ಥಿಗಳನ್ನು ಗ್ರಂಥಾಲಯಕ್ಕೆ ಕರೆದೊಯ್ದು 'ಇಗೋ ಇಲ್ಲಿ ನೋಡಿ ನಾನು ಹೇಳಿದ ಪುಸ್ತಕ ಇಲ್ಲಿದೆ. ನೀವು ಓದದಿದ್ದರೂ ಸರಿಯೆ ಈ ಪುಸ್ತಕದ ಹಾಳೆಗಳನ್ನು ಮಗುಚಿಹಾಕಿ; ಅನುಕ್ರಮಣಿಕೆಯನ್ನಾದರೂ ಒಂದು ಸಲ ಓದಿ. ಗ್ರಂಥಾಲಯದಲ್ಲಿ ಯಾವ ಯಾವ ಪುಸ್ತಕ ಎಲ್ಲೆಲ್ಲಿದೆಯೆಂಬುದ ನ್ನಾದರೂ ತಿಳಿದುಕೊಳ್ಳಿ. ದಿನಕ್ಕೊಮ್ಮೆಯಾದರೂ ಗ್ರಂಥಾಲಯಕ್ಕೆ ಹೋಗಿ ಬನ್ನಿ. ಅನಂತರ ವಾಚನಾಭಿರುಚಿ ತಾನಾಗಿಯೇ ಬೆಳೆದುಬರುತ್ತದೆ.' ಎಂದು ಬುದ್ಧಿವಾದ ಹೇಳುತ್ತಿದ್ದರು. ಆಗೊಮ್ಮೆ ಈಗೊಮ್ಮೆ ಮಸಾಲೆದೋಸೆ ತರಿಸಿಕೊಟ್ಟು ವಿದ್ಯಾರ್ಥಿಗಳು ತಿನ್ನುವಾಗ ಹರ್ಷಿಸುತ್ತಿದ್ದರು. ನಡುನಡುವೆ ಕನ್ನಡದ ಬಗ್ಗೆ ಅಭಿಮಾನ ಬೆಳೆಸಿಕೊಳ್ಳಬೇಕೆಂದು ಹುರಿದುಂಬಿಸುತ್ತಿದ್ದರು.

ಕೃಷ್ಣಶಾಸ್ತ್ರಿಗಳು ಬರಿಯ ಗೊಡ್ಡು ಪಂಡಿತರಾಗಿರಲಿಲ್ಲ. ಜೀವನದಲ್ಲಿ ಅವರಿಗೆ ಅಪಾರ ಶ್ರದ್ಧೆಯಿತ್ತು. ಜೀವನದಲ್ಲಿ ಸಿಗುವ ಎಲ್ಲ ಸುಖಗಳನ್ನೂ ಚೆನ್ನಾಗಿ ಅನುಭವಿಸಬೇಕೆಂಬುದು ಅವರ ಧ್ಯೇಯವಾಗಿತ್ತು. ಆದರೆ ಆ ಸುಖಾನುಭವ ಧಾರ್ಮಿಕ ಶ್ರದ್ಧೆಯಿಂದ ಕೂಡಿರಬೇಕೆಂದು ಹೇಳುತ್ತಿದ್ದರು. ಒಳ್ಳೆಯ ಬಟ್ಟೆ ಗಳನ್ನು ಧರಿಸಬೇಕು, ಶುಚಿರುಚಿಯಾದ ಭೋಜನ ಪಾನೀಯಗಳನ್ನು ಸೇವಿಸ ಬೇಕು, ಮಸಾಲೆ ದೋಸೆಯ ಸುಖವನ್ನು ಅನುಭವಿಸಬೇಕು, ಸಿನಿಮಾ ನಾಟಕ ಗಳನ್ನು ನೋಡಬೇಕು, ಆದರೆ ರುಚಿಯನ್ನು ಕೆಡಿಸುವಂಥ ಭೋಗಸಾಧನಗಳನ್ನು ತೊರೆಯಬೇಕು, ಇವು ಅವರ ಸುಖಕಲ್ಪನೆಯ ಮೂಲಸೂತ್ರಗಳಾಗಿದ್ದುವು. ವಾರಕ್ಕೊಮ್ಮೆಯೋ ಪಕ್ಷಕ್ಕೊಮ್ಮೆಯೋ ಅವರು ಸೈಕಲ್ಲು ಹತ್ತಿ ಸಿನಿಮಾ ಮಂದಿರಗಳ ಕಡೆಗೆ ಹೋಗುತ್ತಿದ್ದುದನ್ನು ಅನೇಕ ವಿದ್ಯಾರ್ಥಿಗಳು ಬಲ್ಲರು. ಅಧ್ಯಾಪನದ ಕೆಲಸ ಮುಗಿದನಂತರ ನಿತ್ಯವೂ ಸಂಜೆ, ಕಾಲೇಜಿನ ಗರಡಿಯಲ್ಲಿ ಅವರನ್ನು ಕಾಣಬಹುದಿತ್ತು. ಗರಡಿ ಸಾಧನೆಯಿಂದ ಅವರ ಮೈಕಟ್ಟು ಬಿಗಿಯಾಗಿತ್ತು, ದೃಢವಾಗಿತ್ತು. ಅವರ ಉಡುಗೆ ತೊಡುಗೆಗಳು ಅವರ ರುಚಿಸಂಪತ್ತನ್ನೂ, ನಿರ್ಮಲ ರಸಿಕತೆಯನ್ನೂ ಬಯಲಿಸುತ್ತಿದ್ದುವು; ಯೋಗಭೋಗ ಸಮನ್ವಯ ಅವರ ರಸಿಕತೆಯ ರಹಸ್ಯವಾಗಿತ್ತು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಇಲಾಖೆಗೆ ವಿಶಿಷ್ಟವೂ ಭವ್ಯವೂ ಆದ ಪರಂಪರೆ ಇದೆ. ನಿರಂತರವಾದ ದುಡಿಮೆ, ಶ್ರದ್ಧಾಯುಕ್ತವಾದ ವ್ಯಾಸಂಗ, ನಿಷ್ಕಪಟವಾದ ಬೋಧನೆ, ಶುಚಿತ್ವ ನೀತಿಪರತೆ ಇವೇ ಮೊದಲಾದುವು ಆ ಪರಂಪರೆಯ ವಿಶೇಷ ಗುಣಗಳು. ಅಂಥ ಪರಂಪರೆಯ ನಿರ್ಮಾಪಕರಲ್ಲಿ ಆದರ ನೇತಾರರಲ್ಲಿ ಕೃಷ್ಣಶಾಸ್ತ್ರಿಗಳೊಬ್ಬರು.

**ಸುಜನಾ**

# ಕನ್ನಡ ವ್ಯಾಸಭಾರತ: ವಚನಭಾರತ

"ನನ್ನ ಸಮಸ್ಯೆಯೆಲ್ಲ ಮೂಲದಲ್ಲಿ ಯಾವುದನ್ನು ಬಿಡಬೇಕೆಂಬುದು; ಸುಮಾರು ಐನೂರು ಪುಟಗಳಲ್ಲಿ ಮಹಾಭಾರತದ ಸಾರಾಂಶವೆಲ್ಲಾ ಇರಬೇಕು; ಅದು ಹರುಕು ಮುರುಕು ಜೋಡಿಸಿದಂತಾಗದೆ ಹೊಂದಿಕೊಂಡಿರಬೇಕು; ಸಪ್ರಮಾಣವಾಗಿರಬೇಕು;" ಈ ಸಮಸ್ಯೆಗೆ ಉತ್ತರ ಕಂಡುಕೊಂಡಮೇಲೆ ಬರುವುದು ಮತ್ತೂ ಕಷ್ಟದ ಸಮಸ್ಯೆ. ಮೂಲವನ್ನು ಯಾವ ಹದದಲ್ಲಿ ಭಾಷಾಂತರಿಸುವುದು? ಮೇಲಾಗಿ ಯಾವ ದೃಷ್ಟಿಯನ್ನಿಟ್ಟುಕೊಂಡಿರಬೇಕು? ಶ್ರೀ ಎ.ಆರ್.ಕೃ. ಅವರಿಗೆ ಇದು ನಿಚ್ಚಳವಾಗಿಯೇ ಇರುವ ದೃಷ್ಟಿ: "ಈ ಗ್ರಂಥರಚನೆಯಲ್ಲಿ ನನ್ನದೃಷ್ಟಿ ಮುಖ್ಯವಾಗಿ ಕಾವ್ಯದೃಷ್ಟಿ, ಸಾಹಿತಿಯ ದೃಷ್ಟಿ. ಕಥೆ ಚೆನ್ನಾಗಿರಬೇಕು, ಆದಷ್ಟು ರಸವತ್ತಾಗಿರಬೇಕು. ವರ್ಣನೆ ಅಲಂಕಾರ ಧರ್ಮನೀತಿ ಎಲ್ಲ ಉಚಿತಪ್ರಮಾಣದಲ್ಲಿ ಹದವಾಗಿ ಹೊಂದಿಕೊಂಡಿರಬೇಕು; ಮೂಲದಲ್ಲಿ ರಸವತ್ತಾದುದೆಲ್ಲಾ ಪಾಕವಿಳಿಯಬೇಕು; ಆದರೂ ಹಿಡಿತದಲ್ಲಿರಬೇಕು; ಭಾಷೆ ಬಿಗಿಯಾಗಿ, ಆದರೆ ತಿಳಿಯಾಗಿ, ಇರಬೇಕು–ಇದು ನನ್ನ ಗುರಿ. ಸಂಸ್ಕೃತಮೂಲದಲ್ಲಿ ಅಷ್ಟು ದೊಡ್ಡ ಗ್ರಂಥಕ್ಕೆ, ವರ್ಣನೆ ಇರುವುದೇ ಬಹುಸ್ವಲ್ಪ; ಇರುವಷ್ಟು ಹಿತವಾಗಿ ಮಿತವಾಗಿ ಪ್ರಕೃತ ಸಂದರ್ಭಕ್ಕೆ ಉಚಿತವಾಗಿ ಇರುತ್ತದೆ; ವರ್ಣನೆಗಾಗಿ ವರ್ಣನೆಯಿಲ್ಲ; ಈಚಿನ ಕಾವ್ಯಗಳಲ್ಲಿರುವಂತೆ ಅತಿಯಾದ ಅಲಂಕಾರವಿಲ್ಲ; ಅವೂ ಇರುವಷ್ಟು, ಮನಸ್ಸಿಗೆ ತಟ್ಟನೆ ಹಿಡಿಯುವಂಥವು; ಅಂಥವುಗಳಲ್ಲಿ ಯಾವುದನ್ನು ಬಿಟ್ಟಿಲ್ಲ; ಅತಿವಿಸ್ತಾರ ಕಾಣುವುದು ಯುದ್ಧವರ್ಣನೆಯಲ್ಲಿ; ಧರ್ಮ, ನೀತಿ, ಇವುಗಳ ವಿವರಣೆಯಲ್ಲಿ. ಗ್ರಂಥವು ಒಳಕೊಂಡಿರುವುದೆ ಯುದ್ಧಕಥೆ, ಅದರ ಗುರಿ ಮುಖ್ಯವಾಗಿ ಧರ್ಮ, ನೀತಿ; ಆದ್ದರಿಂದ ಇದು ಸ್ವಾಭಾವಿಕವಾಗಿಯೇ ಇದೆ. ಆದರೆ ನಾನು ನನ್ನ ಗ್ರಂಥಕ್ಕೆ ಅವುಗಳಲ್ಲಿ ಎಷ್ಟುಬೇಕೋ ಅಷ್ಟನ್ನು, ಸಾರವಾದದ್ದನ್ನು, ಅನುಭವಕ್ಕೆ ಬರಬಹುದಾದದ್ದನ್ನು ಇಹಪರ ಜೀವನಗಳಿಗೆ ಸಾಧಕವಾದಂಥವುಗಳನ್ನು ಮಾತ್ರ ಬಳಸಿಕೊಂಡಿದ್ದೇನೆ– ಕೆಲವನ್ನು ಪೂರ್ತಿಬಿಟ್ಟಿದ್ದೇನೆ; ಕೆಲವನ್ನು ಸಂಗ್ರಹಿಸಿದ್ದೇನೆ. ಯುದ್ಧಪಂಚಕವೆಲ್ಲ

೫೩ ಪುಟಗಳಲ್ಲಿ ಅಡಗಿವೆ. ಅದರಲ್ಲಿ ಬರುವ ಯುದ್ಧದ ವರ್ಣನೆ ವಿರಾಟಪರ್ವದಲ್ಲಿ ನೋಡಬಹುದು. ಆ ಮಾದರಿಯ ವರ್ಣನೆಯೇ ಯುದ್ಧಪರ್ವಗಳಲ್ಲಿಯೂ ವಿವರ ವಾಗಿ ಬರುತ್ತದೆ. ಆದ್ದರಿಂದ ಅವುಗಳಲ್ಲಿ ಮುಖ್ಯವಾದ ಘಟನೆಗಳನ್ನು ಮಾತ್ರ ಆರಿಸಿಕೊಂಡಿವೆ. ಧರ್ಮ ನೀತಿ ಉಪದೇಶಗಳಲ್ಲಿ ಪುನರಾವೃತ್ತಿ ಬಹಳವಾಗಿ ಇದೆ; ವಿಸ್ತಾರವೂ ಇದ್ದು, ಅದರಜೊತೆಗೆ ಹಾಡಿದ್ದನ್ನೆ ಹಾಡಿದರೆ, ತುಂಬ ಬೇಸರವಾಗು ತ್ತದೆ. ಪುನರುಕ್ತಿಗಳು ಮೂಲದಲ್ಲಿ ಯಾವುದಾದರೂ ಕಾರಣದಿಂದ ಇರಲಿ, ಇಲ್ಲಿ ಅನಾವಶ್ಯಕ; ಒಂದು ಸಾರಿ ಬಂದರೆ ಸಾಕು."

ಅನುವಾದಕರ ಪ್ರಜ್ಞಾವಂತಿಕೆಯ ಈ ಮೇಲಿನ ಮಾತುಗಳಿಂದ ನಮಗೆ ತಿಳಿಯುತ್ತದೆ, ಅವರ ಈ ಪ್ರಕೃತಿಸಹಜವಾದ ಸುಂದರಕೃತಿಯ ಹಿನ್ನೆಲೆಯಲ್ಲಿ ಎಷ್ಟೆಲ್ಲ ಸಾಧನೆ ಸಾಗಿದೆ ಎಂದು. ಇದನ್ನರಿಯಲು ನಾವು ಕೆಲವಾದರೂ ಅನುವಾದ ಪಂಕ್ತಿಗಳನ್ನು ಮೂಲದೊಡನೆ ಹೋಲಿಸಿ ನೋಡುವುದು ಅಗತ್ಯವಾಗುತ್ತದೆ.

'ಆ ದೈತ್ಯಕಾವ್ಯವನ್ನು ಸಮಗ್ರವಾಗಿ ಓದುವುದಕ್ಕೆ ಬದುಕು ತುಂಬಾ ಕಿರಿದಾಗಿ ತೋರುತ್ತದೆ' ಎಂದು ಮಹಾಭಾರತನ್ನು ಕುರಿತು ಮ್ಯಾಕ್ಸ್‌ಮುಲ್ಲರ್ ಮಹಾಶಯ ನುಡಿದರು. ಈ ಮಾತನ್ನು ತಮ್ಮ ವಚನಭಾರತದ ತಲೆಬಾಗಿಲ ತೋರಣವಾಗಿ ಕಟ್ಟಿ ಕೊಂಡಿದ್ದಾರೆ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು. ಆ ಮಾತಿನ ಸತ್ಯಾನುಭವ ನಮ ಗಾಗಬೇಕಾದರೂ ನಾವೊಮ್ಮೆ ವ್ಯಾಸರ ಮೂಲಕೃತಿಯನ್ನೇ ಕಣ್ಣಾಡಿಸಿ ನೋಡ ಬೇಕು. ಲಕ್ಷಶ್ಲೋಕ ಸಮೃದ್ಧವಾದ ಈ ಸಮುದ್ರಕೃತಿಯನ್ನು ವ್ಯಾಸರು ಮೂರು ವರ್ಷ ಸದಾ ಉದ್ಯೋಗಶೀಲರಾಗಿದ್ದು ರಚಿಸಿದರಂತೆ. ಪಂಪಕವಿ ತನ್ನ ಸಮಗ್ರ-ಸಂಗ್ರಹ ಭಾರತವನ್ನು ಆರುತಿಂಗಳಲ್ಲಿ ಮುಗಿಸಿದನೆಂಬುದಕ್ಕಿಂತ ನೂರರಷ್ಟು ಅಚ್ಚರಿಯ ಸಂಗತಿ ಅದು. ದಿವಂಗತ ಶ್ರೀ ಎ. ಆರ್. ಕೃ. ಅವರು ತಮ್ಮ ವಚನ ಭಾರತವನ್ನು ಪಾರಾಯಣ ವಿಧಿಗಾಗಿ ಒಂದೇ ನಿಟ್ಟಿನಲ್ಲಿ, ತಿದ್ದದ ನಿರರ್ಗಳ ಶೈಲಿ ಯಿಂದ ಆರುತಿಂಗಳವಧಿಯಲ್ಲೇ ರಚಿಸಿದರೆಂದು ತಿಳಿದುಬರುತ್ತದೆ. ಇದು ವಾಸ್ತವ ವಿದ್ದಲ್ಲಿ ಆ ಮೂಲ ಆಶ್ಚರ್ಯವನ್ನು ಕಿಂಚಿದನುಭವಕ್ಕೆ ತರುವಂತಹ ಸಾಧನೆಯೇ ಸರಿ. ಅವರ ಈ ಸಲೀಲವಾದ ರಸಶುದ್ಧವಾದ ಸಾರಾನುವಾದವನ್ನು ಓದುವವರಿಗೆ ಅವರ ಸಾಧನೆ ಹೂವೆತ್ತಿದಷ್ಟು ಸುಲಭವೆಂದೇ ಭಾಸವಾಗಬಹುದು. ಅತ್ಯಂತ ಸರಳವಾಗಿ ಸಹಜವಾಗಿ ತೋರುವ ಈ ಕೃತಿ ಅದೆಷ್ಟು ಕುದಿದು ಪಾಕಗೊಂಡಿಲ್ಲ? ಈ ಮಹಾ ವಿದ್ವಾಂಸರಸಜ್ಞರು ಮೂವತ್ತು ನಲವತ್ತು ವರ್ಷಗಳು ನಿರಂತರವಾಗಿ ಮಾಡಿದ ಮಹಾಭಾರತ ವ್ಯಾಸಂಗದ ಫಲಸಾರವೆ ಈವಚನಭಾ ರತಸಾರ. ಈ ಕೃತಿಯ ಪಂಕ್ತಿ ಪಂಕ್ತಿಯಲ್ಲೂ ಕಾಣಬರುವ ಅನಾಯಾಸಕರ ಗುಣ, ರುಚಿಶುದ್ಧಿ ಅನ್ಯ ದುರ್ಲಭ ವೆಂದೆ ಹೇಳಬಹುದು. ಒಮ್ಮೊಮ್ಮೆ, ಇದೇನು ಮಹರ್ಷಿ ವ್ಯಾಸರೆ ತಮ್ಮ ಕೃತಿ ಯನ್ನು ನಮಗಾಗಿ ಕನ್ನಡ ಗದ್ಯದಲ್ಲಿ ಬರೆದುಕೊಟ್ಟರೊ ಎಂದೂ ನನಗನಿಸಿದ್ದುಂಟು.

ಇಂಥ ಅನುವಾದ ಯಾವ ಭಾಷೆಗೂ ಪೂಜ್ಯವೆ. ಇದು ಕನ್ನಡದ ಶ್ರೇಷ್ಠ ಸಾಧನೆಗಳಲ್ಲಿ ಒಂದೆಂದೆ ತಿಳಿಯಬಹುದು.

ಒಂದು ಲಕ್ಷ ಶ್ಲೋಕದ ವಿಪುಲಗ್ರಂಥವನ್ನು ಅದು ಹೇಗೆತಾನೆ ಊನವಾಗ ದಂತೆ ಸಂಗ್ರಹಿಸುವುದು? ಲಕ್ಷ ಶ್ಲೋಕವಾದರೂ ಮೂಲಕೃತಿಯಲ್ಲಿದ್ದುದಲ್ಲ. ಕಾಲಾನುರುಚಿಗೆ ತಕ್ಕಂತೆ ಬೆಳೆಯುತ್ತ ಹೋದ ಆ ಗ್ರಂಥಕ್ಕೆ ಆ ಬೃಹತ್‌ಗಾತ್ರ ಬಂತು. ಅದರಲ್ಲಿ ಕಾವ್ಯವಿದೆ, ಶಾಸ್ತ್ರವಿದೆ, ಧರ್ಮಾರ್ಥಕಾಮವಿದೆ, ತತ್ತ್ವಾರ್ಥ ಚಿಂತನವಿದೆ, ದೇವತೆಗಳ ಕಥೆಯಿದೆ, ಪ್ರಾಣಿಗಳ ಕಥೆಯೂ ಇದೆ. ಅತ್ಯಂತ ಮಾರ್ಮಿಕವಾದ. ಸಂಗ್ರಹಾತ್ಮಕವಾದ ಮಾತು, ಕಥನ, ಪ್ರಸಂಗಗಳಿವೆ. ಪುನರುಕ್ತಿ ಮಾಲೆಗಳೂ ಇವೆ; ಸರಳ ಕಥನಕ್ಕೆ ವಿರುದ್ಧಾರ್ಥಕಗಳೆಂದು ತೋರುವ ಮಾತುಗಳೂ ಇವೆ; ಅಲ್ಲಿ ಮಾನುಷ ಅತಿಮಾನುಷ ಸಂವೇದನವಿರುವಂತೆ ಅಧೋಮಾನುಷ ಪ್ರಾಣಿ ಸಂವೇದನಗಳೂ ಇವೆ. ಇವನ್ನೆಲ್ಲ ರೂಪ ಕೆಡದಂತೆ ಸ್ವರೂಪವುಳಿಯುವಂತೆ ತರುವುದಾದರೂ ಹೇಗೆ? ಇದೆ ಕೃತಿಕಾರರ ಮುಂದಿರುವ ಸಮಸ್ಯೆ.

ವಚನಭಾರತದ ಪ್ರಾರಂಭದಲ್ಲೆ ಬರುವ ಪ್ರಸಂಗವಿದು ಅದೇ, ಶಂತನು ಯೋಜನಗಂಧಿಗೆ ಮೋಹಿತನಾಗಿ ಚಿಂತಿಸುತ್ತಾ ಮನಸ್ಸಿನಲ್ಲಿ ಕೊರಗುತ್ತಾ ಇರುವಾಗ ಆ ದೊರೆಯ ಮಗ ದೇವವ್ರತ ಭೀಷ್ಮ ಬಂದು ಅವನ ಮನಸ್ಸನ್ನು ಊದುವ ಪ್ರಸಂಗ. ಅದು ಹೀಗಿದೆ ವಚನಭಾರತದಲ್ಲಿ :

"ಕೊರಗುತ್ತಾ ಚಿಂತಾಮಗ್ನನಾಗಿದ್ದ ತಂದೆಯನ್ನು ಕಂಡು ದೇವವ್ರತನು 'ಅಪ್ಪಾ! ನಿನಗೆ ಎಲ್ಲವೂ ಕ್ಷೇಮವಾಗಿದೆ; ರಾಜರು ವಿಧೇಯರಾಗಿದ್ದಾರೆ. ಹೀಗಿದ್ದರೂ ಏಕೆ ಏನೋ ಯೋಚನೆಮಾಡುತ್ತ ಕೊರಗುತ್ತಿದ್ದೀಯೆ? ಯಾರೊಡ ನೆಯೂ ಮಾತನಾಡುವುದಿಲ್ಲ? ಎಂದು ಕೇಳಿದನು. ಅದಕ್ಕೆ ಶಂತನುವು 'ಮಗು'! ನಾನು ಚಿಂತಾಮಗ್ನನಾಗಿದ್ದೇನೆಂದು ನೀನು ಹೇಳಿದ್ದು ನಿಜ; ನಮ್ಮ ಈ ಹಿರಿಯ ಮನೆತನಕ್ಕೆ ನೀನು ಒಬ್ಬನೇ ಮಗ; ಮನುಷ್ಯರು ಮರ್ತ್ಯರು, ನಿತ್ಯರಲ್ಲ. ನಿನಗೇನಾದರೂ ವಿಪತ್ತು ಸಂಭವಿಸಿದರೆ ನಮ್ಮ ಕುಲವು ನಿಂತು ಹೋಗುತ್ತದೆ; ನೀನೇನೊ ಒಬ್ಬನಾದರೂ ನೂರು ಮಕ್ಕಳಿಗಿಂತ ಹೆಚ್ಚಾದವನೇಯೆ; ನನಗೂ ಸುಮ್ಮಸುಮ್ಮನೆ ಮತ್ತೆ ಹೆಂಡತಿಯನ್ನು ಕಟ್ಟಿಕೊಳ್ಳುವುದಕ್ಕೆ ಇಷ್ಟವಿಲ್ಲ; ಸಂತತಿ ನಷ್ಟವಾಗಬಾರದೆಂಬುದಿಷ್ಟೇ ನನ್ನ ಕೋರಿಕೆ; ನೀನು ಎಲ್ಲಾದರೂ ಕ್ಷೇಮವಾಗಿರು ಮಗು! ಆದರೆ 'ಒಬ್ಬ ಮಗ ಮಗನಲ್ಲ' ಎಂದು ಧರ್ಮ ಬಲ್ಲವರು ಹೇಳುತ್ತಾರೆ. ನೀನೋ ಶೂರ; ಅವಮರ್ಯಾದೆಯನ್ನು ಸಹಿಸದವನು; ಮೂರು ಹೊತ್ತೂ ಶಸ್ತ್ರ ಗಳಲ್ಲಿಯೇ ಕೈ ಇಟ್ಟುಕೊಂಡಿರುವವನು. ಇಂಥವನಿಗೆ ಶಸ್ತ್ರದಿಂದಲೇ ಕೊನೆ. ಆದ್ದರಿಂದ ನೀನೇನಾದರೂ ಶಾಂತನಾಗಿ ಬಿಟ್ಟರೆ ಏನುಗತಿ ಎಂದು ಕಳವಳಕ್ಕೆ ಸಿಕ್ಕಿದ್ದೇನೆ. ಇದೇ ಮಗು ನನ್ನ ಚಿಂತೆಗೆ ಕಾರಣ!' ಎಂದು ಉತ್ತರಕೊಟ್ಟನು. ದೇವವ್ರತನು ಮಹಾಬುದ್ಧಿಶಾಲಿ; ಆದ್ದರಿಂದ ಅರ್ಥವೇನು ಎಂದು ಯೋಚಿಸುತ್ತ

ತನ್ನ ತಂದೆಗೆ ಆಪ್ತನಾಗಿದ್ದ ವೃದ್ಧಮಂತ್ರಿಯ ಹತ್ತಿರಕ್ಕೆ ಹೋಗಿ ಅವನನ್ನು ತನ್ನ ತಂದೆಯ ಚಿಂತೆಗೆ ಕಾರಣವೇನೆಂದು ಕೇಳಿದನು. ”

ಮೇಲಿನ ಒಂದು ಸನ್ನಿವೇಶದ ಚಿತ್ರಣ ಎಷ್ಟು ಸಂಕೀರ್ಣವಾಗಿದೆ! ಶಂತನು ತನ್ನೊಳಗಿನ ತೋಟಿಯನ್ನು ಮಾತಿನಲ್ಲಿ ಹೇಗಿಟ್ಟಿದ್ದಾನೆ! ಕಾಮುವನ್ನು ಹೇಳು ವಂತಿಲ್ಲ. ಅದು ಸಲ್ಲಬೇಕಾದದ್ದೆಂದು ಭಾವಿಸುವುದೂ ಸಾಧ್ಯವಿಲ್ಲ. ಅಲ್ಲದ್ದೆಂದು ಹಗುರವಾಗಿ ಬಗೆಯಲೂಬರದು. ಮಗನ ಬಗ್ಗೆ ಪ್ರೀತಿ ಇದೆ, ಆದರೆ ಬಯಕೆಯ ತುಯ್ತಕ್ಕೆ ಅದು ಸಿಕ್ಕಿದೆ. ಆ ಇಕ್ಕಳದ ಇಕ್ಕಟ್ಟಿನಲ್ಲಿರುವ ಆತನ ಮನಸ್ಸನ್ನು ಎಷ್ಟು ಅರ್ಥಪೂರ್ಣವಾಗಿ ವ್ಯಾಸಮಹರ್ಷಿಗಳು ಮಿಡಿದಿದ್ದಾರೆ! ಇದರ ಬಗ್ಗೆ ಎಷ್ಟು ಹೇಳಿದರೂ ಕಡಿಮೆ. ಅದು ಬೇರೆಡೆ ಬರೆಯಬೇಕಾದದ್ದು. ಆದರೆ ಈ ಮೇಲಿನ ಹದವಾದ ಮಾತಿನ ಗತಿಯನ್ನು ಶ್ರುತಿಯನ್ನು ನೋಡಿ ಹೇಗಿದೆ. ಮೂಲ ದೊಡನಿಲ್ಲಿ ಹೋಲಿಸಿ ನೋಡಬಹುದು :

ತತಃ ಕದಾಚಿತ್ ಶೋಚಂತಿ ಶಾಂತನುಂ ಧ್ಯಾನಮಾಸ್ಥಿತಮ್
ಪುತ್ರೋ ದೇವವ್ರತೋಽಭ್ಯೇತ್ಯ ಪಿತಂ ವಾಕ್ಯಮುಬ್ರವೀತ್ ॥ ೫೯

ಸರ್ವತೋ ಭವತಃಕ್ಷೇಮಂ, ವಿಧೇಯಾಃ ಸರ್ವಪಾರ್ಥಿವಾಃ
ತತ್ ಕಿಮರ್ಥಮಿಹಾಭೀಕ್ಷ್ಣಂ ಪರಿಶೋಚಸಿ ದುಃಖಿತಃ ॥ ೬೦

ಧ್ಯಾಯನ್ನಿವ ಚ ಮಾಂ ರಾಜನ್ನಾಭಿಭಾಷಸಿ ಕಿಂಚನ
ನ ಚಾಶ್ವೇನ ವಿನಿರ್ಯಾಸಿ ವಿವರ್ಣೋ ಹರಿಣಃ ಕೃಶಃ ॥ ೬೧

ವ್ಯಾಧಿಮಿಚ್ಛಾಮಿ ತೇ ಜ್ಞಾತುಂ ಪ್ರತಿಕುರ್ಯಾಂ ಹಿ ತತ್ರ ವೈ
ಏವಮುಕ್ತಃ ಸಪುತ್ರೇಣ ಶಾಂತನುಃ ಪ್ರತ್ಯಭಾಷತ ॥ ೬೨

ಅಸಂಶಯಂ ಧ್ಯಾನಪರೋ ಯಥಾ ವತ್ಸ, ತಥಾ ಶೃಣು!
ಅಪತ್ಯಂ ನಸ್ತ್ವಮೇವೈಕಃ ಕುಲೇ ಮಹತಿ ಭಾರತ ॥ ೬೩

ಶಸ್ತ್ರನಿತ್ಯಶ್ಚ ಸತತಂ ಪೌರುಷೇ ಪರ್ಯವಸ್ಥಿತಃ
ಅನಿತ್ಯತಾಂ ಚ ಲೋಕಾನಾಮನುಶೋಚಾಮಿ ಪುತ್ರಕ ॥ ೬೪

ಕಥಂಚಿತ್ ತವ, ಗಾಂಗೇಯ, ವಿಪತ್ತೌ ನಾಸ್ತಿ ನಃ ಕುಲಂ
ಅಸಂಶಯಂ ತ್ವಮೇವೈಕಃ ಶತಾದಪಿ ವರಃ ಸುತಃ ॥ ೬೫

ನ ಚಾಪ್ಯಹಂ ವೃಥಾ ಭೂಯೋ ದಾರಾನ್ ಕರ್ತುಮಿಹೋತ್ಸಹೇ
ಸಂತಾನಸ್ಯಾವಿನಾಶಾಯ ಕಾಮಯೇ ಭದ್ರಮಸ್ತು ತೇ ॥ ೬೬

ಅನಪತ್ಯತೈಕಪುತ್ರತ್ವಮಿತ್ಯಾಹುರ್ಧರ್ಮವಾದಿನಃ
ಅಗ್ನಿಹೋತ್ರಂ ತ್ರಯೀವಿದ್ಯಾ ಸಂತಾನಮಪಿ ಚಾಕ್ಷಯಂ ॥ ೬೭

ಸರ್ವಾಣ್ಯೇತಾನ್ಯಪತ್ಯಸ್ಯ ಕಲಾಂ ನಾರ್ಹಂತಿ ಷೋಡಶೀಂ
ಏವಮೇತನ್ಮನುಷ್ಯೇಷು ತಚ್ಚ ಸರ್ವಪ್ರಜಾಸ್ವಿತಿ ॥ ೬೮

ಯದಪತ್ಯಂ ಮಹಾಪ್ರಾಜ್ಞ ತತ್ರ ಮೇ ನಾಸ್ತಿ ಸಂಶಯಃ
ಏಷಾ ತ್ರಯೀಪುರಾಣಾನಾಂ ದೇವತಾನಾಂ ದೇವತಾನಾಂ ಚ ಶಾಶ್ವತೀ ॥ ೬೯

ತ್ವಂ ಚ ಶೂರಃ, ಸದಾಮರ್ಷೀ, ಶಸ್ತ್ರನಿತ್ಯಶ್ಚ, ಭಾರತ
ನಾನ್ಯತ್ರ ಯುದ್ಧಾತ್ ತಸ್ಮಾತ್ ತೇ ನಿಧನಂ ವಿದ್ಯತೇ ಕ್ವಚಿತ್ ॥ ೭೦

ಸೋऽಸ್ಮಿ ಸಂಶಯಮಾಪನ್ನಸ್ತ್ವಯಿ ಶಾಂತೇ ಕಥಂ ಭವೇತ್
ಇತಿ ತೇ ಕಾರಣಂ, ತಾತ ದುಃಖಸ್ಯೋಕ್ತಮಶೇಷತಃ ॥ ೭೧

ತತಸ್ತತ್ಕಾರಣಂ ರಾಜ್ಞೋ ಜ್ಞಾತ್ವಾ ಸರ್ವಮಶೇಷತಃ
ದೇವವ್ರತೋ ಮಹಾಬುದ್ಧಿಃ ಪ್ರಜ್ಞಯಾ ಚಾನ್ವಚಿಂತಯತ್ ॥ ೭೨

ಅಭ್ಯಗಚ್ಛತ್ ತದೈವಾಶು ವೃದ್ಧಾಮಾತ್ಯಂ ಪಿತುರ್ಹಿತಂ
ತಮಪೃಚ್ಛತ್ ತದಾಭ್ಯೇತ್ಯ ಪಿತುಃ ತತ್‌ಶೋಕಕಾರಣಂ॥ ೭೦

ಅಧ್ಯಾಯ: ೧೦೦ ಪುಟ ೧೭೨

ಈ ಮೇಲೆ ಉದ್ಧರಿಸಿರುವ ಹದಿನೈದು ಶ್ಲೋಕದಲ್ಲಿ ಒಂದನ್ನುಳಿದು ಮಿಕ್ಕೆಲ್ಲವನ್ನೂ ಕನ್ನಡಿಸಿದ್ದಾರೆ. ನಿಜಕ್ಕೂ ಕನ್ನಡಿಸಿದ್ದಾರೆ. ಇದು ಅಕ್ಷರಕ್ಕೆ ಅಕ್ಷರ ಅನುವಾದವಲ್ಲ, ಮಕ್ಕೀಕಾಮಕ್ಕಿಯಲ್ಲ. ಸಂಸ್ಕೃತ ನುಡಿಗಟ್ಟು ಕನ್ನಡನುಡಿಗಟ್ಟಾಗಿದೆ. ವ್ಯಾಸರು ಕನ್ನಡದಲ್ಲೆ ಮೊದಲು ಬರೆಯಬಹುದಾಗಿದ್ದರೆ ಎಂತಿರುತ್ತಿತ್ತೆಂಬುದನ್ನು ಸೂಚಿಸುವಂತಿದೆ. 'ಅನಿತ್ಯತಾಂ ಚ ಲೋಕಾನಾಂ' ಎಂಬ ಮೂಲ 'ಮನುಷ್ಯರು ಮರ್ತ್ಯರು, ನಿತ್ಯರಲ್ಲ' ಎಂದಾಗಿದೆ. 'ನ ಚಾಪ್ಯಹಂ ವೃಥಾ ಭೂಯೋ ದಾರಾನ್ ಕರ್ತುಮಿಹೋತ್ಸಹೇ' ಎಂಬುದು 'ನನಗೂ ಸುಮ್ಮಸುಮ್ಮನೆ ಮತ್ತೆ ಹೆಂಡಿತಿಯನ್ನು ಕಟ್ಟಿಕೊಳ್ಳುವುದಕ್ಕೆ ಇಷ್ಟವಿಲ್ಲ,' ('ಉತ್ಸಾಹವಿಲ್ಲ' ಎಂದಿದ್ದರೆ?) ಎಂದು ಎಷ್ಟು ಸೊಗಸಾಗಿ ಬಂದಿದೆ. 'ತ್ವಂ ಚ ಶೂರಃ ಸದಾಮರ್ಷೀ ಶಸ್ತ್ರನಿತ್ಯಃ,ನಾನ್ಯತ್ರಯುದ್ಧಾತ್ ತಸ್ಮಾತ್ ತೇ ನಿಧನಂ ವಿದ್ಯತೇ ಕ್ವಚಿತ್' ಎಂಬುದನ್ನು, ನೀನೋ ಶೂರ; ಅವಮರ್ಯಾದೆಯನ್ನು ಸಹಿಸದವನು; ಮೂರುಹೊತ್ತೂ ಶಸ್ತ್ರಗಳಲ್ಲಿಯೆ ಕೈ ಇಟ್ಟು ಕೊಂಡಿರುವವನು. (ಈ ನುಡಿಗಟ್ಟು ಹೇಗಿದೆ!) ಇಂಥವನಿಗೆ ಶಸ್ತ್ರದಿಂದಲೇ ಕೊನೆ,' ಎಂದು ತಂದಿದ್ದಾರೆ. ಮೂಲದಲ್ಲಿ 'ತೇ ನಿಧನಂ' ಎಂಬ ನುಡಿಯಿದ್ದುದು ವಾಚ್ಯವಾಯಿತೆಂದೇನೊ 'ಕೊನೆ' ಎಂದು ಅಡಗಿಸಿದ್ದಾರೆ. 'ನೀನೇನಾದರೂ ಶಾಂತನಾಗಿಬಿಟ್ಟರೆ' ಎಂದು ಹೇಳುವಾಗ 'ತ್ವಯಿ ಶಾಂತೇ ಕಥಂ ಭವೇತ್' ಎಂಬ ಮೂಲದಲ್ಲಿರುವ 'ಶಾಂತ' ಎಂಬ ಪದವನ್ನು ಅರ್ಥವತ್ತಾಗಿ ಉಳಿಸಿಕೊಂಡಿದ್ದಾರೆ. ಎಲ್ಲಕ್ಕಿಂತ ಸೊಗಸಾದ ಉಕ್ತಿ ಎಂದರೆ, 'ಒಬ್ಬ ಮಗ ಮಗನಲ್ಲ' ಎಂಬುದು. ಇದೇನು ಕನ್ನಡಲ್ಲೆ ಮೊದಲು ಮೂಡಿತೋ ಎಂಬಂತಿದೆ. ಈ ಬಂಧವೇ ಗಾದೆಯಾಗಿದೆ. ಸಂಸ್ಕೃತದಲ್ಲೂ ಹೀಗೆಯೆ ಇದೆ, 'ಅನಪತ್ಯೈಕಪುತ್ರತ್ವಮ್.' ಇದೆ ಭಾಷಾಂತರದ ಸಿದ್ಧಿಯ ಲಕ್ಷಣ. ಇಲ್ಲಿ ಒಂದೆರಡು ಇಲ್ಲದಂಶವನ್ನೂ ಸೂಚಿಸಬಹುದು. 'ಮಾಂ ರಾಜನ್ನಾಭಿಭಾಷಸಿ ಕಿಂಚನ' ಎಂಬುದನ್ನು 'ಯಾರೊಡನೆಯೂ ಮಾತಾಡುವುದಿಲ್ಲ' ಎಂದಲ್ಲದೆ 'ನನ್ನೊಡನೆ

ನೀನು ಒಂದಿಷ್ಟೂ ಮಾತಾಡುವುದಿಲ್ಲ ' ಎಂದಿದ್ದರೆ ಚೆನ್ನಿರುತ್ತಿತ್ತು. ಕಾರಣ ದೇವ ವ್ರತನಿಗೆ ತನ್ನ ತಂದೆ ತನ್ನೊಡನೆ ಮಾತನಾಡದಿರುವುದೆ ಅಪೂರ್ವ ವಿಶೇಷ ಸಂಗತಿ. ಬಹುಶಃ ಶಂತನು ಹೇಳಲಾರದ ನಾನಾ ಕಾರಣಗಳಿಂದಾಗಿ ತನ್ನ ಮಗನೊಡನೆ ಏನೂ ಮಾತಾಡದೆ ಇದ್ದಿರಬೇಕು. ಆ ಮಗನಿಲ್ಲದಿರುತ್ತಿದ್ದರೆ? ಅವನಿಂದ ತನ್ನ ಕಾಮುಕ್ಕೆ ಅಡ್ಡಿಯೆ? ಅವನನ್ನು ವಂಚಿಸಬೇಕೆ? ಅವನನ್ನು ನಾಚಿಕೆಯಿಲ್ಲದೆ ಹೇಗೆ ಮಾತಾಡಿಸುವುದು? ಎಂಬಿತ್ಯಾದಿ ಭಾವಗಳ ಪರಿಣಾಮವಾಗಿ ಮಗನೊಡನೆ ಮಾತನಾಡಲು ಬಿಟ್ಟಿರುತ್ತಾನೆ. ಆದ್ದರಿಂದ 'ನನ್ನೊಡನೆ' ಎಂದೆ ಮಾಡಿದ್ದರೆ ಹೆಚ್ಚು ಸೂಕ್ತವಾಗುತ್ತಿತ್ತು. ಮತ್ತೆ 'ನೀನು ಕುದುರೆ ಸವಾರಿಯೂ ಬಿಟ್ಟಿರುವೆ. ಬಣ್ಣಗೆಟ್ಟಿರುವೆ, ಬೆಳಚಿಕೊಂಡಿರುವೆ, ಬಡಕಲಾದೆ, ಖಾಯಿಲೆಯೇನು? ವಾಸಿ ಮಾಡಬಹುದೊ ತಿಳಿಯಬಯಸುವೆ; ಎಂಬ ನುಡಿಯನ್ನೂ ಕೈ ಬಿಡಲಾಗಿದೆ.

ಒಮ್ಮೊಮ್ಮೆ ಏಕೋ ಕೆಲವೆಡೆ ಒಳ್ಳೆಯ ಭಾವಗಳೂ ಕೈಬಿಟ್ಟುಹೋಗುವುದುಂಟು, ಇದಕ್ಕೊಂದೆರಡು ಉದಾಹರಣೆಯನ್ನಿಲ್ಲಿ ನೀಡಬಹುದು. ಪಾಂಡು ತೀರಿಹೋದಮೇಲೆ ಜನವೆಲ್ಲ ದುಃಖಮೂಢರಾಗಿರುವಾಗ ವ್ಯಾಸರು ತಮ್ಮ ತಾಯಿ ಸತ್ಯವತಿಗೆ "ಅಮ್ಮಾ! ಸುಖದಕಾಲ ಕಳೆದುಹೋಯಿತು; ಮುಂದೆ ಬರುವುದು ಕಷ್ಟದಕಾಲ; ದಿವಸದಿವಸಕ್ಕೆ ಕಾಲ ಕೆಟ್ಟುಹೋಗಿ ಮಾಯಾ ಮೋಸಗಳು ಹೆಚ್ಚಾಗುತ್ತವೆ; ಧರ್ಮ ಲುಪ್ತವಾಗುತ್ತದೆ. ಘೋರಸ್ಥಿತಿ ಬರುತ್ತದೆ. ಆದ್ದರಿಂದ ನೀನು ಎಲ್ಲವನ್ನೂ ತ್ಯಾಗಮಾಡಿ ತಪೋವನದಲ್ಲಿ ವಾಸಮಾಡುವುದು ಒಳ್ಳೆಯದು." ಎನ್ನುತ್ತಾರೆ. ಈ ವಚನದಲ್ಲಿ ಮೂಲ ಶ್ಲೋಕದಲ್ಲಿನ ಭಾವವೆಲ್ಲ ಅಚ್ಚುಕಟ್ಟಾಗಿ ಬಂದಿದ್ದರೂ, ಅತ್ಯಂತ ಶ್ರೇಷ್ಠವಾದ ವಿನೂತನ–ನಿತ್ಯನೂತನವಾದ ಪ್ರತಿಮೆಯೊಂದು ಕೈಬಿಟ್ಟುಹೋಗಿದೆ. "ಅತಿಕ್ರಾಂತಸುಖಾಃ ಕಾಲಾಃ ಪರ್ಯುಪಸ್ಥಿತ ದಾರುಣಾಃ। ಶ್ವಃ ಶ್ವಃ ಪಾಪಿಷ್ಠ ದಿವಸಾಃ ಪೃಥಿವೀ ಗತಯೌವನಾ॥" ಎಂಬಲ್ಲಿ ಕಡೆಯ ಮಾತು ಕೈತಪ್ಪಿಹೋಗಿದೆ. ಪೃಥ್ವಿಗೆ ಹರೆಯ ಹೊರಟುಹೋಯಿತು ಎಂಬ ಅದ್ಭುತ ಪ್ರತಿಮೆ ಏನೆಲ್ಲ ಅರ್ಥವತ್ತಾಗಿದೆ! ಪ್ರತಿಯೊಂದು ಕಾಲದಲ್ಲೂ, ಕೆಟ್ಟದ್ದಾಗುವಾಗ, ತನಗಿನ್ನು ಒಳ್ಳೆಯದನ್ನು ಭೋಗಿಸುವ ಹರಯ ತಪ್ಪಿಹೋದಾಗ ಮಾನವತೆ ಹೀಗೆಯೇ ಹೇಳುತ್ತದೆ. ವ್ಯಾಸರು ಹೀಗೆ ಹೇಳುವುದು ತಮ್ಮ ಮುದುಕಿ ತಾಯಿಯ ಮುಂದೆ. ಅವರು ಹೇಳಿದಂತೆ ಕಾಲವೇನೊ ಕೆಡುತ್ತ ಬಂದಿತು ಸರಿ. ಆದರೆ ಪೃಥಿವಿಗೆ ಯೌವನ ಹರಿದಿತ್ತೆ? ಎಲ್ಲರನ್ನೂ ಹೆರುತ್ತ ಹೊರುತ್ತ, ಅವರನ್ನೆ ಮೈಗೂಡಿಸಿಕೊಂಡು ಮತ್ತೆ ಹರೆಯತುಂಬಿ ಹೆರುತ್ತ ಹೊರುತ್ತಿರುವ ಈ ಪೃಥ್ವೀ ವಸುಂಧರೆಗೆ ಮುಪ್ಪೆಲ್ಲಿ? ಹರೆಯ ಹರಿಯುವುದೆಂದು? ಬೇಸಿಗೆ ಬಂದು ಗಿಡಮರಗಳೆಲ್ಲ ಬೋರಲು ಬೋರಲಾಗಿರುವಾಗಲೆ, ನೆಲವೆಲ್ಲ ಸೀದು ನೀರಿಲ್ಲದಾಗಲೆ ಇದ್ದಕ್ಕಿದಂತೆಯೆ ಚಿಗುರೊಡೆಯುತ್ತದೆ. ನೂರು ಬಣ್ಣದ ಹೂವಿನ ಚಿಗುರಿನ ಮೇಳವಾಗುತ್ತದೆ. ಇದನ್ನೆಲ್ಲ ಹಡೆಯುವ ಪೃಥಿವೀ ಬಂಜೆಯೆ? ಮುದಿಯೆ?

ಆದರೂ ಏಕೀ ಮಾತನ್ನು ವ್ಯಾಸರೆಂದರು? ಕಾರಣ, ತನಗೆ ಮುಪ್ಪಡರಿದರೆ ನೆಲಕ್ಕೂ ಮುಪ್ಪುಡರಿತೆಂದೆ ನಿತ್ಯಮಾನವ ಭಾವನೆ; ಇದು ವ್ಯಾಸರ ಸ್ವಂತ ಭಾವನೆಯಲ್ಲ. ಸುಖ ಶಕ್ತಿಯಳಿದ ಹರೆಯ ಉದುರಿದ ಮಾನವನ ಚಿರಂತನ ಭಾವನೆ ಇದು. ಇದೆಷ್ಟು ನವ್ಯವಾಗಿದೆ? ಇದೇಕೆ ಶ್ರೀ ಎ. ಆರ್. ಕೃ ಅವರ ರಸದೃಷ್ಟಿಯನ್ನು ತಪ್ಪಿಸಿಕೊಂಡಿತು?

ಶಸ್ತ್ರವಿದ್ಯಾ ಪ್ರದರ್ಶನವಾಗುತ್ತಿರುವಾಗ ಆ ರಂಗಸ್ಥಲಕ್ಕೆ ಕರ್ಣಾಗಮನ ವಾಗುವುದನ್ನು ವ್ಯಾಸರು ಬಹಳ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಆಗೊಂದು ಉಪಮಾನವನ್ನು ನೀಡುತ್ತಾರೆ; 'ಪಾದಚಾರೀವ ಪರ್ವತಃ', ಎಂದು. ಶ್ರೀ ಎ. ಆರ್. ಕೃ ಅವರು ಆ ಉಪಮೆಯನ್ನು ಹಾಗೆಯೆ, ಕನ್ನಡಿಸದೆ, ನೀಡಿದ್ದಾರೆ—ಅದು ಅನುವದಿಸಬಾರದ್ದು ಎಂದು. 'ಪಾದಚಾರಿಯಾದ ಪರ್ವತದಂತೆ' ಎಂದಾಗ ನಮಗೆ ಪರ್ವತ ವಾಕಿಂಗ್ ಹೊರಟಂಥ ಅನುಭವವೆ ಆದೀತು. ನಡೆಯುವ ಪರ್ವತ ಜಂಗಮಗಿರಿ ಎಂದೇನೇ ಹೇಳಿದ್ದರೂ ಸ್ವಾರಸ್ಯ ತಪ್ಪುತ್ತಿತ್ತು. ಇದನ್ನು ಅನುವಾದಕರು ಚೆನ್ನಾಗಿ ಗಮನಿಸಿದ್ದಾರೆ.... ಕರ್ಣನಿಗೆ ಅಂಗ ರಾಜ್ಯಭಿಷೇಕವಾಗುತ್ತದೆ. ಅದನ್ನು ಸಾಮಾನ್ಯ ಪ್ರೇಕ್ಷಕ ಸಮೂಹದಿಂದ ಕಂಡ ಅವನ ಸಾಕುತಂದೆ ರಂಗಸ್ಥಲ ಮಧ್ಯಕ್ಕೆ ಬರುತ್ತಾನೆ. ಇದರ ವರ್ಣನವೀ ತೆರವಿದೆ. ಅಷ್ಟುಹೊತ್ತಿಗೆ ಜನಮಧ್ಯದಿಂದ ಸೂತನಾದ ಅಧಿರಥನು ಕರ್ಣನನ್ನು ಕರೆಯುವಂತೆ ರಂಗಮಧ್ಯಕ್ಕೆ ಬಂದು ನಿಂತನು. ಅವನ ಉತ್ತರೀಯ ಜಾರಿದೆ; ಮೈಬೆವರಿದೆ; ನಡುಗುತ್ತ ಕೋಲೂರಿಕೊಂಡು ನಿಂತಿದ್ದಾನೆ! ಅವನನ್ನು ಕಂಡಕೂಡಲೆ ಕರ್ಣನು ಬಿಲ್ಲನ್ನು ಬಿಟ್ಟು ಪಿತೃಗೌರವದಿಂದ ನಮಸ್ಕಾರಮಾಡಿ, ಪಟ್ಟಾಭಿಷೇಕವಾದ ತಲೆಯಿಂದ ಅವನ ಪಾದಗಳನ್ನು ನನೆಸಿದನು. ಅವನು ಕೂಡಲೆ ತನ್ನ ಸೆರಗಿನಿಂದ ಹೆಜ್ಜೆಗಳನ್ನು ಮುಚ್ಚಿಕೊಂಡು ಸಂಭ್ರಮದಿಂದ ಅರ್ಥಪೂರ್ಣವಾಗಿ 'ಪುತ್ರ' ಎಂದನು. ಪುತ್ರವಾತ್ಸಲ್ಯದಿಂದ ಅವನನ್ನು ತಬ್ಬಿಕೊಂಡು ಮಾತು ಹೊರಡದೆ ಸೆರೆಬಿಗಿದು ನೆತ್ತಿಯನ್ನು ಮೂಸಿ ನೋಡಿದನು; ಪಟ್ಟಾಭಿಷೇಕದಿಂದ ಒದ್ದೆಯಾಗಿದ್ದ ಅವನ ತಲೆಯನ್ನು ತನ್ನ ಕಣ್ಣೀರಿನಿಂದ ತೊಯಿಸಿದನು." ಎಷ್ಟು ಹೃತ್ಸ್ಪರ್ಶಿಯಾಗಿದೆ, ಮಾರ್ಮಿಕ ವಾಗಿದೆ! ಇದರ ಮೂಲ ಹೀಗಿದೆ:

ತತಃ ಸ್ರಸ್ತೋತ್ತರಪಟಃ ಸಪ್ರಸ್ವೇದಃ ಸವೇಪಥುಃ
ವಿವೇಶಾಧಿರಥೋ ರಂಗಂ ಯಷ್ಟಿಪ್ರಾಣೋ ಹ್ವಯನ್ನಿವ॥ ೧

ತಮಾಲೋಕ್ಯ ಧನುಸ್ತ್ಯಕ್ತ್ವಾ ಪಿತೃಗೌರವಯಂತ್ರಿತಃ
ಕರ್ಣೋಽಭಿಷೇಕಾರ್ದ್ರಶಿರಾಃ ಶಿರಸಾ ಸಮವಂದತ॥ ೨

ತತಃ ಪಾದಾವವಚ್ಛಾದ್ಯ ಪಟಾಂತೇನ ಸಸಂಭ್ರಮಃ
ಪುತ್ರೇತಿ ಪರಿಪೂರ್ಣಾರ್ಥಮಬ್ರವೀತ್ ರಥಸಾರಥಿಃ॥ ೩

ಪರಿಷ್ವಜ್ಯ ಚ ತಸ್ಯಾಥ ಮೂರ್ಧಾನಂ ಸ್ನೇಹವಿಕ್ಲವಃ
ಅಂಗರಾಜ್ಯಾಭಿಷೇಕಾರ್ದ್ರಮಶ್ರುಭಿಃ ಸಿಷಿಚೇ ಪುನಃ॥ ೪

ಅಧ್ಯಾಯ: ೧೩೬, ಪುಟ: ೧೭೦

ಈ ವರ್ಣನೆಯಲ್ಲಿ ಮಹರ್ಷಿವ್ಯಾಸರ ಮಾನವಸ್ವಭಾವ ಚಿತ್ರಣ ಸಾಮರ್ಥ್ಯವನ್ನು ಅಗಾಧವಾಗಿ ಕಾಣಬಹುದು. ಕರ್ಣ ಮತ್ತು ಅವನ ಸಾಕುತಂಡೆಯ ಶ್ರೇಷ್ಠ ವರ್ತನವನ್ನಿಲ್ಲವರು ನೀಡಿದ್ದಾರೆ. ಆ ಸಾಕುತಂದೆಗೆ ಪುತ್ರಸ್ನೇಹ. ತಾನಿನ್ನು ರಾಜಪಿತನಾದೆನಲ್ಲ ಎಂಬ ಸಂಭ್ರಮವೊ, ತನ್ನ ಮಗನಿಗೆಲ್ಲಿ ಆ ಕ್ಷತ್ರಿಯರ ಸೆಣೆಸಾಟದಲ್ಲಿ ಕೇಡಾದೀತೆಂಬ ಭೀತಿಯೊ ಆ ಅಧಿರಥನನ್ನು ತುಂಬಿಕೊಂಡಿದೆ. ಆದ್ದರಿಂದಲೆ ಅವನು ನಡುಗುತ್ತ ಬೆವರುತ್ತಾ ಸೆರಗುಜಾರುತ್ತ ಬರುತ್ತಾನೆ. ಕರ್ಣನಾದರೊ 'ಪಿತೃಗೌರವ ಯಂತ್ರಿತ'ನಾಗಿದ್ದಾನೆ. ತನ್ನನ್ನು ರಾಜಪುತ್ರರು ಸೂತಪುತ್ರನೆಂದು ಗೇಲಿಮಾಡುತ್ತಿದ್ದರೂ ಅತ್ತ ಗಮನಗೊಳ್ಳದೆ ಆ ತನ್ನ ಸಾಕು ತಂದೆಗೆ ಶಿರಸಾ ನಮಸ್ಕರಿಸುತ್ತಾನೆ, ಅಭಿಷೇಕ ಜಲಾರ್ದ್ರವಾದ ತನ್ನ ತಲೆಯನ್ನು ಬಾಗಿಸುತ್ತಾನೆ. ಅವನ ಅತ್ಯುನ್ನತ ವರ್ತನ ಎಷ್ಟು ದುರ್ಲಭವೆಂಬುದು ಇತ್ತೀಚಿನ ವಿದ್ಯಾವಂತರು ತಮ್ಮ ಬಡ ತಂದೆತಾಯಿಗಳನ್ನು ಹೇಗೆ ನಡೆಸಿಕೊಳ್ಳುತ್ತಾರೆಂಬುದನ್ನು ಹೋಲಿಸಿ ನೋಡಿದಾಗ ತಿಳಿಯುತ್ತದೆ. ಕರ್ಣ ತೋರಿಸಿದ ಆ ಬಹಿರಂಗ ಪಿತೃಭಕ್ತಿಯನ್ನು ಕಂಡ ಭೀಮಾದಿಗಳೆಲ್ಲ, 'ನೀನು ಚಾಟಿ ಹಿಡಿಹೋಗು!' ಎಂದೆಲ್ಲ ಅವನನ್ನು ಗೇಲಿಮಾಡುತ್ತಾರೆ. ಅದೆಲ್ಲವನ್ನೂ ತುಟಿಪಿಟಕ್ಕೆನ್ನದೆ ತಾಳಿಕೊಳ್ಳುತ್ತಾನೆ ಕರ್ಣ. ಮಹಾಭಾರತದ ಮುಂದಿನ ಕಲಹಕ್ಕೆ ವ್ಯಾಸರು ಏನೆಂಥ ಅದ್ಭುತ ಬುನಾದಿ ನಿರ್ಮಿಸಿದ್ದಾರೆ! ಇತ್ಯಾದಿ, ಇತ್ಯಾದಿ. ಇದೆಲ್ಲ ವ್ಯಾಸರಕಣ್ಣಿಗೆ ಕಂಡಿದೆ. ಅದನ್ನೇ ಶ್ರೀ ಎ. ಆರ್. ಕೃ. ನಮ್ಮ ಕಣ್ಣಿಗೆ ಕನ್ನಡಿಸಿದ್ದಾರೆ. ಆದರೆ ಇಲ್ಲೊಂದು ಮಾತನ್ನು ಬಿಡದಿದ್ದರೆ, ಅದರ ಸಾರಾಂಶಕೊಡದೆ ಅದನ್ನು ಹಾಗೆಯೆ ಕೊಟ್ಟಿದ್ದರೆ ಮತ್ತೂ ಚೆನ್ನಾಗಿರುತ್ತಿತ್ತು. ಅದೇ, 'ಯಷ್ಟಿಪ್ರಾಣಃ' ಎಂಬುದು. ಇದನ್ನೆಂತು ಭಾಷಾಂತರಿಸುವುದು? 'ಕೋಲೂರಿಕೊಂಡು ನಿಂತಿದ್ದಾನೆ,' ಎಂಬುದು ತಾತ್ಪರ್ಯವಾಯಿತಷ್ಟೆ. 'ಯಷ್ಟಿಪ್ರಾಣ' ಎಂಬುದೆ ಸುಂದರ ಪ್ರತಿಮೆ. ಮುದುಕನಿಗೆ ಕೈಕೋಲೆ ಪ್ರಾಣ. ಅವನ ಪ್ರಾಣ ಆಗ ಊರುಗೋಲಿನಲ್ಲಿರುತ್ತದೆ ಇದು ಕವಿಯ ಆಶಯ. ಆ ಮುದುಕ ತಂದೆ 'ಯಷ್ಟಿಪ್ರಾಣ'ನಾಗಿರುವಂತೆಯೆ ತನ್ನ ಸಾಕುಮಗನಲ್ಲಿ ತನ್ನ ಪ್ರಾಣವಿಟ್ಟುಕೊಂಡೂ ಇದ್ದಾನೆ. ಆದ್ದರಿಂದ ಈ ಪ್ರತಿಮೆಯನ್ನು ಹಾಗೆಯೇ ಉಳಿಸಿಕೊಂಡಿದ್ದರೆ ಚೆನ್ನಾಗಿರುತ್ತಿತ್ತು.

ಈ ಶಸ್ತ್ರ ಸಾಮರ್ಥ್ಯ ಪ್ರದರ್ಶನವಾದಮೇಲೆ ಕುಂತಿಗೆ ಕರ್ಣ ತನ್ನ ಮಗನೆಂದು ಗುರುತು ಹತ್ತಿತು. "ಕುಂತಿಗೆ ಈ ದಿವ್ಯಲಕ್ಷಣಯುಕ್ತನಾದ ಅಂಗರಾಜನು ತನ್ನ ಮಗನೆಂದು ಗುರುತು ಹತ್ತಿ ಅವನಲ್ಲಿ ಒಳಗೇ ಪ್ರೀತಿ ಬೆಳೆಯಿತು";—"ಕುಂತ್ಯಾಶ್ಚ ಪ್ರತ್ಯಭಿಜ್ಞಾಯ **ದಿವ್ಯಲಕ್ಷಣಸೂಚಿತಂ** ಪುತ್ರಮಂಗೇಶ್ವರಂ ಸ್ನೇಹಾಚ್ಛನ್ನಾ

ಪ್ರೀತಿರಜಾಯತ್" ಕನ್ನಡ ವಾಕ್ಯ ಸಂಸ್ಕೃತದಂತೆಯೆ ತೋರಿದರೂ ಒಂದು ವ್ಯತ್ಯಾಸವಿದೆ. ಅದೆಂದರೆ, ಕುಂತಿಗೆ ಕರ್ಣ ತನ್ನ ಮಗನೆಂದು ತಿಳಿದದ್ದು ಅವನು ದಿವ್ಯಲಕ್ಷಣಯುಕ್ತನಾದುದರಿಂದ ಎಂಬುದಕ್ಕಿಂತ ದಿವ್ಯಲಕ್ಷಣ ಸೂಚಿತವಾದದ್ದರಿಂದ ಎಂದಿದ್ದರೆ ಹೆಚ್ಚು ಅರ್ಥವತ್ತಾಗುತ್ತಿದ್ದಿತು. ಕರ್ಣ ದಿವ್ಯಲಕ್ಷಣಯುಕ್ತನಾಗಿದ್ದುದೇನೊ ಸರಿ. ಆದರೆ ಅವನು ತನ್ನ ಮಗನೆಂದು ಕುಂತಿಗೆ ತಿಳಿದದ್ದು ಹೇಗೆ? ಅದು 'ದಿವ್ಯ ಲಕ್ಷಣ ಸೂಚಿತ'ವಾಗುತ್ತದೆ. ಬರಿದೆ ಗುರುತು ಹತ್ತುವುದಿಲ್ಲ.

ಮಹಾಭಾರತದಲ್ಲಿ ಬರುವ ನಾನಾ ತುಮುಲಸಂಘರ್ಷದ ಚಿತ್ರಣವೇನೇ ಇದ್ದರೂ ಶ್ರೀ ಎ. ಆರ್. ಕೃ. ಅವರು ಅಲ್ಲಿ ಆಗೊಮ್ಮೆ ಈಗೊಮ್ಮೆ ಹಾಯ್ದು ಬರುವ ಸಾಂಸಾರಿಕ ಚಿತ್ರಗಳಕಡೆಗೆ ಹೆಚ್ಚು ಗಮನವಿರಿಸಿದ್ದಾರೆ. "ಭಾರತದಲ್ಲಿ ಬರುವ ರಾಜನೀತಿ ಎಷ್ಟು ಮುಖ್ಯವೋ ಅಷ್ಟೇ, ಪ್ರಾಯಶಃ ಅದಕ್ಕಿಂತ ಹೆಚ್ಚು, ಮುಖ್ಯ ಅದರ ಸಾಂಸಾರಿಕ ನೀತಿ." ಎಂದು ಅವರೇ ಹೇಳಿದ್ದಾರೆ.

ಈ ಬಗೆಯ ದೃಷ್ಟಿಗೆ, ಆದ್ದರಿಂದ, ಸಾಂಸಾರಿಕವಾದ ಯಾವ ಸಣ್ಣ ಘಟನೆಯೂ ಮರೆಯಾಗುವುದಿಲ್ಲ. ಅಂಥ ಸನ್ನಿವೇಶಗಳು ಬಂದಾಗ ಅವರು ಬಹಳ ಎಚ್ಚರವಿದ್ದುಕೊಂಡಿರುವಂತೆ ತೋರುತ್ತದೆ ಬಕವಧ ಸನ್ನಿವೇಶವದು, ರಾಕ್ಷಸನ ಆಹಾರಕ್ಕಾಗಿ ಯಾರು ಬಲಿಯಾಗಬೇಕೆಂದು ತೀರ್ಮಾನಿಸಲಾಗದೆ ಮನೆ ದುಃಖತಪ್ತವಾಗಿರುವಾಗ ಒಂದು ಚೇತೋಹಾರಿಯಾದ ಪುಟ್ಟ ಘಟನೆ ಬ್ರಾಹ್ಮಣ ಕುಟುಂಬದಲ್ಲಿ ನಡೆಯುತ್ತದೆ. "ತಾಯಿ, ತಂದೆ, ಮಗಳು ಮೂವರೂ ಅಳುವುದಕ್ಕೆ ಮೊದಲು ಮಾಡಿದರು. ಇವರ ಗೋಳಾಟವನ್ನೆಲ್ಲಾ ನೋಡುತ್ತಿದ್ದ ಗಂಡುಮಗುವು ಆಗ ಮುಂದೆಬಂದು, ನಗುಮುಖದಿಂದ, ಮುದ್ದುಮುದ್ದಾಗಿ 'ಅಪ್ಪಾ ಅಳಬೇಡ! ಅಮ್ಮಾ ಅಳಬೇಡ! ಅಕ್ಕಾ ಅಳಬೇಡ' ಎಂದು ಸಮಾಧಾನಮಾಡುತ್ತಾ, ಒಂದು ಕಡ್ಡಿಯನ್ನು ಹಿಡಿದುಕೊಂಡು ಬಂದು ಉಲ್ಲಾಸದಿಂದ 'ಮನುಷ್ಯನನ್ನು ತಿನ್ನುವ ಆ ರಾಕ್ಷಸನನ್ನು ನಾನು ಇದರಿಂದ ಹೊಡೆದುಕೊಂದು ಹಾಕುತ್ತೇನೆ! ಅಳಬೇಡಿ!' ಎಂದಿತು. ದುಃಖದಲ್ಲಿ ಮುಳುಗಿಹೋಗಿದ್ದರೂ ಮಗುವಿನ ಆ ಮುದ್ದು ಮಾತನ್ನು ಕೇಳಿ ಎಲ್ಲರಿಗೂ ತುಂಬ ಸಂತೋಷವಾಯಿತು." ಇದರ ಮೂಲ ಹೀಗಿದೆ :

> ತತಃ ಪ್ರರುದಿತಾನ್ ಸರ್ವಾನ್ ನಿಶಮ್ಯಾಥ ಸುತಸ್ತದಾ
> ಉತ್ಫುಲ್ಲನಯನೋ ಬಾಲಃ ಕಲಮವ್ಯಕ್ತಮಬ್ರವೀತ್ ॥ ೨೦
>
> [1]ಮಾರೋದಿಸ್ತಾತ ಮಾ ಮಾತರ್ ಮಾ ಸ್ವಸಸ್ತ್ವಿತಿ ಚಾಬ್ರವೀತ್
> ಪ್ರಹಸನ್ನಿವ ಸರ್ವಾಂಸ್ತಾನೇಕೈಕಮನುಸರ್ಪತಿ ॥ ೨೧

[1] ಇಲ್ಲಿ ಉದ್ಧರಿಸಿರುವ ಎಲ್ಲ ಸಂಸ್ಕೃತ ಮೂಲಶ್ಲೋಕವೂ ಗೋರಖ್‌ಪುರ ಮುದ್ರಣದಿಂದ ತೆಗೆದುಕೊಂಡುವೆ. ಆದರೆ ಈ ಶ್ಲೋಕದ ಮೊದಲಪಾದದ ಮೊದಲರ್ಧವನ್ನು ಮಾತ್ರ ಸುಕ್ತಂಕರ್ ಪರಿಷ್ಕೃತ ಮುದ್ರಣದಿಂದ ಆರಿಸಿದೆ. "ಮಾ ಪಿತಾ ರುದ ಮಾ ಮಾತರ್" ಎಂದಿದೆ ಗೋರಖ್‌ಪುರ ಪ್ರತಿಯಲ್ಲಿ (ಗೀತಾಪ್ರೆಸ್ ಮುದ್ರಣ).

ತತಃ ಸ ತೃಣಮಾದಾಯ ಪ್ರಹೃಷ್ಟಃ ಪುನರಬ್ರವೀತ್
ಅನೇನಾಹಂ ಹನಿಷ್ಯಾಮಿ ರಾಕ್ಷಸಂ ಪುರುಷಾದಕಮ್ ॥ ೨೨

ತಥಾಪಿ ತೇಷಾಂ ದುಃಖೇನ ಪರೀತಾನಾಂ ನಿಶಮ್ಯ ತತ್
ಬಾಲಸ್ಯ ವಾಕ್ಯಮವ್ಯಕ್ತಂ ಹರ್ಷಃ ಸಮಭವನ್ಮಹಾನ್ ॥ ೨೩

ಅಧ್ಯಾಯ : ೧೫೮ ಪುಟ ೨೦೬

ಮೇಲಿನ ಕನ್ನಡ ಅನುವಾದ ಅತ್ಯಂತ ಸಮರ್ಪಕವಾಗಿದೆ. ಆದರೆ 'ಉತ್ಫುಲ್ಲನಯನ' ಎಂಬುದಕ್ಕೆ 'ನಗುಮುಖ' ಎಂದು ಮಾಡದೆ 'ಅರಳುಗಣ್ಣು' ಎಂದಿದ್ದರೆ ಚೆನ್ನಾಗಿರುತ್ತಿತ್ತು. ಮಕ್ಕಳ ಸಂತೋಷ ಅರುಳುಕಣ್ಣಿನಿಂದ ತೋರುವಂತೆ ನಗುಮುಖದಿಂದಲೂ ತೋರದು. ಮತ್ತೆ 'ಮುದ್ದು ಮುದ್ದಾಗಿ' ಎಂದು ಹೇಳಿರುವುದರ ಕೂಡೆ 'ಅವ್ಯಕ್ತಮ್' ಎಂಬುದನ್ನೂ ಗಮನಿಸಬಹುದಿತ್ತು. ಮಕ್ಕಳಮಾತು ಸ್ಪಷ್ಟವೂ ಅಲ್ಲ, ಪೂರ್ಣವ್ಯಕ್ತವೂ ಅಲ್ಲ ತಾನೆ? 'ಆ ಮಗುವಿನ ಮುದ್ದು ಮಾತನ್ನು ಕೇಳಿ' ಎಂಬಲ್ಲಿಯೂ 'ಅವ್ಯಕ್ತ'ವು ಸೇರಿದೆ.

ದ್ರೌಪದಿಯನ್ನು ರಾಣೀವಾಸದಿಂದ ಅಟ್ಟಿಕೊಂಡು ಹೋದ ದುಶ್ಶಾಸನ ಅವಳ ಮುಡಿ ಹಿಡಿದೆಳೆಯುತ್ತಾನೆ. ಈ ಚಿತ್ರವನ್ನು ಕುಮಾರವ್ಯಾಸ ಶಕ್ತಿ ಸುಂದರವಾಗಿ ವರ್ಣಿಸಿದ್ದಾನೆ. ಆದರೆ ಆ ವರ್ಣನೆಗೆ ಮೂಲವರ್ಣಗಳು–ವರ್ಣನೆಗಳೂ ಕೂಡ–ವ್ಯಾಸರಲ್ಲೆ ಇದೆ. "ದುಶ್ಶಾಸನನೂ ರೋಷದಿಂದ ಅರಚುತ್ತ ಅವಳಹಿಂದೆ ಓಡಿಹೋಗಿ ಕಪ್ಪಗೆ ಅಲೆಅಲೆಯಾಗಿದ್ದ ಅವಳ ಜೋಲ್ಮುಡಿಯನ್ನು ಹಿಡಿದುಕೊಂಡನು. ರಾಜಸೂಯ ಮಹಾಯಾಗದಲ್ಲಿ ಅವಭೃಥ ಸ್ನಾನದಿಂದ ಪವಿತ್ರವಾಗಿದ್ದ ಆ ಕೂದಲನ್ನು, ಪಾಂಡವರ ವೀರ್ಯವನ್ನು ಪರಾಭವಗೊಳಿಸುವಂತೆ, ದುಶ್ಶಾಸನನು ಹಿಡಿದುಕೊಂಡು, ಗಂಡಂದಿರಿದ್ದರೂ ದಿಕ್ಕಿಲ್ಲದವಳನ್ನು ಎಳೆದು ತರುವಂತೆ ಸಭೆಗೆ ಎಳೆದುಕೊಂಡು ಹೊರಟನು."

"ತತೋ ಜವೇನಾಭಿಸಸಾರ ರೋಷಾದ್
ದುಶ್ಶಾಸನಸ್ತಾಮಭಿಗರ್ಜಮಾನಃ ।
ದೀರ್ಘೇಷು ನೀಲೇಷ್ವಥ ಚೋರ್ಮಿಮತ್ಸು
ಜಗ್ರಾಹ ಕೇಶೇಷು ನರೇಂದ್ರ ಪತ್ನೀಮ್ ॥

ಯೇ ರಾಜಸೂಯಾವಭೃಥೇ ಜಲೇನ
ಮಹಾಕ್ರತೌ ಮಂತ್ರಪೂತೇನ ಸಿಕ್ತಾಃ ।
ತೇ ಪಾಂಡವಾನಾಂ ಪರಿಭೂಯ ವೀರ್ಯಂ
ಬಲಾತ್ ಪ್ರಮೃಷ್ಟಾ ಧೃತರಾಷ್ಟ್ರಜೇನ"

ಸಭಾಪರ್ವ, ಅಧ್ಯಾಯ : ೬೭ ಪುಟ : ೩೭೬

'ದೀರ್ಘ' ಎಂಬುದಕ್ಕೆ 'ಜೋಲುವುದೆ'ಂದಾಗಲಿ, 'ಊರ್ಮಿಮತ್' ಎಂಬುದನ್ನು 'ಅಲೆಯುಲೆಯಾಗಿರುವ' ಎಂದೆ ಆಗಲಿ ಹೇಳಿದರೆ ಅರ್ಥ ಸ್ವಾರಸ್ಯ ತುಂಬ ಒದಗಿಬರದಿರಬಹುದು. ಕಾರಣ ದ್ರೌಪದಿಯ ಮುಡಿ ಜೋಲ್ಮುಡಿಯಷ್ಟೆ ಅಲ್ಲ, ಅಲೆಯುಲೆಯಾದುದಷ್ಟೆ ಅಲ್ಲ; ದೀರ್ಘವಾದದ್ದು, ಊರ್ಮಿಮತ್–ತರಂಗ ವತ್ ಅಲ್ಲ–ಆದದ್ದು. ಊರ್ಮಿಯೆಂದರೆ ಅಲೆ ಎಂದಷ್ಟೆ ಅಲ್ಲ, ಪ್ರವಾಹ ವೆಂದರ್ಥವಿದೆ. ಆದ್ದರಿಂದ ಬರಿಯ ಅಲೆಅಲೆಯಾಗಿರದೆ ಊರ್ಮಿವತ್ ಆಗಿದೆ. ದ್ರೌಪದಿಯ ಮುಡಿ. ಆ ನೀಲ ದೀರ್ಘಪ್ರವಾಹವನ್ನು ಹಿಡಿಯಹೋಗಿ, ಅವನೊಬ್ಬನೇ ಅಲ್ಲ, ಕುರುವಂಶವೇ ಕೊಚ್ಚಿಹೋಗುತ್ತದೆ.

ವಿರಾಟಪರ್ವದ ಕಡೆ. ಪಾಂಡವರು ತನ್ನ ಆಶ್ರಯದಲ್ಲಿ ವೇಷ ಮರೆಸಿ ಕೊಂಡಿದ್ದು ತನ್ನನ್ನು ಬದುಕಿಸಿದರೆಂಬುದು ವಿರಾಟನಿಗೆ ತಿಳಿಯುತ್ತದೆ. ತನ್ನ ಪ್ರಮಾದಕ್ಕಾಗಿ ಅವರಲ್ಲಿ ಕ್ಷಮೆ ಕೇಳಿ ಆ ದೊರೆ ತನ್ನ ಮಗಳನ್ನು ಅರ್ಜುನನಿಗೆ ಮದುವೆಮಾಡಿ ಕೊಡಲು ಅವನ ಅಪ್ಪಣೆಯನ್ನು ಕೇಳಿಕೊಳ್ಳುತ್ತಾನೆ. "ಧರ್ಮ ರಾಜನು ಅರ್ಜುನನ ಮುಖವನ್ನು ನೋಡಲು, ಅರ್ಜುನನು ಅಣ್ಣನ ಸಂಜ್ಞೆಯನ್ನು ಗ್ರಹಿಸಿ ವಿರಾಟನನ್ನು ಕುರಿತು 'ರಾಜನೇ! ನಿನ್ನ ಮಗಳನ್ನು ನಾನು ನನ್ನ ಸೊಸೆ ಯಾಗಿ ಪರಿಗ್ರಹಿಸುತ್ತೇನೆ. ಮತ್ಸ್ಯ ಭಾರತಕುಲಗಳ ಸಂಬಂಧವು ಯುಕ್ತ ವಾದದ್ದಾಗಿದೆ.' ಎಂದನು. 'ಅದೇಕೆ ನೀನೆ ಪರಿಗ್ರಹಿಸಲೊಲ್ಲೆ?' ಎಂದು ವಿರಾಟನು ಕೇಳಲು ಅರ್ಜುನನು 'ಮಹಾರಾಜ, ನಾನು ಅಂತಃಪುರದಲ್ಲಿದ್ದು ಸದಾ ನಿನ್ನ ಮಗಳನ್ನು ನೋಡುತ್ತಿದ್ದೆ; ಅವಳು ನನ್ನನ್ನು, ಏಕಾಂತವಾಗಿಯಾಗಲಿ, ಪ್ರಕಾಶವಾಗಿಯಾಗಲಿ ಯಾವಾಗಲೂ ತಂದೆಯಂತೆ ವಿಶ್ವಾಸದಿಂದ ಕಾಣು ತ್ತಿದ್ದಳು. ಅಲ್ಲದೆ ಗಾಯನ ನರ್ತನಗಳಲ್ಲಿ ನಾನು ಆಕೆಗೆ ಗುರುವಿನಂತೆ ಪೂಜ್ಯನೂ ಪ್ರೀತಿ ಪಾತ್ರನೂ ಆಗಿದ್ದೆ. ಒಂದು ವರ್ಷದಿಂದ ನಾನೂ ಅವಳ ಜೊತೆಯಲ್ಲಿ ಇದ್ದು ಈಗ ಮದುವೆಮಾಡಿಕೊಂಡರೆ ಜನರು ಇಲ್ಲದ್ದನ್ನು ಏನಾದರೂ ಶಂಕಿಸಿಯಾರು. ನಾನು ಶುದ್ಧನೂ ಜಿತೇಂದ್ರಿಯನೂ ದಾಂತನೂ ಆಗಿದ್ದೇನೆ; ಅವಳೂ ಶುದ್ಧ ಳಾಗಿರುವಂತೆ ನೋಡಿಕೊಂಡಿದ್ದೇನೆ. ನಾನು ಹೇಳಿದಂತೆ ನಡೆದರೆ, ಸೊಸೆಗಾಗಲಿ ಮಗಳಿಗಾಗಲಿ ಮಗನಿಗಾಗಲಿ ತಂದೆಗಾಗಲಿ, ಯಾರಿಗೂ ಯಾವ ವಿಧದ ಸಂದೇಹಕ್ಕೂ ಅವಕಾಶವಿರುವುದಿಲ್ಲ; ಎಲ್ಲವೂ ನಿರ್ಮಲವಾಗಿರುತ್ತದೆ. ಆದ್ದರಿಂದ ನಿನ್ನ ಮಗಳನ್ನು ನನ್ನ ಸೊಸೆಯಾಗಿ ಮಾಡಿಕೊಳ್ಳಬೇಕೆನ್ನುತ್ತೇನೆ. ನನ್ನ ಮಗ ನಾದ ಅಭಿಮನ್ಯುವೂ ವಾಸುದೇವನ ಸೋದರಳಿಯ; ಸಾಕ್ಷಾತ್ ದೇವಕುಮಾರ ನಂಥವನು; ಶ್ರೀಕೃಷ್ಣನಿಗೆ ಅಚ್ಚುಮೆಚ್ಚು; ಬಾಲ್ಯದಲ್ಲಿಯೆ ಅಸ್ತ್ರಕೋವಿದ ನಾದವನು, ಅವನು ತಕ್ಕ ಅಳಿಯ; ನಿನ್ನ ಮಗಳಿಗೆ ತಕ್ಕ ಗಂಡ' ಎಂದನು."

ಎಂಥ ಮಹಾಪರೀಕ್ಷೆಯ ಪ್ರಸಂಗ! ಎಂಥ ಮಹತ್ತರವಾದ ರೀತಿಯಲ್ಲಿ ವ್ಯಾಸಋಷಿ ಚಿತ್ರಿಸಿದ್ದಾರೆ! ಮೇಲಿನ ವಚನಾನುವಾದ ಮೂಲದ ಅವ ತರಣಿಕೆಯೆ ಆಗಿದೆ.

ಏವಮುಕ್ತೋ ಧರ್ಮರಾಜಃ ಪಾರ್ಥಮೈಕ್ಷದ್ ಧನಂಜಯಂ
ಈಕ್ಷಿತಶ್ಚಾರ್ಜುನೋ ಭ್ರಾತ್ರಾ ಮತ್ಸ್ಯಂ ವಚನಮಬ್ರವೀತ್ ॥ ೩೫

ಪ್ರತಿಗೃಹ್ಣಾಮ್ಯಹಂ ರಾಜನ್ ಸ್ನುಷಾಂ ದುಹಿತರಂ ತವ
ಯುಕ್ತಶ್ಚಾವಾಂ ಹಿ ಸಂಬಂಧೋ ಮತ್ಸ್ಯ ಭಾರತಯೋರಪಿ । ೩೬

ಕಿಮರ್ಥಂ ಪಾಂಡವಶ್ರೇಷ್ಠ ಭಾರ್ಯಾಂ ದುಹಿತರಂ ಮಮ
ಪ್ರತಿಗ್ರಹೀತುಂ ನೇಮಾಂ ತ್ವಂ ಮಯಾ ದತ್ತಾಮಿಹೇಚ್ಛಸಿ ॥ ೧

ಅಂತಃಪುರೇಽಹಮುಷಿತಃ ಸದಾ ಪಶ್ಯನ್ ಸುತಾಂ ತವ
ರಹಸ್ಯಂ ಚ ಪ್ರಕಾಶಂ ಚ ವಿಶ್ವಸ್ತಾ ಪಿತೃವನ್ಮಯಿ ॥ ೨

ಪ್ರಿಯೋ ಬಹುತಮಶ್ಚಾಸಂ ನರ್ತಕೋ ಗೀತಕೋವಿದಃ
ಆಚಾರ್ಯವಚ್ಚ ಮಾಂ ನಿತ್ಯಂ ಮನ್ಯತೇ ದುಹಿತಾ ತವ ॥ ೩

ವಯಃಸ್ಥಯಾ ತಯಾ ರಾಜನ್ ಸಹ ಸಂವತ್ಸರೋಷಿತಃ
ಅತಿಶಂಕಾಭವೇತ್ ಸ್ಥಾನೇ ತವ ಲೋಕಸ್ಯ ವಾ ವಿಭೋ ॥ ೪

ತಸ್ಮಾನ್ನಿಮಂತ್ರಯೇಽಹಂ ತೇ ದುಹಿತಾಂ ಮನುಜಾಧಿಪ
ಶುದ್ಧೋ ಜಿತೇಂದ್ರಿಯೋ ದಾಂತಸ್ತಸ್ಯಾಃ ಶುದ್ಧಿಃಕೃತಾ ಮಯಾ ॥ ೫

ಸ್ನುಷಾಯಾಂ ದುಹಿತುರ್ವಾಪಿ ಪುತ್ರೇ ಚಾತ್ಮನಿ ವಾ ಪುನಃ
ಅತ್ರ ಶಂಕಾಂ ನ ಪಶ್ಯಾಮಿ ತೇನ ಶುದ್ಧಿರ್ ಭವಿಷ್ಯತಿ ॥ ೬

ಸ್ವಸ್ರೀಯೋ ವಾಸುದೇವಸ್ಯ ಸಾಕ್ಷಾದ್ ದೇವಶಿಶುರ್ ಯಥಾ
ದಯಿತಶ್ಚಕ್ರಹಸ್ತಸ್ಯ ಸರ್ವಾಸ್ತ್ರೇಷು ಚ ಕೋವಿದಃ ॥ ೭

ಅಭಿಮನ್ಯುರ್ ಮಹಾಬಾಹುಃ ಪುತ್ರೋ ಮಮ ವಿಶಾಂಪತೇ
ಜಾಮಾತಾ ತವ ಯುಕ್ತೋ ವೈ ಭರ್ತಾ ಚ ದುಹಿತುಸ್ತವ ॥ ೮

ಭಾಗ ೨, ವಿರಾಟಪರ್ವ, ಅಧ್ಯಾಯ: ೭೧, ೭೨ ಪುಟ: ೮೧

ಇಂತಹ ಸನ್ನಿವೇಶಗಳಲ್ಲಿ ಶ್ರೀ ಎ. ಆರ್. ಕೃ ಅವರು ಏನನ್ನೂ ಸಂಗ್ರಹ ಮಾಡದೆ ಅನುವಾದ ಮಾಡುವುದುಂಟು. ಭಗವದ್ಗೀತೆಯನ್ನೂ ಒಂದೇ ಪುಟದಲ್ಲಿ ಇರುಕಿಸಿ ಹೋಗುವ ಸ್ವಭಾವವೂ ಉಂಟು. ಕಾರಣವೆಂದರೆ, ಸಾಂಸಾರಿಕ ಚಿತ್ರಗಳ ಕಡೆಗೆ ಲೇಖಕರ ಒಲವರ ಹೆಚ್ಚಾಗಿದೆ. ಅದು ಸೂಕ್ತವೂ ಸರಿ, ಆದರೆ ಭಗವದ್ಗೀತವನ್ನು ಮತ್ತಷ್ಟು ವಿಸ್ತರಿಸಿ ಬರೆದಿದ್ದರೆ ಚೆನ್ನಾಗಿರುತ್ತಿತ್ತು. ಭಗವದ್ಗೀತವೆಂದರೆ ಅದರ ತತ್ವಾರ್ಥವೇ ಅಲ್ಲ; ಅದು ನಮ್ಮ ಅನುಭಾವಕ್ಕೆ ತಂದ ವಿರಾಡ್ ತತ್ವದರ್ಶನ. ಆ ವಿಶ್ವ ತತ್ವ ನಮ್ಮ ಅನುಭವಕ್ಕೆ ತಂದ ವಿರಾಡನುಭೂತಿ.

ಅದನ್ನು ಸಂಗ್ರಹಾತ್ಮಕವಾದ ಅನುವಾದಗಳಲ್ಲಿ ನಿರೀಕ್ಷಿಸುವುದೇ ತಪ್ಪಾದೀತು. ಮತ್ತೊಂದು ಅಂಶವೆಂದರೆ ಸುಮಾರು ೨೪೦೦೦ ಶ್ಲೋಕಗಳಿರುವ ಯುದ್ಧ ಪಂಚಕವನ್ನು ೫೩ ಪುಟಗಳಷ್ಟರಲ್ಲೆ ಅಡಗಿಸಿ ಬಿಟ್ಟಿದ್ದಾರೆ. ಯುದ್ಧ ವರ್ಣನೆ ಯಲ್ಲಿ ಹೇರಳವಾದ ಪುನರುಕ್ತಿಯಿದೆ ಎಂದು ಒಪ್ಪಿಕೊಂಡರೂ ಆ ಪರ್ವಗಳಲ್ಲಿ ಬರುವುದೆಲ್ಲ ಯುದ್ಧವರ್ಣನೆಯೇನೂ ಅಲ್ಲವಲ್ಲ? ನಾನಾ ಮನಸ್ಸಿನ ನಾನಾ ವಯಸ್ಸಿನ ಭಾವಗಳ ಹೋರಾಟವೂ ಅಲ್ಲಿ ಬರುತ್ತದೆ. ಮೊದಲಿನ ಪರ್ವತ ಗಳಲ್ಲಿ ತೋರಿದ ಸಾವಧಾನವನ್ನೆ ಇಲ್ಲೂ ತೋರಿದ್ದರೆ ಹೆಚ್ಚು ಸೂಕ್ತವಿತ್ತೆಂದೇ ಅನಿಸುತ್ತದೆ.

ಶ್ರೀ ಎ. ಆರ್. ಕೃ. ಅವರು ಮೂಲಕೃತಿಯನ್ನು ಕನ್ನಡಿಸುವಾಗ ಎಷ್ಟೆಲ್ಲ ಕನ್ನಡತನವನ್ನು ಸಾಧಿಸಿದ್ದಾರೆ ಎಂಬುದು ಮನನೀಯವಿಚಾರ. ಮೂಲಪದಕ್ಕೆ, ಆ ಪದಪ್ರತಿಮೆಗೆ ನಮ್ಮ ಭಾಷೆಯಲ್ಲೇ ಸಂವಾದಿಯಾದ ಮಾತನ್ನು ಸೃಷ್ಟಿಸುವುದ ರತ್ತ ಪ್ರಾಧ್ಯಾಪಕರ ಗಮನ ಹರಿಯುತ್ತಿರುತ್ತದೆ. 'ಜಳ್ಳೆಳ್ಳು' ಎಂಬ ಮಾತನ್ನೆ ಗಮನಿಸಬಹುದು. ಇದು ಕೆಲವೆಡೆ ಬರುತ್ತದೆ. ಪಾಂಡವರನ್ನು ಕೌರವರು ಗೆದ್ದ ಮತ್ತಿನಲ್ಲಿ ಬೈದ ರೀತಿಯಿದು. ಎಷ್ಟು ಶಕ್ತವಾದ 'ರೂಪಕ'ವಿದು ಎಂದುಕೊಂಡೆ ನಾನು ಮೊದಲು. ಆದರೆ ಇದರ ವ್ಯಾಸಮೂಲ ಮತ್ತೂ ಶಕ್ತಿವತ್ತಾಗಿದೆ. 'ಷಂಡತಿಲ' ಎಂದಿದೆ ಆ ಋಷಿಕವಿಯ ವಾಗ್ವಿಧಾನ. ಸೋತ ಪಾಂಡವರು 'ಷಂಡತಿಲ'. 'ಜಳ್ಳೆಳ್ಳು' ಎಂಬ ಮಾತು ಎಷ್ಟೇ ತನಗೆ ತಾನೇ ಸೊಗಸಾಗಿದ್ದರೂ ಮೂಲದ ಶಕ್ತಿ ತರಲಾರದು. ಆದರೆ, ಕನ್ನಡಕ್ಕೆ ಆ ಮೂಲವನ್ನೂ ಹಿಡಿದು ತರಬೇಕೆಂಬ ಸಾಹಸ ಮಾತ್ರ ಸ್ತುತ್ಯ. ಎಳ್ಳು ಜಳ್ಳಾಗುವುದಲ್ಲ, ಷಂಡವಾಗುವುದು! ಎಳ್ಳನ್ನೇ ಏಕೆ ಆ ಕವಿ ಬಳಸಿದರು? ವೀರ್ಯಗ್ರಂಥಿಗಳ ಮೇಲೆ ಪ್ರಭಾವಬೀರುವ ಶಕ್ತಿ ಎಳ್ಳಿಗಿದೆ. ಅದೇ ಷಂಡವಾದರೆ? ಸೋತ ಪಾಂಡವರು ಕೌರವರಿಗೆ ಷಂಡರಾಗಿ ಷಂಡತಿಲವಾಗಿ, ಬಡಿಹೋರಿಗಳಾಗಿ ಕಾಣುತ್ತಾರೆ. ಎಷ್ಟು ಶಕ್ತವಾಗಿದೆ ಈ ಪದರೂಪಕ! ವಚನ ಭಾರತಕಾರರು ಈ ಮೂಲಕ್ಕೆ 'ಜಳ್ಳೆಳ್ಳು' ಎಂದೇ ಅದು ಬರುವೆಡೆಯೆಲ್ಲೆಲ್ಲ ಕೊಟ್ಟಿದ್ದಾರೆ. ಆದರೆ ಒಂದೊಂದು ಕಡೆ ಮೂಲವನ್ನೆ ಇಟ್ಟಿದ್ದರೆ ಹೇಗಿರುತ್ತಿತ್ತು?

ಮೂಲ ಮಹಾಕಾವ್ಯದಲ್ಲಿ ಹತ್ತಾರು ಶ್ಲೋಕಗಳಷ್ಟು ಹರಡಿಕೊಂಡಿರುವ ಭಾವಗಳ ಸಾರಸಂಗ್ರಹಣ ಮಾಡಿಕೊಂಡು ಬನಿಯಾದ ಮಾತಿನಲ್ಲಿ ನೀಡಿರುವು ದನ್ನೂ ಈ ಕೃತಿಯ ಆದ್ಯಂತವೂ ಕಾಣಬಹುದು. ಯುದ್ಧಪರ್ವಗಳಿಗೆ ಬಂದಾಗ ಈ ಸಾರಸಂಗ್ರಹಣ ಕಾರ್ಯ ವಿಶೇಷವಾಗಿ ನಡೆದಿದೆ. ಕಾರಣ ಇಲ್ಲಿ ೨೪ ಸಾವಿರ ಶ್ಲೋಕದಷ್ಟು ವ್ಯಾಪಕವಾದ ಯುದ್ಧಪಂಚಕ ಕಥೆಯನ್ನು ೫೩ ಪುಟದಷ್ಟಕ್ಕೆ ಅಡಗಿಸಬೇಕಾದಾಗ ಆಯ್ಕೆಯ ಕಾರ್ಯ ಕಷ್ಟತರವಾಗುವುದು ಸಾಧ್ಯ. ರಸದೃಷ್ಟಿ ಪ್ರಧಾನವಾದ ಶ್ರೀ ಎ.ಆರ್. ಕೃ. ಅವರಿಗೆ ಶ್ರೇಷ್ಠವಾದ ಗಡುಚಾದ ಮೊನಚುಳ್ಳ

ಆಡಕ ಶೈಲಿಯಿರುವುದರಿಂದ ಇಲ್ಲಿನ ಅವರ ಅನುವಾದಕಾರ್ಯ ಯಶಸ್ವಿಯಾಗಿದೆ. ಇಲ್ಲೆಲ್ಲ ಇನ್ನಷ್ಟು ವಿಸ್ತಾರವಾಗಿ ಬರೆದಿದ್ದರೆ ಚೆನ್ನಿತ್ತೆಂದು ಎನಿಸಬಹುದೆ ಹೊರತು ಈ ಸಂಗ್ರಹದಲ್ಲಿ ರಸವೃಷ್ಟಿ ತಪ್ಪಿತೆಂದು ಅನ್ನಿಸಲೆಡೆಯಿಲ್ಲ. ಕರ್ಣಾವಸಾನದ ಅನಂತರದ ದುಃಖ ಸನ್ನಿವೇಶವನ್ನು ಮಹರ್ಷಿ ವ್ಯಾಸರು ಇನ್ನೂರರಷ್ಟು ಶ್ಲೋಕ ಗಳಲ್ಲಿ ವರ್ಣಿಸಿದ್ದರೆ ಈ ಕೃತಿಕಾರರು ಅರ್ಧಪುಟದಲ್ಲಿ ಅದನ್ನೆಲ್ಲ ಸಂಗ್ರಹಿಸಿದ್ದಾರೆ. ಕರ್ಣನ ಸಾವನ್ನು ಸೂರ್ಯ ಸಂಬಂಧವಾದ ಉಪಮಾನಗಳ ಮೂಲಕ ಹತ್ತಾರು ಬಾರಿ ವ್ಯಾಸರು ಆ ಇನ್ನೂರು ಶ್ಲೋಕಗಳ ಅವಧಿಯಲ್ಲಿ ಮನೋಹರವಾಗಿ ಚಿತ್ರಿಸಿದ್ದಾರೆ. ಶ್ರೀ. ಎ. ಆರ್. ಕೃ. ಅವರು ಅದನ್ನೆಲ್ಲ ಛಟ್ಟಿಇಳಿಸಿ ಮೂಲ ಕಾವ್ಯದ ಮಹಾ ಉಪಮಾನವೊಂದನ್ನು ಮಾತ್ರವೇ ಕನ್ನಡಕ್ಕೆ ತಂದಿದ್ದಾರೆ. ಅದಂತೂ ಮಹಾ ಧ್ವನಿಪೂರ್ಣವೂ ಆಗಿದೆ. ಅದು ಹೀಗಿದೆ: "ರಕ್ತಮಯವಾದ ಕರ್ಣನ ಮೈಯನ್ನು ತಡವಿ ಕೆಂಪಾದ ತನ್ನ ದೇಹವನ್ನು ತೊಳೆದುಕೊಳ್ಳುವುದಕ್ಕೋ ಎಂಬಂತೆ ಸೂರ್ಯನು ಪಶ್ಚಿಮಸಮುದ್ರಕ್ಕೆ ಇಳಿದನು." ಉಳಿದ ಸೂರ್ಯಸಂಬಂಧವಾದ ಉಪಮೆಯಗಳನ್ನು ಬಿಟ್ಟಿದ್ದರೂ ಈ ಒಂದು ಧ್ವನಿಪೂರ್ಣ ಉಪಮಾವನ್ನು ಆಯ್ದುಕೊಂಡದ್ದರಿಂದ ಆ ಕೊರತೆಯೆಲ್ಲ ತುಂಬಿಬಂದಿದೆ. ಮೂಲದಲ್ಲಿ ಈ ಉಪಮೆಯಾದರೂ ಎಲ್ಲೋ ಒಂಟಿಯಾಗಿ, ಇತರ ವರ್ಣನೆಗಳ ಮಧ್ಯೆ ಮುಳುಗಿರ ತಕ್ಕದ್ದಾಗಿದೆ. ವ್ಯಾಸರಲ್ಲಿ ಕಥನ, ವರ್ಣನೆಗಳೆಲ್ಲ ಎಷ್ಟೋವೇಳೆ (—ಬೆಳವಣಿಗೆಯ ಮಹಾಕಾವ್ಯಗಳ ರೀತಿಯೆಲ್ಲಾ ಹೀಗೆಯೆ; ಎಷ್ಟೋವೇಳೆ ಪ್ರಕ್ಷಿಪ್ತಗಳೂ ತುಂಬಿ ಕೊಳ್ಳುವುದರಿಂದ ಹೀಗಾಗುವುದುಂಟು—) ನೇರವಾಗಿ ಸಂಕ್ಷಿಪ್ತವಾಗಿ ಸಾಗುವು ದಿಲ್ಲ. ಇಲ್ಲೊಮ್ಮೆ ಬಂದ ಮಾತು, ಉಪಮಾನ, ವರ್ಣನೆ ಮುಂದೆಲ್ಲೊ ಬೇರೆಯ ರೀತಿಯಲ್ಲಿ ವಿವರಣಾತ್ಮಕವಾಗಿ ಬರುವುದುಂಟು. ಅನುವಾದಕರು ಈ ಎಲ್ಲಾ ಭಾಗಗಳನ್ನೂ ಎಚ್ಚರತಪ್ಪದೆ ಓದಿದರೂ ಯಾವುದನ್ನು ಯಾವ ಕ್ರಮದಲ್ಲಿ ಇಳಿಸಿ ಕೊಳ್ಳಬೇಕೆಂಬುದು ಕಷ್ಟತರ ಕಾರ್ಯ. ಮೇಲಿನ ಉಪಮಾವನ್ನೆ ಕುರಿತು ಒಂದು ಮಾತನ್ನು ಹೇಳಬಹುದು. ಮಗನ ಸಾವನ್ನು ಕಂಡ ತಂದೆಯ ಚಿತ್ರವನ್ನಿಲ್ಲಿ ವ್ಯಾಸರು ಕೊಟ್ಟಿದ್ದಾರೆ. ಲೋಕದಲ್ಲಿ ಮಗು ತೀರಿದನಂತರ ತಂದೆ ಸ್ನಾನಮಾಡುವ ರೀತಿ, ತನ್ನ ಮಗನ ಮರಣಾನಂತರ ದುಃಖತಪ್ತ ಸೂರ್ಯ ಸ್ನಾನಕ್ಕಾಗಿ ಪಶ್ಚಿಮಸಮುದ್ರಕ್ಕೆ ಇಳಿಯುತ್ತಾನೆನ್ನುವುದು ದಿವ್ಯ ಆತ್ಮೀಯವಾಗಿದೆ. ಅದಕ್ಕೂ ಮಿಗಿಲಾದದ್ದೆಂದರೆ, ರಕ್ತಸ್ನಾತವಾದ ಮಗನ ಮೆಯ್ಯನ್ನು ತಡವಿ ಸೂರ್ಯನಿಗೆ ತನ್ನ ಮೈಯೂ ರಕ್ತಸಿಕ್ತ ವಾಯಿತು, ಅದನ್ನು ಪಶ್ಚಿಮಸಮುದ್ರದಲ್ಲಿ ತೊಳೆದುಕೊಳ್ಳಲು ಹೊರಟನೆಂದು ಹೇಳಿರುವುದು. ಇದು ಮತ್ತೂ ಕರುಣರಸವ್ಯಂಜಕವಾದ ಅರ್ಥದಿಂದ ತುಡಿಯು ತ್ತಿದೆ. ಆ ಮೂಲ ಶ್ಲೋಕವನ್ನಿಲ್ಲಿ ಕೊಡಬಹುದು.

ಕರ್ಣಸ್ಯ ದೇಹಂ ರುಧಿರಾವಸಿಕ್ತಂ
ಭಕ್ತಾನುಕಂಪೀ ಭಗವಾನ್ ವಿವಸ್ವಾನ್

ಸ್ಪೃಷ್ಟ್ವಾಂಶುಭಿರ್ ಲೋಹಿತ ರಕ್ತರೂಪಃ
ಸಿಷ್ಣಾಸುರಭ್ಯೇತಿ ಪರಂ ಸಮುದ್ರಂ

ಭಾಗ: ೩, ಕರ್ಣಪರ್ವ, ಅಧ್ಯಾಯ: ೯೪, ಶ್ಲೋಕ: ೩೦, ಪುಟ: ೧೫೯.

"ಭಕ್ತಾನುಕಂಪೀ ಭಗವಾನ್" ಎಂಬ ವಿಶೇಷಣ ಏಕೋ ಏನೊ ಬಿದ್ದುಹೋಗಿದೆ. ಆದರೂ ಅದರ ಉಳಿದಸಾರ ಮೇಲಿನ ಕನ್ನಡವಚನದಲ್ಲಿ ಬಂದಿದೆ.

ಹೀಗೆ ನೂರಾರು ಉದಾಹರಣೆಗಳನ್ನು ಗಮನದಲ್ಲಿಟ್ಟುಕೊಂಡು ಈ ವಿಶ್ಲೇಷಣೆಯನ್ನು ದೀರ್ಘಗೊಳಿಸಬಹುದು. ಈ ಪರಿಮಿತ ಲೇಖನಕ್ಕೆ ಅದು ಹೊರತಾದ್ದರಿಂದ ಅದನ್ನಿನ್ನು ನಿಲ್ಲಿಸಬಹುದು.

ಅನುವಾದದ ದೃಷ್ಟಿಯಿಂದ ನೋಡಿದರೂ ಅತ್ಯಂತ ಶ್ರೇಷ್ಠ ಸಾಧನೆಯಾಗಿರುವ ಈ ಕೃತಿಯನ್ನು ಅದರ ಶೈಲಿಯ ಮನೋಜ್ಞತೆಗಾಗಿಯೂ ಅಭ್ಯಸಿಸಬಹುದು. ಮೂಲವನ್ನು ತನ್ನ ಭಾಷೆಗೆ ಹಾಕುವ ಕಷ್ಟತರ ಕಾರ್ಯದಲ್ಲಿ ಲೇಖಕ ತನ್ನ ಸಹಜ ಶೈಲಿಯನ್ನೆ ಕಳೆದುಕೊಳ್ಳುವುದೂ ಸಾಧ್ಯ. ಆದರೆ ಶ್ರೀ ಶಾಸ್ತ್ರಿಗಳು ಅಸಾಧಾರಣ ರೀತಿಯಲ್ಲಿ ಈ ಅಪವಾದದಿಂದ ಪಾರಾಗಿದ್ದಾರೆ. ಅವರದು ಅನುವಾದ ಶೈಲಿಯಲ್ಲ. ಮೂಲಕರ್ತೃವೆ ಅನುವಾದ ಮಾಡಿದ ರೀತಿಯ ಶೈಲಿ. ಇದೂ ಹೊಸಸೃಷ್ಟಿಯೆಂಬಂತೆ ಭಾಸವಾಗುವ ತೇಜೋವಂತ ಶೈಲಿ. ಆ ಶೈಲಿಗೆ ಬಿಲ್ಲಿನ ಬಾಗಿದ್ದರೂ ಬಾಣದ ನೇರ್ಪು ಕೂರ್ಪುಗಳೆ ಹೆಚ್ಚು. ವ್ಯಾಸರ ರೀತಿಯೂ ಪ್ರಾಯಶಃ ಅದೇ ಆಗಿರುವಂತೆ ಅನಿಸುತ್ತದೆ. ಸೊಗಸನ್ನು ಸವಿಯಲೆಂದಾದರೂ ಕೆಲವೊಂದು ಪಂಕ್ತಿಗಳನ್ನು ಇಲ್ಲಿ ಉದ್ಧರಿಸಬಹುದು:

"ಮುದುಕರ ಮಾತನ್ನು ಆಲಿಸಬೇಕು ಎಂದು ಶಾಸ್ತ್ರ ಹೇಳುತ್ತದೆ, ನಿಜ!— ಆದರೆ ತುಂಬ ಮುದುಕರಾದವರ ಮಾತನ್ನಲ್ಲ; ಅವರು ಮತ್ತೆ ಬಾಲ್ಯಾವಸ್ಥೆಗೆ ಬಂದವರು."

"ನೀವೆಲ್ಲ ಧರ್ಮಜನಿಗೆ ಒಪ್ಪಿಗೆ ಕೊಡುವಂತೆ ಹೇಳಿ. ನನ್ನ ಮನಸ್ಸಿಗೆ ಮಂಕು ಕವಿಯುತ್ತಿದೆ; ವಯಸ್ಸಿನಿಂದಲೂ ಇಷ್ಟುಹೊತ್ತು ಮಾತನಾಡಿದ್ದರಿಂದಲೂ ಬಾಯಿ ಒಣಗಿ ಬರುತ್ತಿದೆ!"

"ಯುದ್ಧವು ನಾಯಿಗಳ ಕಾದಾಟದ ಹಾಗೆ; ಏನೂ ವ್ಯತ್ಯಾಸವಿಲ್ಲ; ಗುರುಗುಟ್ಟುವುದು ಬೊಗಳುವುದು, ಪ್ರತಿಯಾಗಿ ಬೊಗಳುವುದು, ಕಚ್ಚಾಡುವುದು; ಬಲಿಷ್ಠನಾದವನು ಕೊಳ್ಳೆಯನ್ನು ಅನುಭವಿಸುವುದು. ಇದೆಲ್ಲ ಎರಡೂ ಕಡೆಯಲ್ಲೂ ಒಂದೇಯೆ…………ನಾವು ತಗ್ಗಿದರೆ ಅವನೇನು ಸಗ್ಗುವುದಿಲ್ಲ."

"ಕರ್ಣ! ನಾವಿನ್ನೂ ಗೋವುಗಳನ್ನು ಗೆದ್ದಿಲ್ಲ, ಎಲ್ಲೆಯನ್ನು ದಾಟಿಲ್ಲ. ಹಸ್ತಿನಾಪುರಕ್ಕೆ ಹೋಗಿಲ್ಲ; ಆಗಲೇ ಆತ್ಮಸ್ತುತಿಗೆ ಆರಂಭ ಮಾಡಿಬಿಟ್ಟೆ; ಎಷ್ಟೋ ಯುದ್ಧಗಳಲ್ಲಿ ಜಯಹೊಂದಿ ಐಶ್ವರ್ಯವನ್ನು ಪಡೆದು, ಭೂಮಿಯನ್ನು ಗೆದ್ದವರೂ

ತಮ್ಮ ಪೌರುಷವನ್ನು ಸ್ವಲ್ಪವೂ ಹೇಳಿಕೊಳ್ಳುವುದಿಲ್ಲ; ಬೆಂಕಿ ತುಟಿಪಿಟಕ್ಕೆನ್ನದೆ ಬೇಯಿಸುತ್ತದೆ; ಸೂರ್ಯನು ಸದ್ದಿಲ್ಲದೆ ಬೆಳಗುತ್ತಾನೆ, ಭೂಮಿಯು ಸಚರಾಚರ ವಸ್ತುಗಳನ್ನು ಮಾತಿಲ್ಲದೆ ಹೊರುತ್ತಿದೆ."

"ಕುದುರೆಯ ಕೆನೆತವನ್ನು ಕೇಳಿಯೇ ಶತ್ರುಗಳನ್ನು ಹೊಗಳಿಬಿಡುವುದೇ, ಕುದುರೆಗಳು ಇದ್ದಲ್ಲಿಯೆ ಕೆನೆಯುತ್ತವೆ, ಹೊರಗೆ ಬಂದಾಗಲೂ ಕೆನೆಯುತ್ತವೆ; ಗಾಳಿ ಯಾವಾಗಲೂ ಬೀಸುತ್ತಿರುತ್ತದೆ; ಹಾಗೆಯೆ ಮಳೆಯೂ ಬರುತ್ತದೆ, ಸಿಡಿಲೂ ಗುಡುಗೂ ಕೇಳುತ್ತದೆ. ಇದರಿಂದ ಅರ್ಜುನನಿಗೆ ಆಗುವ ಸಹಾಯವೇನು? ಬರುವ ಮೇಲ್ಮೆಯೇನು? ನಮ್ಮ ಮೇಲೆ ಬರಿಯ ದ್ವೇಷ, ರೋಷ, ಅಸ್ಹೇಯೆ. ಆಚಾರ್ಯರಾದವರು ಕರುಣಾಶಾಲಿಗಳು, ಪ್ರಾಜ್ಞರು, ಅಪಾಯಶಂಕಿಗಳು; ಆಪತ್ತು ಒದಗಿದಾಗ ಅವರಲ್ಲಿ ವಿಚಾರಮಾಡಬಾರದು. ಅವರು ಏನಿದ್ದರೂ ಅರಮನೆಯಲ್ಲಿ, ಗೋಷ್ಠಿಗಳಲ್ಲಿ, ಚಿತ್ರವಿಚಿತ್ರವಾಗಿ ಮಾತನಾಡಬಲ್ಲ ಪಂಡಿತರು; ಮತ್ತೊಬ್ಬರ ಹುಳುಕನ್ನು ಎತ್ತಿಯಾಡುವುದರಲ್ಲಿಯೂ ಅಡಿಗೆಯಲ್ಲಿ ದೋಷವನ್ನು ಕಂಡು ಹಿಡಿಯುವುದರಲ್ಲಿಯೂ ಬುದ್ಧಿವಂತರು; ಇಂಥ ಪಂಡಿತರನ್ನು ಬಿಟ್ಟು, ಶತ್ರುವು ಸೆರೆಸಿಕ್ಕುವಂತೆಯೂ ಗೋವುಗಳು ದಕ್ಕುವಂತೆಯೂ ಕಾರ್ಯನೀತಿಯನ್ನು ಯೋಚಿಸಿ, ವ್ಯೂಹವನ್ನು ರಚನೆ ಮಾಡಿ."

"ಭಗವಂತನು ನಮ್ಮನ್ನು ತಾಯಿತಂದೆಗಳಂತೆ ದಯೆಯಿಂದ ನೋಡಿಕೊಳ್ಳುವುದಿಲ್ಲ; ಪರರಂತೆ ನಮ್ಮ ಮೇಲೆ ಅವನಿಗೆ ರೋಷವೇ; ಇಲ್ಲದಿದ್ದರೆ ಒಳ್ಳೆಯವರು ಏಕೆ ಕಷ್ಟಪಡುತ್ತಿದ್ದರು? ಕೆಟ್ಟವರು ಹೇಗೆ ಸುಖವಾಗಿರುತ್ತಿದ್ದರು? ನಮ್ಮ ಕಷ್ಟವನ್ನೂ ಸುಯೋಧನನ ಸಮೃದ್ಧಿಯನ್ನೂ ನೋಡಿದರೆ ಈಶ್ವರನನ್ನು ಬೈಯೋಣವೆನ್ನಿಸುತ್ತದೆ. ಕರ್ಮಕ್ಕೆ ತಕ್ಕ ಫಲವಿದ್ದರೆ ಈಶ್ವರನಿಗೂ ಇದರಿಂದ ಪಾಪ ಬಂದೇ ಬರುತ್ತದೆ! ಕರ್ಮಕ್ಕೆ ತಕ್ಕ ಫಲವಿಲ್ಲವೆನ್ನುವುದಾದರೆ ದುರ್ಬಲ ಮಾನವರನ್ನು ಕಂಡು ಅನುತಾಪ ಪಡಬೇಕಾತ್ತದೆ!"

"ನಾನು ಧರ್ಮವನ್ನು ಆಚರಿಸುತ್ತಿರುವುದು ಅದರ ಫಲನಿರೀಕ್ಷೆಯಿಂದಲ್ಲ; ಧರ್ಮವನ್ನು ಹಾಲು ಕರೆದುಕೊಳ್ಳುವುದಕ್ಕಾಗಿ ಸಾಕುವ ಹಸುವಿನಂತೆ ಭಾವಿಸಬಾರದು."

"ನೀನೇನು ಅಂತಕಸ್ವರೂಪಿಯಾದ ಕಾಲಪಕ್ಷಿಯೊಡನೆ ಕೌಲುಮಾಡಿಕೊಂಡು ಬಂದಿರುವನಂತೆ ಮಾತನಾಡುತ್ತಿದ್ದೀಯೆ! ಯಾವನಿಗೆ ಮಿತಿಯಿಲ್ಲದಷ್ಟು ಆಯುಸ್ಸು ಇದೆಯೋ ಅಥವಾ ಯಾವನು ತನ್ನ ಆಯುಪ್ರಮಾಣವನ್ನು ಬಲ್ಲನೋ ಅಂಥವನು ಕಾಲ ನಿರೀಕ್ಷಿಸಬಹುದು."

"ಇದೇನು ಅಣ್ಣ, ವೇದ ಓದಿ ಓದಿ ಬುದ್ಧಿ ಮುದಡಾಗಿ ಹೋದ ಗೊಡ್ಡು ವೈದಿಕನ ಹಾಗೆ ಮಾತನಾಡುತ್ತಿದ್ದಿಯೆ? ಹೀಗೆ ಅಲಸತನಕ್ಕೆ ಮನಸ್ಸು ಕೊಟ್ಟು ರಾಜಧರ್ಮವನ್ನು ಅಲಕ್ಷ್ಯಮಾಡಿದರೆ ಕೌರವರನ್ನು ಕೊಂದು ಏನು ಫಲ?

ಇದು ಕಷ್ಟಪಟ್ಟು ಬಾವಿ ಅಗೆದು, ಬಂದ ನೀರಿನಲ್ಲಿ ಸ್ನಾನಮಾಡದೆ, ಕೆಸರನ್ನು ಮೆತ್ತಿಕೊಂಡು ಮೇಲಕ್ಕೆ ಬಂದಹಾಗಿದೆ! ಸಂನ್ಯಾಸವು ಮುಪ್ಪಿನಕಾಲಕ್ಕೆ, ಆಪತ್ಕಾಲಕ್ಕೆ. ಈಗ ನೀನು ಸಂನ್ಯಾಸ ತೆಗೆದುಕೊಂಡರೆ, ತಿಳಿದವರು ಅದನ್ನು ಧರ್ಮ ವಿರುದ್ಧವೆಂದಾರು! ಮಕ್ಕಳುಮರಿಗಳನ್ನು ಸಾಕದೆ, ದೇವತೆಗಳು ಋಷಿಗಳು ಪಿತೃಗಳು ಅತಿಥಿಗಳು ಇವರನ್ನು ತೃಪ್ತಿಗೊಳಿಸದೆ, ಒಬ್ಬೊಂಟಿಗನಾಗಿ ಕಾಡಿನಲ್ಲಿರುವು ದೇನೋ ಸಾಧ್ಯ; ಅದರಿಂದ ಸ್ವರ್ಗ ಬರುವುದಾದರೆ, ಜಿಂಕೆಗಳೂ ಹಂದಿಗಳೂ ಹಕ್ಕಿ ಪಕ್ಷಿಗಳೂ ಸ್ವರ್ಗಕ್ಕೆ ಹೋದಾವು! ಪರ್ವತಗಳೂ ಗಿಡಮರಗಳೂ ಸಿದ್ಧಿಯನ್ನು ಪಡೆದಾವು! ಏಕೆಂದರೆ ಅವು ನಿತ್ಯಸಂನ್ಯಾಸಿಗಳು, ನಿತ್ಯಬ್ರಹ್ಮಚಾರಿಗಳು; ಅವುಗಳಿಂದ ಯಾರಿಗೂ ಏನೂ ಬಾಧೆಯಿಲ್ಲ!"

ಮೇಲೆ ಉದ್ಧರಿಸಿರುವ ಪಂಕ್ತಿಗಳೆಲ್ಲ ಅನುವಾದ ಪಂಕ್ತಿಗಳೆ; ಇಲ್ಲಿನ ಆಲೋಚನೆ ಕಲ್ಪನೆಗಳೆಲ್ಲ ವ್ಯಾಸರಿಗೆ ಸೇರಬೇಕಾದದ್ದು. ಆದರೆ, ಎಷ್ಟರಮಟ್ಟಿಗೆ ಸಮರ್ಪಕವಾಗಿ ಅವಕ್ಕೆ ನಮ್ಮ ಭಾಷೆಯ ಶರೀರದಲ್ಲಿ ಮರುಹುಟ್ಟು ಕೊಡಬಹುದು, ಎಂಬುದಕ್ಕೆ ವಚನಭಾರತವೆ ಶ್ರೇಷ್ಠ ನಿದರ್ಶನವಾಗಿದೆ.

ಈ ಎಲ್ಲ ಅನುವಾದ ವಿಧಾನವನ್ನೂ ನೋಡಿದ ಮೇಲೆ ನಮಗನ್ನಿಸಬಹುದಾದ ಭಾವನೆಯಾದರೂ ಏನು? ನಮಗೇನನ್ನಿಸಬಹುದೆಂಬುದನ್ನು, ಏನನ್ನಿಸುವಂತಿರಬೇಕು ತಮ್ಮ ಅನುವಾದ ಎಂಬುದನ್ನು ಶ್ರೀ ಎ. ಆರ್. ಕೃ ಅವರೇ ಹೀಗೆಂದಿದ್ದಾರೆ: "ಮೂಲದಲ್ಲಿ ಸ್ವಾರಸ್ಯವಿದ್ದ ಕಡೆ ಒಂದು ವಾಕ್ಯವನ್ನೂ ಬಿಟ್ಟಿಲ್ಲ ಒಂದು ಉಪಮಾನವನ್ನೂ ಬಿಟ್ಟಿಲ್ಲ; ಇನ್ನು ಕೆಲವು ಕಡೆ ಸಂಗ್ರಹಿಸಿದ್ದೇನೆ; ಮತ್ತೆ ಕೆಲವು ಕಡೆ–ಅನುಗೀತೆ, ಸನತ್ಸುಜಾತೀಯ, ಕಳಿಂಗನೀತಿ, ನಾರಾಯಣೀಯ ಮುಂತಾದ–ದೊಡ್ಡ ದೊಡ್ಡ ಪ್ರಕರಣಗಳನ್ನೆ ಬಿಟ್ಟಿದ್ದೇನೆ. ಒಂದು ಕಡೆಯೂ ಪುನರುಕ್ತಿಯಿಲ್ಲ; ಮೂಲದಲ್ಲಿ ಇದು ಬಹು ಸಾಮಾನ್ಯ. ಭಾರತ ಮಂಜರಿಯನ್ನು ಬರೆದ ಕ್ಷೇಮೇಂದ್ರನು ಆ ಗ್ರಂಥದ ಕೊನೆಯಲ್ಲಿ.

ಮದ್ವಚೋ ದರ್ಪಣತಲೇ ಮಹಾಭಾರತದಿಗ್ವಿಪಃ
ಸಮಸ್ತಾವಯವೋಪ್ಯೇಷ ಮುಷ್ಟಿಮೇಯ ಇವೇಕ್ಷ್ಯತೇ ॥

ಎಂದು, ಕನ್ನಡಿಯಲ್ಲಿ ದಿಗ್ಗಜವನ್ನು ತೋರಿದ ಹಾಗೆ ಮಹಾಭಾರತವನ್ನು ಕಿರಿದಾಗಿ, ಆದರೆ ಎಲ್ಲಾ ಭಾಗಗಳೂ ಇರುವಂತೆ, ಸಂಗ್ರಹಿಸಿದ್ದೇನೆಂದು ಹೇಳಿದ್ದಾನೆ. ಈ ಕವಿ ಸಾಮರ್ಥ್ಯ ನನ್ನಲ್ಲಿಲ್ಲ; ನನ್ನ ಉದ್ದೇಶವೂ ಸರ್ವಾವಯವ ಸಂಗ್ರಹವಲ್ಲ; ಕಬ್ಬಿನ ಜಲ್ಲೆಯಲ್ಲಿ ಬೇರು ಗರಿ ಗಿಣ್ಣು ಕತ್ತರಿಸಿ ಹಾಕಿ, ಸಿಪ್ಪೆ ಹೆರೆದು, ಸಿಗುರುಕಳೆದು ಹೋಳುಮಾಡಿ, ಅದನ್ನು ಬಟ್ಟಲಲ್ಲಿ ತುಂಬಿಕೊಡುವಂಥದು; ಕಿತ್ತಲೆಯ ಹಣ್ಣಿನ ಸಿಪ್ಪೆ ಸುಲಿದು, ತೊಳೆಬಿಡಿಸಿ, ನಾರು ಬೀಜಗಳನ್ನು ತೆಗೆದುಹಾಕಿ, ಕುಸುಮವನ್ನು ಒಂದು ಅಡಕವಾದ ಬೆಳ್ಳಿಯ ತಟ್ಟೆಯಲ್ಲಿ ಜೋಡಿಸುವಂಥದು. ಉದ್ದೇಶವೇನೋ

ಇದು; ಅದು ಎಷ್ಟರ ಮಟ್ಟಿಗೆ ನೆರವೇರಿದೆಯೆಂಬುದನ್ನು ಓದುಗರು ಹೇಳಬೇಕು."

ಕ್ಷೇಮೇಂದ್ರನ ಭಾರತಮಂಜರಿಯನ್ನೇನೂ ನಾನು ಓದಿಲ್ಲ. ಆದ್ದರಿಂದ ಆ ಬಗ್ಗೆ ಏನೂ ಹೇಳಲಾರೆನಾದರೂ ಶ್ರೀ ಎ. ಆರ್. ಕೃ. ಅವರ 'ಈ ಕವಿಯ ಸಾಮರ್ಥ್ಯ ನನ್ನಲಿಲ್ಲ' ಎಂಬ ವಿನಯದ ಮಾತನ್ನು ಹೇಗೆ ಒಪ್ಪುವುದೊ ತಿಳಿಯೆ.[1] ಅವನು ಕೊಟ್ಟಿರುವ ಉಪಮಾನವನ್ನೆ ಈ ವಚನಭಾರತಕ್ಕೂ ಸಮರ್ಪಕವಾಗಿಯೆ ಬಳಸಬಹುದು. ಆದರೆ ಇದು ಸರ್ವ ಅವಯವ ಸಂಗ್ರವಲ್ಲವಾದ್ದರಿಂದ ಲೇಖಕರೆ ನೀಡಿರುವ ಹೋಲಿಕೆಗಳು ಅನ್ವರ್ಥವಾಗಬಲ್ಲವು. ಇದನ್ನು ಓದುವ ಯಾರಿಗೂ ಬೆಳ್ಳಿಯ ತಟ್ಟೆಯಲ್ಲಿ ಅಡಕವಾಗಿ ತುಂಬಿಟ್ಟ ಬಿಡಿಸಿದ ಕಿತ್ತಲೆಯಂತೆ, ಹೆರೆದು ಚೂರುಮಾಡಿಟ್ಟಂಥ ಕಬ್ಬಿನ ಚೂರೆಂಬಂತೆ ಈ ಕೃತಿ ಅನುಭವಕ್ಕೆ ಬರದಿರದು. ಆದರೆ ಇಲ್ಲಿ ಬಾರದ ಕಾವ್ಯ ಕಥಾಭಾಗವೆಲ್ಲ ಸಿಪ್ಪೆ, ನಾರು, ಬೀಜಾದಿಗಳೆಂಬ ಭಾವನೆಯನ್ನು ಯಾರೂ ಇಟ್ಟುಕೊಳ್ಳದಿದ್ದರೆ ಒಳ್ಳೆಯದು.

ಶ್ರೀ. ಎ. ಆರ್. ಕೃ ಅವರು ಈ ಸುಂದರ ಜೀವಂತ ಕೃತಿಗೆ ಬಹು ಬಂಧುರ ವಾದ ಮುನ್ನುಡಿಯನ್ನು ಬರೆದಿರುವುದನ್ನು ಗಮನಿಸದಿದ್ದರೆ ಈ ವಿವೇಚನೆ ಅಪೂರ್ಣ ವಾಗುತ್ತದೆ. ಮಹಾಭಾರತದ ಮೂಲ, ಕಾಲ, ಇತಿಹಾಸ, ತತ್ತ್ವದೃಷ್ಟಿ, ಅದು ಅಂದಿಗೆ ನೀಡಿದ, ಇಂದಿಗೆ ನೀಡುವ ಸಂದೇಶ–ಇತ್ಯಾದಿ ಎಲ್ಲ ಸೂಕ್ತ ವಿಚಾರವನ್ನೂ ಸರಸ ತೀಕ್ಷ್ಣ ಸುಂದರ ಶೈಲಿಯಲ್ಲಿ ತಿಳಿಸಿದ್ದಾರೆ.

೭೫ ಪುಟದಷ್ಟು ಇರುವ ಈ ಪಾಂಡಿತ್ಯಪೂರ್ಣ ರಸದೀಪ್ತ ಉಪೋದ್ಘಾತವೆ ಸಂಗ್ರಹಾತ್ಮಕವಾದ ಒಂದು ಪ್ರೌಢ ಗ್ರಂಥದಂತಿದೆ. ಆದರೆ ಸಾರ ಭಾರವಾಗಿದ್ದರೂ ಹೊರೆಯಾಗಿಲ್ಲ. ಆಳವಾಗಿದ್ದರೂ ಮುಳುಗಿಸುವಂತಿಲ್ಲ. ಇದನ್ನು ಓದುವುದೆ ಒಂದು ಸುಂದರ ಕಾವ್ಯ ಓದಿದಂತಾಗುತ್ತದೆ. ಕೆಲವೊಂದು ಮಾತನ್ನಾದರೂ ಇಲ್ಲಿ ನೋಡ ಬಹುದು. ಮಹಾಭಾರತದಲ್ಲಿ ಚಿತ್ರಿತವಾಗಿರುವ ಸಂಸಾರ ಸಂಹಿತವನ್ನು ಕುರಿತು ಬರೆಯುವಾಗ ಹೀಗೆಂದಿದ್ದಾರೆ. "ಸಂಸಾರವೇ ಸಮಾಜಕ್ಕೆ ತಳಹದಿ. ಈಗಿನ ಕಾಲದ ಆರ್ಥಿಕಸ್ಥಿತಿಗತಿಗಳಿಂದಲೂ, ವ್ಯಕ್ತಿಸ್ವಾತಂತ್ರ್ಯಕ್ಕೆ ಅತಿಶಯವಾದ ಪ್ರಾಶಸ್ತ್ಯಕೊಡುತ್ತ ಬಂದಿರುವುದರಿಂದಲೂ, ಸಂಸಾರದಲ್ಲಿ ವಿಶ್ವಾಸ ವಿಧೇಯತೆ ಒಗ್ಗಟ್ಟು ಮುಂತಾದ ಸ್ನೇಹಗುಣಗಳು ಕಡಮೆಯಾಗುತ್ತಿವೆ. ಸ್ನೇಹವಿಲ್ಲದ ಸಂಸಾರ ಎಂಥ ಸಂಸಾರ? ಅದು ಮರಳುಕಾಡು; ಇಲ್ಲದಿದ್ದರೆ ಕುರುಕ್ಷೇತ್ರ. ಜೊತೆಯಲ್ಲಿ ಇರಬೇಕಾದವರು ಅಹಿತವಾದರೆ ಅದು ಕಾಲಿನಲ್ಲಿ ಮುಳ್ಳುಚುಚ್ಚಿ ಮುರಿದುಕೊಂಡಂತೆ; ತೆಗೆದರೆ ಗಾಯ, ತೆಗೆಯದಿದ್ದರೆ ನೋವು; ನಡಗೆ ಕುಂಟು. ಯಾವ ಕೆಲಸದಲ್ಲಿದ್ದರೂ ನೋವಿನ ಮೇಲೇ ಜ್ಞಾನ; ಈ ನೋವು ಇಲ್ಲದಿರ

---

[1] ಕ್ಷೇಮೇಂದ್ರನಿಗೆ ಈ ವಚನಕಾರರಿಗಿರುವಷ್ಟು ಕ್ಲೇಶಗಳಿಲ್ಲ. ಅವನು ಮೂಲಕೃತಿಯ ಭಾಷೆಯಲ್ಲೆ ಸಂಗ್ರಹಮಾಡುತ್ತಿದ್ದಾನೆ. ಇಲ್ಲಿ ಇವರು ಬೇರೊಂದು ಜಾಯಮಾನದ ಭಾಷೆಗೆ ಅನುವದಿಸಬೇಕಾಗಿದೆ, ಅವನಿಗಿರುವ ಸೌಲಭ್ಯ ಇವರಿಗಿಲ್ಲ.

ಬೇಕಾದರೆ ಪ್ರತಿಯೊಬ್ಬರಲ್ಲಿಯೂ ಸ್ವಾತಂತ್ರ್ಯ ಬುದ್ಧಿ ತಗ್ಗಬೇಕು. ಪ್ರತಿಯೊಬ್ಬರೂ ಅಲ್ಪಸ್ವಲ್ಪವಾದರೂ ತಮ್ಮ ತಮ್ಮ ಸುಖವನ್ನು ತ್ಯಾಗಮಾಡಿದ ಹೊರತು ಸುಖ ದೊರಕದು; ಬುದ್ಧಿಯ ಜೊತೆಗೆ ಭಯಭಕ್ತಿಗಳು ಸ್ವಲ್ಪವಾದರೂ ಇರಬೇಕು. ದೇವತೆಗಳಿಗೂ ಇವು ಉಂಟು. ವೃದ್ಧರು ವಿದ್ಯಾಬುದ್ಧಿ ವಿಹೀನರಾಗಿರುವ ಸಂದರ್ಭಗಳಲ್ಲಿಯೂ ಅವರಿಗೆ ವಿವೇಕವಿರುತ್ತದೆ, ಅನುಭವವಿರುತ್ತದೆ; ಪುಸ್ತಕದ ಓದು ಅದರ ಮುಂದಲ್ಲ; ಅನುಭವವೇ ಉತ್ತಮೋತ್ತಮವಾದ ಶಿಕ್ಷಣಶಾಲೆ; ದೊಡ್ಡವರ ಮಾತಿನಿಂದ ಬುದ್ಧಿವಂತನಾಗದವನು ಸ್ವಂತ ಅನುಭವದಿಂದ ಬುದ್ಧಿ ಕಲಿತುಕೊಂಡಾನು; ಹಾಗೆ ಅನುಭವದ ಕೈ ಕಾಯುವುದು, ಅದರಿಂದಲೇ ಬುದ್ಧಿ ಕಲಿಯುತ್ತೇನೆನ್ನುವುದು ವಿವೇಕಿಯ ಲಕ್ಷಣವಲ್ಲ. ಏಕೆಂದರೆ ಅಂಥ ಅವಕಾಶವೆ ದೊರೆಯದೆ ಹೋಗಬಹುದು. ಸಂಸಾರದಲ್ಲಿ ಪ್ರೀತಿಯಿದ್ದರೆ, ಕ್ಷಮೆ ತ್ಯಾಗ ಇವೆರಡೂ ತಾವೇ ಬರುತ್ತವೆ. ನಿಜವಾದ ಪ್ರೀತಿಗೆ ಇವೇ ಹೆಗ್ಗುರುತು. ಮತ್ತೊಬ್ಬರ ತಪ್ಪನ್ನು ಎಷ್ಟರಮಟ್ಟಿಗೆ ಮನ್ನಿಸುತ್ತೇವೆ, ಅವರ ಕಷ್ಟಕ್ಕೆ ಮರುಗಿ ನಾವೂ ಅವರ ಕಷ್ಟದಲ್ಲಿ ಎಷ್ಟರಮಟ್ಟಿಗೆ ಭಾಗಿಗಳಾಗುತ್ತೇವೆ, ನಮ್ಮ ಸುಖವನ್ನಾದರೂ ಅಲಕ್ಷಿಸಿ ಹೇಗೆ ಅವರ ಸುಖವನ್ನು ಗಮನಿಸುತ್ತೇವೆ ಎಂಬುದು"........"ಸಂಸಾರದಲ್ಲಿ ಒಬ್ಬರು ಸೋತಾಗಲಿ, ಇಬ್ಬರೂ ಸೋತಾಗಲಿ, ಸ್ನೇಹ ಬೆಳೆಯಬೇಕು; ಅದರಿಂದಲೇ ಚಿಂತೆ ಕಷ್ಟಗಳ ನಿವಾರಣೆ; ಸುಖಸಂಪಾದನೆ. ಆದ್ದರಿಂದ ವ್ಯಕ್ತಿಯ ಶೀಲ, ಅದರಲ್ಲಿಯೂ ತ್ಯಾಗ, ಕ್ಷಮೆ, ಇವು ಮುಖ್ಯ; ಅದರಿಂದ ಸಂಸಾರ ಹಸನಾಗುತ್ತದೆ; ಇವುಗಳಿಗೆ ಮೂಲ, ಪ್ರೀತಿ, ಪ್ರೇಮ, ವಾತ್ಸಲ್ಯ, ಭಕ್ತಿ, ಗೌರವ, ಇತ್ಯಾದಿ. ಇವೆಲ್ಲ ಮೂಲತಃ ಒಂದೇ; ಸ್ಥಾನಭೇದದಿಂದ ಸ್ವಲ್ಪ ಸ್ವಲ್ಪ ಬಣ್ಣ ಬದಲಾಗಿ ಒಂದೇ ಸ್ನೇಹಭಾವನೆ ಬೇರೆ ಬೇರೆ ಹೆಸರನ್ನು ತಳೆಯುತ್ತದೆ. ಹೀಗೆ ವ್ಯಕ್ತಿಗಳು ಉತ್ತಮಗೊಂಡರೆ ಸಂಸಾರವು ಉತ್ತಮವಾಗುತ್ತದೆ; ಏಕೆಂದರೆ ಹತ್ತು ವ್ಯಕ್ತಿಗಳಿಂದ ಒಂದು ಸಂಸಾರ; ಹತ್ತು ಉತ್ತಮವಾದ ಸಂಸಾರಗಳಿಂದ ಒಂದು ಶ್ಲಾಘ್ಯವಾದ ಸಮಾಜ; ಸಮಾಜದಿಂದಲೇ ದೇಶ, ರಾಷ್ಟ್ರ, ಎಲ್ಲಾ! ಆದ್ದರಿಂದ ಸಾಧಾರಣ ನೀತಿ, ಸಾಂಸಾರಿಕ ನೀತಿ, ವೈಯಕ್ತಿಕ ಗುಣಶೀಲಗಳು, ಇವು ಅತ್ಯಂತ ಮುಖ್ಯವಾದುವು. ವ್ಯಕ್ತಿಸಂಪತ್ತೇ ದೇಶಸಂಪತ್ತು. ಆ ಸಂಪತ್ತನ್ನು ವೃದ್ಧಿಪಡಿಸುವುದೇ ರಾಜನ ಪ್ರಥಮಧರ್ಮ.

"ಸಂಸಾರದಲ್ಲಿ ಮಿಕ್ಕ ಎಲ್ಲರ ಶೀಲಕ್ಕಿಂತಲೂ ಗೃಹಿಣಿಯ ಶೀಲವನ್ನು ಭಾರತಕಾರನು, ಉದ್ದೇಶಪಟ್ಟೊ, ಸ್ವಾಭಾವಿಕವಾಗಿಯೋ, ಬಹು ಸಾತ್ವಿಕವಾದದ್ದೆಂದು ಚಿತ್ರಿಸಿದ್ದಾನೆ. . . ಸಂಸಾರದಲ್ಲಿ ಗಂಡನೋ ಹೆಂಡತಿಯೋ ಎಡವಟ್ಟಾದರೆ ಪಾರ್ಶ್ವವಾಯುವಿನಿಂದ ಅರ್ಧದೇಹವೇ ಹೋದಂತೆ; ಅಂಥ ವ್ಯಕ್ತಿಗೆ ಏನು ಸುಖ? ನರಳುವುದು, ಮರಣವನ್ನು ನಿರೀಕ್ಷಿಸುವುದು, ಎರಡೇ! ಇಬ್ಬರೂ ಅಂಥವರೇ ಆದರೆ, ಅವರ ಪರಿಣಾಮ ಇಕ್ಕಟ್ಟಾದ ಸೇತುವೆಯ ಮೇಲೆ ಟಗರುಗಳು ಹೋರಾಡಿ ಎರಡೂ ಹೊಳೆಗೆ ಮುಗುಚಿಕೊಳ್ಳುವಂತೆಯೇ!

"ಈ ಪ್ರಶ್ನೆ ಇಂದಿನದಲ್ಲ; ನಮ್ಮ ದೇಶದ್ದು ಮಾತ್ರವಲ್ಲ; ಪಾಶ್ಚಾತ್ಯರು ಇದಕ್ಕೆ ಕಂಡುಕೊಂಡಿರುವ ಮದ್ದು ದಾಂಪತ್ಯವಿಚ್ಛೇದ. ಇದು ವ್ಯಕ್ತಿ ಸ್ವಾತಂತ್ರ್ಯದ ಒಂದು ಪರಿಣಾಮ. ಅವರಲ್ಲಿ ಈಗ ಇದು ಸರ್ವಸಾಧಾರಣ ವಾಗಿದೆ. ಆದರೆ ಅವರೇನು ಇದರಿಂದ ಸುಖವಾಗಿಲ್ಲ. ಏಕೆಂದರೆ, ವಿಚ್ಛೇದಕ್ಕೆ ಹೊರಟರೆ, ಅದು ಒಂದರಲ್ಲಿ ಮುಗಿಯುತ್ತದೆಯೆ? ಇದು ನಮ್ಮದೇಶಕ್ಕೆ, ಸಂಪ್ರದಾಯಕ್ಕೆ, ಬಂದದ್ದಲ್ಲ; ಅದು ಆಪದ್ಧರ್ಮ. ಮನಸ್ಸು ಒಡೆದರೆ ಮಡಕೆ ಒಡೆದಹಾಗೇ; ಮತ್ತೆ ಆ ಚೂರುಗಳೇ ಅಂಟುವುದಿಲ್ಲ; ಹೊಸ ಚೂರುಗಳು ಅಂಟುವುದು ನಿಜವೆ? ಆದ್ದರಿಂದ ಗಡಿಗೆ ಬೇಕೆನ್ನುವವರು ಅದು ಒಡೆಯದ ಹಾಗೆ ನೋಡಿಕೊಳ್ಳಬೇಕು. ಅದೇ ವಿವೇಕ. ಕೈಹಿಡಿದ ಹೆಂಡತಿ ಎಂದೋ, ಕೈಹಿಡಿದ ಗಂಡ ಎಂದೋ, ಹೊಂದಿಕೊಂಡು ಹೋಗುವತನಕ ಸಂಸಾರ. ಒಬ್ಬ ಗಂಡಸಿಗೆ ಇಬ್ಬರು ಹೆಂಡಿರಿದ್ದಾಗ, ಅವನಾಗಲಿ ಸವತಿಯರಾಗಲಿ ಸುಖವಾಗಿದ್ದರೆಂದು ಯಾವ ಕಥೆಯೂ ಹೇಳುವುದಿಲ್ಲ. ಕೊನೆಗೆ ಕುಂತಿ ಮಾದ್ರಿಯರಲ್ಲಿಯೂ, ಮಾದ್ರಿ ಅವಳಿಮಕ್ಕಳನ್ನು ಪಡೆದ ಸಂದರ್ಭದಲ್ಲಿ ಅಸಮಾಧಾನವಾದಂತೆ ಹೇಳಿದೆ. ಅಂಥದರಲ್ಲಿ ಒಬ್ಬ ಹೆಂಗಸಿಗೆ ಐದು ಜನ ಗಂಡದಿರು ಇದ್ದಾಗ, ಆ ಸಂಸಾರ ಸುಖವಾಗಿದ್ದದ್ದು–ಗಂಡಹೆಂಡಿರ ನಿಮಿತ್ತವಾಗಿ ಯಾವ ಅಸಮಾಧಾನವೂ ಬರದೆ ಇದ್ದದ್ದು–ಪಾಂಡವರ ಸೋದರ ಸ್ನೇಹವನ್ನೂ ಅವರ ಮತ್ತು ದ್ರೌಪದಿಯ ಪತಿ ಪತ್ನೀ ಪ್ರೇಮವನ್ನೂ ಚೆನ್ನಾಗಿ ವ್ಯಕ್ತಪಡಿಸುತ್ತದೆ. ದ್ರೌಪದಿಗೆ ಭೀಮಾರ್ಜುನರ ಮೇಲೆ ಹೆಚ್ಚಿನ ಪ್ರೀತಿ; ಅದಕ್ಕೆ ಕಾರಣವೂ ಇತ್ತು; ಅರ್ಜುನನ ಮೇಲೆ ಅವಳಿಗೆ ಪಕ್ಷಪಾತವಿತ್ತೆಂಬುದು ಧರ್ಮರಾಜನ ಅಭಿಪ್ರಾಯ; ಆದಶೂ ಆ ಪಕ್ಷಪಾತ ವನ್ನಾಗಲಿ ಅಭಿಪ್ರಾಯವನ್ನಾಗಲಿ ಸಂಸಾರದಲ್ಲಿ ಗಂಡ ಹೆಂಡಿರು ಯಾವಾಗ ಲಾದರೂ ವ್ಯಕ್ತಪಡಿಸಿ ಅದರಿಂದ ಯಾರಿಗಾದರೂ ಅಸಮಾಧಾನವಾಯಿತೆಂಬು ದನ್ನು ಕಾಣೆವು"

ಮೇಲಿನ ಈ ಅನುಭವಾನುವಾದದಲ್ಲಿ ಸಂಸಾರ ಸಂಹಿತವಿದೆ, ಮಹಾಭಾರತ ಸಂಸಾರ ದರ್ಶನವಿದೆ; ಮಾತಿನಸೊಗಸಿದೆ, ಅನುಭವದ ಸತ್ಯವಿದೆ. ಹೀಗೆಯೆ ತಪಸ್ಸನ್ನು ಕುರಿತು ಹೇಳಿರುವ ಮಾತನ್ನು ಕೇಳಿ: "ದೇಹವನ್ನು ಕೊಬ್ಬಿಸ ಬಾರದು; ಹಾಗಾದರೆ ಗೊಬ್ಬರ ಹೆಚ್ಚಾದ ಪಯಿರಿನಂತಾಗುತ್ತದೆ. ಅಂಥ ಪಯಿರಿನಲ್ಲಿ ಹೊರವಾಗಿ ಎಲೆ ಬಿಡುತ್ತದೆ; ಹೂವೂ ಹಣ್ಣೂ ಸೊನ್ನೆ! ಹೀಗೆಂದು ದೇಹವನ್ನು ಒಣಗಿಸಬಾರದು; ಏಕೆಂದರೆ ಒಣಗಿದ ಪಯಿರಿನಲ್ಲಿ ಹಣ್ಣಿರಲಿ, ಎಲೆಯೂ ಹೋಗಿ ಬಿಡುತ್ತದೆ. ದೇಹವು ಲಘುವಾಗಿ ಆರೋಗ್ಯವಾಗಿರುವುದರ ಜೊತೆಗೆ ಬುದ್ಧಿಯು ಹರಿತವಾಗಿರಬೇಕು, ಚಟುವಟಿಕೆಯುಳ್ಳದ್ದಾಗಿರಬೇಕು; ಬುದ್ಧಿ ಮದಡಾದರೆ ಅದರ ಹಿಂದಿರುವ ಆತ್ಮದ ದರ್ಶನವು ಮಂಕಾಗುತ್ತದೆ. ಆದ್ದರಿಂದ ಸಂತತವಾದ ದೇಹಶ್ರಮ ಬುದ್ಧಿಶ್ರಮಗಳು ಆವಶ್ಯಕ; ಅವೇ ತಪಸ್ಸು.......ಆತ್ಮವು ಅರಣಿಯಲ್ಲಿ

ಅಡಗಿರುವ ಅಗ್ನಿಯ ಹಾಗೆ; ಅದನ್ನು ಕಷ್ಟಪಟ್ಟು ಮಥನಮಾಡಿ ಹೊರಕ್ಕೆ ಬರಿಸ ಬೇಕು; ಅದು ಮೊದಲು ಒಂದು ಸಣ್ಣ ಕಣವಾಗಿ ಕಾಣುತ್ತದೆ; ಅದನ್ನು ನಂದದ ಹಾಗೆ ಎಚ್ಚರದಿಂದ ಕಾಪಾಡಿ ಬೆಳಸಿಕೊಳ್ಳಬೇಕು; ಆ ಮೇಲೆ ಅದರಿಂದ ಎಂಥ ಅಗ್ನಿಕಾರ್ಯ ಯಜ್ಞಕಾರ್ಯ ದಹನಕಾರ್ಯ ಬೇಕಾದರೂ ನಡೆಯಬಹುದು.... ತಪಸ್ಸು ಯಾವಾಗಲೋ ಒಂದು ಘಳಿಗೆ ಕಣ್ಣು ಮುಚ್ಚಿಕೊಂಡು ಕುಳಿತಿರುವುದಲ್ಲ– ಮನೋವಾಕ್ಕಾಯಗಳಿಂದ ಸದಾ ಅನುಷ್ಠಾನ ಮಾಡತಕ್ಕದ್ದು (ಗೀತಾ ೧೭,೧೪– ೧೬). ಇದೇನು ಕಠಿಣವಾದದ್ದಲ್ಲ, 'ಘೋರ'ವಾದದ್ದಲ್ಲ; ಸರ್ವಸಾಧ್ಯವಾದದ್ದು. ಸಾವಿತ್ರಿ ಮಾಡಿದ ತಪಸ್ಸು ಇದೇಯೆ; ಜೊತೆಗೆ ಧ್ಯಾನ, ಉಪವಾಸ, ಹಿರಿಯರ ಸೇವೆ."

ಇಲ್ಲಿ ತಪಸ್ಸನ್ನು ಎಷ್ಟು ಸುಲಭವಾಗಿಸಿದ್ದಾರೆ, ಅಭಯಂಕರವಾಗಿಸಿದ್ದಾರೆ! ಹೀಗೆಯೆ ಅಹಿಂಸೆಯನ್ನು, ಕರ್ಮವನ್ನು, ಕಷ್ಟಸುಖಗಳ ಸಮಸ್ಯೆಯನ್ನು, ಸಂನ್ಯಾಸ ಯಜ್ಞಗಳನ್ನು, ದೇವತಾಪೂಜೆಯನ್ನು ಕುರಿತು ನಿರ್ದಿಷ್ಟವಾಗಿ ಪರಿಣಾಮಕವಾಗಿ ಸಂಗ್ರಹಾತ್ಮಕವಾಗಿ ಬರೆದಿದ್ದಾರೆ. ಇಲ್ಲಿವರು ಬರೆದಿರುವುದು ಬರಿಯ ಶಾಸ್ತ್ರವ್ಯಾಸಂಗದ ಫಲವಾಗಿ ಬಂದದ್ದಲ್ಲ; ಸ್ವಾನುಭವದಿಂದ ಬೆಣ್ಣೆಯಾಗಿ ಪಡೆದುಕೊಂಡದ್ದಾಗಿದೆ. "ಪ್ರಪಂಚದಲ್ಲಿ ಕಷ್ಟನಿಷ್ಠುರಗಳೂ ದುಃಖ ದೌರ್ಜನ್ಯ ಗಳೂ ಏಕಿವೆ? ಅವು ಯಾರಿಗೂ ಬೇಡ; ಎಲ್ಲರಿಗೂ ಸುಖಸಂತೋಷಗಳು ಬೇಕು; ಬೇಡವೆಂದರೆ ಕಷ್ಟ ತಪ್ಪುವಂತಿಲ್ಲ, ಬೇಕೆಂದರೆ ಸುಖ ಬರುವಂತಿಲ್ಲ. ಕೆಲವರಿಗೆ ಬರಿಯ ಸುಖವೇ ಇರುತ್ತದೆ; ಕೆಲವರಿಗೆ ಬರಿಯ ದುಃಖವೇ ಇರುತ್ತದೆ; ಅವೆರಡೂ ಸ್ವಲ್ಪ ಹೆಚ್ಚು ಕಡಮೆ ಪ್ರಮಾಣದಲ್ಲಿ ಎಲ್ಲರಿಗೂ ಇರುತ್ತವೆಂದು ಇಟ್ಟುಕೊಳ್ಳೋಣ; ಅವು ಏಕೆ ಹೆಚ್ಚು ಕಡಮೆಗಳಾಗಬೇಕು? ಅವುಗಳನ್ನು ಹೆಚ್ಚು ಕಡಮೆ ಮಾಡಿ ಕೊಳ್ಳುವುದಕ್ಕೆ ಏಕೆ ಆಗುವುದಿಲ್ಲ? ಕೆಲವರಿಗೆ, ಬಂದ ಕಷ್ಟ ಪರಿಹಾರವಾಗುತ್ತದೆ; ಇನ್ನು ಕೆಲವರಿಗೆ ಸ್ವಲ್ಪ ತಗ್ಗುತ್ತದೆ, ಮತ್ತೆ ಕೆಲವರು ಅದಕ್ಕೆ ಬಲಿಯಾಗಲೇಬೇಕು; ಅದನ್ನು ನಿವಾರಣೆ ಮಾಡಿಕೊಳ್ಳುವುದು ಅಥವಾ ಪರಿಹಾರಮಾಡಿಕೊಳ್ಳುವುದು ಹೇಗೆ? ಬುದ್ಧಿಯಿಂದಲೇ? ಕೆಲವರಿಗೆ ಬುದ್ಧಿ ಮಂದವಾಗಿರುತ್ತದೆ; ಮತ್ತೆ ಕೆಲವರಿಗೆ ತೀಕ್ಷ್ಣವಾಗಿರುತ್ತದೆ. ಇದೇಕೆ? ಬುದ್ಧಿ ಇದ್ದವರಿಗೂ ಅದು ಕೆಲವು ವೇಳೆ ಮಂಕಾಗುತ್ತದೆ, ಮೋಸಹೋಗುತ್ತದೆ. ಎಂಥೆಂಥ ಬುದ್ಧಿವಂತರೂ ಕಷ್ಟಕ್ಕೆ ಸಿಕ್ಕಿ ನರಳುವುದುಂಟು. ವಿವೇಕದಿಂದ ಬಂದರೆ, ಒಂದು ವಿಧವಾದ ಸಮಾಧಾನ: ಕುದಿಯುವ ಹಾಲಿನ ಮೇಲೆ ಕೆನೆ ಕಟ್ಟಿದಂತೆ. ಇದು ಕೆಲವುವೇಳೆ ಆತ್ಮವಂಚನೆಯ ಲ್ಲವೇ ಎನ್ನಿಸುತ್ತದೆ!

"ರೋಗಕ್ಕೆ ಔಷಧಿಯಿಂದ ಪರಿಹಾರವಿರುವಂತೆ, ಕಷ್ಟಕ್ಕೆ ಪರಿಹಾರ ಅಥವಾ ಪ್ರತಿಕ್ರಿಯೆಯುಂಟೆ? ಸ್ವಲ್ಪಮಟ್ಟಿಗೆ ಇರುವ ಹಾಗೆ ಕಾಣುತ್ತದೆ-ಹಸಿವು ಬಾಯಾರಿಕೆ ಗಳನ್ನು ಅನ್ನ ನೀರುಗಳಿಂದ ಪರಿಹರಿಸಿಕೊಂಡ ಹಾಗೆ. ಆದರೆ ಎಷ್ಟೋ ರೋಗಗಳಿಗೆ

ಔಷಧವಿಲ್ಲದಂತೆ, ಔಷಧ ತಿಳಿಯದಂತೆ, ಔಷಧ ಅಂಟದಂತೆ, ಪ್ರಪಂಚದ ಬಹು ಭಾಗದ ಕಷ್ಟಕ್ಕೆ ಪ್ರತಿಕ್ರಿಯೆಯೇ ಕಾಣುವುದಿಲ್ಲ; ಅದು ಬಂದಾಗ ಬರುತ್ತದೆ ಹೋದಾಗ ಹೋಗುತ್ತದೆ ಎನ್ನಿಸುತ್ತದೆ; ಅದಕ್ಕೆ ಕಾಲವ್ಯವಸ್ಥೆಯೆ ಇರುವಂತಿಲ್ಲ– ರಾತ್ರಿ ಕಳೆದು ಬೆಳಗಾಗುವುದಕ್ಕೆ ಕಾಲನಿಯಮವಿದೆ; ಮಲ್ಲಿಗೆ ಹೂವು ಬಿಡುವುದಕ್ಕೆ, ಮಾವಿನಹಣ್ಣು ಬಿಡುವುದಕ್ಕೆ ಕಾಲನಿಯಮವಿದೆ; ಕಷ್ಟಕ್ಕೆ ಅಂಥ ಕಾಲನಿಯಮವೇನಿದೆ?"

ಹೀಗೆ ತತ್ತ್ವಚಿಂತನಮಾಡುತ್ತ ಮಾಡುತ್ತ ತಮ್ಮ ಅನುಭವಮಂಥನದಿಂದ ಬಂದ ಹೊಸ ಅಮೃತವನ್ನು ನೀಡುವಾಗ ಶ್ರೀ. ಎ. ಆರ್. ಕೃ ಅವರು ಕವಿತೆಯನ್ನು ಬರೆಯುತ್ತಾರೆ. ಬಂಡೆಯೊಡೆದು ಉಕ್ಕಿಬರುವ ತಿಳಿಜಲದ ಊಟೆಯಂತಿರುತ್ತದೆ ಅವರ ಈ ಮಾತುಗಳು. ಅವರ ಇಡೀ ಕೃತಿಯ ಪಾಕವೆ ಇಂಥದು. ಕನ್ನಡ ವ್ಯಾಸಭಾರತವಿದು, ಈ ವಚನಭಾರತ!

**ಎಸ್. ವಿ. ಪರಮೇಶ್ವರ ಭಟ್ಟ**

# ಸಂಸ್ಕೃತ ನಾಟಕ

ನಮ್ಮ ಸುದೈವದಿಂದ ಕನ್ನಡದಲ್ಲಿ ಕೆಲವು ಗ್ರಂಥಗಳು ಪ್ರಕಟವಾಗಿವೆ. ಈಗ ನಾವು ಇಂತಹ ಗ್ರಂಥಗಳಲ್ಲಿ ಬಂದಿರುವ ವಿಷಯಗಳನ್ನು ಕುರಿತು ಮತ್ತೆ ಜಿಜ್ಞಾಸೆಗೈಯುವುದಾದರೆ ಆ ಮೊದಲು ಈ ಗ್ರಂಥಗಳನ್ನು ಓದಿಕೊಂಡಿರುವುದು ಅನಿವಾರ್ಯವಾಗಿದೆ. ಇವುಗಳನ್ನು ಓದದೆ ಇವುಗಳಲ್ಲಿ ಬಂದ ವಿಷಯದ ಮೇಲೆ ಮಾತನಾಡುವುದಕ್ಕೆ ಹೊರಡುವುದು ಸಾಧುವೂ ಅಲ್ಲ, ಸಾಧ್ಯವೂ ಅಲ್ಲ. ನಮಗೆ ಈ ಗ್ರಂಥಗಳಲ್ಲಿ ಪ್ರತಿಪಾದ್ಯವಾದ ವಿಷಯವು ಒಪ್ಪಿಗೆಯಾಗಲಿ ಒಪ್ಪಿಗೆಯಾಗದಿರಲಿ ಈ ಲೇಖಕರು ಈ ವಿಷಯ ಏನು ಹೇಳಿದ್ದಾರೆ ಎಂಬುದನ್ನು ನಾವು ತಿಳಿದಿರಲೇ ಬೇಕು. ಒಪ್ಪಿಗೆಯಾದರೆ ನಾವು ಮುಂಡಿಸಿರುವ ವಿಷಯಕ್ಕೆ ಪ್ರಮಾಣವಾಗಿ ಇಲ್ಲಿಯ ಉದ್ಧರಣಗಳನ್ನು ಜೋಡಿಸಿಕೊಳ್ಳಬಹುದು. ಒಪ್ಪಿಗೆಯಾಗದಿದ್ದರೆ ಇವರ ಅಭಿಪ್ರಾಯಗಳನ್ನು ಸಕಾರಣವಾಗಿ ಖಂಡಿಸಿ ವಿದ್ವತ್ತಿನ ಕ್ಷಿತಿಜವನ್ನು ಇನ್ನಷ್ಟು ದೂರಕ್ಕೆ ಒಯ್ಯಬಹುದು. ಈ ದೃಷ್ಟಿಯಿಂದ ಇಂತಹ ಗ್ರಂಥಗಳು ಅವಶ್ಯವಾಗಿ ಓದಿಯೆ ಓದಬೇಕಾದ ಗ್ರಂಥಗಳು. 'A must reading Book' ಎನ್ನುವ ಜಾತಿಗೆ ಈ ಗ್ರಂಥಗಳು ಸೇರತಕ್ಕವು. ಒಂದು ಉದಾಹರಣೆ ಕೊಡುವುದಾದರೆ ರಾ. ನರಸಿಂಹಾಚಾರ್ಯರ 'ಕವಿಚರಿತೆ'ಯ ಸಂಪುಟಗಳು ಇಂತಹ ಗ್ರಂಥ ಜಾತಿಗೆ ಸೇರತಕ್ಕವು. ಕವಿಗಳ ಕಾಲ, ದೇಶ, ಮತ, ರಾಜಾಶ್ರಯ, ಕೃತಿಗಳು ಮುಂತಾದವುಗಳ ಜಿಜ್ಞಾಸೆಗೆ ತೊಡಗುವವರೆಲ್ಲರೂ ಕವಿಚರಿತೆಯನ್ನು ನೋಡಿರಲೇ ಬೇಕು. ಇಂತಹ 'ನೋಡಿರಲೇಬೇಕು' ಎಂಬ ಇನ್ನೊಂದು ಪುಸ್ತಕ ಎ. ಆರ್. ಕೃ. ಅವರ 'ಸಂಸ್ಕೃತನಾಟಕ'. ಕಾಲದ ದೃಷ್ಟಿಯಿಂದ ಮಾತ್ರವಲ್ಲದೆ ಗುಣದ ದೃಷ್ಟಿಯಿಂದ ಸಹ ಸಂಸ್ಕೃತ ನಾಟಕ ಮೊದಲಮಣೆಯ ಗೌರವಕ್ಕೆ ಪಾತ್ರವಾಗಿದೆ.

ಸಂಸ್ಕೃತದ ನಾಟಕಗಳ ವಿಷಯವಾಗಿಯೂ ನಾಟಕಕಾರರ ವಿಷಯವಾಗಿಯೂ ಎಷ್ಟೋ ಪುಸ್ತಕಗಳು ಕನ್ನಡದಲ್ಲಿಯೇ ಬಂದಿವೆ. ದೇವುಡು, ಸಿ. ಕೆ. ವೆಂ., ಶ್ರೀರಂಗ, ರಂಗಣ್ಣ ಮುಂತಾದವರು ಈ ಕ್ಷೇತ್ರದಲ್ಲಿ ಬೇಕಾದ ಹಾಗೆ ಕೃಷಿ ಮಾಡಿದ್ದಾರೆ. ಬೇಂದ್ರೆ, ಕುವೆಂಪು, ಪು. ತಿ. ನ. ಮುಂತಾದವರು ಲೇಖನಗಳನ್ನು

ಬರೆದಿದ್ದಾರೆ. ಈ ಎಲ್ಲ ಹಿರಿಯರ ವಾಙ್ಮಯ ತಪಸ್ಸಿನ ಫಲವಾಗಿ ಸಂಸ್ಕೃತದ ನಾಟಕ ಸಾಹಿತ್ಯ ಸಂಬಂಧವಾದ ಹೆಬ್ಬೊತ್ತಗೆಗಳೂ ಕಿರುಹೊತ್ತಗೆಗಳೂ ಗಮನಾರ್ಹವಾದ ಪ್ರಮಾಣದಲ್ಲಿ ಕನ್ನಡದಲ್ಲಿಯೇ ಬಂದಿವೆ. ಆದರೆ ಅಖಂಡ ವಾಗಿ ಸಂಸ್ಕೃತನಾಟಕದ ಹುಟ್ಟು, ಸ್ವರೂಪ, ಬೆಳವಣಿಗೆ, ಅದರ ಉಚ್ಛ್ರಾಯ ಕಾಲ, ಮಧ್ಯಕಾಲ, ಕ್ಷೀಣಕಾಲ ಇವುಗಳೆಲ್ಲವನ್ನೂ ಸಮೀಕ್ಷೆಗೈದು ಒಂದೇ ಗ್ರಂಥ ದಲ್ಲಿ ಈ ಸಂಬಂಧವಾಗಿ ಹೇಳಬಹುದಾದುದೆಲ್ಲವನ್ನೂ ಬಲ್ಲಂತೆ ಹೇಳಿರುವ ಏಕೈಕ ಗ್ರಂಥ ಸಂಸ್ಕೃತನಾಟಕ.

'ಸಂಸ್ಕೃತನಾಟಕ'ದ ಪ್ರಥಮ ಮುದ್ರಣ ೧೯೩೭ರಲ್ಲಿ! ಈಗ ಮೂವತ್ತು ವರುಷಗಳ ಹಿಂದೆ! ಆ ಕಾಲಕ್ಕೆ ಈ ವಿಷಯವಾಗಿ ಪೂರ್ವದ ಮತ್ತು ಪಶ್ಚಿಮದ ವಿದ್ವಾಂಸರೂ, ವಿಮರ್ಶಕರೂ, ಸಹೃದಯರೂ ಏನೇನು ಹೇಳಿದ್ದರು, ಆ ಹೇಳಿಕೆ ಗಳೆಲ್ಲವನ್ನೂ ಗ್ರಹಿಸಿ ಸಂಗ್ರಹಿಸಿ ಪ್ರತ್ಯುತ್ಪನ್ನಮತಿಗಳಾದ ಕೃಷ್ಣಶಾಸ್ತ್ರಿಗಳು ತಮ್ಮ ವಾಚನವಚನಗಳಿಂದ ಪ್ರತಿಭೆ ಲೋಕಾನುಭವಗಳಿಂದ ಜನ್ಯವಾದ ಸಂಸ್ಕಾರವಿಶೇಷ ದಿಂದ ಈ 'ಸಂಸ್ಕೃತ ನಾಟಕ'ವನ್ನು ವಿರಚಿಸಿ ಒಂದು ಕಣ್ಣಳತೆಗೆ ಒಂದು ನಿಲವಿಗೆ ಒಂದು ನಿಟ್ಟಿಗೆ ಆ ವಿಸ್ತಾರವಾದ ಸಂಸ್ಕೃತದ ರಸಸೃಷ್ಟಿಯ ನಾಟ್ಯಪ್ರಪಂಚ ಕನ್ನಡಿಸಿ ಬರುವಂತೆ ಮಾಡಿದ್ದಾರೆ. ಈ ದೃಷ್ಟಿಯಲ್ಲಿ ಈ ಕ್ಷೇತ್ರದಲ್ಲಿ ಇದು 'ವಿಕ್ರಮಗ್ರಂಥ'ವೇ ಸರಿ.

'I can hardly think of a work even in English– let alone Indian languages–which gives in such a brief compass so clear, comprehensive and reliable an account of the subject or utilises so fully the results of modern research concerning it.' ಹೀಗೆಂಬುದಾಗಿ ಪ್ರೊ. ಎಂ. ಹಿರಿಯಣ್ಣನವರು ಈ ಕೃತಿಯ ವಿಶೇಷ ಲಕ್ಷಣಗಳನ್ನು ಗುರುತಿಸಿ ಪ್ರಶಂಸಿಸಿದ್ದಾರೆ.

ಪ್ರೊ. ಸ್ಟೆನ್‌ಕೊನೋ ಅವರು 'Is there any likelihood that an English translation may appear?' ಎಂದು ಕೇಳಿ ಅಂತಹ ಭಾಷಾಂತರ ಸ್ವಾಗತಾರ್ಹವೆಂಬ ಅಂಶವನ್ನು ಮನಗಾಣಿಸಿದ್ದಾರೆ.

ಡಾ. ಎಲ್. ಟಿ. ಬಾರ್ನೆಟ್, ಪ್ರೊ. ಎ. ಬಿ. ಕೀತ್ ಮುಂತಾದವರು ಸಂಸ್ಕೃತ ನಾಟಕದ ಹಿರಿಮೆಯನ್ನು ಕೊಂಡಾಡಿ ಬರೆದಿದ್ದಾರೆ.

ಹೀಗೆ ದೇಶವಿದೇಶಗಳ ವಿದ್ವಜ್ಜನರ ಶ್ಲಾಘನೆಗೆ ಪಾತ್ರವಾದ ಸಂಸ್ಕೃತ ನಾಟಕವನ್ನು ನಾನು ಪ್ರತ್ಯೇಕವಾಗಿ ಹೊಗಳಿ ಬರೆಯುವುದು ಅರ್ಥವಿಲ್ಲದ ಮಾತೇ ಸರಿ. ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳಿಗೆ ಈ ಕೃತಿಯನ್ನು ಸಮರ್ಥರಾದವರು ಅನುವಾದಮಾಡಿದರೆ ಆ ಭಾಷೆಯನ್ನು ಅರಿತವರಿಗೆ ಕನ್ನಡದ ವಿದ್ವತ್ತು ರಸಿಕತೆಗಳ ನಿಜವಾದ ಪರಿಚಯವಾಗಿ ಅವರು ಇಂತಹ ಪುಸ್ತಕಗಳ ಪಠನದಿಂದ ಅಭ್ಯಾಸದಿಂದ

ತಮ್ಮ ಜ್ಞಾನದ ಮಟ್ಟವನ್ನು ಹೆಚ್ಚಿಸಿಕೊಳ್ಳುವುದು . ಸಾಧ್ಯವಾಗುತ್ತದೆ. ಸ್ಪೈನ್‌ಕೊನೋ ಕೇಳಿದ್ದೇನೋ ಸರಿ. ಆದರೆ ಈ ಮೂವತ್ತು ವರುಷಗಳಲ್ಲಿ ಇದು ಯಾವ ಭಾಷೆಗೂ ಅನುವಾದವಾಗಿಲ್ಲ. ಆ ಪುಣ್ಯ ಬೇಗನೆ ಒದಗಲಿ ಎಂಬುದೇ ನಮ್ಮ ಆಶಯ.

ಈ ಗ್ರಂಥದ ರಚನೆಯಲ್ಲಿ ನಾಟಕಕರ್ತರ ಕಾಲ ದೇಶಾದಿಗಳನ್ನು ನಿರ್ಣಯಿಸುವಲ್ಲಿ ಪಾಶ್ಚಾತ್ಯ ಪಂಡಿತರ ಗ್ರಂಥಲೇಖನಾದಿಗಳನ್ನು ತಾವು ಹೆಚ್ಚಾಗಿ ಉಪಯೋಗಿಸಿಕೊಂಡಿರುವುದಾಗಿಯೂ ಆದರೆ ಯಾರೊಬ್ಬರ ಮತವನ್ನೂ ಸಿದ್ಧಾಂತವಾಗಿ ಅಂಗೀಕರಿಸಿ ಅನುಸರಿಸಿಲ್ಲವೆಂಬುದಾಗಿಯೂ ಎಲ್ಲರ ಹೇಳಿಕೆಯನ್ನೂ ತಿಳಿದು ತೂಗಿ ತಮಗೆ ಸಪ್ರಮಾಣವಾಗಿ ತೋರಿದ್ದನ್ನು ಬರೆದಿರುವುದಾಗಿಯೂ ಹೇಳಿದ್ದಾರೆ. ಇಲ್ಲಿ ಬರೆದಿರುವ ವಿಮರ್ಶೆಯ ಭಾಗವನ್ನು ಕುರಿತು ಹೀಗೆ ಹೇಳಿಕೊಂಡಿದ್ದಾರೆ: "ಇದು ಪೂರ್ತಿಯಾಗಿ ನನ್ನದೇ. ಯಾವ ನಾಟಕವನ್ನೂ ನಾನೇ ಚೆನ್ನಾಗಿ ವ್ಯಾಸಂಗಮಾಡದೆ, ಒಪ್ಪಿಗೆಯಾಗದೆ, ಎಲ್ಲಿಯೂ ಅಭಿಪ್ರಾಯವನ್ನು ಕೊಟ್ಟಿಲ್ಲ; ಆದ್ದರಿಂದ ಇದರಲ್ಲಿರಬಹುದಾದ ಗುಣಾವಗುಣಗಳೆಲ್ಲ ನನ್ನವೇ. ಹೀಗೆ ವಿಮರ್ಶಿಸುವಾಗ ನಾನು ಲಕ್ಷಣಕಾರರು ಹೇಳಿರುವ ನಾಟಕದ ನಿಯಮಗಳನ್ನು ಲಕ್ಷ್ಯಕ್ಕೆ ಅನ್ವಯಿಸುವುದರಲ್ಲಿಯೇ ತೃಪ್ತನಾಗದೆ ವಸ್ತು, ಪಾತ್ರ, ರಸ, ಶೈಲಿ, ವರ್ಣನೆ, ನೀತಿ ಮುಂತಾದವುಗಳನ್ನು ಸಾಹಿತಿಯ ಒಂದು ವಿಸ್ತಾರದೃಷ್ಟಿಯಿಂದ ಪರಿಶೀಲಿಸಿ ಸಂಗ್ರಹವಾಗಿ ಬರೆಯಲು ಪ್ರಯತ್ನಪಟ್ಟಿದ್ದೇನೆ." ಈ 'ಸಂಸ್ಕೃತನಾಟಕ'ವನ್ನು ರಚಿಸುವ ಸಂದರ್ಭದಲ್ಲಿ ತಮ್ಮ ದೃಷ್ಟಿಯಾವುದು ಎಂಬುದನ್ನು ಶಾಸ್ತ್ರಿಗಳವರು ಈ ಮೇಲಿನ ಮಾತುಗಳಲ್ಲಿ ಸಂಶಯಕ್ಕೆ ಎಡೆಯಿಲ್ಲದಂತೆ ತಿಳಿಸಿದ್ದಾರೆ.

ಸಂಸ್ಕೃತದಲ್ಲಿ ಸುಮಾರು ೬೫೦ ರೂಪಕಗಳಿವೆ ಎಂದು ಹೇಳುತ್ತಾರೆ. ಕ್ರಿಸ್ತ ಶಕದ ಆದಿಕಾಲದಿಂದ ಆರಂಭವಾಗಿ ಸುಮಾರು ಹನ್ನೊಂದು ಅಥವಾ ಹನ್ನೆರಡನೆಯ ಶತಮಾನದಕಡೆಗೆ ಇದರ ಚರಿತ್ರೆ ಹಬ್ಬಿ ಹಸರಿಸಿದೆ ಎಂದೂ ಹೇಳುತ್ತಾರೆ. ಶಾಸ್ತ್ರಿಗಳವರು ತಮ್ಮ ಈ ನಾಟಕ ಚರಿತ್ರೆಯನ್ನು ಅಶ್ವಘೋಷ (ಕ್ರಿ. ಶ. ಸುಮಾರು ೧೦೦) ನಿಂದ ಆರಂಭಿಸಿ ಕೃಷ್ಣಮಿಶ್ರನ (ಕ್ರಿ. ಶ. ೧೧ ನೆಯ ಶತಮಾನ) ವರೆಗೆ (ಇಬ್ಬರನ್ನೂ ಕೂಡಿಸಿಕೊಂಡು) ಬೆಳೆದ ಈ ರೂಪಕಕಾರರ ಮತ್ತು ಅವರ ಕೃತಿಗಳ ವಿಷಯವಾಗಿ ಬರೆದುಕೊಂಡು ಹೋಗಿದ್ದಾರೆ. ಅಶ್ವಘೋಷ, ಭಾಸ, ಶೂದ್ರಕ, ಕಾಳಿದಾಸ, ವಿಶಾಖದತ್ತ, ಹರ್ಷವರ್ಧನ, ಭವಭೂತಿ ಭಟ್ಟನಾರಾಯಣ, ರಾಜಶೇಖರ, ಕ್ಷೇಮೀಶ್ವರ, ಕೃಷ್ಣಮಿಶ್ರ-ಹೀಗೆ ಹನ್ನೊಂದು ಪ್ರಮುಖ ರೂಪಕ ಕರ್ತೃಗಳೂ ಅವರ ಕೃತಿಗಳೂ ಇಲ್ಲಿ ವಿವೇಚನೆಗೆ ಒಳಗಾಗಿವೆ.

ಜೊತೆಗೆ ಗ್ರಂಥದ ಆರಂಭದಲ್ಲಿ 'ಸಂಸ್ಕೃತ ನಾಟಕದ ಸ್ವರೂಪ ಮತ್ತು ಉತ್ಪತ್ತಿ' ಎಂಬ ಒಂದು ಭಾಗವಿದೆ. ಇದು ಪೀಠಿಕೆ, ನಾಟ್ಯದ ಮೇಲಣ ಲಕ್ಷಣ

ಗ್ರಂಥಗಳು, ನಾಟ್ಯಸ್ವರೂಪ, ನಾಟ್ಯಾಂಶಗಳು, ನಾಟ್ಯಭೇದಗಳು, ನಾಟ್ಯದ ಉತ್ಪತ್ತಿ ಎಂಬ ಆರು ಉಪಭಾಗಗಳನ್ನು ಒಳಗೊಂಡಿವೆ.

ಕಡೆಯಲ್ಲಿ 'ಕ್ಷೀಣಕಾಲ : ಈಚಿನ ರೂಪಕಗಳು ಮತ್ತು ಉಪರೂಪಕಗಳು' ಎಂಬ ಭಾಗವನ್ನೂ ಜೋಡಿಸಲಾಗಿದೆ. ಇಲ್ಲಿ ರಾಮಾಯಣ, ಭಾಗವತ, ಭಾರತ ನಾಟಕಗಳನ್ನೂ ಪೌರಾಣಿಕ, ಧಾರ್ಮಿಕ ನಾಟಕಗಳನ್ನೂ, ಕಥಾ ಮತ್ತು ಚರಿತ್ರ ನಾಟಕಗಳನ್ನೂ ಛಾಯಾ ನಾಟಕಗಳನ್ನೂ ಸಂಕೀರ್ಣವರ್ಗದ ನಾಟಕಗಳನ್ನೂ ಕುರಿತು ಬರೆದಿದೆ. ಈ ಪ್ರಧಾನರೂಪಕಪ್ರಕಾರವಾದ ನಾಟಕದ ಜೊತೆಗೆ ಪ್ರಕರಣ ಭಾಣ ಪ್ರಹಸನಾದಿ ಒಂಬತ್ತು ಉಪರೂಪಕಗಳ ಸೃಷ್ಟಿಯನ್ನು ಕುರಿತು ಹೇಳಿದೆ.

ಕಟ್ಟಕಡೆಯಲ್ಲಿ ಈಗ ನಮಗೆ ತಿಳಿದುಬಂದಿರುವ ಸಂಸ್ಕೃತ ರೂಪಕಗಳ ಅಕಾರಾದಿಯ ಒಂದು ಅನುಬಂಧವಿದೆ. ಎಲ್ಲ ಒಟ್ಟು ಕಿರೀಟಾಕಾರದ ಅಷ್ಟ ಪತ್ರದ ೩೨೮ ಪುಟಗಳಲ್ಲಿ ಹೀಗೆ ಸಂಸ್ಕೃತ ನಾಟಕದ ಒಂದು ಸಮಗ್ರ ವಿವೇಚನೆ ಒಪ್ಪವಾಗಿ ಅಡಕವಾಗಿ ಬಂದಿದೆ.

ಪುಸ್ತಕದ ವಿಷಯ, ಶೈಲಿ, ಗುಣಗಳಿಗೆ ಅನುಗುಣವಾಗಿ ಶ್ರೀ ಬಿ. ಎಂ. ಶ್ರೀ. ಅವರು ಸೊಗಸಾದ ವಿದ್ವತ್ಪೂರ್ಣವಾದ ಒಂದು ಮುನ್ನುಡಿ ಬರೆದಿದ್ದಾರೆ. ಶಾಸ್ತ್ರಿಗಳವರ 'ಶ್ರಮವೂ ಪರ್ಯಾಲೋಚನೆಯೂ ಕೃತಜ್ಞತೆಗೆ ಅರ್ಹವಾದುವು' ಎಂದು ಶ್ರೀಯವರು ಹೇಳಿದ್ದಾರೆ. ಗ್ರೀಕ್, ಸಂಸ್ಕೃತ, ಇಂಗ್ಲಿಷ್ ನಾಟಕಗಳಿಗೆ ಸಂಬಂಧಿಸಿದಂತೆ ಶ್ರೀಯುತರು ಮುನ್ನುಡಿಯಲ್ಲಿ ಆಡಿರುವ ಮಾತುಗಳು ಮನನೀಯ ವಾಗಿದೆ. ಸಂಸ್ಕೃತ ನಾಟಕಗಳ ವಿಷಯದಲ್ಲಿ 'ಗ್ರೀಕ್ ನಾಟಕದ ಸಂಸರ್ಗವುಂಟೆ'? ಎಂಬ ಪ್ರಶ್ನೆಯನ್ನೂ ಶ್ರೀಯುತರು ಕೇಳಿದ್ದಾರೆ. ವಿದ್ವಾಂಸರು ಇಲ್ಲವೆಂದರೂ ಇಲ್ಲಿ 'ಮತ್ತೆ ವಿಚಾರಕ್ಕೆ ಅವಕಾಶವೇ ಇಲ್ಲವೆಂದು ಹೇಳಬಲ್ಲರೆ?' ಎಂದು ಮರುಪ್ರಶ್ನೆ ಹಾಕಿದ್ದಾರೆ. ಈ ಪ್ರಶ್ನೆ ಸಂಶೋಧನೆಗೆ ತೆರೆದ ಬಾಗಿಲು. ವಿದ್ವಾಂಸರು ಒಳಹೊಕ್ಕು ಪರಿಶೀಲಿಸಬೇಕು. ಇರಲಿ, ಶ್ರೀಯವರ ಇನ್ನೊಂದು ಮಾತು ನೋಡಿ. 'ದೇಶಭಾಷೆಗಳಲ್ಲಿ ಸಂಸ್ಕೃತದ ಉತ್ತಮ ನಾಟಕಗಳು ಪುನರ್ಜನ್ಮ ಪಡೆದು ಸಾರ್ವಜನಿಕವಾದ ಈ ಕಾಲದಲ್ಲಿ ನಾಟಕಗಳಲ್ಲಿ ಆಡಿ ಜನರ ಹೃದಯಕ್ಕೆ ಇಳಿಯಬೇಕಾಗಿದೆ' ಎಂಬ ಈ ವಾಕ್ಯಖಂಡ ಎಷ್ಟು ವಿಚಾರಣೀಯವಾಗಿದೆ. ಅಲ್ಲಿ ಸಂಶೋಧಕರಿಗೆ ಕರೆಗೊಟ್ಟಂತೆ ಇಲ್ಲಿ ಸೃಜನಶೀಲ ಕವಿ ವಿಮರ್ಶಕರಿಗೆ ಅನುವಾದ ಕರಿಗೆ ಶ್ರೀಯುತರು ಕರೆಗೊಟ್ಟಿದ್ದಾರೆ. ಸಂಸ್ಕೃತದ ಉತ್ತಮ ನಾಟಕಗಳ ಸಶಕ್ತವಾದ ಸರಸವಾದ ಅನುವಾದಗಳು ಈ ಮೂವತ್ತು ವರುಷಗಳಲ್ಲಿ (ಮುನ್ನುಡಿ ಬರೆದದ್ದು ೮-೬-೩೭ರಲ್ಲಿ) ಬಂದಿವೆ ಎಂಬುದು ಒಂದು ಸಮಾಧಾನ. ಸಂಸ್ಕೃತದ ಪುರಾಣಗಳಿಂದ, ರಾಮಾಯಣ ಭಾರತ ಭಾಗವತಾದಿಗಳಿಂದ ವಸ್ತುಗಳನ್ನಾಯ್ದು ಬರೆದ ನವೀನದರ್ಶನ ಪುಷ್ಟವಾದ ಶ್ರೀಮಂತ ರೂಪಕಗಳು ಈಗ ನಮ್ಮಲ್ಲಿ ಬಂದಿವೆ

ಎಂಬುದು ಬಹುದೊಡ್ಡ ಸಮಾಧಾನ, ಕುವೆಂಪು, ಪುತಿನ, ಶ್ರೀರಂಗ ಮುಂತಾದವರ ರೂಪಕ ಸೃಷ್ಟಿಯನ್ನು ಇಲ್ಲಿ ನೆನೆಯಬಹುದು. ಸ್ವಪ್ನ ವಾಸವದತ್ತ, ಪ್ರತಿಮಾ ನಾಟಕ, ಪಂಚರಾತ್ರ, ಶಾಕುಂತಲ, ಮೃಚ್ಛಕಟಿಕ, ಉತ್ತರ ರಾಮಚರಿತ ಮುಂತಾದ ನಾಟಕಗಳು 'ನಾಟಕಮಣಿಗಳು' 'ಜೀವಕಣಿಗಳು' ಎಂದಿದ್ದಾರೆ. ನಾಟಕದ ಸ್ವರೂಪ, ಉತ್ಪತ್ತಿ, ಆಕಾರ ವಾಹಕ, ವಸ್ತುವಿಮರ್ಶೆ ಈ ಅಂಶಗಳ ಮೇಲೆ ಮುನ್ನುಡಿಕಾರರು ತಮ್ಮ ಅಭಿಪ್ರಾಯಗಳನ್ನು ಪುಂಜೀಕರಿಸಿ ಆಡಿದ್ದಾರೆ.

ಶ್ರೀಕೃಷ್ಣಶಾಸ್ತ್ರಿಗಳವರು ಸಂಸ್ಕೃತನಾಟಕದ ಉತ್ಪತ್ತಿಯನ್ನು ಸುದೀರ್ಘವಾಗಿ ಚರ್ಚಿಸಿ ಆಮೇಲೆ ಕಟ್ಟಕಡೆಯಲ್ಲಿ ಹೀಗೆ ಹೇಳಿದ್ದಾರೆ: 'ಸಂಸ್ಕೃತ ನಾಟಕದ ಉತ್ಪತ್ತಿ ಹೀಗೆ ಸ್ಪಷ್ಟಾಸ್ಪಷ್ಟವಾಗಿ ಹೂವಿನಲ್ಲಿ ಕಾಣುತ್ತಿರುವ ಹೀಚಿನ ಸೂಚನೆಯಂತೆ, ಕಾಣುತ್ತದೆ; ಆದರೆ ಅದರ ಮುಂದಿನ ಅವಸ್ಥೆಗಳು, ಹೀಚುಕಾಯಿನ ಅವಸ್ಥೆಗಳು, ಕಾಣಬರುವುದಿಲ್ಲ; ಆ ಹೂವು ಕಣ್ಣಿಗೆ ಕಂಡಮೇಲೆ ಮೊದಲು ಕೈಗೆ ಸಿಕ್ಕುವುದು ಹಣ್ಣು—ಅಶ್ವಘೋಷ, ಭಾಸ ಮುಂತಾದವರ ತನಿವಣ್ಣುಗಳು.'

ಇಲ್ಲಿ ಯಾವ ಹೆಚ್ಚಿನ ವಿವರಗಳಿಗೂ ಹೋಗದೆ ಶ್ರೀ ಶಾಸ್ತ್ರಿಗಳವರು ತಮ್ಮ ಪುಸ್ತಕದ ರಚನೆಯಲ್ಲಿ ಯಾವ ನಕಾಶೆ (Plan) ಯನ್ನು ಇಟ್ಟುಕೊಂಡು ಕೆಲಸ ಮಾಡಿದ್ದಾರೆ ಎಂಬುದನ್ನು ಹೇಳಿ ಈ ಚಿಕ್ಕ ಪರಿಚಯಾತ್ಮಕವಾದ ಲೇಖನವನ್ನು ಮುಗಿಸುತ್ತೇನೆ.

ಭಾಸ, ಶೂದ್ರಕ, ಕಾಳಿದಾಸ, ವಿಶಾಖದತ್ತ ಮುಂತಾದ ನಾಟಕಕಾರರ ಮತ್ತು ಅವರ ಕೃತಿಗಳನ್ನು ಕುರಿತು ಹೇಳಿರುವರಷ್ಟೆ, ಹಾಗೆ ಹೇಳುವಾಗ ಮೊದಲು ಕವಿಯ ಕಾಲ, ದೇಶ, ರಾಜಾಶ್ರಯಾದಿ ಕವಿಚರಿತೆಗೆ ಸಂಬಂಧಿಸಿದ ಸಂಗತಿಗಳನ್ನು ಹೇಳುತ್ತಾರೆ. ಪ್ರಸಿದ್ಧ ವಿದ್ವಾಂಸರ ವಾದಗಳನ್ನು ಸಂಗ್ರಹಿಸಿ ಕೊಡುತ್ತಾರೆ. ತಮ್ಮ ತೀರ್ಮಾನವನ್ನೂ ಸಕಾರಣವಾಗಿ ಸಮರ್ಥಿಸಿಕೊಳ್ಳುತ್ತಾರೆ. ಆಮೇಲೆ ಅಂಕಾನುಸಾರಿಯಾದ ಕಥೆಯನ್ನು ಒಂದೊಂದು ನಾಟಕಕ್ಕೂ ಕೊಡುತ್ತಾರೆ. ಕಥೆಹೇಳಿದ ಘಳಿಗೆಯಲ್ಲಿಯೇ ಆಯಾ ನಾಟಕಕ್ಕೆ ಸಂಬಂಧಿಸಿದಂತೆ ವಸ್ತು, ಪಾತ್ರ, ರಸ, ಸನ್ನಿವೇಶ, ಸಂವಾದ, ಶೈಲಿ ಮುಂತಾದ ವಿಷಯಗಳನ್ನೊಳಗೊಂಡ ವಿಮರ್ಶೆಯ ಭಾಗವನ್ನು ಸೇರಿಸುತ್ತಾರೆ. ಆಮೇಲೆ ನಾಲ್ಕೊ ಐದೊ ಆರೊ ಏಳೊ ಪದ್ಯಗಳನ್ನು ಕೊಟ್ಟು ಕವಿಯ ಶೈಲಿಯನ್ನು ಮೂಲದಲ್ಲಿಯೆ ತಿಳಿಯಪಡಿಸುತ್ತಾರೆ. ಆ ಬಳಿಕ ಅದೇ ಕವಿಯ ಮತ್ತೊಂದು ನಾಟಕಕ್ಕೆ ಹೋಗುತ್ತಾರೆ, ಅಲ್ಲಿಯೂ ಇದೇ ಕ್ರಮ. ಎಲ್ಲ ನಾಟಕಗಳ ಸಮೀಕ್ಷೆ ನಡಸಿದ ಮೇಲೆ ಆ ವಿಷಯಕ್ಕೆ ಸಂಬಂಧಿಸಿದ ವಿದ್ವಾಂಸರ ಪ್ರಮಾಣ ಲೇಖನಾವಳಿಯ ಪಟ್ಟಿಕೊಡುತ್ತಾರೆ. ಕಟ್ಟಕಡೆಗೆ ಕನ್ನಡದಲ್ಲಿ ಬಂದ ಆ ನಾಟಕಗಳ ಭಾಷಾಂತರಗಳನ್ನು ಪಟ್ಟಿ ಕೊಡುತ್ತಾರೆ. ಭಾಸ, ಕಾಳಿದಾಸ, ಹರ್ಷವರ್ಧನ, ಭವಭೂತಿ ಈ ಕವಿಗಳ ಮೇಲೆ ಸಹಜವಾಗಿ ಹೆಚ್ಚು ಬರೆದಿದ್ದಾರೆ.

ಶಾಸ್ತ್ರಿಗಳವರ ಈ ರೂಪಕ ಸಮೀಕ್ಷೆಯ ಪರಿಚಯವಾಗಲೆಂಬ ಉದ್ದೇಶದಿಂದ ಇಲ್ಲಿ ಅಪರ ಸಂಸ್ಕೃತ ನಾಟಕದಿಂದ ಕೆಲಕೆಲವು ಉದಾಹರಣೆಗಳನ್ನು ಕೊಟ್ಟಿದೆ:

೧ 'ಈ ನಾಟಕದ ಕಥೆಯಾಗಲಿ, ರಸವಾಗಲಿ, ಅಸಂಭಾವ್ಯವಾದ ಘಟನೆಗಳಿಂದಲೂ ಆರ್ಭಟದ ವೃತ್ತಾಂತಗಳಿಂದಲೂ ಪೋಷಿತವಾಗಿ ಕಾಮನ ಹಬ್ಬದ ಕಿಚ್ಚಿನಂತೆ ಬೊಬ್ಬೆಯನ್ನೆಬ್ಬಿಸುವಂತಿಲ್ಲ. ಇರುವುದೆಲ್ಲಾ ಲಲಿತವಾದ ಮೃದುವಾದ ಸನ್ನಿವೇಶಗಳು; ಏನೆಂದರೆ, ಯಾರಿಗೆ ಮನಸ್ಸು ನೊಂದೀತೋ ಎಂಬಂಥ ಸಾತ್ವಿಕ ಜನರು; ಒಟ್ಟಿನ ಮೇಲೆ ಒಂದು ಪ್ರೇಮ ಸಂಸಾರ.' (ಸ್ವಪ್ನವಾಸವದತ್ತವನ್ನು ಕುರಿತ ಮಾತು)

೨ 'ವಿರಾಟಪರ್ವದ ಕಥೆ ಕಾಡುಮರ ಉಕ್ಕಿನ ಗಟ್ಟಿಗಳಂತಿದ್ದರೆ ಪಂಚರಾತ್ರವು ಭಾಸನಕೈಯಲ್ಲಿ ಅಮೃತ ಸ್ವರದಿಂದ ನುಡಿಯುತ್ತಿರುವ ವೀಣೆಯಾಗಿದೆ.' (ಪಂಚರಾತ್ರವನ್ನು ಕುರಿತ ಮಾತು)

೩ 'ಈ ನಾಟಕವನ್ನು ಓದುತ್ತಿದ್ದರೆ, ನಗುತ್ತ, ಅಳುತ್ತ, ಜಗಳವಾಡುತ್ತ, ಮಹಾಸಮಾರಂಭಗಳಲ್ಲಿ ಬೆರೆಯುತ್ತ, ಗಡಿಬಿಡಿಯಿಂದ ಓಡಾಡುತ್ತ ಇರುವ ಹಲವು ಹದಿನೆಂಟು ಜಾತಿಯ ಜನರು ತುಂಬಿದ ಮಹಾನಗರವು ಕಣ್ಣಿಗೆ ಕಟ್ಟಿದಂತಾಗುತ್ತದೆ.' (ಮೃಚ್ಛಕಟಿಕವನ್ನು ಕುರಿತ ಮಾತು)

೪ 'ಇರಾವತಿ, ಕೋಪ ಮಾತ್ಸರ್ಯಗಳ ಮುದ್ದೆಯಾದ ಹುಳಿಗಾಯಿ; ಧಾರಿಣೀ ಔಶೀನರೀದೇವಿಯರು ವಿಧಿಯಿಲ್ಲದೆ ಬಂದಾಗ ಗಂಡನೊಡನೆ ಹೇಗೋ ಹಾಗೆ ಸಮಾಧಾನ ಮಾಡಿಕೊಂಡಿದ್ದ ದೋರಹಣ್ಣುಗಳು; ಶಕುಂತಲೆ ಪತಿಗೋಸ್ಕರ ಪೂರ್ಣ ಸ್ವಾರ್ಥತ್ಯಾಗ ಮಾಡಿದ ಮೃದುಮಧುರವಾದ ಅಖಂಡ ಪುಣ್ಯಫಲ.' (ಮೂವರಪಾತ್ರವನ್ನೂ ಕುರಿತು ಆಡಿದ ಮಾತುಗಳು)

೫ 'ರಾಕ್ಷಸನ ಈ ಸಾತ್ವಿಕಗುಣವು ಮನೆಯಲ್ಲಿ ಪ್ರೇಮವಾಗಿಯೂ, ಮಿತ್ರನಲ್ಲಿ ಸ್ನೇಹವಾಗಿಯೂ, ದೀನರಲ್ಲಿ ದಯೆಯಾಗಿಯೂ, ರಾಜನಲ್ಲಿ ಭಕ್ತಿಯಾಗಿಯೂ ಕಂಗೊಳಿಸುತ್ತದೆ. ಅವನ ಈ ಸ್ನೇಹ ದಯಾಪರತೆಗಳನ್ನು ಮರೆಯಾಗಿ ಉಪಯೋಗಿಸಿಕೊಂಡು ಚಾಣಕ್ಯನು ರಾಕ್ಷಸನನ್ನು ಹಿಡಿದು ಹಾಕುತ್ತಾನೆ.' (ಇಬ್ಬರ ಪಾತ್ರಗಳನ್ನೂ ಕುರಿತು ಆಡಿದ ಮಾತು.)

೬ 'ನಿಸರ್ಗ ಪ್ರತಿಭೆ ಕಾಲದೋಷದಿಂದ ಕುಂದುವುದಕ್ಕೆ ವೇಣೀಸಂಹಾರವು ಒಂದು ಒಳ್ಳೆಯ ಉದಾಹರಣೆ.' (ನಾಟಕದ ವಿಮರ್ಶೆಯ ಒಂದು ವಾಕ್ಯ)

೭ 'ಅವನ ಮನೋಧರ್ಮವು ಸರಸವೂ, ಸರಳವೂ, ಮೃದುವೂ, ಮಧುರವೂ ಅಲ್ಲ; ಪಾಂಡಿತ್ಯ ಪರಿಜ್ಞಾನ ಆತ್ಮವಿಶ್ವಾಸಗಳಿಂದ ಗಂಭೀರವೂ ಘನೀಭೂತವೂ ಆದದ್ದು........ಭವಭೂತಿಯ ಗ್ರಂಥಗಳಿಂದ ಅವನ ಪಾತ್ರಗಳ ಚಿತ್ರಗಳಿಗಿಂತಲೂ ಅವನ ಚಿತ್ರವು ದೃಢವಾಗಿ ನಿಲ್ಲುತ್ತದೆ; ಅವನು ಒಳ್ಳೆಯ ತೇಜಶ್ಶಾಲಿ; ಅವನದು ಸಂಸ್ಕೃತ ಸಾಹಿತ್ಯದಲ್ಲಿ ಒಂದು ಅಪೂರ್ವ ವ್ಯಕ್ತಿತ್ವ!'

ವಾಕ್ಯವಾಕ್ಯಗಳಲ್ಲಿಯೂ ಹೀಗೆ ಶಾಸ್ತ್ರಿಗಳವರ ಬರವಣಿಗೆ ಖಚಿತವಾಗಿ ನಿಶಿತವಾಗಿ ಇದ್ದೂ ರಸರಸವಾಗಿ ಇರುತ್ತದೆ. ಮುಟ್ಟಿದ ಎಡೆ ಒತ್ತಿದ ಕಡೆ ರಸ ಒಸರುವ ಕೋಲು ಜೇನಿನ ಹಿಣಿಲು ಈ ಶಾಸ್ತ್ರಿಗಳ ಬರವಣಿಗೆ. ಅವರ ಶೈಲಿ ತುಷ್ಟಿ ಪುಷ್ಟಿ ಶಾಂತಿ ಕಾಂತಿ ದಾಂತಿಗಳೆಲ್ಲದರ ಒಂದು ಪಂಚಕಜ್ಜಾಯ; ಅಲ್ಲಲ್ಲಿ ಅಲ್ಲಲ್ಲಿ ಅದು ಪಂಚಗವ್ಯವೂ ಹೌದು! ಈ ವಾಕ್ಯ ವಾಖ್ಯೆ 'ಸಂಸ್ಕೃತ ನಾಟಕ' ವಾಚನವನ್ನೇ ಅಪೇಕ್ಷಿಸುತ್ತದೆ. ಸಂಸ್ಕೃತ ನಾಟಕದಲ್ಲಿ ಬರುವ ಶಾಸ್ತ್ರಿಗಳ ವ್ಯಾಖ್ಯೆ ಸಂಸ್ಕೃತದ ನಾಟಕಗಳ ವಾಚನವನ್ನೇ ಅಪೇಕ್ಷಿಸುತ್ತದೆ. ಒಳ್ಳೆಯ ವಿಮರ್ಶೆಗೆ ಇದಕ್ಕೆ ಮೀರಿದ ಪ್ರತಿಫಲವೇನಿದೆ?

# ಶಾಸ್ತ್ರಿಗಳ ಸೂಕ್ತಿಗಳು

**ಹೆಣ್ಣಿನ ದಾಳಿ :**

ಗಂಡು ಹೆಣ್ಣುಗಳ ವ್ಯವಹಾರದಲ್ಲಿ ಸಾಧಾರಣವಾಗಿ ಗಂಡು ದುಷ್ಟತನದಿಂದ ಮುಂದು ವರಿಯುವುದು ಎಲ್ಲರೂ ಕಂಡ ಸಂಗತಿ. ಆದರೆ ಹೆಣ್ಣೇ ಕಂದರ್ಪನ ಕಬ್ಬು ಬಿಲ್ಲನ್ನೂ ಹೂ ಬಾಣಗಳನ್ನೂ ಹಿಡಿದು ಷಿಕಾರಿ ಮಾಡುವುದಕ್ಕೆ ಹೊರಟರೆ ಗಂಡಿನ ಗತಿಯೇನು?

(ಬಂಕಿಮಚಂದ್ರ, ಪು. ೮೨)

* * *

**ಪಾಠ :**

ಎಂಥ ಬುದ್ಧಿವಂತನಾದರೂ ಇತರರಿಂದ ಇನ್ನೂ ಬುದ್ಧಿ ಕಲಿಯುವುದು ಇದ್ದೇ ಇರುತ್ತದೆ; ಒಳ್ಳೆಯವರಿಗಿಂತ ಕೆಟ್ಟವರಿಂದ ಕಲಿಯುವುದು ಇರುತ್ತದೆ.

(ಶ್ರೀಪತಿಯ ಕಥೆಗಳು, ಪು. ೧೯೨)

* * *

**ಅತ್ತೆ–ಸೊಸೆ :**

ಕಛೇರಿಯಲ್ಲಿ ಸಾಮಾನ್ಯವಾಗಿ ಅಧಿಕಾರಿಗಳು ಅತ್ತೆ, ಗುಮಾಸ್ತರು ಸೊಸೆ. ಆಫೀಸರು ಅಪ್ರಯೋಜಕನಾಗಿದ್ದರೆ ಗುಮಾಸ್ತರೇ ಅತ್ತೆ. ಮನೆಯಲ್ಲಿ, ಸೊಸೆ ಮೆತ್ತಗಿದ್ದರೆ ಅತ್ತೆ ಅತ್ತೆಯಾಗುವುದಿರಲಿ, ಅತ್ತಿಗೆ ನಾದಿನಿಯರು ಮುಂತಾಗಿ ಮನೆ ಮಂದಿಯೆಲ್ಲಾ, ಹುಡುಗರು ಮಕ್ಕಳು ಸಹ, ಅತ್ತೆಯರೇ! ಸೊಸೆ ಗಟ್ಟಿಗಿತ್ತಿಯಾದರೆ ಅವಳೇ ಅತ್ತೆ; ಅತ್ತೆ, ಮಾವ ಅತ್ತಿಗೆ, ನಾದಿನಿ, ಗಂಡ, ಮಕ್ಕಳು ಎಲ್ಲಾ ಸೊಸೆ.

(ಅದೇ, ಪು. ೧೨೭)

* * *

**ಹೆಣ್ಣು :**

ಇದ್ದರೆ ದೇವಿಯರಂತೆ ಸ್ವರ್ಗ ಸುಖದಲ್ಲಿರುತ್ತಾರೆ, ಇಲ್ಲದಿದ್ದರೆ ಅವರ ಬಾಳು ನಾಯಿಯ ಬಾಳು! ಅದೂ ಅಲ್ಲದಿದ್ದರೆ, ಅನುಕೂಲವಿದ್ದರೂ ಅನುಭವಿಸುವುದಕ್ಕೆ ಪ್ರಾಪ್ತಿಯಿಲ್ಲದೆ ಅಶಿಕ್ಷೆಯಿಂದಲೂ ಅವಿವೇಕದಿಂದಲೂ ಮುಳ್ಳು ಪೊದೆಯಂತೆ ಇರುತ್ತಾರೆ. ತಮಗೆ ಹಿತವಿಲ್ಲ, ಮತ್ತೊಬ್ಬರಿಗೆ ಸುಖವಿಲ್ಲ.

(ಅದೇ ಪು. ೫೬)

* * *

**ಹುಲಿ–ಹೆಣ್ಣು :**

'ಹುಲಿಗೆ ತನ್ನ ಕಾಡೇನು ಪರರ ಕಾಡೇನು?' ಎಂಬುದೊಂದು ಗಾದೆಯಿದೆ. ಅಂಥ ಹುಲಿಗೂ ತನ್ನ ಸಂಸಾರ, ಪರರ ಸಂಸಾರ, ತನ್ನ ಗಂಡ ಮಕ್ಕಳು, ಇತರರ ಗಂಡ ಮಕ್ಕಳು ಎಂಬ ಪರಿಜ್ಞಾನವಿರುತ್ತದೆ; ಅಭಿಮಾನ ಅಂತಃಕರಣಗಳಿರುತ್ತವೆ. ಆದರೆ ಕೆಲವು ಹೆಂಗಸರಿಗೆ ಅದೂ ಇರುವುದಿಲ್ಲ.

(ಕಥಾಮೃತ, ಪೀಠಿಕೆ, ಪು. ೫೮)

ಡಾ. ಪ್ರಭುಶಂಕರ

# ಎರಡು ಸಂಗತಿಗಳು

"ಪ್ರೊ. ಕೃಷ್ಣಶಾಸ್ತ್ರಿಗಳು ನಿನ್ನನ್ನು ನೋಡಬೇಕಂತೆ." ಹೀಗೆ ಹೇಳಿದವರು ಆಗ "ಪ್ರಬುದ್ಧ ಕರ್ಣಾಟಕ"ದ ಸಂಪಾದಕರಾಗಿದ್ದ ಶ್ರೀ ಎನ್. ಅನಂತರಂಗಾಚಾರ್ಯರು. ನನಗೆ ಆಶ್ಚರ್ಯವಾಯಿತು. "ಏಕೆ?" ಎಂದು ಕೇಳಿದೆ. ಅವರು ಹೇಳಿದರು: "ಗಾಂಧೀಜಿ ಮೇಲೆ ನೀನು ಬರೆದ ಲೇಖನ ಓದಿದರಂತೆ. ಅದರ ಸಂಬಂಧವಾಗಿ."

ಅಂದು ಸಂಜೆಯೇ ನಾನು ಪ್ರೊ. ಕೃಷ್ಣಶಾಸ್ತ್ರಿಗಳವರನ್ನು ಭೇಟಿಮಾಡಿದೆ. ಅವರಿಗೆ ನಮಸ್ಕಾರಮಾಡಿ ನನ್ನ ಹೆಸರು ಹೇಳಿದೆ. ತಕ್ಷಣ ಅವರು "ನೋಡಪ್ಪ, 'ಪ್ರಬುದ್ಧ ಕರ್ಣಾಟಕ'ದಲ್ಲಿ ಗಾಂಧೀಜಿ ಮೇಲೆ ನೀನು ಬರೆದ ಲೇಖನ ಓದಿದೆ. ತುಂಬ ಚನ್ನಾಗಿದೆ. ನಿನ್ನ ವಯಸ್ಸು ಚಿಕ್ಕದು. ಆದರೆ ಬರಹ ಮೆಚ್ಚಿದೆ. ಇನ್ನೂ ಬರಿ."

ಆ ದಿನದ ಭೇಟಿಯನ್ನು ನೆನಸಿಕೊಂಡರೆ ಈಗಲೂ ಹೃದಯ ತುಂಬಿ ಬಂದು ಕಣ್ಣು ಒದ್ದೆಯಾಗುತ್ತದೆ. ಅವರು ವಿದ್ವತ್ತಿನ ಶಿಖರ, ಪ್ರಾಧ್ಯಾಪರಾಗಿ ನಿವೃತ್ತರಾದವರು. ನಾನು ಆಗಿನ್ನೂ ಮೊದಲನೆಯ ಆನರ್ಸಿನಲ್ಲಿ ಓದುತ್ತಿದ್ದ ವಿದ್ಯಾರ್ಥಿ. ಅವರು ನನ್ನ ಒಂದು ಲೇಖನ ಓದಿದ್ದಾರೆ, ಹೇಳಿ ಕಳುಹಿಸಿದ್ದಾರೆ, ಮೆಚ್ಚಿ ಇನ್ನೂ ಬರೆ ಎನ್ನುತ್ತಿದ್ದಾರೆ. ಆ ಲೇಖನವನ್ನು ಈಗ ಓದಿದರೆ ನನಗೇ ಬೇಸರವಾಗುತ್ತದೆ! ಆದರೆ ಅವರ ಹೃದಯದ ಔದಾರ್ಯ, ಕಿರಿಯ ಬರಹಗಾರರಿಗೆ ಅವರು ಪ್ರೋತ್ಸಾಹ ಕೊಡುತ್ತಿದ್ದ ರೀತಿ ಅವರ ವಿಷಯದಲ್ಲಿ ಗೌರವವನ್ನು ಮೂಡಿಸಿದುವು.

ಮತ್ತೆ ನನಗೆ ಶ್ರೀ ಕೃಷ್ಣಶಾಸ್ತ್ರಿಗಳ ಹತ್ತಿರದ ಒಡಾಟ ದೊರೆತದ್ದು ಬೆಂಗಳೂರಿನ ಶ್ರೀ ರಾಮಕೃಷ್ಣಾಶ್ರಮದಲ್ಲಿ. ಆಗ ಅವರು ಕವಿ ರವೀಂದ್ರರ ನಿಬಂಧಗಳನ್ನು ಬಂಗಾಳಿಯಿಂದ ಕನ್ನಡಕ್ಕೆ ಅನುವಾದ ಮಾಡುತ್ತಿದ್ದರು. ಬಂಗಾಳದ ಸ್ವಾಮಿಗಳು—ಶ್ರೀ ಸಂಜ್ಞಾನಂದರು–ಮಠದಲ್ಲಿದ್ದರು. ಅವರನ್ನು ನೋಡಲು ವಾರದಲ್ಲಿ ಮೂರು ದಿನ ಶ್ರೀ ಶಾಸ್ತ್ರಿಗಳು ಮಧ್ಯಾಹ್ನ ನಾಲ್ಕು ಗಂಟೆಗೆ ಸರಿಯಾಗಿ ಕೈಯಲ್ಲಿ ಒಂದು ಚೀಲ ಹಿಡಿದುಬರುತ್ತಿದ್ದರು. ಚೀಲದಲ್ಲಿ ತಾವು

ಮಾಡುತ್ತಿದ್ದ ಅನುವಾದ ಕಾರ್ಯದ ಹಸ್ತಪ್ರತಿ. ಮೂಲ ಬಂಗಾಳಿಯಲ್ಲಿ ತಮಗೆ ತಲೆದೋರಿದ ಸಂದೇಹಗಳನ್ನು ಚರ್ಚೆಮಾಡಿ ನಿವಾರಿಸಿಕೊಳ್ಳಲು ಶ್ರೀ ಶಾಸ್ತ್ರಿಗಳು ಸ್ವಾಮಿಗಳ ಬಳಿ ಬರುತ್ತಿದ್ದರು. ನಿಯತ ದಿನಗಳಲ್ಲಿ ನಾಲ್ಕು ಗಂಟೆಗೆ ಅವರು ಖಂಡಿತ ಬಂದೇ ತೀರುತ್ತಿದ್ದರು. ಸ್ವಾಮಿಗಳು ಯುವಕರು. ಅವರನ್ನು ನಾವು ತಮಾಷೆಮಾಡುತ್ತಿದ್ದೆವು: "ನಿಮ್ಮ ವೃದ್ಧಶಿಷ್ಯರು ಬರುವ ಹೊತ್ತಾಯಿತು. ಸಿದ್ಧರಾಗಿ!"

ಒಂದು ದಿನ ಸ್ವಾಮಿಗಳನ್ನು ಶ್ರೀ ಶಾಸ್ತ್ರಿಗಳು ಭಿಕ್ಷೆಗೆ ಕರೆದರು. ಊಟವಾದ ಮೇಲೆ ಶಾಸ್ತ್ರಿಗಳು ನಮಸ್ಕಾರ ಮಾಡಲು ಬಾಗಿದರು. "ಬೇಡ ಬೇಡ" ಎಂದು ಸ್ವಾಮಿಗಳು ದೂರ ಸರಿಯುತ್ತಾರೆ. ಶಾಸ್ತ್ರಿಗಳು ಬಿಡುತ್ತಿಲ್ಲ. "ಉಂಟೇ ನೀವು ಸ್ವಾಮಿಗಳು, ಪಾಠ ಹೇಳಿದ ಗುರುಗಳು." ಸ್ವಾಮಿಗಳೂ ನಮಸ್ಕಾರದ ಪ್ರಯತ್ನ ದಲ್ಲಿ ತೊಡಗಿದರು—"ನೀವು ಹಿರಿಯರು, ವೃದ್ಧರು, ಜ್ಞಾನಿಗಳು!" ಪರಸ್ಪರ ನಮಸ್ಕಾರಗಳಲ್ಲಿ ಪರ್ಯವಸನವಾಯಿತು.

ಈಗ ಶಾಸ್ತ್ರಿಗಳ ಸ್ಮರಣೆಯಾಗುತ್ತಿದೆ. ಜೀವನದ ಕೊನೆಯವರೆಗೂ ಅವರ ಕಲಿಕೆ ನಿಲ್ಲಲಿಲ್ಲ. ಮುಪ್ಪಿನಲ್ಲೂ, ಬಿಸಿಲಿನಲ್ಲಿ ದೂರ ನಡೆದು ಬಂದು, ತಮಗೆ ಇಂಥದು ತಿಳಿಯಲಿಲ್ಲ, ಇಂಥದರ ಅರ್ಥ ಸ್ಪಷ್ಟವಾಗಲಿಲ್ಲ ಎಂದು ಹೇಳಿ, ವಿವರಣೆ ಕೇಳಿ ಖಚಿತಮಾಡಿಕೊಂಡರು. ಹಾಗೆ ಖಚಿತವಾದಮೇಲೆಯೇ ಅವರು ಬರೆಯಬೇಕಾದದ್ದನ್ನು ಬರೆದರು. ಅವರ ಜ್ಞಾನಪ್ರಾಮಾಣಿಕತೆ ಕಲಿಯುವ ಜನಾಂಗದ ಮುಂದೆ ಸದಾ ಹೊಳೆಯಬೇಕಾದ ಆದರ್ಶ!

ಎಂ. ಮರಿಯಪ್ಪಭಟ್ಟ

# ಕನ್ನಡ ಗದ್ಯವಿಧಾತ

ಹೊಸಕನ್ನಡಕ್ಕೊಂದು ಅತಿ ಸುಂದರವಾದ, ಸಮತೂಕದ ಶೈಲಿಯನ್ನು ರೂಪಿಸಿದ ಲೇಖಕರಲ್ಲಿ ಆಚಾರ್ಯ ಕೃಷ್ಣಶಾಸ್ತ್ರಿಗಳಿಗೆ ಅಗ್ರಸ್ಥಾನವನ್ನು ಕೊಡಬಹುದು. ಹಿತಮಿತವಾಗಿ ಉಚಿತವಾಗಿ ಸಂಸ್ಕೃತ ಪದಗಳನ್ನು ಕನ್ನಡ ಪದಗಳೊಂದಿಗೆ ಪೋಣಿಸಿಕೊಂಡು ಹೃದಯಂಗಮವಾಗಿ ಹಾಗೂ ಪರಿಣಾಮಪೂರ್ವಕವಾಗಿ ಬರೆಯುವ ನೈಪುಣ್ಯ ಅವರಲ್ಲಿತ್ತು. ಉದ್ದಾಮ ಸಂಸ್ಕೃತಪಂಡಿತರಾಗಿದ್ದರೂ ಸಂಸ್ಕೃತ ಭೂಯಿಷ್ಠವಾದ ಶೈಲಿಯನ್ನು ಅವರೆಲ್ಲಿಯೂ ಬಳಸಿದಂತಿಲ್ಲ. ನಯಸೇನನು ಹೇಳಿದ "ತಕ್ಕುದೆ ಬೆರೆಸಲ್ಕೆ ಘೃತಮುಮಂ ತೈಲಮುಮಂ" ಎಂಬ ಮಾತನ್ನು ಚೆನ್ನಾಗಿ ಅರಿತು ಆಚರಿಸಿದ ಉಭಯಭಾಷಾಪಂಡಿತರವರು. ಉಚಿತ ಪದ ಪ್ರಯೋಗ ಮಾಡುವುದರಲ್ಲಿ ಅವರನ್ನು ಮೀರಿಸುವವರು ದುರ್ಲಭ. ಅವರಿಟ್ಟ ಪದಗಳನ್ನು ತೆಗೆದು ಅಲ್ಲಿ ಬೇರೆ ಪದಗಳನ್ನು ಇಡುವಂತಿಲ್ಲ ಅವರ ಬರವಣಿಗೆ. ವಚನಭಾರತ, ಕಥಾಮೃತ, ಬಂಕಿಮಚಂದ್ರ ಮೊದಲಾದ ಅವರ ಉದ್ಧೃಕೃತಿರತ್ನಗಳ ಒಂದೊಂದು ವಾಕ್ಯವೂ ಮೇಲಿನ ಅಭಿಪ್ರಾಯಕ್ಕೆ ಉದಾಹರಣೆ.

"ಸಂಸ್ಕೃತ ನಾಟಕ" ಎಂಬ ಗ್ರಂಥ ಅವರ ವಿಮರ್ಶನ ವಿಚಕ್ಷಣತೆಯನ್ನು ಬೊಟ್ಟಿಟ್ಟು ತೋರುವುದು. "ಶ್ರೀಪತಿಯ ಕಥೆಗಳು" ಅವರು ಉತ್ತಮ ಕಥಾಲೇಖಕರೆಂಬುದನ್ನೂ ಸಾರುವುವು. "ಹರಿಶ್ಚಂದ್ರಕಾವ್ಯ ಸಂಗ್ರಹ" ಅವರ ಕಾವ್ಯ ಸಂಪಾದನಾ ಕಲೆಯ ಹೆಗ್ಗುರುತು. ಅವರೋರ್ವ ಸವ್ಯಸಾಚಿ.

ಪ್ರಾಯಶಃ ಅವರ ಕೀರ್ತಿ ಚಿರಸ್ಥಾಯಿಯಾಗಿರುವುದಕ್ಕೆ ಅವರ ಇನ್ನೆರಡು ಕೊಡುಗೆಗಳೂ ಕಾರಣ :

(೧) ಪ್ರಬುದ್ಧ ಕರ್ಣಾಟಕದ ಹುಟ್ಟು ಮತ್ತೆ ಬೆಳವಣಿಗೆಗೆ ಇವರೂ ಟಿ. ಎಸ್. ವೆಂಕಣ್ಣಯ್ಯನವರೂ ಕಾರಣಪುರುಷರೆನ್ನಬಹುದು. ಕರ್ಣಾಟಕದಲ್ಲಿ ಕನ್ನಡ ಭಾಷೆಯಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳ ಸೃಷ್ಟಿ, ವಿಜ್ಞಾನ ಪ್ರಸಾರ, ಸಂಸ್ಕೃತಿದರ್ಶನ, ಗ್ರಂಥಾವಲೋಕನ ಇತ್ಯಾದಿ ಅಮೂಲ್ಯಸೇವೆಯನ್ನು ಅನುಸ್ಯೂತವಾಗಿ ಸಲ್ಲಿಸಿಕೊಂಡು ಬಂದ ಏಕೈಕ ಪತ್ರಿಕೆಯೆಂದರೆ ಪ್ರಬುದ್ಧ ಕರ್ಣಾಟಕ.

ಈ ಮಹಾಪತ್ರಿಕೆಗೆ ಜಾಯಮಾನವನ್ನು ನಿರೂಪಿಸಿದವರು ಅವರು. ಇದರ ಮೂಲಕ ನೂರಾರು ಮಂದಿ ಲೇಖಕರು ಮುಂದೆ ಬಂದರು. ಸಾವಿರಾರು ಲೇಖನಗಳು ಬೆಳಕನ್ನು ಕಂಡವು. ನಿಯತಕಾಲಿಕ ಪತ್ರಿಕೆಗಳಲ್ಲಿ ಪ್ರಬುದ್ಧ ಕರ್ಣಾಟಕದ ಹಿರಿಮೆಯೆಂತೆಂದರೆ, ಆ ಪತ್ರಿಕೆಯಲ್ಲಿ ಲೇಖನವೊಂದು ಸ್ವೀಕೃತವಾಗಿ ಪ್ರಕಟವಾಗುವುದೆಂದರೆ, ಬರಹಗಾರನಿಗೆ ಖ್ಯಾತಿ ದೊರೆತಂತೆ, ಆತನು "ಅಕ್ಕರಗೋಟ್ಟಿ"ಗೆ ಸೇರಿದಂತೆ.

(೨) ಇಂದಿಗೆ ಕನ್ನಡ ಸಾಹಿತ್ಯಪರಿಷತ್ತಿನ ವತಿಯಲ್ಲಿ ಸಂಪಾದಿತವಾಗುತ್ತಲಿರುವ ಕನ್ನಡ ನಿಘಂಟುವಿಗೆ ಬುನಾದಿ ಹಾಕಿದವರು ಡಾ. ಕೃಷ್ಣಶಾಸ್ತ್ರಿಗಳು. ಯಾವೊಂದು ಪ್ರತಿಫಲಾಪೇಕ್ಷೆಯಿಲ್ಲದೆ ನಿಸ್ಪೃಹತೆಯಿಂದ ದಿನನಿತ್ಯ ಬೆಳಿಗ್ಗಿನಿಂದ ಸಂಜೆತನಕ ಒಬ್ಬಿಬ್ಬರು ಸಹಾಯಕರೊಡನೆ ನಿಘಂಟು ಕಚೇರಿಯಲ್ಲಿ ದುಡಿಯುತ್ತಿದ್ದರು. ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ಮುಖ್ಯ ಸಂಪಾದಕರಾಗಿ ನೇಮಕವಾದ ಮೇಲೆ ಅಧ್ಯಕ್ಷರಾಗಿದ್ದ ಇವರ ಕಾರ್ಯಭಾರ ತುಸ ಕಡಿಮೆಯಾಯಿತಂತೆ. ಆ ನಿಘಂಟುವಿನ ಮಾದರಿಯ ಪುಟಗಳನ್ನು ಪ್ರಕಟಿಸಿ, ಮುಂದಿನ ಕೆಲಸಕ್ಕೆ ಮಾರ್ಗದರ್ಶನ ಮಾಡಿಕೊಟ್ಟರು. ಅವರು ತಯಾರಿಸಿದ ಪುಟಗಳಲ್ಲಿ ಅದ್ಭುತ ಪಾಂಡಿತ್ಯ, ನಿಶ್ಚಯಜ್ಞಾನ, ಋಜುತ್ವ, ಸರಳತೆಗಳನ್ನು ಕಾಣುತ್ತೇವೆ.

ಡಾ. ಶಾಸ್ತ್ರಿಗಳ ದುಡಿಮೆಯ ವಿವಿಧ ಪ್ರಕಾರಗಳನ್ನು ಅನೇಕ ಮಂದಿ ವಿದ್ವಾಂಸರು ಕೊಂಡಾಡಿರುತ್ತಾರೆ. ಅವರ ಗುಣಸ್ವಭಾವಗಳ ಕುರಿತು ಹೇಳಿರುತ್ತಾರೆ.

ಈ ಸಂದರ್ಭದಲ್ಲಿ ಅವರ ಕರ್ತವ್ಯನಿಷ್ಠೆಯನ್ನು ಕುರಿತು ಒಂದು ಸನ್ನಿವೇಶ ನನ್ನ ನೆನಪಿಗೆ ಬರುತ್ತದೆ. ೧೯೪೩ರಲ್ಲಿ ಅವರೂ ನಾನೂ ಇನ್ನೊಬ್ಬರೂ ಮದ್ರಾಸು ವಿಶ್ವವಿದ್ಯಾನಿಲಯದ ಕನ್ನಡ ಎಂ. ಎ. ಪರೀಕ್ಷಕರಾಗಿದ್ದೆವು. ಅವರು ಅಧ್ಯಕ್ಷರು. ಪ್ರಶ್ನ ಪತ್ರಗಳನ್ನು ತಯಾರಿಸಿದ ಮೇಲೆ ಮೀಟಿಂಗಿನಲ್ಲಿ ಅವನ್ನು ಸಮಾಲೋಚಿಸಿ ಒಪ್ಪಿಕೊಂಡು ಒಂದೊಂದರ ನಾಲ್ಕಾರುಪ್ರತಿಗಳನ್ನು ಮಾಡಿ, ಮತ್ತೆ ಅಧ್ಯಕ್ಷರು ಲಕೋಟೆಯೊಳಗೆ ಅವನ್ನು ಹಾಕಿ, ಮುಚ್ಚಿ, ಮುದ್ರೆಯೊತ್ತಿ ರಿಜಿಸ್ಟ್ರಾರರಿಗೆ ತಲಪಿಸಬೇಕು. ಆ ದಿನ ಮೀಟಿಂಗು ಮುಗಿಯುವಾಗ ಸಾಯಂಕಾಲ ೬ ಘಂಟೆ ಆಗಿತ್ತು. ರಿಜಿಸ್ಟ್ರಾರು ಅಷ್ಟರಲ್ಲಿ ಆಫೀಸು ಬಿಟ್ಟಿದ್ದರು. ಮತ್ತೂ ಒಂದು ಘಂಟೆಯ ಕೆಲಸವಿತ್ತು. ಆಗ ನಾನು ಹೇಳಿದೆ! "ಸ್ವಾಮಿ ತಮಗೆ ಇಂದೇ ಹೋಗಬೇಕಾಗಿದೆ, ಎಂದಿದ್ದಿರಿ, ನಾನು ಪ್ರಶ್ನಪತ್ರಗಳನ್ನು ಸೀಲ್ ಮಾಡಿ, ರಿಜಿಸ್ಟ್ರಾರಿಗೆ ತಲಪಿಸುತ್ತೇನೆ." ಆಗ ಅವರು ಹೇಳಿದರು "ನನ್ನ ತಲೆನೋವನ್ನು ನಿಮಗೇಕೆ ವರ್ಗಾಯಿಸಲಿ, ಪರವಾಯಿಲ್ಲ, ಈ ದಿನ ರೈಲು ತಪ್ಪಿದರೆ, ನಾಳೆ ಬೆಳಗ್ಗಿನ ರೈಲಿನಲ್ಲಿ ಹೊರಡುತ್ತೇನೆ. ನಾಳೆ ಅಂತು ಭಾನುವಾರ. ಈಗ ನಾನೇ ಸೀಲ್ ಮಾಡುತ್ತೇನೆ. ಆ ಕೆಲಸ ಮುಗಿಸಲೇ ಬೇಕು." ಹಾಗೆಯೇ ಮಾಡಿದರು. ಆ ದಿನದ ರೈಲಿಗೆ ಅವರು ಹೋಗಲಿಲ್ಲ. ವಿದ್ಯಾರ್ಥಿಗಳ ಸಂಖ್ಯೆ ಕನ್ನಡ ಎಂ. ಎ. ಗೆ

ಕಡಿಮೆಯಾಗಿದ್ದುದರಿಂದ ಪ್ರಶ್ನಪತ್ರಗಳ ನಾಲ್ಕಾರು ಹಸ್ತಪ್ರತಿಗಳನ್ನು ತಯಾರಿಸಲು ಒಮ್ಮೊಮ್ಮೆ ರಿಜಿಸ್ಟ್ರಾರು ಹೇಳುತ್ತಿದ್ದರು. ಮಿತವ್ಯಯ ದೃಷ್ಟಿಯಿಂದ ಅಚ್ಚು ಹಾಕಿಸುತ್ತಿರಲಿಲ್ಲ. ಈ ಕ್ರಮವನ್ನು ಕಂಡು ಶಾಸ್ತ್ರಿಗಳು ರೇಗಿದರು. "ಕೈ ಬರಹದಲ್ಲಿ ಪ್ರಶ್ನಪತ್ರಗಳನ್ನು ಕೊಡುವುದು ಅಭ್ಯರ್ಥಿಗಳಿಗೆ ಅನ್ಯಾಯ. ಅವರು ಪರೀಕ್ಷೆ ಶುಲ್ಕತೆರುವುದಿಲ್ಲವೆ? ಕೆಲವು ಪರೀಕ್ಷಕರ ಕೈ ಬರಹವನ್ನು ಓದುವುದೂ ಕಷ್ಟ" ಎಂದು ಗುಡುಗಿದರು. ಮರುವರ್ಷ ತನಗೆ ಪರೀಕ್ಷಕತ್ವ ಬೇಡವೆಂದು ವಿಶ್ವವಿದ್ಯಾನಿಲಯಕ್ಕೆ ಬರೆದರು. ಒಪ್ಪಿಕೊಂಡ ಕೆಲಸವನ್ನು ನಿಷ್ಠೆಯಿಂದ ಮಾಡುವ, ಮನಸ್ಸಿಗೆ ಒಲ್ಲದ ಗೌರವವನ್ನು ನಿರಾಕರಿಸುವ ಶಾಸ್ತ್ರಿಗಳಂತಹ ಧೀರರು ತೀರ ವಿರಳ.

ಕನ್ನಡ ನಿಘಂಟು ಕಚೇರಿಯಲ್ಲಿ ಅವರು ಎಣಿಸಿದಂತೆ ಕಾರ್ಯ ಸಾಗುತ್ತಿರಲಿಲ್ಲ. ಅವರ ದೇಹಾರೋಗ್ಯವೂ ಕೆಡುತ್ತಲಿತ್ತು. ಅವರು ಅಲ್ಲಿಂದ ನಿವೃತ್ತರಾಗುವ ಮುನ್ನ ನನಗೊಂದು ಪತ್ರಬರೆದು ನಿಘಂಟು ಸಂಪಾದಕ ಸಮಿತಿಯಲ್ಲಿ ತುಳು ಕನ್ನಡಗಳನ್ನು ಬಲ್ಲ ಒಬ್ಬ ಸದಸ್ಯ ಬೇಕೆಂದೂ ಮದ್ರಾಸು ವಿಶ್ವವಿದ್ಯಾನಿಲಯದ ಅಧ್ಯಾಪಕನಾದ ನಾನು ಬಂದರೆ ತುಂಬ ಉಪಕಾರವಾಗುವುದೆಂದೂ ಕೇಳಿದರು. ನಾನು ಅವರ ಕರೆಯನ್ನು ಒಪ್ಪಿಕೊಂಡೆ. ಅವರು ಅಧ್ಯಕ್ಷರಾಗಿದ್ದ ಒಂದೆರಡು ಸಭೆಗಳಲ್ಲಿ ಭಾಗವಹಿಸಿದೆ. ಅದೆಂತಹ ಅನುಭವ! ಜ್ಞಾನ ಭಾಸ್ಕರರಾದ ಅವರ ಮುಂದೆ ಎಲ್ಲ ಕತ್ತಲೆಯೂ ಮಾಯವಾಗುತ್ತಿತ್ತು!

ಅವರು ಹಾಕಿಕೊಟ್ಟ ಮಾರ್ಗದಲ್ಲಿ ಸಾಗೋಣ. ಉತ್ಸಾಹ, ಸಾಹಸ, ಧೈರ್ಯ, ಬುದ್ಧಿಶಕ್ತಿ, ಪರಾಕ್ರಮಗಳು ಏಕತ್ರ ಸಮ್ಮಿಳಿತವಾದ ಕನ್ನಡದ ಕಡುಗಲಿ ಕೃಷ್ಣಶಾಸ್ತ್ರಿಗಳ ಯಶಸ್ಸು ಅಮರವಾಗಲಿ!

# ರತ್ನಪರೀಕ್ಷಕ

...ನನ್ನೊಳಗೆ ಕನ್ನಡ ವಾಂಛಲ್ಯ ಅಂಕುರವಾಗಿ ಹೊರ ಹೊಮ್ಮಿ ಎಲೆಗೂಡಿ ಬೆಳೆದು ಸಣ್ಣಗಿಡವಾಯ್ತೆಂದು ಹೇಳಬಲ್ಲೆ. ಅದಕ್ಕೆ ಆಸಕ್ತ ತೋಟಗಾರರೆಂದರೆ ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು...... ನನ್ನೊಳಗೆ ಈ ಅಭಿಲಾಷೆ ಉಲ್ಬಣವಾಯ್ತು; ನನ್ನ ಕೃತಿಗಳನ್ನು ಯಾರಿಗಾದರೂ ಒಬ್ಬರಿಗೆ ಗುಟ್ಟನಲ್ಲಿ ತೋರಿಸಬೇಡವೆ? ಅದು ಸಾಧುವೊ ಅಸಾಧುವೊ ಎಂಬ ತೀರ್ಪನ್ನು ಅವರಿಂದ ಪಡೆಯಬೇಡವೆ? ಅದು ಭಾರವಾಗಿ ಆತಂಕಗೊಡುತ್ತ ಸುಮ್ಮಸಿರಲೀಸದೆ ಹೋಯ್ತು ನನ್ನನ್ನ. ಅಚ್ಚುಮೆಚ್ಚಿನ ಒಡನಾಡಿಗಳು ಹಲವರಿದ್ದರು ನನಗೆ. ಅವರಾರನ್ನೂ ಒಲಿಯಲಿಲ್ಲ ಕುರಿಯಲಿಲ್ಲ ನನ್ನ ಮನ. ಹದಿನೇಳು ವರ್ಷಗಳ ಹಿಂದೆ ಸನಗೆ ಗುರುಗಳಾಗಿದ್ದ ಆಗ ನಮ್ಮ ಕಾಲೇಜಿನ ಅಧ್ಯಾಪಕ ಗೋಷ್ಠಿಗೆ ಒಂದು ಅಲಂಕಾರವಾಗಿದ್ದ ಕೃಷ್ಣಶಾಸ್ತ್ರಿಗಳೇ ನಿಷ್ಪಕ್ಷಪಾತವಾಗಿ ತೂಗಿ ಬೆಲೆಕಟ್ಟುವ ಸಮರ್ಥರೆಂದು ನೆಚ್ಚಿ ಅವರನ್ನು ಆರಿಸಿಕೊಂಡೆ ರಹಸ್ಯವ್ಯವಹಾರಕ್ಕೆ ... ಹಸ್ತಪ್ರತಿಯ ಹೊತ್ತಗೆಯನ್ನು ಕೈಚೀಲದಲ್ಲಿ ಮರೆಯಾಗಿಸಿ ಹಿಡಿದುಕೊಂಡು ಶಾಸ್ತ್ರಿಗಳ ಕೊಠಡಿಯ ಸಮೀಪ ಹಿಂದಕ್ಕೂ ಮುಂದಕ್ಕೂ ಹೆಜ್ಜೆಯಿಟ್ಟು ನಾಲ್ಕೈದುಬಾರಿ ಭೀತಿಗೊಂಡು ಅನುಮಾನಿಸಿ ತೆಪ್ಪಗೆ ಮನೆಗೆ ಹಿಂತಿರುಗಿದ್ದನ್ನು ನಾ ಮರೆತಿಲ್ಲ. ಕೊನೆಗೊಂದು ಸಾಯಂಕಾಲ ಯಾರೂ ಇಲ್ಲದ ವೇಳೆಯಲ್ಲಿ ಒಳಕ್ಕೆ ಸುಗ್ಗಿ ಅವರನ್ನು ಸಂಧಿಸಿ “ಇದನ್ನು ದಯವಿಟ್ಟು ತಾವು ನೋಡುತ್ತೀರಾ? ನನ್ನದೆಂದು ಯಾರಿಗೂ ತಿಳಿಸಬೇಡಿ!” ಎಂದು ಪ್ರಾರ್ಥಿಸಿ, ಪುಸ್ತಕವನ್ನು ಅವರ ಬಳಿ ಇರಿಸಿ, ಪಾವಿನಿಂದ ಪಾರಾದ ಪಂದೆಯಂತೆ ದೌಡಾಯಿಸಿದೆ....

—ಎಸ್. ವಿ. ರಂಗಣ್ಣ

(‘ರಂಗಬಿನ್ನಪ’ ಪೀಠಿಕೆಯಲ್ಲಿ)

ಎ. ಆರ್. ಕೃಷ್ಣಶಾಸ್ತ್ರೀ

# ಮೂರು ಚಿತ್ರಗಳು

## ೧ ತೆಂಗಿನಕಾಯಿನ ತತ್ತ್ವ

ಸಸ್ಯಮಿವಮರ್ತ್ಯಃ ಪಚ್ಯತೇ ಸಸ್ಯಮಿವಾಜಾಯತೇ ಪುನಃ
ನ ಕರ್ಮಣಾ ನ ಪ್ರಜಯಾಧನೇನ
ತ್ಯಾಗೇನೈಕೇ ಅಮೃತತ್ವ ಮಾ ನಶುಃ |—' ಕಠೋಪನಿಷತ್ತು '

ತೆಂಗಿನಕಾಯಿ ತಿರುಳು, ಚಿಪ್ಪನ್ನು ಬಿಟ್ಟಂತೆ! ಆದರೆ ತಾನಾಗಿ ಕಾಲ ಕ್ರಮದಲ್ಲಿ ಬಿಟ್ಟಿತೋ ಯಾರಾದರೂ ಬಿಡಿಸಿದರೋ? ಬಿಡುವುದಕ್ಕೆ ಸಹಾಯ ವಾದರೂ ಮಾಡಿದರಲ್ಲವೆ? ತೆಂಗಿನ ಮರವಾದರೂ ಅದನ್ನು ತನ್ನಲ್ಲಿಟ್ಟುಕೊಂಡಿದ್ದು ಬಲಿಯುವತನಕ ಕಾಪಾಡಿತು! ಯಾರಾದರೂ ಅದನ್ನು ಎಬ್ಬಿದರೆ ಮುರಿದು ಹೋಗುತ್ತಿತ್ತು ಅಲ್ಲವೇ? ಮುರಿಯದ ಹಾಗೆ ತೆಗೆಯಬಲ್ಲ ಕುಶಲಿಗಳೂ ಇರುತ್ತಾರೆ! ಚೆನ್ನಾಗಿ ಒಣಗಿ ಗಿಟಕಾದಮೇಲೂ ಚಿಪ್ಪನ್ನು ಬಿಡಿಸುವುದಕ್ಕೆ ಯಾರಾದರೂ ಬೇಕಾಗಿಯೇ ಆಗುತ್ತದೆ! ಭೂಮಿಯಲ್ಲಿ ನೆಟ್ಟರೆ ತಾನಾಗಿ ಮುಕ್ತಿ ಪಡೆದು, ರೇಷ್ಮೆ ಹುಳುವಿನಂತೆ ತನ್ನ ಪೂರ್ವಜರ ರೂಪತಾಳಿ ತಾನೇ ಮೇಲಕ್ಕೆ ಬರುವುದಿಲ್ಲವೇ! ಹೌದು. ಆಗ ಅದು ಅನಂತ ಸಂಸಾರದಲ್ಲಿ ಮತ್ತೆ ತೊಳಲುತ್ತದೆ. ಮುಕ್ತಿ ಬೇಕಾದರೆ ಚಿಪ್ಪನ್ನು ಯಾರಾದರೂ ಒಡೆಯಬೇಕು.

ಗಿಟಕಾಗದಿದ್ದರೆ ಕರಟಸಹಿತವಾಗಿ ಕಾಯನ್ನು ಒಡೆದು ಎರಡುಪಾಲು ಮಾಡಿ, ತುರಿ ತುರಿಯಾಗಿ ಸಹಸ್ರಾರು ತುಂಡುಮಾಡಿ ಮೂಲದ ಗುರುತು ಕೂಡ ಸಿಕ್ಕದಂತೆ ಆಳೋ ಅಡಿಗೆಯವನೋ ಚಿತ್ರಹಿಂಸೆಗೆ ಗುರಿಮಾಡುವರು. ಆದರೆ ಒಂದೊಂದು ತುರಿಯೂ ತನ್ನಲ್ಲಿರುವ ಹಸಿಯಿಂದ ರಸದಿಂದ ನಗುನಗುತ್ತಾ ಇರುತ್ತದೆ. ಆದರೆ ಅದು ಎಷ್ಟುಹೊತ್ತು! ಯಾವ ಅಡಿಗೆಗೆ ಸೇರಿ ಯಾರ ಹೊಟ್ಟೆಗೆ ಹೋಗಿ ಅಲ್ಲಿ ಸ್ವಲ್ಪ ಜಿಡ್ಡಿನಂತೆ ಇರುವುದೋ ಅದರ ಹಣೆಯಬರಹ!

ಅಂತೂ ಅದು ತ್ಯಾಗಮಾಡಬೇಕು; ಅದಕ್ಕೆ ಬಲಿಯಬೇಕು, ಪಕ್ವವಾಗ ಬೇಕು, ಶುಷ್ಕವಾಗಬೇಕು—ಆದರೂ ಅದರಲ್ಲಿ ಜಿಡ್ಡಿರುತ್ತದೆ. ಆಗ ಅದು ಅಮೃತತ್ವ

ವನ್ನು ಪಡೆದಿರುತ್ತದೆ. ಸಿಹಿಯೂ ಹೌದು; ಎಳೆಯ ಕಾಯಿಯಂತೆ ಕೆಟ್ಟು ಹೋಗುವುದಿಲ್ಲ. ಇನ್ನೊಂದು ಕಲ್ಪದಲ್ಲಿ ಮತ್ತೊಂದು ಕಲ್ಪವೃಕ್ಷವನ್ನು ಸೃಷ್ಟಿಸಿ ಬೆಳೆಸಲು ಅದರಲ್ಲಿ ಚೈತನ್ಯವಿರುತ್ತದೆ. ಅದು ಮೊದಲು ತಳಿಲಾಗಿ ಆರಂಭವಾಗಿ ಕಳಿಲಾಗಿ ಮುಗಿಯಬೇಕು. ಅದಕ್ಕೆ ಎಲ್ಲಾ ಪ್ರಯತ್ನ.

ಅದು ಮೊದಲು ಒಂದೇ ಆಗಿತ್ತು–ಇದಮೇಕಏವಾಗ್ರ ಆಸಿತ್! ಆಗ ಅದು ಹಾಕಿದ ಕಡೆ ಬಿದ್ದಿರುತ್ತಿತ್ತು. ಯಾವುದೂ ಅಲುಗಾಡುತ್ತಿರಲಿಲ್ಲ.–ನಾನ್ಯ ತ್ಕಿಂಚನಮಿಷತ್. ಅದು ನಾನು ಒಂದು ತೆಂಗಿನಕಾಯಿ ಪ್ರಪಂಚವನ್ನು ಸೃಷ್ಟಿಸಲೇ ಎಂದು ಒಂದು ಕಣ್ಣನ್ನು–ಮೂರು ಕಣ್ಣಿನಲ್ಲಿ ಬಿಡಬಹುದಾದ ಒಂದು ಕಣ್ಣನ್ನು–ಬಿಟ್ಟು ನೋಡಿತು. ಆಮೇಲೆ, ನೀರು, ಗಾಳಿ, ಬೆಳಕು ಬಿದ್ದು ಗಿಡವಾಯಿತು. ಅದರ ಗುರಿ ತೆಂಗಿನಕಾಯಿ–ಕಳಿಲು ಬರಿಯ ಗರಿಯಲ್ಲ ಹೊಂಬಾಳೆಯಲ್ಲ, ಕುರುಜೆಯಲ್ಲ, ಎಳನೀರಲ್ಲ, ತೆಂಗಿನಕಾಯಿ. ಆದರೆ ತನ್ನ ವಿಕಾಸಕ್ರಮದಲ್ಲಿ, ಆತ್ಮಸಾಧನೆಯಲ್ಲಿ ಇವೆಲ್ಲಾ ಆಗಬೇಕಾದವು–ಬರಬೇಕಾದ ಸ್ಥಿತಿಗತಿಗಳು. ಈ ಮಧ್ಯೆ ಸಸಿ ಒಣಗಿ ಹೋಗಬಹುದು, ಅದಕ್ಕೆ ಹುಳು ಹೊಡೆಯಬಹುದು, ಕೋತಿಗಳು ಬಂದು ಎಳನೀರನ್ನು ಕಿತ್ತು, ನೀರು ಕುಡಿದು ಬುರುಡೆಯನ್ನು ಬಿಸಾಡಿ ಹೋಗಬಹುದು. ಹದವಾದ ಎಳನೀರನ್ನು ಕುಯ್ದು, ಕೆತ್ತಿ ಕುಡಿದು ಬೇಸಗೆಯ ಬೇಗೆಯನ್ನು ಕಡಿಮೆ ಮಾಡಿಕೊಳ್ಳಬಹುದು, ಹಾಲು ಮೊಸರು ಹಣ್ಣು, ಸಕ್ಕರೆ ತುಪ್ಪಗಳೊಡನೆ ದೇವರಿಗೆ ಪಂಚಾಮೃತ ಅಭಿಷೇಕಗಳನ್ನು ಮಾಡಬಹುದು. ಆದರೂ ಅವೆಲ್ಲಾ ಮಜಲುಗಳು–ಸ್ವರ್ಗಲೋಕಗಳು, ನರಲೋಕಗಳು. ಇವನ್ನೆಲ್ಲಾ ಕಳೆದುಳಿದರೆ–ಉಳಿಯಬೇಕಾದ್ದು, ಪಡೆಯಬೇಕಾದದ್ದು ಬೋಳು ಗಿಟಕಿನ ಸ್ಥಿತಿ, ಕೇವಲ ತಿರುಳಿನ ಸ್ಥಿತಿ, ಅದನ್ನು ಮುಚ್ಚಲು, ತೆಳ್ಳಗೆ ಮಣ್ಣಿನ ಬಣ್ಣದ ಕವಚ–ನಿರಂಜನಸ್ಥಿತಿ! ಒಳಗಿನ ತಿರಳು ಬಲಿತು ತಳಿಲಾದರೆ ಮೇಲಿನ ಮಟ್ಟೆ ಒಣಗುತ್ತ ಬರುತ್ತದೆ. ಹಾಗಲ್ಲದೆ ಕೆಲವು ತೆಂಗಿನಕಾಯಿ, ವ್ಯಾಪಾರಿಗಳು ಮಾಡುವಂತೆ ಎಳೆಯಕಾಯಿಯ ಹಸಿರು ಸಿಪ್ಪೆ ಒಡೆದು ಬಲಿತ ಕಾಯಿನಂತೆ ಕಾಣಲೆಂದು ಬಿಸಿಲಿ ಗಿಟ್ಟು ಒಣಗಿಸಿದರೆ ಮೇಲೆ ಕಾವಿಯಬಣ್ಣ ಬರಬಹುದು. ಕಾಯಿನ ಪರೀಕ್ಷೆಯನ್ನು ಬಲ್ಲವರು ಈ ಮೇಲಿನ ಬಣ್ಣದಿಂದ ಮೋಸಹೋಗುವುದಿಲ್ಲ ಅನ್ನಿ! ಆದರೂ ಅಗ್ಗ ವಾದ ಕಾಯಿಬೇಕಾದಾಗ, ಬೇರೆ ಕಾಯಿ ಸಿಕ್ಕದಿದ್ದಾಗ ಅದೇ ಬೇಕಾಗುತ್ತದೆ. ಇಂಥಕಾಯಿ ಸ್ವಲ್ಪದಿನದಲ್ಲಿಯೇ ಜುಟ್ಟಿನ ಹತ್ತಿರ ಮುಗ್ಗಿ, ಒಳಗೆ ನೀರು ಇಂಗಿದೆ ತಿಳಲು ಕೊಳೆತು ಕಾಯಿ, ನೀರು ಎಲ್ಲಾ ಕೆಟ್ಟುಹೋಗುತ್ತದೆ. ಆ ಕಾಯಿ ಆಮೇಲೆ ಅಡಿಗೆಗೆ ಉಪಯೋಗವಿಲ್ಲ, ದೇವರಿಗೆ ಆಗುವುದಿಲ್ಲ. ಒಡೆದರೆ ಒಳಗಿನ ಕೊಳಕು ನೆಲದಮೇಲೆಲ್ಲಾ ಚೆಲ್ಲಿ ಮೈಮೇಲೆಲ್ಲಾ ಹಾರಿ ದುರ್ವಾಸನೆ ಇಟ್ಟುಕೊಳ್ಳು ತ್ತದೆ. ಕೊನೆಗೆ ಅದನ್ನು ಒಲೆಗೆ ಹಾಕುವುದಕ್ಕೂ, ಕೈಕೊಳೆಯಾಗದೆ ಸಂಸ್ಕಾರ

ಮಾಡದೆ ಆಗದು. ಅದನ್ನು ಉರಿಸಬೇಕಲ್ಲಾ ಎಂದು ಬೆಂಕಿಕೂಡ ಜೀಗುಟ್ಟಿ ಅಸಮಾಧಾನವನ್ನೂ ಅಸಹ್ಯವನ್ನೂ ತೋರುವುದು.

ಕೆಲವು ಕಾಯಿಗಳು ಮೇಲೆ ನೋಡುವುದಕ್ಕೆ ಚೆನ್ನಾಗಿರುತ್ತವೆ. ಒಡೆದರೆ ಒಳಗೆ ಒಂದು ಅಂಗೈ ಅಗಲದಷ್ಟು ನವೆದು ಸ್ವಲ್ಪ ಬಣ್ಣಗೆಟ್ಟು ಕೊಳೆತಂತಾಗಿ ಸ್ವಲ್ಪ ಕಟ ಕಾಣುತ್ತಿರುತ್ತದೆ. ಇದು ದೇವರ ಪೂಜೆಗೆ ಸಲ್ಲದಂತೆ. ಅಡಿಗೆಗೆ ಆಗಬಹುದು–ಅದಷ್ಟು ಭಾಗವನ್ನು ಬಿಟ್ಟು, ಕಾಯಿನ ಮೇಲೆ ಗೂಬೆ ಕೂತರೆ ಹೀಗಾಗುವುದಂತೆ ಗೂಬೆ ಅಪಶಕುನದ ಪಕ್ಷಿಯೆನೋ ಹೌದು. ಆದರೆ ಅದು ಮೇಲೆ ಕೂತಮಾತ್ರ ದಿಂದಲೇ ಅಷ್ಟುಗಾತ್ರದ ಮೊಟ್ಟೆಯನ್ನೆಲ್ಲಾ ಒಳಹೊಕ್ಕು–ಎಕ್ಸ್‌ರೇಹಾಗೆ–ಕಾಯಿ ತಿರುಳನ್ನು ಕೊಳೆಸುವ ಶಕ್ತಿ ಅದಕ್ಕೆ ಹೇಗೆ ಬರುತ್ತದೋ, ಒಂದು ಗೊನೆಯ ಕಾಯಿಯಲ್ಲೆಲ್ಲಾ ಮಿಕ್ಕದ್ದನ್ನು ಮುಟ್ಟದೆ ಅದೊಂದರ ಮೇಲೆ ಕೂತು ಅದನ್ನು ಗೂಬೆ ಹೇಗೆ ಕೆಡಿಸಿತೋ ದೇವರಿಗೆ ಗೊತ್ತು! ಆ ಕಾಯಿನ ಅದೃಷ್ಟ! ಅದರ ಮೇಲೆ ಗೂಬೆ ಕೂತಿತ್ತೋ ಕೂತಿರಲಿಲ್ಲವೋ, ಜನ ಅಂತು ಅದರ ತಲೆಯ ಮೇಲೆ ಕೂರಿಸುತ್ತಾರೆ! ಸಾಧುತ್ವೇ ದುರ್ಜನೋ ಜನಃ!

ಕೆಲವು ಕಾಯಿಗಳು ನೋಡುವುದಕ್ಕೆ ಸಣ್ಣ ಆದರೆ ಮಟ್ಟೆ ತೆಳು. ಒಳಗೆ ತಿರಳೂ ತೆಳು. ಆದರೆ ನೀರು ಮಾತ್ರ ತುಂಬ—ಒಬ್ಬರು ಕುಡಿಯಲಾರದಷ್ಟು ಇರುತ್ತದೆ. ಅದು ಎಳನೀರಾಗಿ ಉಪಯೋಗಿಸುವುದಕ್ಕೇ ಹುಟ್ಟಿದ್ದು—ನೀರು ಸೀಯಾಗಿರುತ್ತದೆ. ನೀರು ಇಂಗುವುದಕ್ಕೆ ಬಿಟ್ಟರೆ ಕಾಯೇನೋ ಬಲಿಯುತ್ತದೆ, ಗಿಟಕೂ ಆಗುತ್ತದೆ, ಅದು ಸೀಯಾಗಿಯೂ ಇರುತ್ತದೆ, ಆದರೆ ದಳವಾಗಿರುವುದಿಲ್ಲ. –ತಿಂದರೆ ಚರಟ, ಚರಟ! ಹೆಚ್ಚು ಜಿಡ್ಡೂ ಇರುವುದಿಲ್ಲ, ತುರಿ ಒದಗುವುದಿಲ್ಲ. ಇನ್ನು ಕೆಲವು, ಆಳಿಗೆ ಆಕಾರ ಎನ್ನುವಹಾಗೆ ದೊಡ್ಡದಾಗಿ ತೂಕವಾಗಿ ಇರುತ್ತವೆ. ಆದರೆ ತೂಕವೆಲ್ಲಾ ಮಟ್ಟೆಯದೇ, ಒಳಗೆ ಕಾಯಿಮಾತ್ರ ಚಿಕ್ಕದು. ಕಾಯಿ ದಳವಾಗಿ ಇದ್ದರೆ ಇತ್ತು ಇಲ್ಲದಿದ್ದರೆ ಇಲ್ಲ. ಅದೂ ಉಪ್ಪುಪ್ಪಾಗಿ ಇರಬಹುದು. ಅಡಿಗೆಗೆ ಒದಗುವುದಿಲ್ಲ. ತಿನ್ನುವುದಕ್ಕೆ ರುಚಿಯಿಲ್ಲ. ಮಟ್ಟೆ ಒಣಗಿದರೆ ಬಚ್ಚಲ ಒಲೆಗೆ ಆಡವಾಗುತ್ತದೆ—ಎರಡು ಸೀಳು ಸೌದೆಗೆ ಸಮಾನ. ಇನ್ನು ಕೆಲವು ಕಾಯಿ ಗಳಲ್ಲಿ ಎಳೆಯದಾಗಲೀ, ಬಲಿತದ್ದಾಗಲೀ, ನೀರೆ ಕಡಿಮೆ,—ಯಾವಾಗ ಬರುತ್ತೊ ಯಾವಾಗ ಹೋಗುತ್ತೋ! ಅತ್ತಿಯಹೂ, ಅಂಜೂರದಹೂ, ಯಾವಾಗಲೋ ಬಿಟ್ಟು ಕಣ್ಣಿಗೆ ಕಾಣದೆ ಬೇಗ ಕಾಯಿಗೆ ತಿರುಗುತ್ತದೆಯಂತೆ. ಈ ಜಾತಿಯ ತೆಂಗಿನಕಾಯಿಯ ನೀರೂ ಹಾಗೆಯೇ.

ಕಾಯಿ ಎಳಸಾಗಿರುವಾಗ ಕೋತಿಯ ಕಾಟ ಹೆಚ್ಚು. ಮರ ಎಷ್ಟೇ ಹಳದಾಗಿರಲಿ, ಎಷ್ಟೇ ಎತ್ತರಕ್ಕೆ ಹೋಗಿರಲಿ ಅದಕ್ಕೇನು ಲಕ್ಷ್ಯವಿಲ್ಲ, ಕೋತಿಯ ಕೈಗೆಸಿಕ್ಕಿತೋ, ಆಯಿತು ಅದರ ಆಸೆ! ಇನ್ನೇನು ಹದವಾದ ಎಳನೀರು ಆಗುತ್ತದೆ ಅನ್ನುವ ಹೊತ್ತಿಗೆ ಬರುತ್ತವೆ ಕೋತಿಗಳು! ಹಿಂಡು ಹಿಂಡಾಗಿ ಬರುತ್ತವೆ.

ಕೋತಿಗೆ ಹೆದರಿ ಕಾಯಿಕಿತ್ತು ಹಾಕಿ ಬಿಡೋಣವೇ? ಏನು ಪುರುಷಾರ್ಥ? ಒಂದೊಂದರಲ್ಲಿ ಎರಡೆರಡು ಉದ್ಧರಣೆ ನೀರು ಸಿಕ್ಕುತ್ತದೆ. ಇನ್ನು ಒಗರುಕೂಡ ಪೂರ್ತಿಯಾಗಿ ಮುರಿದಿರುವುದಿಲ್ಲ ಅದರೊಳಗೆ. ಆ ಹದ ಕೋತಿಗೆ ಗೊತ್ತು. ಆಗ ಅದನ್ನು ಬುಡದ ಹತ್ತಿರ ಮೆತ್ತಗಿರುವ ಕಡೆ ಹಲ್ಲಿನಿಂದ ಸಿಗಿದು ಎರಡು ಮೂರು ನಾರನ್ನು ಕಿತ್ತು, ಒಂದು ಸಣ್ಣ ತೂತು ಮಾಡಿಕೊಂಡು ಮನುಷ್ಯರಿಗಿಂತ ಚೆನ್ನಾಗಿ ನೀರು ಕುಡಿದು ಆ ತೂತಿನ ಬುರುಡೆಯನ್ನು ಕೆಳಗೆ ಎಸೆದು ಬಿಡುತ್ತದೆ. ಇದರಲ್ಲಿ ಕಂಡು ಬರುವುದು "ಕಪಿಚೇಷ್ಟೆ"ಯಲ್ಲ ಅದರ ಬುದ್ಧಿವಂತಿಕೆ. ಅದನ್ನು ಕಾದು ಓಡಿಸುವುದೆಂದರೆ ತುಂಬಾ ಕಷ್ಟ; ಏನು, ಮುಳ್ಳುಬೇಲಿ ಹಾಕುತ್ತೀರಾ? ಎಲ್ಲಿಗೆ ಹಾಕುತ್ತೀರಿ; ಬುಡಕ್ಕೆ ಹಾಕುತ್ತೀರಾ, ಮಧ್ಯಕ್ಕೆ ಕಟ್ಟುತ್ತೀರಾ? ಅದು ಮನುಷ್ಯರಿಗೆ ಅಡ್ಡಿಯಾಯಿತು. ಮರದಿಂದ ಮರಕ್ಕೆ ಹಾರುವ ಶಾಖಾಮೃಗಕ್ಕೆ ಅಡ್ಡಿಯಾಗುತ್ತದೆಯೆ? ಕ್ರಿಸ್ತನ ತಲೆಗೆ ಹಾಕಿದಂತೆ ಮುಳ್ಳಿನ ಟೋಪಿಹಾಕಿದರೆ ಆಗಬಹುದು. ಇದು ಹೇಗೋ ಕ್ರೈಸ್ತರನ್ನೊ ಯೆಹೂದ್ಯರನ್ನೋ ಕೇಳಬೇಕು? ಕೆಲವು ಕದೀಮ, ಗಡವ, ಸಲಗದಂಥ ಕೋತಿಗಳಿರುತ್ತವೆ. ಅವುಗಳನ್ನು ಹೆದರಿಸುವುದಕ್ಕೆ ಉಂಟೇ? ಅದಕ್ಕೆ ಹೆಂಗಸರು ಮಕ್ಕಳು, ಕೈಲಾಗದವರು ಎಂಬ ಪರಿಜ್ಞಾನ ಉಂಟು; ಅವರನ್ನು ಕಂಡು ಒಂದು ಸಲ ಬಾಯಿಬಿಟ್ಟು, ಹಲ್ಲುಕಿರಿದು ದುರದುರನೆ ನೋಡಿ ಗೊರಗೊರನೆ ಅರಚಿದರೆ ಸಾಕು ಅವರು ಹೆದರಿ ಓಡಿ ಹೋಗುತ್ತಾರೆ. ಇನ್ನು ಗಂಡಸರು ಹೆದರಿಸಿದರೂ ಅವು ಹೋಗುವುದಿಲ್ಲ, ಅವರ ಮೇಲೆ ಬೀಳುತ್ತವೆ—ಅವರದ್ದೇನು ಬರಿಯ ಬಾಯಿ ಜೋರು, ಕೈಯಲ್ಲೇನಾದರೂ ಆಯುಧವಿದೆಯೇ ನೋಡುತ್ತವೆ. ದೊಣ್ಣೆಗಿಣ್ಣೆಗೆ ಹೆದರುವುದಿಲ್ಲ. ಒಂದು ಕಲ್ಲಿನಿಂದ ಹೊಡೆದರೆ, ಅದನ್ನು ತಪ್ಪಿಸಿಕೊಳ್ಳುವ ಸಂಭವವೇ ಹೆಚ್ಚು. ಇನ್ನೊಂದು ಕಲ್ಲನ್ನು ಹವಣಿಸಿಕೊಳ್ಳುವುದರಲ್ಲಿ, ಮೇಲೆ ಬಿತ್ತೇ! ಅದಕ್ಕಾಗಿ ಕೈತುಂಬ ಕಲ್ಲನ್ನು ಇಟ್ಟುಕೊಂಡು, ಒಂದಾಗುತ್ತಲೂ ಒಂದರಂತೆ ತಗಲಲಿ, ಬಿಡಲಿ, ಬೀರುತ್ತಾ ಬಂದರೆ ಆಗ ಹೋಗುತ್ತದೆ. ಇದಿಷ್ಟೂ ಕೆಳಗೆ ಓಡಾಡುತ್ತಿರುವಾಗ. ಅದು ಮರದ ಮೇಲೆ ಹತ್ತಿ ಗೊನೆಯ ಮೇಲೆ ಹೋಗಿ ಕುಳಿತುಕೊಂಡು ಬಿಟ್ಟಿತೋ, ಜಪ್ಪಯ್ಯ ಎಂದರೂ ಇಳಿಯುವುದಿಲ್ಲ. ನಿಶ್ಚಿಂತೆಯಾಗಿ, ನಿರ್ಭಯವಾಗಿ, ಕೋಟೆಯ ಒಳಗಡೆ ಹೋಗಿ ಸೇರಿಕೊಂಡಂತೆ ಗರಿಯ ಮರೆಯಲ್ಲಿ ಕೂತುಬಿಡುತ್ತದೆ. ಅಲ್ಲಿಗೆ ಕಲ್ಲಿನೇಟು ಬೀಳುವುದಿಲ್ಲ ಎಂದು ಅದಕ್ಕೆ ಗೊತ್ತು. ಹೊಡೆದ ಕಲ್ಲೆಲ್ಲಾ—ಅದು ಅಷ್ಟು ಎತ್ತರಕ್ಕೆ ಹೋದರೆ–ಗರಿಗೆ ತಗಲಿ–ವಸಿಷ್ಠನ ಬ್ರಹ್ಮದಂಡಕ್ಕೆ ತಗಲಿ ತಣ್ಣಗಾಗಿ ಬೀಳುತ್ತಿದ್ದ ವಿಶ್ವಾಮಿತ್ರನ ಬಾಣಗಳ ಹಾಗೆ, ತೊಪತೊಪನೆ ಬಿದ್ದು ಬಿಡುತ್ತವೆ. ಕೆಳಗೆ ನಿಂತು ಎಷ್ಟು ಜನ ಏನು ಗದ್ದಲಮಾಡಲಿ ಅದು ಬೇರೆ ಅಳ್ಳಾಡುವುದಿಲ್ಲ. ನಾಯಿ ಬೊಗಳಿದರೆ ದೇವಲೋಕಹಾಳೇ ಎಂದು ಕೊಳ್ಳುತ್ತದೆಯೋ—ಏನೋ! ಅದೆಲ್ಲಾ ಆ ಮಂದ ಬುದ್ಧಿಯ ಆನೆಗೆ ಹೇಳಿ. ಒಂದು ಸೀಳಿದ ಬೊಂಬಿನ ತುಂಡನ್ನು

ಬಡಿದು ಪಟ ಪಟನೆ ಸದ್ದುಮಾಡಿದರೆ, ಒಂದು ಮಾರು ದೂರದಲ್ಲಿ ನಿಮ್ಮೆದುರಿಗೆ ಬಂದು ಮೇಲೆ ಬೀಳುತ್ತದೆಯೇನೋ ಎನ್ನುವ ಹಾಗೆ ಇದ್ದುದ್ದು ಹೆದರಿ ಘೀಳಿಡುತ್ತಾ ಪಲಾಯನ ಮಾಡುತ್ತದೆ. ಮತ್ತೇನು ಮಾಡೋಣ ಈ ಕೋತಿಯ ಕಾಟ ತಪ್ಪಿಸಿ ಕೊಳ್ಳುವುದಕ್ಕೆ? ಯೂರೋಪಿಯನರ ತೋಟಗಳಲ್ಲಿ ಕೋವಿಯಿಂದ ಹೊಡೆದು ಸಾಯಿಸಿಬಿಡುತ್ತಾರಂತೆ. ನಾವೆಲ್ಲಿ ತರೋಣ ಕೋವಿಯನ್ನು, ಬ್ರಿಟಿಷರ ಸರ್ಕಾರದಲ್ಲಿ? ನಮ್ಮ ಕೈಗೆ ಬಾರು ಮಾಡಿಕೊಟ್ಟರೆ ತಾನೇ ಹೊಡೆಯುವುದಕ್ಕೆ ಬರುತ್ತದೆಯೇ? ಇದರ ಮೇಲೆ ಅವರು ಕೋತಿಯನ್ನು ಕೊಲ್ಲುತ್ತಾರೆಂದರೆ ನಾವು ಅದನ್ನು ಕೈಯಾರ ಕೊಲ್ಲುವುದಕ್ಕಾಗುತ್ತದೆಯೇ? ಇದು ಧರ್ಮಕ್ಷೇತ್ರ, ಇಲ್ಲಿ ಕೋತಿ, ದೇವರು ಆ ದೇವರನ್ನು ಸಾಯಿಸಿದರೆ ಪಾಪ! ಆದರೂ—ಆ ದೇವರು ಚೇಷ್ಟೆಮಾಡದೆ ಬಿಡುವುದಿಲ್ಲ—ಚೇಷ್ಟೆಮಾಡಿದರೆ ಮಾಡಲಿ, ಬೋನಿನಲ್ಲಿ ಕೂಡಿ ತಮಾಷೆ ನೋಡೋಣ. ಕಚ್ಚಿದರೆ, ನಷ್ಟ ಮಾಡಿದರೆ! ಹೇಗೂ ದೇವರಿಂದ ನಷ್ಟ, ಕಷ್ಟ, ಅಂತೂ ಇಂತೂ ತೆಂಗಿನಕಾಯನ್ನು ದೇವರಿಂದ ಉಳಿಸುವುದು ಕಷ್ಟ. ಎಳಸಾಗಿದ್ದಾಗ ತಾನಾಗಿಯೆ ಕಿತ್ತು ಹಾಕಿ ಹಾಳುಮಾಡುತ್ತಾನೆ; ಬಲಿತ ಮೇಲೆ ನಾವೇ ತೆಗೊಂಡು ಹೋಗಿ ಮೇಲೆ ದಕ್ಷಿಣೆ ಇಟ್ಟು 'ತಗೊಳಪ್ಪಾ, ಉದ್ಧಾರಮಾಡು' ಎಂದು ಅವನಿರುವಕಡೆಗೆ—ಇದ್ದಾನೆ ಎಂದು ಹೇಳಿಕೊಳ್ಳುವ ಕಡೆಗೆ—ಹೋಗಿ ಅಂಗಲಾಚಿ ಬೇಡಿಕೊಂಡು ಅರ್ಪಿಸುತ್ತೇವೆ. ಅವನೇನೋ ಅಭಯವರದ ಹಸ್ತನಾಗಿ ಏನೂ ಅರಿಯದ ಬಾಲಗೋಪಾಲನಂತೆ, ಮೌನವಾಗಿ, ಅಚಲವಾಗಿ ಇದ್ದರೂ, ಅವನಿಂದ ಆಜ್ಞಪ್ತನಾಗಿ ಆವನ ಪೂಜಾರಿ (ಪೂಜಾ + ಅರಿ?) 'ತವಾಪ್ಯರ್ಥಂ ಮಮಾಪ್ಯರ್ಥಂ' ಎಂದು ಶೇಕಡ ಐವತ್ತನ್ನು ಲಪಟಾಯಿಸಿ ಬಿಡುತ್ತಾನೆ. ಆ ತೆಂಗಿನಕಾಯಿ ಹೋಳುಗಳಗತಿ ಏನಾಗುತ್ತದೆಯೋ? ಪೂಜಾರಿ ಸಂಸಾರಿಯಾದರೆ, ಹೋಳುಗಳು ಒಂದೆರಡಾದರೆ ಮನೆಗೆ—ಅಡಿಗೆ ಮನೆಗೆ ಹೋಗಿ, ಚಟ್ಣಣಿ, ಹುಳಿ, ಗೊಜ್ಜುಗಳ ಮೂಲಕ ಉದರಸ್ಥವಾಗಿ ಭೂತ ತೃಪ್ತಿಯಾಗಬಹುದು; ಹಾಗಲ್ಲ, ಒಂದು ಏಕಾದಶಿ, ಶಿವರಾತ್ರಿ, ಕಾರ್ತೀಕ ಸೋಮವಾರ, ಶ್ರಾವಣ ಶನಿವಾರ ಅನ್ನಿ! ಆಗ ಗೂಡೆಗಟ್ಟಲೆ ಕಾಯಿಹೋಳುಗಳು ಬಿದ್ದರೆ, ಅದಕ್ಕೆ ವಿನಿಯೋಗ ಬೇಡವೇ? ಅವು ಎಲ್ಲೆಲ್ಲಿಗೆ ಹೋಗಿ ಏನೇನು ಪ್ರತಿಫಲವನ್ನು ತರುತ್ತದೆಯೋ ಬಲ್ಲವರಾರು? ಹುಟ್ಟಿದ ಮನೆ ಕಲ್ಪವೃಕ್ಷವಾದರೇನು? ಸೇರುವ ಮನೆ ಎಂಥೆಂಥಾದ್ದೊ? ಹೋಗಿ ಸೇರುವುದೇನೋ ದೇವಸ್ಥಾನದ ಗರ್ಭಗುಡಿಗೆ, ಅಲ್ಲಿಂದ ಹೋಗುವುದು ಎಲ್ಲೆಲ್ಲಿಗೋ! ಯಾವ ಯಾವ ಕೆಲಸಕ್ಕೊ! ಹುಟ್ಟಿದಂದಿನಿಂದ ಒಂದಾಗಿ ಬೆಳೆದು, ದೇವರ ಸಾಕ್ಷಿಯಾಗಿ ಒಂದು ಎರಡು ಪಾಲಾದರೆ, ಒಂದು ಎಲ್ಲೋ, ಮತ್ತೊಂದು ಎಲ್ಲೋ! ದೇವರಿಗೆ ಒಪ್ಪಿಸದೆ, ಅಡಿಗೆಗೆಂದು ಒಡೆದರೆ ಅರ್ಧಾಂಗಗಳು ಎರಡೂ ಒಂದುಗೂಡಿ, ಒಟ್ಟಿಗೆ ಒಂದೇ ಲೋಕಕ್ಕೆ ಹೋಗುತ್ತವೆ. ದೇವರನ್ನು ನಂಬಿದರೆ, ಈ ಸಾಲೋಕ್ಯ, ಸಲ್ಲೋಕ ದೊರೆಯುತ್ತದೆ ಎಂಬ ಧೈರ್ಯವಿಲ್ಲ.

ತೆಂಗು ತಾನಾಗಿ ಕಾಡುಕಾಡಾಗಿ ಎಲ್ಲಿ ಬೆಳೆಯುತ್ತೋ, ಹೇಗೆ ಬೆಳೆಯುತ್ತೋ ತಿಳಿಯದು. ನಾವು ನೋಡಿರುವುದು ಮನುಷ್ಯರು ನೆಟ್ಟು ಬೆಳೆಯಿಸಿರುವುದನ್ನು. ಅದನ್ನು ತೋಟದಲ್ಲಿ ಗುಂಪು ಗುಂಪಾಗಿ ಬೆಳಸುವುದೇ ಹೆಚ್ಚು. ಮನೆಯ ಹಿತ್ತಿಲು ಅಂಗಳಗಳಲ್ಲಿ ಬೆಳಸುವವರು ಅದಕ್ಕೆ ತಕ್ಕಷ್ಟು ಸ್ಥಳವಿದೆಯೇ ಎಂದು ನೋಡುವುದಿಲ್ಲ. ಒಂದು ಧಾರಾಳವಾಗಿ ಬೆಳೆಯ ಬಹುದಾದ ಸ್ಥಳವಿದ್ದರೆ, ಅಲ್ಲಿ ಎರಡು ಹಾಕುತ್ತಾರೆ—ಎರಡು ಕಡೆಗೂ ಒಂದೊಂದಿದ್ದರೆ ಚೆನ್ನ ಅಂತ. ಆದರೆ ಅದರ ತಾಳು ಸಣ್ಣ, ತೋಳು ನೀಳ, ಗಿಡಗಳು ಹತ್ತಿರವಿದ್ದರೆ ಒಂದರ ಗರಿ ಮತ್ತೊಂದರ ಮೇಲೆ ಬೀಳುತ್ತದೆ. ಇದು ಬೆಳವಣಿಗೆಗೆ ಅನುಕೂಲವಲ್ಲ. ಧಾರಾಳವಾಗಿ ಬೇರು ಹರಡಿಕೊಳ್ಳಲು ಮಳೆ ಗಾಳಿ ಬೆಳಕು ಬಿದ್ದು ನಿರಾಳವಾಗಿ ಗಿಡ ಬೆಳೆಯಲು ಅವಕಾಶ ಕಡಮೆಯಾಗುವುದು; ಗಿಡ ಕುಸುಕುಲಾಗುವುದು. ಫಲವೂ ದೊಡ್ಡದಾಗಿ ಹೆಚ್ಚಾಗಿ ಬಿಡುವುದಿಲ್ಲ. ಆದ್ದರಿಂದ ತಿಳಿದ (ಅನುಭವಸ್ಥನಾದ) ತೋಟಗಾರನು ಗಿಡಗಳನ್ನು ದೂರ ದೂರವಾಗಿಯೇ ನೆಡುತ್ತಾನೆ—ಒಂದರ ಗರಿ ಮತ್ತೊಂದಕ್ಕೆ ತಗಲಬಾರದು ಹಾಗೆ. ಹತ್ತಿರದಲ್ಲಿದ್ದೂ ದೂರದಲ್ಲಿರುವಂತೆ, ಸಂಪರ್ಕವಿಲ್ಲದಂತೆ, ಬೆಳೆದರೇ ಬೇರಿಗೆ ಸಾರ ಚೆನ್ನಾಗಿ ಒದಗುತ್ತದೆ, ಗಿಡ ಹುಲುಸಾಗಿ ಬೆಳೆಯುತ್ತದೆ. ಹಾಗಿದ್ದರೆ ಕೋತಿಗಳು ಒಂದು ಗಿಡದಿಂದ ಇನ್ನೊಂದಕ್ಕೆ ಹಾರಲೂ ಅವಕಾಶವಿರುವುದಿಲ್ಲ. ಒಂದೊಂದು ಗಿಡಕ್ಕೂ ಸೊಂಟಕ್ಕೆ ಒಂದಿಷ್ಟು ಮುಳ್ಳು ಬಿಗಿದರೆ ಸಾಕು ಗಿಡ ಫಲ ಬಿಡುವ ಕಾಲಕ್ಕೆ ಕೋತಿಯ ಕಾಟ ಎಷ್ಟೋ ತಪ್ಪುತ್ತದೆ.

ಆ ಉದ್ದಕ್ಕೆ ಈ ಉದ್ದಕ್ಕೆ ರಾಕ್ಷಸಾಕಾರವಾಗಿ ಬೆಳೆಯುವ ಗಿಡಕ್ಕೆ ಬೀಜ ಎಷ್ಟು ಚಿಕ್ಕದು! ಆನೆಯ ಕಣ್ಣಿನಹಾಗೆ! ತೆಂಗಿನಸಸಿ ಎಬ್ಬಿಸಬೇಕಾದರೆ ನೆಡುವುದೇನೋ ತಳಿಲನ್ನೇ ಆದರೆ ಅದೇ ಬೀಜವಲ್ಲ ಅದು ಬೀಜವನ್ನು ಹುದುಗಿಸಿ ರಕ್ಷಿಸಿಟ್ಟುಕೊಂಡಿರುವ ಕೋಶ, ಅದರೊಳಗೆ ಇನ್ನೊಂದು ಕೋಶ. ಹೀಗೆ ಮೇಲೆ ನಯವಾದ ಚರ್ಮದಂಥ ಸಿಪ್ಪೆ, ಅದರ ಕೆಳಗೆ ನರನಾಳ ರಕ್ತಮಾಂಸಗಳ ಮುದ್ದೆಯಂತಿರುವ ಮಟ್ಟೆ; ಅದರ ಕೆಳಗೆ ಮನುಷ್ಯನ ಅಹಂಕಾರದಂತೆ ಅಭೇದ್ಯವಾದ ಕಠಿಣವಾದ ಚಿಪ್ಪು; ಅದು ವಯಸ್ಸಾದಹಾಗೆಲ್ಲಾ ಗಟ್ಟಿಯಾಗಿ ಕೆಚ್ಚಾಗಿ ಕರಿವಾಟೆಯಾಗುತ್ತದೆ. ಇವರಲ್ಲಿ ಸ್ವಲ್ಪ ಜಿಡ್ಡಿನ ಅಂಶವೇನೋ ಇರುತ್ತದೆ ಆದರೆ ಕರಟವನ್ನು ಸುಟ್ಟಹೊರತು ಅದನ್ನು ಅರಿಯಲಾಗುವುದಿಲ್ಲ, ಹೊರಡಿಸಲಾಗುವುದಿಲ್ಲ. ಅದರೊಳಗೆ ತಿರುಳಮೇಲೆ ತೆಳ್ಳನೆಯ ಇನ್ನೊಂದು ಕೋಶ. ಇದು, ನೀರು ಇಂಗಿ ತಿರಳು ಒಣಗಿದ ಹಾಗೆಲ್ಲಾ ತಾನೂ ಒಣಗಿ ಕೊನೆಗೆ ಅದರೊಡನೆ ಮಟ್ಟೆಯಿಂದ ಬೇರೆಯಾಗುತ್ತದೆ. ಕರಟಕ್ಕೂ ಅದಕ್ಕೂ ನಖಮಾಂಸ ಸ್ನೇಹವಿದ್ದರೂ ಅದು ತಿರುಳಿಗೇ ಸೇರಿದ್ದು—ಅದರದ್ದೇ ಋಣಾನುಬಂಧ ಹೆಚ್ಚು. ಆ ತಿರುಳೇ ಜಿಡ್ಡಿನನಿಧಿ. ತೆಂಗಿನಕಾಯಿಯ ಚೈತನ್ಯವಿರುವುದೆಲ್ಲಾ ಅಲ್ಲೇ. ಆಗ ಹಿಂಡಿ ಹಾಲು ತೆಗೆಯಬಹುದು; ತಿರುವಿ ಬೆಣ್ಣೆತೆಗೆಯಬಹುದು; ಅದನ್ನು ಕಾಯಿಸಿ

ತುಪ್ಪಮಾಡಬಹುದು. ಇದೆಲ್ಲಕ್ಕೂ ಆದಿಮೂಲ ಏನೂ ಅರಿಯದಂತೆ, ಯಾವ ರುಚಿಯೂ ಇಲ್ಲದೆ, ಶುಭ್ರವಾಗಿ ಚಿಕ್ಕಮೂರ್ತಿಯಾಗಿ, ಅಣುರೂಪದಲ್ಲಿ ಒಂದು ಗೂಡಿನಲ್ಲಿ—ದಹರಾಕಾಶದಂತೆ—ಅಡಗಿರುತ್ತದೆ. ಅದೇ ಕಾಯಿನಕಣ್ಣು, ನಿಜವಾದ ಕಣ್ಣು. ಅದರಂತೆ ತೋರಿಕೆಯ ಕಣ್ಣು ಇನ್ನೆರಡು ಇರುತ್ತವೆ. ಇವು ಬರಿಯ ಮೋಸ. ನೋಡುವುದಕ್ಕೆ ಮೂರಾದರೂ ಸತ್ಯವಾದದ್ದು ಒಂದೇ. ಈ ಮೊಳಕೆಯ ಕಾಳೇ ತನ್ನನ್ನು ಅಡಗಿಸಿಕೊಂಡಿರುವ ಗುಹೆಯ ಗೂಡಿನಿಂದ ಹಿಡಿದು ಚಿಪ್ಪು, ನಾರು, ಮಟ್ಟೆಗರಿ, ಕಾಯಿನವರೆಗೆ ಎಲ್ಲಕ್ಕೂ ಜನಕ. ಅದರಿಂದಲೇ ಇವೆಲ್ಲವೂ ಹುಟ್ಟುವುದು. ಆದರೂ ಅವೆಲ್ಲವೂ ಆ ಸಣ್ಣಕಾಳನ್ನು ಮುಚ್ಚಿಟ್ಟುಕೊಂಡು ಗುಹ್ಯಾತ್ ಗುಹ್ಯತಮವಾಗಿ ಮಾಡಿಟ್ಟವೆ. ತೆಂಗಿನಕಾಯಿ ಎಂದರೆ ಮೇಲಿನ ಮಟ್ಟೆಯ ಗಾತ್ರವನ್ನು ನೋಡಿ ಮೋಸಹೋಗುವವರೇ ಅನೇಕಜನ. ಅನೇಕ ವೇಳೆ ಮಟ್ಟೆಯ ಗಾತ್ರಕ್ಕೆ ತಕ್ಕಷ್ಟು ಕಾಯಿಯೂ ದಳವಾಗಿರುವುದಿಲ್ಲ, ರುಚಿಯಾಗಿರುವುದಿಲ್ಲ. ಕಾಯಿಯನ್ನು ಅಪೇಕ್ಷಿಸುವವರು ನೀರಿನವರೆಗೆ ಹೋದಾರು. ಕಾಯಿಬಲಿತಿದ್ದರೆ ತಿರುಳಿನವರೆಗೆ ಹೋದಾರು. ಅವರಲ್ಲಿ ಸಾವಿರಕ್ಕೆ ಒಬ್ಬರಿಗೂ ಆ ಗುಹೆಯಲ್ಲಿ ಅಡಗಿಕೊಂಡಿರುವ ಅಣುರೂಪದ ಕಾಳು ಕಣ್ಣಿಗೆ ಬೀಳುವುದಿಲ್ಲ; ಕೈಗೆ ದೊರೆಕುವುದಿಲ್ಲ. ಹೀಗೆ ಅದರಿಂದ ಹುಟ್ಟಿದ ವಸ್ತುಗಳೇ, ಅದನ್ನು ಮುಚ್ಚಿಟ್ಟು, ಭ್ರಾಂತಿಯನ್ನುಂಟುಮಾಡುತ್ತವೆ.

> ಭಾನು ಪ್ರಭಾ ಸಂಜನಿತಾಭ್ರ ಪಂಕ್ತಿ
> ಭಾನುಂತಿರೋಧಾಯ ವಿಜೃಂಭತೇ ಯಥಾ !
> ಆತ್ಮೋದಿತಾಹಂ ಕೃತಿರಾತ್ಮ ತತ್ತ್ವಂ
> ತಥಾ ತಿರೋಧಾಯ ವಿಜೃಂಭತೇಸ್ವಯಂ (ವಿವೇಕ ಚೂಡಾಮಣಿ : ೧೪೪)

## ೨. "ಹೇಳೋದು ವೇದ, ಹಾಕೋದು ಗಾಣ"—ಗಾದೆ.

ಹೋದ ವರ್ಷ ಇದೇ ದಿವಸ ಸುಮಾರಿನಲ್ಲಿ ಬೆಂಗಳೂರಿಂದ ಮೈಸೂರಿಗೆ ಬರುತ್ತಿದ್ದೆ. ಅವೊತ್ತು ಕ್ಲೋಸ್‌ಪೇಟೆಯ ಸ್ಟೇಷನ್ನಿನಲ್ಲಿ ತುಂಬಗದ್ದಲ. ಅದು ರೈಲಿಗೆ ನೀರು ತೆಗೆದುಕೊಳ್ಳುವ ಸ್ಟೇಷನ್. ಆದರೂ ರೈಲು ಹೊರಡುವ ಹೊತ್ತಿಗೆ ಜನ ಹತ್ತಿಯೇ ಮುಗಿದಿರಲಿಲ್ಲ. ಜನ ತುಂಬಿದರು, ತುಂಬಿದರು, ಗಾಡಿ ಹಿಡಿಸಲಾರದ ಹಾಗೆ ತುಂಬಿದರು. ಗಾರ್ಡು ನೋಡುವತನಕ ನೋಡಿ, ಆ ಮೇಲೆ ಒಳಗೆ ತಳ್ಳು ವವರನ್ನು ತಳ್ಳಿ ಹೊರಕ್ಕೆ ಎಳೆದು ಹಾಕುವವರನ್ನು ಎಳೆದು ಹಾಕಿ ಅಂತೂ ಇಂತೂ ಶಿಳ್ಳೆ ಊದಿ ಗಾಡಿ ಬಿಡಿಸಿದರು. ಜನ ಹತ್ತಿದಾಗ ಒಳಗೆ ಜಾಗವೇ ಇಲ್ಲ ಎಂದು ಕಾಣುತ್ತಿದ್ದದ್ದು ಒಂದು ಮೈಲಿ ಹೋಗುವುದರೊಳಗೆ. ಎಲ್ಲರೂ ಸವರಿಸಿ ಕೊಳ್ಳಲು ಅಷ್ಟರಿಗೂ ಜಾಗವಾಯಿತು. ಹೆಂಗ ಹೆಂಗಸರಿಗೆ ಮಾತಿಗೆ ಆರಂಭ ವಾಯಿತು.

"ಇವೊತ್ತು ಏಸು ಇಷ್ಟು ಜನ ಇಲ್ಲಿ? ಏನಾದರೂ ಜಾತ್ರೆಗೀತ್ರೆಯೋ?"

"ಜಾತ್ರೆಯೂ ಇಲ್ಲ ಏನೂ ಇಲ್ಲ. ಇಲ್ಲಿ ಯಾವ ಜಾತ್ರೆ?"

"ಮತ್ತೆ?"

"ಸ್ವಾಮಿಗಳು ಬಂದಿದ್ದಾರೆ"

"ಯಾವ ಸ್ವಾಮಿಗಳು?"

"ನಮ್ಮ ಸ್ವಾಮಿಗಳು"

"ಇಷ್ಟು ಜನಕ್ಕೂ ಊಟ? ಅವರೇ ಹಾಕುತಾರೆಯೋ?"

"ಹಾಕುತಾರೆ. ಅವರಿಗೇನು ಕಡವೆ? ಊಟ ಇದ್ದೇ ಇದೆ. ಊಟಕ್ಕೋಸ್ಕರ ವೇ ಯಾತ್ರೆ ತೀರ್ಥ ಮಾಡುವುದು? ಊಟಕ್ಕೋಸ್ಕರ ರೈಲು ಖರ್ಚು ಇಟ್ಟುಕೊಂಡು ಇಷ್ಟು ದೂರ ಬರಬೇಕೆ? ನಾವಂತೂ ಅದರ ಯೋಚನೆಯೇ ಮಾಡಲಿಲ್ಲವಮ್ಮ! ಸಾಲದ್ದಕ್ಕೆ ನಿನ್ನೆ ಮೊನ್ನೆ ಎರಡು ಏಕಾದಶಿ! ತೀರ್ಥ ಕೂಡ ಬಾಯಿಗೆ ಹಾಕಲಿಲ್ಲ. ಆ ಪೂಜೆ ಪುರಸ್ಕಾರ ಆ ಸಂಭ್ರಮ ನೋಡುತ್ತ ಇದ್ದುಬಿಟ್ಟರೆ ಊಟ ಯಾರಿಗೆ ಬೇಕಾಗುತ್ತೇಂದ್ರೆ? ಮೂರು ಸ್ವಾಮಿಗಳು, ಮೂರು ಮಂಗಳಾರತಿ, ಮೂರು ತೀರ್ಥ ಇಲ್ಲಿ ಮುಗಿದರೆ ಅಲ್ಲಿ; ಅಲ್ಲಿ ಮುಗಿದರೆ ಇಲ್ಲಿ; ಅಲ್ಲಿಂದಿಲ್ಲಿಗೆ ಓಡಾಟವೇ ಓಡಾಟ. ಸಂಭ್ರಮವೇ ಸಂಭ್ರಮ. ಯಾರಿಗುಂಟು ಯಾರಿಗಿಲ್ಲ! ನೋಡೋಕೆ ಎರಡು ಕಣ್ಣು ಸಾಲದು"

"ನೀವು ಎರಡು ಏಕಾದಶಿ ಮಾಡುತೀರಾ?"

"ಹೌದು-ಏಕಾದಶಿ ಉಪವಾಸ ಎಂದರೆ ನಮಗೆ ಎತ್ತಿದ್ದು."

"ನೋಡಿ. ನಮ್ಮಲ್ಲಿ ಒಂದು ಏಕಾದಶಿ ಮಾಡೋಣ ಅಂದರೂ ನಮ್ಮ ಮನೆಯಲ್ಲಿ ಹಾರಾಡುತ್ತಾರೆ"

"ಏಕಾದಶಿ ಉಪವಾಸ ಮಾಡಿಬಿಟ್ಟರೆ, ಅದಕ್ಕೆ ಹಿಂದಿನ ಹದಿನೈದುದಿನದಿಂದ ಮಾಡಿದ ಪಾಪವೆಲ್ಲಾ ಪರಿಹಾರವಂತೆ. ನಮಗೆಲ್ಲಾ ಅದೇ ಅಭ್ಯಾಸವಾಗಿ ಹೋಗಿದೆ"

"ನೀವು ನಿಟ್ಟುಪವಾಸ ಮಾಡುತೀರಾ?"

"ಮತ್ತೆ ಉಪವಾಸ ಎಂದರೆ ಅಚ್ಚೇರು ಅಕ್ಕಿಯ ಉಪ್ಪಿಟ್ಟು ತಿನ್ನುವುದು ಅಂತ ಮಾಡಿಕೊಂಡಿದ್ದೀರಾ? ಉಪ್ಪಿಟ್ಟು ತಿಂದು ಉಪವಾಸ, ನೀರು ಕುಡಿದು ನಿರಾಹಾರ ಅಂತ! ನಾವು ನೀರು ಕೂಡ ಕುಡಿಯುವುದಿಲ್ಲ. ನಾವಿರಲಿ ನಿನ್ನೆ ಮೊನ್ನೆ ಹುಟ್ಟಿದ ಮಕ್ಕಳು ಕೂಡ ನಮ್ಮಲ್ಲಿ ಉಪವಾಸ ಮಾಡುತ್ತವೆ; ಅವು ನಾಲಿಗೆ ಕಿತ್ತುಕೊಳ್ಳಲಿ, ಅತ್ತು ಅತ್ತು ಗಂಟಲೊಣಗಿ ಸುಮ್ಮನಾಗಬೇಕೇ ಹೊರತು ನಾವು ಬೇರೆ ಅಯ್ಯೋ ಎನ್ನುವುದಿಲ್ಲ. ಹದಿನೈದುದಿನಕ್ಕೆ ಒಂದು ದಿನ ಕೂಡ ಹೊಟ್ಟೆಗೆ ಬಿಡುವು ಕೊಡದೆ ಸುಮ್ಮನೆ ತಿಂದರೆ ಬಂತೇ ಭಾಗ್ಯ!"

ಸ್ವಲ್ಪ ಹೊತ್ತಿಗೆ ಚನ್ನಪಟ್ಟಣದ ಸ್ಟೇಷನ್ ಬಂತು. ಅಲ್ಲಿ ಒಬ್ಬ ಹೂವು

ಮಾರುವುದಕ್ಕೆ ತಂದ. ಹೆಂಗಸರಲ್ಲೊಬ್ಬರು ಅವನನ್ನು ಕರೆದು ಚೌಕಾಶಿಮಾಡಿ ಕೊನೆಗೆ ಅವನು ಹೇಳಿದ್ದನ್ನು ಕೊಟ್ಟು ಒಂದು ಕುಚ್ಚು ಕೊಂಡುಕೊಂಡರು. ಇದನ್ನು ನೋಡಿ ಮತ್ತೊಬ್ಬರು ಕೇಳಿದರು :

"ಇದೇನು ಮೈಸೂರಿಗೆ ಹೂವು ತೆಗೆದುಕೊಂಡು ಹೋಗಬೇಕೆ? ಅಲ್ಲಿ ಸಿಕ್ಕುವುದಿಲ್ಲವೇ?"

"ಅಲ್ಲಿಗೆ ಯಾರು ತೆಗೆದುಕೊಂಡು ಹೋಗುವವರು ಸದ್ಯ! ತಗೊಂಡು ಹೋಗಿ ಕೊಟ್ಟರೆ ಮುಡಿಕೊಂಡಾರೇನೋ! ಇವರು ಮಾಡಿಕೊಳ್ಳುವ ಸಿಸ್ತು ಸಾಲದು ಅಂತ ನಾನು ಊರಿಂದೂರಿಗೆ ಹೂವು ಕೊಂಡುಕೊಂಡು ಹೋಗಿ ಕೊಡಬೇಕೆ? ಮುಂದೆ ಶ್ರೀರಂಗಪಟ್ಟಣ ಸಿಕ್ಕುತ್ತದಲ್ಲಾ ಅಲ್ಲಿ ಕಾವೇರಿ ಪೂಜೆ ಮಾಡೋಣ ಅಂತ ತಗೊಂಡೆ."

ಆಕೆಯು ಹತ್ತಿರದಲ್ಲಿ ತೆಗೆದಿಟ್ಟುಕೊಂಡು ಬಂದಿದ್ದ ಒಂದು ತೆಂಗಿನಕಾಯಿ, ಎರಡು ಬಾಳೆಹಣ್ಣು ಅರಿಸಿನ ಕುಂಕುಮ ಇವುಗಳಿಗೆ ಅರ್ಥ ಈಗ ಗೊತ್ತಾಯಿತು. ಎದುರಿಗೆ ಕೂತಿದ್ದ ಒಂದು ಹೆಣ್ಣುಮಗುವಿಗೆ ಕ್ಲೋಸ್‌ಪೇಟೆಯಿಂದಲೂ ಆ ಬಾಳೆಯ ಹಣ್ಣಿನ ಮೇಲೆ ಕಣ್ಣು. "ಅಮ್ಮಾ ಬಾಳೆಹಣ್ಣು ಕೊಡಿಸೇ, ಬಾಳೆಹಣ್ಣು ಕೊಡಿಸೇ" ಎಂದು ಅಲ್ಲಿಂದಲೂ ಅವರ ತಾಯಿಯನ್ನು ಗೋಗರೆಯುತ್ತಿತ್ತು. ಈಗ ಒಂದು ಬಾಳೆಯಹಣ್ಣಿಗೆ ಒಂದು ತೆಂಗಿನಕಾಯಿಯ ಬೆಲೆ. ಆರು ಕಾಸಿಗೆ ಕಡಮೆ ಕೊಟ್ಟರೆ ಎಂಥ ಕಳಪೆಯ ಶಾಲ್ಯದ ಬಾಳೆಹಣ್ಣೂ ಬರುವುದಿಲ್ಲ. ಅಷ್ಟು ಖರೀದಿ ಕೊಟ್ಟು ಮಗುವಿಗೆ ತೆಗೆದುಕೊಡಲು ಮನಸ್ಸಿಲ್ಲದೆಯೋ ಕೈಲಾಗದೆಯೋ ಆಕೆ "ಮುಂದಿನ ಸ್ಟೇಷನ್ನಿನಲ್ಲಿ ಬರಲಿ, ಕೊಂಡುಕೊಡುತ್ತೇನೆ" ಎಂದು ಸಮಾಧಾನ ಪಡಿಸಲು ಯತ್ನಿಸುತ್ತಿದ್ದಳು. ಅದು ಒಪ್ಪದೆ "ಬೇಡ ಇದನ್ನೇ ಕೊಡಿಸು" "ಈಗಲೇ ಕೊಡಿಸು" ಎಂದು ಪೀಡಿಸುತ್ತಿತ್ತು. ಕಾವೇರಿಗೇನಾದರೂ ಜೀವವಿದ್ದು, ಮಕ್ಕಳನ್ನು ಹೆತ್ತವಳಾಗಿ, ಅವಳಿಗೆ ಆ ಮಕ್ಕಳ ಮೇಲೆ ಕರುಣೆ ಯೆಂಬುದಿದ್ದಿದ್ದರೆ ನಿಜವಾಗಿ ಆ ಮಗುವಿನ ಅಂಗಲಾಚಿಕೆಯನ್ನು ದೈನ್ಯವನ್ನು ನೋಡಿ ಅದಕ್ಕೆ ಹಣ್ಣು ಕೊಟ್ಟು ಸಮದಾಯಿಸುತ್ತಿದ್ದಳು. ಹೆಣ್ಣು ಮಕ್ಕಳನ್ನು ಹೆತ್ತ, ಜೀವದಕಾವೇರಿಯರಿಗೇ ಕಟುಕ ಮನಸ್ಸು, ಅವರ ಕಿವಿಗೇ ಮಕ್ಕಳ ಕೂಗು ಬೀಳದು. ನಿಷ್ಕರುಣೆಯಾಗಿ, ಕಂಡ ಕಂಡದ್ದನ್ನೆಲ್ಲಾ ಮುಳುಗಿಸಿಕೊಂಡು, ಉದಾ ಸೀನೆಯಾಗಿ ಆರ್ಭಟದಿಂದ ಹರಿದುಹೋಗುವ ಕಲ್ಲೆದೆಯ ಕಾವೇರಿಗೆ ಅದು ಕೇಳುತ್ತದೆಯೇ! ಶ್ರೀರಂಗಪಟ್ಟಣ ಬಂದಾಗ ಹಣ್ಣು ಕಾಯಿ ಹೂವು ಎಲ್ಲಾ ಸದಕ್ಷಿಣಾ ಸತಾಂಬೂಲವಾಗಿ ಹೊಳೆಯ ಪಾಲಾದವೆಂದು ಹೇಳಬೇಕಾಗಿಲ್ಲ. ಮಗುವಿನ ದೃಷ್ಟಿ ಹಣ್ಣಿನ ಮೇಲೇ. ಇದನ್ನು ಅದನ್ನು ಹಿಂಬಾಲಿಸಿ ನಿರಾಶೆಯಿಂದ ತುಂಬಿ ಹಿಂತಿರುಗಿ ಬಂತು. ಅದು ಗೊಳೋ ಎಂದು ಅಳುವುದಕ್ಕೆ ಮೊದಲು ಮಾಡಿತು.

ಪಶ್ಚಿಮವಾಹಿನಿಯಲ್ಲಿಯೂ ಜನರ ಗಲಾಟೆ. ಅಲ್ಲಿ ಯಾವಾಗಲೂ; ಗಲಾಟೆಯೇ. ಮೈಸೂರಿನಿಂದ ಹೊರಟವರಲ್ಲಿ ಅರ್ಧಾಂಶ ಅಲ್ಲಿ ಇಳಿಯುತ್ತಾರೆ; ಬೆಂಗಳೂರಿನಿಂದ ಹೊರಟವರೂ ಅರ್ಧಜನ ಇಳಿಯುತ್ತಾರೆ; ಹತ್ತುವವರೂ ಹಾಗೇ ಹತ್ತುತ್ತಾರೆ. ಇದು ಕಾವೇರಿಯ ಮಹಿಮೆ. ಕಾವೇರಿ ನೇರವಾಗಿ ಜೀವನ ವನ್ನೆರೆಯುವುದರ ಜೊತೆಗೆ ಹೀಗೆ ಪರೋಕ್ಷವಾದ ತೆರಿಗೆಯನ್ನೂ ಕೊಡುತ್ತಾಳೆ. ಅಲ್ಲಿ ಮಡಿಮಡಿಯಾಗಿ ಬೆತ್ತದ ಮಡಿ ಪೆಟ್ಟಿಗೆಗಳನ್ನು ಕಂಕುಳಲ್ಲಿ ಇರುಕಿಕೊಂಡು ಕೈಯಲ್ಲಿ ಚೊಂಬನ್ನು ಹಿಡಿದು ಗಾಡಿಗೆ ಓಡಿ ಓಡಿ ಬರುತ್ತಿದ್ದ ಜನರನ್ನು ನೋಡಿ ನಮ್ಮ ಹತ್ತಿರದಲ್ಲಿದ್ದ ಆ ಹಿರಿಯಾಕೆಗೆ ಹೇಗೆ ಹೇಗೋ ಆಗಿ "ಅಯ್ಯೋ, ಇಲ್ಲಿ ಇಳಿದು ಸ್ನಾನವಾಡಿಕೊಂಡು ಹೋಗಬಹುದಾಗಿತ್ತು. ಈ ತಿಂಗಳು ಕಾವೇರಮ್ಮನ ಮನೆಗೆ ಗಂಗಮ್ಮ ಬಂದಿರ್ತಾಳಂತೆ ತಂಗೇನ ನೋಡೋಕೆ. ಅದಕ್ಕೋಸ್ಕರ ಈ ತಿಂಗಳು ಕಾವೇರೀ ಸ್ನಾನಮಾಡಿದರೆ ಕಾವೇರಿ ಸ್ನಾನ ಗಂಗಾಸ್ನಾನ ಎರಡೂ ಆಗುತ್ತಂತೆ. ಕಾಶೀಗೆ ಹೋಗಿ ಬಂದ ಪುಣ್ಯ ಅಂತಾರೆ. ಆದರೆ ಏನುಮಾಡುವುದು; ನಾಳೆ ಸೋಮವಾರ ಅಮಾವಾಸ್ಯೆ; ಹೋಗಿ ಇನ್ನು ನಾಳೆಗೆ ಎಲ್ಲಾ ಸಿದ್ಧಪಡಿಸಿ ಕೊಳ್ಳಬೇಕು" ಎಂದು ಪೇಚಾಡಿಕೊಂಡಳು.

"ನೀವು ಏನೇನು ಹಾಕಿದೀರಿ ಅರಳೀಕಟ್ಟೆಗೆ?"

"ಅಕ್ಕಿ ಬೇಳೆ ಕಾಯಿಬೆಲ್ಲ ಅರಿಸಿನ ಕುಂಕುಮ ಎಲ್ಲಾ ಹಾಕಿದ್ದೀನಿ. ನಾನು ಹಾಕದ್ದೇ ಇಲ್ಲ: ಅದಕ್ಕೇ ನಾಳೆ ಹೋಗಿ ಏರ್ಪಾಟು ಮಾಡಿಕೊಳ್ಳಬೇಕು ಅಂದದ್ದು."

"ನಾನು ಅರಳುಂಡೆ ಹಾಕೋಣ ಅಂತ ಮಾಡಿದ್ದೀನಿ."

"ಹಾಕಬಹುದು; ಅರಳುಂಡೇನೂ ಹಾಕಬಹುದು; ಕಡಲೇ ಉಂಡೇನೂ ಹಾಕಬಹುದು; ಅದೇನೂ ಕಷ್ಟವಿಲ್ಲ. ಆದರೆ ನಮ್ಮ ಮನೆಯಲ್ಲಿ ತಿನ್ನುವ ಪದಾರ್ಥ ಏನಾದರೂ ಹಾಕಿದರೆ ಮಕ್ಕಳು ಉಳಬಾಳಿಸುವುದಿಲ್ಲ. ಅವೇ ಎಲ್ಲಾ ತಿಂದುಹಾಕಿ ಬಿಡುತ್ತವೆ. ಪೂಜೆ ಪುನಸ್ಕಾರಕ್ಕೆ ತಿಂಡಿ ತಿಂಡಿ ಅಂತ ತಿಂಡಿ ಮಾಡಿಕೊಂಡು ತಿಂದುಹಾಕಿಬಿಟ್ಟರೆ ಬಂತೇ ಭಾಗ್ಯ?"

"ಹಾಗಾದರೆ ನಾಳೆ ಏನು ಹಾಕಬೇಕೂಂತ ಇದ್ದೀರಿ."

"ಬೆಳ್ಳಿಗೆಜ್ಜೆ ಹಾಕೋಣ ಅಂತ ಮಾಡಿದ್ದೀನಿ."

"ಬೆಳ್ಳಿಗೆಜ್ಜೆಯೇ? ಮರ ಬೆಳ್ಳಿಗೆಜ್ಜೆ ಕಟ್ಟಿಕೊಳ್ಳುತ್ತೆಯೇ?"

"ಯಾಕೆ ಕಟ್ಟಿದರೆ ಕಟ್ಟಿಸಿಕೊಳ್ಳಲಾರದೇ? ಚೆನ್ನಾಗಿರುವುದಿಲ್ಲವೇ? ಚಿನ್ನ ಬೆಳ್ಳಿ ಅಂದರೆ ಮರಕ್ಕೂ ಚೆನ್ನಾಗಿರುತ್ತೆ. ಹಾಗೇಂತ ಮರಕ್ಕೆ ಕಟ್ಟುತ್ತಾರೆಯೇ? ಪುರೋಹಿತರಿಗೆ ಎರಡು ಕೊಟ್ಟು, ಮಿಕ್ಕದ್ದನ್ನು ನಮ್ಮ ಮನೆಯ ಹತ್ತಿರವಿರುವ ಗೋಪಾಲಕೃಷ್ಣದೇವರಿಗೆ ಕೊಡೋಣ ಅಂತ ಮಾಡಿಕೊಂಡಿದ್ದೀನಿ. ದೇವರಿಗೆ ಗೆಜ್ಜೆಪೋಣಿಸಿ ಸೊಂಟಕ್ಕೆ ಕಟ್ಟುತ್ತಾರಂತೆ."

"ಬೆಳ್ಳಿ ಚಿನ್ನ ಯಾರು ಹಾಕುತಾರೇಂದ್ರೆ; ನೀವೇ ಪುಣ್ಯವಂತರು. ನಮ್ಮಂಥವರು ಎಲ್ಲಿ ತಂದೇವು ಈಗಿನ ಬೆಳ್ಳಿ ಚಿನ್ನಗಳ ಬೆಲೆಯಲ್ಲಿ?"

"ನಾನು ತಾನೇ ಏನು ಕೊಂಡುಕೊಳ್ಳುತೀನೇ? ನನ್ನ ಹತ್ತಿರ ಸ್ವಲ್ಪ ಚೂರು ಪಾರು ಹಳೆಯ ಬೆಳ್ಳಿ ಇದೆ. ಅದನ್ನು ಹೋದಷ್ಟಕ್ಕೆ ಕೊಟ್ಟು, ಸಾಲದ್ದಕ್ಕೆ ದುಡ್ಡು ಕೊಟ್ಟು ನೂರೆಂಟು ಗೆಜ್ಜೆ ಕೊಂಡು ಕೊಳ್ಳೋಣ ಅಂತ ಮಾಡಿಕೊಂಡಿದೇನೆ. ಆ ಬೆಳ್ಳಿ ಇಟ್ಟುಕೊಂಡಿದ್ದೇನಲ್ಲಾ ಅದರ ಮೇಲೆ ಎಲ್ಲರದೂ ಕಣ್ಣು. ಈಗ ಅದನ್ನು ಹಾಕದೇ ಹೋದರೆ ಅದು ಯಾರ ಪಾಲೋ ಆಗುತ್ತದೆ. ಮೊನ್ನೆ ತಾನೇ ನನ್ನ ಸೊಸೆ ಹೆತ್ತಳು. ಹೆತ್ತ ದಿನದಿಂದ ವರಾತ-ಆ ಬೆಳ್ಳಿಯಲ್ಲಿ ಮಗುವಿಗೆ ಒಂದು ಜೊತೆ ಬೆಳ್ಳಿಬಳೆ ಮಾಡಿಸಿ ನಾಮಕರಣದ ಹೊತ್ತಿಗೆ ಅಂತ."

"ಅದೂ ಮಾಡಬಹುದಾದದ್ದೇ! ಮೊಮ್ಮಕ್ಕಳಿಗೆ ಮಾಡದೆ ಇನ್ನಾರಿಗೆ ಮಾಡಬೇಕು? ಮಗನ್ನ ಕಾಣದ್ದು ಮೊಮ್ಮಗನ್ನ ಕಂಡ ಅಂತ!"

"ಮಾಡಿದರೆ ಮಾಡಿಸಿಕೊಂಡಾರು, ಅವರಿಗೇನು? ವರ್ಷಾ ವರ್ಷಾ ಇವರು ಬಸಿರು ಬಾಣಂತಿ ಮಕ್ಕಳೂ ಇದ್ದೇ ಇರುತ್ತವೆ. ಅದೆಷ್ಟು ಮಕ್ಕಳು ತುಂಬಿ ಕೊಂಡಿದ್ದಾರೋ ಹೊಟ್ಟೆಯೊಳಗೆ! ನೀವೇ ನೀವೇ ಅಂದು ಕೊಂಡು ಸಾಯುವತನಕ ಇವರಿಗೇ ಮಾಡುತ್ತ ಇದ್ದರೆ ನಮ್ಮ ಜನ್ಮ ಸಾರ್ಥಕಮಾಡಿಕೊಳ್ಳುವುದು ಯಾವಾಗ?"

ಪಶ್ಚಿಮವಾಹಿನಿಯಲ್ಲಿ ಎಲ್ಲಾ ಗಾಡಿಗಳಿಗೂ ಜನ ನುಗ್ಗಿದರು. ಉಸಿರಾಡುವು ದಕ್ಕೆ ಜಾಗವಿಲ್ಲದಂತೆ ನೂಕು ನುಗ್ಗಲಾಯಿತು. ಆದರೆ ಇನ್ನೇನು ಇನ್ನೊಂದು ಹದಿನೈದು ಇಪ್ಪತ್ತು ನಿಮಿಷತಾನೇ ಎಂದು ಎಲ್ಲರೂ ಸೈರಿಸಿಕೊಂಡರು, ಸವರಿಸಿ ಕೊಂಡರು. ಅವರಲ್ಲಿ ಕೆಲವರು ಪರಿಚಿತರು, ಕೆಲವರು ಅಪರಿಚಿತರು. ಆಗ ತಾನೇ ಕಾವೇರಿಯ ಕೈಂಕರ್ಯವನ್ನು ನಡೆಸಿ ಕೃತಾರ್ಥಳಾಗಿದ್ದ ಹಿರಿಯಾಕೆಯ ಗುರುತಿದ್ದವರೊಬ್ಬರು ನಿಂತುಕೊಂಡೇ,-"ಏನು ಮಂಗಮ್ಮನವರೇ ಈಗ ಎಲ್ಲಿದ್ದೀರಿ?" ಎಂದು ಕೇಳಿದರು.

"ಮೈಸೂರಿನಲ್ಲಿ ಇದೇನು ಕಾವೇರಿಸ್ನಾನಕ್ಕೆ ಬಂದಿದ್ದೀರಾ? ನೀವು ಮೈಸೂರಿನಲ್ಲಿ ಏನು ಇರುವುದು? ಎಲ್ಲಿ ನಿಮ್ಮಮನೆ ಮೈಸೂರಲ್ಲಿ?"

"ಆನೆ ಕರೋಟಿಯ ಹತ್ತಿರ"

"ಪುಣ್ಯವಂತರು; ನಿತ್ಯ ಆನೆ ನೋಡುತ್ತಿರಬಹುದು!"

"ಅದೇನು ಪುಣ್ಯ ಅಂದರೆ? ನಿತ್ಯ ಆನೆ ನೋಡುವುದಕ್ಕೆ ಯಾರು ಹೋಗು ತ್ತಾರೆ? ನಾವೇನು ಎಳೆಮಕ್ಕಳೇ?"

"ಹಾಗೆಂದರೇನೂಂದ್ರೆ! ಗಜಲಕ್ಷ್ಮಿ ಅಲ್ಲವೇ? ಮಹಾರಾಜರೂ ನವರಾತ್ರಿ ಎಂಟು ದಿನ ಪಟ್ಟದಾನೆ ಪಟ್ಟದಕುದುರೆ ಪೂಜೆಮಾಡುವುದಿಲ್ಲವೇ? ನಾವೇನೋಮ್ಮ ಒಂದು ದಿನ ಆನೆ ಕಂಡರೆ ಹಾಗೇ ಕಳುಹಿಸುವುದಿಲ್ಲ. ನಮ್ಮ ರಸ್ತೆಗೆ ಶುಕ್ರವಾರ

ಶುಕ್ರವಾರ ಆನೆ ಬರುತ್ತೆ. ನಾನು ಅದಕ್ಕೆ ತಪ್ಪದೆ ಒಂದುಪಾವು ಅಕ್ಕಿ ಅರ್ಧ ಅಚ್ಚು ಬೆಲ್ಲ ಇನ್ನೂ ಏನಾದರೂ ಇದ್ದರೆ ಅದು ಎಲ್ಲಾ ಒಂದು ಮೊರದಲ್ಲಿಟ್ಟು ಅರಿಸಿನ ಕುಂಕುಮ ಪೂಜೆಮಾಡಿ ಕಳುಹಿಸುತ್ತೇನೆ. ದೂರದಿಂದ ಘಂಟೆಸದ್ದು ಕೇಳುತ್ತಿದ್ದಹಾಗೇ ಹುಡುಗರು "ಅಮ್ಮಾ ಆನೆಬಂತು, ಆನೆಬಂತು! ನಾನು ಅಕ್ಕಿ ಬೆಲ್ಲ ಇಡುತ್ತೇನೆ? ತಾನು ಅಕ್ಕಿ ಬೆಲ್ಲ ಇಡುತ್ತೇನೆ" ಎಂದು ಓಡಿಬರುತ್ತವೆ. ನಮ್ಮ ಮನೆಯಲ್ಲಿ ಅವರು "ಆನೆಯಹೊಟ್ಟೆಗೆ ಯಾರಾದರೂ ಹಾಕುವುದಕ್ಕಾಗುತ್ತದೆಯೇ? ಈ ಕಾಲದಲ್ಲಿ ಅದಕ್ಕೆ ಅಷ್ಟು ಅಕ್ಕಿಬೆಲ್ಲ ಖರ್ಚುಮಾಡುತಾರೆಯೇ? ಒಂದಚ್ಚುಬೆಲ್ಲ ಆರಾಣೆ; ಇನ್ನು ಮೊದಲ ತಾರೀಖಿನ ತನಕ ಅಕ್ಕಿಕೊಡುವುದಿಲ್ಲ." ಅಂತ ಕೂಗಾಡುತಾರೆ. ನಾನೇನೋ ಬಿಡುವುದಿಲ್ಲ ಗಜಲಕ್ಷ್ಮಿ ಅನಾಯಾಸವಾಗಿ ಮನೆಯಬಾಗಿಲಿಗೆ ಬಂದರೆ ಹಾಗೇ ಕಳುಹಿಸುತ್ತಾರೆಯೇ? ಆನೆಹೊಟ್ಟೆ ನೋಡೋಕೆ ದೊಡ್ಡದಾಗಿದ್ದರೇನು? ಅದೇನು ಉಪವಾಸಇರುತ್ತದೆಯೇ? ಮನುಷ್ಯರ ಹೊಟ್ಟೆಗೇಣುದ್ದ ಇದ್ದರೂ ಅದೇನು ತುಂಬುತ್ತೆಯೋ? ಅದೊಂದು ಹಗೇವು. ಹಗೇವನ್ನಾದರೂ ತುಂಬಿಸಬಹುದು. ಅದನ್ನು ತುಂಬಿಸುವುದಕ್ಕಾಗುವುದಿಲ್ಲ."

"ನಮಗೇನೋ ಆನೆ ಅಪರೂಪವಲ್ಲಮ್ಮ. ನಮ್ಮ ಹುಡುಗರಿಗೆ ಹಾವು ಕಂಡರೆ ಇಷ್ಟ. ನಮ್ಮಮನೆಯ ಹತ್ತಿರಕ್ಕೆ ಒಬ್ಬಳು ಎರಡುದಿನಕ್ಕೆ ಮೂರುದಿನಕ್ಕೆ ಒಂದು ನಾಗರಹಾವು ತರುತ್ತಾಳೆ. ಹುಡುಗರಿಗೆ ಅದನ್ನು ಕಂಡರೆ ಆಟ. ಎಲ್ಲಾ ಒಂದೊಂದು ಹಿಡಿ ಅಕ್ಕಿ ತಗೊಂಡುಹೋಗಿ ಹಾಕುತ್ತವೆ. ನಾನೂ ಇರುವುದರಲ್ಲೇ ಒಂದುಬಟ್ಟಲು ಹಾಲುಕೊಡುತ್ತೇನೆ. ಅದನ್ನು ನಮ್ಮೆದುರಿಗೇ ಅದಕ್ಕೆ ಕುಡಿಸುತ್ತಾಳೆ. ನಮ್ಮ ಮನೆಯಲ್ಲಿ ಮೊನ್ನೆ ಅದನ್ನು ನೋಡಿ 'ರೂಪಾಯಿಗೆ ಎರಡು ಸೇರು ಹಾಲು ಕೊಂಡುಕೊಂಡು ಅದಕ್ಕೇತಕ್ಕೆ ಹಾಲು? ಅವೊತ್ತು ಎದುರುಮನೆಯವರು ಎಳೆಯಮಗುವಿಗೆ ಅಂತ ಕೇಳಿದರೆ ಇಲ್ಲ ಅಂದೆ. ಇವೊತ್ತು ಇದಕ್ಕೆ ಮಾತ್ರ ಇದೆ. ಹಾವಿಗೆ ಹಾಲೆರದೇನು ಫಲ?' ಎಂದು ಗದರಿಸಿಕೊಂಡರು. ನಾಗರಕಲ್ಲಿಗೆ ತನಿಯೆರೆಯುವುದಿಲ್ಲವೇಂದ್ರೆ? ಅಂಥಾದ್ದರಲ್ಲಿ ಪ್ರತ್ಯಕ್ಷವಾಗಿ ನಾಗಪ್ಪ ಎದುರಿಗೆ ಬಂದಾಗ ಒಂದು ಬಟ್ಟಲು ಹಾಲುಕೊಟ್ಟರೆ ತಪ್ಪೆ? ನೆರೆಹೊರೆಯವರಿಗೆ, ಅವರಿವರಿಗೆ ಕೊಡುವುದಕ್ಕೆ ಕೊನೆಯೇನು ಮೊದಲೇನು? ಒಂದುದಿನ ಕೊಟ್ಟರೆ ಇನ್ನೊಂದುದಿನ ಕೇಳುತ್ತಾರೆ. ಅಲ್ಲಿಗೇನು ಮುಗಿಯಿತೇ? ಕೊಟ್ಟು ಯಾರನ್ನು ದಣಿಸುವುದಕ್ಕಾಗುತ್ತದೆ? ಕೊಟ್ಟರೆ ತಾನೇ ಸಂತೋಷವೇ? ಜನ ಹೇಗಿದ್ದರೂ ದೂರುತಾರೆ—ಕೊಟ್ಟರೂ ದೂರುತಾರೆ ಕೊಡದೆಇದ್ದರೂ ದೂರುತಾರೆ. ಕೊಟ್ಟು ದುರ್ಜನವಾಗುವುದಕ್ಕಿಂತ ಕೊಡದೆ ದುರ್ಜನವಾಗುವುದು ಮೇಲು. ನಮ್ಮ ಪದಾರ್ಥವಾದರೂ ನಮ್ಮ ಹತ್ತಿರ ಇರುತ್ತೆ."

"ಗಂಡಸರೇ ಹೀಗೇಂದ್ರೆ. ಪೂಜೆ ಪುನಸ್ಕಾರ ಧರ್ಮಕರ್ಮ ಅಂದರೆ ಅವರಿಗೆ ಆಗನು. ನಾನು ದ್ವಾದಶಿದಿನ ಬೆಳಿಗ್ಗೆ ಎಷ್ಟು ಹೊತ್ತಾದರೂ ಒಂದೆಲೆ

ತುಂಬ ಎಲ್ಲಾ ಬಡಿಸಿ ಗೋಗ್ರಾಸ ಇಟ್ಟು ಹಸುವಿಗೆ ಅರಿಸಿನ ಕುಂಕುಮ ಪೂಜೆ ಮಾಡಿದ ಹೊರತು ಊಟಕ್ಕೆ ಕುಳಿತುಕೊಳ್ಳುವುದಿಲ್ಲ. ನಮ್ಮ ಮನೆಯಲ್ಲಿ ಅದಕ್ಕೆ ಸೈರಣೆಯಿಲ್ಲ. ಭಿಕ್ಷಾನ್ನದ ಹುಡುಗರಿಗೆ ಒಂದು ತುತ್ತು ಅನ್ನ ಹಾಕೋಲ್ಲ. ಹುಲ್ಲುತಿನ್ನೋ ದನಕ್ಕೆ ಮಾತ್ರ ಒಂದಾಳಿನ ಅನ್ನ ಹಾಕುತೀಯೆ; ಮನುಷ್ಯರನ್ನು ದನಕ್ಕಿಂತ ಕಡೆಯಾಗಿ ಮಾಡುತೀಯೆ ಅಂತಾರೆ. ಒಂದುದಿನ ಆ ಹಸು ಹಾಲು ಕೊಡದಿದ್ದರೆ ಕಾಫಿಯಿಲ್ಲ, ಮಜ್ಜಿಗೆಯಿಲ್ಲ. ಇದಕ್ಕೆ ಇಹ, ಪರಕ್ಕೆ ಪರ, ಅಂತ ಹದಿನೈದು ದಿನಕ್ಕೆ ಒಂದುದಿನ ಗೋಗ್ರಾಸ ಇಟ್ಟರೆ ಆಗದು! ಭಿಕ್ಷಾನ್ನದ ಹುಡುಗನಿಗೇನು, ನಮ್ಮ ಮನೆ ಅಲ್ಲದಿದ್ದರೆ ಮತ್ತೊಂದು ಮನೆಯಾಯಿತು. ಇಲ್ಲದಿದ್ದರೆ ಅವನ ಪಾಡು! ಹೊಟ್ಟೆಗಿಲ್ಲದವರಿಗೆಲ್ಲರಿಗೂ ಪಡಿಬೀರುವುದಕ್ಕೆ ನಾವು ಹೊಣೆಯೇನು?"

"..............................."

"ಹುಡುಗರಾಗಲಿ ದೊಡ್ಡವರಾಗಲಿ, ಊಟಮಾಡಿ ಇನ್ನೂ ಅರ್ಧಗಂಟೆ ಯಾಗಿರುವುದಿಲ್ಲ, ಆಗಲೇ ಏನುತಿನ್ನಲಿ, ಏನುತಿನ್ನಲಿ, ಅಂತ ಬೆಕ್ಕಿನಹಾಗೆ ಒಳಕ್ಕೂ ಹೊರಕ್ಕೂ, ಹೊರಕ್ಕು ಒಳಕ್ಕು ಸುತ್ತುವುದಕ್ಕೆ ಮೊದಲುಮಾಡುತ್ತಾರೆ. ಹಾಗೆ ಹೋಗುತಾರೆ. ಹೀಗೆ ಬರುತಾರೆ. ಹಸಿವು ಹಸಿವು ಅಂತಾರೆ! ಅದೇನು ಹೊಟ್ಟೆ ಅಂದ್ರೆ! ಭಾನುವಾರದದಿನ ಒಂದೊಂದು ದಿವಸ ಮನೆಯಲ್ಲೇ ಇರುತ್ತಾ ರಲ್ಲಾ ಅವೊತ್ತು ಅವರೂ ಹಾಗೆ, ತಿಂಡಿ ತಿಂಡಿ! ಯಾರಾದರೂ ಇಸ್ಪೀಟಿಗೆ ಹರಟೆಗೆ ಸೇರಿಬಿಟ್ಟರಂತೂ ದೇವರೇಗತಿ; ಮನುಷ್ಯ ಪ್ರಪಂಚದಲ್ಲಿ ಹುಟ್ಟಿರೋದು ತಿನ್ನೋದಕ್ಕೆ ಒಂದಕ್ಕೇ ಏನೋ ಅನ್ನುವಹಾಗೆ ಆಡುತ್ತಾರೆ! ಎಷ್ಟು ತಿಂದರೂ ಇಷ್ಟೇ ಇದೆ. ಅದೇನು ತಿಂದದ್ದೆಲ್ಲಾ ಹೊಟ್ಟೇಲೇ ಕೂತಿರುತ್ತದೆಯೇ? ಹೊಟ್ಟೆ, ನಿನ್ನಿಂದ ನಾ ಕೆಟ್ಟೆ ಅಂತ!"

ರೈಲು ನಿಂತಿತು; ಮಾತುನಿಂತಿತು. ಎಲ್ಲರೂ ಇಳಿದು ಅವರವರ ದಾರಿ ಹಿಡಿದುಹೋದರು. ಅಂತು ಅವೊತ್ತು ಈ ಸನಾತನ ಧರ್ಮಸೂಕ್ಷ್ಮವನ್ನು ತಿಳಿದುಕೊಂಡಹಾಗಾಯಿತು. ಆನೆ ಕುದುರೆ, ಹಾವು ಹಲ್ಲಿ, ಹೊಳೆಕೆರೆ, ಮರಗಿಡ, ಪಶುಪಕ್ಷಿ ಇವು ಮನುಷ್ಯರಿಗಿಂತ ಮೇಲೆಂದೂ ಮಕ್ಕಳುಮರಿಗಿಂತ ಅವರನ್ನು ಮುಂಚೆ ಸಂತೋಷಪಡಿಸಬೇಕೆಂದೂ, ತಿಂದರೆ ಭಾಗ್ಯಬರಲಿಲ್ಲ, ಉಪವಾಸ ವನವಾಸ ಮಾಡಬೇಕು, ತಾವೂ ಒಣಗಬೇಕು, ತಮಗೆ ಸೇರಿದವರನ್ನೂ ಒಣಗಿಸ ಬೇಕು. ಹಾಗಾದರೆ ಕಾದಿದೆ ವೈಕುಂಠ, ಕೈಲಾಸ ಎಲ್ಲಾ!

## ೩ ಮನಸ್ಸಿನಂತೆ ಮಾಧವ

"ಏನು ರಾಮಣ್ಣ ಈಚೆಗೆ ಯಾವಾಗಲೂ ಏನೋ ಯೋಚನೆ ಮಾಡುತ್ತಿರು ತ್ತೀಯಲ್ಲಾ? ಮೊದಲಿನ ಉತ್ಸಾಹ ವಿನೋದಗಳೇ ಕಾಣುವುದಿಲ್ಲ!"

"ನೊನ್ನೆ ನಮ್ಮ ಹುಡುಗ ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ಫೇಲಾದ ನೆಂದು ತಿಳಿದಾರಭ್ಯ ಮನಸ್ಸಿಗೆ ಏನೂ ಬೇಕಾಗಿಲ್ಲ; ಅದೇ ಯೋಚನೆಯಾಗಿದೆ"

"ಅಯ್ಯೋ ಹುಚ್ಚಿ! ಇದಕ್ಕೆ ಯೋಚನೆ ಮಾಡಬೇಕೆ? ಎಲ್ಲಾದರೂ ಕೆರೆ, ಬಾವಿ ಬಿದ್ದು ಪ್ರಾಣಕಳೆದುಕೊಂಡಿಯೋ ಮತ್ತೆ! ಈಗಿನ ಕಾಲದ ಹುಡುಗರೇ ಹಾಗೆ. ಯಾವ ಹುಡುಗ ಸರಿಯಾಗಿ ಓದುತ್ತಾನೆ? ತಪ್ಪದೆ ಪ್ಯಾಸುಮಾಡಿಕೊಂಡು ಹೋಗುತ್ತಾನೆ?"

"ನಮ್ಮ ಹುಡುಗ ಹಾಗಲ್ಲ! ಅದಕ್ಕೇ ಯೋಚನೆ"!

"ಹೌದು. ಹೌದು. ಪ್ರತಿಯೊಬ್ಬರೂ ಅವರವರ ಮಕ್ಕಳನ್ನು ಹೊಗಳಿ ಕೊಳ್ಳದಿದ್ದರೆ ಇನ್ಯಾರು ಹೊಗಳುತ್ತಾರೆ? ಅವನದು ತಪ್ಪಿಲ್ಲದಿದ್ದರೆ ಮೇಷ್ಟರ ತಪ್ಪಿರಬೇಕು. ನಮ್ಮ ಹುಡುಗನೂ ಫೇಲಿನ ಮೇಲೆ ಫೇಲಾಗುತ್ತಾನೆ. ಯಾಕೋ ಅಂದರೆ ಮೇಷ್ಟರುಗಳು ಸರಿಯಾಗಿ ಬರುವುದಿಲ್ಲ, ಬಂದ ದಿನ ಪಾಠಗಳನ್ನು ಸರಿಯಾಗಿ ಮಾಡುವುದಿಲ್ಲ, ಹರಟೆಯಲ್ಲಿ ಕಾಲ ಕಳೆದುಬಿಡುತ್ತಾರೆ, ವರ್ಷದ ಹೊತ್ತಿಗೆ ಪಾಠಗಳೇ ಮುಗಿಯುವುದಿಲ್ಲ, ಕೊನೆಗೆ ಕೊನೆಗೆ ಬೆಳಿಗ್ಗೆ, ಸಾಯಂಕಾಲಘಂಟೆಗಟ್ಟಲೆ ಸ್ಪೆಷಲ್‌ಕ್ಲಾಸುಗಳನ್ನು ಮಾಡಿ ಮಾಡಿ ಗೋಳು ಹುಯ್ದುಕೊಂಡು ಪಾಠ ಮುಗಿಸಿದ ಶಾಸ್ತ್ರ ಮಾಡಿಬಿಡುತ್ತಾರೆ–ಅಂತ ಏನೇನೋ ಒಂದು ಖಂಡುಗ ದೂರುತ್ತಾನೆ. ಅವನು ಹೇಳುವುದನ್ನು ಕೇಳಿದರೆ ನಿಜವಿರಬಹುದೇನೋ ಎನ್ನಿಸುತ್ತದೆ."

"ಅದೆಲ್ಲಾ ನಾನು ನಂಬುವುದಿಲ್ಲ, ಈ ಹುಡುಗರಿಗೆ ಇನ್ನೇನು ಕೆಲಸ? ಇಲ್ಲ, ಮೇಷ್ಟರನ್ನು ದೂರುವುದು ಇಲ್ಲ ಪರೀಕ್ಷಕರನ್ನು ಆಕ್ಷೇಪಿಸುವುದು"

"ಹಾಗೂ ಏನಾದರೂ ಆಗಿರಬಹುದು!"

"ಹಾಗೆಲ್ಲಾ ಆಗುವುದಿಲ್ಲಯ್ಯ, ವಿಶ್ವವಿದ್ಯಾನಿಲಯದಲ್ಲಿ ದೊಡ್ಡ ದೊಡ್ಡ ಉಪಾಧ್ಯಾಯರೂ, ಅಧಿಕಾರಿಗಳೂ ಇದ್ದುಕೊಂಡು ಹಾಗೆಲ್ಲಾ ಮಾಡಗೊಡಿಸು ತ್ತಾರೆಯೆ?"

"ಹುಡುಗನಿಂದ ತಪ್ಪಿಲ್ಲ, ಉಪಾಧ್ಯಾಯರಿಂದ ತಪ್ಪಿಲ್ಲ. ಪರೀಕ್ಷಕರಿಂದ ತಪ್ಪಿಲ್ಲ–ಹಾಗಾದರೆ ಹುಡುಗ ಹೇಗೆ ಫೇಲಾಗುತ್ತಾನೆ?"

"ಅದೇ ನನ್ನ ಮನಸ್ಸಿಗೆ ಪೇಚಾಟವಾಗಿರುವುದು?"

"ಮತ್ತೆ ನಿನ್ನ ಊಹೆ ಏನು?"

"ನನ್ನ ಮನಸ್ಸಿಗೆ ಒಂದೇ ಕೊರತೆ ಹತ್ತಿಬಿಟ್ಟಿದೆ"

"ಏನು?"

"ಈಗ ನೋಡು, ಕೆಲವುದಿನದಿಂದ ಸೀಮೆಎಣ್ಣೆ ಸರಿಯಾಗಿ ಸಿಕ್ಕುತ್ತಿಲ್ಲವೇ? ಗಂಟೆಗಳಕಟ್ಟಲೆ ಮಳಿಗೆಯಮುಂದೆ ಶೀಷೆ ದುಡ್ಡು ಹಿಡಿದುಕೊಂಡು ನಿಂತಿದ್ದು ಕೊನೆಗೆ 'ಇಲ್ಲ' ಅನ್ನಿಸಿಕೊಂಡು ಬರುತ್ತಿದ್ದೇನೆಯೆ? ದಿನಕ್ಕೆ ಒಂದು ಘಂಟೆ ಯಾದರೂ ದೀಪ ಉರಿಸ ಬೇಡವೇ? ನಿಮಗೇನು ಶ್ರೀಮಂತರ ಮನೆಯ ಹಾಗೆ ಎಲೆಕ್ಟ್ರಿಕ್ ದೀಪವೇ, ಗ್ಯಾಸುಲೈಟೇ?"

"ಅಂದರೆ ಹುಡುಗನಿಗೆ ರಾತ್ರಿ ಹೆಚ್ಚುಹೊತ್ತು ಓದುವುದಕ್ಕೆ ಆಗುತ್ತಿಲ್ಲ ಅನ್ನು !"

"ಅದಲ್ಲ; ನಾನು ಪೂರ್ತಿ ಹೇಳುವತನಕ ಕೇಳು."

"ಹೇಳು !"

"ಇದ್ದ ಅಲ್ಪ ಸ್ವಲ್ಪ ಸೀಮೆಎಣ್ಣೆಯನ್ನ ದೀಪಕ್ಕೆ ಇಟ್ಟುಕೊಂಡುಬಿಟ್ಟರೆ ಒಲೆ ಹೊತ್ತಿಸುವುದಕ್ಕೆ ಎಲ್ಲಿಂದ ತರಬೇಕು ?"

"ಹೌದು ಅದಕ್ಕೇನು ಮಾಡಿದೆ? ನನಗೂ ಅದೇ ಕಷ್ಟ, ಹೇಳು !"

"ಅದಕ್ಕೆ ನಾನು ಹೇಳಿದೆ–ಹಳೆಯ ಕಾಗದಗಳನ್ನು ಹಾಳುಮಾಡಬೇಡಿ ಮಾಡಬೇಡಿ; ಒಲೆ ಹೊತ್ತಿಸುವುದಕ್ಕೆ ಇಟ್ಟುಕೊಳ್ಳಿ ಎಂತ; ಈಗ ಆರು ತಿಂಗಳಿಂದ ಹಾಗೇ ಮಾಡುತ್ತಿದ್ದಾರೆ. ಅದರಿಂದ ದೀಪಕ್ಕೆ ಸ್ವಲ್ಪ ಎಣ್ಣೆ ಮಿಗುತ್ತಾ ಇದೆ–"

"ಹೌದೇ, ಒಳ್ಳೆಯ ಬುದ್ಧಿವಂತಿಕೆಯೇ! ನಮ್ಮ ಮನೆಯಲ್ಲಿ ಕಾಯಿ ಜುಂಗು ಉಪಯೋಗಿಸುತ್ತಿದ್ದರು. ಅದು ಎಷ್ಟು ಒದಗೀತು? ಒಲೆ ಹೊತ್ತಿಸುವುದಕ್ಕೆ ಜುಂಗು ಒದಗಲಿ ಅಂತ ದಿನಾ ಎರಡೆರಡಾಣೆ ಕೊಟ್ಟು ತೆಂಗಿನಕಾಯಿ ತರುವುದ ಕಾಗುತ್ತದೆಯೇ ?"

"ಇಲ್ಲ ಅನ್ನು ; ಆಫೀಸಿನಲ್ಲಿ ಕೆಟ್ಟುಹೋದ ಕಾಗದ, ಚಿತ್ತಾದ ಕಾಗದ, ಕವರು ಒಂದುಳಿಯದಂತೆ ಎಲ್ಲಾ ಒಲೆ ಹೊತ್ತಿಸುವುದಕ್ಕಾಯಿತು."

"ಆಗಲಿ ಕಸದ ಬುಟ್ಟಿಗೂ ತಿಪ್ಪೆಗೂ ಹೋಗುವುದು ಒಲೆಗೆ ಹೋಯಿತು, ಅಷ್ಟೇ ತಾನೆ !"

"ಅದರಿಂದ ನಮ್ಮ ಹುಡುಗ ಫೇಲಾದನೇನೋ ಎಂತ ಮನಸ್ಸು ಕೊರೆಯು ತ್ತಿದೆ."

"ಅದಕ್ಕೂ ಇದಕ್ಕೂ ಏನು ಸಂಬಂಧ ?"

"ಕಾಗದ ಸರಸ್ವತಿಯಲ್ಲವೇ ?"

"ಅಲ್ಲವೇ ಮತ್ತೆ !"

"ಸರಸ್ವತಿಯನ್ನು ಸುಟ್ಟಿದ್ದರಿಂದ, ಪಾಪ ಬರಲಿಲ್ಲವೇ"?

"ನಾವು ಹಾಗನ್ನಬಹುದು, ಆದರೆ ಪರದೇಶಗಳಲ್ಲೆಲ್ಲಾ ಏನು ಮಾಡುತ್ತಾರೆ? ಅಲ್ಲಿ ಎಲ್ಲರ ಮನೆಯಲ್ಲೂ ನಿತ್ಯ ಒಲೆಹೊತ್ತಿಸುವುದು ಕಾಗದದಿಂದಲೆ ಅಂತಲ್ಲ !"

"ಅಯ್ಯ ಅವರ ಪದ್ಧತಿ ಅವರಿಗೆ, ನಮ್ಮ ಪದ್ಧತಿ ನಮಗೆ !"

"ಇದರಲ್ಲೆಲ್ಲಾ ನಮ್ಮ ಪದ್ಧತಿ ಏನುಮಾಡುತ್ತೆ ?"

"ಏನು ಮಾಡುತ್ತೋ ಏನೋ ಗೊತ್ತಿಲ್ಲ; ಮೊನ್ನೆ ನನ್ನ ಹೆಂಡತಿ ಹಾಗೆಂದಳು; ಆವಾಗಿನಿಂದ ನನಗೂ ಹಾಗೇ ಇದ್ದಿರಬಹುದೇನೋ ಅನ್ನಿಸು ತ್ತಿತ್ತು; ಮೊನ್ನೆ ಪುರಾಣಕ್ಕೆ ಹೋಗಿದ್ದಾಗ ಅಲ್ಲಿ ಆಚಾರ್ರೂ ಹಾಗೆ ಅಂದರಂತೆ! ಯಾರಿಗಾದರೂ ಹಾಗೇ ಅನ್ನಿಸುತ್ತದೆ ನೋಡು !"

"ಚೆನ್ನಾಗಿದೆ; ನೀನು ಹೀಗೆ ಗೊಡ್ಡುನಂಬಿಕೆಯವನೆಂದು ನಾನು ತಿಳಿದಿರಲಿಲ್ಲ. ಅದಕ್ಕೆ ಈಗೇನು ಮಾಡುವುದಕ್ಕಾಗುತ್ತದೆ?"

"ಗೊಡ್ಡೋ ಲೊಡ್ಡೋ! ಅವೊತ್ತಿನಿಂದ ಇನ್ನು ಮೇಲೆ ನಮ್ಮ ಮನೆಯಲ್ಲಿ ಕಾಗದ ಸುಡಬೇಡಿರೆಂದು ಹೇಳಿಬಿಟ್ಟೆ".

"ಹೌದು ನೀನು ಸಿಗರೇಟು ಸೇದುತ್ತೀಯಲ್ಲ; ಸಿಗರೇಟು ಸೇದಿದರೆ ಕಾಗದ ಸುಟ್ಟ ಹಾಗಾಗಲಿಲ್ಲವೇ?

"ನಿಜ, ಅದಕ್ಕೇ ಈಗ ಸಿಗರೇಟು ಕುಡಿಯುವುದನ್ನು ಬಿಟ್ಟು ಮಂಗಳೂರು ಬೀಡಿ ಹಿಡಿದಿದ್ದೇನೆ!"

"ದುಡ್ಡೂ ಉಳಿಯಿತು ಅನ್ನು! ಆದರೆ ಹಿಂದೆ ಕಾಗದ ಸುಟ್ಟದ್ದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡೆಯೋ?"

"ಪಾಪಕ್ಕೆ ಶಿಕ್ಷೆ ಆಯಿತಲ್ಲ! ಇನ್ನೇನು! ಮತ್ತೆ ಪ್ರಾಯಶ್ಚಿತ್ತ ಬೇರೆಯೇ?"

"ಶಿಕ್ಷೆ ಒಂದೇ ಸಲ. ಫೇಲಾಗುವುದೋ, ಎರಡು ಮೂರು ಸಲ ಫೇಲಾಗುವುದೋ ಯಾರಿಗೆ ಗೊತ್ತು! ಇಲ್ಲ, ಪುಸ್ತಕಕ್ಕೇ ಬೆಂಕಿ ಬಿದ್ದು ಸುಟ್ಟುಹೋದರೆ!"

"ಹೌದೇ! ನನಗೆ ತೋರಿಯೇ ಇರಲಿಲ್ಲ"

"ಅದಕ್ಕೆ ನಾನೊಂದು ಉಪಾಯ ಹೇಳಲೇ?"

"ಹೇಳು"

"ಈಗ ಆರುತಿಂಗಳಿಂದ ಸುಮಾರು ಎಷ್ಟು ಕಾಗದ ನೀವು ಸುಟ್ಟಿರಬಹುದು?"

"ಏನು ಎರಡು ಮೂರು ರೀಮಿನಷ್ಟಿರಬಹುದು."

"ಮೂರು ಅನ್ನು? ಅದಕ್ಕೆ ಒಂದು ರೀಮು ಬಡ್ಡಿ ಸೇರಿಸು. ಆ ನಾಲ್ಕು ರೀಮನ್ನು ಓದುವ ಹುಡುಗರಿಗೆ ದಾನಮಾಡು; ಇಲ್ಲವೆ ಸರಸ್ವತಿ ನಾಮವನ್ನು ಬರೆಸಿ ಬ್ರಾಹ್ಮಣರಿಗೆ ದಾನಮಾಡು!"

"ಅಷ್ಟೊಂದು ಕಾಗದ ಎಲ್ಲಿ ತರುವುದೋ ಈಗ? ದುಡ್ಡುಕೊಟ್ಟರೂ ಸಿಕ್ಕುವುದಿಲ್ಲವೇ!"

"ಯಾಕೆ ನೀವು ಸೊಸೈಟಿಯ ಮೆಂಬರಲ್ಲವೇ?"

"ಮೆಂಬರುಗಳಿಗೆಲ್ಲಾ ಒಂದೊಂದು ದಸ್ತು ಕೊಡುತ್ತಾರೆ."

"ಅದು ಯಾವ ಮೂಲೆಗೆ?"

"ಅಷ್ಟು ಸಾಕಾಗುತ್ತದೆಯೇ? ಅದಕ್ಕೆ ಈಗಿನ ಹುಡುಗರು ಪರೀಕ್ಷೆಯ ಕಾಲದಲ್ಲಿ ಮಾಡುತ್ತಿರುವ ಉಪಾಯವನ್ನು ಮಾಡಬೇಕು".

"ಏನದು?"

"ಸೊಸೈಟಿಯ ಬಾಗಿಲಲ್ಲಿ ಹೋಗಿ ನಿಂತುಕೊಳ್ಳುವುದು; ಬಂದ ಬಂದವರನ್ನೆಲ್ಲಾ "ಸಾರ್, ಸಾರ್, ನೀವು ಮೆಂಬರೇ ಸಾರ್?" ಎಂದು ಕೇಳುವುದು, ಅವರು ಹೌದು ಎಂದರೆ "ದಯವಿಟ್ಟು ತಮ್ಮ ಹೆಸರಿನಲ್ಲಿ ಒಂದುದಸ್ತು ಕಾಗದ

ಕೊಡಿಸಿಕೊಡಿ ಸಾರ್!" ಎಂದು ಕೇಳುವುದು. ಹತ್ತು ಜನರನ್ನು ಕೇಳಿದರೆ ಅವರಲ್ಲಿ ಯಾರಾದರೂ ನಾಲ್ಕು ಜನರಾದರೂ ಮೆಂಬರಾಗಿರುತ್ತಾರೆ; ಒಬ್ಬಿಬ್ಬರಾದರೂ ಕೊಡಿಸುತ್ತಾರೆ."

"ನಿಜ ಹಾಗಾದರೂ ಮಾಡಬೇಕು! ಇನ್ನೊಂದುಸಲ ನಮ್ಮ ಹುಡುಗ ಪರೀಕ್ಷೆಗೆ ಕುಳಿತುಕೊಳ್ಳುವಹೊತ್ತಿಗೆ ನಾಲ್ಕುರೀಮು ಕಾಗದಕೊಂಡು ದಾನಮಾಡಿಬಿಡಬೇಕಲ್ಲವೇ?"

"ಹೌದು, ಮತ್ತೆ."

"ಮೊನ್ನೆ ನಮ್ಮತಾಯಿಗೆ ಮಾಸಶಿವರಾತ್ರಿಯ ಪೂಜೆ ಮಾಡಿಸುವುದಕ್ಕೆ ಬಂದಿದ್ದಾಗ ಪುರೋಹಿತ ಶಾಮುಭಟ್ಟರೂ ಹೀಗೆ ಅಂದರಂತೆ"

"ಹೌದು ಸ್ವಾಮಿ; ನ್ಯಾಯವಾದುದ್ದಕ್ಕೇನು? ಯಾರಾದರೂ ಹೇಳುವುದೇ ಅದು."

"ಅವರು ಆದರಂತೆ–ಬೇಕಾದರೆ ನಾನೇ ಸರಸ್ವತಿ ನಾಮುವನ್ನು ಬರೆದು ಕೊಡುತ್ತೇನೆ ಅಂತ! ಅದಕ್ಕಷ್ಟು ದಕ್ಷಿಣೆ ಕೊಟ್ಟರೆ ಆಯಿತು ಅಲ್ಲವೇ? ಆಗಲಿ ಎಂದುಬಿಡುತ್ತೇನೆ, ಬರೀ ಕಾಗದ ಹುಡುಗರಿಗೆ ಕೊಟ್ಟರೆ ಏನು ಬಂತು? ಆಮೇಲೆ ಕಂಡ ಕಂಡ ಹುಡುಗರೆಲ್ಲಾ ನನಗೆ ಕಾಗದಕೊಡಿ ತನಗೆ ಕಾಗದಕೊಡಿ ಅಂತ ಬಂದು ಅಂಟಿಕೊಂಡಾರು!? ಅಲ್ಲವೇ?"

"ಅದೂ ನಿಜವೇ ಅನ್ನು; ಆದರೆ ಪುರೋಹಿತರು ಹೀಗೂ ಸಂಪಾದಿಸಿ, ಹಾಗೂ ಸಂಪಾದಿಸಿ ಕೊನೆಗೆ ಸೌದೆಖರ್ಚು, ಸೀಮೆಎಣ್ಣೆ ಕಷ್ಟ ಇವುಗಳನ್ನು ಉಳಿಸಿಕೊಂಡುಬಿಟ್ಟರೆ?"

"ಅಂದರೆ"

"ನಿಮ್ಮಿಂದ ಸರಸ್ವತೀನಾಮ ಬರೆದ ಕಾಗದವನ್ನು ದಾನ ತೆಗೆದುಕೊಂಡು ಹೋಗಿ ಅವರೂ ಒಲೆ ಹತ್ತಿಸುವುದಕ್ಕೆ ಮೊದಲು ಮಾಡಿದರೆ?"

"ಹೌದೇ? ಹಾಗೇನಾದರೂ ಮಾಡಿದರೆ ಆ ಪಾಪ ಅವರದ್ದು! ಅವರ ಮಗ ಮುಂದಿನವರ್ಷ ಫೇಲಾಗಲಿ, ಯಾರಿಗೇನಂತೆ!"

"ಅವರ ಮಗನ ಜೊತೆಗೆ ನಿಮ್ಮ ಮಗನೂ ಮತ್ತೆ ಫೇಲಾದರೆ?"

"ಯಾಕೆ?"

"ಯಾಕೆ? ಮತ್ತೆ ಸರಸ್ವತಿ ಸುಡುವುದಕ್ಕೆ ನೀವು ಕಾರಣರಾದ ಹಾಗಾಯಿತೋ ಇಲ್ಲವೋ? ಹಿಂದೆ ನಿಮ್ಮ ಹುಡುಗ ನಾಲ್ಕು ವಿಷಯಗಳಲ್ಲಿ ಫೇಲಾಗಿದ್ದರೆ ಈಗ ಒಂದರಲ್ಲಾಗಬಹುದು? ಅಂತೂ ಫೇಲು, ಫೇಲೇ ಹೌದೋ ಅಲ್ಲವೋ?"

"ಅಲ್ಲವೇ ಮತ್ತೆ! ಈಗೇನು ಮಾಡುವುದು, ಒಳ್ಳೆಯ ಸಂಕಟಕ್ಕಿಟ್ಟುಕೊಂಡಿತಲ್ಲ!"

"ಹೀಗೆ ಮಾಡಬಹುದಲ್ಲ!"

"ಹೇಗೆ?"

"ದಾನ ಕೊಟ್ಟುಬಿಟ್ಟು, ಅದನ್ನು ನೀವೇ ಇಟ್ಟುಕೊಂಡುಬಿಡಿ!"

"ಛೀ! ಅದೆಂಥ ದಾನ! ಅದು ದತ್ತಾಪಹಾರವಾಗುವುದಿಲ್ಲವೇ!"

"ನಿಜ; ಹಾಗಾದರೆ ಪುರೋಹಿತರು ಅದನ್ನು ತೆಗೆದುಕೊಂಡು ಹೋಗಲಿ! ಅದನ್ನು ತಮ್ಮ ಮನೆಯಲ್ಲಿ ದೇವರ ಹತ್ತಿರ ಇಟ್ಟು ಪೂಜೆ ಮಾಡುತ್ತಿರಬೇಕು ಎಂದು ಹೇಳಿ."

"ಅದಕ್ಕೆ ಅವರು ಪೂಜೆಯ ಖರ್ಚನ್ನು ಕೇಳುತ್ತಾರೇನೋ?"

"ಕೇಳಬಹುದು ಕೇಳಲಿ, ಬ್ರಾಹ್ಮಣರಿಗೆ ಎರಡು ಕಾಸು ಕೊಟ್ಟರೆ ಅನ್ಯಾಯವೇ? ಈಗ ನಿಮ್ಮ ಹುಡುಗನಿಗೆ ಬೆಳಗೆದ್ದರೆ ತಿಂಗಳ ಫೀಜು, ಅಪ್ಲಿಕೇಷನ್ ಫೀಜು ಎಂತ ದಂಡ ಸುರಿಯುವುದಿಲ್ಲವೇ? ಅದಕ್ಕಿಂತ ಕಡೆಯೇ?"

"ಹೌದು, ಎಷ್ಟುದಿನ ಹೀಗೆ ನಡೆಸುವುದು?"

"ಎಷ್ಟುದಿನ? ಗೊತ್ತೇಇದೆ–ನಿಮ್ಮ ಹುಡುಗ ಪ್ಯಾಸಾಗುವತನಕ."

"ಒಂದು ಪಕ್ಷ ಮತ್ತೆ ಫೇಲಾದರೆ?"

"ಫೇಲಾದರೆ ಪುರೋಹಿತರಿಂದ ದಂಡ ತೆರೆಸುವುದು."

"ಅವರು ಯಾಕೆ ದಂಡ ತೆರುತ್ತಾರೆ!"

"ಮತ್ತೆ ಹೇಗೆ? ಈಗ ನಿಮ್ಮ ಹುಡುಗ ಫೇಲಾಗಿರುವುದು ಸರಸ್ವತಿಯನ್ನು ಸುಟ್ಟದ್ದರಿಂದ; ಅದಕ್ಕೆ ಈಗ ಆಗಿರುವ ಶಿಕ್ಷೆಯ ಜೊತೆಗೆ ಪ್ರಾಯಶ್ಚಿತ್ತವನ್ನೂ ಮಾಡಿಕೊಂಡು ಪಾಪ ಪರಿಹಾರವಾದಮೇಲೆ ಹುಡುಗ ಪ್ಯಾಸಾಗಬೇಕೋ ಇಲ್ಲವೋ! ಅವನು ಫೇಲಾದರೆ ಪುರೋಹಿತರು ಎಲ್ಲೋ ಕದ್ದು ನೀವು ದಾನ ಮಾಡಿದ ಸರಸ್ವತೀ ನಾಮದ ಕಾಗದವನ್ನು ಸುಟ್ಟಿದ್ದಾರೆ ಅಂತ ಅರ್ಥ!"

"ಹೌದು ಈ ಮಾತನ್ನು ಮೊದಲೇ ಹೇಳಿದರೆ, ಯಾವ ಪುರೋಹಿತರು ದಾನ ತೆಗೆದುಕೊಳ್ಳುತ್ತಾರೆ?"

"ಅದೂ ನಿಜ ಅನ್ನು, ಒಳ್ಳೇ ಕಷ್ಟಕ್ಕೆ ಬಂತು ಈ ಜಪಾನಿನವರು ಬರ್ಮ ದೇಶವನ್ನು ಆಕ್ರಮಿಸಿ ನಮಗೆ ಸೀಮೆ ಎಣ್ಣೆ ಸಿಕ್ಕದಹಾಗೆ ಮಾಡಿದ್ದು! ಎಂದಿಗೆ ಮುಗಿಯುತ್ತದೆಯೋ ಈ ಯುದ್ಧ?"

"ಎಂದಿಗೆ ಮುಗಿಯುತ್ತೋಪ್ಪ! ದೇವರೇಬಲ್ಲ. ಹೊತ್ತಾಯಿತು ಹೋಗಿ ಬರುತ್ತೇನೆ! ನಮಸ್ಕಾರ!

## ಟಿ. ವಿ. ಸುಬ್ರಹ್ಮಣ್ಯಂ

# ಶಾಸ್ತ್ರಿಗಳ ಸಾಹಿತ್ಯ

### (i) ಕೃಷ್ಣಶಾಸ್ತ್ರಿಗಳ ಗ್ರಂಥಗಳು

೧ ಅಲಂಕಾರ ೧–೧೧, ಕಾವ್ಯಲಕ್ಷಣ ವಿಭಾಗ, **ಕನ್ನಡ ಕೈಪಿಡಿ, ಭಾಗ–೧**
[ಮೈಸೂರು ವಿಶ್ವವಿದ್ಯಾನಿಲಯ, ೧೯೩೬. ೪ನೇ ಮುದ್ರಣ : ೧೯೬೫]

೨ **ಭಾಸಕವಿ**

[ಮೈಸೂರು ವಿಶ್ವವಿದ್ಯಾನಿಲಯ, ೧೯೩೩. ೪ನೇ ಮುದ್ರಣ: ಮೈಸೂರು, ಶಾರದಾ ಮಂದಿರ, ೧೯೬೭]

೩ **ಸಂಸ್ಕೃತ ನಾಟಕ**

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ–೧೦
[ಮೈಸೂರು ವಿಶ್ವವಿದ್ಯಾನಿಲಯ, ೧೯೩೭. ೨ನೇ ಮುದ್ರಣ: ೧೯೫೫]

೪ **ಶ್ರೀಪತಿಯ ಕಥೆಗಳು**

[ಮೈಸೂರು, ಕಾವ್ಯಾಲಯ, ೧೯೪೮. ೨ನೇ ಮುದ್ರಣ: ಮೈಸೂರು ಶಾರದಾಮಂದಿರ, ೧೯೬೬]

೫ **ಸರ್ವಜ್ಞಕವಿ**

ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕಮಾಲೆ–೨೯
[ಮೈಸೂರು ವಿಶ್ವವಿದ್ಯಾನಿಲಯ, ೧೯೪೮. ೩ನೇ ಮುದ್ರಣ: ೧೯೬೫]

೬ **ವಚನ ಭಾರತ**

[ಮೈಸೂರು, ಲೇಖಕರು, ೧೯೫೦. ೪ನೇ ಮುದ್ರಣ: ೧೯೬೭]

೭ ಕಥಾಮೃತ

[ಬೆಂಗಳೂರು, ಲೇಖಕರು, ೧೯೫೨. ೨ನೇ ಮುದ್ರಣ : ಮೈಸೂರು, ಶಾರದಾಮಂದಿರ, ಅಚ್ಚಿನಲ್ಲಿ]

೮ ಗದಾಯುದ್ಧನಾಟಕ ಮತ್ತು ಅದರ ನಾಯಕ

[ಮೈಸೂರು, ಶಾರದಾಮಂದಿರ, ೧೯೫೫]

೯ ನಿರ್ಮಲ ಭಾರತೀ ಅಥವಾ ಮಕ್ಕಳ ಮಹಾಭಾರತ

[ಬೆಂಗಳೂರು, ಲೇಖಕರು, ೧೯೬೦]

೧೦ ಬಂಕಿಮಚಂದ್ರ

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ–೪೬
[ಮೈಸೂರು ವಿಶ್ವವಿದ್ಯಾನಿಲಯ, ೧೯೬೦]

೧೧ ಭಾಷಣಗಳು ಮತ್ತು ಲೇಖನಗಳು—೧,೨

[ಮೈಸೂರು, ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ, ೧೯೪೮, ೧೯೪೯]
ಎರಡೂ ಭಾಗಗಳು ಒಂದೇ ಸಂಪುಟವಾಗಿ
[ಮೈಸೂರು, ಶಾರದಾಮಂದಿರ, ೧೯೬೦]

ಭಾಷಾಂತರಗಳು

೧೨ ಸ್ವಾಮಿಶಿಷ್ಯ ಸಂವಾದ (ಶರಚ್ಚಂದ್ರ ಚಕ್ರವರ್ತಿ)

[ಬೆಂಗಳೂರು, ಶ್ರೀ ರಾಮಕೃಷ್ಣಾಶ್ರಮ, ೧೯೨೩]

೧೩ ನಾಗಮಹಾಶಯ (ಶರಚ್ಚಂದ್ರ ಚಕ್ರವರ್ತಿ)

[ಬೆಂಗಳೂರು, ಶ್ರೀ ರಾಮಕೃಷ್ಣಾಶ್ರಮ ೧೯೩೭. ೨ನೇ ಮುದ್ರಣ : ೧೯೬೭]

೧೪ ನಿಬಂಧಮಾಲಾ–೨ (ರವೀಂದ್ರನಾಥ ಠಾಕೂರ್)

[ನವದೆಹಲಿ, ಸಾಹಿತ್ಯ ಅಕಾಡೆಮಿ, ೧೯೬೩]

### ಸಂಪಾದಿತ ಗ್ರಂಥಗಳು

೧೫ ಕವಿಜಿಹ್ವಾಬಂಧನಂ (ಈಶ್ವರ ಕವಿ)

[ಮೈಸೂರು, ಶಾರದಾಮಂದಿರ, ೧೯೫೨. ೨ನೇ ಮುದ್ರಣ : ೧೯೫೭]

ಶ್ರೀ ಟಿ. ಎಸ್. ವೆಂಕಣ್ಣಯ್ಯನವರೊಂದಿಗೆ ರಚಿಸಿದ ಗ್ರಂಥಗಳು

೧೬ ಶ್ರೀ ರಾಮಕೃಷ್ಣಪರಮಹಂಸರ ಚರಿತ್ರೆ

[ಬೆಂಗಳೂರು, ಶ್ರೀ ರಾಮಕೃಷ್ಣಾಶ್ರಮ, ೧೯೧೯]

೧೭ ಹರಿಶ್ಚಂದ್ರ ಕಾವ್ಯ ಸಂಗ್ರಹ

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ-೧

[ಮೈಸೂರು ವಿಶ್ವವಿದ್ಯಾನಿಲಯ, ೧೯೩೧]

## (ii) ಭಾಷಣಗಳು ಮತ್ತು ಲೇಖನಗಳು

[ಶ್ರೀಯುತರ ಭಾಷಣಗಳು ಮತ್ತು ಲೇಖನಗಳನ್ನು ಮೈಸೂರು ಶಾರದಾಮಂದಿರದವರು ಮುದ್ರಿಸಿದ್ದಾರೆ. ಆ ಪುಸ್ತಕದಲ್ಲಿ ಸೇರಿಲ್ಲದ ಲೇಖನಗಳನ್ನು ಮಾತ್ರ ಈ ಪಟ್ಟಿಯಲ್ಲಿ ಕಾಣಿಸಿದೆ.]

೧ ಅಹಂ ಕರೋಮೀತಿ ವೃಥಾಭಿಮಾನಃ

[ಕಂನಾಡ ಸಾಹಿತ್ಯಜ್ಞರ ಆತ್ಮಕಥನ (ಧಾರವಾಡ, ಮಿಂಚಿನಬಳ್ಳಿ) ೧೯೪೬]

೨ ಅಧ್ಯಕ್ಷ ಭಾಷಣ–ವಿಶೇಷ ಸಾಹಿತ್ಯೋತ್ಸವ (ಕನ್ನಡ ಸಾಹಿತ್ಯ ಪರಿಷತ್ ೧೯–೭–೧೯೪೭)

[ಕನ್ನಡನುಡಿ ೧೯, ಪು. ೧೬೭, ೧೯೪೭]

೩ ಎಂ. ಆರ್. ಶ್ರೀನಿವಾಸಮೂರ್ತಿ

[ಕನ್ನಡನುಡಿ ೧೬, ಪು. ೩೧೦, ೧೯೫೩]

೪ ಯಜ್ಞಫಲ-ಭಾಸನ ಇನ್ನೊಂದು ನಾಟಕ

[ಕನ್ನಡ ನುಡಿ ೧೮, ಪು. ೧೯, ೧೯೫೫]

೫ ಭಾನುಮತಿಯೊಡನೆ ನೆತ್ತವನ್ನಾಡಿದವರಾರು ?

[ಜಯಕರ್ಣಾಟಕ ೧೪, ಪು. ೧೮೮]

೬ ಕನ್ನಡ ನಿಘಂಟಿನ ಮುನ್ನಡೆ
[ಕನ್ನಡನುಡಿ ೧೯, ಪು. ೧೭೫–೭೭, ಮತ್ತು ೨೮೫]

### (iii) ಇತರ ಲೇಖಕರ ಗ್ರಂಥಗಳಿಗೆ ಮುನ್ನುಡಿಗಳು

೧ ಕೃಷ್ಣಮೂರ್ತಿ, ಕೆ. : **ಕನ್ನಡ ಯಜ್ಞಫಲ**, ೧೯೫೮
[ಎ. ಆರ್. ಕೃ. ಅವರ ಭಾಸಕವಿ, ಅನುಬಂಧ–೨]

೨ ಕೃಷ್ಣಮೂರ್ತಿ ಕೆ. : **ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ** ೧೯೬೧

೩ ಗುಂಡಪ್ಪ, ಡಿ. ವಿ. : **ಶ್ರೀರಾಮ ಪರೀಕ್ಷಣಂ**, ೧೯೫೭

೪ ನರಸಿಂಗರಾವ್ ಮಾನ್ವಿ: **ನಡುಗನ್ನಡ**, ೧೯೫೬

೫ ಪರಮೇಶ್ವರಭಟ್ಟ, ಎಸ್. ವಿ. : **ಕನ್ನಡ ರಘುವಂಶ**, ೧೯೫೫

೬ ಪುಟ್ಟಪ್ಪ, ಕೆ. ವಿ. : **ರಕ್ತಾಕ್ಷಿ**, ೧೯೩೨

೭ ಸೀತಾರಾಮಶಾಸ್ತ್ರಿ, ಮೈಸೂರು : **ಕರ್ಣಾಟಕ ಪ್ರತಿಮಾ ನಾಟಕ**, ೧೯೬೨
[ಎ. ಆರ್. ಕೃ. ಅವರ ಭಾಸಕವಿ, ಅಧ್ಯಾಯ ೪]

೮ ಸುಬ್ಬರಾವ್, ಎ ಮತ್ತು ನಾರಾಯಣರಾವ್, ಎ : **ಪ್ರಾಣಿಶಾಸ್ತ್ರ**, ೧೯೪೪

೯ ವೆಂಕಟರಾಮಪ್ಪ, ಕೆ. : **ನಿತ್ಯಾತ್ಮ ಶುಕಯೋಗಿ ಭಾಗವತ**, ೧೯೬೦,
[ಕನ್ನಡ ಕವಿಕಾವ್ಯ ಮಾಲೆಯ ಸಂಪಾದಕರಿಗೆ ಪುಸ್ತಕದ ಬಗ್ಗೆ ಅಭಿನಂದನಾಪತ್ರ]

### (iv) ಶ್ರೀ ಕೃಷ್ಣಶಾಸ್ತ್ರಿಗಳನ್ನು ಕುರಿತ ಲೇಖನಗಳು

೧ **ಕನ್ನಡ ಕಾಲುಶತಮಾನ**
[ಮಿಂಚಿನ ಬಳ್ಳಿಯ ಬೆಳ್ಳಿಯ ಹಬ್ಬದ ಸಂಚಿಕೆ. ಪು. ೩೭೩, ೧೯೬೫]

೨ **ಕನ್ನಡ ನುಡಿ** (ಸಂಪಾದಕೀಯ)
ಡಾ. ಎ. ಆರ್. ಕೃ. ತೋರಿರುವ ದಾರಿ
[ಕನ್ನಡನುಡಿ ೨೩, ಪು. ೧೮೮, ೧೯೬೦]

೩ ಕೃಷ್ಣಮೂರ್ತಿ, ಕೆ.

ಕಥಾಮೃತ
[ಅಭಿವಂದನೆ, ಪು. ೬೨, ೧೯೫೬]

೪ ಕೃಷ್ಣರಾಯ, ಅ. ನ.

ಎ. ಆರ್. ಕೃಷ್ಣಶಾಸ್ತ್ರಿಗಳು
[ಕನ್ನಡ ಕುಲರಸಿಕರು, ಪು. ೩೧, ೧೯೫೧]

೫ ಕೃಷ್ಣರಾಯ, ಅ. ನ.

ಕನ್ನಡಕ್ಕಾಗಿ ವೀರದೀಕ್ಷೆ ವಹಿಸಿದ ತಪಸ್ವಿ ಎ.ಆರ್. ಕೃಷ್ಣಶಾಸ್ತ್ರಿಗಳು
[ಪ್ರಜಾಮತ, ೧೦-೯-೧೯೫೦]

೬ ಜವರೇಗೌಡ, ದೇ.

ಶ್ರೀ ಎ. ಆರ್. ಕೃ. ಅವರ ಗದ್ಯಶೈಲಿ
[ಅಭಿವಂದನೆ, ಪು. ೭೬, ೧೯೫೬; ಅಲ್ಲದೆ ಸಾಹಿತ್ಯಮಾರ್ಗ-೧. ೧೯೬೦]

೭ ನರಸಿಂಹಮೂರ್ತಿ, ಕೆ.

ಶ್ರೀಪತಿ
[ಜೀವನ ೧೩, ಪು. ೧೨೮, ೧೯೫೩]

೮ ನಾಯಕ, ಹಾರೋಗದ್ದೆ ಮಾನಪ್ಪ

ಕನ್ನಡದ ಸೇನಾನಿ ಶ್ರೀ ಕೃಷ್ಣಶಾಸ್ತ್ರಿಗಳು
[ಅಭಿವಂದನೆ, ಪು. ೨೮, ೧೯೫೬]

೯ ನಾಯಕ, ಹಾರೋಗದ್ದೆ ಮಾನಪ್ಪ

ಎ. ಆರ್. ಕೃ.
[ಸಂಕೀರ್ಣ, ಪು. ೫೦, ೧೯೬೬]

೧೦ ಪರಮೇಶ್ವರಭಟ್ಟ, ಎಸ್. ವಿ.

ಶ್ರೀಪತಿಯ ಕಥೆಗಳು
[ಅಭಿವಂದನೆ, ಪು. ೩೭, ೧೯೫೬]

೧೧ ವಸ್ತುಕೋಶ: ಎ. ಆರ್. ಕೃ. ಅವರಿಗೆ "ಅಭಿವಂದನೆ" ಸಮರ್ಪಣೆಯ
ಸಮಾರಂಭ
[ಪ್ರಬುದ್ಧಕರ್ಣಾಟಕ ೩೮, ಪು. ೧೫೪, ೧೯೫೬]

೧೨ ಸಂಪಾದಕೀಯ
[ಪ್ರಬುದ್ಧಕರ್ಣಾಟಕ ೩೮, ಪು. ೧೭೦, ೧೯೫೬]

೧೩ ಸಂಪಾದಕೀಯ
ಎ. ಆರ್. ಕೃ. ಅವರಿಗೆ ಸನ್ಮಾನ
[ಪ್ರಬುದ್ಧಕರ್ಣಾಟಕ ೪೪, ಪು. ೧೪೩, ೧೯೬೨]

೧೪ ಪ್ರಭುಶಂಕರ, ಚಿ. ಕ.
ಕನ್ನಡದ ಶ್ರೀರಕ್ಷೆ ಶ್ರೀ ಕೃಷ್ಣಶಾಸ್ತ್ರಿಗಳು
[ಜೀವನ ೧೩, ಪು. ೧೯೨, ೧೯೫೩]

೧೫ ಬಾಲಕೃಷ್ಣ ಕುಲಮರ್ವ ಮತ್ತು ಸುರೇಂದ್ರದಾನಿ
ಅಂಬಳೆ ಕೃಷ್ಣಶಾಸ್ತ್ರಿಗಳು
[ಕನ್ನಡ ಸಾಹಿತ್ಯ ಸಮ್ಮೇಲನದ ಕಥೆ, ಪು. ೮೫, ೧೯೫೭]

೧೬ ಬಿಳಿಗಿರಿ, ಎಚ್. ಎಸ್.
ಶ್ರೀಮಾನ್ ಎ. ಆರ್. ಕೃ. ಅವರ ದೃಷ್ಟಾಂತಗಳು
[ಅಭಿವಂದನೆ, ಪು. ೭೮, ೧೯೫೬]

೧೭ ಮಾಧವರಾವ್, ಬಿ. ಎಸ್.
ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು
[ಅಭಿವಂದನೆ, ಪು. ೩, ೧೯೫೬]

೧೮ ಮಾಳವಾಡ, ಸ. ಸ.
ಒಂದು ಹಿರಿಯ ಜೀವನ
[ಜೀವನ ೧೩, ಪು, ೧೧೬, ೧೯೫೨]

೧೯ ಮಿರ್ಜಿ ಅಣ್ಣಾರಾಯ
ಕತೆಗಾರ ಕೃಷ್ಣಶಾಸ್ತ್ರಿಗಳ ಒಲವು
[ಜೀವನ ೧೪, ಪು. ೨೧೦, ೧೯೫೩]

೨೦ ರಂಗಸ್ವಾಮಿ ಜಿ. ಆರ್.

ಗುರುವರ್ಯ ಶ್ರೀ ಕೃಷ್ಣಶಾಸ್ತ್ರಿಗಳು
[ಅಭಿವಂದನೆ, ಪು. ೭, ೧೯೫೭]

೨೧ ರಾಜರತ್ನಂ ಜಿ. ಪಿ.

ಶ್ರೀ ಕೃಷ್ಣಶಾಸ್ತ್ರಿಗಳು
[ಪ್ರಜಾವಾಣಿ, ? ೧೯೬೦]

೨೨ ರಾಮರಾವ್, ಆರ್. ಎಸ್.

ಕನ್ನಡ ಗರಡಿಯಾಳು
[ಜೀವನ ೧೩, ಪು. ೧೮೨, ೧೯೫೩]

೨೩ ವೆಂಕಟರಾಮಪ್ಪ, ಕೆ.

ಎ. ಆರ್. ಕೃ. ಮತ್ತು ಆಸ್ಥಾನ ವಿದ್ವಾನ್ ಬೆಳ್ಳಾವೆ ನರಹರಿ
ಶಾಸ್ತ್ರಿಗಳ ಭಾವಚಿತ್ರ ಅನಾವರಣೋತ್ಸವ ಭಾಷಣಗಳು
[ಕನ್ನಡನುಡಿ ೧೬, ಪು. ೧೯೫, ೧೯೫೩]

೨೪ ವೆಂಕಟಸುಬ್ಬಯ್ಯ, ಜಿ.

ವಚನಭಾರತ; ವಚನವ್ಯಾಸ
[ಜೀವನ ೧೩, ಪು. ೧೭೬, ೧೯೫೩]

೨೫ ಶಾಂತಾ, ಕೆ.

ನನ್ನತಂದೆ : ಡಾ. ಎ. ಆರ್. ಕೃ.
[ಪ್ರಜಾಮತ ? ೧೯೬೪]

೨೬ ಶ್ರೀಧರ, ಬಿ. ಎಚ್.

ಸಂಸ್ಕೃತ ನಾಟಕ
[ಅಭಿವಂದನೆ, ಪು. ೫೨, ೧೯೫೭]

೨೭ ಶ್ರೀನಿವಾಸಮೂರ್ತಿ, ಎಂ. ಆರ್.

ಎ. ಆರ್. ಕೃ. ಅವರ ಭಾವಚಿತ್ರ ಅನಾವರಣ ಮಹೋತ್ಸವ
[ಕನ್ನಡನುಡಿ ೧೬, ಪು. ೭೫, ೧೯೫೩]

೨೮ ಶ್ರೀನಿವಾಸಯ್ಯಂಗಾರ್, ಅ. ನ.

ಆಚಾರ್ಯ ಶ್ರೀ ಕೃಷ್ಣಶಾಸ್ತ್ರಿಗಳ ಸಾಹಿತ್ಯ ಸೇವೆ
[**ಜೀವನ ೧೩,** ಪು. ೧೮೨, ೧೯೫೩]

೨೯ ಸ್ವಾಮಿ, ಬಿ. ಜಿ. ಎಲ್.

ಎ. ಆರ್. ಕೃ.
[**ಪಂಚಕಲಶ ಗೋಪುರ,** ೧೯೬೪]

೨೭ ಸೀತಾರಾಮಯ್ಯ, ಎಂ. ವಿ.

ಕನ್ನಡ ಹೊಸ ಸಾಹಿತ್ಯದಲ್ಲಿ ಪ್ರೊ ಎ.ಆರ್. ಕೃಷ್ಣಶಾಸ್ತ್ರಿಗಳ ಸ್ಥಾನ
[**ಜೀವನ, ೧೩,** ಪು. ೧೧೩, ೧೯೫೩]

೨೮ ಸುಬ್ಬರಾಯಪ್ಪ, ಡಿ. ಸಿ.

ಸಹೋದ್ಯೋಗಿ ಶ್ರೀ ಕೃಷ್ಣಶಾಸ್ತ್ರಿಗಳು
[**ಜೀವನ ೧೩,** ಪು. ೧೬೫, ೧೯೫೩]

೨೯ ಸುಬ್ರಹ್ಮಣ್ಯಶಾಸ್ತ್ರೀ, ಮೋಟಗಾನಹಳ್ಳಿ, ಶಂ.

ಕನ್ನಡ ಸರಸ್ವತಿಯ ಹೆಮ್ಮೆಯ ಪುತ್ರ ಡಾ. ಎ. ಆರ್. ಕೃಷ್ಣಶಾಸ್ತ್ರಿ
[**ಸಂಯುಕ್ತ ಕರ್ನಾಟಕ,** ೬-೧೧-೧೯೬೦]

೩೦ ನಾನು ನಡೆದುಬಂದ ದಾರಿ-೧

ಪ್ರೊ. ಎ. ಆರ್. ಕೃ. ಅವರ ನೆನಪುಗಳು
[**ಸಂಯುಕ್ತ ಕರ್ನಾಟಕ,** ೨೯-೧೧-೧೯೬೭]

## (v) ಕವನಗಳು

೧ ನರಸಿಂಹಸ್ವಾಮಿ, ಕೆ. ಎಸ್.

ವಚನಭಾರತ ಪ್ರವೇಶ
[**ದೀಪದಮಲ್ಲಿ,** ೧೯೫೫]

೨ ವರದರಾಜರಾವ್, ಜಿ.

ಗುರುಕೃಪೆ
[**ವಿಜಯದಶಮಿ,** ೧೯೫೭]

೩ ಗುಂಡಪ್ಪ, ಎಲ್.

ಕನ್ನಡದ ಕೃಷಿಕ
[ಜೀವನ ೧೩, ೧೯೫೩]

## (vi) ಶ್ರದ್ಧಾಂಜಲಿ

೧ ಅಚ್ಯುತ

ಸರಸ್ವತೀ ಪುತ್ರ
[ಕರ್ಮವೀರ ೧೧-೨-೧೯೬೮]

೨ ಗುಂಡಪ್ಪ, ಡಿ. ವಿ.

ಎ. ಆರ್. ಕೃಷ್ಣಶಾಸ್ತ್ರಿ: ಪ್ರಾಮಾಣಿಕ ಪ್ರತಿಭಾಸಂಪನ್ನ
[ಕನ್ನಡಪ್ರಭ ೨-೨-೧೯೬೮]

೩ ಚನ್ನಪ್ಪ

ಕನ್ನಡದ ಶ್ರೀ ರಕ್ಷೆ: ಡಾ. ಎ. ಆರ್. ಕೃ.
[ಗೋಕುಲ ೧೧-೨-೧೯೬೮]

೪ ನಾಗರಾಜಯ್ಯ, ಹಂ. ಪ.

ಸರಸ್ವತಿಯ ಮನೆಯಲ್ಲಿ ಕಳವು
[ಪ್ರಜಾಮತ ೧೧-೨-೧೯೬೮]

೫ ರಾಮಚಂದ್ರರಾವ್, ಎಸ್. ಕೆ.

ಕನ್ನಡನುಡಿರಥದ ಸಾರಥಿ: ಕೃಷ್ಣಶಾಸ್ತ್ರಿ
[ಸುಧಾ ೧೧-೨-೧೯೬೮]

೬ ವೆಂಕಟರಾವ್, ಎಂ. ಎಸ್.

ಕನ್ನಡ ಕುಲಗುರು
[ಕನ್ನಡಪ್ರಭ ೨-೨-೧೯೬೮]

೭ ವೈಕುಂಠರಾಜು, ಬಿ. ವಿ.

ಕನ್ನಡದ ಶ್ರೀ ರಕ್ಷೆ ಶ್ರೀ ಕೃಷ್ಣಶಾಸ್ತ್ರಿಗಳು
[ಪ್ರಜಾವಾಣಿ ೩-೨-೧೯೬೮]

೮ ನಾಯಕ, ಹಾ. ಮಾ.

ಕನ್ನಡದ ಸೇನಾನಿ
[ಕನ್ನಡಪ್ರಭ ೧೨-೨-೧೯೬೮]

೯ ರಾಜರತ್ನಂ ಜಿ. ಪಿ.

ಪುಸ್ತಕವೆಲ್ಲ ಪೂಜೆ
[ಪ್ರಜಾವಾಣಿ ೪-೨-೧೯೬೮]

೧೦ Ramachandra Rao, S. K.

Krishna Sastri : Scholar & teacher
**[Deccan Herald, 8-2-1968]***

* ಈ ಸೂಚಿ ಪೂರ್ಣವಾದುದಲ್ಲ. ಇದರಲ್ಲಿ ಬಿಟ್ಟುಹೋಗಿರಬಹುದಾದುವನ್ನು ಯಾರಾದರೂ ಕೃಪೆಯಿಟ್ಟು ತಿಳಿಸಿದರೆ ಲೇಖಕರು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸುತ್ತಾರೆ. —ಸಂ.

# ಡಾ. ಎ. ಆರ್. ಕೃಷ್ಣಶಾಸ್ತ್ರಿಗಳ ಜೀವನದ ಕೆಲವು ಮುಖ್ಯ ವರ್ಷಗಳು

ಜನನ: ಫೆಬ್ರವರಿ ೧೨, ೧೮೯೦
ಮದುವೆ: ೧೯೦೬
ಬಿ. ಎ. ಪದವಿ: ೧೯೧೩ (?)
ಎಂ. ಎ. ಪದವಿ: ೧೯೧೫ (?)
ಕಾಲೇಜು ಅಧ್ಯಾಪಕರು: ೧೯೧೫
ಸೆಂಟ್ರಲ್ ಕಾಲೇಜು 'ಕರ್ಣಾಟಕ ಸಂಘ'ದ ಸ್ಥಾಪನೆ: ೧೯೧೮
'ಪ್ರಬುದ್ಧ ಕರ್ಣಾಟಕ'ದ ಆರಂಭ: ೧೯೧೯
ಕನ್ನಡ ಅಸಿಸ್ಟೆಂಟ್ ಪ್ರೊಫೆಸರ್: ೧೯೨೭
'ಭಾಸಕವಿ' ಪ್ರಕಟಣೆ: ೧೯೩೩
'ಸಂಸ್ಕೃತ ನಾಟಕ' ಪ್ರಕಟಣೆ: ೧೯೩೭
ಕನ್ನಡ ಪ್ರಾಧ್ಯಾಪಕರೂ, ಇಲಾಖೆಯ ಮುಖ್ಯರೂ ಆದದ್ದು: ೧೯೩೯
೨೬ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು: ೧೯೪೧
ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತಿ: ೧೯೪೬
'ವಚನಭಾರತ' ಪ್ರಕಟಣೆ: ೧೯೫೦
'ಕಥಾಮೃತ' ಪ್ರಕಟಣೆ: ೧೯೫೨
'ಅಭಿನಂದನೆ' ಗ್ರಂಥ ಸಮರ್ಪಣೆ: ೧೯೫೬
ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಿ. ಲಿಟ್. ಪ್ರಶಸ್ತಿ: ೧೯೬೦
'ಬಂಕಿಮಚಂದ್ರ' ಪ್ರಕಟಣೆ: ೧೯೬೦
ಸಾಹಿತ್ಯ ಅಕಾದಮಿ ಪ್ರಶಸ್ತಿ: ೧೯೬೧
ಕೊನೆಯ ಕೃತಿ 'ನಿಬಂಧಮಾಲಾ' ಪ್ರಕಟಣೆ: ೧೯೬೩
ನಿಧನ: ಫೆಬ್ರವರಿ ೧, ೧೯೬೮



# ಸಂಪಾದಕೀಯ

## ಪೂಜ್ಯ ನೆನಪು

ಯಾವ ಪುಣ್ಯಾತ್ಮರು ಐವತ್ತು ವರ್ಷಗಳ ಹಿಂದೆ ಈ ಪತ್ರಿಕೆಯನ್ನು ಹುಟ್ಟು ಹಾಕಿದರೋ, ಯಾರ ಶ್ರಮ ದುಡಿಮೆಗಳು ಇಂದಿನ ಕನ್ನಡ ಜನದ ಸಾಂಸ್ಕೃತಿ ಜೀವನವನ್ನು ವಿಸ್ತರಿಸಿದವೋ, ಯಾರು ಕನಸುಕಂಡು, ಕನಸಿನ ಬಹುಭಾಗವನ ತಮ್ಮ ಜೀವಮಾನದಲ್ಲಿ ನನಸಾಗಿಸಿದರೋ, ಯಾರ ಜೀವನ ಆದರ್ಶಗಳು ಕನ್ನ ಜನಕೋಟಿಗೆ ದಾರಿದೀಪಗಳಾಗಿವೆಯೋ, ಯಾರು ಕನ್ನಡ ನವೋದಯದ ಜೇ ಚುಕ್ಕಿಯಾದರೋ ಆ ಪ್ರಾತಃಸ್ಮರಣೀಯರು ಪ್ರೊಫೆಸರ್ ಡಾ. ಎ. ಆರ್. ಕೃ ಶಾಸ್ತ್ರಿಗಳು ತೀರಿಕೊಂಡು ಕನ್ನಡ ಭಾಷೆಯನ್ನು, ಸಾಹಿತ್ಯವನ್ನು, ನಾಡನ್ನು ಬ ವಾಗಿಸಿದ್ದಾರೆ; 'ಪ್ರಬುದ್ಧಕರ್ಣಾಟಕ' ಇಂದು ತಬ್ಬಲಿಯಾಗಿದೆ. ತನ್ನ ಚಿನ್ನ ಹಬ್ಬವನ್ನು ಆಚರಿಸಿಕೊಳ್ಳುವ ಸಡಗರದಲ್ಲಿದ್ದ 'ಪ್ರಬುದ್ಧಕರ್ಣಾಟಕ'ದ ಚಿನ್ನ ವರ್ಷದ ಮೊದಲ ಸಂಚಿಕೆ ತನ್ನ ಸ್ಥಾಪಕರ ನೆನಪಿನ ಸಂಚಿಕೆಯಾಗಿ, ಕಣ್ಣೀ ಕಾಣಿಕೆಯಾಗಿ ಪ್ರಕಟವಾಗುತ್ತಿರುವುದು ದುಃಖದ ಮಾತು; ದುರ್ದೈವದ ಸಂಗತಿ.

ಆಧುನಿಕ ಕನ್ನಡ ಸಾಹಿತ್ಯಚರಿತ್ರೆಯಲ್ಲಿ 'ಪ್ರಬುದ್ಧಕರ್ಣಾಟಕ'ದ ಸ್ಥಾನ ಅದ್ವಿತೀಯವಾದದ್ದು. ಭಾರತೀಯ ಭಾಷೆಗಳ ನವೋದಯ, ಪಾರಿಭಾಷಿ ಸಾಹಿತ್ಯದ ಬೆಳವಣಿಗೆ—ಈ ದೃಷ್ಟಿಯಿಂದಲೂ ಅದರ ಸಾಧನೆ ಅಪೂರ್ವವಾದುದ ಕಾಲವನ್ನು ಮೀರಿ ಪ್ರವಾದಿಯ ಕೆಲಸ ಮಾಡಿದ ಈ ಪತ್ರಿಕೆಯ ಯಶಸ್ಸಿಗೆ ಕಾರಣರು ಶ್ರೀ ಕೃಷ್ಣಶಾಸ್ತ್ರಿಗಳು. ಅವರ ನೆನಪಿಗಾಗಿ ಈ ವಿಶಿಷ್ಟ ಸಂಚಿಕೆಯನ್ ಪ್ರಕಟಿಸುತ್ತಿದ್ದೇವೆ. ಇಡಿಯ ಸಂಚಿಕೆ ನಮ್ಮ ಕಣ್ಣೀರಿನ ಕಾಣಿಕೆ; ನಮ್ಮ ಗೌರವ ಕೃತಜ್ಞತೆಗಳ ಸಂಕೇತ. ನಾವು ಕೃಷ್ಣಶಾಸ್ತ್ರಿಗಳಿಗಾಗಿ ಮಾಡಿರುವುದ ಅತ್ಯಲ್ಪ; ಆದರೆ ಅವರು ಕನ್ನಡಿಗರಿಗೆ ಕೊಟ್ಟಿರುವುದು ಅಪಾರ. ಅವರ ಆಶೀರ್ವಾ ನಮ್ಮನ್ನು ರಕ್ಷಿಸುತ್ತಿರಲಿ.

ಕುವೆಂಪು ಅವರು ಹೇಳಿರುವಂತೆ "ಶ್ರೀ ಕೃಷ್ಣಶಾಸ್ತ್ರಿಗಳ ನೆನಪೇ ಒಂದ ಪೂಜ್ಯವಸ್ತು. ಅವರು ಇಂದು ದೇಹಚಕ್ಷುವಿಗೆ ಅಗಮ್ಯವಾಗಿದ್ದಾರೆ; ಆದ ಹೃದಯಚಕ್ಷುವಿಗೆ ಧ್ಯಾನಗಮ್ಯರಾಗಿದ್ದಾರೆ." ಅವರ ನೆನಪು ನಮ್ಮನ್ನು ಸದ ಎಚ್ಚರಿಸುತ್ತಿರಲು ಈ ಸಂಚಿಕೆಯೂ ಕಾರಣವಾಗಿರಲಿ ಎಂಬುದು ನವ ನಮ್ರವಾದ ಬಯಕೆ. ಅದು ಸಾಧ್ಯವಾಗುವುದಾದರೆ ನಾವು ಕೃತಾರ್ಥರು.

## ಸ್ವವಿಷಯ

ದೊಡ್ಡವರ ಹೆಸರನ್ನು ಹಿಡಿದು ಕೆಲಸಕ್ಕೆ ಹೊರಟರೆ ಎಷ್ಟು ದೊಡ್ಡ ಕೆಲಸಗಳು ಎ...ಷ್ಟ ಸುಲಭವಾಗಿ ಈಡೇರುತ್ತವೆಂಬುದಕ್ಕೆ ಈ ಸಂಚಿಕೆಯೊಂದು ಸಾಕ್ಷಿ. ಇದು ...ಪ್ರಮಾಣದಲ್ಲಿ ಪ್ರಕಟವಾಗಲು ನೆರವುನೀಡಿದ ಎಲ್ಲರನ್ನೂ ನಾವು ಕೃತಜ್ಞತೆ...ಂದ ಸ್ಮರಿಸುತ್ತೇವೆ. ಅದರಲ್ಲಿಯೂ ಹಲವು ವಿಧದಿಂದ ಸಹಕರಿಸಿದ ಶ್ರೀಮತಿ ...ೀಲಾ ಸುಬ್ರಹ್ಮಣ್ಯಂ ಹಾಗೂ ಶ್ರೀ ಟಿ. ವಿ. ಸುಬ್ರಹ್ಮಣ್ಯಂ ಅವರನ್ನು ವಿಶೇಷವಾಗಿ ...ಾದಿಸಬೇಕಾಗಿದೆ. ಈ ಸಂಚಿಕೆ ನಮ್ಮ ಊಹೆಯನ್ನೂ ಮೀರಿ ಬೆಳೆದಿರುವುದ...ದ, ಈ ವರ್ಷದ ಮುಂದಿನ ಸಂಚಿಕೆಗಳು ತೆಳುವಾಗುವುದು ಅನಿವಾರ್ಯ. ಇದು ...ರ್ತಿಯಾಗಿ ಶ್ರೀ ಕೃಷ್ಣಶಾಸ್ತ್ರಿಗಳ ನೆನಪಿನ ಸಂಚಿಕೆಯಾದದ್ದರಿಂದ ಬೇರೆ ಬೇರೆ ಭಾಗಗಳೂ ಇಲ್ಲಿ ಪ್ರಕಟವಾಗಿಲ್ಲ. ವಾಚಕರು ನಮ್ಮ ಆಶಯವನ್ನು ಅರ್ಥ ಮಾಡಿಕೊಂಡು ಸಹಕರಿಸುವರೆಂಬ ನಂಬುಗೆ ನಮಗಿದೆ. ಐವತ್ತನೆ ವರ್ಷದ ... ಮೊದಲ ಸಂಚಿಕೆಯಿಂದ 'ಪ್ರಬುದ್ಧಕರ್ಣಾಟಕ'ದ ವಿನ್ಯಾಸ ಅಲ್ಪಸ್ವಲ್ಪ ...ದಲಾಗಿರುವುದನ್ನು ಓದುಗರು ಗಮನಿಸಬಹುದು. ಇದನ್ನು ಇನ್ನೂ ಸುಂದರ...ಾಳಿಸಬೇಕೆಂಬುದೇ ನಮ್ಮ ಇಷ್ಟ.

ಹಿಂದಿನ ಸಂಚಿಕೆಯಲ್ಲಿ ಪ್ರಕಟವಾಗಬೇಕಾಗಿದ್ದ ೪೯ನೆಯ ವರ್ಷದ ಲೇಖನ ಹಾಗೂ ಲೇಖಕರ ಸೂಚಿಯನ್ನು ಪ್ರತ್ಯೇಕವಾಗಿ ಈ ಸಂಚಿಕೆಯೊಂದಿಗೆ ಒದಗಿಸ...ಾಗಿದೆ. ಕಳೆದ ಸಂಚಿಕೆಯಲ್ಲಾದ ತಪ್ಪಿಗೆ ನಮ್ಮ ವಿಷಾದವಿದೆ.

WO 5227—MUPM—1000+25—24-5-68

## ಪ್ರಬುದ್ಧ ಕರ್ಣಾಟಕಕ್ಕೆ ವಿನಿಮಯವಾಗಿ ಬರುವ ಪ

*Annals of Oriental Research*, University of Madras; *Bro*
Adyar, Madras; *Bulletin of the School of Oriental an*
*Studies*, London; *Journal of the Andhra Historical Resear*
Rajahmundry; *Journal of the Karnataka Historical Resear*
Dharwar; *Quarterly Journal of the Mythic Society*, Banga
*Indian P.E.N.* Bombay; *Annals of the Venkateswara Orient*
Tirupati; *The Jaina Siddhanta Bhaskara and the Jain*
Arrah; *Bulletin of the Deccan College Research Institute*
*Publication of the Kannada Research Office*, Dharwar; *Ann*
*Bhandarkar Oriental Research Institute*, Poona; *Jour*
*Karnatak University*, Dharwar; *Public Affairs*, Bangalo

'ಪ್ರಪಂಚ', ಹುಬ್ಬಳ್ಳಿ; 'ಕರ್ಮವೀರ', ಹುಬ್ಬಳ್ಳಿ; 'ಆಂಧ್ರ ಸಾಹಿತ್ಯ (ತೆಲುಗು), ಕಾಕಿನಾಡ; 'ಜಯಕರ್ನಾಟಕ', ಧಾರವಾಡ; 'ಜಯಂತಿ' 'ವಿದ್ಯಾದಾಯಿನಿ', ಮೈಸೂರು; 'ಶರಣ ಸಾಹಿತ್ಯ', ಬೆಂಗಳೂರು; ' ಬಿಜಾಪುರ; 'ಸುಬೋಧ', ಬೆಂಗಳೂರು; 'ಜೀವನ', ಬೆಂಗಳೂರು; 'ಪುಸ್ ಮೈಸೂರು; 'ಕನ್ನಡ ನುಡಿ', ಬೆಂಗಳೂರು; 'ಸೋವಿಯೆತ್ ದೇಶ', ಮದ್ರಾಸ ಉಡುಪಿ; 'ಭಾರತವಾಣಿ' (ಹಿಂದಿ), ಧಾರವಾಡ; 'ಕನ್ನಡ ಸಾಹಿತ್ಯ ಬೆಂಗಳೂರು.

